ಕಾದಂಬರಿಯನ್ನು ಪ್ರತ್ಯಕ್ಷ ಶ್ರೀ ಮಾಧವಾಚಾರ್ಯರೇ (ಶ್ರೀ ವಿದ್ಯಾರಣ್ಯರೇ) ಬರೆಸಿರುವದರಿಂದ, ಅದರ ಯೋಗ್ಯತೆಯನ್ನು ನಾನು ವರ್ಣಿಸಲಾರೆನು. ಇಡಿಯ ಕರ್ನಾಟಕದ ಚಿತ್ತವನ್ನು ಈ ಕಾದಂಬರಿಯು ಆಕರ್ಷಿಸಿರುವದು. ಈಗಿನ ಕಾಲದಲ್ಲಿ ಈ ಕಾದಂಬರಿಯನ್ನು ಓದದ ಕನ್ನಡಿಗರು ನಿಶ್ಚಯವಾಗಿ ಅಧನ್ಯರು. ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯರ ಅಲೌಕಿಕ ಸಾಮರ್ಥ್ಯವು ಯಾವ ಕನ್ನಡಿಗರ ಸದೂರ್ಮಿಗಳನ್ನು ಸ್ಫೂರ್ತಿಗೊಳಿಸಲಿಕ್ಕಿಲ್ಲ? ಗಳಗನಾಥರ ವಿವಿಧ ಮನೋಹರ ಕಾದಂಬರಿಗಳಲ್ಲಿ ಇದು ಶ್ರೇಷ್ಠತರ ಕಾದಂಬರಿಯಾಗಿದ್ದು, ವಿದ್ಯಾರಣ್ಯರಂಥ ಮಹಾತ್ಮರ ಸತ್ ಸ್ಫೂರ್ತಿಯಿಂದ ಆ ಗಳಗನಾಥರ ಹೃದಯವು ಇದರಲ್ಲಿ ಬಿಚ್ಚಿ ಇಡಲ್ಪಟ್ಟಿರುವದು.

ಈ ಮನೋಹರ ಕಾದಂಬರಿಯಲ್ಲಿ ೬೦ ಪ್ರಕರಣಗಳಿದ್ದು, ಅವುಗಳಲ್ಲಿ ೧. ವ್ಯಾವಹಾರಿಕ ಯೋಗತ್ರಯಗಳು ೨. ಧರ್ಮದ ದುರಭಿಮಾನ ೩. ವೈದಿಕ ಧರ್ಮಗಳು ೪. ಅವೈದಿಕ ಧರ್ಮಗಳು ೫. ಶಾಂತಿಯ ಪ್ರತ್ಯಕ್ಷ ಕಾರಣವು ಅಧ್ಯಯನವಲ್ಲ, ಗುರು ಕೃಪೆಯು! ೬. ಅಸ್ಪೃಶ್ಯತೆಯೂ, ಧಾರ್ಮಿಕ ವ್ಯವಹಾರವೂ ೭. ಅಸ್ಪೃಶ್ಯತೆಯೂ ರಾಜಕೀಯ ವ್ಯವಹಾರವೂ, ೮. ಸಹಯೋಗ ೯. ಅಸಹಯೋಗದ ಪ್ರಭೇದಗಳು. ೧೦. ಅಹಿಂಸಾ ತತ್ವವೂ, ರಾಜಕೀಯ ಅಹಿಂಸೆಯೂ ೧೧. ರಾಷ್ಟ್ರದ ವಿವೇಕೋದಯ (ಬ್ರಾಹ್ಮಣ ಬ್ರಾಹ್ಮಣೇತರ ವಿವೇಕ) ೧೨. ದೇಶದ್ರೋಹವೂ, ರಾಜದ್ರೋಹವೂ ೧೩. ಪರತಂತ್ರರಿಗೆ ಸೆರೆಮನೆಯೇ ಸ್ವರಾಜ್ಯವು ೧೪. ದೇಶದ್ರೋಹಿಗಳ ಹೇಸಿನತ. ೧೫ ಸಜ್ಜನರಿಗೆ ಶತ್ರುಗಳೂ ಸ್ವಕೀಯರೇ. ೧೬ ದೇಶವಿಘಾತಕ ಭೇದಭಾವನಿರಸನ. ೧೭. ರಾಜದ್ರೋಹದ ಸ್ವರೂಪ ೧೮ ಅಂತಃಕಲಹವು ಅಳಿಗಾಲದ ಲಕ್ಷಣವು ಇತ್ಯಾದಿ ಮಹತ್ವದ ವಿಷಯಗಳನ್ನು ಕುರಿತು ಶ್ರೀ ಮಾಧವಾಚಾರ್ಯರು ಸಮರ್ಪಕವಾಗಿ ನಿರ್ಣಯಿಸಿರುತ್ತಾರೆ. ಈ ಪುಸ್ತಕವನ್ನು ಪ್ರತಿ ಒಬ್ಬ ಕನ್ನಡಿಗನೂ ಮನೆಯಲ್ಲಿ ಸಂಗ್ರಹಿಸತಕ್ಕದ್ದು.

ಈ ಕಾದಂಬರಿಯು ನಮ್ಮ "ಸದ್ಗುರು" ಎಂಬ ಮಾಸಪತ್ರಿಕೆಯಲ್ಲಿ ಭಾಗಶಃ ಎರಡು ವರ್ಷ ಪ್ರಕಟವಾಗಿ, ಉಳಿದ ಕಾದಂಬರೀ ಭಾಗವನ್ನು ಸ್ವತಂತ್ರವಾಗಿ ಬರೆದು ಮುಗಿಸಿರುತ್ತದೆ. ಇದರ ಐದು ಸಾವಿರ ಪ್ರತಿಗಳಲ್ಲಿ ಇನ್ನು ಬಹಳವಾದರೆ ಎರಡುಸಾವಿರ ಪ್ರತಿಗಳು ಉಳಿದಿರಬಹುದು! ಇದನ್ನು ಮುಂಬಯಿ ವಿಶ್ವವಿದ್ಯಾಲಯದವರು ಎಂ.ಎ., ಕ್ಲಾಸಿಗೆ ಪಠ್ಯ ಪುಸ್ತಕವಾಗಿ ನಿಯಮಿಸಿರುವರು. ಬೆಂಗಳೂರಿನ ಸಾಹಿತ್ಯ ಪರಿಷತ್ತಿನ ಅವಲೋಕನಕ್ಕಾಗಿ ಇದನ್ನು ಕಳಿಸಿದಾಗ, ಈವರೆಗೆ ಮಾಡಿದ ಕನ್ನಡಿಗರ ಗೌರವದ ಸೇವಾತಿಶಯಕ್ಕಾಗಿ ಆ ಪರಿಷತ್ತು ಗಳಗನಾಥರಿಗೆ ೨೫೦ ರೂಪಾಯಿ ಉಚಿತವಾಗಿ ಕೊಟ್ಟಿದೆ. ಮೈಸೂರ ಸರ್ಕಾರದ ದೇವರಾಜ ಚಾರ್ಟಿ ಫಂಡಿನಿಂದ ಇದಕ್ಕೆ ೨೦೦ ರೂಪಾಯಿಗಳ ಉಚಿತವು ದೊರೆತಿರುವದು. ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘವೂ ಇದಕ್ಕೆ ಉಚಿತವನ್ನು ಕೊಟ್ಟಿರುವದು. ಇದರ ಬೆಲೆ ೩–೧೨–೦. ಪೋಸ್ಟು ವೆಚ್ಚ ಎಂಟು ಆಣೆ.

**೨. ಕನ್ನಡಿಗರ ಕರ್ಮಕಥೆ–೧೯೧೬:** ಘನತರವಾದ ವಿಜಯನಗರದ ರಾಜ್ಯವು ಪ್ರಸಿದ್ಧ ತಾಳೀಕೋಟೆಯ ಕಾಳಗದಿಂದ ರಸಾತಳಕ್ಕೆ ಹೇಗೆ ಹೋಯಿತೆಂಬುದನ್ನು ಈ

ವಿಸ್ತೃತ ಕಾದಂಬರಿಯಲ್ಲಿ ಬಹು ಮನೋಹರವಾಗಿ ವರ್ಣಿಸಿರುತ್ತದೆ. ಇದನ್ನು ಓದುವದರಿಂದ ಕನ್ನಡಿಗರಲ್ಲಿ ಸ್ವಾಭಿಮಾನ ಮೂಲವಾದ ಹಲವು ವಿಕಾರಗಳೂ, ವಿಚಾರಗಳೂ ಉತ್ಪನ್ನವಾಗದೆ ಇರಲಿಕ್ಕಿಲ್ಲ! ರಾಮರಾಜ, ತಿರುಮಲ, ವೆಂಕಟಾದ್ರಿ, ಮೇಹರ್ಜಾನ, ರಣಮಸ್ತಖಾನ ಮೊದಲಾದ ಪಾತ್ರಗಳ ಚರಿತ್ರ ವಾಚನದಿಂದ ಮನಸ್ಸು ತಲ್ಲೀನವಾಗಿ ಹೋಗುತ್ತದೆ ! ಈ ವಿಸ್ತೃತ ಕಾದಂಬರಿಯ ಬೆಲೆಯು ೧-೮-೦. ಪೋಸ್ಟೇಜು ೫ ಆಣೆ.

**೩. ಕುಮುದಿನಿ-೧೯೧೬:** ಇದೂ ಒಂದು ಕನ್ನಡಿಗರ ಅತ್ಯಂತವಾದ ಅಭಿಮಾನಕ್ಕೆ ಆಸ್ಪದವಾದ ಕಾದಂಬರಿಯೇ ಆಗಿರುವದು. ಈ ಐತಿಹಾಸಿಕ ಸ್ವತಂತ್ರ ಕಾದಂಬರಿಯು ವಿಜಯನಗರದ ಇತಿಹಾಸಕ್ಕೆ ಸಂಬಂಧಿಸಿದ್ದು, ಈ ಕಾದಂಬರಿಯೊಳಗಿನ ಶೋಕರಸ ಪ್ರಧಾನವಾದ "ಅಂತಕನ ಕೋಲಾಹಲ" ಎಂಬ ಪ್ರಕರಣವನ್ನು ಓದಿ ನಿಜವಾಗಿ ನಾವು ಮೂರ್ಛಿತರಾದೆವೆಂದು, ಒಬ್ಬ ಮೈಸೂರ ಸೀಮೆಯ ಸಹೃದಯ ವಾಚಕರು ತಿಳಿಸಿರುತ್ತಾರೆ. ಇದನ್ನು ಮೈಸೂರ ಸರಕಾರದವರು ಮೆಟ್ರಿಕ ಕ್ಲಾಸಿಗೆ ಪಠ್ಯ ಪುಸ್ತಕವಾಗಿ ನಿಯಮಿಸಿರುವರು. ಇದರ ಭಾಷಾಂತರವು ಸಂಸ್ಕೃತದಲ್ಲಿ ಆಗಿದೆ. ಬೆಲೆ ೧ ರೂಪಾಯಿ. ಪೋಸ್ಟೇಜು ನಾಲ್ಕು ಆಣೆ.

**೪. ದುರ್ಗದ ಬಿಚ್ಚುಗತ್ತಿ-೧೯೩೮:** ನನ್ನ "ಮಾಧವ ಕರುಣಾ ವಿಲಾಸ" ಎಂಬ ಸ್ವತಂತ್ರವಾದ ದೊಡ್ಡ ಐತಿಹಾಸಿಕ ಕಾದಂಬರಿಯ ತರುವಾಯದಲ್ಲಿ ಬರೆದ ಸ್ವತಂತ್ರ ಐತಿಹಾಸಿಕ ಕಾದಂಬರಿ ಈ 'ದುರ್ಗದ ಬಿಚ್ಚುಗತ್ತಿ' ಇದನ್ನು "ಶ್ರೀ ಮುರುಗೇಶ ಗುರುವರರು' ಪ್ರೇರಿಸಿ ಬರೆಸಿರುವರು. ಈ ಕಾದಂಬರಿಯಲ್ಲಿ ಕರ್ನಾಟಕ ಪ್ರಸಿದ್ಧಿಯ ಚಿತ್ರದುರ್ಗ ಕೋಟೆಯ ನಾಯಕರ ಮನೆತನಕ್ಕೆ ಸಂಬಂಧಿಸಿದ ವೃತ್ತಾಂತ ನಿರೂಪಿತವಾಗಿದೆ. ಇದರ ಬೆಲೆ ೧-೨-೦.

## ಮರಾಠರಿಗೆ ಸಂಬಂಧಿಸಿದುವು

**೫. ಈಶ್ವರೀಸೂತ್ರ-೧೯೧೩:** ಶಿವಾಜಿಯು ತೋರಣಗಡವೆಂಬ ದುರ್ಗವನ್ನು ತಕ್ಕೊಂಡು ಸ್ವರಾಜ್ಯವನ್ನು ಸ್ಥಾಪಿಸಿ ಸ್ವರಾಜ್ಯದ ತೋರಣ ಕಟ್ಟಿದ ಮನೋಹರ ವೃತ್ತಾಂತವು ಇದರಲ್ಲಿ ವರ್ಣಿಸಿರುತ್ತದೆ. ಇದರ ಲೋಕಪ್ರಿಯತೆಯನ್ನು ಇಷ್ಟೆಂದು ವರ್ಣಿಸಲಾಗುವದಿಲ್ಲ. ಕಾದಂಬರಿಯನ್ನು ಪುನಃ ಪುನಃ ಓದಿದರೂ ಮನಸ್ಸು ತೃಪ್ತವಾಗುವದಿಲ್ಲ. ಇದರ ಬೆಲೆ ೧ ರೂ. ಪೋಸ್ಟೇಜು ೪ ಆಣೆ.

**೬. ಮರಾಟರ ಅಭ್ಯುದಯ-೧೯೧೮:** ಮೇಲೆ ಹೇಳಿದಂತೆ ಶಿವಾಜಿಯು ರಾಜ್ಯವನ್ನು ಸ್ಥಾಪಿಸಿದ ಬಳಿಕ ಅದನ್ನು ನಾಶಮಾಡುವುದಕ್ಕಾಗಿ ವಿಜಾಪುರದ ಬಾದಶಹನು ಅಫಜಲಖಾನನೆಂಬ ಬಲಾಢ್ಯ ಸರದಾರನನ್ನು ದೊಡ್ಡ ಸೈನ್ಯದೊಡನೆ ಕಳಿಸಲು, ಶಿವಾಜಿಯು ಆತನನ್ನು ಯುಕ್ತಿಯಿಂದ ಸಂಹರಿಸಿದ ಸಂಗತಿಯು ಇದರಲ್ಲಿ ಮನೋಹರವಾಗಿ ವರ್ಣಿಸಿರುತ್ತದೆ. ಇದನ್ನು ಓದುವಾಗ ಹಲವು ಕಡೆಯಲ್ಲಿ ವಾಚಕರ ಹೃದಯವು ಉಕ್ಕಿ ಬರುವುದೆಂಬುದು ಅನುಭವದ ಮಾತಾಗಿರುವುದು. ಬೆಲೆ ೧ ರೂ. ಪೋಸ್ಟೇಜು ೪ ಆಣೆ.

**೭. ಕಮಲಕುಮಾರಿ-೧೯೧೦:** ದಿಲ್ಲಿಯ ಬಾದಶಹನಾದ ಔರಂಗಜೇಬನು ಶಿವಾಜಿಯ ಹೆಚ್ಚಳವನ್ನು ತಡೆಯದೆ, ಉದಯಭಾನು ಎಂಬ ತನ್ನ ಶೂರ ಸರದಾರನನ್ನು ದೊಡ್ಡ ಸೈನ್ಯದೊಡನೆ ಆತನ ಮೇಲೆ ಕಳಿಸಿದಾಗ, ಶಿವಾಜಿಯ ಬಾಲಮಿತ್ರನಾದ ಅತ್ಯಂತ ಸ್ವಾಮಿನಿಷ್ಠ ತಾನಾಜಿಯು ಸಿಂಹಗಡವನ್ನು ಉದಯಭಾನುವಿನಿಂದ ಕಸಿದುಕೊಂಡು, ತನ್ನ ಒಡೆಯನ ಕಾರ್ಯವನ್ನು ಸಾಧಿಸಿದ ಮನೋಹರ ಪ್ರಸಂಗವನ್ನು ಈ ಕಾದಂಬರಿಯಲ್ಲಿ ವರ್ಣಿಸಿರುತ್ತದೆ. ಇದರ ಆರನೆಯ ಆವೃತ್ತಿಯು ಹೊರಡಬೇಕಾಗಿರುವುದು ಕಾದಂಬರಿಗಳಲ್ಲಿ ಇದನ್ನು ಸರಿಗಟ್ಟುವ ಕಾದಂಬರಿಗಳು ಅತಿ ವಿರಳವೆಂದು ಹೇಳಬಹುದು. ಬೆಲೆ ೧ ರೂ. ಪೋಸ್ಟೇಜು ೪ ಆಣೆ.

**೮. ಛತ್ರಪತಿ-೧೯೧೯:** ಮೇಲೆ ಹೇಳಿದಂತೆ ಶಿವಾಜಿಯು ಬಹು ಆಯಕಟ್ಟಿನ ಸ್ಥಳವಾದ ಸಿಂಹಗಡವನ್ನು ಸ್ವಾಧೀನಪಡಿಸಿಕೊಂಡು ಅತಿ ಬಲಿಷ್ಠನಾಗಲು, ಇದನ್ನು ಔರಂಗಜೇಬ ಬಾದಶಹನು ಸೈರಿಸದೆ, ರಾಜಾ ಜಯಸಿಂಗನೆಂಬ ತನ್ನ ಬಲಾಢ್ಯ ರಜಪೂತ ಸರದಾರನನ್ನು ದೊಡ್ಡ ಸೈನ್ಯದೊಡನೆ ಶಿವಾಜಿಯ ಮೇಲೆ ಕಳಿಸಿದನು. ಆಗ ಶಿವಾಜಿಯು ದೂರ ಲಕ್ಷ ಕೊಟ್ಟು ಜಯಸಿಂಗನೊಡನೆ ಯುದ್ಧಮಾಡದೆ ಆತನ ಸೂಚನೆಯಂತೆ ದಿಲ್ಲಿಗೆ ಬಾದಶಹನನ್ನು ಕಾಣುವದಕ್ಕಾಗಿ ಹೋಗಲು, ಬಾದಶಹನು ಆತನನ್ನು ಸೆರೆಯಲ್ಲಿರಿಸಿದನು. ಆಗ ಶಿವಾಜಿಯು ತನ್ನ ಮಗ ಸಂಭಾಜಿಯೊಡನೆ ಪೆಟ್ಟಿಗೆಯಲ್ಲಿ ಮಲಗಿಕೊಂಡು ಹೇಗೆ ಪಾರಾಗಿ ಬಂದನೆಂಬದನ್ನು ಈ ಕಾದಂಬರಿಯಲ್ಲಿ ಮನೋಹರವಾಗಿ ವರ್ಣಿಸಿರುತ್ತದೆ. ಬೆಲೆ ೧ ರೂ. ಪೋ. ೪ ಆಣೆ.

**೯. ಗೃಹಕಲಹ-೧೯೨೧:** ಇದು ಶಿವಾಜಿ ಮಹಾರಾಜರ ಮರಣ ಪ್ರಸಂಗದ ಕಾದಂಬರಿಯು. ಅತ್ಯಂತ ಶೋಕ ಪರ್ಯವಸಾಯಿ. ಇದು ಗೃಹಕಲಹದ ದುಷ್ಪರಿಣಾಮವನ್ನು ಹೃದಯಭೇದಕವಾಗಿ ವ್ಯಕ್ತಪಡಿಸುವದು. ಇದು ಅತ್ಯಂತ ಲೋಕಪ್ರಿಯವಾಗಿರುವದು ಬೆಲೆ ೧ ರೂ. ಪೋ. ೪ ಆಣೆ.

**೧೦. ಶಿವಪ್ರಭುವಿನ ಪುಣ್ಯ-೧೯೧೮:** ಶಿವಾಜಿಯ ಮಗ ಸಂಭಾಜಿಯನ್ನು ಔರಂಗಜೇಬನು ಅತಿಕ್ರೂರತನದಿಂದ ಕೊಲ್ಲಿಸಿದ ಪ್ರಸಂಗವೂ, ಶಿವಾಜಿಯ ಚಿಕ್ಕ ಮಗ ರಾಜಾರಾಮನು ಪರಿಪರಿಯ ಕಷ್ಟಗಳನ್ನು ಅನುಭವಿಸಿ, ಅಣ್ಣನ ಕಾಲದಲ್ಲಿ ನಾಶವಾದಂತಾಗಿದ್ದ ಮಹಾರಾಷ್ಟ್ರ ರಾಜ್ಯವನ್ನು ಮತ್ತೆ ಸ್ಥಾಪಿಸಿದ ಪ್ರಸಂಗವೂ ಈ ಕಾದಂಬರಿಯಲ್ಲಿ ಬಹು ಹೃದಯಂಗಮವಾಗಿ ವರ್ಣಿಸಲ್ಪಟ್ಟಿರುವವು. ಬೆಲೆ ೧ ರೂ. ಪೋ. ೪ ಆಣೆ.

**೧೧. ಸ್ವರಾಜ್ಯಸುಗಂಧ-೧೯೩೮:** ಶಿವಾಜಿಯು ಆಗಲೇ ರಾಯಗಡದಲ್ಲಿ ಛತ್ರಪತಿಯಾಗಿ ಪಟ್ಟಾಭಿಷಿಕ್ತನಾಗಿದ್ದ. ದಿಲ್ಲಿಯ ಮತ್ತು ವಿಜಾಪುರ ಬಾದಶಹರ ವಶದಲ್ಲಿದ್ದ ಅನೇಕ ಕೋಟೆಗಳನ್ನು ಗೆದ್ದುಕೊಂಡು ತನ್ನ ರಾಜ್ಯವನ್ನು ವಿಸ್ತರಿಸಿದ್ದ. ಆದರೆ ಈಗ ಆತನ ದೃಷ್ಟಿಯು 'ಕಲ್ಯಾಣ' ಮತ್ತು 'ರಾಜಮಾಚಿ' ಎಂಬ ಎರಡು ಕೋಟೆಗಳ ಕಡೆಗೆ ಕೇಂದ್ರೀಕೃತವಾಗಿತ್ತು. ಈ ಕಾದಂಬರಿಯಲ್ಲಿ ಈ ಎರಡೂ ಕೋಟೆಗಳನ್ನು ಆತನ ಸರದಾರರು ವಶಪಡಿಸಿಕೊಂಡ ವಿಷಯ ನಿರೂಪಿತವಾಗಿದೆ.

೧೨. **ಕುರುಕ್ಷೇತ್ರ-೧೯೧೯:** ಗರ್ವವು ನಾಶಕರವಾದದ್ದು. ಪ್ರತಾಪಶಾಲಿಯಾದ ಪೇಶ್ವೆ ಭಾವುಸಾಹೇಬನ ಅತಿ ಗರ್ವದ ಬಾಧೆಯಿಂದ ಪ್ರಸಿದ್ಧ ಪಾನಿಪತ್ತದ ಕಾಳಗದಲ್ಲಿ ಪೇಶ್ವೆಯವರ ಉತ್ಕರ್ಷವು ಕುಗ್ಗಿದ ದುಃಖಕಾರಕ ಸಂಗತಿಯು ಈ ಕಾದಂಬರಿಯ ಯೋಗದಿಂದ ಬೋಧಪ್ರದವಾಗಿ ಗೊತ್ತಾಗುತ್ತದೆ. ಆದರೂ ಮಹಾರಾಷ್ಟ್ರದ ಪ್ರತಾಪವೂ, ಸಾಮರ್ಥ್ಯವೂ ಎಷ್ಟು ಘನತರವಾದವಿದ್ದವೆಂಬುದನ್ನು ಈ ಕಾದಂಬರಿಯು ತೋರಿಸದೆ ಇರುವದಿಲ್ಲ. ಬೆಲೆ ೧ ರೂ. ಪೋ. ೪ ಆಣೆ.

**ರಜಪೂತರಿಗೆ ಸಂಬಂಧಿಸಿದುವು**

೧೩. **ಕ್ಷಾತ್ರತೇಜ-೧೯೧೪:** ಈ ಐತಿಹಾಸಿಕ ಕಾದಂಬರಿಯಲ್ಲಿ ಔರಂಗಜೇಬನ ಹಾಗು ರಜಪೂತರ ಗುಣಸ್ವಭಾವಗಳು ಚಿತ್ತಾಕರ್ಷಣಪೂರ್ವಕವಾಗಿ ಗೊತ್ತಾಗುತ್ತವೆ. ಇದರಲ್ಲಿ ರೂಪಮತಿಯ ಕುಲೀನತೆ, ಇಂದಿರೆ-ಪದ್ಮೆ-ದುರ್ಗಾದಾಸ ಇವರ ಸ್ವಾಮಿನಿಷ್ಠೆ, ಚಂದ್ರಾವತೀರಾಣಿಯ ತೇಜಸ್ವಿತೆ, ವೈಕುಂಠಯೋಗಿಗಳ ನಿಸ್ಪೃಹತೆ, ಮೊದಲಾದವನ್ನು ಸಾಂಸಾರಿಕರಾದ ನಾವು ಲಕ್ಷಪೂರ್ವಕ ಅವಲೋಕಿಸಬಹುದಾಗಿದೆ. ಇದನ್ನು ಮುಂಬಯಿ ವಿದ್ಯಾಖಾತೆಯವರು ಮೆಟ್ರಿಕ್ಕಿಗೆ ಪಠ್ಯಪುಸ್ತಕವಾಗಿ ನಿಯಮಿಸಿದ್ದರು. ಬೆಲೆ ೧ ರೂ. ಪೋ. ೪ ಆಣೆ.

೧೪. **ಸತ್ವಸಾರ-೧೯೧೩:** ಇದೊಂದು ಸುಂದರವಾದ ಐತಿಹಾಸಿಕ ಕಾದಂಬರಿಯು. ಮೇವಾಡದ ಸುಪ್ರಸಿದ್ಧ ಮಹಾರಾಜಾ ಪ್ರತಾಪಸಿಂಹನು ಈ ೧೪ ಕಾದಂಬರಿಯ ನಾಯಕನಾಗಿದ್ದಾನೆ. ಮಹಾತ್ಮರ ಸತ್ವದಿಂದಲ್ಲದೆ ಕೇವಲ ದ್ರವ್ಯಾದಿ ಉಪಕರಣಗಳಿಂದ ಮಹಾಕಾರ್ಯಗಳು ಆಗುವದಿಲ್ಲವೆಂತಲೂ, ಸತ್ವಶಾಲಿಯನ್ನು ದ್ರವ್ಯವು ತಾನಾಗಿ ಹೊಂದುವದೆಂತಲೂ ಈ ಕಾದಂಬರಿಯು ಕಲಿಸುವದು. ಇದನ್ನು ಕನ್ನಡಿಗರು ಈ ಕಾಲದಲ್ಲಿ ಓದಿಯೇ ತೀರಬೇಕೆಂದು ಆಗ್ರಹದಿಂದ ಹೇಳುವೆನು. ಇದನ್ನು ಮುಂಬಯಿ ಯೂನಿವರ್ಸಿಟಿಯವರು ಟೆಕ್ಸ್ಟಬುಕ್ಕಾಗಿ ನಿಯಮಿಸಿದ್ದರು. ಬೆಲೆ ೧ ರೂ. ಪೋ. ೪ ಆಣೆ.

೧೫. **ತಿಲೋತ್ತಮೆ-೧೯೧೭:** ಇದೂ ಒಂದು ಐತಿಹಾಸಿಕ ಮನೋಹರ ಕಾದಂಬರಿಯೇ ಇರುತ್ತದೆ. ಈ ಕಾದಂಬರಿಯಲ್ಲಿಯ ಆಯೇಷೆ, ತಿಲೋತ್ತಮೆ, ಉಸ್ಮಾನ, ಜಗತ್ಸಿಂಗ ಮೊದಲಾದ ಸದ್ಗುಣಮಂಡಿತ ಪಾತ್ರಗಳ ಸಹವಾಸದಿಂದ ವಾಚಕರ ಹೃದಯವು ದ್ರವಿಸಿ ಅದರಲ್ಲಿ ಸದ್ಗುಣಗಳ ಅಂಕುರಗಳು ತೋರದೆ ಇರವು. ಬೆಲೆ ೧ ರೂ. ಪೋ. ೪ ಆಣೆ.

೧೬. **ಧಾರ್ಮಿಕತೇಜ-೧೯೨೮:** ಇದು ಅತ್ಯಂತ ಗೌರವದ ಮನೋಹರ ಐತಿಹಾಸಿಕ ಹೊಸ ಕಾದಂಬರಿಯು. ಛತ್ರಸಾಲನೆಂಬ ಪ್ರತಾಪಿಯಾದ ಕ್ಷತ್ರಿಯನು ಔರಂಗಜೇಬ ಬಾದಶಹನ ಕಾಲದಲ್ಲಿ ಬುಂದೇಲಖಂಡದ ಸ್ವಾತಂತ್ರ್ಯವನ್ನು ಸ್ಥಾಪಿಸಿದ ವೃತ್ತಾಂತವು ಬಹು ಗಂಭೀರವಾಗಿ ವರ್ಣಿಸಲ್ಪಟ್ಟಿರುತ್ತದೆ. ಪ್ರಾಣನಾಥ ಪ್ರಭುಗಳ ಮಹಿಮೆ ಯಲ್ಲಿಯೂ, ದಲಪತರಾಯ ಸಭಾಕರಣ-ಹೀರಾದೇವಿ-ಸುಫಲದೇವಿ-ಕಂಚುಕಿರಾಯ-ರಣದುಲ್ಲಾಖಾನ ಮೊದಲಾದ ನೀಚೋಚ್ಚ ಪಾತ್ರಗಳ ಚರಿತ್ರ ವಾಚನದಲ್ಲಿಯೂ ಮನಸ್ಸು ತೊಡಗಿಹೋಗುವದು. ಬೆಲೆ ೧ ರೂ. ೮ ಆಣೆ. ಪೊ. ೫ ಆಣೆ.

**೧೭. ರಾಣಾ ರಾಜಸಿಂಹ-೧೯೨೮:** ಇದು ಔರಂಗಜೇಬನ ಕಾಲದ ಐತಿಹಾಸಿಕ ಹೊಸ ಕಾದಂಬರಿಯು. ಇದರಲ್ಲಿ ರಾಣಾ ರಾಜಸಿಂಹನ ಘನವಾದ ಯೋಗ್ಯತೆಯೂ, ಔರಂಗಜೇಬನ ಉದ್ದಾಮ ಮಹತ್ವಾಕಾಂಕ್ಷೆಯೂ, ಅನಂತಶರ್ಮರ ಸತ್ವವೂ, ಮೊಗಲ ಜನಾನಖಾನೆಯ ಸ್ಥಿತಿಯೂ ಚನ್ನಾಗಿ ಚಿತ್ರಿಸಿರುತ್ತದೆ. ಬೆಲೆ ೧೨ ಆಣೆ. ಪೋ. ೪ ಆ.

**ಸಂಕೀರ್ಣ ಕಾದಂಬರಿಗಳು**

**೧೮. ಪ್ರಬುದ್ಧ ಪದ್ಮನಯನೆ-೧೯೯೮:** ಇದೊಂದು ಕನ್ನಡಿಗರ ಪ್ರೀತಿಯ ಅತಿಮನೋಹರವಾದ ಸ್ವತಂತ್ರ ಕಾಲ್ಪನಿಕ ಕಾದಂಬರಿಯು. ಈವರೆಗೆ ಈ ಕಾದಂಬರಿಯು ಐದು ಆವೃತ್ತಿಗಳಾಗಿ ಹೋಗಿರುವವು. ಇದರ ಭಾಷಾಂತರವನ್ನು ಸಂಸ್ಕೃತದಲ್ಲಿ ಒಬ್ಬರು ಮಾಡಿರುವರು. ಹಳ್ಳಿಯ ಜನರು ಇದರ ಆಟಗಳನ್ನು ಕಟ್ಟಿ ಆಡಿರುವರು. ರಸಿಕರು ಅವಶ್ಯವಾಗಿ ಓದತಕ್ಕ ಕಾದಂಬರಿಯ ಬೆಲೆ ೧ ರೂ. ಪೋ. ೪ ಆಣೆ.

**೧೯. ರಾಣೀ ಮೃಣಾಲಿನಿ-೧೯೧೫:** ಇದಕ್ಕೆ ಈ ಹೊಸ ಆವೃತ್ತಿಯಲ್ಲಿ ಹೆಚ್ಚು ವಿಷಯವನ್ನು ಸೇರಿಸಿ ದೊಡ್ಡ ಪುಸ್ತಕವಾಗಿ ಮಾಡಿರುತ್ತದೆ. ಈ ಐತಿಹಾಸಿಕ ಕಾದಂಬರಿಯಾದರೂ ಅತ್ಯಂತ ಚಿತ್ತಾಕರ್ಷಕವಾಗಿರುವದು. ಇದರ ಸ್ವಾರಸ್ಯವೆಷ್ಟು, ಲಾಲಿತ್ಯವೆಷ್ಟು, ಗಾಂಭೀರ್ಯವೆಷ್ಟು! ಶಾಭಾಶ್! ಕಾದಂಬರಿಕಾರರಿದ್ದರೆ ಬಂಕೀಮಚಂದ್ರರಂಥ ಕಾದಂಬರಿಕಾರರಿರಬೇಕು! ಈ ಕಾದಂಬರಿಗೆ ಹೊಸದಾಗಿ ಜೋಡಿಸಿದ ವಿಷಯವು ಸ್ವತಂತ್ರವಾಗಿ ಬರೆದದ್ದು. ಬೆಲೆ ೧ ರೂ ೮ ಆಣೆ. ಪೋ ೫ ಆಣೆ.

**೨೦. ವೈಭವ-೧೯೧೨:** ಇದು ಚಾಣಿಕ್ಯ-ಚಂದ್ರಗುಪ್ತರಿಗೆ ಸಂಬಂಧಿಸಿದ ಅತಿ ಮನೋಹರವಾದ ಐತಿಹಾಸಿಕ ಕಾದಂಬರಿಯಾಗಿರುತ್ತದೆ. ಇದನ್ನು ಓದಲು ಕೈಯಲ್ಲಿ ತಕ್ಕೊಂಡವರು ಪೂರ್ಣವಾಗಿ ಮುಗಿಸದೆ ಕೆಳಗಿಡುವ ಹಾಗಿಲ್ಲೆಂದು ನಾವು ನಂಬಿಗೆಯಿಂದ ಹೇಳುವೆವು. ಕನ್ನಡ ಮುದ್ರಾಮಂಜೂಷಕ್ಕೂ ಇದಕ್ಕೂ ಏನೂ ಸಂಬಂಧವಿಲ್ಲ. ಬೆಲೆ ೧ ರೂ. ಪೋ. ೪ ಆಣೆ.

**೨೧. ಧರ್ಮರಹಸ್ಯ-೧೯೧೪:** ಇದೊಂದು ಗಂಭೀರ ವಿಚಾರದ ಐತಿಹಾಸಿಕ ಕಾದಂಬರಿಯಾಗಿರುತ್ತದೆ. ಅಶೋಕರಾಜ, ಚಿದಾನಂದಸ್ವಾಮಿ, ಜಿತೇಂದ್ರ, ಮೊಗ್ಗಲೀಪುತ್ರ ಮೊದಲಾದ ನೀಚೋಚ್ಚ ಪಾತ್ರಗಳ ವಕ್ರ-ಸರಲಗತಿಗಳೂ, ಅನುದಾತ್ತ-ಉದಾತ್ತ ಭಾವಗಳೂ ಎಷ್ಟು ಹೃದಯಂಗಮವಾಗಿ ವರ್ಣಿಸಲ್ಪಟ್ಟಿರುವವೆಂಬದನ್ನು ಬರೆಯಲಾರೆವು. ಈ ಪುಸ್ತಕವನ್ನು ಬರೆಯಲುಪಕ್ರಮಿಸಿದಾಗ ಹಲವು ಸಾರೆ ಕಣ್ಣೀರುಗಳು ಉದುರಿರುವವು. ಇದನ್ನು ಮೈಸೂರ ವಿದ್ಯಾಖಾತೆಯವರು ಮ್ಯೊಟ್ರಿಕ್ ಕ್ಲಾಸಿಗೆ ಪಠ್ಯಪುಸ್ತಕವಾಗಿ ನಿಯಮಿಸಿದ್ದರು. ಬೆಲೆ ೧ ರೂ. ಪೋ. ೪ ಆಣೆ.

**೨೨. ಸಂಸಾರ ಸುಖ-೧೯೨೬:** ಇದು ಅಕಬರಬಾದಶಹನಿಗೆ ಸಂಬಂಧಿಸಿದ ಕಾದಂಬರಿಯು. ಅಂತಹ ದೊಡ್ಡ ಬಾದಶಹನೆಂದರೇನು, ಕಡೆಗೆ ಸಂಸಾರದ ತಾಪದಿಂದ ಹಣ್ಣಾದನು. ಮಾನಸಿಂಹನ ಸೋದರಳಿಯನಾದ ಖುಸರುವಿನ ದುರ್ದೈವವನ್ನು ನೆನಿಸಿ ಮನಸ್ಸು ವಿಷಾದಪಡುವದು. ರಾಜ್ಯತೃಷ್ಣೆಯು ಎಷ್ಟು ಅನರ್ಥಕಾರಕವೆಂಬುದನ್ನು ಈ ಕಾದಂಬರಿಯು ತಿಳಿಸುತ್ತದೆ. ಬೆಲೆ ೧ ರೂ. ಪೋ. ೪ ಆಣೆ.



# ಇತರ ಕೃತಿಗಳು

| | | |
|---|---|---|
| ೧. | ಪದ್ಯಾರ್ಥ ಸಾರ | – ೧೮೯೭ |
| ೨. | ಲಘು ನಿಬಂಧ ಸಂಗ್ರಹ ಮತ್ತು ಪತ್ರವ್ಯವಹಾರ | – ೧೮೯೯ |
| ೩. | ಚಿದಂಬರ ಚರಿತ್ರೆ | – ೧೯೦೯ |
| ೪. | ನಿಬಂಧ ಶಿಕ್ಷಣ | – ೧೯೧೦ |
| ೫. | ಗಿರಿಜಾ ಕಲ್ಯಾಣ ಸಾರ | – ೧೯೧೧ |
| ೬ | ರಾಜನಿಷ್ಠೆಯು ನಮ್ಮ ಪುಣ್ಯಶಾಲಿಗಳಾದ ಸಾರ್ವಭೌಮರು | – ೧೯೧೨ |
| ೭. | ದಾಂಪತ್ಯ | – ೧೯೧೨ |
| ೮. | ಕುಟುಂಬ | – ೧೯೧೩ |
| ೯. | ನಿರ್ಯಾಣ ಮಹೋತ್ಸವ | – ೧೯೧೫ |
| ೧೦. | ಭಗವತೀ ಕಾತ್ಯಾಯಿನೀ | – ೧೯೧೯ |
| ೧೧. | ಭಾಗವತಾಮೃತ | – ೧೯೨೨ |
| ೧೨. | ಶೈವ ಸುಧಾರ್ಣವ | – ೧೯೨೩ |
| ೧೩. | ರಾಮಾಯಣಾಮೃತ (ತುಲಸಿ ರಾಮಾಯಣ) | – ೧೯೨೬ |
| ೧೪. | ಸದ್ಗುರು ಪ್ರಭಾವ | – ೧೯೨೮ |
| ೧೫. | ಗೀತೆಯ ಶ್ರವಣಾಧಿಕಾರ | – ೧೯೨೮ |
| ೧೬. | ವಿವೇಕಾನಂದರು ವೈದಿಕರಿಗೆ ಯಾರು? | – ೧೯೨೮ |
| ೧೭. | ಮಹಾಭಾರತಾಮೃತ ಆದಿಪರ್ವ | – ೧೯೩೧ |
| ೧೮. | ರಹಸ್ಯಗಳು | – ೧೯೩೩ |
| ೧೯. | ಮಹಾಭಾರತಾಮೃತ–ಸಭಾಸದನ | – ೧೯೩೩ |
| ೨೦. | ಕಲಿಕುಠಾರ ಅಥವಾ ಲೋಕಾಪುರಪೀಠ ಪ್ರಭಾವ ೨ನೇ ಭಾಗ | – ೧೯೩೮ |
| ೨೧. | ನಳ ಚರಿತ್ರ | – ೧೯೩೮ |
| ೨೨. | ವೀರ ಪ್ರತಾಪ ಅಥವಾ ಸ್ವಾಭಿಮಾನ ಸಂಭ್ರಮ | – ೧೯೪೯ |
| ೨೩. | ಕಲಿಕುಠಾರ ಜ್ಞಾನಯೋಗ ಪ್ರಧಾನ ಖಂಡ | – ೧೯೫೯ |
| ೨೪. | ಉತ್ತರ ರಾಮಚರಿತ್ರ ಸಾರ | – ಸು. ೧೯೧೧ |
| ೨೫. | ಸಾಧು ಸದಾಶಿವ ಲೀಲೆ | – ಸು. ೧೯೧೬ |
| ೨೬ | ಕನ್ಯಾ ಶಿಕ್ಷಕ | – ಸು. ೧೯೨೦ |
| ೨೭. | ಬ್ರಾಹ್ಮಣ್ಯ ಪ್ರಾಪ್ತಿ ಸಾಧನೆ | – ಸು. ೧೯೨೩ |
| ೨೮. | ಸುಂದರ ಲೇಖ ಸಮುಚ್ಚಯ | – ಸು. ೧೯೨೮ |

---

ಆಧಾರ : ಗಳಗನಾಥರು ಮತ್ತು ಅವರ ಕಾದಂಬರಿಗಳು, ಕೃಷ್ಣಮೂರ್ತಿ ಕಿತ್ತೂರ
ಪ್ರ – ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ – ೧೯೭೮

# ಪ್ರಸ್ತಾವನೆ

ಈವರೆಗೆ ಕನ್ನಡದಲ್ಲಿ ಪ್ರಸಿದ್ಧವಾಗಿರುವ ಕಾದಂಬರಿಗಳು ಕನ್ನಡಿಗರ ಸದ್ಗುಣಪೋಷಣ ಮಾಡತಕ್ಕಂಥವಿದ್ದರೂ, ಅವು ಕನ್ನಡಿಗರ ಅಭಿಮಾನಕ್ಕೆ ಆಸ್ಪದವಿಲ್ಲದಿರುವವೆಂದು ಹೇಳಬಹುದು. ಅವು ರಜಪೂತರು–ಮಹಾರಾಷ್ಟ್ರರು–ಮುಸಲ್ಮಾನರು ಮುಂತಾದವರ ಅಭಿಮಾನಕ್ಕೆ ಪಾತ್ರವಾದ ಕಾದಂಬರಿಗಳೇ ಇರುತ್ತವೆ. ಕನ್ನಡಿಗರ ಉಜ್ವಲ ಹಿತದ ದೃಷ್ಟಿಯಿಂದ ನೋಡಿದರೆ ಇದೊಂದು ದೊಡ್ಡ ಕೊರತೆಯೆಂದು ಹೇಳಬಹುದು. ಇನ್ನು ಕನ್ನಡಿಗರಲ್ಲಿ ಚರಿತ್ರನಾಯಕರಾದ ರಾಜರೂ, ವೀರರೂ, ಮುತ್ಸದ್ದಿಗಳೂ ಇಲ್ಲದಿದ್ದರೆ ಉಪಾಯವಿದ್ದಿಲ್ಲ; ಆದರೆ ಹಿಂದಕ್ಕೆ ಕರ್ನಾಟಕದಲ್ಲಿ ಚಾಲುಕ್ಯ, ಕದಂಬ, ರಾಷ್ಟ್ರಕೂಟ ಮೊದಲಾದ ಪ್ರಸಿದ್ಧ ರಾಜವಂಶಗಳು ಆಗಿರುವದನ್ನು ಇತಿಹಾಸವು ಸಾರುತ್ತಿರುವದು. ಈಗ ಸರಾಸರಿ ಮುನ್ನೂರಾ ಐವತ್ತು ವರ್ಷಗಳ ಹಿಂದೆ ವಿಜಯನಗರವೆಂಬ ಜಗತ್ಪ್ರಸಿದ್ಧ ಕನ್ನಡಿಗರ ರಾಜ್ಯವು ಪರಮವೈಭವದಿಂದ ಮೆರೆಯುತ್ತಿತ್ತೆಂಬುದನ್ನು ಕನ್ನಡಿಗರೆಲ್ಲರು ಬಲ್ಲರು. ಅಂದಬಳಿಕ ಕನ್ನಡಿಗರ ವೈಭವಗಳನ್ನು ವ್ಯಕ್ತಪಡಿಸಿ ಕನ್ನಡಿಗರ ಹೃದಯದ ಚಲನ ವಲನವನ್ನುಂಟುಮಾಡುವ ಕನ್ನಡಿಗರ ಕಾದಂಬರಿಗಳು ಪ್ರಕಟವಾಗದಿರುವದು ಲಾಂಛನವಲ್ಲವೇ? ಇದರಿಂದ ಕನ್ನಡಿಗರ ಔದಾಸೀನ್ಯವೂ, ಅಭಿಮಾನ ಶೂನ್ಯತೆಯೂ ಚೆನ್ನಾಗಿ ವ್ಯಕ್ತವಾಗುವವು.

ಈ ಕೊರತೆಯನ್ನು ಅರಿತು ನಾನು ಈಗ ಮೂರು ವರ್ಷಗಳ ಹಿಂದೆ ''ಕುಮುದಿನಿ'' ಅಥವಾ ''ಬಾಲಕ್ಕೆ ಬಡಿದಾಟ'' ಎಂಬ ತೀರ ಸ್ವತಂತ್ರ ಕಾದಂಬರಿಯನ್ನು ಬರೆದದ್ದು ಕನ್ನಡಿಗರ ಸ್ಮರಣದಲ್ಲಿರಬಹುದು ಅದು ವಿಜಯನಗರದ ರಾಜ್ಯವು ನಾಶವಾದ ಬಳಿಕ ಒದಗಿದ ಆ ಅರಸುಮನೆತನದ ಒಂದು ಅಂತಃಕಲಹವನ್ನು ಕುರಿತು ಬರೆಯಲ್ಪಟ್ಟಿರುವದು, ಇದರಂತೆ ವಿಜಯನಗರದ ರಾಜ್ಯದ ನಾಶ, ಅದರ ಅತ್ಯುತ್ಕರ್ಷ, ಅದರ ಸ್ಥಾಪನೆ ಇವುಗಳನ್ನು ಕುರಿತು ಇನ್ನು ಮೂರು ಕಾದಂಬರಿಗಳನ್ನು ಬರೆಯಬೇಕೆಂದು ಆಗ ನಾನು ನಿಶ್ಚಯಿಸಿದೆನು. ಅದರಂತೆ ಈ ವರ್ಷ ವಿಜಯನಗರದ ರಾಜ್ಯದ ನಾಶವನ್ನು ಕುರಿತು ಬರೆದ ಈ ''ಕನ್ನಡಿಗರ ಕರ್ಮಕಥೆ'' ಎಂಬ ಕಾದಂಬರಿಯು ಮುಗಿದಿರುತ್ತದೆ. ಇದು ಕುಮುದಿನಿಯಂತೆ ಸ್ವತಂತ್ರ ಕಾದಂಬರಿಯಾಗಿರದೆ, ಪ್ರಸಿದ್ಧ ಮಹಾರಾಷ್ಟ್ರ

ಕಾದಂಬರೀಕಾರರಾದ ಮ. ರಾ. ರಾ. ಹರಿ ನಾರಾಯಣ ಆಪಟೆಯವರ "ವಜ್ರಾಘಾತ" ವೆಂಬ ಕಾದಂಬರಿಯ ರೂಪಾಂತರ ವಾಗಿರುವದು. ಇದೇ ಮೇರೆಗೆ ಕನ್ನಡಿಗರ ಅಭಿಮಾನಾಸ್ಪದವಾದ ಇಂಥ ಇನ್ನೂ ಎರಡು ಮನೋಹರ ಕಾದಂಬರಿಗಳು ಬಹುಶಃ ಸ್ವತಂತ್ರ ಹೊಸ ರಚನೆಯಿಂದ ಅನುವು ನೋಡಿ ಬರೆಯಲ್ಪಡಬಹುದು.

ಆನಂದವನ, ಅಗಡಿ
೧೧–೫–೧೯೧೬

ವಿಧೇಯ
ಗಳಗನಾಥ

# ವಿನಾಶಾಂಕುರ

ವಿಜಯನಗರದ ಕೃಷ್ಣದೇವರಾಜನ ಕಾಲವು ಕನ್ನಡಿಗರ ಅತ್ಯಂತ ಗೌರವದ ಕಾಲವೆಂದು ಹೇಳಲವಶ್ಯವಿಲ್ಲ. ಆಗಿನ ಕನ್ನಡಿಗರ ಪ್ರತಾಪದ ಅಬ್ಬರದಲ್ಲಿ ನೆರೆಹೊರೆಯ ಮುಸಲ್ಮಾನ ಅರಸರು ತತ್ತರಿಸುತ್ತಲಿದ್ದರು. ಇಡಿಯ ದಕ್ಷಿಣ ಹಿಂದುಸ್ಥಾನವು ಕೃಷ್ಣದೇವರಾಯನ ಸ್ವಾಮಿತ್ವಕ್ಕೆ ಒಳಗಾಗಿತ್ತೆಂದು ಹೇಳಬಹುದು. ಮುಸಲ್ಮಾನರಿಗೆ ಮುಂದೆ ಬಹುದಿವಸ ಕೃಷ್ಣದೇವರಾಯನ ಹಾಗು ಅವನ ದಂಡಾಳುಗಳ ಭಯವು ತಪ್ಪಲಿಲ್ಲ. ಕೃಷ್ಣದೇವರಾಯನು ಜೀವದಿಂದಿರುವವರೆಗೆ ವಿಜಯನಗರದ ಮೇಲೆ ಸಾಗಿಬರಲಿಕ್ಕೆ ವಿಜಾಪುರದ ಆದಿಲಶಹನಿಗೆ ಧೈರ್ಯವಾಗಲಿಲ್ಲ. ಈ ಕಾಲದಲ್ಲಿ ಕನ್ನಡಿಗರ ಉತ್ಕರ್ಷದ ಪರಮಾವಧಿಯಾಯಿತೆಂದು ಹೇಳಬಹುದು. ವಿದ್ವಾಂಸರಿಗೆ ಆಶ್ರಯವು ದೊರೆತು, ವೈದಿಕ ವಿದ್ಯೆಗೆ ಉತ್ತೇಜನವಾಯಿತು. ದೊಡ್ಡ ದೊಡ್ಡ ಕಟ್ಟಡಗಳಿಂದ ರಾಜಧಾನಿಯು ಶೃಂಗರಿಸಲ್ಪಟ್ಟಿತು. ಕೃಷ್ಣಸ್ವಾಮಿಯ ಗುಡಿ, ಹಜಾರರಾಮ ಸ್ವಾಮಿಯ ಗುಡಿ, ವಿಜಯವಿಠ್ಠಲನ ಗುಡಿ ಮೊದಲಾದ ಪ್ರಸಿದ್ಧಗುಡಿಗಳು ಕಟ್ಟಿಸಲ್ಪಟ್ಟು, ಧರ್ಮದ ಬಾಹ್ಯ ಸ್ವರೂಪಕ್ಕೆ ಕಳೆಯೇರಿತು. ತುಂಗಭದ್ರೆಯ ಕಾಲುವೆ, ಬಸವನ ಕಾಲುವೆ, ದೊಡ್ಡ ದೊಂಡು ಕೆರೆ ಇವುಗಳಿಂದ ಪ್ರಜೆಗಳ ಸುಖಸಮೃದ್ಧಿಗಳು ಹೆಚ್ಚಿದವು. ಕೃಷ್ಣದೇವರಾಯನು ತನ್ನ ಪ್ರೀತಿಯ ಹೆಂಡತಿಯಾದ ನಾಗಲಾದೇವಿಯ ಸನ್ಮಾನಾರ್ಥವಾಗಿ ಕಟ್ಟಿಸಿದ ನಾಗಲಾಪುರವೆಂಬದು ಈಗ ಹೊಸಪೇಟೆ ಎಂಬ ಹೆಸರಿನಿಂದ ಪ್ರಸಿದ್ಧವಾಗಿರುತ್ತದೆ. ತೆನ್ನಾಲಿರಾಮಕೃಷ್ಣನೆಂಬ ವಿನೋದಸ್ವಭಾವದ ರಸಿಕ ವ್ಯಕ್ತಿಯ ಮನೋಹರ ಕಥೆಗಳಿಗೆ ಈ ಕೃಷ್ಣದೇವರಾಯನ ಸಂಬಂಧವಿರುತ್ತದೆಂಬುದನ್ನು ಬಹುಜನ ವಾಚಕರು ಅರಿತಿರಬಹುದು. ಒಟ್ಟಿಗೆ ಕೃಷ್ಣದೇವರಾಯನ ಕಾಲವು ಸರ್ವಾಂಗ ಸುಂದರವೂ ಬಲಿಷ್ಠವೂ ಕನ್ನಡಿಗರ ಅಭಿಮಾನಾಸ್ಪದವೂ ಆಗಿತ್ತೆಂದು ನಿರ್ಬಾಧವಾಗಿ ಹೇಳಬಹುದು; ಆದರೆ ನಿರ್ದೋಷವಾದದ್ದು ಜಗತ್ತಿನಲ್ಲಿ ಯಾವದಿರುತ್ತದೆ? ಅದರಂತೆ ಆಗಿನ ವಿಜಯನಗರದ ರಾಜ್ಯಕ್ಕೆ ಅಹಂಕಾರದ ಬಾಧೆಯು ತಟ್ಟಿ, ಅದು ಮುಸಲ್ಮಾನರ ಮನಸ್ತಾಪದ ಪ್ರಖರತೆಯಲ್ಲಿ ತನ್ನ ಸರ್ವಸ್ವದ ನಾಶಮಾಡಿಕೊಳ್ಳುವ ಹಾದಿಯನ್ನು ಹಿಡಿದಿತ್ತೆಂದು ದುಃಖ ದಿಂದ ಹೇಳಬೇಕಾಗುವುದು!

ಕೃಷ್ಣದೇವರಾಯನ ಕಾಲದಲ್ಲಿ ಹಿಂದೂ ಸರದಾರರ ವರ್ಚಸ್ಸು ವಿಶೇಷವಾಗಿತ್ತು. ರಾಜ್ಯದ ನಿಜವಾದ ಅಧಿಕಾರವು ಸರದಾರರ ಕೈಯಲ್ಲಿಯೇ ಇತ್ತೆಂದು ಹೇಳಬಹುದು. ಬಹುಜನ ಸರದಾರರು, ಅರಸನಿಗೆ ಗೊತ್ತಾಗದಂತೆ ಮನಸೋಕ್ತವಾಗಿ ಆಚರಿಸುತ್ತಲಿದ್ದರು. ಹೀಗಿರುವಾಗ,

ರಾಮುರಾಜನೆಂಬ ಮಹಾ ಪ್ರತಾಪಿಯಾದ ಸರದಾರನು, ಬೇಟೆಗಾಗಿ ಮುದಗಲ್ಲಿನ ಹತ್ತಿರದ ಅರಣ್ಯವನ್ನು ಕುರಿತು ಸಾಗಿದ್ದನು. ಆಗ ವೈಶಾಖ ಮಾಸದ ಕೃಷ್ಣಪಕ್ಷವು ಮುಗಿದು, ಅದೇ ಜ್ಯೇಷ್ಠಮಾಸಕ್ಕೆ ಆರಂಭವಾಗಿತ್ತು, ಮುಂಗಾರಿಯ ಕಪ್ಪು ಮೋಡವು ಕವಿದು, ಗುಡುಗು ಮಿಂಚುಗಳು ಮಳೆಯ ಅಬ್ಬರವನ್ನು ಸೂಚಿಸುತ್ತಲಿದ್ದವು. ಹೊರಗೆ ಮೂರು ತಾಸು ಹೊತ್ತು ಉಳಿದಿತ್ತು, ಒಕ್ಕಲಿಗರು ಮುಗಿಲ ಕಡೆಗೆ ಆನಂದದಿಂದ ನೋಡುತ್ತ ಮಳೆ ಬಂದರೂ ಬರಲಿ, ಆದಷ್ಟು ತಮ್ಮ ಹೊಲಗೆಲಸವನ್ನು ತೀರಿಸಿಕೊಳ್ಳಬೇಕೆಂದು ಆತುರಪಡುತ್ತ ಎತ್ತುಗಳನ್ನು ಬೆದರಿಸುತ್ತಲಿದ್ದರು. ಕೆಲವರು ಹೊಲಕ್ಕೆ ಗೊಬ್ಬರವನ್ನು ಬೇಗ ಬೇಗ ಕಡಿಯುತ್ತಲಿದ್ದರು. ಒತ್ತರದಿಂದ ಬೀಸುವ ತಂಗಾಳಿಯ ಸೋಂಕಿನಿಂದ ಹಾದಿಕಾರರಿಗೆ ಸುಖವಾಗುತ್ತಿದ್ದರು. ತಾವು ತೋಯಿಸಿಕೊಂಡೇನೆಂಬ ಭಯದಿಂದ ಮುಗಿಲು ನೋಡುತ್ತ ಲಗುಲಗು ನಡೆಯುತ್ತಲಿದ್ದರು. ಮೋಡಗಳು ಕವಿದದ್ದರಿಂದ ಸೂರ್ಯದರ್ಶನಕ್ಕೆ ಆಸ್ಪದ ವಿಲ್ಲದಾಯಿತು. ಈ ಮೊದಲು ಪೆಟ್ಟಿನ ಮೇಲೆ ಪೆಟ್ಟು ಎರಡು ಮೂರು ಮುಂಗಾರಿಯ ದೊಡ್ಡ ಮಳೆಗಳಾದದ್ದರಿಂದ, ಹೊಲಕ್ಕೆ ಹದಬಿದ್ದು ಹಾದಿಬಟ್ಟೆಗಳು ಹಚ್ಚಗಾಗುತ್ತಲಿದ್ದವು. ತಗ್ಗುಗಳಲ್ಲಿ ನೀರುತುಂಬಿ ಹಳ್ಳಕೊಳ್ಳಗಳಲ್ಲಿ ನೀರು ಸರವುಗಟ್ಟಿ ಹರಿಯುತ್ತಿದ್ದದ್ದರಿಂದ, ಮಳೆಗಾಲವು ದಿವ್ಯಾಲಂಕಾರಗಳನ್ನಿಟ್ಟುಕೊಟ್ಟಂತೆ ಆಗಿತ್ತು. ಬರಬರುತ್ತ ಗಾಳಿಯು ಒತ್ತರವಾಯಿತು. ಆಕಾಶದಲ್ಲೆಲ್ಲ ಮೋಡಗಳು ಸ್ವಚ್ಛಂದದಿಂದ ಸಂಚರಿಸತೊಡಗಿ, ದೊಡ್ಡ ದೊಡ್ಡ ಹನಿಗಳು ಉದುರಹತ್ತಿದವು. ದನಕಾಯುವ ಹುಡುಗರು ತಮ್ಮ ದನಗಳ ಹಿಂಡುಗಳನ್ನು ಓಡಿಸುತ್ತ ತಮ್ಮ ಕಂಬಳಿಯ ಕೊಪ್ಪಿಗಳ ತುದಿಯನ್ನು ಎಡಗೈಯಿಂದ ಹಿಡಿದುಕೊಂಡು, ಬಲಗೈಯಿಂದ ಕೋಲನ್ನೆತ್ತಿ ದನಗಳನ್ನು ಬೆದರಿಸುತ್ತ ಬಡಿಯುತ್ತ ಆನಂದದಿಂದ ಸಾಗಹತ್ತಿದರು. ತೋಯಿಸಿಕೊಳ್ಳುವ ಭಯದ ಸುದ್ದಿಯನ್ನು ಕೂಡ ಅರಿಯದವರಂತೆ ಅವರು ಆನಂದದಿಂದ ಕೂಗುತ್ತಲಿದ್ದರು. ಮೇಲೆ ಮೇಲೆ ಮಳೆಯಾಗಿ ಹುಡಿಕೂತದ್ದರಿಂದ ಆಗ ಕಣ್ಣು ತೆರೆದು, ಸಾಗಲಿಕ್ಕೆ ಯಾರಿಗೂ ಪ್ರತಿಬಂಧವಾಗುತ್ತಿದ್ದಿಲ್ಲ. ಮೋಡದ ಗಮ್ಮಿದಿಂದ ತಳಮಳಿಸುತ್ತಿದ್ದವರಿಗೆ ಅಂಥ ದೊಡ್ಡ ಬಿರುಗಾಳಿಯಿಂದಾದರೂ ಸುಖವೇ ಆಗುತ್ತಿತ್ತು, ಗಾಳಿಯು ಮಳೆಯನ್ನು ತರುವದೂ ಉಂಟು; ಕಳೆಯುವದೂ ಉಂಟು. ಬಿರುಗಾಳಿಯಿಂದ ಮಳೆಯ ಕಸುವು ಕಡಿಮೆಯಾಯಿತು. ಒಂದು ಕಂಬಳಿ ತೋಯುವಷ್ಟು ಮಳೆಯಾಗಿ, ಮೋಡಗಳು ಚದರಿ ಬಿಸಿಲು ಬಿದ್ದಿತು. ಆಗ ಆಕಾಶದ ಹಾಗು ದಿಕ್ಕುಗಳ ಸುಪ್ರಸನ್ನತೆಯು ಹೆಚ್ಚಿ, ಅದರೊಡನೆ ಪ್ರಾಣಿಗಳ ಆನಂದವು ಹೆಚ್ಚಿತು. ಬೇಟೆಗಾಗಿ ಸಾಗಿದ್ದ ರಾಮರಾಜನಿಗಂತು ಹಿಡಿಸಲಾರದಷ್ಟು ಆನಂದವಾಯಿತು. ಆತನು ಒತ್ತರದಿಂದ ಅರಣ್ಯವನ್ನು ಸೇರಿ, ಒಂದು ನದಿಯ ದಂಡೆಗೆ ಹೋದನು.

ಆ ಅರಣ್ಯವು ಹುಲಿ-ಕರಡಿಗಳು ಸೇರುವಷ್ಟು ಗಹನವಾದದ್ದಿದ್ದಿಲ್ಲ. ಆದರೆ ತಪ್ಪಿಸಿಕೊಂಡು ಬಂದ ಒಂದು ಹುಲಿಯು ಪೆಳೆಗಳಲ್ಲಿ ಸೇರಿಕೊಂಡು ದನಕರುಗಳಿಗೆ ಬಹಳ ಉಪದ್ರವ ಕೊಡುತ್ತಲಿತ್ತು, ಈ ಸುದ್ದಿಯನ್ನು ಕೇಳಿದ ರಾಮರಾಜನು ತಾನೇ ಆ ಹುಲಿಯನ್ನು ಕೊಲ್ಲುವೆನೆಂದು ಹೇಳಿ, ಇಂದು ಒಬ್ಬನೇ ಸ್ವಚ್ಛಂದದಿಂದ ಬೇಟೆಗೆ ನಡೆದಿದ್ದನು. ರಾಮರಾಜನ

ಬೇಟೆಯು ಹುಲಿಯೆಂಬ ಭಯದಿಂದ ಒಬ್ಬರೂ ಅದರ ಗೊಡವಿಗೆ ಹೋಗಿದ್ದಿಲ್ಲ. ಏರಿಕೆಯ ರಕ್ತದ ನಮ್ಮ ಆ ತರುಣ ಕನ್ನಡ ಸರದಾರನು, ಒಂದು ಕುರಿಯನ್ನು ಒಂದು ಗಿಡದ ಬೊಡ್ಡೆಗೆ ಕಟ್ಟಿಸಿ, ತಾನು ಗಿಡವೇರಿ ಕುಳಿತುಕೊಂಡನು. ದಡ್ಡಿಯೊಳಗಿದ್ದ ಆ ಕುರಿಯ ಎರಡು ಮರಿಗಳು ಅಕಸ್ಮಾತ್ತಾಗಿ ಮೆವುಗುಟ್ಟುತ್ತ ತಮ್ಮ ತಾಯಿಯ ಬಳಿಗೆ ಬಂದವು; ಕುರಿಯು ಶಿಶುವಾತ್ಸಲ್ಯದಿಂದ ಒಂದೇಸವನೆ ಒದರುತ್ತ ಮರಿಗಳ ಬಳಿಗೆ ಹೋಗುವದಕ್ಕಾಗಿ ತನ್ನ ಕೊರಳ ಹಗ್ಗವನ್ನು ಕಸುವಿನಿಂದ ಜಗ್ಗುತ್ತ ಕೊಸರಿ ಹೋಗಲು ಯತ್ನಿಸುತ್ತಿತ್ತು. ಇದನ್ನು ಕೌತುಕದಿಂದ ನೋಡುತ್ತ ಕುಳಿತುಕೊಂಡಿದ್ದ ರಾಮರಾಜನ ಲಕ್ಷ್ಯವನ್ನು ಅಕಸ್ಮಾತ್ತಾಗಿ ಒಬ್ಬ ತರುಣಿಯು ಎಳೆದುಕೊಂಡಳು. ಹದಿನಾರು ವರ್ಷ ವಯಸ್ಸಿನ ಸುಂದರಿಯು, ಒಂದು ಸಣ್ಣ ಬಿಂದಿಗೆಯನ್ನು ಬಗಲಲ್ಲಿ ಇಟ್ಟುಕೊಂಡು ನದಿಗೆ ನೀರಿಗಾಗಿ ಬರುತ್ತಲಿದ್ದಳು. ಆಕೆಯ ಪರಿವಾರವು ಸ್ವಲ್ಪ ದೂರ ಒಂದು ಗಿಡದ ಬುಡದಲ್ಲಿ ಇಳಿದುಕೊಂಡು ವಿಶ್ರಮಿಸುತ್ತಲಿತ್ತು. ತರುಣಿಯು ಮುಸಲ್ಮಾನಳಾಗಿದ್ದರೂ ಇನ್ನೂ ಲಗ್ನವಾಗದೆ ಇದ್ದದ್ದರಿಂದ ಆಕೆಯು ಗೋಷೆಯ ನಿಯಮಕ್ಕೆ ಒಳಗಾಗಿದ್ದಿಲ್ಲ. ಸಮೀಪದಲ್ಲಿದ್ದ ಆ ಹಳ್ಳಿಯನ್ನು ಈಗ ಹೊತ್ತು ಮುಳುಗುವದರೊಳಗೆ ಸೇರೋಣವೆಂಬ ವಿಚಾರದಿಂದ ಆ ತರುಣಿಯ ಪರಿವಾರದವರು ನಿಶ್ಚಿಂತೆಯಿಂದ ತಮ್ಮ ತಮ್ಮೊಳಗೆ ಹರಟುತ್ತಿದ್ದರು. ಕುರಿಯ ವಾಸನೆಯಿಂದ ಹುಲಿಯು ಹೊರಬೀಳಬಹುದೆಂದು ಹಾದಿಯನ್ನು ನೋಡುತ್ತಿದ್ದ ರಾಮರಾಜನ ಕಣ್ಣಿಗೆ ಆ ಸುಂದರ ತರುಣಿಯ ಲಾವಣ್ಯ ಪ್ರಾಶನದ ಹೊಸದೊಂದು ಪ್ರಸಂಗವು ಬಿದ್ದದ್ದರಿಂದ ಆತನ ಮನಸ್ಸು ಇತ್ತಂಡವಾಯಿತು. ಒಬ್ಬನೇ ಪರಾಕ್ರಮವನ್ನು ತೋರಿಸಬೇಕೆಂಬ ಉಬ್ಬಿನಿಂದ ಸಂಗಡಯಾರನ್ನೂ ಕರಕೊಳ್ಳದೆ, ಆತನು ತಾನೊಬ್ಬನೇ ಬೇಟೆಗೆ ಬಂದಿದ್ದನು. ಕುರಿಯನ್ನು ತಂದುಕೊಟ್ಟ ಕುರುಬನು ಅದನ್ನು ಮರಕ್ಕೆ ಕಟ್ಟಿ, ಎಲ್ಲ ಸಿದ್ಧತೆಯನ್ನು ಮಾಡಿದ ಮೇಲೆ ರಾಮರಾಜನು ಆತನಿಗೆ ಹೊರಟು ಹೋಗುವುದಕ್ಕೆ ಕಟ್ಟಪ್ಪಣೆ ಮಾಡಿದ್ದನು. ಇತ್ತ ತನ್ನ ಮರಿಗಳು ಬಂದು ಮೊಲೆ ಕುಡಿಯಹತ್ತಿದ್ದರಿಂದ, ಕುರಿಯ ಜಗ್ಗಾಟವು ನಿಂತಿತು. ಬರಬರುತ್ತ ರಾಮರಾಜನ ಮನಸ್ಸನ್ನು ಆ ಸುಂದರ ತರುಣಿಯು ಸಂಪೂರ್ಣವಾಗಿ ಎಳಕೊಂಡದ್ದರಿಂದ ಆತನ ಮೇಲೆ ಆ ತಾಯಿ ಮಕ್ಕಳ ಪವಿತ್ರಪ್ರೇಮದ ಪರಿಣಾಮವಾಗಲಿ, ಬಳಿಯಲ್ಲಿ ಹರಿಯುವ ನದಿಯ ಪ್ರವಾಹದ ಮಂಜುಲನಾದದ ಪರಿಣಾಮವಾಗಲಿ, ಇಳಿಯಹೊತ್ತಿನ ತಂಗಾಳಿಯ ಸುಖಸ್ಪರ್ಶದ ಪರಿಣಾಮವಾಗಲಿ ಆಗಲಿಲ್ಲ. ಯಾವ ಪಾಪವನ್ನೂ ಅರಿಯದ ಆ ಸುಂದರಿಯ ಮನಸ್ಸು, ಆ ನಿರಪರಾಧಿಗಳಾದ ಮೂಕಪ್ರಾಣಿಗಳ ಕಡೆಗೆ ತಿರುಗಿತು. ಆ ತಾಯಿಮಕ್ಕಳ ಅಕೃತ್ರಿಮ ಪ್ರೇಮವನ್ನು ನೋಡಿ, ಮುಗುಳು ನಗೆ ನಗುತ್ತ ಆಕೆಯು ಅವುಗಳ ಬಳಿಗೆ ಕೌತುಕದಿಂದ ಬರುತ್ತಲಿದ್ದಳು. ಆ ಸುಂದರ ತರುಣಿಯ ಮನೋಹರ ಮುಖವನ್ನೂ ತೇಜಃಪುಂಜವಾದ ವಿಶಾಲ ನೇತ್ರಗಳನ್ನೂ ಮಂದಗಮನವನ್ನೂ ನೋಡುವ ಭರದಲ್ಲಿ, ರಾಮರಾಜನು ಅನ್ಯ ವಿಷಯಗಳನ್ನು ಮರೆತನು. ಆತನಿಗೆ ತನ್ನ ಕೈಯೊಳಗಿನ ತುಬಾಕಿಯ ನೆನಪೂ ಉಳಿಯಲಿಲ್ಲ; ಹುಲಿಯ ಸ್ಮರಣವಾಗಲಿಲ್ಲ; ತಾನು ಯಾರು, ಯಾಕೆ ಬಂದೆನು, ಎಲ್ಲಿ ಕುಳಿತಿರುವೆನು ಎಂಬುದರ ಅರಿವು ಸಹ ನಿಲ್ಲಲಿಲ್ಲ; ಆತನು ಎಲ್ಲವನ್ನು ಮರೆತು ಎವೆಯಿಕ್ಕದೆ ಒಂದೇಸವನೆ ಆ ತರುಣಿಯನ್ನು ನೋಡುತ್ತ ಕುಳಿತುಕೊಂಡಿದ್ದನು.

ಇತ್ತ ಆ ತರಣಿಯು ಕುರಿಯ, ಹಾಗು ಕುರಿಮರಿಗಳ ಪ್ರೇಮದ ಪ್ರಭಾವವನ್ನು ಕೌತುಕದಿಂದ ನೋಡುತ್ತ ಅವುಗಳ ಬಳಿಗೆ ಬಂದು, ಆ ಕುರಿಯನ್ನು ಕುರಿತು ಉರ್ದೂ ಭಾಷೆಯಿಂದ–ಯಾವ ದುಷ್ಟನು ನಿನ್ನನ್ನು ಕಟ್ಟಿದ್ದಾನೆ! ನಿಲ್ಲು, ನಾನು ನಿನ್ನನ್ನು ಈಗ ಬಿಚ್ಚಿ ಬಿಡುತ್ತೇನೆ ಎಂದು ನುಡಿಯುತ್ತ ಕುರಿಯ ಕೊರಳ ಹಗ್ಗವನ್ನು ಬಿಚ್ಚಹೋದಳು. ಆಕೆಯ ಪ್ರಯತ್ನಕ್ಕೆ ಪ್ರತಿಬಂಧ ಮಾಡುವದೊತ್ತಟ್ಟಿಗೇ ಉಳಿದು, ರಾಮರಾಜನು ಆಕೆಯ ಚಲನವಲನವನ್ನೂ, ಲಲಿತವಾದ ಮನೋಹರ ಹಾವಭಾವವನ್ನೂ ನೋಡುವದರಲ್ಲಿ ಮಗ್ನನಾಗಿ ಹೋದನು. ಆತನು ಹೀಗೆಯೇ ಎಷ್ಟು ಹೊತ್ತು ಮಗ್ನನಾಗಿರುತ್ತಿದ್ದನೋ ತಿಳಿಯದು. ಆದರೆ ಆತನನ್ನು ಎಚ್ಚರ ಗೊಳಿಸುವಂಥ ಒಂದು ಭಯಂಕರ ಪ್ರಸಂಗವು ಅಕಸ್ಮಾತ್ತಾಗಿ ಒದಗಿ, ಆತನ ಚಿತ್ತವು ಚಂಚಲ ವಾಯಿತು. ಕುರಿಯನ್ನು ಗಿಡಕ್ಕೆ ಕಟ್ಟಿಹೋದ ಕುರುಬನು ಗುಲ್ಲುಮಾಡಿ ಎಬ್ಬಿಸಿದ್ದರಿಂದಲೋ, ಕುರಿಯ ವಾಸನೆಯಿಂದಲೋ, ಬೇರೆ ಯಾವ ಕಾರಣದಿಂದಲೋ ಆ ಭಯಂಕರವಾದ ಹುಲಿಯು ಗುರುಗುಟ್ಟುತ್ತ ಎದ್ದಿತು. ಅದರ ಗುರುಗುಟ್ಟುವ ಧ್ವನಿಯು ರಾಮರಾಜನಿಗೆ ಸ್ಪಷ್ಟವಾಗಿ ಕೇಳಿಸ ಹತ್ತಿತ್ತು. ಇನ್ನು ಈ ಹುಲಿಯು ಇತ್ತಕಡೆಗೆ ಬಂದು ಕುರಿಯ ಮೇಲಾಗಲಿ ಸುಂದರಿಯ ಮೇಲಾಗಲಿ ಹಾರಿ, ಪ್ರಾಣಹರಣ ಮಾಡುವದೆಂದು ರಾಮರಾಜನು ತಿಳಿದನು. ಆ ತರುಣಿಯೊಬ್ಬಳು ಅಲ್ಲಿ ಇರದಿದ್ದರೆ, ಆತನಿಗೆ ಯಾತರ ಚಿಂತೆಯೂ ಇದ್ದಿಲ್ಲ, ಆತನು ಒಂದು ಕ್ಷಣದಲ್ಲಿ ಗುಂಡು ಹಾಕಿ ಹುಲಿಯನ್ನು ಕೊಲ್ಲುತ್ತಿದ್ದನು. ಆದರೆ ಈಗ ಹಾಗೆ ಮಾಡುವ ಹಾಗಿದ್ದಿಲ್ಲ. ಕುರಿಯ ಬಳಿಯಲ್ಲಿ ನಿಂತಿದ್ದ ಸುಂದರಿಯನ್ನು ಬೆನ್ನಿಗೆ ಹಾಕಿಕೊಂಡು ಹುಲಿಗೆ ಎದುರಾಗಿ ನಿಂತು ಅದನ್ನು ಆತನು ಕೊಲ್ಲದಿದ್ದರೆ, ಆಕೆಯ ಪ್ರಾಣ ರಕ್ಷಣವಾಗುವಂತೆ ಇದ್ದಿಲ್ಲ. ಆದ್ದರಿಂದ ಮಹಾ ಸಾಹಸಿಯಾದ ರಾಮರಾಜನು ತುಬಾಕಿಯನ್ನು ಜೋಕೆಯಿಂದ ಹಿಡಿದು ಗಿಡದ ಮೇಲಿಂದ ಕೆಳಗೆ ದುಮುಕಿದನು. ಅಷ್ಟರಲ್ಲಿ ಹುಲಿಯು ಕುರಿಯನ್ನು ಹಿಡಿದಿತ್ತು. ಇನ್ನು ಗುಂಡು ಹಾಕುವದು ಅಶಕ್ಯವಾಗಿ ತೋರಲು ರಾಮರಾಜನು ತುಬಾಕಿಯನ್ನು ಬಿಸುಟಿ, ಟೊಂಕದಲ್ಲಿ ಅಲೆದಾಡುತ್ತಿದ್ದ ಕಠಾರಿಯನ್ನು ಕೈಯಲ್ಲಿ ತಕ್ಕೊಂಡು ಹುಲಿಯ ಹೊಟ್ಟೆಯ ಬುಡದಲ್ಲಿ ಸೇರಿಸಿದನು. ಹುಲಿಯಬಾಯಲ್ಲಿ ಕುರಿಯಿದ್ದದ್ದರಿಂದಾಗಲಿ, ಬೇರೆ ಯಾವ ಕಾರಣದಿಂದೇ ಆಗಲಿ, ಅದರ ಆಯಕಟ್ಟಿನ ಸ್ಥಳ ನೋಡಿ ಒಂದೇಸವನೆ ಕಠಾರಿಯಿಂದ ಇರಿಯಲಿಕ್ಕೆ ಆತನಿಗೆ ಅನುಕೂಲವಾಯಿತು. ಹುಲಿಯು ಬಾಯೊಳಗಿನ ಕುರಿಯನ್ನು ಚಲ್ಲಿಕೊಟ್ಟು, ರಾಮರಾಜನನ್ನು ಹಿಡಿಯಲು ಹಾತೊರೆಯಿತು. ಹೀಗೆ ಒಂದೇಸವನೆ ಅವರಿಬ್ಬರ ಗುದಮುರಿಗೆಯು ನಡೆದಿರಲು, ರಾಮರಾಜನ ಕಟಾರಿಯ ಇರಿತಗಳಿಂದ ಹುಲಿಯು ನೆಲಕ್ಕೆ ಉರುಳಿತು. ಹುಲಿಯ ಕಾಟ ತಪ್ಪುವವರೆಗೆ ರಾಮರಾಜನಿಗೆ ಆ ಸುಂದರಿಯ ಯೋಗಕ್ಷೇಮಕ್ಕೆ ಅನುಕೂಲವಾಗಲಿಲ್ಲ. ನೆಲಕ್ಕುರುಳಿ ಆಕ್ರೋಶಮಾಡುವ ಹುಲಿಯು ಇನ್ನು ಮೇಲಕ್ಕೇಳ ಲಾರದೆಂದು ಮನಗಂಡು, ರಾಮರಾಜನು ಸುಂದರಿಯ ಕಡೆಗೆ ಹೊರಳಿದನು. ಆಗ ಆಕೆಯು ಮೂರ್ಛಿತಳಾಗಿ ಭೂಮಿಯಲ್ಲಿ ಒರಗಿದ್ದಳು. ಮೊದಲು ಹುಲಿಯನ್ನು ಪೂರಾ ಕೊಲ್ಲಬೇಕೋ, ಸುಂದರಿಯನ್ನು ಎಚ್ಚರಗೊಳಿಸಬೇಕೋ ಎಂಬ ವಿಚಾರವು ರಾಮರಾಜನ ಮನಸ್ಸಿನಲ್ಲಿ

ಉತ್ಪನ್ನವಾಯಿತು. ಆದರೆ ವಿಚಾರ ಮಾಡುತ್ತ ಕುಳಿತುಕೊಳ್ಳಲಿಕ್ಕೆ ಆಗ ಸಮಯವಿದ್ದಿಲ್ಲ. ಆತನು ತೀರ ನಿತ್ರಾಣವಾಗಿದ್ದ ಹುಲಿಯ ಗೊಡವೆಯನ್ನು ಬಿಟ್ಟು, ಆ ಮನೋಹರಳಾದ ಯವನ ಸುಂದರಿಯನ್ನು ಜಾಗ್ರತಗೊಳಿಸುವ ಉಪಾಯವನ್ನು ನಡೆಸಿದನು.

ರಾಮರಾಜನು ಮೂರ್ಛಿತಳಾದ ಆ ತರುಣಿಯನ್ನು ದೂರ ಎತ್ತಿಕೊಂಡು ಹೋಗಿ, ತನ್ನ ಸೆಲ್ಲೆಯ ಸೆರಗನ್ನು ನದಿಯಲ್ಲಿ ಎದ್ದಿಕೊಂಡು ಬಂದು ಶೀತೋಪಚಾರ ಮಾಡಹತ್ತಿದನು. ಕಣ್ಣಿಗೆ ನೀರು ಹಚ್ಚಿ ನೆತ್ತಿಗೆ ನೀರು ತಟ್ಟಿ ಗಾಳಿ ಹಾಕಹತ್ತಿದ ಸ್ವಲ್ಪ ಹೊತ್ತಿನ ಮೇಲೆ ಆ ತರುಣಿಯು ಸ್ವಲ್ಪ ಚೇತರಿಸಿ ಕಣ್ಣು ತೆರೆದಳು; ಆದರೆ ಅಷ್ಟರಲ್ಲಿ ರಾಮರಾಜನ ಮನಸ್ಸಿಗೆ ಏನೋ ಹೊಳೆದು, ಆತನು ಅರ್ಧ ಎಚ್ಚತ್ತಿದ್ದ ಆ ಸುಂದರಿಯನ್ನು ತನ್ನ ಕುದುರೆ ಕಟ್ಟಿದ ಗಿಡದ ಬಳಿಗೆ ಎತ್ತಿಕೊಂಡು ಹೋಗಿ, ಆಕೆಯನ್ನು ಕುದುರೆಯ ಮೇಲೆ ಅಡ್ಡ ಮಲಗಿಸಿ, ತಾನು ಕುದುರೆಯನ್ನು ಹತ್ತಿ ವೇಗದಿಂದ ಸಾಗಿದನು. ಇಷ್ಟಾದರೂ ಆ ತರುಣಿಯು ಪೂರ್ಣವಾಗಿ ಎಚ್ಚತ್ತಿರಲಿಲ್ಲ. ಈ ತರುಣನು ಯಾರು, ಈತನು ಏನು ಮಾಡುವನು ಎಂಬುದರ ಪ್ರಜ್ಞೆಯೂ ಆಕೆಗೆ ಇದ್ದಿಲ್ಲ. ಕುದುರೆಯನ್ನು ಒಂದೇಸವನೆ ಓಡಿಸುತ್ತ ಸಾಗಿದ ರಾಮರಾಜನು. ವಿಜಯನಗರದಿಂದ ಕೆಲವು ಹರಿದಾರಿಯ ಮೇಲಿದ್ದ ಕುಂಜವನವೆಂಬ ಮನೋಹರವಾದ ತನ್ನ ಉದ್ಯಾನಕ್ಕೆ ಬಂದೇ ನಿಂತುಕೊಂಡನು. ಆ ಉದ್ಯಾನದ ಮಧ್ಯದಲ್ಲಿ ಒಂದು ಸುಂದರವಾದ ಮಂದಿರವು ಒಪ್ಪುತ್ತಿತ್ತು. ರಾಮರಾಜನು ಆ ಮಂದಿರದಲ್ಲಿಯ ಒಂದು ಕೋಣೆಯಲ್ಲಿ ಮಂಡಿಸಿದ್ದ ಪಲ್ಲಂಗದಲ್ಲಿ ಆ ತರುಣಿಯನ್ನು ಮಲಗಿಸಿ, ಆಕೆಯನ್ನು ಸಂಪೂರ್ಣವಾಗಿ ಎಚ್ಚರಗೊಳಿಸುವ ಉಪಾಯಗಳನ್ನು ನಡೆಸಿದನು. ಕೆಲಹೊತ್ತಿನ ಮೇಲೆ ಆ ತರುಣಿಯು ಎಚ್ಚತ್ತು ಕಣ್ದೆರೆದು ನೋಡಲು ಮಚ್ಛರ ದಾನಿಯನ್ನು ಹಾಕಿದ ಒಂದು ಪಲ್ಲಂಗದ ಮೇಲೆ ಮಲಗಿದ್ದು ಬಳಿಯಲ್ಲಿ ಒಬ್ಬ ಸುಂದರನಾದ ತರುಣನು ಕುಳಿತಿರುವನೆಂಬುದು ಆಕೆಗೆ ಗೊತ್ತಾಯಿತು. ಕೂಡಲೆ ಆಕೆಯು ಮೆಟ್ಟಿಬಿದ್ದು ಚಟ್ಟನೆ ಎದ್ದು ಪಲ್ಲಂಗದಿಂದ ಇಳಿದು ಕೆಳಗೆ ನಿಂತುಕೊಂಡಳು. ಆಗ ರಾಮರಾಜನು ಅಚ್ಚ ಫಾರಸೀಭಾಷೆಯಿಂದ ಆ ತರುಣಿಯನ್ನು ಕುರಿತು—"ತಾವು ಏಳಬಾರದು, ಇನ್ನೂ ನಿಮ್ಮ ಪ್ರಕೃತಿಯು ನೆಟ್ಟಗಾಗಲಿಲ್ಲ. ಸ್ವಸ್ಥ ಮಲಗಿಕೊಳ್ಳಬೇಕು. ಹುಲಿಯ ಭಯವೇನೂ ಇಲ್ಲಿ ಇರುವದಿಲ್ಲ" ಎಂದು ನುಡಿದ ಕೂಡಲೆ ಆ ತರುಣಿಗೆ ಹೊಳೆಯ ದಂಡೆಯ ನೆನಪು ಆಗಿ, ಅಲ್ಲಿಯ ಭಯಂಕರವಾದ ನೋಟವು ಆಕೆಯ ಕಣ್ಣಿಗೆ ಕಟ್ಟಿತು. ಬಿರುಗಾಳಿಗೆ ತತ್ತರಿಸುವ ಬಳ್ಳಿಯಂತೆ ಆಕೆಯು ಗದಗದ ನಡುಗಹತ್ತಿದಳು. ಸ್ವಲ್ಪ ಹೊತ್ತಿನ ಮೇಲೆ ಆಕೆಯು ಸಮಾಧಾನ ತಾಳಿ ರಾಮರಾಜನನ್ನು ಕುರಿತು—

ತರುಣಿ—ನನ್ನನ್ನು ಆ ಭಯಂಕರವಾದ ಹುಲಿಯ ಬಾಯೊಳಗಿಂದ ಬಿಡಿಸಿದವರು ತಾವೇ ಏನು?

ರಾಮರಾಜ—ಹೌದು; ಕ್ರೂರ ವ್ಯಾಘ್ರನ ದವಡೆಯೊಳಗಿಂದ ಚಿಗುರೆಯನ್ನು ಬಿಡಿಸಿ, ಬೇಟೆಯಲ್ಲಿ ಎರಡು ಫಲಗಳನ್ನು ಸಂಪಾದಿಸಿದ ಮಹದ್ಭಾಗ್ಯಶಾಲಿಯು.

ತರುಣಿ—ಆದರೆ ನನ್ನವರು ಎಲ್ಲಿದ್ದಾರೆ?

ರಾಮರಾಜ—ನಾನೂ ನಿಮ್ಮವನೇ ಇರುತ್ತೇನೆ; ಹಾಗು ಮರಣ ಪರ್ಯಂತರವಾಗಿ ನಿಮ್ಮವನೆನಿಸಿಕೊಳ್ಳುವ ಮಹದ್ಭಾಗ್ಯವು ದೊರೆಯಬೇಕೆಂದು ಮನಃಪೂರ್ವಕವಾಗಿ ನಾನು ಇಚ್ಛಿಸುತ್ತೇನೆ.

ತರುಣಿ—ತಾವು ಯಾರು?

ರಾಮರಾಜ–ಇಂದಿನವರೆಗೆ ನಾನು ವಿಜಯನಗರದ ರಾಜ್ಯದೊಳಗಿನ ಒಬ್ಬ ದೊಡ್ಡ ಸರದಾರನ ಮಗನು ಮಾತ್ರ ಆಗಿದ್ದೆನು, ಇಂದಿನಿಂದ ತಮ್ಮ ದಾಸನೂ ಆಗಿರುವೆನು.

ತರುಣಿ—ಆದರೆ ನಮ್ಮವರು ಎಲ್ಲಿದ್ದಾರೆ.?

ರಾಮರಾಜ—ಅವರು ಎಲ್ಲಿರುವರೆಂಬುದನ್ನು ನೋಡಲಿಕ್ಕೆ ಆಗ ನನಗೆ ಕೂಡಲೇ ಇಲ್ಲ. ಕತ್ತಲಾಗುತ್ತದೆಂದು ತಮ್ಮನ್ನು ಕರಕೊಂಡು ಬಂದುಬಿಟ್ಟೆನು. ಇನ್ನು ನಿಮಗೆ ಪೂರಾ ನೆಟ್ಟಗಾದಮೇಲೆ ನಿಮ್ಮ ಅಪ್ಪಣೆಯಿಂದ ನಿಮ್ಮ ಮನೆಯವರನ್ನು ಹುಡುಕಿಸುವೆನು.

ತರುಣಿ— ನನ್ನನ್ನು ಸಂಗಡ ಕರಕೊಂಡು ಹೋಗಿಯೇ ನನ್ನ ಮನೆಯವರನ್ನು ಹುಡುಕಿ, ಅವರ ಬಳಿಗೆ ನನ್ನನ್ನು ಕಳಿಸಬೇಕು.

ರಾಮರಾಜ—ಆಮೇಲೆ ನನ್ನನ್ನು ಯಾರಿಗೆ ಒಪ್ಪಿಸಲಿ? ನನ್ನ ಗತಿಯೇನು? ನನ್ನಿಂದ ತಮ್ಮ ಸಂರಕ್ಷಣವಾದಂತೆ, ಇನ್ನು ತಾವು ನನ್ನನ್ನು ರಕ್ಷಿಸಲೇಬೇಕು.

ತರುಣಿ—ಇದೇನು ಮಾತು? ಅನಾಥಳಾದ ನಾನು ನಿಮ್ಮನ್ನು ಹ್ಯಾಗೆ ರಕ್ಷಿಸುವೆನು?

ರಾಮರಾಜ—ಈಗ ನೀವು ಅನಾಥರಾಗಿರುವಿರಾ! ಹೀಗೆ ನುಡಿಯಲಾಗದು. ನಿಮ್ಮ ಸಂರಕ್ಷಣಕ್ಕಾಗಿ ಈಗೊಂದು ಸಾರೆ ನನ್ನ ಪ್ರಾಣವನ್ನು ಸಂಕಟಕ್ಕೆ ಗುರಿಮಾಡಿದ್ದೆನು. ಇನ್ನು ಮೇಲೆ ನನ್ನ ಜೀವಮಾನವಿರುವ ತನಕ ನಿಮ್ಮ ಸಂರಕ್ಷಣಕ್ಕಾಗಿ ಜೀವವನ್ನಾದರೂ ಕೊಟ್ಟೇನು. ನಿಮ್ಮ ಕೂದಲು ಕೊಂಕಗೊಡಲಿಕ್ಕಿಲ್ಲ. ಇನ್ನು ಮೇಲೆ ಇಲ್ಲಿಂದ ಹೋಗುವ ಮಾತು ಮಾತ್ರ ನೀವು ತೆಗೆಯಬೇಡಿರಿ.

ತರುಣಿ—ಏನು! ನನ್ನನ್ನು ನೀವು ಇಲ್ಲಿಯೇ ಇಟ್ಟುಕೊಳ್ಳುವಿರೋ?

ರಾಮರಾಜ—ನಾನು ಇಟ್ಟುಕೊಳ್ಳುವದಿಲ್ಲ. ನೀವೇ ಇದ್ದು, ನನ್ನ ಪ್ರಾಣವನ್ನು ನಿಮ್ಮ ಬಳಿಯಲ್ಲಿ ಇಟ್ಟುಕೊಳ್ಳಿರಿ.

ಈ ಮಾತುಗಳಿಗೆ ಏನೆಂದು ಉತ್ತರಕೊಡಬೇಕೆಂಬುದು ಆ ತರುಣಿಗೆ ಗೊತ್ತಾಗದ್ದರಿಂದ, ಸುಮ್ಮನೆ ನಿಂತುಕೊಂಡಳು. ಸ್ವಲ್ಪ ಹೊತ್ತಿನ ಮೇಲೆ ತುಸು ಧೈರ್ಯ ತಾಳಿ–

ತರುಣಿ— ನನ್ನ ಅತ್ತಿ ನನ್ನ ಸೋದರಮಾವ, ನನ್ನ ಮಾರ್ಜೀನೆ, ನನ್ನ ಅಣ್ಣ ಇವರು ಏನಂದಾರು?

ರಾಮರಾಜ—ಹುಲಿಯು ತಿಂದಿತೆಂದು ಅಂದಾರು! ನಾಲ್ಕೂ ಕಡೆಯಲ್ಲಿ ಹುಡುಕಿ, ನಿರಾಶೆಪಟ್ಟು, ಈಗ ಮುಂದೆ ಹೋಗಬೇಕೆಂದು ಹೊರಟಿರುವ ಸ್ಥಳಕ್ಕೆ, ಅಥವಾ ಹಿಂದಕ್ಕೆ ತಿರುಗಿ ತಮ್ಮ ಊರಿಗೆ ಹೋದಾರು.

ತರುಣಿ—ಹಾಗಾದರೆ ನಾನು ಹುಲಿಯ ಬಾಯೊಳಗಿಂದ ಪಾರಾಗಿ ಏನು ಉಪಯೋಗವಾದ ಹಾಗಾಯಿತು.

ರಾಮರಾಜ—ನೀವು ಪಾರಾದದ್ದರ ಉಪಯೋಗವು ಅವರಿಗೆ ಇರಲಿಕ್ಕಿಲ್ಲ; ಆದರೆ ನನಗಂತೂ ಇರುತ್ತದಷ್ಟೆ? ನನಗೆ ಒಬ್ಬ ಸುಂದರ ದೇವತೆಯು ಲಭಿಸಿದ್ದೇನು ಸಾಮಾನ್ಯ ಭಾಗ್ಯವೇನು? ಈವರೆಗೆ ಮುಸಲ್ಮಾನರು ಅಪ್ಸರೆಯರಂಥ ನಮ್ಮ ಎಷ್ಟೋ ಹಿಂದೂ ತರುಣಿಯರನ್ನು ಅಪಹರಿಸಿಕೊಂಡು ಹೋದರು. ಇಂದು ನಾನು ಅವರ ಒಬ್ಬ ಅಪ್ಸರೆಯನ್ನು ಸಂಪಾದಿಸಿರುತ್ತೇನೆ. ಆ ಅಪ್ಸರೆಯ ಪ್ರಾಣರಕ್ಷಣದ ಕಾರ್ಯದಲ್ಲಿ ನನ್ನ ಪ್ರಾಣವನ್ನು ಒಡ್ಡಿ ಪಾರಾಗಿರಲು, ಅದರ ಫಲವನ್ನು ಅನುಭವಿಸುವದಕ್ಕೂ ನನಗೆ ಆಸ್ಪದವಿರಬಾರದೇನು? ಮಾರ್ಜೀನೆಯು ಯಾರು?

ತರುಣಿ— ಅದೇಕೆ? ಮಾರ್ಜೀನೆಯನ್ನೇ ಕೇಳುವದೇಕೆ? ಮಾರ್ಜೀನೆಯೆಂದರೆ ನನ್ನ ಎರಡನೆಯ ತಾಯಿಯೇ ಸರಿ. ತಾಯಿಗಿಂತ ಹೆಚ್ಚಾಗಿ ಆಕೆಯು ನನ್ನನ್ನು ಪ್ರೀತಿಯಿಂದ ರಕ್ಷಿಸುತ್ತಾಳೆ. ಅಂಥವಳು ಇಂದು ನನ್ನನ್ನು ಅಗಲಿದಳು. ಪರವರದಿಗಾರ, ಎಂಥ ಪ್ರಸಂಗವನ್ನು ನನ್ನ ಮೇಲೆ ತಂದೆಯಲ್ಲ! ನಾವು ಯಾವ ಕೆಲಸಕ್ಕೆ ಹೋಗುತ್ತಿದ್ದೆವು, ಇದೇನು ಗತಿ..........

ಈ ಮೇರೆಗೆ ನುಡಿದು ಆ ತರುಣಿಯು ಒಂದೇಸವನೆ ಕಣ್ಣೀರು ಸುರಿಸಹತ್ತಿದಳು. ರಾಮರಾಜನು ಆಕೆಯನ್ನು ಸಮಾಧಾನಗೊಳಿಸಹತ್ತಿದನು. ಆತನು ತರುಣಿಗೆ—ಇನ್ನು ನೀವು ಹೀಗೆ ಅಳುತ್ತ ಕುಳಿತುಕೊಂಡರೆ ಆಗುವದೇನು? ನಾನು ನಿಮ್ಮವರನ್ನು ಹುಡುಕಿಸಿ ಕರಕೊಂಡು ಬರುವೆನು. ನಿಮ್ಮ ಮಾರ್ಜೀನೆಯೋ ಯಾರು, ಆಕೆಯನ್ನಂತು ಎಲ್ಲಿದ್ದರೂ ಹುಡುಕಿಸುವೆನು. ಈಗ ನೀವು ಮೋರೆ ತೊಳಕೊಂಡು ಊಟ ಮಾಡಿ ಸ್ವಸ್ಥ ಮಲಗಿಕೊಳ್ಳಬೇಕು. ನಾಳೆ ಬೆಳಗಾದ ಬಳಿಕ ನಿಮ್ಮ ಮಾರ್ಜೀನೆಯ ಶೋಧದ ಕೆಲಸವನ್ನು ಮೊದಲು ಮಾಡುವೆನು; ಆದರೆ ತಾವು ನನ್ನ ಮನಸ್ಸಿನ ಒಲವನ್ನನುಸರಿಸಿ ನಡೆಯಲು ನಿರ್ಧರಿಸಿ ನನ್ನ ಮನಸ್ಸನ್ನು ಸಮಾಧಾನಗೊಳಿಸಲೇ ಬೇಕು.

ಹೀಗೆ ನುಡಿದು ರಾಮರಾಜನು ಆ ತರುಣಿಯ ಕಡೆಗೆ ಆತುರದಿಂದ ನೋಡುತ್ತಿರಲು, ಆ ತರುಣಿಯು ನೆಲವನ್ನು ನೋಡುತ್ತ ಏನೋ ವಿಚಾರ ಮಾಡುತ್ತಿದ್ದಳು. ಆಕೆಯು ಸರ್ವಸಾಧಾರಣ ಮನುಷ್ಯಳಿದ್ದಿಲ್ಲ, ದೊಡ್ಡ ಸರದಾರನ ಮಗಳಿದ್ದಳು. ಒತ್ತಟ್ಟಿಗೆ ಕೃತಜ್ಞತೆ, ಮತ್ತೊತ್ತಟ್ಟಿಗೆ ಪ್ರೇಮ. ಇನ್ನೊತ್ತಟ್ಟಿಗೆ ಕುಲೀನತೆ— ಈ ಮೂರರ ಜಗ್ಗಾಟದಲ್ಲಿ ಆಕೆಯು ಗಾಸಿಯಾಗಹತ್ತಿದಳು. ಜೀವದ ಹಂಗು ಇಲ್ಲದೆ ತನ್ನನ್ನು ಹುಲಿಯ ಬಾಯೊಳಿಗಿಂದ ಬಿಡಿಸಿದ ಕೃತಜ್ಞತೆಗೆ, ರಾಮರಾಜನ ಸೌಜನ್ಯ ಸುಂದರರೂಪ-ಶೌರ್ಯ-ಸಾಹಸಗಳು ಜೋಡಾಗಲು, ತಾರುಣ್ಯದ ಸ್ವಾಭಾವಿಕ ಧರ್ಮಕ್ಕನುಸರಿಸಿ ಆ ಸುಂದರಿಯ ಹೃದಯದಲ್ಲಿ ಪ್ರೇಮೋದಯವಾಯಿತು. ಆ ಪ್ರೇಮಕ್ಕೆ ರಾಮರಾಜನ ಸವಿಮಾತುಗಳಿಂದ ಕಳೆಯೇರಿ ಆ ತರುಣಿಯು ರಾಮರಾಜನ ಕೈಸೇರಬೇಕೆನ್ನುವದರೊಳಗೆ ಕುಲೀನತೆಯು ಆಕೆಯನ್ನು ಹಿಂದಕ್ಕೆ ಜಗ್ಗುತ್ತಿತ್ತು! ಮುಸಲ್ಮಾನರೂ ಹಿಂದೂ ಜನರನ್ನು ಬಹಳವಾಗಿ ನಿಂದಿಸಿ, ಅವರನ್ನು ಕಾಫರರೆಂದು ಕರೆಯುತ್ತಿರಲು, ಇಂಥ ಹಿಂದೂ ತರುಣನಿಗೆ ಕುಲೀನಳಾದ ತಾನು ತನ್ನ ದೇಹವನ್ನು ಅರ್ಪಿಸಿ ಅಪವಿತ್ರವಾಗಲಿಕ್ಕೆ ಆ ತರುಣಿಯು ಹಿಂಜರಿದರೆ ಆಶ್ಚರ್ಯವಲ್ಲ. ಆಕೆಯು ಈ ಮೂರರ ಎಳೆತದಿಂದ ಗಾಸಿಯಾಗಿ ರಾಮರಾಜನನ್ನು

ಕುರಿತು–ತರುಣವೀರರೇ, ಹಿಂದುಗಳೆನಿಸುವ ನೀವು ನನ್ನ ಸೌಂದರ್ಯಕ್ಕೆ ಮೋಹಿಸಿ, ನಿಮ್ಮ ಧರ್ಮವಿರುದ್ಧವಾಗಿ ನನ್ನ ಸಮಾಗಮವನ್ನು ಬಯಸುತ್ತಿರುವಿರಿ! ಇದು ಸರಿಯಲ್ಲ, ನಿಮ್ಮ ಈ ಆತುರದ ಪ್ರೇಮವು ಕಡೆತನಕ ನನ್ನ ಮೇಲೆ ನಿಲ್ಲುವದೆಂತಲೂ ಹೇಳಲಾಗುವದಿಲ್ಲ, ನನ್ನ ಮುಸಲ್ಮಾನ ಧರ್ಮಕ್ಕೆ ಕಲಂಕ ಉಂಟಾಗುವ ಕೆಲಸವನ್ನು ನೀವು ಮಾಡಿ, ಕಡೆಗೆ ಪ್ರಸಂಗವಶಾತ್ ಪ್ರೇಮಭಂಗವನ್ನು ಮಾಡಿದರೆ, ನೀವಾಗಿ ವಿನಾಶಾಂಕುರವನ್ನು ಉತ್ಪನ್ನ ಮಾಡಿದ ಹಾಗಾದೀತು. ಈ ಮಾತನ್ನು ನಾನು ಕಲಿತು ಆಡುತ್ತೇನೆಂದು ತಿಳಿಯಬೇಡಿರಿ. ಅಲ್ಲಾನೇ ನನ್ನ ಮುಖದಿಂದ ಈ ಮಾತನ್ನು ಆಡಿಸುವನೆಂದು ತಿಳಿಯಿರಿ. ಎಂದು ನುಡಿಯುತ್ತಿರಲು, ರಾಮರಾಜನು–ಆತುರ ದಿಂದ–ಆಗಲಿ, ನಾನು ಹಾಗೆ ಕೃತಘ್ನನಾದ ಪಕ್ಷದಲ್ಲಿ ನೀವಂದಂತೆಯೇ ನನ್ನ ನಾಶವಾಗಲಿ. ಆ ನಾಶವನ್ನು ನಾನು ನನ್ನ ಕೃತಘ್ನತೆಯ ಯೋಗ್ಯ ಪ್ರಾಯಶ್ಚಿತ್ತವೆಂದು ತಿಳಿಯುವೆನು, ಅದರ ಚಿಂತೆ ಬೇಡ. ನಿಮ್ಮ ವಿಯೋಗದಿಂದ ನಾನು ಈಗಲೇ ನಾಶವನ್ನು ಹೊಂದುತ್ತಿರಲು. ಪ್ರಸಂಗವಶಾತ್ ವಿನಾಶಾಂಕುರವನ್ನು ಹುಟ್ಟಿಸಿ ಕೊಂಡರೆ ಹಾನಿಯೇನು? ಮೊದಲು ಊಟವಾಗಲಿ, ನಿಮ್ಮ ಮಾರ್ಜೀನೆಯು ಬರುವತನಕ ಯಾವ ಮಾತೂ ಬೇಡ, ಎಂದು ಹೇಳಿ, ರಾಮರಾಜನು ಹೊರಟು ಹೋದನು. ಆತನ ಅಪ್ಪಣೆಯಂತೆ ಒಬ್ಬ ವೃದ್ಧ ದಾಸಿಯು ಆ ತರುಣೆಯನ್ನು ಪರಾಮರ್ಶಿಸಹತ್ತಿದಳು.

## ಎಲ ! ಇದೇನು ?

ಈ ಮೇರೆಗೆ ರಾಮರಾಜನು ತರುಣೆಗೆ ಹೇಳಿ ಎರಡನೆಯ ಕಡೆಗೆ ಹೊರಟು ಹೋಗಲು, ಇತ್ತ ಆ ತರುಣೆಯ ಮನೆಯವರು ಬಹಳ ಹೊತ್ತಾದರೂ ತಮ್ಮ ಪ್ರಿಯ ಮೆಹರ್ಜಾನಳು ಬಾರದಿರುವದನ್ನು ನೋಡಿ ಚಡಪಡಿಸಿ, ಅವರಲ್ಲಿ ಒಬ್ಬಿಬ್ಬರು ಲಗುಬಗೆ ಯಿಂದ ಹೊಳೆಯ ದಂಡೆಗೆ ಬಂದರು. ಅಲ್ಲಿ ಒಂದು ಭಯಂಕರವಾದ ಹುಲಿಯು ಬಿದ್ದಿತ್ತು, ಅದನ್ನು ನೋಡಿ ಅವರು ಬೆದರುತ್ತ ಬೆದರುತ್ತ ಮುಂದಕ್ಕೆ ಹೋಗಿ ನೋಡಲು ಅಲ್ಲಿ ಅವರ ಮೆಹರ್ಜಾನಳ ಬಿಂದಿಗೆಯು ಮಾತ್ರ ಉಳಿದಿತ್ತು, ಹುಲಿಯು ಸತ್ತಿರುವದನ್ನು ನೋಡಿ ಅವರು ನಿರ್ಭಯದಿಂದ ಮತ್ತೆ ಮುಂದಕ್ಕೆ ಹೋಗಿ ನಾಲ್ಕೂ ಕಡೆಗೆ ನೋಡಿದರು. ಆಗ ದೂರದಲ್ಲಿ ಒಂದು ತುಬಾಕಿಯೂ, ಒಂದು ಸತ್ತು ಬಿದ್ದ ಕುರಿಯೂ, ಗಿಡದ ಮೇಲೆ ಮಂಚಿಕೆಯೂ ಅವರ ಕಣ್ಣಿಗೆ ಬಿದ್ದವು. ಇದನ್ನೆಲ್ಲ ನೋಡಿ ಅವರು ತಮ್ಮ ಮೇಹರ್ಜಾನಳ ಗತಿಯು ಹೀಗೆಯೇ ಆಯಿತೆಂದು ನಿರ್ಧರಿಸಲಾರದಾದರು. ಹುಲಿಯ ಭಯದಿಂದ ಮೆಹರ್ಜಾನಳು ಹೊಳೆಯಲ್ಲಿ ಬಿದ್ದಿರಬಹುದೆಂದು ತರ್ಕಿಸಿ, ಒಮ್ಮೆ ಅವರು ಹೊಳೆಯಲ್ಲಿ ಧುಮುಕಿ ಶೋಧಮಾಡಿದರು. ಮತ್ತೊಮ್ಮೆ ಅವರ ಮನಸ್ಸಿಗೆ, ಮೇಹರ್ಜಾನಳು ಎಲ್ಲಿಯಾದರೂ ಓಡಿಹೋಗಿರಬಹುದೆಂದು ವಿಚಾರವು ಹೊಳೆಯಿತು. ಆದರೆ ಮೇಹರ್ಜಾನಳನ್ನು ಹುಲಿಯು ಹಿಡಿದಂತೆ ಮಾತ್ರ ಅವರಿಗೆ

ತೋರಲಿಲ್ಲ, ಯಾಕೆಂದರೆ ಮೇಹರ್ಜಾನಳ ಶರೀರದ ಇಲ್ಲವೆ ಶರೀರದ ಮೇಲಿನ ವಸ್ತ್ರಾಭರಣಗಳ ಗುರುತಿನ ಗಂಧವು ಸಹ ಅಲ್ಲಿ ಅವರಿಗೆ ತೋರುತ್ತಿದ್ದಿಲ್ಲ. ಹೊಳೆಯಲ್ಲಿ ಗೊತ್ತುಹತ್ತದ್ದರಿಂದ ಆಕೆಯು ಅರಣ್ಯದಲ್ಲಿ ಓಡಿಹೋಗಿ ಎಲ್ಲಿಯಾದರೂ ಅಡಗಿಕೊಂಡು ಕುಳಿತಿರಬಹುದೆಂದು ತರ್ಕಿಸಿ ಅವರು ಮೇಹರ್ಜಾನಳನ್ನು ಹೆಸರುಗೊಂಡು ಕೂಗಿ ಕೂಗಿ ಹುಡುಕಹತ್ತಿದರು. ಅಷ್ಟರಲ್ಲಿ ಕತ್ತಲೆಯಾಯಿತು; ಮೇಹರ್ಜಾನಳ ಗೊತ್ತುಹತ್ತಲಿಲ್ಲ. ಅತ್ತ ಅವರು ಇಳಕೊಂಡ ಸ್ಥಳದಲ್ಲಿ ಹೆಂಗಸರು ಒಂದೇಸವನೆ ಆಕ್ರೋಶ ಮಾಡುತ್ತಲಿದ್ದರು. ಅವರನ್ನು ಬಿಟ್ಟು ಬಹಳ ಹೊತ್ತು ಹುಡುಕುವದು ಅವರಿಗೆ ಸರಿದೋರಲಿಲ್ಲ. ಆದ್ದರಿಂದ ಅವರು ತಾವು ಇಳಕೊಂಡ ಸ್ಥಳಕ್ಕೆ ಹೋಗಿಬಿಟ್ಟರು. ಅವರ ಸಂಗಡ ಮೇಹರ್ಜಾನಳು ಬಾರದಿರುವದನ್ನು ನೋಡಿ, ಹೆಂಗಸರು ಮತ್ತಿಷ್ಟು ಆಕ್ರೋಶ ಮಾಡತೊಡಗಿದರು. ಆಗ ಗಂಡಸರು ಅವರಿಗೆ ಸಿಟ್ಟುಮಾಡಿ ಸಮಾಧಾನಗೊಳಿಸಿ ಸುಮ್ಮನಿರಿಸಿದರು. ಅವರೊಳಗೆ ಮೇಹರ್ಜಾನಳ ಶೋಧದ ವಿಷಯವಾಗಿ ಬಹಳ ಚರ್ಚೆಯು ನಡೆಯಿತು. ಕೆಲವರಿಗೆ ಮೇಹರ್ಜಾನಳ ಶೋಧವಾಗುವದು ಅಶಕ್ಯವಾಗಿ ತೋರಿದ್ದರಿಂದ ಅವರು ಮುಂದಕ್ಕೆ ಸಾಗೋಣವೆಂದು ಹೇಳಿದರು. ಆದರೆ ಅವರಲ್ಲಿ ಒಬ್ಬ ಸ್ವಭಾವದ ಪ್ರೌಢ ಸ್ತ್ರೀಯು–ಹಾಗೆ ಹೋಗುವದು ಸರಿಯಲ್ಲ, ನಾವು ಸಮೀಪದಲ್ಲಿರುವ ಮುದಗಲ್ಲಿಗೆ ಹೋಗಿ ಅಲ್ಲಿ ಶೋಧ ಮಾಡೋಣ. ಹಿಂದಿನಿಂದ ಪಶ್ಚಾತ್ತಾಪ ಪಡುವದಕ್ಕಿಂತ ಈಗಲೇ ಅದಷ್ಟು ಶ್ರಮಪಟ್ಟು ಹುಡುಕುವದು ಯೋಗ್ಯವು ಎಂದು ಹೇಳಿದಳು. ಕಡೆಗೆ ಆಕೆಯ ಮಾತೂ ಎಲ್ಲರಿಗೂ ಸಮರ್ಪಕವಾಗಿ ತೋರಿ ಅವರೆಲ್ಲರು ಮರುದಿನ ಬೆಳಗಾದ ಕೂಡಲೆ ಮುದಗಲ್ಲಿಗೆ ಹೋಗಿ, ಅಲ್ಲಿ ಮೇಹರ್ಜಾನಳ ಶೋಧವನ್ನು ನಡೆಸಿದರು.

ಇತ್ತ ರಾಮರಾಜನು ತನ್ನ ಆ ಸುಂದರ ತರುಣಿಯ, ಅಂದರೆ ಮೇಹರ್ಜಾನಳ ಮನೆಯವರ ಶೋಧಕ್ಕಾಗಿ ತನ್ನ ಸಂಗಡ ಒಬ್ಬ ಮನುಷ್ಯನನ್ನು ಕರಕೊಂಡು ಅವರು ಇಳಿದ ಸ್ಥಳಕ್ಕೆ ಹೊರಟನು. ರಾಮರಾಜನ ಸಂಗಡ ಬಂದ ಮನುಷ್ಯನ ಮೈಬಣ್ಣವು, ಎಣ್ಣೆಯಲ್ಲಿ ಎದ್ದಿದ ನೀರಲ ಹಣ್ಣಿನಷ್ಟು ಕಪ್ಪಾಗಿತ್ತೆಂದು ಹೇಳಬಹುದು; ಆದರೆ ಆತನ ಕಣ್ಣುಗಳು ಬಹು ಹೊಳಪುಳ್ಳವಾಗಿದ್ದು ಕೃಷ್ಣಸರ್ಪದ ಕಣ್ಣುಗಳಂತೆ ಅವು ಭಯಂಕರವಾಗಿದ್ದವು. ಅವರು ಆ ಇಳಿದ ಸ್ಥಳಕ್ಕೆ ಹೋಗಿ ಎಡಬಲದಲ್ಲಿ ವಿಚಾರಿಸಲು, ನಿನ್ನೆ ಇಲ್ಲಿ ಇಳಕೊಂಡವರು ಇಂದು ಮುಂಜಾನೆ ಮುದಗಲ್ಲಿಗೆ ಹೋದರೆಂಬ ಸುದ್ದಿಯು ಹತ್ತಿತ್ತು, ಕೂಡಲೆ ಅವರು ಮುದಗಲ್ಲಿಗೆ ಬಂದು ಶೋಧಮಾಡಹತ್ತಿದರು. ರಾಮ ರಾಜನು ಶೋಧ ಮಾಡುವ ಕ್ರಮವನ್ನು ಮೊದಲೇ ಗೊತ್ತುಮಾಡಿದ್ದನು. ಆ ಜನರನ್ನು ಮೊದಲು ದೂರದಿಂದ ನೋಡಿ ಅವರೊಳಗಿನ ಮಾರ್ಜೀನೆ ಯೆಂಬ ಸ್ತ್ರೀಯನ್ನು ಮಾತ್ರ ಬೇರೆ ಕರೆದು ಭೆಟ್ಟಿಯಾಗಬೇಕೆಂದು ಆತನು ತನ್ನ ಸೇವಕನಾದ ಆ ಧನಮಲ್ಲನಿಗೆ ಹೇಳಿದ್ದನು. ಧನಮಲ್ಲನು ಏನು ಹಂಚಿಕೆ ಮಾಡಿದನೋ ಏನೋ, ಆತನು ಮಾರ್ಜೀನೆಯನ್ನು ರಾಮರಾಜನ ಎದುರಿಗೆ ತಂದು ನಿಲ್ಲಿಸಿದನು. ಆಗ ರಾಮರಾಜನು ಮಾರ್ಜೀನೆಯನ್ನು ಕುರಿತು–ಮಾರ್ಜೀನೇ, ನಿನ್ನ ಮಗಳು ನೆಟ್ಟಗಿದ್ದಾಳೆ. ಆಕೆಯ ಬಳಿಗೆ ನೀನು ಹೋಗಬೇಕೆಂದು ಇಚ್ಛಿಸುತ್ತಿದ್ದರೆ, ಇಗೋ ಈ ಮನುಷ್ಯನ ಸಂಗಡ ನಡೆ. ನಿನ್ನ ಮಗಳ

ಹೇಳಿಕೆಯಿಂದಲೇ ನಾವು ನಿನ್ನನ್ನು ಹುಡುಕುತ್ತಿದ್ದೆವು. ಎರಡನೆಯವರಿಗಾರಿಗಾದರೂ ಈ ಸುದ್ದಿಯನ್ನು ನೀನು ಹೇಳಿದರೆ, ನಿನ್ನ ಮಗಳ ಉಗುರು ಸಹ ನಿನ್ನ ಕಣ್ಣಿಗೆ ಬೀಳಲಿಕ್ಕಿಲ್ಲ ಎಂದು ಹೇಳಲು, ಆ ವೃದ್ಧಮಾರ್ಜೀನೆಯು ರಾಮರಾಜನ ತೇಜಸ್ಸನ್ನು ನೋಡಿ ಆತನ ಮಾತುಗಳನ್ನು ಕೇಳಿ ಮೊದಲು ಬೆದರಿದಳು. ಆಮೇಲೆ ಆಕೆಯು ಸ್ವಲ್ಪ ಧೈರ್ಯತಾಳಿ, ಮನಸ್ಸಿನಲ್ಲಿ–ಈ ಗೌಡ ಬಂಗಾಲೀ ವಿದ್ಯೆಯು ಏನಿರುತ್ತದೆಂಬುದನ್ನು ಒಮ್ಮೆ ನೋಡಿಬಿಡೋಣ. ನನ್ನಂಥ ವೃದ್ಧ ಸ್ತ್ರೀಗೆ ಯಾರಿಂದ ಏನಾಗಬೇಕಾಗಿದೆ? ಒಮ್ಮೆ ಮೇಹರ್ಜಾನಳು ನನ್ನ ಕಣ್ಣಿಗಾದರೂ ಬೀಳಲಿ, ಆಮೇಲೆ ನೋಡೋಣವಂತೆ, ಎಂದು ಯೋಚಿಸಿ—''ನಾನು ಈ ಕರಿಯ ಮನುಷ್ಯನ ಕೂಡ ಹೋಗುವೆನು'' ಎಂದು ರಾಮರಾಜನಿಗೆ ಹೇಳಿದಳು. ಆಗ ರಾಮರಾಜನು–ಈ ಕರಿಯ ಮನುಷ್ಯನು ಮೂಕನಿರುತ್ತಾನೆ. ಈತನಿಗೆ ಮಾತಾಡಲಿಕ್ಕೆ ಬರುವದಿಲ್ಲ; ಈತನ ಹೆಸರು ಧನಮಲ್ಲ ಎಂದು ಹೇಳಿ, ಕೂಡಲೆ ಎರಡು ಕುದುರೆಗಳನ್ನು ತಂದು ನಿಲ್ಲಿಸಲು, ಒಂದರ ಮೇಲೆ ಮಾರ್ಜೀನೆಯೂ, ಮತ್ತೊಂದರ ಮೇಲೆ ಧನಮಲ್ಲನೂ ಕುಳಿತುಕೊಂಡು ನಡೆದರು. ಧನಮಲ್ಲನು ಮೂರು ಸಂಜೆಗೆ ಮಾರ್ಜೀನೆಯನ್ನು ಕುಂಜವನಕ್ಕೆ ಮುಟ್ಟಿಸಿದನು. ಅಲ್ಲಿ ರಾಮರಾಜನು ಅವರಿಗೆ ಭೆಟ್ಟಿಯಾಗಲು, ಅವರು ಮೂವರು ಕೂಡಿ ಮೇಹರ್ಜಾನಳಿರುವ ಮಂದಿರವನ್ನು ಹೊಕ್ಕರು.

ಆಗ ಮೇಹರ್ಜಾನಳು, ಬಗೆಬಗೆಯಾಗಿ ಆಲೋಚಿಸುತ್ತ ಕುಳಿತುಕೊಂಡಿದ್ದಳು. ಅಷ್ಟರಲ್ಲಿ ರಾಮರಾಜನು ತಾನು ಆಡಿದಂತೆ ಮಾರ್ಜೀನೆಯನ್ನು ಕರಕೊಂಡು ಬಂದದ್ದನ್ನು ನೋಡಿ ಆ ಸುಂದರಿಯು ಸಂತೋಷಪಟ್ಟಳು. ರಾಮರಾಜನ ಸೌಂದರ್ಯದ ವಿಷಯವಾಗಿ ಆಕೆಯಲ್ಲಿ ಆದರವು ಉತ್ಪನ್ನವಾಯಿತು. ಇದನ್ನು ಚಾಣಾಕ್ಷನಾದ ರಾಮರಾಜನು ಅರಿತು, ಆಕೆಯನ್ನು ಕುರಿತು ಫಾರ್ಸೀ ಭಾಷೆಯಿಂದ–ನನ್ನ ಕೆಲಸವಾಯಿತು. ಅಪ್ಪಣೆಯಂತೆ ನಡೆದುಕೊಂಡಿದ್ದೇನೆ, ಎಂದು ಹೇಳಿದನು. ಆಗ ರಾಮರಾಜನ ಮೇಲೆ ಮನಸ್ಸು ಕೂತಿದ್ದ ಮೇಹರ್ಜಾನಳ ಇಚ್ಛೆಯಿಲ್ಲದಿದ್ದರೂ, ಆಕೆಯ ಕಟಾಕ್ಷವು ರಾಮರಾಜನ ಮೇಲೆ ಧುಮುಕಿ ಆತನನ್ನು ಗಾಸಿಗೊಳಿಸಿತು. ಕೂಡಲೆ ಆಕೆಯ ಮುಗುಳುನಗೆಯು ಫಳಕ್ಕನೆ ಮಿಂಚಿ, ಮೊದಲೇ ಗಾಸಿಯಾಗಿದ್ದ ರಾಮರಾಜನ ಹೃದಯವನ್ನು ಜುಮ್ಮೆಂದು ನಡುಗಿಸಿತು! ಹೀಗೆ ಕಂಪಿತ ಹೃದಯದ ರಾಮರಾಜನು ಏನೋ ಒಂದು ಕೆಲಸದ ನೆವದಿಂದ ಹೊರಗೆ ಹೋಗುವವನಂತೆ ಅಲ್ಲಿಂದ ಹೊರಟು ಹೋದನು. ಆಗ ವೃದ್ಧಮಾರ್ಜೀನೆಯು ಆ ತರುಣ ತರುಣಿಯರ ಪ್ರೇಮಬಂಧನ ನಾಟಕದ ಈ ಪ್ರಥಮಾಂಕವನ್ನು ನೋಡಿ ಆಶ್ಚರ್ಯಪಟ್ಟಳು. ಒಂದೆಂದರೆ ಒಂದೇ ದಿವಸದಲ್ಲಿ ಆದ ಸಹವಾಸದಿಂದ ಆ ಇಬ್ಬರು ತರುಣರ ರಸೈಕ್ಯ ಆರಂಭವಾದದ್ದನ್ನು ನೋಡಿ ಆಕೆಗೆ ಸಮಾಧಾನವಾಗಲಿಲ್ಲ. ಪ್ರೇಮಬಂಧನದಲ್ಲಿ ಇಷ್ಟು ಆತುರವು ಕೆಲಸದ್ದಲ್ಲವೆಂದು ಆಕೆಗೆ ತೋರಿದ್ದು ಸಹಜವು. ಕುಲೀನ ಮುಸಲ್ಮಾನ ಮನೆತನದ ಮೇಹರ್ಜಾನಳು ತಿರಸ್ಕರಣೀಯವಾದ ಹಿಂದುವನ್ನು ಹೀಗೆ ಪ್ರೀತಿಸಹತ್ತಿದ್ದಕಾರಣವು ತಿಳಿಯದಾಯಿತು. ಆಕೆಯು ಮೇಹರ್ಜಾನಳನ್ನು ಕುರಿತು–ಬೇಟಾ, ಮೇಹರ್ಜಾನ, ಕಾಫರ ರೆನಿಸುವ ಹಿಂದೂ ಜನರು ಮುಸಲ್ಮಾನ ಕುಲೀನ ಸ್ತ್ರೀಯರ ಪ್ರೀತಿಗೆ

ಪಾತ್ರರಾಗುವ ಕೌತುಕದ ಸಂಗತಿಯನ್ನು ನಾನು ಕೇಳಿರುವೆನು; ಆದರೆ ಇದು ನಿನಗೆ ನಿಜವಾಗಿ ತೋರುವದೋ? ನಮ್ಮೆಲ್ಲರನ್ನು ಅಗಲಿ ನೀನು ಇಲ್ಲಿಗೆ ಹೇಗೆ ಬಂದೆ? ನಿನ್ನ ಎಲ್ಲ ಪರಿವಾರವನ್ನು ಬಿಟ್ಟು ನನ್ನೊಬ್ಬಳನ್ನೇ ನೀನು ಕರಿಸಿದ ಕಾರಣವೇನು? ನನಗೆ ಆ ತರುಣ ಹಿಂದುವು ಭೆಟ್ಟಿಯಾದಾಗಿನಿಂದ ಇಲ್ಲಿಯವರೆಗೆ ನಡೆದ ವಿಲಕ್ಷಣ ಸಂಗತಿಗಳ ಮೇಲಿನಿಂದ ನನ್ನ ಮನಸ್ಸಿನಲ್ಲಿ ಇಲ್ಲದ ಕಲ್ಪನೆಗಳು ಬರುತ್ತಿವೆ. ಆದರೆ ಬೇಟಾ ಮೇಹರ್ಜಾನ, ನೀನು ನನಗೆ ಹೊಟ್ಟೆಯ ಮಗಳಿಗಿಂತಲೂ ಪ್ರಿಯಳಾಗಿರುತ್ತೀ. ನಡೆದ ಸಂಗತಿಯನ್ನು ಮಾಡದೆ ಹೇಳು, ಎಂದು ನುಡಿಯಲು, ಮೇಹರ್ಜಾನಳು ಮೊದಲಿನಿಂದ ಕಡೆತನಕ ನಡೆದ ಯಾವತ್ತು ಸಂಗತಿಗಳನ್ನು ಮಾರ್ಜೀನೆಯ ಮುಂದೆ ಹೇಳಿದಳು. ಅದನ್ನು ಕೇಳಿ ಮಾರ್ಜೀನೆಯು ರಾಮರಾಜನ ಸದ್ಗುಣ-ಸೌಜನ್ಯಗಳಿಗಾಗಿ ಕೆಲಮಟ್ಟಿಗೆ ಸಮಾಧಾನ ಪಟ್ಟರೂ, ಆ ತರುಣನು ಪಾಪಪುಣ್ಯದ ಭಯವಿಲ್ಲದೆ, ಹಿಂದೂ ಜನರ ಶೀಲಕ್ಕೆ ವಿರುದ್ಧವಾಗಿ ಯವನ ತರುಣಿಯನ್ನು ಬಲಾತ್ಕಾರದಿಂದ ಅಪಹರಿಸಿದ್ದನ್ನು ಸ್ಮರಿಸಿ, ತರುಣನ ಮನಸ್ಸಿನ ಪವಿತ್ರತೆಯ ವಿಷಯವಾಗಿ ಆಕೆಯೂ ಶಂಕಿಸಿದಳು; ಆದರೆ ಹಾಗೆ ತಾನು ಶಂಕಿಸಿದ ಲಕ್ಷಣವನ್ನು ಮಾತ್ರ ಹೊರಗೆ ತೋರಗೊಡದೆ, ಆಕೆಯು ಮೇಹರ್ಜಾನಳಿಗೆ- ಬೇಟಾ ಮೇಹರ್ಜಾನ., ಸಮಾಧಾನ ತಾಳು. ನಾನು ರಾಮರಾಜನನ್ನು ಏಕಾಂತದಲ್ಲಿ ಕಂಡು, ಆ ಮೇಲೆ ನಿನಗೆ ಹೇಳುವದನ್ನು ಹೇಳುವೆನು. ಅಲ್ಲಿಯವರೆಗೆ ನಿನ್ನ ಹೃದಯದ ಗಾಂಭೀರ್ಯವನ್ನು ಕಳಕೊಳ್ಳಬೇಡ, ಎಂದು ಹೇಳಿದಳು.

ತರುಣನಾದ ರಾಮರಾಜನು ಮೇಹರ್ಜಾನಳ ಮನಸ್ಸನ್ನು ಒಲಿಸಿಕೊಳ್ಳುವದಕ್ಕಾಗಿ ಅತ್ಯಂತ ಆತುರನಾಗಿದ್ದನು. ಮಾರ್ಜೀನೆಯನ್ನು ಒಡಂಬಡಿಸಿದರೆ ತನ್ನ ಕಾರ್ಯವು ಅನಾಯಾಸವಾಗಿ ಆಗುವ ದೆಂದು ತಿಳಿದು ಆತನು ಏಕಾಂತದಲ್ಲಿ ಆಕೆಯನ್ನು ಕರೆಸಿಕೊಂಡನು. ಹೀಗೆ ಅವನು ತನ್ನನ್ನು ಕರೆಸಿ ಕೊಳ್ಳಬಹುದೆಂದು ಮಾರ್ಜೀನೆಯು ಮೊದಲೇ ತರ್ಕಿಸಿದ್ದಳು. ರಾಮರಾಜನು ತಟ್ಟನೆ ಮಾರ್ಜೀನೆ ಯನ್ನು ಕುರಿತು— ಮಾರ್ಜೀನೆ, ಮೇಹರ್ಜಾನಳು ನಡೆದ ಸಂಗತಿಯನ್ನೆಲ್ಲ ನಿನ್ನ ಮುಂದೆ ಹೇಳಿರಬಹುದು. ಆಕೆಗೆ ನನ್ನ ಹೃದಯವನ್ನು ಒಪ್ಪಿಸಿರುವೆನು. ಆಕೆಯ ಹೊರತು ನನ್ನ ಪ್ರಾಣವು ನಿಲ್ಲುವಹಾಗಿಲ್ಲ, ಆಕೆಯ ಸಲುವಾಗಿ ನನ್ನ ಪ್ರಾಣವನ್ನು ಗಂಡಾಂತರಕ್ಕೆ ಗುರಿಮಾಡಿ ಪಾರಾಗಿರು ವೆನು; ಆದ್ದರಿಂದ ಮೆಹರ್ಜಾನಳು ನನ್ನ ಪ್ರತಾಪದ ಫಲವಾಗಿರುವಳು. ಮಾರ್ಜೀನೇ, ನೀನೇ ಹೇಳು; ಮುಸಲ್ಮಾನರು ಬಹುಜನ ಹಿಂದೂ ಕುಲೀನ ತರುಣಿಯುರನ್ನು ಅಪಹರಿಸಿ ಸರ್ವಸಾಧಾರಣ ಸ್ತ್ರೀಯರಂತೆ ಅವರನ್ನು ನಡೆಸಿಕೊಳ್ಳುತ್ತಿರಲು; ನಾನು ಮೆಹರ್ಜಾನಳನ್ನು ಪ್ರಾಣೇಶ್ವರಿಯೆಂದು ಸ್ವೀಕರಿಸಿ, ಜನ್ಮವಿರುವತನಕ ಆಕೆಯನ್ನು ಪ್ರಾಣೇಶ್ವರಿಯೆಂತಲೇ ಭಾವಿಸಿ ನಡೆದು ಕೊಂಡರೆ ತಪ್ಪೇನು? ಯಾವ ಮುಸಲ್ಮಾನ ಸರದಾರನು ಹಿಂದೂ ತರುಣಿಯನ್ನು ಅಪಹರಿಸುವ ವಿಷಯದಲ್ಲಿ ಇಷ್ಟು ಸೌಜನ್ಯವನ್ನು ತೋರಿಸಿರ ಬಹುದು? ಬಲಾತ್ಕಾರದಿಂದ ನಿಜವಾದ ಪ್ರೇಮೋದಯವಾಗದು; ಆದ್ದರಿಂದ ಸ್ವಸಂತೋಷ ದಿಂದಲೇ ಮೇಹರ್ಜಾನಳು ನನ್ನ ಮನೋದಯವನ್ನು ಪೂರ್ಣಮಾಡುವಂತೆ ನೀನು ಯತ್ನಿಸತಕ್ಕದ್ದು, ಎಂದು ಬಡಬಡ ಮಾತಾಡಿ ಬಿಡಲು, ಮಾರ್ಜೀನೆಯು ಮುಗುಳುನಗೆ

ನಗುತ್ತ–ಮಹಾರಾಜ, ನಿಮ್ಮ ಸೌಜನ್ಯವನ್ನೂ ಸದ್ಗುಣವನ್ನೂ ಮೇಹರ್ಜಾನಳು ನನ್ನ ಮುಂದೆ ವರ್ಣಿಸಿದ್ದಾಳೆ. ನೀವಂತೂ ಆಕೆಯನ್ನು ಪ್ರಾಣೇಶ್ವರಿಯ ಪದವಿಗೇರಿಸಿ, ಆಕೆಗಿಂತ ಒಂದು ಹೆಜ್ಜೆಯನ್ನು ಮುಂದಕ್ಕೆ ಇಟ್ಟಿರುತ್ತೀರಿ. ನೀವಿಬ್ಬರೂ ತರುಣರಿರುವದರಿಂದ ಒಂದೆರಡು ದಿನದ ಸಹವಾಸದಲ್ಲಿ ಪರಸ್ಪರರ ವಿಷಯವಾಗಿ ನೀವು ವಹಿಸಿದ ಸದಭಿಪ್ರಾಯದ ಬಗ್ಗೆ ನನಗೆ ಸಂಶಯವು ಉತ್ಪನ್ನವಾಗುತ್ತದೆ. ಕನ್ನಡ ವೀರರೇ, ನಿಜವಾದ ಪ್ರೇಮವು ಬಹುಜನರ ಹೃದಯದಲ್ಲಿ ಅವರ ಜನ್ಮದೊಳಗೆ ಉದಯವಾಗುತ್ತಿರುವದಿಲ್ಲ. ಅಂಥ ಪ್ರೇಮವು ಸುದೈವದಿಂದ ನಿಮ್ಮಿಬ್ಬರ ಹೃದಯದಲ್ಲಿದ್ದದ್ದಾದರೆ, ಅದನ್ನು ಅಯೋಗ್ಯ ಸ್ಥಾನದಲ್ಲಿಟ್ಟು ನೀವಿಬ್ಬರೂ ಹಿಂದಿನಿಂದ ಪಶ್ಚಾತ್ತಾಪಪಡಬೇಡಿರೆಂದು ನಾನು ಸ್ಪಷ್ಟವಾಗಿ ಹೇಳುತ್ತೇನೆ. ಮಹಾರಾಜ, ಮೇಹರ್ಜಾನಳು ಅಬಲೆಯು, ಮೇಲೆ ಅಪ್ರಬುದ್ಧಳು; ವ್ಯವಹಾರ ಜ್ಞಾನವಂತು ಆಕೆಗೆ ಇರುವದೇ ಇಲ್ಲ. ಆಕೆಯು ಬೆಳ್ಳಗಿದ್ದದ್ದನ್ನೆಲ್ಲ ಹಾಲೆಂದು ತಿಳಿಯುವಳು. ಆದರೆ ನಿಮ್ಮ ಮಾತು ಹಾಗಲ್ಲ. ನೀವು ಪುರುಷರು, ಮೇಲೆ ಪ್ರಬುದ್ಧರು; ಚಿಕ್ಕಂದಿನಲ್ಲಿ ಓದಿ ಬರೆದು, ಪ್ರಾಯದಲ್ಲಿ ರಾಜಕಾರಣಾದಿ ಕಾರಣಗಳಿಂದ ವ್ಯವಹಾರ ಜ್ಞಾನವನ್ನು ಪಡೆದವರು. ಅಂದಬಳಿಕ ಯೋಗ್ಯಾಯೋಗ್ಯಗಳ ವಿಚಾರವನ್ನು ನೀವು ಸಮಾಧಾನದಿಂದ ಮಾಡತಕ್ಕದ್ದು; ಹೀಗಿರಲು, ವಿವಾಹ ವಿಷಯದಲ್ಲಿ ಅತ್ಯಂತ ಅವಶ್ಯವಾಗಿರುವ ಸಾವಧಾನವನ್ನು ತಾಳದೆ, ಮೇಹರ್ಜಾನಳಿ ಗಿಂತಲೂ ನೀವು ಚಂಚಲರಾಗಿರುವಿರಲ್ಲ! ನೀವು ಹಿಂದುಗಳು; ಮೆಹರ್ಜಾನಳು ಮುಸಲ್ಮಾನಳು. ನಿಮ್ಮಿಬ್ಬರ ವಿವಾಹವಾಗಬೇಕಾದಲ್ಲಿ ನಿಮ್ಮ ಧರ್ಮದಂತೆ ನೀವು ಮೇಹರ್ಜಾನಳನ್ನು ಹಿಂದುವಾಗಿ ಮಾಡಿಕೊಳ್ಳಬೇಕಾಯಿತಲ್ಲವೆ? ಇದು ತೀರ ಅಶಕ್ಯವಾಗಿರುವದಿಲ್ಲ? ಅದೂ ಇರಲಿ, ಧರ್ಮಾಧರ್ಮದ ಮಾತು ಒತ್ತಟ್ಟಿಗಿಟ್ಟು, ಸ್ವಾಭಾವಿಕ ಪ್ರೇಮದಿಂದ ಮೇಹರ್ಜಾನಳ ಕೈ ಹಿಡಿಯುತ್ತೇನೆಂದು ನೀವು ಅನ್ನುತ್ತಿದ್ದರೆ; ನಿಮ್ಮ ವಿಷಯವಾಗಿ ಮೇಹರ್ಜಾನಳಲ್ಲಿ ಸ್ವಾಭಾವಿಕವಾದ ಪ್ರೇಮವು ಎಲ್ಲಿರುತ್ತದೆ? ಸ್ವಾಭಾವಿಕ ಪ್ರೇಮವೆಂದರೆ, ರೂಪ, ಯೌವನ, ಐಶ್ವರ್ಯ, ಅಧಿಕಾರ, ಕೃತಜ್ಞತೆ ಮುಂತಾದ ಬಾಹ್ಯ ಕಾರಣಗಳೇನೂ ಇಲ್ಲದೆ ತಾನಾಗಿ ಉಂಟಾಗುವ ಪ್ರೇಮವು! ಇಂಥ ಹೊರಗಿನ ಕಾರಣಗಳಿಂದುಂಟಾಗುವ ಸಹೇತುಕ ಪ್ರೇಮಕ್ಕಿಂತ ಸ್ವಾಭಾವಿಕ ಪ್ರೇಮದ, ಅಂದರೆ ನಿರ್ಹೇತುಕ ಪ್ರೇಮದ ಯೋಗ್ಯತೆಯು ಹೆಚ್ಚಿನದು; ಯಾಕಂದರೆ, ಸೌಂದರ್ಯಾದಿ ಕಾರಣ ಗಳಿಂದುಂಟಾದ ಪ್ರೇಮವು, ಕಾರಣಗಳು ನಷ್ಟವಾದ ಕೂಡಲೆ ನಷ್ಟವಾಗುತ್ತದೆ; ಆದರೆ ಸ್ವಾಭಾವಿಕ ಪ್ರೇಮವು ಹಾಗೆ ನಷ್ಟವಾಗುವದಿಲ್ಲ. ಈ ಸ್ವಾಭಾವಿಕ ಪ್ರೇಮಕ್ಕೆ ಉದಾಹರಣವನ್ನು ಕೊಡುವದು ನನಗಂತು ಶಕ್ಯವಿಲ್ಲ. ಸತ್ಪುರುಷರು ಮಾತ್ರ ಜಗತ್ತಿನ ಮೇಲೆ ಇಂಥ ಪ್ರೇಮ ಮಾಡುವರೆಂದು ತಿಳಿದಿರುವೆನು.

ಮಹಾರಾಜ, ಈ ಜಗತ್ತಿನಲ್ಲಿರುವ ದಂಪತಿಗಳು ವಿವಾಹವೆಂಬ ಕಾರಣದಿಂದ ಪ್ರೇಮವನ್ನು ಸಂಪಾದಿಸಿ, ಆ ಕಾರಣವು, ಅಂದರೆ ವೈವಾಹಿಕ ಬಂಧನವು ಸ್ಥಿರವಾಗಿರುವವರೆಗೆ ಒತ್ತಾಯ ದಿಂದಾದರೂ ಪರಸ್ಪರ ಪ್ರೇಮವನ್ನು ಕಾಯ್ದುಕೊಳ್ಳಬೇಕಾಗುತ್ತದೆ. ನಿಮ್ಮ ಹಿಂದುಗಳಲ್ಲಿ ಬ್ರಾಹ್ಮಣರೊಳಗೆ ವೈವಾಹಿಕ ಬಂಧನವು ಮರಣಪರ್ಯಂತರ ದೃಢವಾಗಿರುವದರಿಂದ ಬ್ರಾಹ್ಮಣ ದಂಪತಿಗಳು ಪರಸ್ಪರಪ್ರೇಮವನ್ನು ಮರಣಪರ್ಯಂತರ ಕಾಯ್ದುಕೊಳ್ಳುವದು ಹೆಚ್ಚು. ಆದರೆ

ವೈವಾಹಿಕ ಬಂಧನವು ಶಿಥಿಲವಾಗಿರುವ ಜನರಲ್ಲಿ ಹೀಗೆ ಆ ದಂಪತಿಗಳ ಪ್ರೇಮವು ಸ್ಥಿರವಾದದ್ದು ಕಂಡು ಬರುವದು ಕಡಿಮೆ. ಆದ್ದರಿಂದ ಪ್ರೇಮದ ಉತ್ಪತ್ತಿಗೆ ಸೌಂದರ್ಯಾದಿ ಬೇರೆ ಕಾರಣಗಳಿಗಿಂತ ವಿವಾಹವೆಂಬ ಕಾರಣವು, ಅತ್ಯಂತ ಪವಿತ್ರವಾದ ಕಾರಣದಿಂದಲೇ ವಿವಾಹಪದ್ಧತಿಯು ಸುಧಾರಿಸಿದ ಜನಾಂಗಗಳಿಗೆಲ್ಲ ಮಾನ್ಯವಾಗಿರುತ್ತದೆ. ಅಂಥ ಪವಿತ್ರ ವೈವಾಹಿಕ ಬಂಧನಕ್ಕೆ ವಿಧರ್ಮಿಗಳಾದ ನೀವಿಬ್ಬರು ಅಯೋಗ್ಯರಾಗಿರುವದರಿಂದ, ನೀವಿಬ್ಬರೂ ಈ ಹಾದಿಯನ್ನು ಬಿಡಬೇಕೆಂದು ನಾನು ಸ್ಪಷ್ಟವಾಗಿ ಹೇಳುವೆನು. ಮೇಹರ್ಜಾನಳು ನಿಮ್ಮ ವಿಷಯದ ಕೃತಜ್ಞತೆ, ನಿಮ್ಮ ಸುಸ್ವರೂಪ, ಸೌಜನ್ಯ–ಸದ್ಗುಣ, ತಾರುಣ್ಯ ಇವುಗಳ ಮೂಲಕ ನಿಮ್ಮನ್ನು ಪ್ರೀತಿಸುವಳಲ್ಲದೆ, ನಿಮ್ಮ ವಿಷಯದ ಸ್ವಾಭಾವಿಕ ಪ್ರೇಮವು ಆಕೆಯಲ್ಲಿರುವದಿಲ್ಲ. ಹಿಂದುವಾದ ನಿಮ್ಮನ್ನು ಅಂಗೀಕರಿಸಲಿಕ್ಕೆ ಆ ಯವನ ತರುಣಿಯು ಮನಃಪೂರ್ವಕವಾಗಿ ಅಸಮ್ಮತಿಸುವಳು. ಇನ್ನು ಆಕೆಯು ನಿಮ್ಮ ಕೈಯಲ್ಲಿ ಸಿಕ್ಕಿರುವದರಿಂದ ನೀವು ಬೇಕಾದದ್ದು ಮಾಡಬಹುದು. ಪ್ರಸಂಗವಶಾತ್ ನೀವು ಆಕೆಯ ವಿಷಯವಾಗಿ ಕೃತಘ್ನರಾದರೆ, ಅಥವಾ ಸೌಜನ್ಯ–ಸದ್ಗುಣಗಳನ್ನು ಕಳೆದುಕೊಂಡರೆ, ಬಹಳ ಹೇಳುವದೇನು, ನೀವು ಮುದುಕರಾದರೆ ಸಹ ಆಕೆಯ ಪ್ರೇಮವು ನಿಮ್ಮ ಮೇಲೆ ಉಳಿಯುವದೋ ಇಲ್ಲವೋ ನಾನು ಹೇಳಲಾರೆನು! ಯಾಕಂದರೆ ವೈವಾಹಿಕ ಬಂಧನವಿಲ್ಲದ ನಿಮ್ಮ ಪ್ರೇಮದ ಐಕ್ಯಕ್ಕೆ ವ್ಯಭಿಚಾರದ ದೋಷವು ತಟ್ಟುವದರಿಂದ, ನೀವಿಬ್ಬರೂ ಜಗತ್ತಿನಲ್ಲಿ ಅಪಕೀರ್ತಿಗೂ, ದುಃಖಕ್ಕೂ ಕಾರಣರಾದೀರಿ! ಮಹಾರಾಜ, ಸ್ವಲ್ಪ ವಿಚಾರ ಮಾಡಿರಿ. ಮೇಹರ್ಜಾನಳು ನಿಮ್ಮ ಸೌಜನ್ಯ–ಸದ್ಗುಣಗಳ ಅನುಭವವನ್ನು ನಿಮ್ಮ ಕೃತಿಯಿಂದ ಸದ್ಯದ ಮಟ್ಟಿಗಾದರೂ ಪಡೆದಿರುವಳು; ಆದರೆ ಆಕೆಯ ತಾರುಣ್ಯ ಸೌಂದರ್ಯಗಳ ಹೊರತು ಆಕೆಯ ಗುಣಗಳನ್ನು ನೀವೇನು ತಿಳಿದಿರುವಿರಿ? ಅಂದಬಳಿಕ ಕೇವಲ ತಾರುಣ್ಯ–ಸೌಂದರ್ಯಗಳಿಗೆ ಮರುಳಾದ ನೀವು ಮೇಹರ್ಜಾನಳಿಗಿಂತ ಸುಂದರಿಯೂ, ತರುಣಿಯೂ ಆದ ಮತ್ತೊಬ್ಬ ಸ್ತ್ರೀಯು ಲಭಿಸಿದಾಗ, ಮೆಹರ್ಜಾನಳನ್ನು ನೀವು ನಿಶ್ಚಯವಾಗಿ ನಿರಾಕರಿಸುವಿರಿ! ಹೀಗಿರಲು, ನಿಮ್ಮ ವಿಚಾರವು ಯೋಗ್ಯವೆಂದು ನಾನು ಹ್ಯಾಗೆ ಒಪ್ಪಿಕೊಳ್ಳಲಿ! ಮೇಹರ್ಜಾನಳು ಹೊಟ್ಟೆಯ ಮಗಳಿಗಿಂತಲೂ ನನಗೆ ಹೆಚ್ಚಿನವಳಲ್ಲವೆ? ಮುಸಲ್ಮಾನರು ಹಿಂದೂ ತರುಣಿಯರನ್ನು ಅಪಹರಿಸಿದರೆಂದು ನೀವು ಹೇಳುತ್ತೀರಿ; ಆದರೆ ಧರ್ಮಿಷ್ಠರಾದ ಯಾವ ಮುಸಲ್ಮಾನರೂ ಅದನ್ನು ಅನೀತಿಯೆಂದು ಭಾವಿಸುವದಿಲ್ಲ? ಹೀಗಿರಲು, ಸಗಣಿಯನ್ನು ಸಗಣಿಯಿಂದ ತೊಳೆದು ಶುದ್ಧಮಾಡಲಿಕ್ಕೆ ಹೋಗುವವರ ಹಾಗೆ ನೀವು ಈಗ ಮಾಡಬಾರದು. ನೀವು ಕೊಟ್ಟ ಮುಸಲ್ಮಾನರ ನೀಚ ಕೃತಿಯ ಉದಾಹರಣವನ್ನು ನಾನು ಕಿವಿಯಿಂದ ಕೂಡ ಕೇಳಲಾರೆನು! ಮಹಾರಾಜ, ಕೈಯಲ್ಲಿ ಕಡ್ಡಿಯನ್ನು ಕೊಟ್ಟು ಹೇಳುತ್ತೇನೆ! ಮೆಹರ್ಜಾನಳ ಹೃದಯವನ್ನು ಪರೀಕ್ಷಿಸದೆ ಆಕೆಯನ್ನು ನಿಮ್ಮ ಪ್ರಾಣೇಶ್ವರಿಯನ್ನಾಗಿ ಸರ್ವಥಾ ಮಾಡಿಕೊಳ್ಳಬೇಡಿರಿ. ಪಠಾಣರು ಪ್ರಸಂಗಬಂದರೆ ಕೃಷ್ಣ ಸರ್ಪಕ್ಕೆ ಸಮಾನರು; ಆದ್ದರಿಂದ ಮೇಹರ್ಜಾನಳನ್ನು ಕೃಷ್ಣಸರ್ಪವೆಂದು ಭಾವಿಸಿರಿ. ಪ್ರಸಂಗದಲ್ಲಿ ನೀವು ಕೃತಘ್ನರಾದರೆ ಆಕೆಯು ಎಂದಿಗೂ ಡಂಕು ಬಿಡಲಿಕ್ಕಿಲ್ಲ! ಮಹಾರಾಜರೆದುರಿನಲ್ಲಿ ಇಷ್ಟು ಮಾತಾಡುವ ಯೋಗ್ಯತೆಯು ನನ್ನದಲ್ಲ; ಯಾರೋ ನಿಮ್ಮ ಗುರುಗಳೇ ನನ್ನ ಮುಖದಿಂದ ಈ ಮಾತುಗಳನ್ನು ಆಡಿಸುತ್ತಾರೆಂದು ತಿಳಿದು, ನನ್ನನ್ನು ಕ್ಷಮಿಸಿರಿ!

ಈ ಮೇರೆಗೆ ಮಾರ್ಜೀನೆಯು ತತ್ವಜ್ಞಾನಿಯಂತೆ ಪ್ರೇಮದ ಸ್ವರೂಪವನ್ನು ಅಸ್ಖಲಿತವಾಗಿ ಪ್ರತಿಪಾದಿಸಿದ್ದನ್ನು ನೋಡಿ ರಾಮರಾಜನು ಬೆರಗಾದನು. ಆತನು ಪಿಟ್ಟೆಂದು ಮಾತಾಡದೆ ಮಾರ್ಜೀನೆಯನ್ನು ಎವೆಯಿಕ್ಕದೆ ನೋಡಹತ್ತಿದನು. ''ಯಾರೋ ನಿಮ್ಮ ಪೂಜ್ಯ ಗುರುಗಳೇ ನನ್ನ ಮುಖದಿಂದ ಈ ಮಾತುಗಳನ್ನು ಆಡಿಸುತ್ತಾರೆಂದು ತಿಳಿಯಿರಿ'' ಎಂದು ಆಕೆಯು ಆಡಿದ ಮಾತುಗಳನ್ನು ಕೇಳಿ, ಆತನಿಗೆ ತನ್ನ ಸದ್ಗುರುಗಳ ನೆನಪಾಯಿತು. ಔಪಚಾರಿಕವೇ ಆಗಲೊಲ್ಲದೇಕೆ, ಸತ್ಸಮಾಗಮ ಮಾಡಿದ ರಾಮರಾಜನಿಗೆ ಮಾರ್ಜೀನೆಯ ಉಪದೇಶವು ಸಮರ್ಪಕವಾಗಿ ತೋರಿತು. ಇನ್ನು ಮೇಲೆ ಮೇಹರ್ಜಾನಳ ಗೊಡವೆಗೆ ಹೋಗದೆ, ಮಾರ್ಜೀನೆ ಯೊಡನೆ ಆಕೆಯನ್ನು ಆಕೆಯ ಬಳಗದವರ ಬಳಿಗೆ ಕಳಿಸಿಬಿಡಬೇಕೆಂದು ಆತನು ಮಾಡಿದನು. ಮತ್ತು ಮಾರ್ಜೀನೆಯ ಮುಂದೆ ಹಾಗೆ ತಟ್ಟನೆ ನುಡಿಯಬೇಕೆನ್ನುತ್ತಿದ್ದನು. ಅಷ್ಟರಲ್ಲಿ ಮೇಹರ್ಜಾನಳ ಸುಂದರ ರೂಪವು ಆತನ ಕಣ್ಣಿಗೆ ಕಟ್ಟಿ, ಆತನ ಮನಸ್ಸು ಚಂಚಲವಾಯಿತು. ತಾನು ಮೇಹರ್ಜಾನಳನ್ನು ಕುದುರೆಯ ಮೇಲೆ ಅಡ್ಡಹಾಕಿಕೊಂಡು ಬರುವಾಗ ತನ್ನ ಶರೀರಕ್ಕಾದ ಆಕೆಯ ಸುಖಸ್ಪರ್ಶದ ಸ್ಮರಣವೂ, ಆಕೆಯ ಸುಂದರವಾದ ಅವಯವಗಳ ದರ್ಶನದಿಂದಾದ ಆನಂದದ ಸ್ಮರಣವೂ, ಆಕೆಯು ಕುಂಜವನಕ್ಕೆ ಬಂದಬಳಿಕ ತನ್ನ ಮಾತಿಗೆ ಅರ್ಧಮರ್ಧ ಒಪ್ಪಿಕೊಂಡಂತೆ ಮಾಡಿದ್ದರ ನೆನಪೂ ಆತನಿಗಾಗಿ, ಆತನ ಚಂಚಲ ಮನಸ್ಸು ದೂಷಿತವಾಗುತ್ತಾಗುತ್ತ ಕಡೆಗೆ ಅದರೊಳಗಿನ ವಿವೇಕವು ನಷ್ಟವಾಗಹತ್ತಿತು. ಪ್ರಿಯವಾಚಕರೇ, ''ಬಲವಾ ನಿಂದ್ರಿಯಗ್ರಾಮೋ ವಿದ್ವಾಂಸಮಪಿ ಕರ್ಷತಿ'' ಎಂಬ ಮಹಾತ್ಮರ ಉಕ್ತಿಯಂತೆ ಇಂದ್ರಿಯಗಳ ಸಮೂಹವು ವಿದ್ವಾಂಸನನ್ನಾದರೂ (ವಿದ್ವಾಂಸನ ಮನಸ್ಸನ್ನಾದರೂ) ಜಗ್ಗಿ ಕೊಳ್ಳುತ್ತದೆಂಬ ಮಾತು ಸುಳ್ಳಲ್ಲ. ತುಂಬಿ ಹೊರಸೂಸುವ ಪ್ರಾಯದ ಸೊಕ್ಕಿನಲ್ಲಿ ನಾವು ಮನಸ್ಸಿಗೆ ಹೊರಚಾಳಿಯನ್ನು ಒಮ್ಮೆ ಹಚ್ಚಿಬಿಟ್ಟರೆ, ಆ ಖೋಡಿ ಮನಸ್ಸು ಅಸುಗೊಳ್ಳದೆ, ತಕ್ಕ ಪ್ರಸಂಗ ಒದಗಿದಾಗೆಲ್ಲ ನಮ್ಮನ್ನು ಎಳೆದೆಳೆದು ಗಾಸಿಮಾಡುತ್ತದೆಂಬುದನ್ನು ಪ್ರಾಯಸ್ಥರಾದ ನಿಮ್ಮಲ್ಲಿ ಬಹು ಜನರು ಮನಸ್ಸಿನಲ್ಲಿಯಾದರೂ ಒಪ್ಪಿಕೊಳ್ಳಬಹುದೆಂದು ಅನುಭವದಿಂದ ಹೇಳಬಹುದಾಗಿದೆ! ಆದ್ದರಿಂದ ಪರನಾರೀ ಸೋದರರಾಗುವಂತೆ ಪ್ರತಿ ಒಬ್ಬ ತರುಣನೂ, ಅವರ ಹಿತಚಿಂತಕರೂ ಮೊದಲೇ ಜಾಗರೂಕರಾಗಿ ಅತ್ಯಂತ ನಿಗ್ರಹದಿಂದ ಆಚರಿಸತಕ್ಕದ್ದು. ಇರಲಿ, ರಾಮರಾಜನು ಹೀಗೆ ನಿಗ್ರಹದಿಂದ ನಡೆಯದೆ, ಮನಸ್ಸನ್ನು ಹರಿಬಿಟ್ಟಿದ್ದರಿಂದ ಎಂಥ ಘನವಾದ ಸಾಮ್ರಾಜ್ಯದ ಲಯಕ್ಕೆ ಕಾರಣನಾದನೆಂಬುದನ್ನು ಈ ಕಾದಂಬರಿಯಲ್ಲಿ ಬರೆಯುವ ದುಃಖದ ಪ್ರಸಂಗವು ನಮಗೊದಗಿದೆ! ರಾಮರಾಜನ ಎಟ್ಟಿಮನಸ್ಸು ಮಾರ್ಜೀನೆಯ ಸದ್ಬೋಧಕ್ಕೆ ಬಗ್ಗಲಿಲ್ಲ; ಪಾಪಪುಣ್ಯದ ವಿಚಾರವನ್ನು ಲೆಕ್ಕಿಸಲಿಲ್ಲ, ''ವಿನಾಶಕಾಲೇ ವಿಪರೀತ ಬುದ್ಧಿಃ'' ಎಂಬಂತೆ ಆ ತರುಣ ಸರದಾರನು ಮಾರ್ಜೀನೆಯನ್ನು ಕುರಿತು ಉದ್ದಾಮತನದಿಂದ — ''ಮಾರ್ಜೀನೇ, ಇಷ್ಟೊಂದು ಪಾಂಡಿತ್ಯವನ್ನು ತೋರಿಸುವದಕ್ಕಾಗಿ ನಾನು ನಿನ್ನನ್ನು ಕರೆಸಲಿಲ್ಲ. ನೀನೂ ನಿಮ್ಮ ಮೆಹರ್ಜಾನಳೂ ಈಗ ನನ್ನ ಕೈಯಲ್ಲಿ ಸಿಕ್ಕಿರುತ್ತೀ ರೆಂಬದನ್ನು ಚೆನ್ನಾಗಿ ನೆನಪಿನಲ್ಲಿಡು. ಮುಯ್ಯಕ್ಕೆ ಮುಯ್ಯವೆಂಬಂತೆ ಮುಸಲ್ಮಾನರ ದುರಾಚಾರದ ಸೇಡು

ತೀರಿಸಿಕೊಳ್ಳುವದಕ್ಕಾಗಿ ನಾನು ಮೇಹರ್ಜಾನಳನ್ನು ನನ್ನ ಮನಸ್ಸಿಗೆ ಬಂದಂತೆ ನಡೆಸಿಕೊಳ್ಳುವವನೇ ಸರಿ; ಮೆಹರ್ಜಾನಳು ನನ್ನ ಮಾತಿಗೆ ಅರ್ಧ ಸಮ್ಮತಿಯನ್ನು ಕೊಟ್ಟಂತಾಗಿರುತ್ತದೆ. ಹೀಗಿರಲು ನೀನು ನಡುವೆ ಕಲ್ಲು ಹಾಕಿದರೆ ನಿಮ್ಮ ಪರಿಣಾಮವಾಗಲಿಕ್ಕಿಲ್ಲ. ನನ್ನ ಕಾರ್ಯಕ್ಕೆ ಅನುಕೂಲವಾಗುವ ಮನಸ್ಸು ನಿನಗಿಲ್ಲದಿದ್ದರೆ ನೀನು ಸುಮ್ಮನಾದರೂ ಇರು, ನನ್ನನ್ನು ಬೋಧಿಸಿದಂತೆ ಮೇಹರ್ಜಾನಳನ್ನು ಬೋಧಿಸುವ ಗೊಡವಿಗೆ ಹೋಗಬೇಡ. ಮಾರ್ಜೀನೇ, ತಿಳಿದು ನೋಡು ನಿನ್ನ ಬೋಧವು ನಮ್ಮಂಥ ತರುಣರಿಗೆ ತಕ್ಕದ್ದೇ? ''ಸೂಳೆ ಮುಪ್ಪಾಗಿ ಜೋಗತಿಯಾದಳೆಂಬಂತೆ'' ನಿಮ್ಮಂಥ ದಿನ ಹೋದ ಹೆಂಗಸರಿಗೆ ಪ್ರಸಂಗವಶಾತ್ ನಮ್ಮಂಥ ತರುಣರ ಮುಂದೆ ಇಲ್ಲದ ಪಾಂಡಿತ್ಯವನ್ನು ತೋರಿಸಲಿಕ್ಕೆ ಈ ಬೋಧವು ತಕ್ಕದ್ದಾಗಿರುತ್ತದೆ!! ನೀನು ಬೋಧಿಸಿದಂತೆ ನಮ್ಮ ಮೇಹರ್ಜಾನಳು ನನ್ನನ್ನು ಬೋಧಿಸಿದ್ದರೆ ನಾನು ಒಪ್ಪುತ್ತಿದ್ದೆನು. ಆಕೆಯು ನಾನು ಕೇಳಿದ್ದಕ್ಕೆ ಸುಮ್ಮನಿದ್ದು ಅರ್ಧ ಸಮ್ಮತಿಯನ್ನು ತೋರಿಸಿರುತ್ತಾಳೆ. ಬಹಳ ಮಾತುಗಳೇನು? ನಾನಿದ್ದೇನೆ, ಮೇಹರ್ಜಾನಳಿದ್ದಾಳೆ. ಆ ಸುಂದರಿಯು ಒಪ್ಪಿಕೊಂಡರೇ ನಾನು ಆಕೆಯ ಪಾಣಿಗ್ರಹಣ ಮಾಡಿ,ಅವಳನ್ನು ನನ್ನ ಪ್ರಾಣೇಶ್ವರಿಯನ್ನಾಗಿ ಮಾಡಿಕೊಳ್ಳುವೆನು. ಆ ಮೇಲೆ ನನ್ನನ್ನು ಹೀಗೆ ಬೋಧಿಸಿದ ಬಗ್ಗೆ ನಿನಗೇ ಪಶ್ಚಾತ್ತಾಪವಾದೀತು. ಹೋಗು, ನನ್ನ ಈ ಸಿಟ್ಟಿನ ಮಾತುಗಳನ್ನು ಮನಸ್ಸಿಗೆ ಹಚ್ಚಿಕೊಳ್ಳದೆ, ಮೇಹರ್ಜಾನಳು ನನಗೆ ಅನುಕೂಲಳಾಗುವಂತೆ ಮಾಡು,ಎಂದು ಹೇಳಿ, ರಾಮರಾಜನು ಮಾರ್ಜೀನೆಯನ್ನು ಮನೆಗೆ ಕಳಿಸಿಬಿಟ್ಟನು.

ರಾಮರಾಜನು ಮಾರ್ಜೀನೆಯನ್ನು ಹೀಗೆ ಬೆದರಿಸಿ ಕಳಿಸಿದರೂ ಆ ಸ್ಪಷ್ಟಮಾತಿನ ಹೆಣ್ಣುಮಗಳು ಮೇಹರ್ಜಾನಳ ಮನಸ್ಸನ್ನು ಎಲ್ಲಿ ತಿರುಗಿಸುವಳೋ ಎಂದು ಆತನು ಶಂಕಿಸುತ್ತಲಿದ್ದನು. ರಾಮರಾಜನು ಹುಟ್ಟಾ ಚತುರನು, ಕಾರ್ಯಸಾಧಕನು. ಆತನು ಮೆಹರ್ಜಾನಳ ಮನಸ್ಸು ಮೋಹಿಸುವಂಥ ಹಲವು ಹಂಚಿಕೆಗಳನ್ನು ಮೊದಲೇ ಮಾಡಿದನು. ಆತನ ಸೂಚನೆಯಂತೆ ಆತನ ವೃದ್ಧ ದಾಸಿಯು ರಾಮರಾಜನ ಗುಣಗಳನ್ನೂ, ಪರಾಕ್ರಮವನ್ನೂ, ವೈಭವವನ್ನೂ ಉಪ್ಪುಕಾರ ಹಚ್ಚಿ ಮೆಹರ್ಜಾನಳ ಮುಂದೆ ಹೇಳಿದ್ದಳು. ಯುದ್ಧದಲ್ಲಿ ಅದ್ಭುತ ಪರಾಕ್ರಮವನ್ನು ತೋರಿಸಿ ವಿಜಯನಗರದ ಕೃಷ್ಣದೇವರಾಜರಿಂದ ಉಚಿತವಾಗಿ ಸಂಪಾದಿಸಿದ ಪದಾರ್ಥಗಳು ಇವೆಂದು ಹರಳುಕಲ್ಲಿನ ಅನೇಕ ದಿವ್ಯಾಲಂಕಾರಗಳನ್ನು ಆಕೆಗೆ ಆ ದಾಸಿಯೂ ತೋರಿಸಿದ್ದಳು ಅಂಥ ಅಲಂಕಾರಗಳನ್ನು ಮೇಹರ್ಜಾನಳು ಈವರೆಗೆ ನೋಡಿದ್ದಿಲ್ಲವೆಂದು ಹೇಳಬಹುದು.ಆಗ ವಿಜಯನಗರದ ರಾಜರ ಐಶ್ವರ್ಯಕ್ಕೆ ಎಣೆಯಿದ್ದಿಲ್ಲ. ವಿದ್ಯಾನಗರವೆಂದು ಕರೆಸಿಕೊಳ್ಳುತ್ತಿದ್ದ ಆ ವಿಜಯನಗರವೆಂಬ ರಾಜಧಾನಿಯು, ಲಕ್ಷ್ಮಿಯ ನಿವಾಸ ಸ್ಥಾನವಾಗಿತ್ತು! ಅಂಥ ಐಶ್ವರ್ಯ ಸಂಪನ್ನನಾದ ಪ್ರಭುವಿನ ಪ್ರೀತಿಯ ಸರದಾರನೆಂದ ಬಳಿಕ, ರಾಮರಾಜನ ಸಂಗ್ರಹದಲ್ಲಿ ಉತ್ತಮೋತ್ತಮವಾದ ಅಲಂಕಾರಗಳಿದ್ದದ್ದೇನು ಆಶ್ಚರ್ಯವಲ್ಲ. ದಾಸಿಯು ರಾಮರಾಜನ ಒಂದೊಂದು ಪರಾಕ್ರಮದ ಕೃತಿಗಳನ್ನು ಕಥೆ ಮಾಡಿ ಹೇಳಿದಳು; ಅದರಂತೆ ಹಿಂದೂಧರ್ಮದ ಹಲವು ಸುಂದರಿಯರು ರಾಮರಾಜನನ್ನು ಲಗ್ನವಾಗಲಿಚ್ಛಿಸಿ ನಿರಾಶೆ ಪಟ್ಟದ್ದನ್ನು ಬಗೆಬಗೆಯಾಗಿ ಬಣ್ಣಿಸಿದಳು; ಹಾಗೆಯೇ ಆ ಚತುರದಾಸಿಯು, ಇಂಥ ಸುಂದರ

ತರುಣನ ಕೈ ಹಿಡಿದ ಸುಂದರಿಯು ಪುಣ್ಯವಂತಳೇ ಸರಿಯೆಂದು ಮೆಹರ್ಜಾನಳಿಗೆ ಸ್ಪಷ್ಟವಾಗಿ ಹೇಳಿದಳು. ಮೊದಲೇ ರಾಮರಾಜನಿಗೆ, ಮರುಳಾಗಿದ್ದ ಮೆಹರ್ಜಾನಳ ಮನೋಭೂಮಿಯಲ್ಲಿ ಉತ್ಪನ್ನವಾಗಿದ್ದ ಪ್ರೇಮಾಂಕುರವು, ತಾರುಣ್ಯವೆಂಬ ಗೊಬ್ಬರದಿಂದಲೂ, ರಸಭರಿತ ವರ್ಣನವೆಂಬ ಜಲಸೇಚನದಿಂದಲೂ ಪರಿಪುಷ್ಟವಾಗಿ ಭರದಿಂದ ಬೆಳೆಯಹತ್ತಿತು. ಈ ಸ್ಥಿತಿಯಲ್ಲಿ ರಾಮರಾಜನ ಸುಂದರ ಮೂರ್ತಿಯು ಆಕೆಯ ಮನಸ್ಸಿನಲ್ಲಿ ನೆಲೆಸಲು, ತದೇಕಧ್ಯಾನವೆಂಬ ಗೆಯ್ತದಿಂದ ಆ ಪ್ರೇಮವೃಕ್ಷವು ಫಲಿಸಿ ರಾಮರಾಜನ ಪ್ರಾಪ್ತಿರೂಪವಾದ ಫಲವು ಬಹು ಸ್ವಾದಿಷ್ಟವಾಗಿ ಆ ಮೆಹರ್ಜಾನಳಿಗೆ ತೋರಹತ್ತಿತು! ಮೆಹರ್ಜಾನಳ ಮನಸ್ಥಿತಿಯು ಅಲ್ಪಾವಕಾಶದಲ್ಲಿ ಇಷ್ಟು ರೂಪಾಂತರ ಹೊಂದಿದ್ದು ಆಶ್ಚರ್ಯವಲ್ಲ. ತರುಣರ ಮನಸ್ಸಿನ ಪ್ರಭಾವವೇ ಅಂತಹದಿರುತ್ತದೆ! ಅದರಲ್ಲಿ ಬಿತ್ತಿದ ಬೀಜವು ಅಷ್ಟು ಬೇಗ ಫಲಿಸುತ್ತದೆ! ತರುಣರಿಗೆ ಬಲುಬೇಗ ಸಿಟ್ಟು ಬರಲಿಕ್ಕೂ, ಅವರು ಬಲುಬೇಗ ನಗಲಿಕ್ಕೂ, ಬಹುಬೇಗ ಅಳಲಿಕ್ಕೂ, ಮನಸ್ಸಿಗೆ ಬಂದಕೂಡಲೆ ಅವರು ಯಾವದೊಂದು ಕಾರ್ಯಕ್ಕೆ ತಟ್ಟನೆ ಕೈಹಾಕಲಿಕ್ಕೂ ಇದೇ ಕಾರಣವು. ಏರಿಕೆಯ ರಕ್ತದ ತರುಣರ ಸ್ಥಿತಿಯು ಹೀಗೆಯೇ ಸರಿ. ಅವರಿಗೆ ಪ್ರಯತ್ನದ ಫಲವು ಮಾತ್ರ ಕಣ್ಣಿಗೆ ಕಟ್ಟುತ್ತದಲ್ಲದೆ, ಪ್ರಯತ್ನದಲ್ಲಿಯ ತೊಂದರೆಗಳು ಕಾಣುವದಿಲ್ಲ. ಈ ನಿಯಮಕ್ಕನುಸರಿಸಿ ಮೇಹರ್ಜಾನಳು ರಾಮರಾಜನ ಇಚ್ಛೆಯಂತೆ ನಡೆದುಕೊಳ್ಳಲು ಆತುರಪಡುತ್ತಿದ್ದಳು. ಇಂಥ ಸ್ಥಿತಿಯಲ್ಲಿ ಮಾರ್ಜೀನೆಯು ಅವಳ ಬಳಿಗೆ ಬಂದು ರಾಮರಾಜನು ಆಡಿದ ಮಾತುಗಳನ್ನು ಹೇಳಿದಳು. ಅವುಗಳನ್ನು ಕೇಳಿ ಮೇಹರ್ಜಾನಳಿಗೆ ವ್ಯಸನವಾಗುವದರ ಬದಲು ಆನಂದವಾಯಿತು; ಯಾಕಂದರೆ ಆಕೆಗೆ ರಾಮರಾಜನು ಬೇಕಾಗಿದ್ದನು. ಆಕೆಯು ಮುಗುಳು ನಗೆ ನಗುತ್ತ ಮಾರ್ಜೀನೆಗೆ— ಮಾರ್ಜಿನೇ, ನೀನು ಅವರಿಗೆ ಸಿಟ್ಟು ಬರುವಂತೆ ಯಾಕೆ ಮಾತಾಡಿದೆ? ನಾನು ಮನಸ್ಸಿನಿಂದ ಅವರನ್ನು ವರಿಸಿದ್ದೇನೆ. ಪಠಾಣ ತರುಣಿಯರು ಒಬ್ಬ ಪುರುಷನಲ್ಲಿ ಮನಸ್ಸನ್ನಿಟ್ಟ ಬಳಿಕ, ಅನ್ಯ ಪುರುಷರನ್ನು ಪಿತೃಸಮಾನರೆಂತಲೇ ತಿಳಿಯುವರು! ನನಗೆ ಹಿಂದೂವೇ ಪತಿಯಾಗಬೇಕೆಂದು ಅಲ್ಲಾನ ಸಂಕೇತವಿದ್ದಂತೆ ತೋರುತ್ತದೆ! ಏನೇ ಇರಲಿ, ರಾಮರಾಜನು ನನ್ನ ಪತಿಯು, ಅವರು ನನ್ನ ಪ್ರಾಣೇಶ್ವರರು. ಅವರನ್ನಗಲಿ ನಾನು ಒಂದು ಕ್ಷಣವಾದರೂ ಇರಲಾರೆನು! ನೀನು ಹ್ಯಾಗಾದರೂ ಮಾಡಿ ಅವರ ಸಿಟ್ಟು ಇಳಿಸಿ, ಅವರು ಪ್ರೇಮದಿಂದ ನನ್ನ ಪಾಣಿಗ್ರಹಣ ಮಾಡುವಂತೆ ಮಾಡು! ಅನ್ನಲು ಬೆಪ್ಪಾಗಿ ಕುಳಿತುಕೊಂಡಿದ್ದ ಸರಳಮನಸ್ಸಿನ ಆ ಮಾರ್ಜೀನೆಯ ಮುಖದಿಂದ, ''ಎಲ! ಇದೇನು?'' ಎಂಬ ಶಬ್ದವು ತಟ್ಟನೆ ಹೊರಟಿತು!! ಪ್ರಿಯತರುಣ ವಾಚಕರೇ, ಎಚ್ಚರಿಕೆ ಸಿಕ್ಕಸಿಕ್ಕ ಬೀಜಗಳು ನಿಮ್ಮ ಮನೋಭೂಮಿಯಲ್ಲಿ ಬಿತ್ತದಂತೆ ನೀವು ಜಾಗರೂಕರಾಗಿರತಕ್ಕದ್ದು. ಇಲ್ಲದಿದ್ದರೆ ಮೇಹರ್ಜಾನ–ರಾಮರಾಜರಂತೆ ನೀವು ವಿವೇಕ ಭ್ರಷ್ಟರಾದೀರಿ !!!

# ಅಂಕುರಾಭಿವೃದ್ಧಿ

ಈ ಮೇರೆಗೆ ಮೇಹರ್ಜಾನಳ ಮನಸ್ಸಿನ ಸ್ಥಿತಿಯನ್ನು ನೋಡಿ ಮಾರ್ಜೀನೆಯು ಆಶ್ಚರ್ಯಪಟ್ಟರೂ ಆ ತರುಣಿಯ ಮನಸ್ಸನ್ನು ತಿರುಗಿಸುವ ಗೊಡವಿಗೆ ಆ ಪ್ರೌಢವಯಸ್ಸಿನ ಬಹುಶ್ರುತಳಾದ ಹೆಣ್ಣುಮಗಳು ಸರ್ವಥಾ ಹೋಗಲಿಲ್ಲ. ಅಲ್ಲಾನ ಸಂಕೇತವೇ ಹೀಗೆ ಇರಬಹುದೆಂದು ತಿಳಿದು ಆಕೆಯು ಮೆಹರ್ಜಾನಳ ಮನಸ್ಸಿನ ಒಲವಿನಂತೆ ನಡೆಯುವದನ್ನು ನಿಶ್ಚಯಿಸಿದಳು. ಭವಿತವ್ಯತೆಯನ್ನು ತಪ್ಪಿಸುವದು ಯಾರಿಂದಲು ಆಗದು. ಮೇಹರ್ಜಾನಳ ಪ್ರಾಪ್ತಿಯ ವಿಷಯವಾಗಿ ರಾಮರಾಜನ ಮನಸ್ಸಿನಲ್ಲಿ ಆತುರವು ಉತ್ಪನ್ನವಾದಂತೆ, ರಾಮರಾಜನ ವಿಷಯವಾಗಿಯೂ ಮೇಹರ್ಜಾನಳ ಮನಸ್ಸಿನಲ್ಲಿ ಆತುರವು ಉತ್ಪನ್ನವಾಗಹತ್ತಿತು. ಅಂದಬಳಿಕ ಅವರಿಬ್ಬರ ಪಾಣಿಗ್ರಹಣಕ್ಕೆ ಪ್ರತಿಬಂಧವೇಕೆ ಆಗಬೇಕು? ರಾಮರಾಜನು ಪ್ರೇಮದ ಭರದಲ್ಲಿ ಹಿಂದುಮುಂದಿನ ವಿಚಾರವಿಲ್ಲದೆ ಮೇಹರ್ಜಾನಳಿಗೆ ಹಲವು ವಚನಗಳನ್ನು ಕೊಟ್ಟಿದ್ದನು. ಅವನ್ನೆಲ್ಲ ನಿಜವೆಂದು ನಂಬಿ ಆ ಸರಳಹೃದಯದ ತರುಣಿಯು ಮುಂದೆ ತನಗಾಗಬಹುದಾದ ಅಪಮಾನವನ್ನೆಲ್ಲ ಮರೆತಳು. ತನ್ನನ್ನು ಮುಖ್ಯಪತ್ನಿಯನ್ನಾಗಿ ಮಾಡಿಕೊಳ್ಳುವೆನೆಂದು ರಾಮರಾಜನು ಕೊಟ್ಟ ವಚನವನ್ನು ಆಕೆಯು ದೃಢವಾಗಿ ನಂಬಿ, ಅದೊಂದರ ಆಸೆಯಿಂದ ರಾಮರಾಜನ ಪಾಣಿಗ್ರಹಣಕ್ಕೆ ಆಕೆಯು ಒಪ್ಪಿಕೊಂಡಳು. ಕಣ್ವಾಶ್ರಮದಲ್ಲಿ ಶಕುಂತಲೆಯು ದುಷ್ಯಂತನ ಪಾಣಿಗ್ರಹಣ ಮಾಡಿದ ಕಥೆಯನ್ನು ಸವಿಮಾತಿನ ರಾಮರಾಜನು ಮೇಹರ್ಜಾನಳ ಮುಂದೆ ಹೇಳಿದನು. ಕಡೆಗೆ ಅವರಿಬ್ಬರ ಪಾಣಿಗ್ರಹಣವಾಗಿ ದಾಂಪತ್ಯ ಸುಖಾನುಭವಕ್ಕೆ ಆರಂಭವಾಯಿತು. ಆಗ ಆ ಕುಂಜವನವು ಸ್ವರ್ಗದೊಳಗಿನ ನಂದನ ವನದಂತೆ ಅವರಿಗಾಯಿತು. ರಾಮರಾಜನ ಐಶ್ವರ್ಯ ಸಂಪನ್ನತೆಗೆ ಕೊರತೆಯಿದ್ದಿಲ್ಲ. ವಿಜಯನಗರದ ರಾಜ್ಯಸ್ಥಾಪನೆಯಾಗಿ ಮುನ್ನೂರು ವರ್ಷಗಳಾದ್ದರಿಂದ, ಕನ್ನಡಿಗರಲ್ಲಿ ಸತ್ವಕ್ಕಿಂತ ವಿಷಯ ಸುಖಲೋಲುಪತೆಯೂ, ಸೌಜನ್ಯಕ್ಕಿಂತ ಮದಾಂಧತೆಯೂ, ಪೌರುಷಕ್ಕಿಂತ ಡಾಂಭಿಕತೆಯೂ, ಸತ್ಯಕ್ಕಿಂತ ಮೋಸಗಾರಿಕೆಯೂ ವಿಶೇಷವಾಗಿದ್ದವು. ಈ ಸ್ಥಿತಿಯು ರಾಷ್ಟ್ರವನ್ನಂಟಿಕೊಂಡ ಕ್ಷಯರೋಗವೆಂತಲೇ ಹೇಳಬಹುದು. ರಾಮರಾಜನಲ್ಲಿ ಹಲವು ಸದ್ಗುಣಗಳಿದ್ದರೂ ಆತನು ಈ ರಾಷ್ಟ್ರೀಯ ರೋಗದಿಂದ ಮುಕ್ತನಾಗಿದ್ದಿಲ್ಲ. ಕೇವಲ ಗುಣಲುಬ್ಧಳಾಗಿ ಆತನ ಕೈಹಿಡಿದಿದ್ದ ಮೆಹರ್ಜಾನಳಿಗೆ ಆತನ ಈ ಗುಪ್ತರೋಗದ ಲಕ್ಷಣಗಳನ್ನು ಲಕ್ಷಿಸಲಿಕ್ಕೆ ಅವಸರವು ದೊರೆಯಲಿಲ್ಲ. ಒಂದು ವರ್ಷದವರೆಗೆ ಅವರಿಬ್ಬರು ನಿರಾಂತಕವಾಗಿ ವಿಷಯ ಸುಖವನ್ನು ಭೋಗಿಸಿದರು. ಈ ಅವಧಿಯಲ್ಲಿ ರಾಮರಾಜನು ಮೆಹರ್ಜಾನಳನ್ನು ಕ್ಷಣವಾದರೂ ಅಗಲದೆ ಇರುತ್ತಿದ್ದನೆಂದು ಹೇಳಬಹುದು. ಕೃಷ್ಣದೇವರಾಯನ ಅಪ್ಪಣೆಯಿಂದ ಮೆಹರ್ಜಾನಳನ್ನು ಅಗಲಿ ಹೋಗುವ ಪ್ರಸಂಗಬಂದರೆ ರಾಮರಾಜನ ಜೀವದಸುತ್ತ ಬಂದಂತಾಗುತ್ತಿತ್ತು. ಸರಳಹೃದಯದ ಮೆಹರ್ಜಾನಳಾದರೂ ತನ್ನ ಹೃದಯವನ್ನು ಸಂಪೂರ್ಣವಾಗಿ ರಾಮರಾಜನಿಗೆ ಒಪ್ಪಿಸಿ, ಸರ್ವಸ್ವವೂ ಆತನೇ ಎಂದು ತಿಳಿದಿದ್ದಳು.

ಅವರಿಬ್ಬರ ಈ ಅಕೃತ್ರಿಮ ಪ್ರೇಮಭೂಮಿಯಲ್ಲಿ ನಿರ್ದುಷ್ಟವಾದ ದಾಂಪತ್ಯಸುಖವು ಉತ್ಪನ್ನವಾದದ್ದೇನು ಆಶ್ಚರ್ಯವಲ್ಲ.

ಈ ಪ್ರಕಾರ ತರುಣ–ತರುಣಿಯರಲ್ಲಿ ಅಕೃತ್ರಿಮ ಪ್ರೇಮವು ಇರುವವರೆಗೆ ಅವರ ಸುಖದಲ್ಲಿ ಕೊರತೆಯುಂಟಾಗಿದ್ದಿಲ್ಲ; ಆದರೆ ರಾಮರಾಜನ ದುರ್ದೈವದಿಂದಲೋ, ಮೋಹರ್ಜಾನಳ ದುರ್ದೈವದಿಂದಲೋ, ಕನ್ನಡಿಗರ ದುರ್ದೈವದಿಂದಲೋ, ಇವರೆಲ್ಲರ ದುರ್ದೈವದಿಂದಲೋ ತಿಳಿಯದು. ಆ ತರುಣರ ಅಕೃತ್ರಿಮ ಪ್ರೇಮವು ರಾಮರಾಜನ ಮಹತ್ವಾಕಾಂಕ್ಷೆಯಿಂದ ಕೃತ್ರಿಮ ಸ್ವರೂಪವನ್ನು ತಾಳಹತ್ತಿತು. ಮೇಲೆ ಹೇಳಿದ ರಾಷ್ಟ್ರೀಯ ಕ್ಷಯರೋಗದ ಎಲ್ಲ ಲಕ್ಷಣಗಳೂ ರಾಮರಾಜನಲ್ಲಿ ಇದ್ದವಲ್ಲದೆ, ಆ ರೋಗದ ಹೆಚ್ಚುವಿಕೆಗೆ ಕಾರಣವಾದ ಮಹತ್ವಾಕಾಂಕ್ಷೆಯು ಆತನಲ್ಲಿ ವಾಸಿಸುತ್ತಿತ್ತು. ಮನುಷ್ಯನು ನ್ಯಾಯವಾದ ಮಹತ್ವವನ್ನು ಅಪೇಕ್ಷಿಸಬಾರದೆಂತಲ್ಲ; ಗುಣೋತ್ಕರ್ಷವನ್ನು ಪಡೆದು, ಆತನು ನರನು ಹೋಗಿ ನಾರಾಯಣನೂ ಆಗಬಹುದು! ಆದರೆ ''ಯೇನಕೇನ ಪ್ರಕಾರೇಣ ಪ್ರಸಿದ್ಧಪುರುಷೋಭವ'' ಎಂಬ ಹೀನವಾದ ಉಕ್ತಿಗೆ ಸಂಬಂಧಿಸುವಂಥ ನೀಚ ಮಹತ್ವಾಕಾಂಕ್ಷೆಯನ್ನು ಯಾವನೂ ತಾಳಲಾಗದು. ಅಂಥವನು ಕೆಲಕಾಲದವರೆಗೆ ಮಹತ್ವ ಪಡೆದಂತೆ ತೋರಿದರೂ, ಕಡೆಗೆ ಆತನ ಅಧಃಪತನವೇ ಆಗುವದು. ಇಂಥ ಉದಾಹರಣೆಗಳು ಇತಿಹಾಸಜ್ಞರಿಗೂ, ವ್ಯವಹಾರಜ್ಞರಿಗೂ ಹಲವು ದೊರೆಯಬಹುದು. ಅವುಗಳಲ್ಲಿ ರಾಮರಾಜನ ದೊಂದು ಐತಿಹಾಸಿಕ ಉದಾಹರಣವೆಂದು ಹೇಳಬಹುದು. ರಾಮರಾಜನಲ್ಲಿ ಗುಣಗಳಿದ್ದಿಲ್ಲವೆಂತಲ್ಲ; ಆದರೆ ಆ ಸುಗುಣವನ್ನು ಪ್ರಸಂಗವಶಾತ್ ಮಣ್ಣುಗೂಡಿಸುವಷ್ಟು ದುರ್ಗುಣಗಳೂ ಅವನಲ್ಲಿ ಇದ್ದದ್ದರಿಂದ, ಆತನ ಮಹತ್ವಾಕಾಂಕ್ಷೆಯು ನಿಷ್ಠುರವಾದದ್ದೆಂದು ಹೇಳಲಾಗುವುದಿಲ್ಲ. ಆತನು ವಿಜಯನಗರದ ಕೃಷ್ಣದೇವರಾಜನಂಥ ಪ್ರತಾಪಿಯ ದರ್ಬಾರದಲ್ಲಿ ದೊಡ್ಡ ಪದವಿಗೇರುವ ಮಹತ್ವಾಕಾಂಕ್ಷೆಗೆ ಬಲಿಬಿದ್ದು ಕೃಷ್ಣದೇವರಾಜನ ಮನಸ್ಸನ್ನು ಒಲಿಸಿಕೊಳ್ಳುವ ಭರದಲ್ಲಿ ಮೆಹರ್ಜಾನಳನ್ನು ಮರೆಯಹತ್ತಿದನು. ರಾಮರಾಜನು ಹೀಗೆ ಮಾಡಿದ್ದು ತಪ್ಪೆಂತಲೂ ನಾವು ಹೇಳುವುದಿಲ್ಲ, ಆ ಮಹತ್ವಾಕಾಂಕ್ಷೆಗೆ ರಾಮರಾಜನು ಕೇವಲ ಅಪಾತ್ರನೆಂತಲೂ ನಾವು ಪ್ರತಿಪಾದಿಸುವುದಿಲ್ಲ; ಆದರೆ ಆ ಮಹತ್ವದ ಪದವಿಗೆ ತಕ್ಕ ಕೃತಿಗಳನ್ನು ಆತನು ಮಾಡದಿರುವದು ಮಾತ್ರ ಅನ್ಯಾಯವು. ತನ್ನ ವೈದಿಕ ಧರ್ಮಕ್ಕೆ ವಿರುದ್ಧವಾಗಿ ಆತನು ಮೆಹರ್ಜಾನಳ ಪಾಣಿ ಗ್ರಹಣವನ್ನೇ ಮಾಡತಕ್ಕದ್ದಿದ್ದಿಲ್ಲ. ಒಂದು ಪಕ್ಷದಲ್ಲಿ ಮಾಡಿದರೂ ಮಾಡಲಿ ಮುಖ್ಯ ಪತ್ನಿಯನ್ನಾಗಿ ಮಾಡುವೆನೆಂದು ಆಕೆಗೆ ವಚನ ಕೊಟ್ಟ ಬಳಿಕ ಅದರಂತೆ ನಡೆಯುವದು ಪೌರುಷಕ್ಕೆ ಒಪ್ಪುವ ಮಾತಾಗಿತ್ತು; ಆದರೆ ರಾಮರಾಜನು ಹಾಗೆ ಮಾಡದೆ ಮಹತ್ವಾಕಾಂಕ್ಷೆಯಿಂದ ವಚನ ಭಂಗದ ಹಾದಿಯನ್ನು ಹಿಡಿದನು. ರಾಮರಾಜನ ಧೈರ್ಯ, ಸಾಹಸ, ಪರಾಕ್ರಮ, ರಾಜಕಾರಣ ಕುಶಲತೆ ಮುಂತಾದ ಗುಣಗಳಿಗೆ ಮೆಚ್ಚಿ, ಕೃಷ್ಣದೇವ ರಾಜನು ಆತನನ್ನು ದೊಡ್ಡ ಪದವಿಗೇರಿಸುತ್ತ ನಡೆದನು. ಕಡೆಗೆ ಆತನು ತನ್ನ ಮಗಳನ್ನು ರಾಮರಾಜನಿಗೆ ಕೊಟ್ಟು ಅವನಿಗೆ ತನ್ನ ಮಂತ್ರಿಪದವನ್ನು ಕೊಡಬೇಕೆಂದು ಯೋಚಿಸಿದನು. ಅದರಿಂದ ರಾಮರಾಜನ ಬಾಯಲ್ಲಿ ಜುಳುಜುಳು ನೀರು ಬರಹತ್ತಿದವು! ಇಂಥ ಪ್ರಸಂಗದಲ್ಲಿ

ರಾಮರಾಜನು ಯವನ ಸುಂದರಿಯ ಪಾಣಿಗ್ರಹಣ ಮಾಡಿದ್ದು ಆತನ ಉತ್ಕರ್ಷಕ್ಕೆ ಅಡ್ಡಾಗಹತ್ತಿತು. ಕೃಷ್ಣದೇವರಾಯನಂಥ ವೈದಿಕ ಧರ್ಮಾಭಿಮಾನಿಯಾದ ರಾಜನಿಗೂ, ಆತನ ಪ್ರಜೆಗಳಿಗೂ ಈ ಧಾರ್ಮಿಕ ದ್ರೋಹವು ಹ್ಯಾಗೆ ಸೇರಬೇಕು? ಆದ್ದರಿಂದ ರಾಮರಾಜನು ತನ್ನ ಮಂತ್ರಿ ಪದವಿಗೆ ತೊಂದರೆ ಬಂದೀತೆಂದು ಭಯಪಟ್ಟು, ಕುಂಜವನದಲ್ಲಿ ಗುಪ್ತವಾಗಿದ್ದ ಮೆಹರ್ಜಾನಳ ಬಳಿಗೆ ಜನರ ಸಂಶಯಕ್ಕೆ ಆಸ್ಪದವಾಗದಂತೆ ಕದ್ದು ಮುಚ್ಚಿ ಕೂಡಿದಾಗೊಮ್ಮೆ ಹೋಗಹತ್ತಿದನು.

ಈ ಸ್ಥಿತಿಯು ಮೇಹರ್ಜಾನಳಿಗೆ ಸರಿಬರಲಿಲ್ಲ. ರಾಮರಾಜನು ತನ್ನನ್ನು ಉದಾಸೀನ ಮಾಡುವನೆಂದು ಆಕೆಯು ಭಾವಿಸಹತ್ತಿ ಅದರ ಬಗ್ಗೆ ರಾಮರಾಜನನ್ನು ಸ್ಪಷ್ಟವಾಗಿ ಕೇಳಹತ್ತಿದಳು. ರಾಮರಾಜನು ಸುಳ್ಳೊಂದು ಸೊಟ್ಟೊಂದು ನೆವಹಳಿ ಮೆಹರ್ಜಾನಳನ್ನು ರಮಿಸಹತ್ತಿದನು. ಈ ಸ್ಥಿತಿಯು ಎಷ್ಟು ದಿವಸ ನಡೆಯಬೇಕು? ಬರಬರುತ್ತ ರಾಮರಾಜನಿಗೆ ಮೇಹರ್ಜಾನಳು ಭಾರವಾಗಹತ್ತಿದಳು.. ಮಂತ್ರಿ ಪದವಿಗೇರುವ ಉಬ್ಬಿನಲ್ಲಿ ಆತನು ಯಾವಾಗಾದರೊಮ್ಮೆ ಮೇಹರ್ಜಾನಳ ಬಳಿಗೆ ಹೋಗಹತ್ತಿದನು. ಒಂದು ದಿನ ಮೇಹರ್ಜಾನಳು ರಾಮರಾಜನನ್ನು ಈ ವಿಷಯವಾಗಿ ಕೇಳಲು, ಆತನು–ಪ್ರಿಯೇ ಮೇಹರ್ಜಾನ, ನನ್ನ ಮೇಲಿನ ನಿನ್ನ ವಿಶ್ವಾಸವು ಕಡಿಮೆಯಾಗಹತ್ತಿರುವದನ್ನು ನೋಡಿ ನನಗೆ ಬಹಳ ದುಃಖವಾಗುತ್ತದೆ. ಹೀಗೆ ಮಾಡಬೇಡ. ನಿನ್ನ ಹಿತದ ಸಲುವಾಗಿಯೇ ನಾನು ಯತ್ನಿಸುತ್ತಿರುವೆನು. ಈಗ ಒಬ್ಬ ಸರದಾರನ ಹೆಂಡತಿಯೆನಿಸಿ ಕೊಳ್ಳುತ್ತಿರುವ ನೀನು ಮಂತ್ರಿಯ ಹೆಂಡತಿಯಾಗಬೇಕೆಂದು ನಾನು ಉದ್ಯೋಗ ನಡೆಸಿರುವೆನು. ಹೀಗಿರಲು, ನೀನು ವಿಕಲ್ಪವೆಣಿಸ ಬಹುದೋ? ಎಂದು ಕೇಳಲು ಆ ಸರಳಹೃದಯದ ಮೆಹರ್ಜಾನಳು ಅಷ್ಟಕ್ಕೆ ಸಂತೋಷಪಟ್ಟು ವಿಕಲ್ಪವಿಲ್ಲದೆ, ಮೊದಲಿನಂತೆ ರಾಮರಾಜನನ್ನು ಪ್ರೀತಿಸಹತ್ತಿದಳು. ರಾಮರಾಜನ ಈ ಮೋಸದ ನಡತೆಯು ಧೂರ್ತಳಾದ ಮಾರ್ಜೀನೆಗೆ ಗೊತ್ತಾಗದೆ ಇರಲಿಲ್ಲ! ಆದರೂ ಆಕೆಯು ತನ್ನ ಮನಸ್ಸಿನಲ್ಲಿದ್ದದ್ದನ್ನು ಮೇಹರ್ಜಾನಳ ಮುಂದೆ ಆಡಲಿಲ್ಲ. ಹೀಗೆಯೆ ಕೆಲವು ದಿನಗಳು ಹೋದವು. ರಾಮರಾಜನು ತನ್ನ ಮನಸ್ಸಿನ ಸಂಶಯದಿಂದ ಮೇಹರ್ಜಾನಳನ್ನು ರಮಿಸುವದಕ್ಕಾಗಿ ಆಗಾಗ್ಗೆ ಬೆಲೆಯುಳ್ಳ ಅಲಂಕಾರಗಳನ್ನು ತಂದುಕೊಡ ಹತ್ತಿದನು. ತನಗೆ ಬರುವುದಕ್ಕೆ ತಡವಾದ ಪ್ರಸಂಗದಲ್ಲಿ ಸವಿಯಾದ ಪತ್ರಗಳನ್ನು ಆಕೆಗೆ ಬರೆದು ಕಳಿಸಹತ್ತಿದನು. ಏನು ಮಾಡಿದರೂ ಮೇಹರ್ಜಾನಳ ಮನಸ್ಸಿನಲ್ಲಿ ರಾಮರಾಜನ ಪ್ರೇಮದ ವಿಷಯವಾಗಿ ಆಗಾಗ್ಗೆ ವಿಕಲ್ಪವು ಉತ್ಪನ್ನವಾಗುವದು ಹೋಗಲಿಲ್ಲ. ಮನಸ್ಸು ದೋಷೈಕ ದೃಷ್ಟಿಯಾಯಿತೆಂದರೆ, ಇಲ್ಲದ ಹುಳುಕುಗಳು ಅದಕ್ಕೆ ತೋರಹತ್ತುತ್ತವೆ. ಇತ್ತಿತ್ತ ರಾಮರಾಜನು ತನಗೆ ಬೆಲೆಯುಳ್ಳ ವಸ್ತ್ರಾಲಂಕಾರಗಳನ್ನು ಕೊಡುತ್ತಿದ್ದದ್ದು, ತನ್ನನ್ನು ರಮಿಸುವದಕ್ಕಲ್ಲದೆ, ಪ್ರೀತಿಗೋಸ್ಕರವಲ್ಲೆಂದು ಮೇಹರ್ಜಾನಗಳು ಎಣಿಸಹತ್ತಿದಳು. ''ಮನೋಹಿ ಜನ್ಮಾಂತರ ಸಂಗತಿಜ್ಞಂ'' ಅಂದರೆ, ಮನಸ್ಸೆ (ಸಂಬಂಧಿಕರ) ಜನ್ಮಾಂತರದ ಸಂಗತಿಗಳನ್ನು ತಿಳಿಯುತ್ತದೆಂದು ಕಾಳಿದಾಸ ಕವಿಯು ಹೇಳಿರುವನೆಂದಬಳಿಕ, ಇದೇ ಜನ್ಮದಲ್ಲಿ ತನಗೆ ಸಂಬಂಧಪಟ್ಟಿದ್ದ ರಾಮರಾಜನ ಮನಸ್ಸಿನ ಸ್ಥಿತಿಯನ್ನು ಮೆಹರ್ಜಾನಳ ಮನುಸ್ಸು ತಿಳಿಯದೆ ಹ್ಯಾಗೆ ಹೋಗಬೇಕು? ಆದರೂ

ಮೆಹರ್ಜಾನಳು ರಾಮರಾಜನಂತೆ ಮಹತ್ವಾಕಾಂಕ್ಷಿಯಿದ್ದಿಲ್ಲ. ತಾನಾಗಿ ಪ್ರಾಪ್ತವಾಗಿದ್ದ ರಾಮರಾಜನ ಅಕೃತ್ರಿಮ ಪ್ರೇಮವನ್ನು ಕಾಯ್ದುಕೊಳ್ಳುವದರ ಹೊರತು ಹೆಚ್ಚಿನ ಉಸಾಬರಿಯೂ ಆಕೆಗೆ ಬೇಕಾಗಿದ್ದಿಲ್ಲ. ಕಪಟಾಚರಣೆಯನ್ನಂತು ಆ ಸುಂದರಿಯು ಅರಿಯೇ ಅರಿಯಳು; ಆದ್ದರಿಂದ ಆ ನಿರ್ಮಲಾಂತಃಕರಣದ ತರುಣಿಯು ರಾಮರಾಜನ ವಿಷಯವಾಗಿ ಎಷ್ಟು ಶಂಕಿಸಿದರೂ, ಆತನು ಭೆಟ್ಟಿಯಾದಾಗೆಲ್ಲ ಆತನ ವಿಷಯದ ವಿಕಲ್ಪವನ್ನೆಲ್ಲ ಮರೆತು, ಅಕೃತ್ರಿಮ ಪ್ರೇಮದಿಂದ ಆತನನ್ನು ಆಲಿಂಗಿಸುವಳು. ಆತನ ಬಳಿಯಲ್ಲಿರುವತನಕ ಆಕೆಯು ಇಲ್ಲದ ವಿಕಲ್ಪಗಳನ್ನು ಒಡನುಡಿದಾಗ ಅವುಗಳಿಗೆಲ್ಲ ರಾಮರಾಜನು ಸಮಾಧಾನ ಹೇಳಲು, ಕೃತಜ್ಞತೆಯಿಂದ ಆತನನ್ನು ಪುನಃ ಕುಂಜವನದಿಂದ ಹೋಗಗೊಡುವಳು. ಮತ್ತೆ ಕೆಲವು ದಿನ ಆತನು ಬಾರದಾಗಲು, ಮತ್ತೆ ಆಕೆಯ ವಿಕಲ್ಪಕ್ಕೆ ಆರಂಭವಾಗುತ್ತಿತ್ತು. ಈ ಕ್ರಮವು ಮೇಹರ್ಜಾನಳ ಬಹುರೂಢವಾದ ವೇಳಾ ಪತ್ರಕದಂತೆ ಆಗಿಹೋಗಿತ್ತು. ಭಿಢೆಬಾರಣೆಯ ಸರಳ ಮನಸ್ಸಿನವರ ಸ್ಥಿತಿಯು ಹೀಗೆಯೇ ಸರಿ.

ಹೀಗೆ ಕ್ರಮಿಸುತ್ತಿರಲು, ಒಂದು ದಿನ ಮೇಹರ್ಜಾನಳ ಮನಸ್ಸು ತೀರ ಖಿನ್ನವಾಯಿತು. ರಾಮರಾಜನು ಬಾರದೆ ಅಂದಿಗೆ ಎಂಟು ದಿನಗಳಾಗಿ ಹೋಗಿದ್ದವು. ಅಂದು ವಸಂತಕಾಲದ ಪೌರ್ಣಿಮೆಯಾದದ್ದರಿಂದ, ಚಂದ್ರಮನು ಷೋಡಶ ಕಲೆಗಳಿಂದ ಪೂರ್ಣನಾಗಿ ಉದಯ ಹೊಂದಿದನು. ಆ ನಿಶಾಕರನು ಮೇಲಕ್ಕೇರಿ ಹಿಟ್ಟು ಚಲ್ಲಿದ ಹಾಗೆ ಎಲ್ಲ ಕಡೆಗೆ ಬೆಳದಿಂಗಳು ಬೀಳಲು, ನಾಲ್ಕು ತಾಸು ರಾತ್ರಿಯು ಮೀರಿ ಐದನೆಯ ಅಮಲು ಆಯಿತು. ಆಗ ಮೇಹರ್ಜಾನಳು. ಒಬ್ಬಳೇ ಮಂದಿರದಿಂದ ಹೊರಟು ಕುಂಜನವನದೊಳಗಿನ ಪುಷ್ಕರಣಿಯ ಕಡೆಗೆ ಸಾಗಿದಳು. ತನ್ನನ್ನು ಹಿಂಬಾಲಿಸಿ ಬಾರದಂತೆ ಆಕೆಯು ಎಲ್ಲರಿಗೆ ಕಟ್ಟಪ್ಪಣೆ ಮಾಡಿದ್ದಳು. ಮಾರ್ಜೀನೆಗೆ ಕೂಡ ಅವಳ ಸಂಗಡ ಹೋಗಲಿಕ್ಕೆ ಧೈರ್ಯ ಸಾಲಲಿಲ್ಲ. ಮೇಹರ್ಜಾನಳು ಪುಷ್ಕರಣೆಗೆ ಹೋದಾಗ ಆ ಮನೋಹರವಾದ ಸರೋವರದ ಶೋಭೆಯು ವರ್ಣಿಸುವ ಹಾಗಿತ್ತು ಆ ವಿಸ್ತೀರ್ಣವಾದ ಪುಷ್ಕರಣೆಯ ನಟ್ಟನಡುವೆ ಒಂದು ಧ್ವಜ ಸ್ತಂಭವಿದ್ದು ಸುತ್ತು ಮುತ್ತು ಸಣ್ಣ–ದೊಡ್ಡ ಗಿಡಗಳ ನೆರಳು ದಟ್ಟವಾಗಿ ಬಿದ್ದಿತ್ತು. ಪುಷ್ಕರಣೆಯಲ್ಲಿ ನೈದಿಲೆಗಳು ಅರಳಿ ಅವು ಅಲ್ಲಿಯ ಸ್ವಚ್ಛವಾದ ಉದಕದಲ್ಲಿ ಪ್ರತಿಬಿಂಬಿಸಿದ್ದವು. ಗಾಳಿ ಸುಳಿದಾಡದ್ದರಿಂದ ಸುತ್ತಲಿನ ಗಿಡಗಳು ಮಿಸುಕುತ್ತಿದ್ದಿಲ್ಲ. ಪುಷ್ಕರಣೆಯಲ್ಲಿ ತೆರೆಗಳು ಉತ್ಪನ್ನವಾಗುತ್ತಿದ್ದಿಲ್ಲ. ನಿರಭ್ರವಾದ ಆಕಾಶದಲ್ಲಿ ಚಂದ್ರಮನೂ ನಕ್ಷತ್ರಗಳೂ ಸ್ಥಳಬಿಟ್ಟು ಕದಲದೆ ಸುಮ್ಮನೆ ನಿಂತಲ್ಲಿ ನಿಂತಿರುವಂತೆ ತೋರುತ್ತಿತ್ತು! ಒತ್ತಟ್ಟಿಗೆ ಮೆಹರ್ಜಾನಳಂಥ ಲೋಕೋತ್ತರ ಸುಂದರಿಯು ತನ್ನ ಬೀರುಸ್ವಭಾವವನ್ನು ಬದಿಗಿಟ್ಟು ದಿಟ್ಟತನದಿಂದ ಏಕಾಕಿಯಾಗಿ ಮಧ್ಯರಾತ್ರಿಯಲ್ಲಿ ಇಲ್ಲಿಗೆ ಯಾಕೆ ಬಂದಿರಬಹುದೆಂಬುದನ್ನು ಬೆರಗಾಗಿ ನೋಡುತ್ತಿರುವಂತೆ, ಪುಷ್ಕರಣೆಯಲ್ಲಿಯೂ ಅದರ ಸುತ್ತಲೂ ಅದರ ಮೇಲ್ಗಡೆ ಯಲ್ಲಿಯೂ ಇರುವ ಚಲನವಲನದ ವಸ್ತುಗಳೆಲ್ಲ ಸ್ತಬ್ಧತೆಯನ್ನು ತಾಳಿದಂತೆ ಆಗಿತ್ತು. ಕುಂಜವನದೊಳಗಿನ ವಿವಿಧ ಪುಷ್ಪಗಳ ಸುಗಂಧವನ್ನು ಮಂದಮಾರುತನು ಹೊತ್ತೊಯ್ಯುದ್ದರಿಂದ ಆ ಪ್ರದೇಶವು ವಿವಿಧ ಪುಷ್ಪಗಳ ಮಿಶ್ರ ಸುಗಂಧದಿಂದ ತುಂಬಿ ಸೂಸುತ್ತಿತ್ತು. ಆಗ ಚಂದ್ರ

ಮಂಡಲವು ಪುಷ್ಕರಣಿಯಲ್ಲಿ ಸ್ವಚ್ಛವಾಗಿ ಪ್ರತಿಫಲಿಸಿ ಅದರ ಮನೋಹರತ್ವಕ್ಕೆ ಕಳೆಯೇರಿತ್ತು ಇಂಥ ಮನೋಹರ ಪ್ರಸಂಗಗಳಿಂದ ಉಲ್ಲಸಿತಳಾದ ಆ ತರುಣಿಯು ಪುಷ್ಕರಣಿಯ ದಂಡೆಯಲ್ಲಿ ಕಟ್ಟಿದ್ದ ಕ್ರೀಡಾ ನೌಕೆಯನ್ನೇರಿ, ಬಿಚ್ಚಿ, ಬಡಬಡ ಹುಟ್ಟು ಹಾಕುತ್ತ ನೌಕೆಯನ್ನು ಮಧ್ಯದ ಕಡೆಗೆ ಸಾಗಿಸಿದಳು. ಕ್ಷಣಮಾತ್ರದಲ್ಲಿ ನೌಕೆಯು ಧ್ವಜಸ್ತಂಭವನ್ನು ಮುಟ್ಟಿತು. ಆಗ ಮೆಹರ್ಜಾನಳು ನೌಕೆಯನ್ನು ಸ್ತಂಭಕ್ಕೆ ಕಟ್ಟಿ, ಆಕಾಶದಲ್ಲಿ ಲಕಲಕಿಸುತ್ತಿದ್ದ ಚಂದ್ರ ಬಿಂಬವನ್ನು ಕೌತುಕದಿಂದ ನೋಡಹತ್ತಿದಳು. ಆಗ ಆ ಸ್ವಚ್ಛಂದ ವೃತ್ತಿಯ ರಸಿಕ ತರುಣಿಯ ಹೃದಯವನ್ನು ರಾಮರಾಜನು ತಟ್ಟನೆ ಪ್ರವೇಶಿಸಲು, ಹಲವು ಮನೋರಮ ಕಲ್ಪನಾ ತರಂಗಗಳು ಆಕೆಯ ಹೃದಯದಲ್ಲಿ ಉತ್ಪನ್ನವಾಗಿ ಆಕೆಗೆ ವಿರಹದ ಭಾವನೆಯಾಗಹತ್ತಿತು. ಆಗ ಆಕೆಯು ಮಂಜುಲ ಸ್ವರದಿಂದ–

ರಾಗ (ಭಾವ ಕಲ್ಯಾಣ)

ಹೇರಿ ಆಜ ಸಖೀರಿ ಮೆಕ್ಯಾಕಹು ಅಪನೇ ಜೀಯಾಕೀ ಬಾತ।
ಹೇರೀ ಆಜ॥
ಮೇರೇಮನ ಸಖೀ ಪ್ಯಾರೇಕೀ ಮುರತ, ಘಡಿಪಲ ಛೀನದೀನ
ರಾತ॥ ಹೇರೀ ಆಜ॥

ಎಂದು ಗಾಯನ ಮಾಡಿದ ಹಿಂದುಸ್ಥಾನಿ ಖ್ಯಾಲಿಯ ಸುಂದರ ತಾನು, ಬೆಳದಿಂಗಳಂತೆ ದಶದಿಕ್ಕು ಗಳಲ್ಲಿ ಪಸರಿಸಿ, ನಾದಬ್ರಹ್ಮದ ಆನಂದದಿಂದ ಯಾವತ್ತು ಸೃಷ್ಟಿಯು ಡೋಲಾಯ ಮಾನವಾಗುಹತ್ತಿತ್ತು

ಈ ಮನೋಹರ ಪ್ರಸಂಗವನ್ನೆಲ್ಲ ಕಣ್ಣುಟ್ಟ ನೋಡಿ, ಮಧುರ ಗಾಯನವನ್ನು ಕಿವಿಮುಟ್ಟ ಕೇಳಿ ಧನ್ಯತೆಯನ್ನು ಪಡೆದಿದ್ದ ಒಬ್ಬ ತರುಣನು ಆ ಪುಷ್ಕರಣಿಯ ಪೂರ್ವದಂಡೆಯ ಮೇಲಿದ್ದ ಒಂದು ಅಶೋಕ ವೃಕ್ಷದ ಬುಡದಲ್ಲಿ ನಿಂತುಕೊಂಡು ಮೆಹರ್ಜಾನಳ ದಿವ್ಯಮೂರ್ತಿಯನ್ನು ಧ್ಯಾನಿಸಹತ್ತಿದನು. ಆನಂದದ ಭಯದಲ್ಲಿ ಆತನ ಶರೀರವು ಡೋಲಾಯಮಾನವಾಗಹತ್ತಿತು. ಬರುಬರುತ್ತ ಗಾನದ ತಲ್ಲೀನತೆಯಲ್ಲಿ ಆತನು ಜಯದೇವ ಕವಿಯದೊಂದು ಅಷ್ಟಪದಿಯನ್ನು ಸುಸ್ವರದಿಂದ ಗಾಯನ ಮಾಡಹತ್ತಿದನು.

ನಿಭೃತನೀಕುಂಜಗೃಹಂ ಗತಯಾ ನಿಶಿರಹಸಿ ನೀಲಿಯ ವಸಂತಂ।
ಚಕಿತ ವಿಲೋಕಿತ ಸಕಲ ದಿಶಾರತಿ ರಭಸ ಭರೇಣ ಹಸಂತಂ।
ಸಖಿ ಹೇಹಕೇಶೀ ಮಥನಮಂದಾರಂ ರಮಯ ಮಯಾಸ।
ಮದನ ಮನೋರಥ ಭಾವಿತಯಾ ಸವಿಕಾರಂ ॥ಧೃಂ॥

ಹೀಗೆ ಅಕಲ್ಪಿತವಾಗಿ ಕಿವಿಗೆ ಬಿದ್ದ ತರುಣನ ಗಾಯನವನ್ನು ಕೇಳಿದ ಕೂಡಲೇ ಮೇಹರ್ಜಾನಳು ಬೆದರಿದ ಚಿಗರಿಯಂತೆ ನಾಲ್ಕೂ ಕಡೆಗೆ ನೋಡಿದಳು. ಕೂಡಲೆ ಆಕೆಯು ಆನಂದದಿಂದ ಚಪ್ಪಾಳೆ ಬಾರಿಸಿ ಧ್ವಜಸ್ತಂಭಕ್ಕೆ ಕಟ್ಟಿದ್ದ ಕ್ರೀಡಾ ನೌಕೆಯನ್ನು ಬಿಚ್ಚಿ ಅದನ್ನು ಆ ತರುಣನ ಕಡೆಗೆ ಸಾಗಿಸಹತ್ತಿದಳು. ದಂಡೆಗೆ ಮುಟ್ಟುವ ವಿಷಯವಾಗಿ ಆಕೆಯು ಅತ್ಯಂತ ಆತುರಳಾಗಿದ್ದಳು, ನೌಕೆಯ ಹಂಗು ಇಲ್ಲದೆ ಭರ್ರನೆ ಹಾರಿ ದಂಡೆಗೆ ಹೋಗಲಿಕ್ಕೆ ಬರುವ ಹಾಗೆ

ಆಕೆಗೆ ರೆಕ್ಕೆಗಳಿರುತ್ತಿದ್ದರೆ, ಆಕೆಯು ಆಗಲೇ ಹಾರಿ ಹೋಗುತ್ತಿದ್ದಳು! ಆದರೆ ಹಾಗೆ ಮಾಡಲು ಶಕ್ಯವಿಲ್ಲದ್ದರಿಂದ ಆಕೆಯು ಅದಷ್ಟು ಬೇಗನೆ ನೌಕೆಯನ್ನು ನಡಸಲೇಬೇಕಾಯಿತು. ಹುಟ್ಟು ಹಾಕುವಾಗ ಆಕೆಯು ತನ್ನ ದೇಹದ ಶ್ರಮವನ್ನು ಲೆಕ್ಕಿಸಲಿಲ್ಲ. ಜೋಲಿ ಹೋಗಿ ಪುಷ್ಕರಣಿಯಲ್ಲಿ ಬಿದ್ದೇನೆಂಬುದರ ಅರಿವು ಸಹ ಆಕೆಗೆ ಉಳಿಯಲಿಲ್ಲ. ಒಂದೆರಡು ಸಾರೆಯಂತು ನೌಕೆಯು ಹೊಯ್ದಾಡಲು, ಈ ಸುಂದರಿಯು ಜಲಸಮಾಧಿಯನ್ನು ಹೊಂದುವಳೊ ಏನೋ ಎಂಬ ಭಯವು ತರುಣನ ಮನಸ್ಸಿನಲ್ಲಿ ಉತ್ಪನ್ನವಾಯಿತು; ಆದರೆ ಕ್ರೀಡಾ ನೌಕೆಯನ್ನು ನಡೆಸುವ ವಿಷಯದಲ್ಲಿ ಮೇಹರ್ಜಾನಳು ಅತ್ಯಂತ ಚತುರಳಾದದ್ದರಿಂದ, ಅಂಥ ಅಪಘಾತವೇನೂ ಆಗದೆ, ನೌಕೆಯು ಸುರಕ್ಷಿತವಾಗಿ ದಂಡೆಗೆ ಬಂದು ಮುಟ್ಟಿತು. ನೌಕೆಯು ದಂಡೆಗೆ ಮುಟ್ಟಿದ ಕೂಡಲೇ ಮೇಹರ್ಜಾನಳು ಕ್ರೀಡಾ ನೌಕೆಯಿಂದಲೇ ತುರಣನ ಕಡೆಗೆ ಸಾಗರಬಿದ್ದಳು. ಹೀಗೆ ಸಾಗರ ಬೀಳುವ ತರುಣಿಯನ್ನು ಎತ್ತಿಕೊಳ್ಳಲಿಕ್ಕೆ ತರುಣನು ಸಿದ್ಧನೇ ಇದ್ದನು. ಆತನು ತರುಣಿಯನ್ನು ಆತುರದಿಂದ ಎತ್ತಿಕೊಂಡು ಪ್ರೇಮದಿಂದ ಚುಂಬಿಸಿದನು. ಅವರಿಬ್ಬರು ತರುಣರು ಒಬ್ಬರನ್ನೊಬ್ಬರು ಬಿಗಿಯಾಗಿ ಅಪ್ಪಿಕೊಂಡಾಗ ಆನಂದಾತಿಶಯದಿಂದ ಕೆಲವು ಹೊತ್ತಿನ ವರೆಗೆ ಮಾತಾಡಲು ಅವರು ಅಸಮರ್ಥರಾದರು. ಆಗ ಒಬ್ಬರನ್ನೊಬ್ಬರು ಮಾತಾಡಿಸಲು ಆತುರ ಪಡುತ್ತಿದ್ದರೂ ಅವರ ಕೋರಿಕೆಯು ಸಫಲವಾಗಲಿಲ್ಲ. ಕಡೆಗೆ ಆ ತರುಣನು ಮೇಹರ್ಜಾನಳನ್ನು ಕುರಿತು–

ತರುಣ—ನೀನು ಮಂದಿರದಲ್ಲಿಲ್ಲದ್ದರಿಂದ ಕುಂಜವನದಲ್ಲಿ ಹುಡುಕಬೇಕೆಂದು ನಾನು ಹೊರಗೆ ಬರುತ್ತಿರಲು, ನೀನು ಯಾರನ್ನೂ ಸಂಗಡ ಬರಗೊಡದೆ ಒಬ್ಬಳೇ ಪುಷ್ಕರಣಿಗೆ ಹೋಗಿರುವೆಯೆಂದು ಮಾರ್ಜೀನೆಯು ನನ್ನ ಮುಂದೆ ಹೇಳಿದಳು! ಪ್ರಿಯ ಮೇಹರ್ಜಾನ, ಹೀಗೆ ಅಪರಾತ್ರಿಯಲ್ಲಿ ನೀನು ಒಬ್ಬಳೇ ಪುಷ್ಕರಣಿಗೆ ಬಂದು ಧ್ವಜಸ್ತಂಭದವರಿಗೆ ನೌಕೆಯನ್ನು ಸಾಗಿಸಿಕೊಂಡು ಹೋಗಬಹುದೇ? ಮಾರ್ಜೀನೆಯು ಕೂಡ ಸಂಗಡ ಬಾರದಷ್ಟು ಮನುಷ್ಯರ ಬೇಸರವು ನಿನಗೆ ಯಾಕೆ ಆಯಿತು? ನಾನಂತು ಅಂಜುತ್ತಂಜುತ್ತಲೇ ಅಶೋಕವೃಕ್ಷದ ಬುಡದಲ್ಲಿ ಬಂದು ನಿಂತಿದ್ದೆನು! ಮೊದಲು ನಿನ್ನನ್ನು ನೋಡಿದ ಕೂಡಲೇ ನಾನು ಆಶ್ಚರ್ಯ ಮಗ್ನನಾದೆನು. ಅಹಹ! ಪ್ರಿಯೇ, ಮೇಹರ್ಜಾನ, ನಮ್ಮ ಕಾಳಿದಾಸಾದಿ ಕವಿಗಳು ಸ್ತ್ರೀಮುಖವನ್ನು ಕಮಲಕ್ಕೆ, ಹಾಗು ಚಂದ್ರನಿಗೆ ಹೋಲಿಸಿದ್ದೇನು ಆಟಕ್ಕಲ್ಲವೆಂಬುದನ್ನು ನಾನು ಇಂದು ಮನಗಂಡೆನು! ಪುಷ್ಕರಣಿಯಲ್ಲಿ ಒಮ್ಮೆಲೆ ಮೂರು ಚಂದ್ರಗಳು ಎಲ್ಲಿಂದ ಬಂದವೆಂಬದು, ನನಗೆ ತಿಳಿಯ ದಾಯಿತು. ಆಕಾಶದಲ್ಲಿಯೊಬ್ಬ, ಕ್ರೀಡಾ ನೌಕೆಯಲ್ಲಿಯೊಬ್ಬ, ಪುಷ್ಕರಣಿಯ ಜಲದಲ್ಲಿಯೊಬ್ಬ ಹೀಗೆ ಮೂವರು ಚಂದ್ರರು!! ಮುಂದೆ ನೀನು ಮಂಜುಲ ಗಾನದಿಂದ ನನ್ನ ಭ್ರಾಂತಿಯನ್ನು ದೂರಮಾಡದಿದ್ದರೆ, ನಾನು ಎಲ್ಲಿ ಭ್ರಮಿಷ್ಟನೇ ಆಗಿ ಹೋಗುತ್ತಿದ್ದೆನೋ ಏನೋ?

ಮೇಹರ್ಜಾನ–ಸಾಕು, ಏನಾದರೂ ಬಣ್ಣದ ಮಾತು ಆಡಿ ನನ್ನನ್ನು ರಮಿಸಬೇಡಿರಿ. ಈಗ ಎಂಟು ದಿನ ನನ್ನನ್ನು ಮರೆತದ್ದನ್ನು ಮುಚ್ಚಿ ಕೊಳ್ಳಲಿಕ್ಕೆ ಯತ್ನಿಸುವ ಹಾಗೆ ತೋರುತ್ತದೆ; ಆದರೆ ಇಂಥ ಯತ್ನಗಳಿಗೆ ನಾನು ಈಗ ಮೋಸಹೋಗುವ ಹಾಗಿಲ್ಲ.

ತರುಣ–ನಿನ್ನನ್ನು ಮೋಸಗೊಳಿಸಲಿಕ್ಕೆ ಯಾರು ಯತ್ನಿಸಿದರು? ಪ್ರಿಯೆ, ಮೋಹಜರ್ಾನ, ನಿನ್ನನ್ನು ಮೋಸಗೊಳಿಸುವುದಕ್ಕಾಗಿ ನಾನು ಏನಾದರೂ ಮಾತಾಡುತ್ತೇನೆನ್ನುವ ಹಾಗೆ ನಿನಗೆ ತೋರುತ್ತದೇನು? ಹೋದವರ್ಷ ನಿನ್ನ ಬಳಿಗೆ ಆಗಾಗ್ಗೆ ಬರುತ್ತಿರುವ ಹಾಗೆ, ಈ ವರ್ಷ ನಾನು ಬಾರದಿರುವದಕ್ಕೆ ಕಾರಣವುಂಟು, ಹಿರಿಯರು ಇರುವತನಕ ಅವರ ಸಂಗಡ ಬೇರೆ ಬೇರೆ ಮುಸಲ್ಮಾನ ಬಾದಶಹರ ಬಳಿಗೆ ಹೋಗಿ ಅವರೊಡನೆ ಮಾಡುವ ಆಲೋಚನೆಗಳನ್ನು ಕೇಳುವದಷ್ಟೇ ನನ್ನ ಕೆಲಸವಾಗಿತ್ತು, ಈಗ ಹಿರಿಯರು ಸ್ವರ್ಗಸ್ಥರಾಗಿರುವದರಿಂದ ಅವರ ಕೆಲಸಗಳನ್ನು ನಾನು ಜವಾಬದಾರಿಯಿಂದ ಮಾಡಬೇಕಾಗಿದೆ. ಕೃಷ್ಣದೇವರಾಯರು ಚಿಟಗಿಗೊಮ್ಮೆ ಮುಟುಗಿಗೊಮ್ಮೆ ಕರಿಸಿ ಆಲೋಚನೆಗಳನ್ನು ಕೇಳುವರು. ಅವರು ನನಗೆ–ರಾಮರಾಜಾ, ನೀನು ತೀರ ತರುಣನಿರುವೆಯೆಂಬದೇನೋ ನಿಜ; ಆದರೆ ನಿನ್ನ ಹಿರಿಯರ ಕೈಯಲ್ಲಿ ನೀನು ನುರಿತವನಿರುವ ದರಿಂದಾಗಿ, ಜಾತ್ಯಾ ನೀನು ಯೋಗ್ಯತೆಯವನೆಂಬ ಕಾರಣದಿಂದಾಗಲಿ ನಿನ್ನ ಹಿರಿಯರ ಮಂತ್ರಿಪದವನ್ನು ನಿನಗೆ ಕೊಡಬೇಕೆನ್ನುವ ಹಾಗೆ ನನಗೆ ಆಗಿರುತ್ತದೆ; ಆದರೆ ಮಂತ್ರಿಪದವನ್ನು ಕೊಡುವ ಬದಲು ಎರಡನೆಯದೇನನ್ನಾದರೂ ನಿನಗೆ ಕೊಡಬೇಕೆಂದು ಮಾಡಿರುವೆನು, ಎಂದು ಹೇಳಿದ್ದಾರೆ, ಹೀಗಿರಲು, ನಾನು ಎಂಟು ದಿನ ಬರಲಿಲ್ಲವೆಂಬದಿಷ್ಟೇ ಕಾರಣದಿಂದ ನೀನು ಹೀಗೆ ನಿಷ್ಠುರಳಾಗಬಹುದೋ?

ಮೋಹಜರ್ಾನ–(ನಕ್ಕು) ಇದರಲ್ಲಿ ನನ್ನ ನಿಷ್ಠುರತನವೇನು? ಮನಸ್ಸಿನಲ್ಲಿ ಬಂದ ಮಾತನ್ನು ಸಥಿಯಿಂದ ಆಡಿ ತೋರಿಸಿದೆನು. ಅದಿರಲಿ, ಮಹಾರಾಜರು ನಿಮಗೆ ಎರಡನೆಯದೇನು ಕೊಡುವರು?

ಈ ಪ್ರಶ್ನದ ಉತ್ತರವನ್ನು ಕೊಡಲಿಕ್ಕೆ ರಾಮರಾಜನಿಗೆ ಪ್ರಶಸ್ತವಾಗಿ ತೋರಲಿಲ್ಲ; ಯಾಕಂದರೆ, ಕೃಷ್ಣದೇವರಾಯನು ತನ್ನ ಮಗಳನ್ನು ಕೊಡುತ್ತಾನೆಂದು ಹೇಳಿದರೆ, ಆಕೆಗೆ ಸಮಾಧಾನ ವಾಗುವಂತೆ ಇದ್ದಿಲ್ಲ; ಆದ್ದರಿಂದ ಆತನು ಆ ಮಾತನ್ನು ಮರೆಸುವದಕ್ಕಾಗಿ–

ರಾಮರಾಜ–ಮೋಹಜರ್ಾನ, ಹೀಗೆಯೇ ಅಶೋಕವೃಕ್ಷದ ಕೆಳಗೆ ಎಷ್ಟು ಹೊತ್ತು ನಿಂತುಕೊಳ್ಳಬೇಕು? ಇನ್ನು ಮೇಲೆ ಮನೆಗೆ.....

ಮೋಹಜರ್ಾನ–(ಮುಂದೆ ಮಾತಿಗೆ ಅವಕಾಶಕೊಡದೆ) ಇಲ್ಲ, ಮನೆಗೆ ಹೋಗುವ ಹಾಗಿಲ್ಲ. ಇಂದಿನ ರಾತ್ರಿಯನ್ನೆಲ್ಲ ನಿಮ್ಮೊಡನೆ ಈ ಕ್ರೀಡಾ ನೌಕೆಯಲ್ಲಿ ಕುಳಿತು ಪುಷ್ಕರಣಿ ಯಲ್ಲಿಯೇ ವಿಹರಿಸಬೇಕೆಂಬ ಇಚ್ಛೆಯು ನನಗೆ ಆಗಿದೆ!

ರಾಮರಾಜ–ಬಹಳ ಸಂತೋಷ, ಆಗಲಿ, ಅದಕ್ಕೆ ಯಾರು ಬೇಡವೆನ್ನುತ್ತಾರೆ.

ಕೂಡಲೆ ರಾಮರಾಜನು ಕ್ರೀಡಾ ನೌಕೆಯನ್ನು ಜಗ್ಗಿಕೊಂಡು ತಾನು ಹತ್ತಿ ಆ ಮೇಲೆ ಮೋಹಜರ್ಾನಳಿಗೆ ಆಸರೆಕೊಟ್ಟು ಆಕೆಯನ್ನು ಎತ್ತಿಕೊಂಡನು. ಕೂಡಲೆ ನೌಕೆಯನ್ನು ನಡೆಸಿ ಸರೋವರದ ಮಧ್ಯದಲ್ಲಿದ್ದ ಧ್ವಜಸ್ತಂಭದ ಬಳಿಗೆ ಒಯ್ದನು. ಆತನು ಧ್ವಜಸ್ತಂಭಕ್ಕೆ ನೌಕೆಯನ್ನು ಕಟ್ಟಿ, ಮೋಹಜರ್ಾನಳ ಹೆಗಲ ಮೇಲೆ ಎರಡೂ ಕೈಗಳನ್ನಿಟ್ಟು–

ರಾಮರಾಜ–ನಿನ್ನ ಮನಸ್ಸಿನಂತೆ ಆಯಿತಷ್ಟೆ? ಆದರೆ ಇಂದು ಸಂಗಡ ಯಾರನ್ನೂ ಕರಕೊಳ್ಳದೆ, ಮಾರ್ಜೀನೆಗೆ ಕೂಡ ನೀನು ಬರಬೇಡವೆಂದು ಬುದ್ಧಿಪೂರ್ವಕವಾಗಿ ಹೇಳಿ ಒಬ್ಬಳೆ ಪುಷ್ಕರಣಿಗೆ ಯಾಕೆ ಬಂದೆ? ಹೊತ್ತುವೇಳೆ ಒಂದೇಸವನೆ ಇರುವದಿಲ್ಲ, ಏನಾದರೂ ಅಪಘಾತ ವಾದರೆ ಹ್ಯಾಗೆ ಮಾಡಬೇಕು?

ಮೇಹರ್ಜಾನ–ಎಲ್ಲಿಯ ಘಾತ, ಎಲ್ಲಿಯ ಅಪಘಾತ! ತಮ್ಮ ಕೃಪಾ ಛತ್ರವು ನನ್ನ ತಲೆಯ ಮೇಲೆ ಇರುವವರೆಗೆ ಆ ಘಾತಾಘಾತಗಳಿಂದ ಏನಾಗಬೇಕಾಗಿದೆ? ತಾವು ವಿಜಯನಗರಕ್ಕೆ ಹೋಗಿ ಇಂದಿಗೆ ಎಂಟು ದಿವಸವಾಯಿತೆಂಬ ವಿಚಾರವು ಇಂದು ಮುಂಜಾನೆ ನನ್ನ ಮನಸ್ಸಿನಲ್ಲಿ ಹೊಡೆದ ಕೂಡಲೆ ಜೀವಕ್ಕೆ ಹೇಗೆ ಹೇಗೋ ಆಯಿತು. ಸಮಾಧಾನವಾಗಲೊಲ್ಲದು! ಕಡೆಗೆ ಕುಂಜವನದಲ್ಲಿ ಒಬ್ಬಳೇ ಕುಳಿತುಕೊಳ್ಳಬೇಕೆಂದು ಹೋದೆನು. ಆದರೆ ಹಕ್ಕಿಗಳ ಕಿಲಿಬಿಲಿಯಿಂದ ಸಹ ನನ್ನ ಏಕಾಂತಕ್ಕೆ ಭಂಗವಾಯಿತು! ಅದರಿಂದ ಏಕಾಂತವನ್ನು ಬಯಸಿ, ಅಪರಾತ್ರಿಯ ಲಕ್ಷವಿಲ್ಲದೆ ಇಲ್ಲಿಗೆ ಬಂದುಬಿಟ್ಟೆನು.

ರಾಮರಾಜ–ಶಾಬಾಸ! ಮೇಹೇರ, ನೀನು ಒಳ್ಳೆ ಮನಸ್ವಿಯು ಕಾಣುತ್ತೀ! ನಿನ್ನ ಮನಸ್ಸಿಗೆ ಅಷ್ಟು ಅಸಮಾಧಾನವಾಗಲಿಕ್ಕೆ ಕಾರಣವೇನು?

ಮೇಹರ್ಜಾನ–ಕಾರಣಗಳು ಒಂದೇ ಎರಡೇ ಎಷ್ಟೆಂತ ಹೇಳಲಿ? ನೀವು ಬಳಿಯಲ್ಲಿ ಎಂಟು ದಿನ ಇಲ್ಲದ ಬಳಿಕ ದುಷ್ಟ ಕಲ್ಪನೆಗಳಿಗೇನು ಕೊರತೆಯು? ಇನ್ನು ಮೇಲೆ ನಿಮ್ಮ ಭೆಟ್ಟಿಯೇ ಆಗುವದಿಲ್ಲವೆಂಬ ವಿಚಾರವು ಸಹ ನನ್ನ ಮನಸ್ಸಿನಲ್ಲಿ ಬಂದಿತ್ತು! ಅದರಲ್ಲಿ ಈಗಂತು......

ಈ ಮೇರೆಗೆ ಅರ್ಧ ಮಾತಾಡಿ, ಮೇಹರ್ಜಾನಳು ಲಜ್ಜೆಯಿಂದ ತಲೆಬಾಗಿಸಲು, ರಾಮರಾಜನು ಆಕೆಯನ್ನು ತಬ್ಬಿಕೊಂಡು ಆಲಿಂಗಿಸಿ ಗದ್ದ ಹಿಡಿದು ಮುಖವೆತ್ತಿ—''ಅದರಲ್ಲಿ ಈಗಂತು'' ಎಂದು ಸುಮ್ಮನಾದೆಯಲ್ಲ? ಮೇಹೇರ, ಈಗೇನು ಆಯಿತು ಹೇಳು ಎಂದು ಕೇಳಲು, ಮೇಹರ್ಜಾನಳು, ''ಏನೂ ಇಲ್ಲೆಂ''ದು ಹೇಳಿ ಆ ವಿಷಯವನ್ನು ಮರೆಸಲಿಕ್ಕೆ ಯತ್ನಿಸಿ ನೀವು ಬೇಕಾದದ್ದು ಹೇಳಿರಿ ಇಂದು ನನ್ನ ಮನಸ್ಸಿನ ಸ್ಥಿತಿಯೇ ವಿಚಿತ್ರವಾಗಿದೆ. ನೌಕೆಯಲ್ಲಿ ನಾವಿಬ್ಬರು ಕುಳಿತು ನೌಕೆಯು ಮುಂದಕ್ಕೆ ಸಾಗಹತ್ತಿದ ಬಳಿಕ ನನ್ನ ಮನಸ್ಸಿನಲ್ಲಿ ಬಂದ ವಿಚಾರವನ್ನು ಹೇಳಿದರೆ ನಿಮಗೆ ನಗೆ ಬರಬಹುದು; ಅಥವಾ ಯಾರಿಗೆ ಗೊತ್ತು ಸಿಟ್ಟೂ ಬರಬಹುದು.

ರಾಮರಾಜ–ಏನಂದಿ? ನಿನ್ನ ಮಾತಿಗೆ ನನಗೆ ಸಿಟ್ಟು ಬರಬಹುದೇ? ಮೇಹೇರ, ಈ ಜನ್ಮದಲ್ಲಿ ನಿನ್ನ ವಿಷಯವಾಗಿ ನನಗೆ ಎಂದೂ ಸಿಟ್ಟು ಬರಲಿಕ್ಕಿಲ್ಲ, ನೀನು ಮಾತ್ರ ನನ್ನ ಮೇಲೆ ಯಾವಾಗ ಸಿಟ್ಟಾದಿ, ಯಾವಾಗ ದ್ವೇಷ ಮಾಡೀ ಎಂಬುದನ್ನು ಹೇಳಲಾಗುವುದಿಲ್ಲ! ಈ ವಿಚಾರವು ಮೇಲಿಂದ ಮೇಲೆ ನನ್ನ ಮನಸ್ಸಿನಲ್ಲಿ ಬಂದು ನನಗೆ ಅಂಜಿಕೆ ಬರುತ್ತದೆ!

ಮೇಹರ್ಜಾನ–(ತಟ್ಟನೆ ಹಿಂದಕ್ಕೆ ಸರಿದು ರಾಮರಾಜನನ್ನು ದಿಟ್ಟಿಸಿ ನೋಡುತ್ತ) ಏನು? ನಿಮ್ಮ ಮೇಲೆ ನನ್ನ ಸಿಟ್ಟೇ, ದ್ವೇಷವೇ ಅವ್ವಯ್ಯಾ!! ಮಹಾರಾಜ, ಇಂಥ ವಿಚಾರಗಳು ನಿಮ್ಮ ಮನಸ್ಸಿನಲ್ಲಿಯಾದರೂ ಹ್ಯಾಗೆ ಬಂದವು? ನನ್ನ ನಡತೆಯಲ್ಲಿ ತಮಗೆ ಯಾವ ವ್ಯತ್ಯಾಸವು ತೋರಿತು!

ಹೀಗೆ ನುಡಿಯುವಾಗ ಮೇಹರ್ಜಾನಳ ಕಣ್ಣುಗಳು ಅಶ್ರುಪೂರ್ಣವಾದವು, ಆಕೆಯ ಕಂಠವು ಬಿಗಿದು ಮಾತುಗಳು ಹೊರಡದಾದವು. ಕಡೆಗೆ ಆ ಸರಲೆಯು ಅಳುವ ಮೋರೆಯಿಂದ ರಾಮ ರಾಜನನ್ನು ಕುರಿತು ತಟ್ಟನೆ–ಮಹಾರಾಜರೇ, ಪರಸ್ಪರರ ವಿಷಯವಾಗಿ ಇಂಥ ಕುವಿಚಾರಗಳು ಉತ್ಪನ್ನವಾಗುವ ಲಕ್ಷಣವು ಒಳ್ಳೆಯದಲ್ಲ. ಈ ದುರ್ಲಕ್ಷಣದ ದುಷ್ಪರಿಣಾಮವು ಒದಗ ಬಾರದಾಗಿದ್ದರೆ, ಈಗ ನನ್ನ ಮನಸ್ಸಿನಲ್ಲಿ ಬಂದ ವಿಚಾರದಂತೆ ಕಾರ್ಯವಾಗಬೇಕು, ಅಂದರೆ ನಿಶ್ಚಿಂತೆಯು! ಎಂದು ನುಡಿದಳು. ಆಗ ರಾಮರಾಜನು ಕೃತ್ರಿಮ ನಗೆಯಿಂದ–ಪ್ರಿಯೇ, ಮೇಹೇರ, ಹೇಳು ಹೇಳು; ಅದು ಹ್ಯಾಗೆ ನಿಶ್ಚಿಂತೆಯಾಗುವದು ತಟ್ಟನೆ ಹೇಳು, ಎಂದು ಆತುರಪಡಲು, ಮೇಹರ್ಜಾನಳು–ಮಹಾರಾಜ, ಹ್ಯಾಗೆಂಬುದನ್ನು ಹೇಳುತ್ತೇನೆ ಕೇಳಿರಿ; ನಾವು ಈಗ ನೌಕೆಯಲ್ಲಿ ಕುಳಿತು ದಂಡೆಗೆ ಹೋಗುವಾಗ ಒಬ್ಬರನ್ನೊಬ್ಬರು ಬಿಗಿಯಾಗಿ ಅಪ್ಪಿಕೊಳ್ಳಬೇಕು. ಹೀಗೆ ಅಪ್ಪಿ ಕೊಂಡಿರುವಾಗಲೇ ನೌಕೆಯು ಮುಳುಗಿ ಪುಷ್ಕರಣಿಯ ತಳವನ್ನು ಮುಟ್ಟಬೇಕು, ಅಂದರೆ ನಿಶ್ಚಿಂತೆಯಾಗುವದು! ಅನ್ನಲು, ರಾಮರಾಜನ ಮುಖವು ನಿಸ್ತೇಜವಾಗಿ ಆತನ ಸರ್ವಾಂಗದಲ್ಲಿ ಕಂಪವು ಹುಟ್ಟಿತು!! ಪ್ರಿಯವಾಚಕರೇ, ಆ ತರುಣ ದಂಪತಿಗಳ ಮನಸ್ಸಿನ ಈ ಕುಭಾವನಗಳೇ ಅವರ ವಿನಾಶಾಂಕುರದ ಅಭಿವೃದ್ಧಿಗೆ ಕಾರಣವಾಗಿರಬಹುದೇನು?

## ಪ್ರಯಾಣ

ರಾಮರಾಜನು ಶೂರನಿದ್ದನು; ಆದರೆ ಅಪಮೃತ್ಯುವೆಂಬ ಶಬ್ದವನ್ನು, ಅಥವಾ ಅದನ್ನು ಸೂಚಿಸುವ ಬೇರೆ ಶಬ್ದಗಳನ್ನು ಯಾರ ಮುಖದಿಂದಾದರೂ ಕೇಳಿದ ಕೂಡಲೆ ಆತನ ಎದೆಯು ಧಸಕ್ಕೆನ್ನುತ್ತಿತ್ತು. ಆತನು 25 ವರ್ಷದವನಾಗುವ ಮೊದಲೇ ಎರಡು ಯುದ್ಧಗಳಲ್ಲಿ ಪರಾಕ್ರಮವನ್ನು ತೋರಿಸಿ, ಮೃತ್ಯುವಿನ ಅತ್ಯಂತ ಉಗ್ರಸ್ವರೂಪವನ್ನು ಕಣ್ಣುಮುಟ್ಟ ನೋಡಿದ್ದನು; ಆದರೆ ಯುದ್ಧದ ಹೊರತು ಉಳಿದ ಅಪಘಾತದ ಮೃತ್ಯುವಿನ ಹೆಸರನ್ನು ಕೇಳಿದ ಕೂಡಲೆ ಆತನ ಸೊಂಡೆಯು ಒಣಗುತ್ತಿತ್ತು. ಆತನು ಒಳ್ಳೇ ಮಹತ್ವಾಕಾಂಕ್ಷಿಯಿದ್ದನೆಂದು ಮೇಲೆ ಹೇಳಿದೆಯಷ್ಟೇ? ಆತನು ತನ್ನ ಆಯುಷ್ಯದಲ್ಲಿ ಎಷ್ಟೊಂದು ಯುದ್ಧಗಳನ್ನು ಮಾಡಬೇಕು, ಎಷ್ಟೊಂದು ದೊಡ್ಡ ದೊಡ್ಡ ಪದವಿಗಳನ್ನು ಸಂಪಾದಿಸುತ್ತ ಹೋಗಬೇಕು ಎಂಬುದನ್ನು ಕುರಿತು ಕಲ್ಪಿಸಿದ್ದನೆಂಬುದನ್ನು ಮನಸ್ಸಿನಲ್ಲಿ ತಂದರೆ, ಆತನು ಅಪಘಾತದ ಮರಣಕ್ಕೆ ಇಷ್ಟು ಯಾಕೆ ಹೆದರುತ್ತಿದ್ದನೆಂಬುವ ಬಗ್ಗೆ ಯಾರಿಗಾದರೂ ಆಶ್ಚರ್ಯವಾಗಬಹುದಾಗಿದೆ. ಆದರೆ ಹೀಗೆ ಆಶ್ಚರ್ಯಪಡುವ ಕಾರಣವಿಲ್ಲ. ''ಒಳ್ಳೆಯ ಕುದುರೆಗೊಂದು ಗೋಮುವೆಂ''ಬಂತೆ ಒಳ್ಳೆಯ ಜನರಲ್ಲಿ ಒಂದೊಂದು ಗೋಮುವಿರುವದುಂಟು. ಅರ್ಜುನ ಕರ್ಣರೆಂಬ ಭಾರತೀಯ ಮಹಾಯೋಧರಲ್ಲಿಯೂ ಒಂದೊಂದು ಗೋಮುವಿತ್ತೆಂಬುದನ್ನು ವಾಚಕರು ನೆನಪಿನಲ್ಲಿ ತಂದುಕೊಳ್ಳಬೇಕು. ಜರಿದಂತೆ ಅರ್ಜುನನ ಪರಾಕ್ರಮವೂ ಹೊಗಳಿದಂತೆ ಕರ್ಣನ

ಪರಾಕ್ರಮವೂ ಹೆಚ್ಚುತ್ತಿದ್ದವೆಂಬುದನ್ನು ವಾಚಕರು ಅರಿತಿರಬಹುದು. ಇದರ ವಿರುದ್ಧ ಸ್ಥಿತಿಯೊದಗಿದಾಗ, ಅಂದರೆ ಅರ್ಜುನನನ್ನು ಹೊಗಳಿದಾಗ, ಕರ್ಣನನ್ನು ಬೊಗಳಿದಾಗ ಅವರವರ ಪರಾಕ್ರಮಗಳು ಕುಗ್ಗುತ್ತಿದ್ದವು. ಅದರಂತೆ ರಾಮರಾಜನಲ್ಲಿಯಾದರೂ ಅಪಮೃತ್ಯುವಿನ ಭಯದ ಖೋಡಿಚಾಳಿಯೊಂದು ಇತ್ತು, ಮೇಹೆರ್ಜಾನಳು ಅಂದಂತೆ, ಈಗ ತಾನು ಪುಷ್ಕಣಿರಲ್ಲಿ ಮುಣುಗಿ ಹೋದರೆ ತನ್ನ ಮಹತ್ವಾಕಾಂಕ್ಷೆಯೆಲ್ಲ ವ್ಯರ್ಥವಾಗುವದೆಂಬ ವಿಚಾರದಿಂದ ಆ ತರುಣವೀರನು ಭಯಭೀತನಾದನು; ಆದರೂ ಆತನು ಅದನ್ನೇನು ಹೊರಗೆ ತೋರಗೊಡದೆ ಮೇಹರ್ಜಾನಳನ್ನು ಕುರಿತು–

ರಾಮಾರಾಜ–ಶಾಬಾಸ! ನಿನ್ನ ಇಚ್ಛೆಯು ವಿಲಕ್ಷಣವಾದದ್ದೆಂಬದರಲ್ಲೇನೂ ಸಂಶಯವಿಲ್ಲ; ಆದರೆ ಅದು ಪೂರ್ಣವಾಗಲಿಕ್ಕೆ ದೊಡ್ಡದೊಂದು ಪ್ರತಿಬಂಧವಿರುತ್ತದಲ್ಲ! ಆ ಪ್ರತಿಬಂಧವು ಹ್ಯಾಗೆ ದೂರವಾಗಬೇಕು?

ಮೇಹರ್ಜಾನ–ಅದೇನು ಪ್ರತಿಬಂಧ?

ರಾಮರಾಜ–ಪ್ರತಿಬಂಧವಿಷ್ಟೇ, ನನಗೆ ಚೆನ್ನಾಗಿ ಈಸಲಿಕ್ಕೆ ಬರುತ್ತದೆ. ಇದಲ್ಲದೆ ದುರ್ಯೋಧನನ ಹಾಗೆ ನನಗೆ ಜಲಸ್ತಂಭನ ವಿದ್ಯೆಯು ಬರುವುದು. ಪಾತಾಳದವರೆಗೆ ಮುಣುಗಿದರೂ ನಾನು ತಿರುಗಿ ಮೇಲಕ್ಕೆ ಬರುವೆನಲ್ಲದೆ, ನಿನ್ನನ್ನು ಸಹ ಮುಣುಗಿಗೊಡದೆ ಮೇಲಕ್ಕೆ ತರುವೆನು! ಮೇಹೇರ, ಹೀಗೆ ನಿನ್ನನ್ನು ಕಳಕೊಳ್ಳಬೇಕೆಂದು ನಾನು ಈ ಮೊದಲೆ ಹುಲಿಯ ಬಾಯೊಳಗಿಂದ ನಿನ್ನನ್ನು ಬಿಡಿಸಿಕೊಂಡು ಬಂದಿರುವೇನೋ ಏನು?

ಇದನ್ನು ಕೇಳಿ ಸರಳ ಹೃದಯದ ಮೇಹೆರ್ಜಾನಳು ಮನಃಪೂರ್ವಕವಾಗಿ ನಕ್ಕಳು. ಆಕೆಯು ಪ್ರೇಮದಿಂದ ರಾಮರಾಜನನ್ನು ಕುರಿತು–

ಮೇಹರ್ಜಾನ–ಒಮ್ಮೆ ನನ್ನ ಜೀವವನ್ನು ಬದುಕಿಸಿದುದಕ್ಕಾಗಿ ನನ್ನ ದೇಹವನ್ನೇ ತಮಗೆ ಅರ್ಪಿಸಿರುವೆನು. ಇನ್ನೊಮ್ಮೆ ನನ್ನ ಜೀವವನ್ನು ಬದುಕಿಸಿದರೆ ತಮಗೆ ಕೊಡುವದಕ್ಕಾಗಿ ನನ್ನ ಬಳಿಯಲ್ಲಿ ಏನು ಇದೆ?

ರಾಮರಾಜ–ಏನೂ ಇಲ್ಲದಿದ್ದರೆ ಇಲ್ಲ; ನನ್ನಿಂದ ಏನಾದರೂ ಅಪರಾಧವಾದರೆ ಅದನ್ನು ಕ್ಷಮಿಸಲಿಕ್ಕೂ, ನನಗೇನಾದರೂ ಪ್ರಾಣಸಂಕಟ ಒದಗಿ ಬಂದಾಗ, ಶಕ್ಯವಿದ್ದರೆ ನನ್ನನ್ನು ಬದುಕಿಸಲಿಕ್ಕೂ ನಿನಗೆ ಬರುವದಿಲ್ಲೇನು? ಅಷ್ಟು ಮಾಡಿದರೆ ಸಾಕು.

ಮೇಹರ್ಜಾನ— (ಗಾಂಭೀರ್ಯದಿಂದ) ಸರಿ ಸರಿ, ಇದೊಳ್ಳೆಯ ಮಾತು. ತಾವು ತಪ್ಪು ಮಾಡುವದೂ ಬೇಡ, ನಾನು ಕ್ಷಮಿಸುವದೂ ಬೇಡ; ಅದರಂತೆ ತಾವು ಪ್ರಾಣಸಂಕಟಕ್ಕೆ ಗುರಿಯಾಗುವದೂ ಬೇಡ, ನಾನು ಬದುಕಿಸುವದೂ ಬೇಡ. ಸಾಕು, ಇನ್ನು ಈ ಮಾತುಗಳನ್ನೇ ಮರೆತು ಬಿಡೋಣ!

ರಾಮರಾಜ— ಹಾಗೇ ಆಗಲಿ! ಮೇಹೇರ, ನಾನು ಬೆಳಗಾದ ಕೂಡಲೆ ವಿಜಯನಗರಕ್ಕೆ ಹೋಗಬೇಕಾಗಿದೆ; ಹೀಗೆ ಎಷ್ಟು ಹೊತ್ತು ನೌಕೆಯಲ್ಲಿ ಕುಳಿತುಕೊಳ್ಳಬೇಕೆನ್ನುತ್ತೀ?

ಮೋಹಜರ್ಬಾನ— ಏನು? ಬೆಳಗಾದ ಕೂಡಲೇ ಹೋಗುವಿರಾ? ಎಂಟು ದಿವಸ ದರ್ಶನವಿಲ್ಲದಿರುವಾಗ ಒಂದೆರಡು ದಿನವಾದರೂ ತಾವು ಇಲ್ಲಿ ಇರದಿದ್ದರೆ ನನಗೆ ಸಮಾಧಾನ ವಾಗಲಾರದು. ನಾನಂತು ನಾಳೆ ಹೋಗಗೊಡುವದಿಲ್ಲ.

ರಾಮರಾಜ—ಪ್ರಿಯೇ, ಮೋಹೇರ, ಕೃಷ್ಣದೇವರಾಜರು ನನ್ನನ್ನು ಯಾವಾಗ ಕರಿಸಿಯಾರು ಯಾವಾಗ ಕರಸಲಿಕ್ಕಿಲ್ಲೆಂಬದರ ನಿಯಮವಿಲ್ಲೆಂದು ನಾನು ಆಗಲೇ ನಿನಗೆ ಹೇಳಲಿಲ್ಲವೇ?

ಮೋಹಜರ್ಬಾನ— ಹಾಗಿದ್ದರೆ ನನ್ನನ್ನು ಅಲ್ಲಿಗೆ ಕರಕೊಂಡು ಹೋಗಿ ಬಿಡಿರಿ; ಸುಮ್ಮನೆ ಎಡತಾಕುವದೇಕೆ? ಅಲ್ಲಾವುದ್ದಿನ ಬಾದಶಹನು ಉತ್ತರ ಹಿಂದುಸ್ಥಾನದಲ್ಲಿ ರಜಪೂತ ಕನ್ನಿಕೆಯನ್ನು ತನ್ನ ಪಟ್ಟ ರಾಣಿಯಾಗಿ ಮಾಡಿಕೊಂಡಂತೆ, ತಾವು ನನ್ನನ್ನು ಪಟ್ಟರಾಣಿಯಾಗಿ ಮಾಡಿಕೊಂಡಿರುವಿರಷ್ಟೆ?

ರಾಮರಾಜ— ಹೋ ಹೋ! ಮಾಡಿಕೊಂಡಿರುವೆನು. ಅದರಲ್ಲಿ ಸಂಶಯವೇನು? ಆದರೆ ಕೃಷ್ಣದೇವರಾಯರ ಮನಸ್ಸು ನೋಡಿ ಅವರ ಒಪ್ಪಿಗೆಯನ್ನು ಪಡೆದ ಬಳಿಕ ಅದನ್ನು ಪ್ರಸಿದ್ಧ ಗೊಳಿಸಬೇಕಾಗಿದೆ. ಅಲ್ಲಿಯವರೆಗೆ ಪ್ರಸಿದ್ಧಮಾಡಿ ಪ್ರಯೋಜನವೇನು?

ಸಂಭಾಷಣದ ಈ ವಿಷಯವು ರಾಮರಾಜನಿಗೆ ತೀರ ಅಪ್ರಿಯವಾಗಿದ್ದಂತೆ ತೋರಿತು. ಆತನು ತನ್ನ ಮಾತು ಮುಗಿದ ಕೂಡಲೆ ಮೋಹಜರ್ಬಾನಳನ್ನು ಕುರಿತು— ಮೋಹೇರ, ಇಂದಿನ ರಾತ್ರಿಯನ್ನು ಇಲ್ಲಿ ನೌಕೆಯಲ್ಲಿಯೇ ಕುಳಿತು ಕಳೆಯಬೇಕೆಂದು ನಿನ್ನ ಮನಸ್ಸಿನಲ್ಲಿದ್ದರೆ, ಅದಕ್ಕೆ ನನ್ನ ಪ್ರತಿಬಂಧವಿಲ್ಲ, ಆದರೆ ಆಗಲೆ ಹಾಡಿದಂತೆ ಒಂದು ಸುಂದರ ಚೀಜನ್ನಾದರೂ ಹಾಡು; ಇಲ್ಲವೆ ನಾನು ನಿನಗೆ ಕಲಿಸಿರುವ ಆ ಅಷ್ಟಪದಿಯನ್ನಾದರೂ ಅನ್ನು, ಅಥವಾ ನಿಮ್ಮ ಪಾರಸೀ ಭಾಷೆಯೊಳಗಿನ ಒಂದು ಗಝಲವನ್ನು ಅಂದರೂ ಚಿಂತೆಯಿಲ್ಲ; ಆದರೆ ನಮ್ಮ ಅಷ್ಟಪದಿ ಯಲ್ಲಿರುವ ಸ್ವಾರಸ್ಯವೇನೂ ನಿಮ್ಮ ಗಝಲದಲ್ಲಿ ಬರಲಾರದು, ಅನ್ನಲು ಮೋಹಜರ್ಬಾನಳು ನಕ್ಕು— ಅವರವರದು ಅವರವರಿಗೆ ಸ್ವಾರಸ್ಯವೆಂಬ ಮಾತು ಎಲ್ಲ ಕಡೆಗೂ ನಿಜವಾಗುತ್ತದೆಂದು ಹೇಳಲಿಕ್ಕಾಗುವದಿಲ್ಲ, ಎಂದು ನುಡಿದು, ಪತಿಯನ್ನು ಆಲಿಂಗಿಸಿ, ನೀವು ಕಲಿಸಿದ್ದಲ್ಲದೆ ನಾನೇ ಕಲಿತದ್ದೊಂದು ಅಷ್ಟಪದಿಯನ್ನು ಅನ್ನುವೆನು, ಎಂದು ಹೇಳಿ ಕೆಳಗೆ ಬರೆದ ಅಷ್ಟಪದಿಯನ್ನು ಅಂದಳು.

ನಿಂದತಿ ಚಂದನಾಮಿಂದುಕಿರಣ ಮನುವಿಂದತಿ ಸ್ವೇದಮಧಿರಮ್ ।
ವ್ಯಾಲನಿಲಯಮಿಲನೇನ ಗರಲಮಿವ ಕಲಯತಿ ಮಲಯ ಸಮೀರಮ್ ।
ಮಾಧವಮನಸಿಜ ವಿಶಿಖಭಯಾದಿವ ಭಾವನಯಾ ತ್ವಯಿ ಲೀನಾ ।
ಸಾ ವಿರಹೆ ತವ ದೀನಾ ॥ ಧೃ ॥

ಮೋಹಜರ್ಬಾನಳ ಈ ಅಷ್ಟಪದಿಯ ಮಂಜುಲ ಗಾನಧ್ವನಿಯು ಕುಂಜವನದಲ್ಲಿ ಪುನಃ ತುಂಬಿಹೋಯಿತು; ಆದರೆ ಅಪಘಾತಕ್ಕೆ ಹೆದರಿದ್ದ ರಾಮರಾಜನಿಗೆ ಅದರಿಂದ ಸುಖವಾಗಲಿಲ್ಲ, ತಾನು ಎಲ್ಲಿ ನೀರಲ್ಲಿ ಮುಣುಗಿ ಸತ್ತೇನೋ ಎಂಬ ಭಯದಿಂದ ಆತನು

ಪುಷ್ಕರಣಿಯ ಮಧ್ಯದಲ್ಲಿ ನಿಲ್ಲಲಾರದೆ ಧ್ವಜಸ್ತಂಭಕ್ಕೆ ಕಟ್ಟಿದ್ದ ನೌಕೆಯನ್ನು ಬಿಚ್ಚಿ ಅದನ್ನು ದಂಡೆಯ ಕಡೆಗೆ ಸಾಗಿಸಿದನು. ಗಾನಲೋಲುಪಳಾದ ಮೇಹರ್ಜಾನಳಿಗೆ ಇದು ಗೊತ್ತಾಗಲಿಲ್ಲ. ತಾನು ಹಿಡಿದಿದ್ದ ಹಸ್ತವನ್ನು ರಾಮರಾಜನು ಯಾವಾಗ ಬಿಡಿಸಿಕೊಂಡನೆಂಬದರ ಸ್ಮರಣವೂ ಆಕೆಗೆ ಉಳಿಯಲಿಲ್ಲ. ನೌಕೆಯು ದಂಡೆಗೆ ಹತ್ತಿದ ಕೂಡಲೆ ರಾಮರಾಜನು— ಪ್ರಿಯೇ, ಮೇಹೇರ, ಇನ್ನು ಇಲ್ಲಿಯ ಶೀತಹವೆಯು ನಿನಗೆ ತಡೆಯಲಿಕ್ಕಿಲ್ಲ. ನಡೆ, ಮಂದಿರಕ್ಕೆ ಹೋಗೋಣ, ಎಂದು ನುಡಿದು, ಒಂದು ಸಣ್ಣ ಹುಡುಗಿ ಯನ್ನು ಒತ್ತಾಯದಿಂದ ಕೈ ಹಿಡಿದು ಕರೆಯೊಯ್ಯುವಂತೆ ಮಂದಿರದ ಕಡೆಗೆ ಆಕೆಯನ್ನು ಕರಕೊಂಡು ನಡೆದನು. ಕುಂಜವನವನ್ನು ಬಿಟ್ಟು ಬಂದು, ಮಂದಿರದ ಪಾವಟಿಗೆಗಳನ್ನು ಹತ್ತುವಾಗ ಮೇಹರ್ಜಾನಳು ಕಣ್ಣೀರು ಸುರಿಸುತ್ತ ರಾಮರಾಜನನ್ನು ಬಿಗಿಯಾಗಿ ಅಪ್ಪಿಕೊಂಡು—ಪ್ರಿಯಕರಾ, ಯಾವ ಕಾರಣದಿಂದಲೋ ಅದನ್ನು ನಾನು ಹೇಳಲಾರೆನು; ಆದರೆ ಈ ಕುಂಜವನದಿಂದ ಹಾಗು ಪುಷ್ಕರಣಿಯಿಂದ ಒದಗಿದ ಇಂದಿನಂಥ ಸುಖವು ಇನ್ನು ತಿರುಗಿ ನನಗೆ ಲಭಿಸಲಾರದೆಂಬ ಹಾಗೆ ತೋರುತ್ತದೆ; ಆದ್ದರಿಂದ ನಾವಿಬ್ಬರು ದಂಡೆಯ ಕಡೆಗೆ ಬರುತ್ತಿದ್ದಾಗ ಪುಷ್ಕರಣಿಯಲ್ಲಿ ಮುಣುಗಿ ಹೋಗಿದ್ದರೆ ಬಹಳ ನೆಟ್ಟಗಾಗುತ್ತಿತ್ತೆಂದು ನನ್ನ ಮನಸ್ಸಿನಲ್ಲಿ ಕಟಿಯುತ್ತಿರುವದು, ಎಂದಳು. ಅದನ್ನು ಕೇಳಿದ ಕೂಡಲೆ ರಾಮರಾಜನ ಹೃದಯವು ಮತ್ತೆ ಕಂಪಿಸಹತ್ತಿತು. ಆತನ ಮನಸ್ಸಿಗೆ ಮೊದಲಿನಂತೆ ಹ್ಯಾಗೆ ಹ್ಯಾಗೋ ಆಗಹತ್ತಿತು. ತಾನು ಪುಷ್ಕರಣಿಯಿಂದ ಹೊರಟು ಮಂದಿರಕ್ಕೆ ಬಂದು ಮುಟ್ಟಿದ್ದನ್ನಷ್ಟೆ, ಎಂದು ಆತನು ಸ್ಮರಣಮಾಡಿಕೊಂಡನು. ಈ ಮಾತಿಗೆ ನಂಬಿಗೆಯನ್ನು ಮಾಡಿಕೊಳ್ಳುವದಕ್ಕಾಗಿಯೋ ಅನ್ನುವಂತೆ ಆತನು ಸುತ್ತಮುತ್ತಲು ನೋಡಿ, ಕಾಲುಬುಡದಲ್ಲಿಯ ಪಾವಟಿಗೆಗಳನ್ನು ನೋಡಿದನು. ಮನಸ್ಸಿನ ನಂಬಿಗೆಯಾದ ಮೇಲೆ ಆತನು ಮೇಹರ್ಜಾನಳನ್ನು ಕುರಿತು—ನೀನು ಸಂಜೆಯಿಂದ ಇಷ್ಟು ಹೊತ್ತಿನವರೆಗೆ ಕುಂಜವನದಲ್ಲಿಯೂ, ಪುಷ್ಕರಣಿಯಲ್ಲಿಯೂ ಕಾಲಹರಣಮಾಡಿದ್ದರಿಂದ ನಿನ್ನ ಚಿತ್ತಕ್ಕೆ ಭ್ರಮೆಯಾದಂತೆ ತೋರುತ್ತದೆ. ಆದ್ದರಿಂದ ಶಯನ ಗೃಹಕ್ಕೆ ಹೋಗಿ ಸ್ವಸ್ಥವಾಗಿ ಮಲಗಿಕೊಳ್ಳು ನಡೆ, ಎಂದು ಹೇಳಿ ಆಕೆಯನ್ನು ಶಯನಗೃಹಕ್ಕೆ ಕರೆದೊಯ್ದು ಪಲ್ಲಂಗದ ಮೇಲೆ ಮಲಗಿಸಿ, ತಾನು ತಲೆಗಿಂಬಿಗೆ ಕುಳಿತುಕೊಂಡು ಆಕೆಯ ತಲೆಯನ್ನು ತನ್ನ ತೊಡೆಯ ಮೇಲೆ ಇಟ್ಟುಕೊಂಡನು. ತನಗೆ ನಿದ್ರೆ ಹತ್ತಿದ ಬಳಿಕ ರಾಮರಾಜನು ಹೇಳದೆ ಕೇಳದೆ ವಿಜಯನಗರಕ್ಕೆ ಹೋಗಬಹುದೆಂದು ಶಂಕಿಸಿ, ಮೇಹರ್ಜಾನಳು ರಾಮರಾಜನ ಬಲಗೈಯ್ಯನ್ನು ತನ್ನ ಎರಡೂ ಕೈಗಳಿಂದ ಗಟ್ಟಿಯಾಗಿ ಹಿಡಿದು ಕೊಂಡಳು. ನಿದ್ರೆ ಮಾಡಬಾರದೆಂಬ ನಿಶ್ಚಯದಿಂದ ಆಕೆಯು ಕಣ್ಣುತೆರೆದು ಮಲಗಿಕೊಂಡಳು; ಆದರೆ ಆ ವಿಶಾಲಾಕ್ಷಿಯ ಮೇಲೆ ಸ್ವಲ್ಪಹೊತ್ತಿನಲ್ಲಿಯೇ ನಿದ್ರೆಯ ಅಮಲು ಕೂತು, ಆಕೆಯು ಕಣ್ಣುಗಳನ್ನು ಮುಚ್ಚಿಗಡದ್ದು ನಿದ್ರೆ ಮಾಡಹತ್ತಿದಳು. ಇದನ್ನು ನೋಡಿ ರಾಮರಾಜನಿಗೆ ಬಹಳ ಸಮಾಧಾನವಾಯಿತು. ಆತನು ಬೇಗನೆ ವಿಜಯನಗರಕ್ಕೆ ಹೋಗಬೇಕಾಗಿತ್ತು; ಆದ್ದರಿಂದ ಆತನು ಮೆಲ್ಲನೆ ತನ್ನ ಕೈಗಳನ್ನು ಬಿಡಿಸಿಕೊಂಡು, ಮೇಹರ್ಜಾನಳು ಎಲ್ಲಿ ಎಚ್ಚರಿಯುವಳೋ, ಎಂಬ ಭಯದಿಂದ ಸ್ವಲ್ಪ ಹೊತ್ತು ಸುಮ್ಮನೆ ಕುಳಿತುಕೊಂಡನು. ಆಮೇಲೆ ತನ್ನ ತೊಡೆಯನ್ನು ಮೆಲ್ಲನೆ ಒಂದೊಂದೇ ಬೆರಳು

ಹಿಂದಕ್ಕೆ ಸರಿಸಿಕೊಳ್ಳುತ್ತ ಸ್ವಲ್ಪ ಹೊತ್ತು ಸುಮ್ಮನೆ ಕೂಡ್ರುತ್ತ ಕಡೆಗೆಯೊಮ್ಮೆ ಮೆಹರ್ಜಾನಳ ತಲೆಯನ್ನು ಬಹು ಸೂಕ್ಷ್ಮವಾಗಿ ಎತ್ತಿತಲೆಗಿಂಬಿನ ಮೇಲೆ ಇಟ್ಟು ತನ್ನ ತೊಡೆಯನ್ನು ತಕ್ಕೊಂಡನು. ಮೇಹರ್ಜಾನಳಿಗೆ ಎಚ್ಚರವಾಗದಿರುವದನ್ನು ನೋಡಿ ಆತನಿಗೆ ಬಹಳ ಸಮಾಧಾನವಾಯಿತು. ಆತನು ಮತ್ತೆ ಕೆಲವು ಹೊತ್ತು ಸುಮ್ಮನೆ ಕುಳಿತುಕೊಂಡು ಮೇಹರ್ಜಾನಳಿಗೆ ಎಚ್ಚರವಾಗ ದಿರುವದನ್ನು ಮನಗಂಡನು. ಆ ಮೇಲೆ ಆತನು ಮಂಚವನ್ನು ಇಳಿದು ಶಯನಗೃಹದಿಂದ ಹೊರಗೆ ಹೊರಟು ಪ್ರಯಾಣವನ್ನು ಬೆಳೆಸಿದವನಂತೆ ಮಾರ್ಜೀನೆಯ ಬಳಿಗೆ ಹೋದನು.

ಮೇಹರ್ಜಾನಳ ಮೇಲೆ ತುಂಬಾ ವಾತ್ಸಲ್ಯವುಳ್ಳ ಮಾರ್ಜೀನೆಯು ಆಗ ಮತ್ತೊಂದು ಕೋಣೆಯಲ್ಲಿ ಏನೋ ಆಲೋಚಿಸುತ್ತ ಕಣ್ಣಿಗೆ ಕಣ್ಣು ಹಚ್ಚದೆ ತನ್ನ ಹಾಸಿಗೆಯ ಮೇಲೆ ಹೊರಳಾಡುತ್ತ ಮಲಗಿಕೊಂಡಿದ್ದಳು. ರಾಮರಾಜನು ಅಕಸ್ಮಾತ್ತಾಗಿ ತನ್ನ ಬಳಿಗೆ ಬರುವದನ್ನು ನೋಡಿ ಆಕೆಯು ಚಟ್ಟನೆ ಎದ್ದು ನಿಂತು—ಇದೇನು? ಮಹಾರಾಜರು ಇಷ್ಟರೊಳಗೆ ಮೇಹರ್ಜಾನಳ ಬಳಿಯಿಂದ ಹೊರಟು ಯಾವ ಕಡೆಗೆ ಹೋಗುವದು! ಮೇಹರ್ಜಾನಳು ಮಹಾರಾಜರನ್ನು ಕಳಿಸಲಿಕ್ಕೆ ಬಾರದಿರುವದನ್ನು ನೋಡಿದರೆ, ಆಕೆ ನಿದ್ದೆ ಹತ್ತಿ ಮಲಗಿಕೊಂಡ ಹಾಗೆ ತೋರುತ್ತದೆ. ತರುಣಿಯನ್ನು ವಂಚಿಸಿ ಹೀಗೆ ಹೋಗುವದು ಪುರಷರಿಗೆ ಸಲ್ಲದು. ಮಹಾರಾಜರೇ, ಮೇಹರ್ಜಾನಳು ಅಭಿಮಾನ ಸ್ವಭಾವದವಳು. ಹೀಗೆ ತಾವು ಮೇಲೆ ಮೇಲೆ ಆಕೆಯನ್ನು ವಂಚಿಸಿ ಹೋಗುವದರಿಂದ ವಿಕಲ್ಪವನ್ನು ಎಣಿಸಿಯಾಳು. ಕಾರ್ಯ ನಿಮಿತ್ಯವಾಗಿ ನಾಳೆ ಹೋಗಲೇ ಬೇಕಾಗಿರುವದೆಂದು ನೀವು ಹೇಳಿದರೆ, ಆಕೆಯು ಬೇಡೆನ್ನುವಳೋ? ಮೇಹರ್ಜಾನಳು ಇಂದಿನ ಇಡಿಯ ರಾತ್ರಿ ಕಣ್ಣಿಗೆ ಕಣ್ಣು ಹಚ್ಚಿರುವದಿಲ್ಲ. ತಮ್ಮ ಎಂಟು ದಿನದ ವಿಯೋಗದಿಂದ ಆಕೆ ಒಂದೇ ಸವನೆ ಚಡಪಡಿಸುತ್ತಿರುವಾಗ, ಇಂದು ತಮ್ಮ ದರ್ಶನವಾಗಿ ಆಕೆಗೆ ಸ್ವಲ್ಪ ಸಮಾಧಾನವಾಗಿದೆ. ಇಂಥ ಸ್ಥಿತಿಯಲ್ಲಿ ತಾವು ಗಾಯದ ಮೇಲೆ ಬರೆಕೊಟ್ಟಂತೆ ಮಾಡಿ ಆಕೆಯನ್ನು ವ್ಯಥೆಪಡಿಸಬಾರದು. ಆಕೆಯ ಕೋಮಲ ಹೃದಯವನ್ನು ನಾನು ಪೂರಾ ಬಲ್ಲೆನು. ಆಕೆಯು ಬಹು ಸುಜನೆಯು, ಲಜ್ಜಾಶೀಲಳು, ಒಂದು ಗುಪ್ತವಾದ ಸಂಗತಿಯನ್ನು ನಿಮ್ಮ ಮುಂದೆ ಹೇಳಬೇಕು—ಹೇಳಬೇಕು ಎಂದು ಈಗ ಒಂದು ತಿಂಗಳಿಂದ ಆತುರಪಟ್ಟು, ಕಡೆಗೆ ಲಜ್ಜೆಯ ಮೂಲಕ ಅದನ್ನು ಹೇಳಲಾರದೆ ಸುಮ್ಮನೆ ಇರುತ್ತ ಬಂದಿರುವಳು. ಆ ಗುಪ್ತ ಸಂಗತಿಯನ್ನು ಆಕೆಯ ಮುಖದಿಂದ ಕೇಳಿದರೆ ನಿಮಗೆ ಬಹಳ ಆನಂದವಾದೀತು; ಆದ್ದರಿಂದ ತಾವು ವಿಜಯನಗರಕ್ಕೆ ಇಷ್ಟು ಅವಸರ ಮಾಡದೆ, ಬೆಳಗಾಗುವತನಕ ಮೇಹರ್ಜಾನಳ ಬಳಿಯಲ್ಲಿದ್ದು ಸ್ವಲ್ಪ ವಿಶ್ರಮಿಸಿರಿ. ಆಮೇಲೆ ಆಕೆಯ ಅನುಮತಿಯಿಂದ ಬೇಕಾದಲ್ಲಿಗೆ ಹೋಗಬಹುದು, ಎಂದು ಹೇಳಿದಳು. ಇತ್ತಿತ್ತ ರಾಮರಾಜನು ತನ್ನೊಡನೆ ಸರಳತನದಿಂದ ನಡಕೊಳ್ಳದೆ ತನ್ನನ್ನು ಮೋಸಗೊಳಿಸುವನೆಂಬುದು ಪ್ರೇಮದ ಮೂರ್ತಿಯಾದ ಮೇಹರ್ಜಾನಳಿಗೆ ಅಷ್ಟು ಸ್ಪಷ್ಟವಾಗಿ ಗೊತ್ತಾಗದಿದ್ದರೂ, ಮಾರ್ಜೀನೆಯು ತನ್ನ ತೀಕ್ಷ್ಣಬುದ್ಧಿಯ ಯೋಗದಿಂದ ಅದನ್ನು ಸ್ಪಷ್ಟವಾಗಿ ಅರಿತುಕೊಂಡಿದ್ದಳು; ಆದ್ದರಿಂದಲೇ ಆಕೆಯು ಹೀಗೆ ಸ್ಪಷ್ಟವಾಗಿ ಮಾತಾಡಿದಳು!

ರಾಮರಾಜನು ಮಾರ್ಜೀನೆಯ ಮಾತುಗಳನ್ನು ಕೇಳಿ ಸ್ವಲ್ಪ ಹೊತ್ತು ಸುಮ್ಮನಿದ್ದು ಆಮೇಲೆ ಆಕೆಯನ್ನು ಕುರಿತು—ಮಾರ್ಜೀನೇ, ನೀನು ವಿಲಕ್ಷಣ ಮನುಷ್ಯಳು ಕಾಣುತ್ತೀ. ನನಗೆ ಮೋಹಜರ್ಜಾನಳು ಹೊರಗಿನವಳೇ! ಪತಿ ಪತ್ನಿಯರ ಸಂಬಂಧವು ಬಿಡುವಹಾಗಿದೆಯೇ? ಅಂದ ಬಳಿಕ ನಾನು ಮೋಹಜರ್ಜಾನಳನ್ನು ಮೋಸಗೊಳಿಸಿದರೆ, ಅಥವಾ ಮೋಹಜರ್ಜಾನಳು ನನ್ನನ್ನು ಮೋಸಗೊಳಿಸಿದರೆ ವಿಕಲ್ಪವನ್ನೆಣಿಸಬಹುದೇ? ಅತಿ ವಾತ್ಸಲ್ಯದ ಮೂಲಕ ಮೋಹಜರ್ಜಾನಳ ಮಾತನ್ನು ಮೀರುವದು ನನ್ನಿಂದಾಗುವದಿಲ್ಲ. ಕೆಲಸವು ಬಹು ಸೂಕ್ಷ್ಮವಿರುವದರಿಂದ ಮೋಹಜರ್ಜಾನಳಿಗೆ ಹೇಳದೆ ನಾನು ಈಗ ವಿಜಯನಗರಕ್ಕೆ ಹೊರಟಿರುವೆನು. ಅದರಲ್ಲಿ ನೀನು ಈ ಗುಪ್ತವಾದ ಸಂಗತಿಯೆಂದು ಹೇಳಿದೆಯಲ್ಲ, ಅದು ಯಾವದೆಂಬುದನ್ನು ನೀನು ಈಗ ಹೇಳಲೇಬೇಕು. ಆ ಸಂಗತಿಯನ್ನು ಕೇಳಿ ನನ್ನ ಮನಸ್ಸಿಗೆ ಆನಂದವಾದ ಪಕ್ಷದಲ್ಲಿ ನಾನು ನಾಳಿನ ದಿನ ಇಲ್ಲಿಯೇ ಮೋಹಜರ್ಜಾನಳ ಬಳಿಯಲ್ಲಿಯೇ ಇರುವೆನು. ಹುಂ, ಹೇಳು, ಗುಪ್ತ ಸಂಗತಿ ಯಾವುದು ಹೇಳು.

ತಾನು ಹೇಳುವ ಗುಪ್ತಮಾತನ್ನು ಕೇಳಿ ರಾಮರಾಜನು ಸಂತೋಷಪಟ್ಟು, ಈಗಲೇ ವಿಜಯನಗರಕ್ಕೆ ಹೋಗುವದನ್ನು ರಹಿತ ಮಾಡುವನೆಂದು ಮಾರ್ಜೀನೆಯು ತಿಳಿದಿದ್ದಳು. ಆಕೆಯು ರಾಮರಾಜನನ್ನು ಕುರಿತು ಲಜ್ಜೆಯಿಂದ—ಮಹಾರಾಜ, ಮೋಹಜರ್ಜಾನಳು ಈ ನಾಲ್ಕು ತಿಂಗಳು ಗರ್ಭಿಣಿಯಿದ್ದಾಳೆ. ಆಕೆಗೆ ಒಂದೊಂದೇ ಬಯಕೆಗಳು ಆಗ ಹತ್ತಿರುವವು. ಆಕೆಯು ಈ ವರ್ತಮಾನವನ್ನು ತಾನೇ ಬಾಯಿಬಿಟ್ಟು ನಿಮ್ಮ ಮುಂದೆ ಹೇಳಲಾರದೆ, ನನಗೆ ಹೇಳೆಂದು ಹೇಳಿದ್ದಳು; ಆದರೆ ಒತ್ತಾಯದಿಂದ ಆಕೆಯ ಮುಖದಿಂದ ನೀವು ಕೇಳುವದರಿಂದ ನಿಮಗೆ ಬಹಳ ಸಂತೋಷವಾದೀತು, ಎಂದು ಹೇಳಿ ರಾಮರಾಜನ ಭಾವವನ್ನು ತಿಳಿದು ಕೊಳ್ಳುವದಕ್ಕಾಗಿ ಆತನ ಮುಖವನ್ನು ನೋಡಹತ್ತಿದಳು; ಆದರೆ ಈ ಸುದ್ದಿಯನ್ನು ಕೇಳಿ ರಾಮರಾಜನಿಗೆ ಸಂತೋಷವಾಗುವದರ ಬದಲು ಖೇದವಾದಂತೆ ತೋರಿತು! ಆತನು ಉಪಚಾರಕ್ಕಾದರೂ ಒಂದು ಒಳ್ಳೆಯ ಮಾತಾಡದೆ, ಅರಗಿನ ಮುದ್ರೆಹಾಕಿದ ಎರಡು ಚೀಲಗಳನ್ನು ಮಾರ್ಜೀನೆಯ ಕೈಯಲ್ಲಿ ಕೊಟ್ಟು, ಇವನ್ನು ಮೋಹಜರ್ಜಾನಳಿಗೆ ಕೊಡೆಂದು ಹೇಳಿ ಮಂದಿರದಿಂದ ಹೊರಬಿದ್ದನು. ಆತನಿಗೆ ಮಂತ್ರಿ ಪದವು ದೊರೆಯುವದಕ್ಕೂ, ಆತನು ಕೃಷ್ಣದೇವರಾಜರ ಅಳಿಯನಾಗುವದಕ್ಕೂ, ಮೋಹಜರ್ಜಾನಳು ದೊಡ್ಡ ವಿಘ್ನವಾದದ್ದರಿಂದ, ಮೋಹಜರ್ಜಾನಳೊಡನೆ ಆಕೆಯ ಗರ್ಭವೂ ಆತನಿಗೆ ಮತ್ತಿಷ್ಟು ವಿಘ್ನವಾಗಿ, ಅದು ಆತನ ಅಸಂತೋಷಕ್ಕೆ ಕಾರಣವಾಯಿತು. ಅದರಿಂದ ಕೇವಲ ಮಹತ್ವಾಕಾಂಕ್ಷೆಯಿಂದ ಅಂಧನಾದ ಆತನು ಒಬ್ಬ ಅನಾಥ ಅಬಲೆಗೆ ಕೊಟ್ಟ ವಚನವನ್ನು ಮರೆತು ಕೃತಘ್ನತೆಯಿಂದ ಕುದುರೆಯನ್ನು ಹತ್ತಿದನು. ಆಗ ಅತ್ತ ಮೋಹಜರ್ಜಾನಳನ್ನು ಕನಸಿನಲ್ಲಿ— ಮಹಾರಾಜರೇ, ಈ ದಿನ ನಾವಿಬ್ಬರೂ ಪುಷ್ಕರಣಿಯಲ್ಲಿ ಮುಣುಗಿ ಹೋದರೆ, ನೆಟ್ಟಗಾದೀತು. ಎಂದು ಕನಕರಿಸುತ್ತಿರಲು, ಇತ್ತ ರಾಮರಾಜನು ಅದೇ ಅಪಘಾತದ ನೆನಪಿನಿಂದ ಭಯಗೊಳುತ್ತ ಕುದುರೆಯನ್ನು ಮುಂದಕ್ಕೆ ನೂಕಿದನು.

ಮೇಹರ್ಜಾನಳು ಸ್ವಪ್ನದಲ್ಲಿ ಹಲವು ಸಂಗತಿಗಳನ್ನು ನೋಡಹತ್ತಿದ್ದಳು. ಆಕೆ ಒಮ್ಮೆ ಕೈಗಳನ್ನು ಮೇಲಕ್ಕೆ ಏನೋ ತೋರಿಸುವಂತೆ ಮಾಡುವಳು. ಒಮ್ಮೆ ಏನೋ ಒಟಗುಟ್ಟುವಳು, ಒಮ್ಮೆ ಆಕೆಯ ತುಟಿಗಳಷ್ಟೇ ಅಲ್ಲಾಡುವವು. ಒಮ್ಮೆ ಆಕೆಯು ಅತ್ತಹಾಗೆ ಮಾಡುವಳು, ಒಮ್ಮೆ ನಗುವಳು. ಹೀಗಾಗುತ್ತಾಗುತ್ತ ಆಕೆಯ ಮುಖದಲ್ಲಿ ಭಯದ ಚಿಹ್ನವು ತೋರಹತ್ತಿತು. ಆಕೆಯು ಪಲ್ಲಂಗದ ತುದಿಯನ್ನು ಗಟ್ಟಿಯಾಗಿ ಹಿಡಿಯಹತ್ತಿದಳು. ಆ ಮೇಲೆ ಆಕೆಯು ಒಮ್ಮಿಂದೊಮ್ಮೆ ಚಿಟ್ಟ ಚಿಟ್ಟನೆ ಚೀರುತ್ತ ದೊಪ್ಪನೆ ಮಂಚದ ಕೆಳಗೆ ಕಡಕೊಂಡು ಬಿದ್ದಳು. ಆಕೆಯು ಚೀರಿದ್ದು ಮಾರ್ಜೀನೆಯ ಕಿವಿಗೆ ಬೀಳಲು, ಆಕೆಯು ಗಾಬರಿಯಾಗಿ ಮೇಹರ್ಜಾನಳ ಕೋಣೆಯೊಳಗೆ ಬಂದಳು. ಮಾರ್ಜೀನೆಯು ರಾಮರಾಜನನ್ನು ಅದೇ ಕಳಿಸಿ ಬರುತ್ತಿದ್ದಳು. ಆಕೆಯ ಪಲ್ಲಂಗದ ಕೆಳಗೆ ಅಸ್ತವ್ಯಸ್ತವಾಗಿ ಬಿದ್ದಿದ್ದ ಮೇಹರ್ಜಾನಳನ್ನು ನೋಡಿ ವ್ಯಸನಪಟ್ಟು— ''ಅವ್ವಾ ಮೇಹರ್ಜಾನ ಹೀಗೆ ಯಾಕೆ ಮಾಡುವೆಯಮ್ಮಾ'' ಎಂದು ಮೇಹರ್ಜಾನಳನ್ನು ಹೆಸರುಗೊಂಡು ಕರೆಯುತ್ತ ಮಮತೆಯಿಂದ ಉಪಚರಿಸಹತ್ತಿದಳು. ಆಕೆಯು, ಬಳಿಯಲ್ಲಿರುವ ತಂಬಿಗೆಯೊಳಗಿನ ನೀರನ್ನು ನೆತ್ತಿಗೆ ತಟ್ಟಿ, ಕಣ್ಣಿಗೆ ಹಚ್ಚಿ ಮೇಹರ್ಜಾನಳನ್ನು ಎಚ್ಚರಗೊಳಿಸುತ್ತಿದ್ದಳು. ಅಷ್ಟರಲ್ಲಿ ಮೇಹರ್ಜಾನಳು ಮತ್ತೆ ಚಿಟ್ಟನೆ ಚೀರಿ ''ಬೇಡಿರಿ, ಹೀಗೆ ನನ್ನನ್ನು ಕೊಲ್ಲ......'' ಎಂದು ಒಟಗುಟ್ಟುತ್ತ ಮಾರ್ಜೀನೆಯನ್ನು ಕಸುವಿನಿಂದ ಅಪ್ಪಿಕೊಂಡಳು. ಸುಕುಮಾರಿಯಾದ ಮೇಹರ್ಜಾನಳಿಗೆ ಇಷ್ಟು ಕಸುವು ಎಲ್ಲಿಂದ ಬಂದಿರಬಹುದೆಂದು ಮಾರ್ಜೀನೆಗೆ ಆಶ್ಚರ್ಯವಾಯಿತು. ಆಕೆಯು ಮೇಹರ್ಜಾನಳನ್ನು ಒಂದೇಸವನೆ ಹೆಸರುಗೊಂಡು ಕೂಗಿ ಎಚ್ಚರಗೊಳಿಸಿದ್ದಳು. ಮೇಹರ್ಜಾನಳ ಮೇಲೆ ಮಾರ್ಜೀನೆಯ ಪ್ರೀತಿಯು ಎಷ್ಟಿತ್ತೆಂಬುದನ್ನು ವಾಚಕರು ಬಲ್ಲರು. ಹೊಟ್ಟೆಯ ಮಗಳಂತೆ ಇದ್ದ ಮೇಹರ್ಜಾನಳು ಹೀಗೆ ಮಾಡುವದನ್ನು ನೋಡಿ ಮಾರ್ಜೀನೆಯು ಬಹು ದುಃಖಿತಳಾದಳು. ಆಕೆಯ ಕಣ್ಣೊಳಗಿಂದ ಒಂದೇಸವನೆ ನೀರುಗಳು ಹೋಗಹತ್ತಿದವು. ಯಾವನೊಬ್ಬ ಸೇವಕನನ್ನು ಕರೆಯಬೇಕೆಂಬ ಎಚ್ಚರವು ಸಹ ಇಷ್ಟು ಹೊತ್ತಿನತನಕ ಆಕೆಗೆ ಆಗಿದ್ದಿಲ್ಲ ಇನ್ನು ಮೇಹರ್ಜಾನಳನ್ನು ಹ್ಯಾಗೆ ಎಚ್ಚರಗೊಳಿಸಬೇಕೆಂಬುದು ತಿಳಿಯದ್ದರಿಂದ ಆಕೆಯು ಗಟ್ಟಿಯಾಗಿ ''ಧನಮಲ್ಲ, ಧನಮಲ್ಲ'' ಎಂದು ಕೂಗಿದಳು. ಕೂಡಲೆ ಯಮದೂತನಂತೆ ಭಯಂಕರವಾಗಿ ತೋರುವ ಧನಮಲ್ಲನು ಎದುರಿಗೆ ಬಂದು ನಿಂತನು. ಆತನು ಮಾರ್ಜೀನೆಯನ್ನೂ, ಮೇಹರ್ಜಾನಳನ್ನೂ ನೋಡಿ, ಯಾಕೆ ಕರೆದೆಯೆಂದು ಮಾರ್ಜೀನೆಯನ್ನು ಸನ್ನೆಮಾಡಿ ಕೇಳಿದಳು. ಆಗ ಮಾರ್ಜೀನೆ—ಯಾಕೆ ಕರೆದೆಯೆಂದು ಏನು ಕೇಳುತ್ತೀ? ಕಣ್ಣಿಗೆ ಕಾಣುವದಿಲ್ಲವೇ? ಹಿಡಿ, ಇವರನ್ನು ಎತ್ತಿ ಪಲ್ಲಂಗದ ಮೇಲೆ ಮಲಗಿಸೋಣ. ನಿದ್ದೆಯಲ್ಲೇನು ಹೆದರಿದರೋ, ಕೆಟ್ಟ ಕನಸು ಬಿದ್ದಿತೋ ಏನಾಯಿತೋ ಯಾರಿಗೆ ಗೊತ್ತು ಒಂದೇಸವನೆ ಚೀರುತ್ತಿರುವರು. ಆಗಿನಿಂದ ಎಷ್ಟು ಒದರಿದರೂ ಎಚ್ಚರವಾಗಲೊಲ್ಲರು. ಇನ್ನು ಇವರನ್ನು ಪಲ್ಲಂಗದ ಮೇಲೆ ಮಲಗಿಸಿ ಹತ್ತಿ ಕುಳಿತುಕೊಳ್ಳುತ್ತೇನೆ, ಅನ್ನಲು, ಧನಮಲ್ಲನು ಮುಂದಕ್ಕೆ ಬಂದು ಮೇಹರ್ಜಾನಳನ್ನು ಪಲ್ಲಂಗದ ಮೇಲೆ ಮಲಗಿಸುವದಕ್ಕಾಗಿ ಕೈಗಳನ್ನು ಮುಂದಕ್ಕೆ ಮಾಡಿದನು. ಆಗ ಮಾರ್ಜೀನೆಯು ಅವನನ್ನು ಕುರಿತು ತಿರಸ್ಕಾರದಿಂದ—

ಜೋಕೆ, ನಿನ್ನ ಆ ಹುರಬರಕ ಕೈಯಿಂದ ಸಿಕ್ಕಹಾಗೆ ಎತ್ತಿ ಲಠ್ಠತನ ಮಾಡಬೇಡ. ಒಂದು ಗುಲಾಬಿಯ ಹೂವನ್ನು ಎತ್ತಿ ಇಡುವಂತೆ ಮೆಲ್ಲನೆ ಎತ್ತಿ ಮಲಗಿಸು. ಹೂ! ಎತ್ತಿ ಕೋ, ನಾನು ತಲೆಯ ಕಡೆಗೆ ಹಿಡಿಯುತ್ತೇನೆ, ಅನ್ನಲು, ಧನಮಲ್ಲನು ಸನ್ನೆಯಿಂದ— ನೀವು ಏನೂ ಚಿಂತೆ ಮಾಡಬೇಡಿರಿ, ನಾನು ಮಲಗಿಸುತ್ತೇನೆ. ನೀವು ಹಿಡಿಯಗಿಡಿಯ ಬೇಡಿರಿ, ಹೂವಿನಹಾಗೆ ಎತ್ತಿ ಮಲಗಿಸುತ್ತೇನೆ. ಎಂದು ಸೂಚಿಸಿ ತಾನು ಸೂಚಿಸಿದಂತೆಯೇ ಮೆಹರ್ಜಾನಳನ್ನು ಬಹು ಸೂಕ್ಷ್ಮವಾದ ಹೂವಿನಂತೆ ಎತ್ತಿ ಪಲ್ಲಂಗದ ಮೇಲೆ ಮಲಗಿಸಿದನು. ಆತನು ಮಲಗಿಸಿದ್ದೊಂದೇ ತಡ, ಮೆಹರ್ಜಾನಳು ಚಟ್ಟನೆ ಚೀರಿ ಪಲ್ಲಂಗದ ಮೇಲೆ ಕುಳಿತುಕೊಂಡಳು. ಆಗ ಆಕೆಯ ಎದುರಿನಲ್ಲಿ ಮಾರ್ಜೀನೆಯೂ, ಧನಮಲ್ಲನೂ ನಿಂತುಕೊಂಡಿದ್ದರು. ಆಕೆಯು ಗಾಬರಿಯಾಗಿ ಸುತ್ತು ಮುತ್ತು ನೋಡುತ್ತಿರಲು, ಮಾರ್ಜೀನೆಯು ಆಕೆಯನ್ನು ಕುರಿತು— ಅವ್ವಾ ಮೆಹರ್ಜಾನ, ಹೀಗೆ ಯಾಕೆ ಗಾಬರಿಯಾಗುತ್ತೀ? ಬೆದರ ಬೇಡವ್ವಾ ಇತ್ತ ನೋಡು, ನಾನು ಇದ್ದೇನೆ— ಧನಮಲ್ಲನು ಇದ್ದಾನೆ. ಬೇಡವೆಂದರೆ ನಿನ್ನೆ ರಾತ್ರಿ ಕುಂಜವನದಲ್ಲಿಯ ಪುಷ್ಕರಣಿಗೆ ಹೋದೆ, ಅಲ್ಲಿ ನಿನಗೆ ಪಿಶಾಚಿಗಿಶಾಚಿಯ ಬಾಧೆಯು ತಟ್ಟಿತೋ ಏನೋ? ನೆಟ್ಟಗೆ ಎಚ್ಚತ್ತು ನೋಡು. ನಿನಗೆ ಕೆಟ್ಟ ಕನಸು ಬಿದ್ದಿತ್ತೋ ಏನು? ಎಂದು ಮಾತಾಡಿಸಲು, ಆ ಮಾತುಗಳು ಮೆಹರ್ಜಾನಳಿಗೆ ಕೇಳಿಸಿದಂತೆ ತೋರಲಿಲ್ಲ. ಆಕೆಯು ನಡುವೇ ಮಾರ್ಜೀನೆ ಯನ್ನು ಕುರಿತು ಮಾರ್ಜೀನೇ, ನಾನು ಎಲ್ಲಿ ಇದ್ದೇನೆ? ಅವರು ಎತ್ತ ಹೋದರು? ಅವರು ನನ್ನನ್ನು ನೌಕೆಯೊಳಗಿಂದ ಪುಷ್ಕರಣಿಯಲ್ಲಿ ಎತ್ತಿ ಒಗೆದರು. ಇತ್ತ ನಿಂತವನು ಯಾವನಿವನು? ನನ್ನನ್ನು ಪುಷ್ಕರಣಿಯಲ್ಲಿ ಅವರು ಎತ್ತಿ ಒಗೆಯುವಾಗ ಅವರ ಹಿಂದೆ ಇವನೇ ನಿಂತಿದ್ದನೇನೇ ಮಾರ್ಜೀನೇ? ಇವನೇ ಇದ್ದನೆಂಬಂತೆ ಕಾಣುತ್ತದೆ. ಹೌದು ಇವನೇ.....

ಮೆಹರ್ಜಾನಳು ಹೀಗೆ ಮಾತಾಡುವದನ್ನು ಕೇಳಿ ಮಾರ್ಜೀನೆಯು ಆಕೆಯ ಕುರುಳು ಗಳನ್ನು ತೀಡಿ ಗಲ್ಲಗಳನ್ನು ಹಿಡಿದು— ಮೆಹರ್ಜಾನ, ಹೀಗೆ ಯಾಕೆ ಹುಚ್ಚಿಯ ಹಾಗೆ ಮಾತಾಡುತ್ತೀ? ಈ ಪಲ್ಲಂಗದ ಮೇಲೆ ಮಲಗಿಕೊಂಡಿದ್ದ ನೀನು ''ಮಹಾರಾಜರು ನನ್ನನ್ನು ಪುಷ್ಕರಣಿಯಲ್ಲಿ ಎತ್ತಿ ಒಗೆದರೆ''ಂದು ಹೇಳುತ್ತೀಯಲ್ಲ! ನಿನ್ನ ಸೇವಕನಾದ ಈ ಮೂಕ ಧನಮಲ್ಲನು ಇಲ್ಲಿಯೇ ಇದ್ದಾನೆ, ಎಲ್ಲಿಯೂ ಹೋಗಿಲ್ಲ, ಇದೆಲ್ಲ ಭೂತಚೇಷ್ಟೆಯೆಂಬಂತೆ ನನಗೆ ತೋರುತ್ತದೆ. ನೀನು ಈಗ ನನ್ನ ಮಾತನ್ನು ಕೇಳಿ ಸ್ವಲ್ಪ ಹೊತ್ತು ಸುಮ್ಮನೆ ಮಲಗಿಕೊಂಡು ನಿದ್ದೆ ಮಾಡಬೇಕು. ನೀನು ನಿದ್ದೆ ಮಾಡಿ ವಿಶ್ರಾಂತಿಯನ್ನು ಹೊಂದಿದ ಬಳಿಕ ನಿನಗೊಂದು ಜಿನಸನ್ನು ಕೊಡುವೆನು, ಎಂದು ಹೇಳಲು, ಮೆಹರ್ಜಾನಳು— ಏನು ಹಾಗಾದರೆ? ನಾನು ನೋಡಿದ್ದೆಲ್ಲ ಸ್ವಪ್ನವೇ ಏನು? ನಾನು ನನ್ನ ಕೋಣೆಯಲ್ಲಿರುವದು ನಿಜವು; ಆದರೆ ಅವರು ಎತ್ತ ಹೋದರು? ಮಾರ್ಜೀನೇ, ಕಡೆಗೆ ಅವರು ನಿದ್ದೆ ಹತ್ತಿದಾಗ ನನ್ನ ಕೈಯೊಳಗಿಂದ ತಮ್ಮ ಕೈಯನ್ನು ಬಿಡಿಸಿಕೊಂಡು, ತಮ್ಮ ತೊಡೆಯ ಮೇಲಿಟ್ಟಿದ್ದ ನನ್ನ ತಲೆಯನ್ನು ತಲೆಗಿಂಬಿನ ಮೇಲಿಟ್ಟು, ಹೇಳದೆ ಹೊರಟು ಹೋದರಲ್ಲವೆ? ಮಾರ್ಜೀನೇ, ಈ ಗ ನನಗೆ ಏನೋ ಕೊಡುತ್ತೇನೆಂದು ಹೇಳಿದೆಯಲ್ಲ; ತಾ, ಎಲ್ಲಿ ಅದೆ ಅದು? ಹೇಳದೆ ಹೋದದ್ದಕ್ಕಾಗಿ ನಾನು ಅಸಮಾಧಾನಪಟ್ಟೇನೆಂದು ನನಗೆ

ಕೊಡುವದಕ್ಕಾಗಿ ಮಹಾರಾಜರು ಪತ್ರವನ್ನು , ಇಲ್ಲವೆ ಯಾವದೊಂದು ಆಭರಣವನ್ನು ಕೊಟ್ಟಿರಬಹುದು! ಸಣ್ಣ ಹುಡುಗರನ್ನು ರಮಿಸಿದ ಹಾಗೆ ನನ್ನನ್ನು ರಮಿಸಿದರೆ ನಾನು ಕೇಳುವ ಹಾಗಿಲ್ಲ, ಗುಪ್ತಸುದ್ದಿಯನ್ನು ಅವರಿಗೆ ಹೇಳೆಂದು ನಾನು ನಿನಗೆ ಹೇಳಿದ್ದೆನಷ್ಟೆ? ಅವರ ಮುಂದೆ ಹೇಳಿದೆಯೇನು? ಎಂದು ಕೇಳಲು, ಮಾರ್ಜೀನೆಯು— ಹೇಳಿದೆನು, ಗುಪ್ತ ಸಂಗತಿಯನ್ನು ಮಹಾರಾಜರ ಮುಂದೆ ಹೇಳಿದನು; ಆದರೆ ಅವರು ನಿಲ್ಲಲಿಲ್ಲ, ಮೇಹರ್ಜಾನ, ಮಹಾರಾಜರ ಆಗ್ರಹದ ಮುಂದೆ ನನ್ನ ಆಟವೇನು ನಡೆಯುವದು ಹೇಳು. ನೀನು ಅಂದಂತೆ ಮಹಾರಾಜರು ನಿನ್ನ ಸಮಾಧಾನಕ್ಕಾಗಿ ಪತ್ರವನ್ನು ಅಥವಾ ಯಾವದೊಂದು ಅಲಂಕಾರವನ್ನು ಕೊಟ್ಟಿರಬಹುದು; ಆದರೆ ಈಗ ಸ್ವಲ್ಪ ವಿಶ್ರಾಂತಿಯನ್ನು ತೆಗೆದುಕೋ, ಆಮೇಲೆ ಮಹಾರಾಜರು ಕೊಟ್ಟಿರುವ ಮೊಹರು ಮಾಡಿದ ಎರಡು ಚೀಟಿಗಳನ್ನು ನಿನಗೆ ಕೊಡುವೆನು, ಎಂದು ಹೇಳಿದಳು.

ಮಹಾರಾಜರ ಮುಂದೆ ಗುಪ್ತ ಸಂಗತಿಯನ್ನು ಹೇಳಿದೆನೆಂದು ಮಾರ್ಜೀನೆಯು ನುಡಿಯಲು, ಅದನ್ನು ಕೇಳಿ ಮೇಹರ್ಜಾನಳಿಗೆ ಮೊದಲು ಮನಸ್ಸಿನಲ್ಲಿ ಬಹಳ ಸಂತೋಷ ವಾಯಿತು; ಆದರೆ ಅವರು ನಿಲ್ಲದೆ ಹಾಗೇ ವಿಜಯನಗರಕ್ಕೆ ಹೋದದ್ದನ್ನು ಸ್ಮರಿಸಿ, ಆಕೆಯು ಅಸಮಾಧಾನದಿಂದ— ಮಾರ್ಜೀನೆ, ಆ ಮಾತನ್ನು ಕೇಳಿ ಮಹಾರಾಜರು ಏನು ಅಂದರು? ಅವರ ಮುಖಲಕ್ಷಣವು ಹ್ಯಾಗಾಯಿತು? ಅವರು ಎಷ್ಟು ಆನಂದಪಟ್ಟರು? ಇದನ್ನು ಹೇಳ ಬಾರದೇ? ಮೂಢಳ ಹಾಗೆ ಸುಮ್ಮನೆ ಯಾಕೆ ನಿಂತುಕೊಂಡೆ? ನಿನ್ನ ಮಾತನ್ನು ಕೇಳಿ ಮಹಾರಾಜರಿಗೆ ಬಹಳ ಸಂತೋಷವಾಗಿರಬಹುದು. ಆ ಸಂತೋಷದ ಸುದ್ದಿಯನ್ನು ಕೇಳಿದ ಬಳಿಕ ನನ್ನನ್ನು ಕಾಣದೆ ಅವರು ಹೋಗತಕ್ಕವರಲ್ಲ, ಆದರೆ ಕೃಷ್ಣದೇವ ಮಹಾರಾಜರ ನೌಕರಿಯ ಮುಂದೆ ಅವರ ಆಟವೇನು ನಡೆಯುವದು? ನಾನು ಬಸುರಿದ್ದ ಸುದ್ದಿಯನ್ನು ಕೇಳಿದ ಬಳಿಕ ಅವರು ನನ್ನನ್ನು ಒಬ್ಬಳನ್ನೇ ಬಿಟ್ಟು ವಿಜಯನಗರದಲ್ಲಿ ಇರದೆ, ಇನ್ನು ಒಂದೆರಡು ದಿನಗಳಲ್ಲಿ ನನ್ನ ಬಳಿಗೆ ಬರ ಬಹುದು. ಮಾರ್ಜೀನೇ, ನಿನಗೆ ಹ್ಯಾಗೆ ಕಾಣಿಸಿತು ಹೇಳು, ಎಂದು ಕೇಳಿದಳು. ಆಗ ಮಾರ್ಜಿನೆಗೆ ಏನು ಉತ್ತರ ಕೊಡಬೇಕೆಂಬುದು ತಿಳಿಯದೆ ಆಕೆಯು ಸುಮ್ಮನೆ ನಿಂತು ಕೊಂಡಳು. ಅದನ್ನು ನೋಡಿ ಮೇಹರ್ಜಾನಳು ಮತ್ತೆ ಆಕೆಯನ್ನು ಕುರಿತು— ಮಾರ್ಜೀನೇ, ಹೀಗೆ ಯಾಕೆ ದೆವ್ವ ಬಡಿದವರ ಹಾಗೆ ನಿಂತು ಕೊಂಡೆ? ಮಾತಾಡಬಾರದೇ? ಮಹಾರಾಜರು ಕೊಟ್ಟ ಜಿನಸಾದರೂ ಯಾವದು ತೋರಿಸು, ಎಂದು ಅನ್ನುತ್ತಿರಲು, ಆಕೆಯದೃಷ್ಟಿಯು ಧನಮಲ್ಲನ ಕಡೆಗೆ ತಿರುಗಿತು. ಆಗ ಆಕೆಯು ತಿರಸ್ಕಾರದಿಂದ ಅವನನ್ನು ಕುರಿತು—ನೀನು ಅತ್ತ ಹೋಗೋ! ಈ ಟೊಣಪನು ಇಲ್ಲಿ ಯಾಕೆ ಬಂದಿರುತ್ತಾನೆ, ನಡೆ ಅತ್ತ ಎಂದು ಒಸಕ್ಕನೆ ಅವನ ಮೈಮೇಲೆ ಹೋಗಿ ನುಡಿಯಲು ಧನಮಲ್ಲನು ವಿಲಕ್ಷಣ ಪ್ರಕಾರದಿಂದ ನಕ್ಕನು. ಆತನು ಗಟ್ಟಿಯಾಗಿ ನಗಲಿಲ್ಲ, ಸುಮ್ಮನೆ ನಗೆಯ ಝಳಕು ಮಾತ್ರ ಅತನ ಮೋರೆಯ ಮೇಲೆ ತೋರಿತು. ಆತನು ಮಹಾ ಮೂಢನಂತೆ ಮೇಹರ್ಜಾನಳನ್ನು ನೋಡುತ್ತ ನಿಂತಲ್ಲಿ ಸುಮ್ಮನೆ ನಿಂತು, ಕೆಲವು ಹೊತ್ತಿನ ಮೇಲೆ ಅಲ್ಲಿಂದ ಹೊರಟು ಹೋದನು. ಆಗ ಮಾರ್ಜೀನೆಯು, ರಾಮರಾಜನು ಕೊಟ್ಟಿದ್ದ ಎರಡು ಥೈಲಿಗಳನ್ನ ಮೇಹರ್ಜಾನಳ ಕೈಯಲ್ಲಿ ಕೊಡಲು, ಒಂದರಲ್ಲಿ ಒಂದು ಪತ್ರವೂ, ಮತ್ತೊಂದರಲ್ಲಿ ಒಂದು ಮುದ್ರೆಯ ಉಂಗುರವೂ ಇದ್ದವು. ಮೇಹರ್ಜಾನಳು

ಉತ್ಸುಕತೆಯಿಂದ ಪತ್ರವನ್ನು ಓದಲು, ಸಂತಾಪದಿಂದ ಆಕೆಯ ಮೈಮೇಲಿನ ಎಚ್ಚರವು ತಪ್ಪಿದಂತಾಯಿತು! ಈ ಸಂತಾಪವೇ ಮುಂದೆ ಆಕೆಯ ಪ್ರಯಾಣಕ್ಕೆ ಕಾರಣವಾಯಿತೆಂದು ಹೇಳಬಹುದು.

## ಸ್ತ್ರೀ ಸಾಹಸ

ರಾಮರಾಜನು ಬರೆದಿದ್ದ ಪತ್ರವು ತೀರ ದೊಡ್ಡದೂ ಇದ್ದಿಲ್ಲ. ತೀರ ಸಣ್ಣದೂ ಇದ್ದಿಲ್ಲ. ಮೇಹರ್ಜಾನಳು ಆ ಪತ್ರದ ಮೊದಲನೆಯ ವಾಕ್ಯವನ್ನು ಓದಿದ ಕೂಡಲೆ ಆಕೆಯ ಮೋರೆಯ ಲಕ್ಷಣವು ಹ್ಯಾಗೆ ಹ್ಯಾಗೋ ಆಯಿತು. ಆಕೆಯ ನೇತ್ರಗಳು ವಿಸ್ತರಿಸಿದವು, ಆಕೆಗೆ ಉಸುರು ಕಟ್ಟಿದ ಹಾಗೆ ಆಗಹತ್ತಿತ್ತು. ಆಕೆಯ ಕೈಗಳು ಗದಗದ ನಡಗಹತ್ತಿದವು, ಮೈಬೆವತಿತು, ತುಟಿಗಳು ಕಂಪಿಸಹತ್ತಿದವು, ಅರೆಕ್ಷಣದಲ್ಲಿ ಆಕೆಯ ಗಲ್ಲಗಳು ನಿಸ್ತೇಜವಾಗಿ ಅವುಗಳಲ್ಲಿಯ ಗುಲಾಬಿ ಬಣ್ಣದ ಹೊಳಪು ಅಡಗಿತು, ಇನ್ನೊಂದು ಕ್ಷಣದಲ್ಲಿ ಆಕೆಯ ಕಣ್ಣುಗಳು ನೀರಿನಿಂದ ತುಂಬಿದವು. ಮತ್ತೊಂದು ಕ್ಷಣದಲ್ಲಿ ಆಕೆಯ ಗಲ್ಲಗಳೂ ಕಿವಿಗಳೂ ಕೆಂಪಾದವು, ಮುಖದಲ್ಲಿ ಸಂತಾಪವು ವ್ಯಕ್ತವಾಗಹತ್ತಿತ್ತು, ಹುಬ್ಬುಗಳು ಅಕುಂಚಿತವಾದವು. ಆಕೆಯು ಅವಡುಗಚ್ಚಿ ಮನಸ್ಸಿನಲ್ಲಿ ಯಾವದೋ ಒಂದು ಮಾತಿನ ನಿಶ್ಚಯವನ್ನು ಮಾಡಿದ ಹಾಗೆ ತೋರಿತು. ಮುಖದಿಂದ ಹೊರಬೀಳಬೇಕೆಂದಿರುವ ಕೆಲವು ಉದ್ಗಾರಗಳನ್ನು ಆಕೆಯು ನಿಶ್ಚಯಪೂರ್ವಕವಾಗಿ ಬಿಗಿಹಿಡಿದಿರುವಳೆಂಬಂತೆ ಸ್ಪಷ್ಟವಾಗಿ ಕಾಣುತ್ತಿತ್ತು, ಹೊರಬೀಳುವ ಅಶ್ರುಗಳನ್ನು ನಿಲ್ಲಿಸಲಿಕ್ಕೂ ದುಃಖದ ವೇಗವನ್ನು ತಡೆಯಲಿಕ್ಕೂ ಆಕೆಯು ಯತ್ನಿಸುತ್ತಿರುವ ಹಾಗೆ ಕಂಡಿತು. ಇದನ್ನೆಲ್ಲ ಮಾರ್ಜೀನೆಯು ನೋಡುತ್ತಿದ್ದಳು. ಮೊದಲು ಮೇಹರ್ಜಾನಳ ಮುಖ ಲಕ್ಷಣವನ್ನು ನೋಡಿದಾಗ ಆಕೆಯನ್ನು ಅನಕಾ ಏನೂ ಕೇಳಬಾರದೆಂದು ಮಾರ್ಜೀನೆಯು ನಿಶ್ಚಯಿಸಿದಳು. ಮುಂದೆ ಸ್ವಲ್ಪ ಹೊತ್ತಿನ ಮೇಲೆ ಆಕೆಯು ಧೈರ್ಯಮಾಡಿ ಏನೋ ಕೇಳಬೇಕೆಂದು ಹವಣಿಸಲು, ಮೇಹರ್ಜಾನಳು ಮೂಗಿನ ಮೇಲೆ ಬೊಟ್ಟಿಟ್ಟು ಸುಮ್ಮನಿರೆಂದು ನಿರ್ಬಂಧಿಸಿದಳು. ಆ ಮೇಲಂತೂ ಮೇಹರ್ಜಾನಳನ್ನು ಕೇಳಲಿಕ್ಕೆ ಮಾರ್ಜೀನೆಗೆ ಧೈರ್ಯವೇ ಆಗಲಿಲ್ಲ. ಈ ಮೊದಲೇ ಮೇಹರ್ಜಾನಳನ್ನು ನೋಡಿದವರು ಆಕೆಯ ಈಗಿನ ಉಗ್ರಮೂರ್ತಿಯನ್ನು ನೋಡಿದ್ದರೆ, ಈಕೆಯು ಮೇಹರ್ಜಾನಳೇ ಆಗಿರಬಹುದೇನೆಂಬ ಬಗ್ಗೆ ಅವರಿಗೆ ನಿಶ್ಚಯವಾಗಿ ಸಂಶಯ ಬರಬಹುದಾಗಿತ್ತು! ಆಕೆಯ ಸೌಮ್ಯಮುದ್ರೆಯು ಅಷ್ಟು ನಷ್ಟವಾಗಿ ಅದರ ಸ್ಥಳವನ್ನು ಉಗ್ರತೆಯು ವ್ಯಾಪಿಸಿತ್ತು, ರಾಮರಾಜನ ಪತ್ರವನ್ನು ಓದುವದಾದ ಮೇಲೆ ಮೇಹರ್ಜಾನಳು ಬಹಳ ಹೊತ್ತಿನವರೆಗೆ ಅದನ್ನು ಎವೆಯಿಕ್ಕದೆ ನೋಡುತ್ತ ಸುಮ್ಮನೆ ಕುಳಿತುಕೊಂಡಳು. ಬಳಿಕ ಮತ್ತೊಂದು ಥೈಲಿಯಲ್ಲಿದ್ದ ಉಂಗುರವನ್ನು ದಿಟ್ಟಿಸಿ ನೋಡಿದಳು. ಆಮೇಲೆ ಮತ್ತೆ ಸ್ವಲ್ಪ ಹೊತ್ತು ವಿಚಾರ ಮಾಡಿ ಆಕೆಯು ತನ್ನ ಬಲಗೈಯ ಅನಾಮಿಕೆಯ ಬೆರಳಿನಲ್ಲಿ ಆ ಉಂಗುರವನ್ನು

ಇಟ್ಟುಕೊಂಡು, ಸ್ವಲ್ಪ ತೀವ್ರವಾದ ಸ್ವರದಿಂದ ಮಾರ್ಜೀನೆಯನ್ನು ಕುರಿತು—ಮಾರ್ಜೀನೆ, ನೀನಾದರೂ ನನ್ನ ಮೇಲೆ ತಿರುಗಿ ಬೀಳದೆ ನನ್ನ ಸಂಗಡ ಬರುವೆಯಾ? ಎಂದು ಕೇಳಲು, ಆಶ್ಚರ್ಯ ಮಗ್ನಳಾದ ಮಾರ್ಜೀನೆಯು ''ಎಲ್ಲಿಗೆ'' ಎಂದು ಪ್ರಶ್ನೆಮಾಡಿದಳು. ಅದಕ್ಕೆ ಮೇಹರ್ಜಾನಳ ಮುಖದಿಂದ ''ಎಲ್ಲಿಯಾದರೂ ಜಗತ್ತಿನಲ್ಲಿ; ನಾನು ಹೋದತ್ತ'' ಎಂಬ ಉತ್ತರವು ತಟ್ಟನೆ ಹೊರಟಿತು.

ಈ ಮೇರೆಗೆ ನುಡಿದು ಮೇಹರ್ಜಾನಳು ನಿಟ್ಟುಸಿರುಬಿಡಲು, ಮಾರ್ಜೀನೆಯು ಏನೂ ತೋಚದೆ ಮೇಹರ್ಜಾನಳನ್ನು ನೋಡುತ್ತ ಸುಮ್ಮನೆ ಕುಳಿತುಕೊಂಡಳು. ಇಂದು ತನ್ನ ಮೇಹರ್ಜಾನಳು ಹೀಗೆ ಯಾಕೆ ಮಾಡುವಳು, ಹೀಗೆ ಯಾಕೆ ಮಾತಾಡುವಳು ಎಂಬುದರ ಗೂಢವೇ ಆಕೆಗೆ ತಿಳಿಯದಾಯಿತು. ಮಾರ್ಜೀನೆಯು ಮೇಹೇರ್ಜಾನಳ ಸ್ವಭಾವವನ್ನು ಚಿಕ್ಕಂದಿನಿಂದ ಬಲ್ಲವಳು. ಸಣ್ಣವಳಿರುವಾಗ ಮೇಹರ್ಜಾನಳು ಬಹು ಹಟಮಾರಿಯೂ, ತಾಮಸಿಯೂ ಇದ್ದಳು. ಆಕೆಗೆ ಹನ್ನೆರಡು ವರ್ಷಗಳಾದ ಬಳಿಕ ಆಕೆಯ ಹಟಮಾರಿತನವು ಮೇಲೆ ಮೇಲೆ ವ್ಯಕ್ತವಾಗದೆ, ಯಾವಾಗಾದರೊಮ್ಮೆ ವ್ಯಕ್ತವಾಗುತ್ತಿತ್ತು. ಮುಂದೆ ಸ್ವಲ್ಪ ದಿನಗಳಲ್ಲಿ ಮೇಹರ್ಜಾನಳ ತಾಯಿಯು ತೀರಿಕೊಳ್ಳಲು, ಆ ಹಟಮಾರಿತನವೂ, ತಾಮಸಸ್ವಭಾವವೂ ತೀರ ಕಡಿಮೆಯಾದವು. ಚಿಕ್ಕಂದಿನಿಂದ ಮೇಹರ್ಜಾನಳು ಮಾರ್ಜೀನೆಯ ಬಳಿಯಲ್ಲಿಯೇ ಇಪ್ಪತ್ತುನಾಲ್ಕು ತಾಸು ಇರುತ್ತಿದ್ದದ್ದರಿಂದ ಆಕೆಯ ಹಟಮಾರಿತನವನ್ನು ಮಾರ್ಜೀನೆಯು ಚೆನ್ನಾಗಿ ಅರಿತಿದ್ದಳು. ಮೇಹರ್ಜಾನಳ ತಂದೆಯಾದ ಖಾನಜಮಾನ ಮಹಬೂಬಖಾನನೆಂಬವನು ಗೋವಳಕೊಂಡದ ದರ್ಬಾರದಲ್ಲಿ ಒಬ್ಬ ಸರದಾರನಾಗಿದ್ದನು. ಮೇಹೇರ್ಜಾನಳು ಬಹು ಲಾವಣ್ಯವತಿಯೂ, ಸದ್ಗುಣೆಯೂ ಆದದ್ದರಿಂದ, ಬಹುಜನ ತರುಣ ಸರದಾರರು ಆಕೆಯನ್ನು ಲಗ್ನವಾಗಲಿಚ್ಛಿಸಿ ಖಾನನನ್ನು ಕೇಳಿದ್ದರು; ಆದರೆ ಆತನು ಅಹಮ್ಮದನಗರದ ಬಾದಶಹನ ಮನೆತನದೊಡನೆ ಸಂಬಂಧ ಮಾಡಬೇಕೆಂಬ ಮಹತ್ವಾಕಾಂಕ್ಷೆಯಿಂದ ಮೇಹರ್ಜಾನಳನ್ನು ಇಷ್ಟು ದಿನ ಲಗ್ನ ಮಾಡದೆ ಹಾಗೆ ಬಿಟ್ಟಿದ್ದನು. ಈ ಮಹತ್ವಾಕಾಂಕ್ಷೆಯ ಪರಿಣಾಮವು ಅನರ್ಥಕ್ಕೆ ಹ್ಯಾಗೆ ಕಾರಣವಾಯಿತೆಂಬದನ್ನು ವಾಚಕರಿಗೆ ಈಗ ಬರೆದು ತಿಳಿಸುವ ಕಾರಣವಿಲ್ಲ. ರಾಮರಾಜನು ಬೇಟೆಯಾಡಲಿಕ್ಕೆ ಹೋದಾಗ ಮೇಹರ್ಜಾನಳನ್ನು ಅಪಹರಿಸಿದ ಸಂಗತಿಯು ಅವರಿಗೆ ಈ ಮೊದಲೇ ಗೊತ್ತಾಗಿರುತ್ತದೆ. ಹೀಗೆ ಮಾರ್ಜೀನೆಯು ಮೇಹರ್ಜಾನಳ ಸ್ವಭಾವವನ್ನು ಪೂರಾ ಬಲ್ಲವಳಾದ್ದರಿಂದಲೇ ಆ ಸರದಾರ ಕುವರಿಯು ಸಂತಾಪಗೊಂಡಿರಲು, ಆಕೆಯ ವಿರುದ್ಧ ಮಾತಾಡುವ ಗೊಡವೆಗೆ ಆ ಜಾಣೆಯು ಹೋಗಲಿಲ್ಲ. ನಿನಗೆ ಇಷ್ಟು ಸಿಟ್ಟು ಯಾಕೆ ಬಂದಿತು? ಪತ್ರದಲ್ಲಿ ಅಂಥ ಸಂಗತಿಯನ್ನೇನು ಬರೆದದೆ? ಎಂದು ಕೇಳುವ ಉಸಾಬರಿಗೂ ಆಕೆಯು ಹೋಗಲಿಲ್ಲ. ಈಗ ಮೇಹರ್ಜಾನಳ ಮಾತಿಗೆ ಒಡಂಬಡುತ್ತ ಹೋಗಿ ಆಕೆಯು ಸ್ವಲ್ಪ ಶಾಂತಳಾದ ಮೇಲೆ ಹೇಳುಕೇಳುವದನ್ನು ಮಾಡೋಣವೆಂದು ತಿಳಿದು, ಆ ದೂರದರ್ಶಿಯಾದ ಹೆಣ್ಣುಮಗಳು ಮೇಹರ್ಜಾನಳನ್ನು ಕುರಿತು— ಮೇಹರ್ಜಾನ, ನಿನ್ನ ಮಾತಿಗೆ ನಾನು ಹೊರಗಾದವಳೇ? ನಿಶ್ಚಯವಾಗಿ ನಿನ್ನ ಸಂಗಡ ಬರುವೆನು, ನೀನಿದ್ದಲ್ಲಿ ನಾನು ಎಂದು ಹೇಳಿದಳು.

ಮಾರ್ಜೀನೆಯು ಹೀಗೆ ಒಡಂಬಟ್ಟದ್ದರಿಂದ ಮೇಹರ್ಜಾನಳಿಗೆ ಸ್ವಲ್ಪ ಸಮಾಧಾನವಾಯಿತು. ಆದರೆ ಆಕೆಯ ನಿಶ್ಚಯವು ಮಾತ್ರ ಸ್ವಲ್ಪವೂ ಕಡಿಮೆಯಾಗಿದ್ದಿಲ್ಲ. ಆಕೆಯು ಮಾರ್ಜೀನೆಯನ್ನು ಕುರಿತು— ಮಾರ್ಜೀನೆ, ಹಿಂದುವಾದ ರಾಮರಾಜನನ್ನು ನಂಬಿ, ಅವಸರದಿಂದ ಲಗ್ನವಾಗಬೇಡೆಂದು ನೀನು ನನಗೆ ಹೇಳಿದ್ದರ ಅನುಭವವು ಈಗ ಬಂದಂತಾಯಿತು. ರಾಮರಾಜನ ಕೃತಘ್ನತೆಗೆ ಮೇರೆಯಿಲ್ಲದಾಯಿತು. ಮಾರ್ಜೀನೇ, ಈ ಪತ್ರದೊಳಗಿನ ಸಂಗತಿಯನ್ನು ನೆನಿಸಿದ ಕೂಡಲೆ ನನ್ನ ಸಂತಾಪವು ಹೆಚ್ಚಿ, ಮೈಮೇಲಿನ ಎಚ್ಚರವು ತಪ್ಪುತ್ತದೆ. ರಾಮರಾಜರು ವಿಜಯನಗರದ ಮಂತ್ರಿಪದವನ್ನು ಹೊಂದುವದಕ್ಕಾಗಿ ಕೃಷ್ಣದೇವರಾಜನ ಮಗಳನ್ನು ಲಗ್ನವಾಗುವರಂತೆ! ಅಂದಬಳಿಕ ಪಟ್ಟರಾಣಿಯಮಾನವು ನನ್ನ ಪಾಲಿಗೆ ಎಲ್ಲಿ ಉಳಿಯಿತು? ಯವನಳಾದ ನನ್ನ ಪಾಣಿಗ್ರಹಣ ಮಾಡಿದ್ದರಿಂದ ರಾಮರಾಜನ ಉತ್ಕರ್ಷಕ್ಕೆ ತೊಂದರೆಯಾಗಿದೆಯಂತೆ! ತಮ್ಮ ವಿವಾಹವಾಗುವವರೆಗೆ ನಾನು ಏಕಾಂತವಾಗಿ ಇರಬೇಕಂತೆ! ಅಲ್ಲಿಯವರೆಗೆ ತಾವು ಕುಂಜವನಕ್ಕೆ ಬಾರದಿದ್ದರೂ ನಾನು ವಿಕಲ್ಪವನ್ನು ಎಣಿಸಬಾರದಂತೆ! ಸರಿ ಸರಿ! ಮಾರ್ಜೀನೇ, ಕಾಫರನಾದ ಈ ಹಿಂದುವಿನ ಕೃತಘ್ನತೆಯು ಆಗ ನನಗೆ ತಿಳಿಯಲಿಲ್ಲ, ನಿನ್ನ ಮಾತುಗಳನ್ನು ಮೀರಿ ನಾನು ರಾಮರಾಜನ ಕೈ ಹಿಡಿದದ್ದು ಮಹಾಪರಾಧವಾಯಿತು. ಈ ಅಪರಾಧದ ಪ್ರಾಯಶ್ಚಿತ್ತಕ್ಕಾಗಿಯೇ ಇಂದಿನಿಂದ ನಾನು ವಿಷಯಸುಖದ ಆಶೆಯನ್ನು ಬಿಟ್ಟು ಬಿಡುವೆನು. ಇನ್ನು ಮೇಲೆ ನಾನು ರಾಮರಾಜರ ಮುಖಾವಲೋಕನವನ್ನು ಮಾಡಲಿಕ್ಕಿಲ್ಲ; ಈ ಕುಂಜವನದಲ್ಲಿ ನಿಂತು ನೀರು ಕುಡಿಯಲಿಕ್ಕಿಲ್ಲ, ಪ್ರಸಂಗ ಒದಗಿದಾಗ ಇದರ ಸೇಡು ತೀರಿಸಿಕೊಂಡರೇ, ನಾನು ಪಠಾಣಜಾತಿಯಲ್ಲಿ ಹುಟ್ಟಿದವಳು. ಹೀಗನ್ನಲು, ಮಾರ್ಜೀನೆಯು–ಮೇಹರ್ಜಾನ, ''ಕೆಟ್ಟದ್ದನ್ನು ಅಟ್ಟವಳೇ ಜಾಣಳೆಂ''ಬಂತೆ, ಈಗ ಕೆಟ್ಟು ಹೋಗಿರುವ ಕೆಲಸವನ್ನು ತಿದ್ದಿಕೊಳ್ಳುವದರಲ್ಲಿಯೇ ಜಾಣತನವುಂಟು. ಮೊದಲೇ ಅಡ್ಡಹಾದಿಗೆ ಹೋಗತಕ್ಕದ್ದಿದ್ದಿಲ್ಲ; ಹೋದಬಳಿಕ ಅದೇ ಹಾದಿಯ ಸಹಾಯದಿಂದ ಒಳ್ಳೆಯ ಹಾದಿಯನ್ನು ಹುಡುಕಿ ಇದ್ದದ್ದರಲ್ಲಿ ಹಿತಮಾಡಿಕೊಳ್ಳತಕ್ಕದ್ದು. ನೀನು ಪತಿಯೆಂದು ರಾಮರಾಜನ ಪಾಣಿಗ್ರಹಣ ಮಾಡಿರುತ್ತಿ. ಅಂದಬಳಿಕ ಪತಿದ್ರೋಹಕ್ಕೆ ಗುರಿಯಾಗುವದು ಪಾತಕವೇ ಸರಿ. ಯಾವುದಾದರೂ ಒಂದು ದಂಡೆಯನ್ನು ಹೊಂದತಕ್ಕದ್ದು. ಆದ್ದರಿಂದ ಹ್ಯಾಗಿದ್ದರೂ ನೀನು ರಾಮರಾಜನನ್ನು ಹೊಂದಿಕೊಂಡಿರುವದೇ ನೆಟ್ಟಗೆ ಕಾಣುತ್ತದೆ. ಇಲ್ಲದಿದ್ದರೆ ಇಬ್ಬರ ಅನರ್ಥಕ್ಕೂ ಕಾರಣವಾಗಬಹುದು. ಮಹಾರಾಜರು ಮಂತ್ರಿಪದವಿಯ ಮಹತ್ವಾಕಾಂಕ್ಷೆಯಿಂದ ಕೆಲವು ದಿನ ಕುಂಜವನಕ್ಕೆ ಬಾರದಿದ್ದರೆ ತಪ್ಪೇನು? ಆ ಮೇಲೆ ಅವರು ನಿನ್ನನ್ನು ಪಟ್ಟರಾಣಿಯಾಗಿ ಮಾಡಿ ಕೊಳ್ಳಲಿಕ್ಕಿಲ್ಲೆಂದು ನೀನು ಯಾಕೆ ತಿಳಕೊಳ್ಳುತ್ತೀ? ಮೇಹೇರ, ಸ್ವಲ್ಪ ಶಾಂತಳಾಗು. ಯಾವದಕ್ಕಾದರೂ ಸ್ವಲ್ಪ ಕೂತು ಮಲಗಬೇಕು. ಮನಸ್ಸಿನಲ್ಲಿ ಏನಾದರೂ ಬಂದ ಕೂಡಲೆ ಹುರ್ರೆನ್ನುವದು ನೆಟ್ಟಗಲ್ಲ, ಅದರಿಂದ ಮುಂದೆ ಪಶ್ಚಾತ್ತಾಪಕ್ಕೆ ಗುರಿಯಾಗಬೇಕಾದೀತು. ನಿನ್ನ ಸಂಗಡ ಬರಲಾರದ್ದಕ್ಕೆ ನಾನು ಇಷ್ಟು ಮಾತಾಡುತ್ತೇನೆಂದು ನೀನು ತಿಳಿಯಬೇಡ. ಮೇಹೇರ, ನನ್ನದೇನು ಅಳುತ್ತದೆ ಹೇಳು; ಆದರೆ ಹಿಂದುಮುಂದುಯಿಲ್ಲದೆ ಅತಂತ್ರವಾಗಿರುವ ನಿನಗೆ, ಹಿತದ ಮಾತನ್ನು ಹೇಳುತ್ತೇನೆ. ಸ್ವಚ್ಛಂದ

ವೃತ್ತಿಯಿಂದ ಕುಂಜವನದಿಂದ ಹೊರಟುಹೋಗುವದು ನಿನ್ನ ಶೀಲಕ್ಕೂ ಮರ್ಯಾದೆಗೂ ಒಪ್ಪುವದಿಲ್ಲ. ಅತ್ತ ಮುಸಲ್ಮಾನರೂ ನಮ್ಮನ್ನು ನಿರಾಕರಿಸಬಹುದು; ಇತ್ತ ರಾಮರಾಜನ ಆಸರವೂ ತಪ್ಪುವದು. ಆದ್ದರಿಂದ ಈಗ ನೀನು ಸಂತಾಪದಲ್ಲಿ ಮಾಡಿರುವ ನಿಶ್ಚಯಕ್ಕೆ ಮಹತ್ವ ಕೊಡಬೇಡ. ಮುಂದೆ ಅಂಥ ಪ್ರಸಂಗ ಬಂದರೆ, ಈಗಿನ ನಿಶ್ಚಯದಂತೆ ಆಗ ನಡೆಯಲಿಕ್ಕೆ ಬಂದೀತು. ಇದರ ಮೇಲೆಯೂ ನಿನ್ನ ಆಗ್ರಹವು ಇದ್ದರೆ, ನಿನ್ನ ಬೆನ್ನು ಹತ್ತಿ ಬರಲಿಕ್ಕೆ ನಾನು ಸಿದ್ಧಳೇ ಇದ್ದೇನೆ. ಮೇಹೇರ ಇನ್ನು ನನ್ನದೇನಾಗಬೇಕಾಗಿದೆ? ನಿನ್ನ ಸಲುವಾಗಿ ನಾನು ಪ್ರಾಣವನ್ನಾದರೂ ಕೊಡಲಿಕ್ಕೆ ಸಿದ್ಧಳಿರುವೆನು.

ಮಾರ್ಜೀನೆಯ ಈ ಮಾತುಗಳನ್ನು ಕೇಳಿ ಮೇಹರ್ಜಾನಳಿಗೆ ಸ್ವಲ್ಪ ಸಮಾಧಾನವಾಯಿತು; ಆದರೆ ತಾನು ಗರ್ಭಿಣಿಯಿದ್ದೇನೆಂಬ ಸುದ್ದಿಯನ್ನು ಕೇಳಿ ರಾಮರಾಜನು ತನ್ನನ್ನು ಭೆಟ್ಟಿಯಾಗದೆ ಹಾಗೇ ಹೋದದ್ದನ್ನೂ, ಪತ್ರದಲ್ಲಿ ತನ್ನ ಸಲುವಾಗಿ ತೋರಿಸಿದ ಅನಾದರವನ್ನೂ ಸ್ಮರಿಸಿ, ಪುನಃ ಆಕೆಯು ಸಂತಾಪಗೊಂಡು ಮಾರ್ಜೀನೆಯನ್ನು ಕುರಿತು, ಮಾರ್ಜೀನೇ, ನೀನು ಹೇಳುವದೆಲ್ಲ ನಿಜವು; ಆದರೆ ಅಪಮಾನಕ್ಕಿಂತ ಮರಣವೇ ಶ್ರೇಯಸ್ಕರವೆಂದು ತಿಳಿಯುವ ಅಭಿಮಾನಿಗಳಿಗೆ, ನಿನ್ನ ಬೋಧದಿಂದ ಏನು ಪ್ರಯೋಜನವಾಗುವದು ಹೇಳು? ಈಗ ಒಂದು ತಾಸಿನ ಹಿಂದಿದ್ದ ಮೇಹರ್ಜಾನಳು ಈಗ ಇರುತ್ತಾಳೆಂದು ತಿಳಿಯಬೇಡ. ಆಗ ಆಕೆಯು ಹಿಂದುವಿದ್ದಳು. ಈಗ ಆಕೆಯು ಸುಟ್ಟು ಬೂದಿಯಾಗಿ ಹೋದಳು. ಈಗಿನ ಮೇಹರ್ಜಾನಳು ಮುಸಲ್ಮಾನಳಿರುತ್ತಾಳೆ. ಆಕೆಯು ತನ್ನ ಜ್ಞಾತಿಗಳಾದ ಮುಸಲ್ಮಾನರಂತೆ ರಾಮರಾಜನ ಸಂಗೀತ ದ್ವೇಷ ಮಾಡುವವಳೇ ಸರಿ. ಆಕೆಯು ತಾನು ಬದುಕುವವರೆಗೆ ರಾಮರಾಜನ ಸೇಡು ತೀರಿಸಿಕೊಳ್ಳಲಿಕ್ಕೆ ಯತ್ನಿಸುವವಳೇ ಸರಿ. ಮೇಹರ್ಜಾನಳು ತನ್ನ ತನುಮನೋಧನಗಳನ್ನು ರಾಮರಾಜನಿಗೆ ನಿರ್ವಂಚನೆಯಿಂದ ಒಪ್ಪಿಸಿದ್ದಳು; ಆದರೆ ಆತನು ಈಗ ಅವನ್ನು ನಿರಾಕರಿಸಿ ಚೆಲ್ಲಿಕೊಡುವದರಿಂದ ಅವು ಕೊಳೆತು ವಿಕಾರವನ್ನು ಹೊಂದಿ, ರಾಮರಾಜನಿಗೆ ಬಾಧಕವಾದರೆ ಯಾರೇನು ಮಾಡಬೇಕು? ಮಾರ್ಜೀನೇ, ಬಹಳ ಮಾತುಗಳಿಂದೇನು? ಖಾನಜಮಾನ ಮಹಬೂಬಖಾನನ ಮಗಳಾದ ಈ ಮೇಹರ್ಜಾನಳಿಗೆ ಅಪಮಾನವು ಸಹನವಾಗದು. ಆಕೆಯು ಇಂದಿನಿಂದ ಎಲ್ಲ ಆಸೆಗಳನ್ನು ತೊರೆದಿರುವಳು. ರಾಮರಾಜನ ಸೇಡು ತೀರಿಸಿಕೊಳ್ಳುವದೊಂದು ಆಸೆಯು ಮಾತ್ರ ಆಕೆಗಿರುತ್ತದೆ. ರಾಮರಾಜನ ಹಂಗು ನನಗೆ ಇನ್ನು ಬೇಡ. ಆತನದೊಂದು ರಿಂಬಿಯನ್ನಾದರೂ ನಾನು ಮುಟ್ಟುವದಿಲ್ಲ. ಆತನ ವಸ್ತಬೇಡ, ವಸ್ತ್ರಗಳು ಬೇಡ; ದುಡ್ಡು ಬೇಡ, ಧೂಪ ಬೇಡ, ನಡೆ. ಇಲ್ಲಿಂದ ಹೊರಟು ಎಲ್ಲಿಗಾದರೂ ಹೋಗೋಣ. ನನ್ನ ತಂದೆ ಕೊಟ್ಟಿರುವ ಕೆಲವು ಆಭರಣಗಳು ನಮ್ಮ ಬಳಿಯಲ್ಲಿರುವವಷ್ಟೆ? ಅವನ್ನು ಮುರಿಸಿ ಹ್ಯಾಗಾದರೂ ಕಾಲಹರಣ ಮಾಡೋಣ। ರಾಮರಾಜನು ಈಗ ನನ್ನ ಉದರದಲ್ಲಿ ಬಿತ್ತಿರುವ ವಿಷದ ಬೀಜವು ದೊಡ್ಡ ವೃಕ್ಷವಾಗಿ, ಅದರ ಫಲಗಳ ಸೇವನದಿಂದ ಆ ರಾಮರಾಜನು ಸಮೂಲ ನಾಶಹೊಂದುವ ಹಾದಿಯನ್ನು ನೋಡೋಣ. ಇದರ ಮೇಲೆಯೂ ನೀನು ವ್ಯರ್ಥವಾಗಿ ನನ್ನನ್ನು ಬೋಧಿಸಿ ಕಾಲಹರಣ ಮಾಡಿ ದರೆ, ನನ್ನ ಜೀವವು ನನ್ನ ಕೈಯೊಳಗಿರುತ್ತದೆ. ಆ ಮೇಲೆ ನಿನ್ನ ಹಂಗಾದರೂ

ಏನು? ಮೇಹರ್ಜಾನಳ ನಿಶ್ಚಯದಲ್ಲಿ ಇನ್ನು ಅಂತರವಾಗಲಾರದು. ನಿನ್ನ ಹಳೆಯ ಬಟ್ಟೆಬರೆಗಳನ್ನೂ, ಬುರುಕೆಯನ್ನೂ ನನಗೆ ಕೊಡು. ಅವನ್ನು ಹಾಕಿಕೊಂಡು ಇಲ್ಲಿಂದ ಹ್ಯಾಗಾದರೂ ಮಾಡಿ ಪಾರಾಗಿ ಹೋಗೋಣ, ಹ್ಯಾಗೂ ನನ್ನ ಸುಖವು ಮಣ್ಣುಗೂಡಿ ಹೋಯಿತು. ಇನ್ನುಮೇಲೆ ದುಷ್ಟ ಹಿಂದುಗಳಿಂದ ನನ್ನಂಥ ಯವನ ತರುಣಿಯರ ಸುಖವು ಮಣ್ಣುಗೂಡದಂತೆ ಯತ್ನಿಸುವಾಗ ನನ್ನ ದೇಹವೂ ಮಣ್ಣಾದರೆ, ಒಂದು ಬಗೆಯ ಪರೋಪಕಾರವಾದರೂ ಘಟಿಸಿದಂತಾಗುವದು.

ಮಾರ್ಜೀನೆಗಾದರೂ ಮೇಹರ್ಜಾನಳ ಮಾತು ತೀರ ಅಯೋಗ್ಯವಾಗಿ ತೋರಲಿಲ್ಲ. ರಾಮರಾಜನು ತನ್ನ ಯೋಗ್ಯಬೋಧಕ್ಕೆ ಕಿವಿಗೊಡದೆ ವಿಷಯಲಂಪಟನಾಗಿ ಸಿಕ್ಕ ಹಾಗೆ ವಚನ ಕೊಟ್ಟು, ಲಗ್ನವಾಗಿ ಈಗ ಮೇಹರ್ಜಾನಳನ್ನು ಉದಾಸೀನ ಮಾಡಿದ್ದಕ್ಕಾಗಿ ಮಾರ್ಜೀನೆಗೂ ಸಂತಾಪವಾಗಿತ್ತು. ಅಯೋಗ್ಯ ನಡತೆಗಾಗಿ ಸರಳ ಮನಸ್ಸಿನವರಿಗಾಗುವ ಸಂತಾಪ ಭರವು ಕುಹಕರಿಗೆ ಗೊತ್ತಾಗದು. ಮೇಹರ್ಜಾನಳು ಸಂಸಾರಗೇಡಾಗಬಾರದೆಂದು ಮಾರ್ಜೀನೆಯು ಮೊದಮೊದಲು ಸೌಮ್ಯ ಮಾರ್ಗವನ್ನು ಹಿಡಿಯುವದಕ್ಕಾಗಿ ಆಕೆಯನ್ನು ಬೋಧಿಸಿದಳು; ಆದರೆ ಮಹಾ ಅಭಿಮಾನಿಯಾದ ಮೇಹರ್ಜಾನಳು ತನ್ನ ಸುಖಸರ್ವಸ್ವದ ಮೇಲೆ ಪ್ರತಿಜ್ಞೆಯ ಭಾಷೆಯಿಂದ ಎಳ್ಳುನೀರು ಬಿಟ್ಟದ್ದನ್ನು ನೋಡಿ ಗತ್ಯಂತರಕಾಣದೆ, ಮಾರ್ಜೀನೆಯೂ ಸ್ವಕುಲಾಭಿಮಾನವನ್ನು ತಾಳಿದಳು. ಹಿಂದೂಜನರಿಂದ ಮುಸಲ್ಮಾನರಿಗಾಗುತ್ತಿದ್ದ ತ್ರಾಸವನ್ನು ನೆನಿಸಲು ರಾಮರಾಜನಂಥ ಅಯೋಗ್ಯ ಹಿಂದುಗಳ ಶಾಸನವಾಗುವದು ಅನ್ಯಾಯವಲ್ಲೆಂಬ ಭಾವನೆಯು ಆಕೆಯಲ್ಲಿ ಉತ್ಪನ್ನವಾಯಿತು. ಆದರೂ ಆಕೆಯು ಮೇಹರ್ಜಾನಳನ್ನು ಕುರಿತು—ಮೇಹೇರ, ನಿನ್ನ ಮಾತು ಅಯೋಗ್ಯವೆಂದು ನಾನು ಹೇಳುವದಿಲ್ಲ. ಆದರೆ ದಂಪತಿಗಳೆನಿಸಿಕೊಳ್ಳುವವರಿಗೆ ಈ ನಡತೆಯು ಒಪ್ಪದು. ಅವರು ಪರಸ್ಪರರ ಅಪರಾಧಗಳನ್ನು ಕ್ಷಮಿಸಿ ಪ್ರೇಮಕ್ಕೆ ಭಂಗ ಬಾರದಂತೆ ನಡೆದುಕೊಳ್ಳುವದೇ ಯೋಗ್ಯವು. ನಿನ್ನ ಈಗಿನ ಪ್ರತಿಜ್ಞೆಯ ಪರಿಣಾಮವು ಯಾರಿಗೂ ಸುಖಪ್ರದವಾಗುವದಿಲ್ಲ. ಹೀಗಿದ್ದು ರಾಮರಾಜನನ್ನು ನೀನು ಶತ್ರುವೆಂದು ತಿಳಿದು ಆತನ ಸೇಡು ತೀರಿಸಿಕೊಳ್ಳುವದಕ್ಕಾಗಿ ಪ್ರತಿಜ್ಞೆಮಾಡುತ್ತೀ! ನಿನ್ನ ಪ್ರತಿಜ್ಞೆಯು ಅಯೋಗ್ಯವಾದರೂ ನಿನ್ನ ಮೇಲಿನ ಪ್ರೇಮಾತಿಶಯದಿಂದ ನಾನು ನಿನ್ನನ್ನು ಅನುಸರಿಸಬೇಕಾಗುತ್ತದೆ. ಇದು ದಂಪತಿಗಳು, ವಿಶೇಷವಾಗಿ ಅರ್ಧಾಂಗಿಯೆನಿಸುವವಳ ಧರ್ಮವಲ್ಲೆಂದು ನಾನು ನಿನಗೆ ಸ್ಪಷ್ಟವಾಗಿ ಕಡೆಯ ಸಾರೆ ಹೇಳುತ್ತೇನೆ. ರಾಮರಾಜನ ವಚನ ಭ್ರಷ್ಟತೆಗಾಗಿ ನನಗೂ ಸಂತಾಪವಾಗಿದೆ. ರಾಮರಾಜನಂಥ ಅಯೋಗ್ಯ ನಡತೆಯ ಹಿಂದುಗಳ ಸಂಬಂಧದ ತಿರಸ್ಕಾರವು ನನ್ನಲ್ಲಿಯೂ ಉತ್ಪನ್ನವಾಗುತ್ತದೆ; ಅಂಥವರ ಶಾಸನವಾದರೆ ನನಗೆ ಅನ್ಯಾಯವಾಗಿಯೂ ತೋರುವುದಿಲ್ಲ; ಆದರೂ ಮೇಹೇರ, ನೀನು ಹೀಗೆ ಕೃತಘ್ನಳಾಗುವದು ನನಗೆ ಸರಿದೋರುವದಿಲ್ಲ, ಎಂದು ಹೇಳಿದಳು. ಆಕೆಯ ಮಾತಿನಿಂದ ಮೇಹರ್ಜಾನಳ ಮನಸ್ಸು ತಿರುಗಲಿಲ್ಲ. ಆ ಅಭಿಮಾನ ಸ್ವಭಾವದ ತರುಣಿಯು ಒಂದೇ ಹಟವನ್ನು ಹಿಡಿದಳು. ಆಗ ಮಾರ್ಜೀನೆಯು ಮೇಹೇರ, ನೀನು ಹೀಗೆ ಹಟಮಾಡಿದರೆ ಉಪಾಯವಿಲ್ಲ, ನಿನ್ನ ಮಾತಿಗೆ ವಿರುದ್ಧವಾಗಿ ನಾನು ನಡೆಯಲಾರೆನು.

ಇನ್ನು ಕುಂಜವನದಿಂದ ಹೊರಟುಹೋಗುವ ಉಪಾಯವನ್ನು ಮಾಡುವೆನು. ಈ ಪ್ರಸಂಗದಲ್ಲಿ ನೀನು ನನ್ನ ಮಾತನ್ನು ಕೇಳದಿದ್ದರೆ ಕೆಲಸವಾಗುವದಿಲ್ಲ. ಧನಮಲ್ಲನ ಮನಸ್ಸನ್ನು ಒಲಿಸಿಕೊಂಡ ಹೊರತು ನಾವು ಇಲ್ಲಿಂದ ಪಾರಾಗಿ ಹೋಗಲಾರೆವು. ಧನಮಲ್ಲನನ್ನು ಕಂಡರೆ ನೀನು ಸೇರುವದಿಲ್ಲ. ಆತನು ಕಣ್ಣಿಗೆ ಬಿದ್ದ ಕೂಡಲೆ ಕವಕ್ಕನೆ ಆತನ ಮೈಮೇಲೆ ಹೋಗುತ್ತೀ. ಅಂದಬಳಿಕ ನಾವು ಇಲ್ಲಿಂದ ಹ್ಯಾಗೆ ಪಾರಾಗಿ ಹೋಗಬೇಕು? ಧನಮಲ್ಲನ ಕಾವಲು, ಕೃಷ್ಣಸರ್ಪದ ಕಾವಲು ಇದ್ದ ಹಾಗೆ ಇರುತ್ತದೆ.

ಮಾರ್ಜೀನೆಯ ಈ ಮಾತುಗಳನ್ನು ಕೇಳಿ, ಮೇಹರ್ಜಾನಳು–ಮಾರ್ಜೀನೇ, ಧನಮಲ್ಲನನ್ನು ಕಂಡರೆ ನನಗೆ ಬಹಳ ತ್ರಾಸವಾಗುತ್ತದೆ. ಆತನು ಕೃಷ್ಣಸರ್ಪದಂತೆ ನನಗೆ ಕಾಣುವದರಿಂದ, ಆತನನ್ನು ನೋಡಿದರೆ ನನಗೆ ಅಂಜಿಕೆಯೂ ಬರುತ್ತದೆ; ಆದರೆ ಈಗ ನಾನು ಆತನ ಉಸಾಬರಿಗೆ ಬರುವದಿಲ್ಲ. ನಾನು ಆತನ ಸಂಗಡ ಮಾತಾಡುವ ಪ್ರಸಂಗವನ್ನೇ ನೀನು ತರಬೇಡ. ನೀನು ಬೇಕಾದದ್ದು ಮಾಡು, ಇಂದು ಸಂಜೆಯೊಳಗಾಗಿ ನಾವು ಕುಂಜವನವನ್ನು ಬಿಟ್ಟು ಹೋಗತಕ್ಕದ್ದು ಎಂದು ಹೇಳಿದಳು. ಆಗ ಮಾರ್ಜೀನೆಯು ಧನಮಲ್ಲನ ಬಳಿಗೆ ಹೋಗಿ–ಧನಮಲ್ಲ, ಅವ್ವನವರು ಈಗಲೇ ಸಂಗನಪಲ್ಲಿಯೊಳಗಿನ ಪೀರನ ಗೋರಿಯ ದರ್ಶನಕ್ಕಾಗಿ ಹೋಗಬೇಕೆನ್ನುತ್ತಾರೆ; ಶಹಾನವಾಜ ಪೀರರ ದರ್ಶನವಾಗುವವರೆಗೆ ಅವರು ಬಾಯಲ್ಲಿ ನೀರು ಹಾಕುವದಿಲ್ಲವಂತೆ. ನಿನ್ನೆ ರಾತ್ರಿ ಒದಗಿದ ಅನರ್ಥವನ್ನು ನೀನು ಕಣ್ಣಾ ಮುಟ್ಟಿ ನೋಡಿರುವೆಯಷ್ಟೇ? ನಿನ್ನೆ ಬೆಳಗು ಮುಂಜಾನೆ ಪೀರಸಾಹೇಬರು ಅವ್ವನವರ ಕನಸಿನಲ್ಲಿ ಬಂದು– ನೀನು ನನ್ನ ದರ್ಶನಕ್ಕೆ ಬಾ, ಅಂದರೆ ಎಲ್ಲ ಅರಿಷ್ಟಗಳ ನಿವಾರಣವಾಗುವದು ಎಂದು ಹೇಳಿದರಂತೆ! ಪೀರಸಾಹೇಬರ ಮೇಲೆ ಅವ್ವನವರ ಭಕ್ತಿಯು ಬಹಳ. ಅವರು ಈಗ ದರ್ಶನಕ್ಕೆ ಹೋಗಿಯೇ ತೀರಬೇಕೆಂದು ಹಟ ಹಿಡಿದಿರುವರು. ಹೋಗು ರಥವನ್ನು ಹೂಡಿಕೊಂಡು ಬಾ, ಎಂದು ಹೇಳಲು, ಧನಮಲ್ಲನು ಬೆರಗಾಗಿ ಮಾರ್ಜೀನೆಯ ಮೋರೆಯನ್ನು ನೋಡುತ್ತ ನಿಂತುಕೊಂಡನು. ಆಗ ಮಾರ್ಜೀನೆಯ ಪುನಃ ಆತನನ್ನು ಕುರಿತು–ಎಲಾ ಹೀಗೆ ಹುಚ್ಚನ ಹಾಗೆ ಸುಮ್ಮನೆ ನೋಡುತ್ತ ಯಾಕೆ ನಿಂತುಕೊಂಡೇ? ನಿನಗೆ ಅವ್ವನವರ ಹಟಮಾರಿ ಸ್ವಭಾವವು ಗೊತ್ತಿಲ್ಲವೆ? ಅವರ ಬಾಯಿಂದ ಬಂದದ್ದು ಆಗಲೇಬೇಕು. ಅದರಲ್ಲಿ ಇದು ಪೀರನ ದರ್ಶನದ ಕೆಲಸವು. ದರ್ಶನವಾಗದ ಹೊರತು ಅವರು ನಿಶ್ಚಯವಾಗಿ ಬಾಯಲ್ಲಿ ನೀರು ಹಾಕುವದಿಲ್ಲ. ಹೋಗು ಸುಮ್ಮನೆ ರಥಕ್ಕೆ ಎತ್ತುಗಳನ್ನು ಹೂಡಿ ಸಿದ್ಧಮಾಡಿಕೊಂಡು ಬಾ, ನೀನೇ ರಥವನ್ನು ಹೊಡೆಯುವೆಯಂತೆ, ಎಂದು ಹೇಳಿದಳು

''ನೀನೆ ರಥವನ್ನು ಹೊಡೆಯುವೆಯಂತೆ'' ಎಂಬ ವಾಕ್ಯವು ಕಿವಿಗೆ ಬಿದ್ದ ಕೂಡಲೆ, ಧನಮಲ್ಲನು ಗೋಣುಹಾಕಿ ಸಮ್ಮತಿಯನ್ನಿತ್ತು ರಥವನ್ನು ಹೂಡಿಕೊಂಡು ಬರುವದಕ್ಕಾಗಿ ಹೋದನು. ಸ್ವಲ್ಪ ಹೊತ್ತಿನಲ್ಲಿಯೇ ರಥವು ಸಂಗನಪಲ್ಲಿಗೆ ಹೊರಟಿತು. ಹಾದಿಯಲ್ಲಿ ಹೋಗುವಾಗ ಮೇಹರ್ಜಾನಳಾಗಲಿ, ಮಾರ್ಜೀನೆಯಾಗಲಿ, ಚಕಾರ ಶಬ್ದವನ್ನು ಮಾತಾಡಲಿಲ್ಲ. ಇಬ್ಬರೂ ವಿಚಾರಮಗ್ನರಾಗಿದ್ದರು. ಮೇಲಾಗಿ ಧನಮಲ್ಲನಿದ್ದದ್ದರಿಂದ ಅವರು ಯಾವ

ಮಾತೂ ಆಡುವಹಾಗಿದ್ದಿಲ್ಲ. ಮೇಹರ್ಜಾನಳು ಸಂಸಾರಗೇಡಾದದ್ದಕ್ಕಾಗಿ ಮಾರ್ಜೀನೆಯು ಬಗೆ ಬಗೆಯಾಗಿ ಆಲೋಚಿಸುತ್ತ ಕುಳಿತುಕೊಂಡಿದ್ದಳು. ಮೇಹರ್ಜಾನಳು ತಾನು ಕುಂಜವನದಿಂದ ಆದಷ್ಟು ಬೇಗನೆ ದೂರ ಯಾವಾಗ ಹೋದೇನೆಂಬ ಒಂದೇ ವಿಚಾರದಲ್ಲಿ ಮಗ್ನಳಾಗಿದ್ದಳು. ಕುಂಜವನದಿಂದ ಸಂಗನಪಲ್ಲಿಯು ಆರು ಹರದಾರಿಯಿತ್ತು. ಅಲ್ಲಿಯ ದರ್ಗಾದ ಪೀರನು ಬಹು ಜಾಗ್ರತನೆಂಬ ಖ್ಯಾತಿಯಿದ್ದದ್ದರಿಂದ, ಬಹುಜನ ಮುಸಲ್ಮಾನರು ದಿನಾಲು ದರ್ಶನಕ್ಕೆ ಬರುತ್ತಿದ್ದರು. ಅಲ್ಲಿಯ ಉತ್ಪನ್ನವು ವಿಶೇಷವಾಗಿದ್ದದ್ದರಿಂದಲೂ, ಪ್ರತಿ ಗುರುವಾರ, ಶುಕ್ರವಾರ ಫಕೀರರಿಗೂ, ಬಡ ಬಗ್ಗರಿಗೂ ವಿಶೇಷವಾಗಿ ದಕ್ಷಿಣೆ ದಾನಗಳು ಸಿಗುತ್ತಿದ್ದರಿಂದಲೂ, ದೊಡ್ಡ ಜಾತ್ರೆ ಕೂಡಿದಂತೆ ಅಲ್ಲಿ ಜನರು ನೆರೆಯುತ್ತಿದ್ದರು. ಸಂಗನಪಲ್ಲಿಯು ವಿಜಯನಗರದ ಹಾಗು ಮುಸಲ್ಮಾನ ರಾಜ್ಯಗಳ ಮೇರೆಯಲ್ಲಿದ್ದು, ಅದು ವಿಜಯನಗರದ ಅರಸರ ಸ್ವಾಧೀನ ದಲ್ಲಿತ್ತು, ಆ ಊರಲ್ಲಿ ಹಿಂದೂ ಜನರ ವಸ್ತಿಯೇ ವಿಶೇಷವಾಗಿತ್ತು, ಜನವಾಡಿಕೆಯಂತೆ ಪೀರಸಾಹೇಬರ ಮೇಲೆ ಮೇಹರ್ಜಾನಳ ಭಕ್ತಿಯಾದರೂ ಇತ್ತು, ಆಕೆಯು ಆಗಾಗ್ಗೆ ಪೀರನ ದರ್ಶನಕ್ಕಾಗಿ ದರ್ಗೆಗೆ ಬರುತ್ತಿದ್ದಳು. ಮನಸ್ಸಿಗೆ ಬಹಳ ಅಸಮಾಧಾನವಾದಾಗ, ಪೀರನ ದರ್ಶನಕ್ಕೆ ಹೋಗುವದು ಆಕೆಯ ವಾಡಿಕೆಯ ಕ್ರಮವಾಗಿತ್ತು, ಎತ್ತುಗಳು ಅತ್ಯುತ್ಕೃಷ್ಟವಾಗಿದ್ದದರಿಂದ ಅವುಗಳಿಗೆ ಆರು ಹರದಾರಿಯ ಲಕ್ಷವಿದ್ದಿಲ್ಲ, ಅವು ಹಾಹಾ ಅನ್ನುವದರೊಳಗಾಗಿ ದರ್ಗೆಯ ಬಾಗಿಲಿಗೆ ಹೋದವು. ದರ್ಗೆಯ ಆವಾರವು ಬಹು ಪ್ರಶಸ್ತವಾಗಿತ್ತು; ಆದರೆ ಅದರೊಳಗೆ ಪಶುಗಳನ್ನು ಹೂಡಿದ ರಥ ಮೊದಲಾದವುಗಳನ್ನು ಒಯ್ಯುವ ಪ್ರಚಾರವಿದ್ದಿಲ್ಲ 'ಹಾಗೆ ಮಾಡುವದರಿಂದ ಪೀರಸಾಹೇಬರ ಉಪಮರ್ದ ಮಾಡಿದ ಹಾಗಾಗುತ್ತದೆಂದು ಸರ್ವಾನುಮತ ದಿಂದ ಗೊತ್ತಾಗಿತ್ತು, ಅಶಕ್ತರೂ, ವೃದ್ಧರೂ, ಹೆಳವರೂ ಇದ್ದರೆ ಅವರು ಮೇಣೆ, ಪಲ್ಲಕ್ಕಿ, ಡೋಲಿ ಮೊದಲಾದ ಮನುಷ್ಯ ವಾಹನಗಳಲ್ಲಿ ಕುಳಿತು ಪೀರಸಾಹೇಬರ ಗೋರಿಯ ದರ್ಶನಕ್ಕೆ ಹೋಗಬಹುದಾಗಿತ್ತು; ಆದರೆ ದಷ್ಟಪುಷ್ಟರಿದ್ದವರು ಎಂಥ ಶ್ರೀಮಂತರಿದ್ದರೂ, ನಡದೇ ದರ್ಶನಕ್ಕೆ ಹೋಗಬೇಕಾಗಿತ್ತು

ರಥವು ದರ್ಗೆಯ ಬಾಗಿಲಲ್ಲಿ ನಿಂತಕೂಡಲೆ, ಮೇಹರ್ಜಾನಳು ನಿಟ್ಟುಸಿರುಬಿಟ್ಟು ರಥದಿಂದ ಕೆಳಗೆ ಧುಮುಕಿದಳು. ಆಕೆಯು ಮಾರ್ಜೀನೆಗೆ ಹೂ, ಲಗು ಇಳಿ, ಜನ ದಟ್ಟಣೆಯಾದ ಮೇಲೆ ದರ್ಶನಕ್ಕೆ ತೊಂದರೆಯಾದೀತು ಎಂದು ಹೇಳುತ್ತಿರಲು, ಮಾರ್ಜೀನೆಯೂ ರಥದಿಂದ ಇಳಿದಳು. ಆಗ ಮಾರ್ಜೀನೆಯು ಧನಮಲ್ಲನಿಗೆ—"ನೀನು ಆ ಗಿಡದ ಬುಡದಲ್ಲಿ ರಥವನ್ನು ಬಿಟ್ಟುಕೊಂಡು ಸ್ವಲ್ಪ ವಿಶ್ರಮಿಸು, ಎಂದಿನಂತೆ ಈಗ ನಾವು ದರ್ಶನ ತಕ್ಕೊಂಡು ಬಂದಕೂಡಲೆ....." ಎಂದು ನುಡಿಯುತ್ತಿರಲು, ಧನಮಲ್ಲನು ಆ ಮಾತನ್ನು ಕಿವಿಯ ಮೇಲೆ ಹಾಕಿ ಕೊಳ್ಳದೆ, ಗಿಡದ ಕಡೆಗೆ ರಥವನ್ನು ಸಾಗಿಸಿಕೊಂಡು ನಡೆದನು. ಅದನ್ನು ನೋಡಿ ಮಾರ್ಜೀನೆಯು—ಏನು ಟೊಣಪನಿವನು, ಎಂದು ತಿರಸ್ಕರಿಸುತ್ತ, ಮೇಹರ್ಜಾನಳನ್ನು ಕರಕೊಂಡು ದರ್ಗೆಯನ್ನು ಪ್ರವೇಶಿಸಿದಳು. ಇತ್ತ ಧನಮಲ್ಲನು ಗಿಡದ ಬುಡದಲ್ಲಿ ರಥವನ್ನು ಬಿಟ್ಟು, ಗಿಡದ ಬೊಡ್ಡೆಗೆ ಎತ್ತುಗಳನ್ನು ಕಟ್ಟಿ, ಮೇವು ಚಲ್ಲಿ ತನ್ನ ಕರಿಯ ಕಂಬಳಿಯನ್ನು

ಚಲ್ಲಿಕೊಂಡು ಸ್ವಲ್ಪ ಅಡ್ಡಾದನು. ಮಧ್ಯಾಹ್ನದ ಬಿಸಿಲಿನಲ್ಲಿ ಗಿಡದ ತಣ್ಣೆಳಲ ಸುಖಸ್ಪರ್ಶದಿಂದ ಆ ನಿಶ್ಚಿಂತಪುರುಷನಿಗೆ ಗಾಢವಾದ ನಿದ್ರೆಯು ಹತ್ತಿತ್ತು, ತಾಸಾಯಿತು, ಎರಡು ತಾಸಾಯಿತು, ಮೂರು ತಾಸಾಯಿತು; ಆದರೂ ಆತನನ್ನು ಎಬ್ಬಿಸಲಿಕ್ಕೆ ಯಾರೂ ಬರಲಿಲ್ಲ, ಆ ಲಕ್ಷ್ಯ ಧನ ಮಲ್ಲನಿಗೂ ಎಚ್ಚರವಾಗಲಿಲ್ಲ, ಮುಂದೆ ಒಂಭತ್ತು ತಾಸಿನ ಸುಮಾರಕ್ಕೆ ಆತನಿಗೆ ಫಕ್ಕನೆ ಎಚ್ಚರಿಕೆಯಾಯಿತು. ಇಷ್ಟು ಹೊತ್ತಾದರೂ ಮೇಹರ್ಜಾನಳೂ, ಮಾರ್ಜೀನೆಯೂ ಬಾರದಿರುವದನ್ನು ನೋಡಿ ಅವನು ಗಾಬರಿಯಾದನು. ಬೆಪ್ಪನಂತೆ ದರ್ಗೆಯ ಆವಾರದಲ್ಲಿ ನಾಲ್ಕೂ ಕಡೆಯಲ್ಲಿ ಅವರನ್ನು ಹುಡುಕಹತ್ತಿದನು. ಹೋಗಬರುವವರನ್ನು ಸನ್ನೆಮಾಡಿ ಕೇಳಲು, ಈ ವಿಲಕ್ಷಣ ಭವ್ಯಮೂರ್ತಿ ಯನ್ನು ನೋಡಿ ಜನರು ನಗುತ್ತಿದ್ದರಲ್ಲದೆ, ಧನಮಲ್ಲನಿಗೆ ಆತನ ಜನರ ಗೊತ್ತೇನೂ ಹತ್ತಲಿಲ್ಲ, ಧನಮಲ್ಲನು ದರ್ಗೆಯ ಹಿಂದೆ ಹೋಗಿ ನೋಡಿದನು. ದರ್ಗೆಯಿಂದ ಬೇರೆ ಬೇರೆ ಕಡೆಗೆ ಹೋಗುವ ಮಾರ್ಗಗಳನ್ನು ಹಿಡಿದುಹೋಗಿ ಅಲ್ಲಿ ಬರುವ ಜನರನ್ನು ಏನೇನೋ ಸನ್ನೆ ಮಾಡಿ ಕೇಳಿದನು. ಆದರೆ ಅದರಿಂದ ಪ್ರಯೋಜನವೇನೂ ಆಗಲಿಲ್ಲ, ದರ್ಗೆಯೊಳಗಿನ ಮುಖ್ಯ ಮನುಷ್ಯನನ್ನು ಕೇಳಲು, ಆತನು ಮಧ್ಯಾಹ್ನದಲ್ಲಿ ದರ್ಶನಕ್ಕೆ ಬಂದವರು ಆಗಲೇ ಹೋದರೆಂದು ಹೇಳಿದನು. ಹಲವು ಸಾರೆ ದರ್ಶನಕ್ಕೆ ಬಂದವರಾದ್ದರಿಂದ ಧನಮಲ್ಲನ ಗುರುತೂ, ಮಾರ್ಜೀನೆ– ಮೇಹರ್ಜಾನರ ಗುರುತೂ ಆ ಮುಖ್ಯ ಮನುಷ್ಯನಿಗೆ ಇತ್ತು ಆತನೂ ಧನಮಲ್ಲನ ಶೋಧಕ್ಕೆ ಸಹಾಯ ಮಾಡಿದಂತೆ ತೋರಿಸಿದನು. ಕಡಿಗೆ ಹೊತ್ತು ಮುಣುಗಲಿಕ್ಕೆ ಅರ್ಧ ತಾಸು ಉಳಿಯಿತು. ಆಗ ಧನಮಲ್ಲನು ಮಾರ್ಜೀನೆ ಮೇಹರ್ಜಾನರನ್ನು ಹುಡುಕಬೇಕೋ, ಅವರು ಎಲ್ಲಿಯೋ ಹೋದರೆಂಬ ಸುದ್ದಿಯನ್ನು ರಾಮರಾಜನಿಗೆ ಹೇಳಲಿಕ್ಕೆ ವಿಜಯನಗರಕ್ಕೆ ಹೋಗಬೇಕೋ, ಎಂದು ಆಲೋಚಿಸಹತ್ತಿದನು. ಕಡೆಗೆ ಹೋಗಬೇಕೆಂದು ನಿರ್ಧರಿಸಿ ಅವನು ರಥಕ್ಕೆ ಎತ್ತುಗಳನ್ನು ಹೂಡಿ ವಿಜಯನಗರದ ಹಾದಿಯನ್ನು ಹಿಡಿದನು.

## ರಾಮರಾಜನ ಪಶ್ಚಾತ್ತಾಪ

ದರ್ಗಾದಿಂದ ವಿಜಯನಗರವು ಒಳ್ಳೆ ಹದಿನೆಂಟು ಹರದಾರಿಯಿತ್ತು, ಗಾಡಿಗೆ ಹೂಡಿದ ಎತ್ತುಗಳು ಅತ್ಯುತ್ತಮವಿದ್ದದ್ದರಿಂದ ಅವಕ್ಕೆ ಹಾದಿ ನಡೆಯುವ ಲಕ್ಷವಿದ್ದಿಲ್ಲ. ಬೆಳಗಾಗುವದರೊಳಗೆ ವಿಜಯನಗರಕ್ಕೆ ಮುಟ್ಟಬೇಕೆಂಬ ಆತುರದಿಂದ ಧನಮಲ್ಲನು ಎತ್ತುಗಳನ್ನು ಒತ್ತರದಿಂದ ನಡೆಸಹತ್ತಿದನು. ಆತನ ಮನಸ್ಸಿಗೆ ಸ್ವಸ್ಥವಿದ್ದಿಲ್ಲ, ಕೇವಲ ಮೇಹರ್ಜಾನಳ, ಹಾಗು ಮಾರ್ಜೀನೆಯ ಕಾವಲಿಗಾಗಿ ತನ್ನನ್ನು ನಿಯಮಿಸಿರಲು, ತಾನು ಹೀಗೆ ಅವರನ್ನು ಕಳಕೊಂಡ ಸುದ್ದಿಯನ್ನು ಕೇಳಿದರೆ ರಾಮರಾಜನು ಏನು ಮಾಡುವನೋ ಎಂಬ ಭಯದಿಂದ ಅವನ ಮನಸ್ಸು ಅಸ್ವಸ್ಥವಾಯಿತು. ಆತನಿಗೆ ಏನೂ ತೋಚಲೊಲ್ಲದು. ಅರುಣೋದಯ ಸಮಯಕ್ಕೆ ಆತನ ರಥವು ರಾಮರಾಜನ ಮನೆಯ ಬಾಗಿಲಿಗೆ ಹೋಯಿತು. ಎತ್ತುಗಳು ರಾತ್ರಿ ಒಂದೇಸವನೆ

ನಡೆದುಬಂದದ್ದರಿಂದ ಬಹಳ ದಣಿದಿದ್ದವು. ಆದ್ದರಿಂದ ಧನಮಲ್ಲನು ಮೊದಲು ಎತ್ತುಗಳ ಯೋಗಕ್ಷೇಮವನ್ನು ತೆಗೆದುಕೊಂಡನು. ಧನಮಲ್ಲನು ರಾಮರಾಜನ ನಂಬಿಗೆಯವರಲ್ಲಿ ಒಬ್ಬನಾಗಿದ್ದನು. ಧನಮಲ್ಲನು ಮಧ್ಯರಾತ್ರಿ ಯಲ್ಲಿ ಬಂದು ನನ್ನನ್ನು ಕಾಣಬೇಕೆಂದು ಹೇಳಿದರೂ, ಕೂಡಲೇ ನನ್ನನ್ನು ಎಬ್ಬಿಸಿ ಸುದ್ದಿಯನ್ನು ಹೇಳಬೇಕೆಂದು ರಾಮರಾಜನು ಎಲ್ಲರಿಗೆ ಕಟ್ಟಪ್ಪಣೆ ಮಾಡಿದ್ದನು; ಆದರೆ ಈಗ ಧನಮಲ್ಲನು ಅಷ್ಟು ಅವಸರ ಮಾಡಲಿಲ್ಲ. ಮಹಾರಾಜರು ಎದ್ದು ಪ್ರಾತರ್ವಿಧಿಗಳನ್ನು ತೀರಿಸಿಕೊಂಡ ಕೂಡಲೆ ನಾನು ಬಂದಿದ್ದ ಸುದ್ದಿಯನ್ನು ಹೇಳಬೇಕೆಂದು ಕಾವಲುಗಾರರಿಗೆ ಸನ್ನೆಯಿಂದ ತಿಳಿಸಿದ್ದನು. ಇತ್ತ ಎತ್ತುಗಳ ವ್ಯವಸ್ಥೆಯಾಗುವದರೊಳಗೆ ರಾಮರಾಜನು ಧನಮಲ್ಲನನ್ನು ಕರೆಸಿಕೊಂಡನು. ಧನಮಲ್ಲನು ಒಳಗೆ ಬಂದ ಕೂಡಲೆ ಎಲ್ಲ ಸೇವಕರನ್ನು ರಾಮರಾಜನು ಹೊರಗೆ ಕಳಿಸಿದನು. ಒಂದು ಕೂಗಿನ ಅಳತೆಯಲ್ಲಿ ನಿಂತಿರುವಂತೆ ಒಬ್ಬ ಸೇವಕನಿಗೆ ಮಾತ್ರ ಅಪ್ಪಣೆಯಾಗಿತ್ತು. ಧನಮಲ್ಲನು ಏನು ಹೇಳುವನೆಂಬುದನ್ನು. ಕೇಳಲಿಕ್ಕೆ ರಾಮರಾಜನು ಬಹು ಉತ್ಸುಕವಾಗಿರುವಂತೆ ತೋರುತ್ತಿತ್ತು. ಧನಮಲ್ಲನು ಸಂಶಯದ ಮುದ್ರೆಯಿಂದ ಒಮ್ಮೆ ಎಲ್ಲ ಕಡೆಗೆ ನೋಡಿದನು. ಆಗ ರಾಮರಾಜನು ಆತನನ್ನು ಕುರಿತು– ಹೂಂ, ಮಾತಾಡು, ಮಾತಾಡು; ಇತ್ತ ನಿನ್ನ ಮಾತು ಯಾರಿಗೂ ಕೇಳಿಸುವ ಹಾಗಿಲ್ಲ. ಸುಮ್ಮನೆ ಅತ್ತಿತ್ತ ನೋಡಿ ಹೊತ್ತುಗಳೆಯಬೇಡ, ಅನ್ನಲು ಕನ್ನಡಿಗನಾದ ಧನಮಲ್ಲನು ರಾಮರಾಜನಿಗೆ ಕನ್ನಡ ಮಾತುಗಳಿಂದ–ಮಹಾರಾಜ, ಪಾರಿವಾಳಗಳು ಹಾರಿಹೋದವು; ಅವು ನನ್ನನ್ನು ಮೋಸಗೊಳಿಸಿದವು, ಎಂದು ಹೇಳಿದನು. ಅದನ್ನು ಕೇಳಿದಕೂಡಲೆ ರಾಮರಾಜನು ಸಂತಾಪದಿಂದ ಎದ್ದು ನಿಂತು—''ತಿಳಿಗೇಡಿಯೇ ಏನು ಬೊಗಳುವೆ? ಮೂಕನ ಸೋಗಿನಿಂದ ನಿನ್ನನ್ನು ಅವರ ಬಳಿಯಲ್ಲಿಟ್ಟದ್ದು ಇಷ್ಟರ ಸಲುವಾಗಿಯೇ ಏನು? ಪಾರಿವಾಳಗಳು ಹಾರಿ ಹೋದವಂತೆ, ಮೋಸಮಾಡಿದವಂತೆ! ಮೂರ್ಖಾ, ನೀನೇನು ಕತ್ತೆಯನ್ನು ಕಾಯುತ್ತಿದ್ದೆ? ಅವರನ್ನು ಯಾಕೆ ಹೋಗಗೊಟ್ಟೆ? ಬೊಗಳು. ಏನಾಯಿತೆಂಬದನ್ನು ಬೇಗನೆ ಬೊಗಳು'' ಎಂದು ರೇಗಿಗೇಳಲು, ಧನಮಲ್ಲನು—ನೀವು ಸಮಾಧಾನದಿಂದ ಕೇಳಿಕೊಂಡರೆ ಎಲ್ಲ ಸುದ್ಧಿಯನ್ನು ಹೇಳುತ್ತೇನೆ. ಎಲ್ಲವನ್ನು ಕೇಳಿದ ಬಳಿಕ ಅದರಲ್ಲಿ ನನ್ನ ಅಪರಾಧವೇನೂ ಇಲ್ಲೆಂದು ನಿಮಗೆ ಕಾಣಬಹುದು. ಸುದ್ದಿಯನ್ನು ಕೇಳಿಕೊಳ್ಳದೆ ಸುಮ್ಮನೆ ಹೆಸರಿಡುವದಾಗಿದ್ದರೆ, ಅಲ್ಲಿ ಮೂಕ ನಾಗಿದ್ದಂತೆ ಇಲ್ಲಿಯೂ ನಾನು ಮೂಕನೆಂತಲೇ ತಿಳಿಯಿರಿ!

ಧಲ್ಲಮಲ್ಲನ ಈ ಎಟ್ಟಿ ಮಾತುಗಳನ್ನು ಕೇಳಿ, ರಾಮರಾಜನು ತನ್ನ ಸಿಟ್ಟನ್ನು ನುಂಗಿ ಕೊಳ್ಳಬೇಕಾಯಿತು; ಯಾಕೆಂದರೆ, ಧನಮಲ್ಲನು ವಿಲಕ್ಷಣ ಮನುಷ್ಯನೆಂಬುದು ರಾಮರಾಜನಿಗೆ ಗೊತ್ತಿತ್ತು; ಆದ್ದರಿಂದ ಆತನು ಸಮಾಧಾನದಿಂದ ಧನಮಲ್ಲನನ್ನು ಕುರಿತು—ಹೂ, ಮಾತಾಡು ಮಾತಾಡು, ಏನು ಹೇಳುವದನ್ನು ಬೇಗನೆ ಹೇಳು ಅನ್ನಲು, ಧನಮಲ್ಲನು ನಡೆದ ಸಂಗತಿಯನ್ನೆಲ್ಲ ಹೇಳಿದನು. ಆತನಿಲ್ಲದಾಗ ಮೇಹರ್ಜಾನಳೂ, ಮಾರ್ಜೀನೆಯೂ ಆಡಿದ ಮಾತುಗಳು ಅವನಿಗೆ ಗೊತ್ತಿಲ್ಲದ್ದರಿಂದ ಅವಷ್ಟನ್ನು ಮಾತ್ರ ಹೇಳಲಿಲ್ಲ. ರಾಮರಾಜನು ಧನಮಲ್ಲನ ಎಲ್ಲ ಮಾತುಗಳನ್ನು

ಲಕ್ಷಪೂರ್ವಕವಾಗಿ ಕೇಳಿಕೊಂಡಮೇಲೆ, ವಿಚಾರಮಗ್ನನಾಗಿ ಕೆಲಹೊತ್ತಿನ ಮೇಲೆ ಧನಮಲ್ಲನನ್ನು ಕುರಿತು–

ರಾಮರಾಜ–ಅವರು ತಮ್ಮ ಸಂಗಡ ಏನೇನು ಸಾಮಾನು ಒಯ್ದಿದ್ದಾರೆ?

ಧನಮಲ್ಲ–ಅವರು ಒಂದು ರಿಂಬಿಯನ್ನೂ ಸಹ ಸಂಗಡ ತಕ್ಕೊಂಡು ಹೋಗಿರುವದಿಲ್ಲ. ಪ್ರತಿ ಒಂದು ಸಾರೆ ದರ್ಗಾಕ್ಕೆ ಹೋಗುವಾಗ ಒಯ್ಯುತ್ತಿದ್ದ ಸಾಮಾನುಗಳನ್ನು ಸಹ ಈ ಸಾರೆ ಅವರು ಒಯ್ದಿರುವದಿಲ್ಲ. ಅಂದಬಳಿಕ ಅವರು ತಿರುಗಿ ಬರಲಿಕ್ಕಿಲ್ಲೆಂಬ ಕಲ್ಪನೆಯಾದರೂ ನನಗೆ ಹ್ಯಾಗಾಗಬೇಕು?

ರಾಮರಾಜ–ದರ್ಗೆಯಲ್ಲಿ ನೀನೇನು ಶೋಧಮಾಡಿದೆ?

ಧನಮಲ್ಲ–ಮಾಡಲಿಕ್ಕೆ ಶಕ್ಯವಿದ್ದಮಟ್ಟಿಗೆ ಎಲ್ಲ ಕಡೆಗೂ ಶೋಧ ಮಾಡಿದೆನು. ಇನ್ನು ಹೀಗೆ ಸುಮ್ಮನೆ ಶೋಧಮಾಡುತ್ತ ಕಾಲಹರಣ ಮಾಡುವದಕ್ಕಿಂತ ಸನ್ನಿಧಿಯಲ್ಲಿ ಎಲ್ಲ ಸಂಗತಿಗಳನ್ನು ಹೇಳಿ ಮುಂದಿನ ಹಾದಿಯನ್ನು ಕಂಡುಕೊಳ್ಳುವದು ಯೋಗ್ಯವೆಂದು ತೋರಿದ್ದರಿಂದ, ತಮ್ಮ ಬಳಿಗೆ ಬಂದೆನು.

ಧನಮಲ್ಲನ ಈ ಉತ್ತರದ ಕಡೆಗೆ ರಾಮರಾಜನ ಲಕ್ಷವಿದ್ದಂತೆ ತೋರಲಿಲ್ಲ. ಆತನ ಮನಸ್ಸಿನಲ್ಲಿ ಹಲವು ವಿಚಾರಗಳು ಉತ್ಪನ್ನವಾಗಿ ಮನಸ್ಸನ್ನು ಚಂಚಲವಾಗಿ ಮಾಡಿದ್ದವು. ಸ್ವಲ್ಪ ಹೊತ್ತಿನ ಮೇಲೆ ಆತನು ಧನಮನಲ್ಲನಿಗೆ–ಈಗ ನೀನು ಹೋಗು, ಸಂಜೆಯವರೆಗೆ ವಿಶ್ರಮಿಸು, ಸಂಜೆಯ ಮುಂದೆ ನಾನು ನಿನ್ನನ್ನು ಕರೆಸುವೆನು. ಏನು ಮಾಡಬೇಕೆಂಬುದರ ವಿಚಾರವು ಮುಂದೆ, ಈಗ ಬೇಡ, ಹೂ ನಡೆ, ಈಗ ನೀನು ನನ್ನ ಎದುರಿಗೆ ಸಹ ನಿಲ್ಲಬೇಡ. ಎಂದು ಹೇಳಿ, ಧನಮಲ್ಲನ ಕಡೆಗೆ ಬೆನ್ನು ಮಾಡಿ ಕುಳಿತುಕೊಂಡನು. ಧನಮಲ್ಲನಿಗಾದರೂ ಇಷ್ಟೇ ಬೇಕಾಗಿತ್ತು, ಬೆಳತನಕ ನಿದ್ದಿಗೆಟ್ಟು ದಣಿದದ್ದರಿಂದ ಯಾವಾಗ ನೆಲವನ್ನು ಕಂಡೇನೆಂಬ ಹಾಗೆ ಆತನಿಗೆ ಆಗಿತ್ತು, ಕೂಡಲೆ ಆತನು ಅಲ್ಲಿಂದ ಹೊರಟುಹೋದನು. ಇತ್ತ ರಾಮರಾಜನು ನಡೆದ ಸಂಗತಿಯನ್ನು ಕುರಿತು ಬಗೆಬಗೆಯಾಗಿ ಆಲೋಚಿಸುತ್ತ ಕುಳಿತುಕೊಂಡನು. ಮೇಹರ್ಜಾನಳು ತಾನಾಗಿ ಹೋದದ್ದರಿಂದ ತನ್ನ ಮಂತ್ರಿಪದವಿಯ ಪ್ರಾಪ್ತಿಗಾಗಿ ಒದಗಿದ್ದೊಂದು ವಿಘ್ನನಿವಾರಣಾಯಿತೆಂಬಂತೆ ತೋರಿ, ಆತನಿಗೆ ಕೆಲಮಟ್ಟಿಗೆ ಸಮಾಧಾನವಾದಂತೆ ಆಯಿತು. ಹಾಗೆ ಸಮಾಧಾನವಾಗಿರದಿದ್ದರೆ, ಆತನು ಧನಮಲ್ಲನ ವಿಶ್ರಾಂತಿಗೆ ಆಸ್ಪದವನ್ನು ಕೊಡುತ್ತಿದ್ದಿಲ್ಲ. ಮೇಹರ್ಜಾನಳನ್ನು ಹುಡುಕಿಕೊಂಡು ಬಾರದಿದ್ದರೆ ನಿನ್ನನ್ನು ನಿಲ್ಲಿಸಿ ಸುಡಿಸುವೆನೆಂದು ಆತನು ಧನಮಲ್ಲನಿಗೆ ಹೇಳಬಹುದಾಗಿತ್ತು. ಮೇಹರ್ಜಾನಳ ಮೇಲಿದ್ದ ರಾಮರಾಜನ ಪ್ರೇಮವನ್ನು ಮನಸ್ಸಿನಲ್ಲಿ ತಂದರೆ, ರಾಮರಾಜನ ಈ ಬೇಸರದ ಕೃತಿಯು ವಾಚಕರಿಗೆ ವಿಲಕ್ಷಣವಾಗಿ ತೋರಬಹುದು; ಆದರೆ ಪ್ರಬಲ ಮಹತ್ವಾಕಾಂಕ್ಷೆಯು ಹೀಗೆ ಪ್ರೇಮಭಂಗವನ್ನು ಮಾಡಿದ್ದು ಆಶ್ಚರ್ಯವಲ್ಲ! ಆದರೆ ಸ್ವಲ್ಪ ಹೊತ್ತಿನ ಮೇಲೆ ರಾಮರಾಜನಿಗೆ ಮೇಹರ್ಜಾನಳ ಒಂದೊಂದೇ ಪ್ರೇಮದ ಕೃತಿಗಳ ಸ್ಮರಣವಾಗಿ, ಆತನ ಮನುಸ್ಸು ಮತ್ತೆ ಅಸ್ವಸ್ಥವಾಯಿತು. ಆತನು ಹಾಸಿಗೆಯ ಮೇಲೆ ಹೋಗಿ ಮಲಗಿಕೊಂಡು ನಿದ್ದೆ ಮಾಡಿ ಸಮಾಧಾನ ಪಡಬೇಕೆಂದು ಮಾಡಿದನು; ಆದರೆ ಮೇಹರ್ಜಾನಳ ವಿಯೋಗ ದುಃಖವು ಆತನನ್ನು

ಬಾಧಿಸಹತ್ತಿದ್ದರಿಂದ ನಿದ್ದೆಬರುವದೊತ್ತಟ್ಟಿಗುಳಿದು, ಆತನ ಕಣ್ಣೊಳಗಿಂದ ನೀರುಗಳು ಸುರಿಯಹತ್ತಿದವು. ಆತನು ಮೊದಮೊದಲು ಕಣ್ಣೀರುಗಳನ್ನು ಒರೆಸಿಕೊಂಡನು; ಆದರೆ ಅವು ಸತತವಾಗಿ ಧಾರೆಯಿಟ್ಟು ಸುರಿಯಹತ್ತಲು, ಆತನು ಮೋರೆಯ ಮೇಲೆ ಸೆರಗನ್ನು ಹಾಕಿಕೊಂಡು, ಸುಮ್ಮನೆ ಮಲಗಿಬಿಟ್ಟನು. ಅತ್ತು ಅತ್ತು ಆತನ ದುಃಖ ವೇಗವು ಕಡಿಮೆಯಾಗಹತ್ತಿತು. ಕಡೆಗೆ ಆತನು ಎದ್ದು ಕುಳಿತು ಕಣ್ಣೀರು ಒರೆಸಿಕೊಂಡು, ಮನಸ್ಸಿನಲ್ಲಿ ಏನೋ ನಿಶ್ಚಯಿಸಿ, ಸೇವಕನನ್ನು ಗಟ್ಟಿಯಾಗಿ ಒದರಿದನು. ಆಗ ಸೇವಕನು ಬಂದು ಕೈಜೋಡಿಸಿ ನಿಂತುಕೊಳ್ಳಲು ರಾಮರಾಜನು–ಹೋಗು, ನನ್ನ ಕುದುರೆಯನ್ನೂ, ಬೇಟೆಯ ಯಾವತ್ತೂ ಸಾಮಾನುಗಳನ್ನೂ ಸಿದ್ಧಮಾಡಿಕೊಂಡು ಬರಹೇಳು, ಎಂದು ಆಜ್ಞಾಪಿಸಿದನು. ಸೇವಕನು, ಅತ್ತ ಹೋಗಲು, ಮತ್ತೊಬ್ಬ ಸೇವಕನು ಬಂದು ರಾಮರಾಜನಿಗೆ—ಮಹಾರಾಜ, ತಿರುಮಲರಾಯರು ತಮ್ಮನ್ನು ಕಾಣುವದಕ್ಕಾಗಿ ಬಂದಿದ್ದಾರೆ, ಎಂದು ಹೇಳಿದನು. ಅದನ್ನು ಕೇಳಿ ರಾಮರಾಜನ ಬೇಟೆಗೆ ಹೋಗುವ ಇಚ್ಛೆಯು ವ್ಯರ್ಥವಾದಂತೆ ಆಯಿತು. ಆದರೂ ಪ್ರತ್ಯಕ್ಷ ಅಣ್ಣನ ದರ್ಶನಕ್ಕೆ ಅಸಮ್ಮತಿ ಪಡಲಾರದೆ, ಆತನು ಸೇವಕನಿಗೆ– ಅವಶ್ಯವಾಗಿ ಬರಬಹುದೆಂದು ಅವರಿಗೆ ವಿಜ್ಞಾಪಿಸು, ನನಗೆ ಬರಹೇಳಿದರೆ ನಾನೇ ಬರುವೆನು, ಎಂದು ಹೇಳಿಕಳಿಸ ಹತ್ತಿರಲು, ಆ ಸೇವಕನನ್ನು ಹಿಂಬಾಲಿಸಿ ತಿರುಮಲರಾಯನು ರಾಮರಾಜನ ಬಳಿಗೆ ಬಂದನು.

ಕುಶಲ ಪ್ರಶ್ನೆಗಳಾದ ಮೇಲೆ ತಿರುಮಲನು ರಾಮರಾಜನನ್ನು ಕುರಿತು—"ಬಂಧುವೇ, ಕೃಷ್ಣದೇವರಾಯರು ನಿನ್ನ ಲಗ್ನದ ಮುಹೂರ್ತವನ್ನು ಗೊತ್ತು ಮಾಡುವದಕ್ಕಾಗಿ ಜೋಯಿಸರನ್ನು ಕರೆಯಿಸಿರುವರು. ಅವರ ಅಪ್ಪಣೆಯಂತೆ ನಾವಿಬ್ಬರೂ ಈಗ ಅಲ್ಲಿಗೆ ಹೋಗಬೇಕಾಗಿದೆ ಅನ್ನಲು, ಮೊದಲೇ ಖಿನ್ನವಾಗಿದ್ದ ರಾಮರಾಜನ ಮನಸ್ಸು, ಈಗ ಬೇಟೆಗೆ ವಿಘ್ನವೊದಗಿದ್ದರಿಂದ ಮತ್ತಿಷ್ಟು ಖಿನ್ನವಾಯಿತು. ಮನಸ್ಸಿನ ಚೇಷ್ಟೆಗಳನ್ನು ವರ್ಣಿಸುವದು ಆಗದ ಮಾತೇ ಸರಿ. ಅರಸನ ಅಳಿಯನಾಗಿ, ವಿಜಯನಗರದ ಅರಸರ ಮುಖ್ಯಮಂತ್ರಿಯಾಗಬೇಕೆಂಬ ಇಚ್ಛೆಯಿಂದ ಮೋಹರ್ಜಾನಳನ್ನು ನಿರಾಕರಿಸಿದ ರಾಮರಾಜನು, ಈಗ ಮೋಹರ್ಜಾನಳ ವಿಯೋಗದುಃಖ ವೊದಗಿರಲು, ಅರಸನ ಅಳಿಯನಾಗುವ ವಿಷಯದಲ್ಲಿ ಔದಾಸೀನ್ಯವನ್ನು ತಾಳಿದನು. ಆತನು ತನ್ನ ಅಣ್ಣನನ್ನು ಕುರಿತು—ಲಗ್ನದ ಮುಹೂರ್ತ ನಿಶ್ಚಯ ಮಾಡುವಾಗ ನಾನು ಇರುವ ಅವಶ್ಯವೇನು? ಮಹಾರಾಜರಿರುವರು, ನೀವಿರುವಿರಿ; ಮುಹೂರ್ತವನ್ನು ಗೊತ್ತುಮಾಡಿಬಿಟ್ಟ ರಾಯಿತು. ನಾನು ಈಗ ಬೇಟೆಯ ನೆವದಿಂದ ಹೊರಟಿದ್ದರೂ, ನಿಜವಾದ ಕಾರಣವು ಬೇರೆ ಯಾಗಿರುತ್ತದೆ. ಇತ್ತಿತ್ತ ಮುಸಲ್ಮಾನ ಬಾದಶಹರು ನಮ್ಮ ರಾಜ್ಯದ ವಿಸ್ತಾರವನ್ನೂ, ವೈಭವವನ್ನೂ, ಬಲವನ್ನೂ ನೋಡಿ ಹೊಟ್ಟೆಕಿಚ್ಚು ಪಡಹತ್ತಿದ್ದಾರೆ. ವಿಜಾಪೂರ, ಅಹ್ಮದನಗರ, ಗೋವಳ ಕೊಂಡ, ಬೀದರ ಈ ನಾಲ್ವರು ಬಾದಶಹರು ಒಟ್ಟಾಗಿ, ನಮ್ಮ ರಾಜ್ಯವನ್ನು ಮೂಲೆಗುಂಪು ಮಾಡುವ ಹವಣಿಕೆಯಲ್ಲಿರುತ್ತಾರೆ. ಅವರ ಒಳಸಂಚುಗಳಿಗೆ ಲಕ್ಷ ಕೊಟ್ಟು, ಅವರನ್ನು ಬಗ್ಗುಬಡಿಯುವ ಉಪಾಯಮಾಡದಿರುವದು ಯೋಗ್ಯವಲ್ಲ. ನಾಲ್ವರ ಬದಲು ಹತ್ತುಮಂದಿ ಬಾದಶಹರು ಒಟ್ಟು ಗೂಡಿದರೂ, ನಾವು ಮಣಿಯಲಾರೆವೆಂಬದೇನೋ ನಿಜ; ಆದರೂ ನಾವು

ನಮ್ಮ ಸೇನಾಬಲ ವನ್ನು ಹೆಚ್ಚಿಸಿ, ಯುದ್ಧಸೌರಣೆಯನ್ನು ಚನ್ನಾಗಿ ಮಾಡಿಕೊಳ್ಳತಕ್ಕದ್ದು. ನಮ್ಮ ಹಾಗು ವಿಜಾಪುರದ ಬಾದಶಹರ ರಾಜ್ಯದ ಹದ್ದಿನದಲ್ಲಿದ್ದು, ನಮ್ಮ ಸ್ವಾಧೀನದಲ್ಲಿರುವ ಸಂಗನಪಲ್ಲಿಯ ದರ್ಗೆಯಲ್ಲಿ ಮುಸಲ್ಮಾನರ ಗುಪ್ತಸಂಚುಗಳು ನಡೆಯುತ್ತಲಿರುವವೆಂದು ನಾನು ಕೇಳಿದ್ದೇನೆ. ನಮ್ಮ ಗುಪ್ತಚಾರನು ಇದೇ ಈಗ ಒಂದು ಸುದ್ದಿಯನ್ನು ಹೇಳಿದ್ದಾನೆ. ಆ ಸುದ್ದಿಯಲ್ಲಿ ಅಷ್ಟು ಅರ್ಥವಿಲ್ಲದಿದ್ದರೂ, ವೈರಿಗಳ ಒಳಸಂಚುಗಳನ್ನು ದುರ್ಲಕ್ಷಿಸಲಾಗದು. ಆದ್ದರಿಂದ ನಾನು ಈಗಲೇ ಸಂಗನಪಲ್ಲಿಗೆ ಹೋಗಿ, ಇದ್ದ ಸಂಗತಿಯನ್ನು ತಿಳಿದುಕೊಂಡು ಬರುತ್ತೇನೆ. ಪೀರನ ಗೋರಿಯ ದರ್ಶನದ ನೆವದಿಂದ ಬಹುಜನ ಮುಸಲ್ಮಾನರು ಅಲ್ಲಿ ಕೂಡುತ್ತಿರುವದ ರಿಂದ, ಒಳಸಂಚುಗಳಿಗೆ ಆಸ್ಪದವು ದೊರೆಯುವ ಸಂಭವವಿದೆ. ಹೀಗೆ ನಮ್ಮ ಗ್ರಾಮದಲ್ಲಿ ನಾಲ್ಕೂ ಕಡೆಯಿಂದ ಮುಸಲ್ಮಾನರು ಒಟ್ಟುಗೂಡುವದು ಹಿತಕರವಲ್ಲ. ಪೀರನ ಗೋರಿಯ ಕೆಲಸವಾದದ್ದರಿಂದ, ಏನು ಮಾಡುವದನ್ನು ವಿಚಾರದಿಂದ ಮಾಡಬೇಕಾಗಿದೆ. ಇರಲಿ, ನೀವು ಮಹಾರಾಜರ ಮುಂದೆ ಇಂಥ ಕಾರ್ಯಕ್ಕಾಗಿ ಹೋದನೆಂದು ಹೇಳಿ, ಮುಹೂರ್ತ ನಿಶ್ಚಯದ ಕಾರ್ಯವನ್ನು ಕೊನೆಗಾಣಿಸತಕ್ಕದ್ದು. ಮಹಾರಾಜರಿಗೆ ಅಷ್ಟು ಮನಸ್ಸಿಗೆ ಹಚ್ಚಿಕೊಳ್ಳುವ ಪ್ರಸಂಗವಿಲ್ಲೆಂದು ಹೇಳತಕ್ಕದ್ದು. ನಾನು ಬಹಳ ದಿವಸ ಹೋಗುವದಿಲ್ಲ; ನಾಲ್ಕೆಂಟು ದಿನಗಳಲ್ಲಿ ಬರುವೆನು.

ಈ ಮೇರೆಗೆ ರಾಮರಾಜನು ಬಡಬಡ ಮಾತಾಡಿದ್ದನ್ನು ಕೇಳಿ ತಿರುಮಲರಾಯ ವಿಚಾರಮಗ್ನನಾದನು. ತಿರುಮಲರಾಯನು ರಾಮರಾಜನ ಅಣ್ಣನಾಗಿದ್ದರೂ, ಅವರಿಬ್ಬರ ವಯಸ್ಸಿನಲ್ಲಿ ನಾಲ್ಕು ವರ್ಷಗಳಿಗಿಂತ ಹೆಚ್ಚು ಅಂತರವಿದ್ದಿಲ್ಲ. ಇದಲ್ಲದೆ, ರಾಮರಾಜನ ವರ್ಚಸ್ಸಿನ ಮುಂದೆ, ತಿರುಮಲರಾಯನ ಮತಿಯು ಕುಂಠಿತವಾಗುತ್ತಿತ್ತು. ಚಿಕ್ಕಂದಿನಿಂದಲೂ ಅಣ್ಣನ ಮೇಲೆ ರಾಮರಾಜನ ವರ್ಚಸ್ಸು ಬಹಳ. ರಾಮರಾಜನು ಆಜ್ಞಾಪಿಸಬೇಕು. ತಿರುಮಲ ರಾಯನು ಅದರಂತೆ ನಡೆಯಬೇಕು. ಈ ಕ್ರಮವು ಚಿಕ್ಕಂದಿನಿಂದ ಆ ಬಂಧುಗಳಲ್ಲಿ ನಡೆಯುತ್ತ ಬಂದಿತ್ತು. ಆದ್ದರಿಂದ ತಿರುಮಲರಾಯನು ರಾಮರಾಜನ ವಿರುದ್ಧ ಮಾತಾಡಲಾರದೆ, ಸೌಮ್ಯದಿಂದ–ಸರಿ, ನೀನು ಹೇಳುವ ಮಾತು ಅಯೋಗ್ಯವೆಂದು ನಾನು ಹೇಳುವದಿಲ್ಲ. ವೈರಿಗಳ ವಿಷಯವಾಗಿ ನಾವು ಜಾಗರೂಕರಾಗಿರುವದೇ ನೆಟ್ಟಗೆ; ಆದರೆ ಪ್ರತ್ಯಕ್ಷ ಕೃಷ್ಣದೇವರಾಜರೇ ಕರೆದಿರಲು, ನೀನು ಬಾರದಿದ್ದರೆ ವ್ಯತ್ಯಾಸವಾಗಲಿಕ್ಕಿಲ್ಲವೇ? ಮೂರು–ನಾಲ್ಕು ದಿನಗಳಲ್ಲಿಯೇ ಲಗ್ನ ಮುಹೂರ್ತವನ್ನಿಟ್ಟರೆ ಹ್ಯಾಗೆ? ನೀನು ಮಹಾರಾಜರನ್ನು ಕಂಡು ಅವರ ಒಪ್ಪಿಗೆಯನ್ನೇ ಪಡೆದು ಹೋಗುವದು ನೆಟ್ಟಗೆ ಕಾಣುತ್ತದೆ, ಅನ್ನಲು, ರಾಮರಾಜನು ಆತುರದಿಂದ– ಅಷ್ಟಕ್ಕಿಷ್ಟಕ್ಕೆ ಮಹಾರಾಜರನ್ನು ಕೇಳುತ್ತ ಕುಳಿತುಕೊಳ್ಳುವದರಲ್ಲಿ ಅರ್ಥವೇನು? ರಾಜಕಾರ್ಯದ ಸಲುವಾಗಿಯೇ ನಾನು ಹೋಗುವದರಿಂದ, ಅವರಿಗೆ ವ್ಯತ್ಯಾಸವಾಗದೆ, ನನ್ನ ಕರ್ತವ್ಯ ತತ್ಪರತೆಗಾಗಿ ಅವರು ಸಂತೋಷಪಡಬಹುದು. ರಾಜಪುತ್ರಿಯ ವಿವಾಹ ಮುಹೂರ್ತವನ್ನು ಎಲ್ಲಿಯಾದರೂ ಮೂರು–ನಾಲ್ಕು ದಿನಗಳಲ್ಲಿ ನಿರ್ಧರಿಸುವ ಸಂಭವವುಂಟೆ? ಸುಮ್ಮನೆ ಇಲ್ಲದ ಸಂಶಯಕ್ಕೆ ಗುರಿಯಾಗಿ, ಕಾಲಹರಣಮಾಡುವದು ಸರಿಯಲ್ಲ. ತಾವು ಮಹಾರಾಜರ ಬಳಿಗೆ

ಹೋಗಿ ಲಗ್ನ ಮುಹೂರ್ತವನ್ನು ನಿರ್ಧರಿಸಿರಿ. ಹಿರಿಯರಿದ್ದ ಬಳಿಕ ನನ್ನ ಅವಶ್ಯವೇನಿದೆ? ನಾನು ಬೇಗನೆ ಬರುವೆನು. ಒಂದು ಪಕ್ಷದಲ್ಲಿ ಮುಹೂರ್ತವು ಒತ್ತರಿಸಿದರೆ ನಾನೇನು ದೂರ ಹೋಗುವದಿಲ್ಲ; ಕರೆಕಳುಹಿದರೆ ಕೂಡಲೆ ಬರುವೆನು, ಎಂದು ಹೇಳಿದನು. ಅದನ್ನು ಕೇಳಿ ತಿರುಮಲರಾಯನು ಹೆಚ್ಚು ಮಾತಾಡಲಾರದೆ ತಮ್ಮನ ಒಪ್ಪಿಗೆಯನ್ನು ಪಡೆದು, ಆತನಿಗೆ ಬೇಗನೆ ಬರಬೇಕೆಂದು ಹೇಳಿ ಹೊರಟುಹೋದನು. ಇತ್ತ ರಾಮರಾಜನು ಧನಮಲ್ಲನನ್ನು ಕರೆಕಳುಹಲು, ದಣಿದು ಹೆಣವಾಗಿ ಬಿದ್ದುಕೊಂಡಿದ್ದ ಆತನು, ಒಟಗುಟ್ಟುತ್ತ ನಿರ್ವಾಹವಿಲ್ಲದೆ ತನ್ನ ಕುದುರೆಯನ್ನು ಹತ್ತಿಕೊಂಡು ರಾಮರಾಜನ ಬಳಿಗೆ ಬಂದನು. ಆಮೇಲೆ ಅವರಿಬ್ಬರು ತಮ್ಮ ಕುದುರೆಗಳನ್ನು ಒತ್ತರದಿಂದ ನಡಿಸುತ್ತ ಕುಂಜವನದ ಕಡೆಗೆ ಸಾಗಿದರು. ಹಾದಿಯಲ್ಲಿ ಹೋಗಹೋಗುತ್ತ ರಾಮರಾಜನು ಧನಮಲ್ಲನನ್ನು ಕುರಿತು–ಧನಮಲ್ಲ, ಏನೇನು ಸಂಗತಿಯು ವರ್ತಿಸಿತೆಂಬುದನ್ನು ಇನ್ನೊಮ್ಮೆ ಹೇಳು, ಎಂದು ಕೇಳಲು, ಧನಮಲ್ಲನು ಯಾವತ್ತು ವೃತ್ತಾಂತವನ್ನು ಒಂದುಳಿಯದಂತೆ ಹೇಳಹತ್ತಿದನು; ಆದರೆ ವಿಚಾರಮಗ್ನನಾದ ರಾಮರಾಜನ ಲಕ್ಷವು ಪೂರ್ಣವಾಗಿ ಅತ್ತ ಕಡೆಗೆ ಇದ್ದಿಲ್ಲ. ಆದರೂ ಆತನು ಸುದ್ದಿಯನ್ನು ಕೇಳುವವನಂತೆ ನಟಿಸುತ್ತಿದ್ದನು. ಈ ಸ್ಥಿತಿಯಲ್ಲಿ ಅವರು ಒತ್ತರದಿಂದ ಸಾಗುತ್ತ ಕುಂಜವನದ ಸನಿಯಕ್ಕೆ ಬಂದರು. ಆಗ ರಾಮರಾಜನು ಧನಮಲ್ಲನನ್ನು ಕುರಿತು–ನೀನು ಸಂಗನಪಲ್ಲಿಗೆ ಹೋಗಿ, ಮೇಹರ್ಜಾನ–ಮಾರ್ಜೀನೆಯರ ವೃತ್ತಾಂತವನ್ನು ತಿಳಿದು ಬಂದು ನನಗೆ ಹೇಳು. ಅವರು ನಿನ್ನೆ ರಾತ್ರಿಯಲ್ಲಿ ಎಲ್ಲಿಗೂ ಹೋಗಿರಲಿಕ್ಕಿಲ್ಲ; ಅಲ್ಲಿಯೇ ಎಲ್ಲಿಯಾದರೂ ಗುಪ್ತ ರೀತಿಯಿಂದ ವಾಸಿಸಿರಬಹುದು. ನಡೆ, ಬೇಗನೆ ಹೋಗಿ ಬಾ, ಅವರ ಸುದ್ದಿಯನ್ನು ತರದಿದ್ದರೆ ನಿನ್ನ ಪರಿಣಾಮವಾಗಲಿಕ್ಕಿಲ್ಲ. ನಡೆ, ನಿಲ್ಲಬೇಡ, ಎಂದು ಹೇಳಲು, ಧನಮಲ್ಲನು ಮನಸ್ಸಿನಲ್ಲಿ ತಳಮಳಗೊಳ್ಳುತ್ತ ಸಂಗನಪಲ್ಲಿಯ ಹಾದಿಯನ್ನು ಹಿಡಿದನು.

ಇತ್ತ ರಾಮರಾಜನು ಕುಂಜವನವನ್ನು ಪ್ರವೇಶಿಸಿದನು. ಮೇಹರ್ಜಾನಳ ಮೇಲೆ ಆತನ ಪ್ರೇಮ ಬಹಳ. ಮಂತ್ರಿಪದವಿಯ ಮಹತ್ವಾಕಾಂಕ್ಷೆಯಿಂದ ತಾನು ಮೇಹರ್ಜಾನಳನ್ನು ನಿರಾಕರಿಸಿದ್ದಕ್ಕಾಗಿ ಆತನಿಗೆ ಈಗ ಪೂರ್ಣ ಪಶ್ಚಾತ್ತಾಪವಾಗಿತ್ತು. ಮೇಹರ್ಜಾನಳ ಸಹವಾಸ ದಲ್ಲಿರುವಾಗ ಆನಂದಕ್ಕೆ ಕಾರಣವಾದ ಸ್ಥಳಗಳೆಲ್ಲ ಈಗ ಆತನ ದುಃಖಕ್ಕೆ ಕಾರಣವಾದವು. ಕುಂಜವನದೊಳಗಿನ ಮಂದಿರ, ಆ ಮಂದಿರದೊಳಗಿನ ಶಯನಗೃಹ, ವನಮಧ್ಯದಲ್ಲಿದ್ದ ಪುಷ್ಕರಿಣಿ, ಅದರ ಸುತ್ತಲಿನ ಮನೋಹರವಾದ ಲತಾಮಂಟಪಗಳು ಇವುಗಳನ್ನು ನೋಡಿ ರಾಮರಾಜನಿಗೆ ಬಹಳ ವ್ಯಸನವಾಯಿತು. ಆತನು ದುಃಖವೇಗವನ್ನು ತಡೆಯಲಾರದೆ ಪುಷ್ಕರಣಿಯಲ್ಲಿ ಸ್ನಾನವಮಾಡಿ ವಿಶ್ರಾಂತಿಯನ್ನು ಹೊಂದಬೇಕೆಂದು ಭಾವಿಸಿ, ತನ್ನ ಉಡುಪು–ತೊಡುಪುಗಳನ್ನು ಕಳೆದಿಟ್ಟನು. ಇನ್ನು ಆತನು ಪುಷ್ಕರಣಿಯಲ್ಲಿ ಧುಮುಕತಕ್ಕವನು, ಅಷ್ಟರಲ್ಲಿ ಹಿಂದಕ್ಕೆ ಮೇಹರ್ಜಾನಳು ನುಡಿದ ಅಪಘಾತದ ಶಬ್ದದ ನೆನಪಾಗಿ, ಆತನು ಎಲ್ಲಿ ಪುಷ್ಕರಣಿಯಲ್ಲಿ ಮುಳುಗಿ ಸಾಯುವೆನೋ ಎಂದು ಅಂಜಿ, ಮತ್ತೆ ಆತನು ಉಡುಪು–ತೊಡುಪುಗಳನ್ನು ಧರಿಸಿಕೊಳ್ಳಹತ್ತಿದನು. ಆ ಪುಷ್ಕರಣಿಯ ತೀರದಲ್ಲಿ ನಿಲ್ಲುವ ಧೈರ್ಯವು ಆತನಿಗೆ

ಆಗಲೊಲ್ಲದು. ಆತನು ಅವಸರದಿಂದ ಅಲ್ಲಿಂದ ಹೊರಟು ಒಂದು ಲತಾಮಂಟಪವನ್ನು ಪ್ರವೇಶಿಸಿದನು. ಮಧ್ಯಾಹ್ನವು ತಿರುಗಿ ಹೋಗಿದ್ದರೂ, ಆತನಿಗೆ ಹಸಿವೆ–ನೀರಡಿಕೆಗಳ ಪರಿವೆಯು ಉಳಿದಿದ್ದಿಲ್ಲ. ಗ್ಲಾನಿಯು ಬಂದಂತಾಗಿ ಆತನು ಲತಾಮಂಟಪದ ಪೀಠದಲ್ಲಿ ಒರಗಿದನು. ಅರೆನಿದ್ರೆಯಲ್ಲಿ ಆತನಿಗೆ ಕನಸಿನ ಮೇಲೆ ಕನಸುಗಳು ಬೀಳಹತ್ತಿದವು. ಹೀಗೆ ಸ್ವಪ್ನಾವಸ್ಥೆಯಲ್ಲಿ ಎರಡು ತಾಸುಗಳು ಕಳೆದುಹೋಗಿರಬಹುದು. ಮುಂದೆ ಒಂಭತ್ತು ತಾಸಿನ ಸುಮಾರಕ್ಕೆ ಆತನು ಕನಸಿನಲ್ಲಿ ಪಕ್ಕನೆ ಎದ್ದು ನಿಂತು, ಖಡ್ಗವನ್ನು ಹಿರಿದು ಮುಂದಕ್ಕೆ ಧುಮುಕಲಿಕ್ಕೂ, ಧನಮಲ್ಲನು ಆತನ ಎದುರಿಗೆ ಬಂದು ನಿಲ್ಲಲಿಕ್ಕೂ ಗಂಟೇ ಬಿದ್ದಿತು. ಮೊದಲೇ ಅಂಜುತ್ತಂಜುತ್ತ ಬರುತ್ತಿದ್ದ ಧನಮಲ್ಲನು, ತನ್ನ ಮೇಲೆ ರಾಮರಾಜನು ಹೀಗೆ ಧುಮುಕಿದ್ದನ್ನು ನೋಡಿ ಮತ್ತಿಷ್ಟು ಬೆದರಿದನು. ರಾಮರಾಜನಿಗೆ ತಾನು ಯಾರ ಮೇಲೆ ಧುಮುಕಿದೆನೆಂಬದರ ಎಚ್ಚರವು ಉಳಿದಿದ್ದಿಲ್ಲ; ಆದರೆ ಈ ಸ್ಥಿತಿಯು ಬಹಳ ಹೊತ್ತು ಉಳಿಯಲಿಲ್ಲ. ರಾಮರಾಜನು ಪೂರ್ಣವಾಗಿ ಎಚ್ಚತ್ತು ಧನಮಲ್ಲನನ್ನು ನೋಡಿ—''ಯಾವಾಗ ಬಂದೆ? ಮೇಹರ್ಜಾನಳು ಎಲ್ಲಿರುವಳು?'' ಎಂದು ಕೇಳಿದನು. ಅದಕ್ಕೆ ಧನಮಲ್ಲನು ಬಾಯಿಬಿಚ್ಚಿ ಮಾತಾಡದೆ, ಸನ್ನೆ ಮಾಡಿ ಏನೋ ತಿಳಿಸಹತ್ತಿದನು. ರಾಮರಾಜನು ಸಂತಾಪಗೊಂಡು, ಕವಕ್ಕನೆ ಆತನ ಮೈ ಮೇಲೆ ಹೋಗಿ, ಥೂ ಮೂರ್ಖಾ, ಇನ್ನು ಮೇಲೆ ಯಾತಕ್ಕೆ ಈ ಸೋಗು? ಮೇಹರ್ಜಾನಳು ಎಲ್ಲಿರುವಳು? ಬಾಯಿಬಿಚ್ಚಿ ಹೇಳು ಎಂದು ಕೇಳಲು, ಧನಮಲ್ಲನು ತತ್ತರಿಸುತ್ತ ಅವರು ನಿನ್ನೇ ವಿಜಾಪುರದ ಕಡೆಗೆ ಹೋದರಂತೆ, ಎಂದು ಹೇಳಿದನು. ಆಗ ರಾಮರಾಜನ ಸಿಟ್ಟು ತಲೆಗೇರಿತು. ಆತನು ಸಂತಾಪದಿಂದ ಉರಿಯುತ್ತ—ಡೊಣಗಾ, ನಿನ್ನನ್ನು ನಾನು ಸುಮ್ಮನೆ ಬಾವುಗನ ಹಾಗೆ ಸಾಕಿದೆನು. ನಿನ್ನ ಬದಲು ಒಂದು ನಾಯಿಯನ್ನು ಸಾಕಿದ್ದರೆ, ನಿನಗಿಂತಲೂ ಅದು ಕಾವಲಿನ ಕೆಲಸವನ್ನು ಚನ್ನಾಗಿ ಮಾಡುತ್ತಿತ್ತು. ಹೋಗು ನನ್ನೆದುರಿಗೆ ನಿಲ್ಲಬೇಡ. ಮೇಹರ್ಜಾನಳು ಎಲ್ಲಿರು ವಳೆಂಬುದನ್ನು ಗೊತ್ತು ಹಚ್ಚಿ, ಆಕೆಯನ್ನು ಕರಕೊಂಡೇ ನನ್ನೆದುರಿಗೆ ಬಾ. ಹಾಗೆ ಮಾಡದೇ, ನೀನು ಎಲ್ಲಿಯಾದರೂ ವಿಜಯನಗರದಲ್ಲಿ ನನ್ನ ಕಣ್ಣಿಗೆ ಬಿದ್ದರೆ, ನಿನ್ನನ್ನು ಶೂಲಕ್ಕೇರಿಸುವೆನು. ಇಲ್ಲವೆ ನಿಲ್ಲಿಸಿ ಸುಡಿಸುವೆನು, ಎಂದು ಗದ್ದರಿಸಿದನು. ಆಗ ಧನಮಲ್ಲನೂ ಸಿಟ್ಟು ಬೆಂಕಿಯಾಗಿದ್ದನು. ಆತನು ಕಣ್ಣುಗಳು ಕೆಂಪಗೆ ಗುಲಗುಂಜಿಯ ಹಾಗೆ ಆಗಿದ್ದವು. ಆತನ ಬಾಹುಗಳು ಸ್ಫುರಣ ಹೊಂದಿದವು. ಅಷ್ಟರಲ್ಲಿ ರಾಮರಾಜನು ಮತ್ತೆ ಧನಮಲ್ಲನ ಮೈಮೇಲೆ ಹೋಗಿ—ನಡೆ, ಹಾಳಾಗಿ ಹೋಗು, ನನ್ನೆದುರಿಗೆ ನಿಲ್ಲಬೇಡ, ಎಂದು ನುಡಿದು ಅಶ್ವಾರೂಢನಾಗಿ ಕುಂಜವನದಿಂದ ಹೊರಬಿದ್ದು, ವಿಜಯನಗರದ ಕಡೆಗೆ ಸಾಗಿದನು. ಆಗ ಧನಮಲ್ಲನು ಅತ್ಯಂತ ಸಂತಪ್ತ ಮುದ್ರೆಯಿಂದ ರಾಮರಾಜನನ್ನು ನೋಡುತ್ತ, ಸ್ಥಳಬಿಟ್ಟು ಕದಲದೆ ಅವಡುಗಚ್ಚಿ ತಲೆಯಲ್ಲಾಡಿಸಿದನು. ಅತ್ತ ರಾಮರಾಜನು ಪಶ್ಚಾತ್ತಾಪದಿಂದ ವಿಜಯನಗರಕ್ಕೆ ಸಾಗಲು, ಧನಮಲ್ಲನು ಆ ರಾತ್ರಿ ಕುಂಜವನದಲ್ಲಿ ಉಳಿದುಕೊಂಡು, ಮರುದಿನ ಬೆಳಗಾಗುತ್ತಲೆ ತನ್ನ ಕುದುರೆಯನ್ನು ಹತ್ತಿಕೊಂಡು ತುಂಗಭದ್ರೆಯನ್ನು ದಾಟಿ ಉತ್ತರದಿಕ್ಕಿಗೆ ಸಾಗಿದನು. ಆತನ ಹೃದಯದಲ್ಲಿ ತನ್ನ ಒಡೆಯನ ಸೇಡುತೀರಿಸಿಕೊಳ್ಳುವ ವಿಚಾರವು ಉತ್ಪನ್ನವಾಗಿ, ಅದು ಭರದಿಂದ ಬೆಳೆಯತೊಡಗಿತು.

# ಮನಸ್ಸಿನ ತಳಮಳಿಕೆ

ಹೀಗೆ ರಾಮರಾಜನು ಅಸ್ವಸ್ಥಮನಸ್ಸಿನಿಂದ ವಿಜಯನಗರದ ಕಡೆಗೆ ಸಾಗಿದ್ದನು. ಮೇಹರ್ಜಾನಳ ಶೋಧವಾಗದ್ದರಿಂದ ಆತನಿಗೆ ಹುಚ್ಚು ಹಿಡಿದಹಾಗಾಗಿತ್ತು. ತಾನು ಮೇಹರ್ಜಾನಳಿಗೆ ಪತ್ರ ಬರೆದು ಅಪರಾಧ ಮಾಡಿದೆನೆಂತಲೂ, ಧನಮಲ್ಲನು ದುರ್ಲಕ್ಷ್ಯದಿಂದ ಅವರನ್ನು ಹೋಗಗೊಟ್ಟು ಅಪರಾಧ ಮಾಡಿದನೆಂತಲೂ ರಾಮರಾಜನು ಭಾವಿಸಿ, ನಡನಡುವೆ ಸಂತಾಪಗೊಳ್ಳುವನು. ಆತನ ಸಂತಾಪದ ಫಲವನ್ನು ಆತನ ಕುದುರೆಯು ಭೋಗಿಸಬೇಕಾಯಿತು. ಆತನು ಸಿಟ್ಟಿನಿಂದ ಒಮ್ಮೆ ಕುದರೆಯ ಲಗಾಮುವನ್ನು ಜಗ್ಗುವನು, ಮತ್ತೊಮ್ಮೆ ಸಿಟ್ಟಿನಿಂದ ಕುದುರೆಯನ್ನು ಕೊಸೆಯುವನು, ಇನ್ನೊಮ್ಮೆ ಸಂತಾಪದಿಂದ ಕುದುರೆಯನ್ನು ಚಬಕದಿಂದ ಹೊಡೆಯುವನು. ತನ್ನ ಯಜಮಾನನು ಈದಿನ ಹೀಗೆ ಯಾಕೆ ಮಾಡುವನೆಂಬುದು ಆತನ ಕುದುರೆಗೆ ತಿಳಿಯದಾಯಿತು. ರಾಮರಾಜನ ಕುದುರೆಯು ನಿಷ್ಕಲಂಕವಾದದ್ದು. ಅದರ ಮೇಲೆ ರಾಮರಾಜನ ಪ್ರೀತಿಯೂ ರಾಮರಾಜನ ಮೇಲೆ ಅದರ ಪ್ರೀತಿಯೂ ಬಹಳ. ತನ್ನ ಒಡೆಯನ ಮನಸ್ಸಿನಲ್ಲಿ ವಿಜಯನಗರಕ್ಕೆ ಬೇಗನೆ ಮುಟ್ಟುವದಿರುತ್ತದೆಂದು ತಿಳಿದು ಆ ಮೂಕಪ್ರಾಣಿಯು ನಾಗಾಲೋಟದಿಂದ ಬಹು ವೇಗದಿಂದ ಓಡಹತ್ತಿತು. ರಾಮರಾಜನು ಎಷ್ಟು ಸಮಾಧಾನಗೊಳಿಸಿದರೂ, ಅದು ತನ್ನ ವೇಗವನ್ನು ಕಡಿಮೆ ಮಾಡಲಿಲ್ಲ. ಇಷ್ಟು ವೇಗದಿಂದ ಒಂದೆಸವನೆ ಹೋದರೆ ಕುದುರೆಯು ದಣಿದೀತೆಂಬ ಎಚ್ಚರವೂ ರಾಮರಾಜನಿಗೆ ಉಳಿಯಲಿಲ್ಲ. ಬೇಗನೆ ವಿಜಯನಗರಕ್ಕೆ ಮುಟ್ಟುವದು ರಾಮರಾಜನಿಗೆ ಇಷ್ಟವಾದದ್ದರಿಂದ, ರಾಮರಾಜನು ಕುದುರೆಯ ವೇಗವನ್ನು ಕಡಿಮೆ ಮಾಡುವ ಭರಕ್ಕೆ ಹೋಗಲಿಲ್ಲ. ಆ ದಿವ್ಯಾಶ್ವವು ಅವಿರಾಮವಾದ ವೇಗದಿಂದ ನಡೆದು, ರಾಮರಾಜನ ಮಂದಿರದ ಬಾಗಿಲಿಗೆ ಮುಟ್ಟಿತು. ಹೀಗೆ ಅಕಸ್ಮಾತ್ತಾಗಿ ರಾಮರಾಜನು ಬಂದದ್ದನ್ನು ನೋಡಿ ಸೇವಕರಿಬ್ಬರು ಲಗುಬಗೆಯಿಂದ ಬಂದು ಕುದುರೆಯ ಲಗಾಮು ಹಿಡಿದರು. ರಾಮರಾಜನು ಕುದುರೆಯಿಂದ ಇಳಿದದ್ದೊಂದೇ ತಡ, ಆ ಮೂಕ ಪ್ರಾಣಿಯು ಉಸುರುಗಟ್ಟಿ ದಪ್ಪನೆ ನೆಲಕ್ಕೆ ಬಿದ್ದಿತು. ಆಗ ರಾಮರಾಜನು ಗಾಬರಿಯಾಗಿ ತಿರುಗಿ ನೋಡಲು, ಆತನ ಪ್ರೀತಿಯ ಕುದುರೆಯು ಪ್ರಾಣಬಿಟ್ಟಿತು. ಈ ಅನರ್ಥವನ್ನು ನೋಡಿ ರಾಮರಾಜನು ಅಸಮಾಧಾನಪಟ್ಟಿದ್ದಲ್ಲದೆ, ಇದೊಂದು ದೊಡ್ಡ ಅಪಶಕುನವಾಯಿತೆಂದು ಆತನು ಬೆದರಿದನು. ಈ ಅಪಶಕುನದ ಜೊತೆಗೆ ಮೇಹರ್ಜಾನಳ ವಿಯೋಗವಾದದ್ದೊಂದು ಅಪಶಕುನವು ರಾಮರಾಜನ ಮನಸ್ಸಿನಲ್ಲಿ ಬಂದು ಕುಳಿತುಕೊಂಡಿತು. ಇವೆರಡೂ ಅಪಶಕುನಗಳು ಜೋಡು ಗುಂಡು ರಾಮರಾಜನ ಎದೆಗೆ ಬಡೆದಂತಾದ್ದರಿಂದ, ಆತನು ವ್ಯಥೆಪಟ್ಟು ಹಾಗೇ ಒಳಗೆ ಹೋಗಿ ಪೋಷಾಕು ಸಹ ಇಳಿಸದೆ ಮಂಚದ ಮೇಲೆ ಬಿದ್ದುಕೊಂಡನು. ಆಗ ಆತನಿಗೆ ಎಷ್ಟು ವ್ಯಸನ ವಾಗಿರಬಹುದೆಂಬದನ್ನು ವಾಚಕರೇ ತರ್ಕಿಸತಕ್ಕದ್ದು. ಆತನ ಉತ್ಸಾಹವು ಅಳಿದುಹೋಯಿತು. ಆಶೆಯು ಕುಗ್ಗಿತು. ಆತನು ಉಸುರ್ಗಳೆಯುತ್ತ ಹಾಸಿಗೆಯ ಮೇಲೆ ಹೊರಳಾಡುತ್ತಿರಲು, ಸೇವಕನು ಬಂದು ತಿರುಮಲರಾಯರು ಭೆಟ್ಟಿಗೆ ಬಂದಿರುವರೆಂದು ವಿಜ್ಞಾಪಿಸಿದನು. ಈ ವಿಜ್ಞಾಪನೆಯಿಂದ ರಾಮರಾಜನಿಗೆ ಎಳ್ಳಷ್ಟು ಸಮಾಧಾನವಾಗಲಿಲ್ಲ. ಆತನು

ಸಂತಾಪದಿಂದ ಸೇವಕನ ಮೈಮೇಲೆ ಹೋಗತಕ್ಕವನು, ಅಷ್ಟರಲ್ಲಿ ಆತನಲ್ಲಿ ವಿವೇಕವು ತಲೆದೋರಿ ಹಾಗೆ ಹರಿಹಾಯುವದು ಸರಿಯಲ್ಲೆಂದು ತಿಳಿದು, ಆತನು ಎದ್ದು ಕುಳಿತು, ಸೇವಕನಿಗೆ– ಹೋಗು, ಅವರನ್ನು ಕರೆದು ತಾ, ಎಂದು ಆಜ್ಞಾಪಿಸಿದನು. ರಾಮರಾಜನು ಬಂದಕೂಡಲೆ ತನಗೆ ಸುದ್ದಿಯನ್ನು ಹೇಳಬೇಕೆಂದು ತಿರುಮಲರಾಯನು ಸೇವಕರಿಗೆ ಆಜ್ಞಾಪಿಸಿದ್ದನು. ಅದರಂತೆ ಸೇವಕರು ಸುದ್ದಿಯನ್ನು ಹೇಳಲು, ತಿರಮಲರಾಯನು ಕ್ಷಣವಾದರೂ ತಡೆಯದೆ ತಮ್ಮನನ್ನು ಕಾಣಲಿಕ್ಕೆ ಬಂದಿದ್ದನು. ಅಣ್ಣನು ಒಳಗೆ ಬಂದಕೂಡಲೆ ರಾಮರಾಜನು ಆತನನ್ನು ಸತ್ಕರಿಸಿ ಕುಳ್ಳಿರಿಸಿಕೊಂಡನು. ಕುಶಲ ಪ್ರಶ್ನೆಗಳಾದ ಮೇಲೆ ತಿರುಮಲರಾಯನು ರಾಮರಾಜನನ್ನು ಕುರಿತು—ತಮ್ಮಾ ನೀನು ಹೋದ ಸುದ್ದಿ ಏನು? ನೀನು ಬೇಗನೆ ಬಂದದ್ದು ಬಹಳ ನೆಟ್ಟಗಾಯಿತು. ನಾನು ಮೊದಲು ನಿನಗೆ ಸೂಚಿಸಿದಂತೆ ನಿನ್ನ ಲಗ್ನದ ಮುಹೂರ್ತವನ್ನು ನಾಲ್ಕೇ ದಿನಗಳಲ್ಲಿ ನಿರ್ಧರಿಸಿರುವರು. ಇಂಥ ಸುಮುಹೂರ್ತವು ಇನ್ನು ೫ ವರ್ಷಗಳಲ್ಲಿ ದೊರೆಯುವ ಹಾಗಿಲ್ಲದ್ದರಿಂದ, ಇಷ್ಟು ಅವಸರ ಮಾಡಬೇಕಾಯಿತು. ಮಹಾರಾಜರು ಒಂದೇಸವನೆ ನಿನ್ನ ಹಾದಿಯನ್ನು ನೋಡುತ್ತಿರುವರು. ಇಂದು ನೀನು ಬಾರದಿದ್ದರೆ ನಾಳೆ ನಿನ್ನನ್ನು ಕರೆಕಳುಹ ಬೇಕಾಗುತ್ತಿತ್ತು, ಇರಲಿ; ಮುಸಲ್ಮಾನರ ಒಳಸಂಚಿನ ಸುದ್ದಿಯೇನು? ಮಹಾರಾಜರು, ಕೂಡ ಅದನ್ನು ಕೇಳಲು ಆತುರಪಡುತ್ತಿರುವರು, ಎಂದು ಕೇಳಲು, ರಾಮರಾಜನು ಇಲ್ಲದ ಉತ್ಸಾಹವನ್ನು ಮುಂದೆ ಮಾಡಿ ಅಣ್ಣನ ಸಂಗಡ ಮಾತಾಡಹತ್ತಿದನು. ಆತನು ಅಣ್ಣನ ಮಾತುಗಳಿಗೆ ತಟ್ಟನೆ ಉತ್ತರ ಕೊಡಲಾರದವನಾದನು. ತಾನು ಹೋಗುವಾಗ ಅಣ್ಣನ ಮುಂದೆ ಏನು ಹೇಳಿದ್ದೆನೆಂಬುದನ್ನು ಸಹ ಆತನು ಮರೆತುಬಿಟ್ಟಿದ್ದನು. ಸ್ವಲ್ಪ ಹೊತ್ತು ಆಲೋಚಿಸಿ ಅದು ನೆನಪಿಗೆ ಬಂದಕೂಡಲೆ, ಆತನು ಅಣ್ಣನನ್ನು ಕುರಿತು–ಸಂಗನಪಲ್ಲಿಯಲ್ಲಿ ಮುಸಲ್ಮಾನರ ಸಂಚುಗಳು ನಡೆಯುತ್ತಿರುವದು ನಿಜವು. ಪೀರನ ಗೋರಿಯ ದರ್ಶನಕ್ಕೆಂದು ಮೊದಮೊದಲು ನೂರಾರು ಜನರು ಬರುತ್ತಿರುವದು ಹೋಗಿ, ಈಗ ಸಾವಿರಾರು ಜನರು ಕೂಡುತ್ತಿರುವರು. ಹೀಗೆಯೇ ನಾವು ದುರ್ಲಕ್ಷ ಮಾಡಿದರೆ, ಯಾತ್ರೆಯ ನೆವದಿಂದ ಲಕ್ಷಾವಧಿ ಮುಸಲ್ಮಾನರು ಕೂಡಿ ನಮ್ಮ ರಾಜ್ಯದಲ್ಲಿ ನುಗ್ಗಲಿಕ್ಕೆ ಅನುಕೂಲವಾಗಬಹುದು. ನನಗೆ ಆ ಗೋರಿಯನ್ನು ಕಿತ್ತಿ ಒಗೆಯುವತನಕ ಸಮಾಧಾನವಾಗುವಹಾಗಿಲ್ಲ, ಯಾತ್ರೆಯ ನೆಪದಿಂದ ಬೇರೆ ಬೇರೆ ಮುಸಲ್ಮಾನ ಬಾದಶಹರ ವಕೀಲರು ಅಲ್ಲಿ ಕೂಡಿ ಒಳಸಂಚುಗಳನ್ನು ನಡಿಸುವರೆಂದು ಕೇಳಿದ್ದೇನೆ. ಅಣ್ಣಾ ನಾನು ಕೇಳಿದ ಸುದ್ದಿಯಲ್ಲಿ ತಥ್ಯವಿರುತ್ತದೆ. ಮುಸಲ್ಮಾನರು ಎಷ್ಟು ಗುಪ್ತರೀತಿಯಿಂದ ಮಸಲತ್ತುಗಳನ್ನು ಮಾಡಿದರೂ, ನಮ್ಮ ಗುಪ್ತಚಾರರು ಕೂಡಲೆ ಅದನ್ನು ನನಗೆ ಬಂದು ತಿಳಿಸುವರು. ನಮ್ಮ ರಾಜ್ಯಕ್ಕೆ ಏನಾದರೂ ಘಾತದ ಪ್ರಸಂಗವು ಒದಗಿದರೆ, ಅದು ಸಂಗನಪಲ್ಲಿ ಯೊಳಗಿನ ದರ್ಗೆಯ ಯೋಗದಿಂದಲೇ ಒದಗುವದೆಂಬುದನ್ನು ಚನ್ನಾಗಿ ಲಕ್ಷದಲ್ಲಿಡಿರಿ, ಎಂದು ನುಡಿದು ಸುಮ್ಮನಾದನು.

ರಾಮರಾಜನು ಹೀಗೆ ಬಡಬಡ ಮಾತಾಡಿದ್ದನ್ನು ಕೇಳಿ ತಿರುಮಲ ರಾಯನಿಗೆ ಆಶ್ಚರ್ಯವಾಯಿತು. ತನ್ನ ತಮ್ಮನು ಸಂಗನಪಲ್ಲಿಗೆ ಹೋದ ನಿಜವಾದ ಕಾರಣವು ಗೊತ್ತಾದ್ದರಿಂದ

ಆತನು ಹೀಗೆ ಆಶ್ಚರ್ಯಪಟ್ಟದ್ದು ಅಸ್ವಾಭಾವಿಕವಲ್ಲ. ಮುಸಲ್ಮಾನರ ಕಾರಸ್ಥಾನವನ್ನು ನೋಡಿ ಸಂತಾಪಗೊಂಡಿದ್ದರಿಂದ ತನ್ನ ತಮ್ಮನು ಹೀಗೆ ಬಡಬಡ ಮಾತಾಡುವನೆಂದು ತಿಳಿದು ಆತನು ನಡುವೆ ಪ್ರಶ್ನೆಗಳನ್ನು ಮಾಡದೆ, ಇದ್ದದ್ದನ್ನೆಲ್ಲ ತೋಡಿಕೊಳ್ಳಲಿಕ್ಕೆ ತಮ್ಮನಿಗೆ ಆಸ್ಪದಕೊಟ್ಟನು. ರಾಮರಾಜನು ಸುಮ್ಮನಾಗಲು, ತಿರುಮಲರಾಯನು ಸ್ವಲ್ಪ ಹೊತ್ತಿನ ಮೇಲೆ ತಮ್ಮನಿಗೆ ಏನೋ ಪ್ರಶ್ನೆ ಮಾಡಬೇಕೆಂದು ಯೋಚಿಸಿ, ಮಾತಾಡತೊಡಗುತ್ತಿರಲು, ರಾಮರಾಜನು—ಅಣ್ಣಾ, ಈಗ ನನಗೆ ಬಹಳ ತ್ರಾಸವಾಗಿದೆ. ಉಳಿದ ಸಂಗತಿಯನ್ನು ನಾಳೆ ಬೆಳಗಾದ ಬಳಿಕ ಹೇಳುವೆನು. ಹೇಳತಕ್ಕ ಸಂಗತಿಗಳು ಬಹಳ ಇರುತ್ತವೆ. ಇದಲ್ಲದೆ, ವಿಶೇಷ ಸಂಗತಿಯನ್ನು ಅರಿತುಕೊಂಡು ಬರುವದಕ್ಕಾಗಿ ಎರಡನೆಯ ದೂತನನ್ನೂ ಕಳಿಸಿದ್ದೇನೆ. ಆತನು ಬಹಳ ಮಾಡಿ ನಾಳಿಗೆ ಬಂದರೂ ಬರಬಹುದು ಆ ಮೇಲೆ  ಹ್ಯಾಗೂ ವಿಚಾರ ಮಾಡೇ ಮಾಡಬೇಕಾಗುತ್ತದೆ. ಈಗ ಚನ್ನಾಗಿ ವಿಶ್ರಾಂತಿಯು ದೊರೆಯದಿದ್ದರೆ, ಪ್ರಕೃತಿಯು ಕೆಡುವ ಸಂಭವವಿರುತ್ತದೆ. ನಾನು ಹೋದ ಬಳಿಕ ಇಲ್ಲಿ ಯಾವ ಸಂಗತಿಗಳು ನಡೆದವೆಂಬುದನ್ನು ವಿಚಾರಿಸಲಿಕ್ಕೂ, ಅದನ್ನು ಕೇಳಲಿಕ್ಕೂ ನನಗೆ ಉತ್ಸುಕತೆಯಿಲ್ಲ. ನೀವು ಇದ್ದ ಬಳಿಕ ಯಾವ ಮಾತಿಗೂ ಕೊರತೆಯಾಗದು. ಎಲ್ಲವೂ ಅನುಕೂಲಿಸಿಯೇ ಅನುಕೂಲಿಸುವದು, ಎಂದು ನುಡಿಯಲು, ತಿರುಮಲರಾಯನು, ನಿನಗೆ ಅಷ್ಟು ತ್ರಾಸವಾಗಿದ್ದರೆ ಈಗ ನಾನಾದರೂ ಹೆಚ್ಚಿಗೆ ಮಾತಾಡುವದಿಲ್ಲ, ನಾಳೆ ಮಾತಾಡೋಣವಂತೆ. ನಾನು ಮೊದಲು ಹೇಳಿದಂತೆ ಮುಹೂರ್ತವು ತೀರ ಸಮೀಪಿಸಿರುವದರಿಂದ ನೀನು ಎಲ್ಲಿಯೂ ಹೋಗಬಾರದು. ಅರಸರು ಸುಪ್ರಸನ್ನವಾಗಿರುವತನಕ ಎಲ್ಲ ನೆಟ್ಟಗೆ, ಆತನು ಕ್ಷೋಭಿಸಿದರೆ ಕೆಲಸವು ಕೆಟ್ಟುಹೋದೀತು. ನಮಗೆ ಈಗ ಅಭ್ಯುದಯ ಕಾಲವು ಒದಗಿರುವಂತೆ ತೋರುತ್ತದೆ ಎಂದು ನುಡಿಯುತ್ತಿರಲು, ರಾಮರಾಜನು ಅಣ್ಣನನ್ನು ಮುಂದೆ ಮಾತಾಡಗೊಡದೆ ನಾನು ಇನ್ನು ಮೇಲೆ ಎಲ್ಲಿಗೂ ಹೋಗುವದಿಲ್ಲ; ಆದರೆ ಇನ್ನು ನನಗೆ  ಸ್ವಸ್ಥವಾಗಿ ಮಲಗಗೊಡಿರಿ. ನೀವು ಹೇಳುವ ಸುದ್ದಿಯು ಅತ್ಯಂತ ಆನಂದದಾಯಕವಾದದ್ದು; ಆದರೆ ಸದ್ಯಕ್ಕೆ ನಾನು ಕಣ್ಣುತುಂಬ ನಿದ್ದೆಮಾಡಿದ ಹೊರತು, ನನಗೆ ಯಾವ ಮಾತಿನಿಂದಲೂ ಆನಂದವಾಗುವ ಹಾಗಿಲ್ಲ. ಶರೀರವು ಸುಖದಿಂದಿದ್ದರೆ, ಎಲ್ಲದರಿಂದ ಸುಖವು. ನಾನು ನಿದ್ದೆ ಮಾಡಿ ವಿಶ್ರಾಂತಿಯನ್ನು ಹೊಂದಿ ನಾಳೆ ಬೆಳಗಿನಲ್ಲಿ ತಮ್ಮ ದರ್ಶನಕ್ಕೆ ಬರುವೆನು. ಇಬ್ಬರೂ ಮಹಾರಾಜರ ದರ್ಶನಕ್ಕೆ ಹೋಗೋಣ ಅಲ್ಲಿಯವರೆಗೆ ಮಹಾರಾಜರಿಗೆ ಏನಾದರೂ ಹೇಳಿ ಸಮಾಧಾನ ಮಾಡಿರಿ. ಇಲ್ಲದಿದ್ದರೆ, ಊರಿಗೆ ಬಂದು ಭೆಟ್ಟಿಗೆ ಬರಲಿಲ್ಲೆಂದು ಅವರು ವಿಕಲ್ಪಭಾವವನ್ನು ತಾಳಿಗೀಳಿಯಾರು, ಎಂದು ನುಡಿದು ಸುಮ್ಮನಾದನು. ಇನ್ನು ಮೇಲೆ ಬಹಳ ಹೊತ್ತು ಕುಳಿತುಕೊಳ್ಳುವದರಲ್ಲಿ ಅರ್ಥವಿಲ್ಲೆಂತಲೂ, ರಾಮರಾಜನ ಸ್ಥಿತಿಯು ವಿಲಕ್ಷಣವಾಗಿರುವ ದೆಂತಲೂ ತಿಳಿದು, ತಿರುಮಲರಾಯನು ಹೊರಟುಹೋದನು. ಅದರಿಂದ ರಾಮರಾಜನಿಗೆ ಸಮಾಧಾನವಾದಂತಾಗಿ, ಆತನು ಪುನಃ ಪಲ್ಲಂಗದ ಮೇಲೆ ಬಿದ್ದುಕೊಂಡನು. ಇನ್ನು ಮೇಲೆ ಯಾರು ಬಂದರೂ ತನ್ನನ್ನು ಎಬ್ಬಿಸಬಾರದೆಂದು ರಾಮರಾಜನು ಸೇವಕರಿಗೆ ಕಟ್ಟಪ್ಪಣೆ ಮಾಡಿ, ನಾನು ಹೀಗೆ ಹೇಳಿ ಮಲಗಿರುವೆನೆಂದು ದರ್ಶನಕ್ಕೆ ಬಂದವರ ಮುಂದೆ ಸ್ಪಷ್ಟವಾಗಿ ಹೇಳಬೇಕೆಂದು ಸೇವಕರಿಗೆ ಸೂಚಿಸಿದ್ದನು.

ನಿದ್ದೆಯು ಯಾರ ಕೈಯೊಳಗಿನದೂ ಅಲ್ಲ. ನಿದ್ದೆ ಮಾಡಬೇಕೆನ್ನುವವರಿಗೆ ಅದು ಬರುವದೇ ಇಲ್ಲ. ನಿದ್ದೆ ಮಾಡಬಾರದೆನ್ನುವವರನ್ನು ಮಾತ್ರ ಅದು ದುಂಬಾಲಬಿದ್ದು ಬಾಧಿಸುತ್ತದೆ. ರಾಮರಾಜನಿಗೆ ಆದ ದಣುವಿಕೆಯನ್ನು ನೋಡಿದರೆ, ಮಲಗಿದಕೂಡಲೆ ಆತನಿಗೆ ಗಪ್ಪನೆ ನಿದ್ದೆ ಹತ್ತಬೇಕಾಗಿತ್ತು. ಆದರೆ ಮನಸ್ಸಿನ ಅಸ್ವಸ್ಥತೆಯಿಂದ ತಳಮಳಿಸುತ್ತಿದ್ದ ಆತನನ್ನು ನಿದ್ದೆಯು ಸೋಂಕಲೇ ಇಲ್ಲ. ಮೇಹರ್ಜಾನಳು ಇನ್ನು ಬರಲಿಕ್ಕಿಲ್ಲವೆ? ಹಾಯ್ ಹಾಯ್! ನಾನು ಇದೇನು ಕೆಲಸ ಮಾಡಿ ಇಟ್ಟೆನು! ಎಂದು ಆತನು ಮರುಗಿ ಉಸುರ್ಗಳೆಯುತ್ತಲಿದ್ದನು. ನಡುನಡುವೆ ಮೇಹರ್ಜಾನಳ ವಿಷಯವಾಗಿ ಆತನ ಮನಸ್ಸಿನಲ್ಲಿ ಆಶೆಯು ಉತ್ಪನ್ನವಾಗುತ್ತಿತ್ತು. ಮೇಹರ್ಜಾನಳು ಸಿಟ್ಟಿನ ಭರದಲ್ಲಿ ಹೋಗಿದ್ದರೂ, ಸಿಟ್ಟು ಇಳಿದ ಬಳಕ ಪಶ್ಚಾತ್ತಾಪಪಟ್ಟು ತಾನಾಗಿ ಬರಬಹುದಂತಲೂ, ತನ್ನನ್ನು ಅಗಲಿ ಹೋದದ್ದರಿಂದ ಅನುಭೋಗಿಸಬೇಕಾದ ಕಷ್ಟಗಳ ಯೋಗದಿಂದ ಆಕೆಯ ಮನಸ್ಸು ತನ್ನ ಕಡೆಗೆ ತಿರುಗೀತೆಂತಲೂ, ಆತನು ಕಲ್ಪಿಸಿದನು. ಮೇಹರ್ಜಾನಳು ಗರ್ಭಿಣಿಯಿರುವಳೆಂದು ಮಾರ್ಜೀನೆಯು ಹೇಳಿದ್ದು ನೆನಪಾದ ಕೂಡಲೆ, ರಾಮರಾಜನ ಮನಸ್ಸಿಗೆ ಹ್ಯಾಗೆ ಹ್ಯಾಗೋ ಆಯಿತು. ತಾನು ಧನಮಲ್ಲನಿಗೆ ಒಳಿತಾಗಿ ಸಿಟ್ಟು ಮಾಡಿ ಕಳಿಸಿಕೊಟ್ಟಿರುವದರಿಂದ, ಆತನು ಮೇಹರ್ಜಾನಳನ್ನು ಗೊತ್ತು ಹಚ್ಚಿಕೊಂಡು ಬಾರದೆಯಿರಲಿಕ್ಕಿಲ್ಲೆಂಬ ಆಶೆಯೂ ಆತನಲ್ಲಿ ಉತ್ಪನ್ನವಾಯಿತು ಒಮ್ಮೊಮ್ಮೆ ಇವೆಲ್ಲ ಆಶೆಗಳು ನಿರಾಶೆಯ ಸ್ವರೂಪವನ್ನು ಹೊಂದಲು, ಆತನು ದುಃಖದಿಂದ ತಳಮಳಿಸುವನು. ಹೀಗೆ ಸಮಾಧಾನ–ಅಸಮಾಧಾನ, ಆಶೆ–ನಿರಾಶೆಗಳ ಜಗ್ಗಾಟದಿಂದ ಆತನಿಗೆ ಗ್ಲಾನಿಯು ಬಂದಂತೆ ಆಗಿ, ಆತನು ಕಣ್ಣುಮುಚ್ಚಿಕೊಂಡು ಬಿದ್ದು ನಿದ್ರಾಧೀನನಾದಂತೆ ತೋರಿದನು. ಆ ಅರೆನಿದ್ದೆಯ ಗುಂಗಿನಲ್ಲಿ ಆತನಿಗೆ ಸುಖದ ಸ್ವಪ್ನಗಳು ಬಿದ್ದವೋ, ದುಃಖದ ಸ್ವಪ್ನಗಳು ಬಿದ್ದವೋ ಎಂಬುದನ್ನು ಹೇಳಲಾಗುವದಿಲ್ಲ. ಆತನಿಗೆ ಸರಾಸರಿ ನಾಲ್ಕು ತಾಸು ರಾತ್ರಿಗೆ ಎಚ್ಚರವಾಯಿತು. ಆಗ ಆತನು ಸೇವಕರನ್ನು ಕರೆದು–ಧನಮಲ್ಲನು ಬಂದಿದ್ದನೋ, ಬೇರೆ ಯಾರಾದರೂ ನನ್ನನ್ನು ಕಾಣಲಿಕ್ಕೆ ಬಂದಿದ್ದರೋ ಎಂದು ಪ್ರಶ್ನೆ ಮಾಡಿದನು. ಅದಕ್ಕೆ ಸೇವಕರು–ಧನಮಲ್ಲನು ಬಂದಿಲ್ಲೆಂತಲೂ, ಬಹುಜನ ಸರದಾರರೂ, ಮಾಂಡಲಿಕರೂ ಭೆಟ್ಟಿಯ ಆಶೆಯಿಂದ ಬಂದು ಹೋದರೆಂತಲೂ ಹೇಳಿದರು. ಅದನ್ನು ಕೇಳಿ ರಾಮರಾಜನು ಅಸಮಾಧಾನಪಟ್ಟು, ಹೂ! ಎಂದು ತಿರಸ್ಕಾರದಿಂದ ತಲೆಕೊಡವಿ, ಸೇವಕರಿಗೆ ಹೊರಟುಹೋಗಲು ಹೇಳಿ, ಮತ್ತೆ ಹಾಸಿಗೆಯ ಮೇಲೆ ಮಲಗಿ ಕೊಂಡನು. ಇನ್ನು ಮೇಲೆ ತನ್ನನ್ನು ಕಾಣಲಿಕ್ಕೆ ಯಾವ ಸರದಾರರೂ, ಮಾಂಡಲಿಕರೂ ಬರುವ ಆಶೆಯಿಲ್ಲೆಂದು ತಿಳಿದು, ಆತನು ಸೇವಕರಿಗೆ–ಧನಮಲ್ಲನು ಬಂದ ಕೂಡಲೆ ನನಗೆ ತಿಳಿಸಿರಿ. ನಾನು ಮಲಗಿರಲಿ, ನಿದ್ದೆ ಮಾಡುತ್ತಿರಲಿ ಎಬ್ಬಿಸಿ ಸುದ್ದಿಯನ್ನು ಹೇಳಲಿಕ್ಕೆ ಹಿಂದು ಮುಂದು ನೋಡಬೇಡಿರಿ, ಎಂದು ಆಗ್ರಹದಿಂದ ಹೇಳಿ ಮಲಗಿ ಕೊಂಡನು. ಧನಮಲ್ಲನು ಬರಲಿಲ್ಲೆಂಬ ಅಸಮಾಧಾನದಿಂದ ಆತನಿಗೆ ನಿದ್ದೆಯು ಬರಲೊಲ್ಲದು. ಆತನು ಹಾಸಿಗೆಯ ಮೇಲೆ ಹೊರಳಾಡಿ ಬೇಸತ್ತನು. ತಾನು ನಿತ್ಯದಲ್ಲಿ ಕುಳಿತುಕೊಳ್ಳುವ ಆಸನದಲ್ಲಿ ಕುಳಿತುಕೊಂಡು ಆಲೋಚಿಸಿ ದಣಿದನು. ಮತ್ತೆ ಆತನಿಗೆ ಹಾಸಿಗೆ ಹಿಡಿಯಬೇಕಾಯಿತು. ಇನ್ನೂ ಬೆಳಗಾಗಲಿಲ್ಲೆಂಬ

ಆತುರದಿಂದ ಆಗಾಗ್ಗೆ ಆತನು ಪೂರ್ವದಿಕ್ಕಿನ ಕಿಟಕಿಗಳಲ್ಲಿ ಹಣಕಿಹಾಕಿ ನೋಡಿದನು. ಅಂದಿನ ರಾತ್ರಿಯು ರಾಮರಾಜನಿಗೆ ಬಹು ದೀರ್ಘವಾಗಿ ತೋರಿತು. ಆತನು ಹೀಗೆ ತಳಮಳಿಸುತ್ತ ಬೇಸರದಿಂದ ರಾತ್ರಿಯನ್ನು ತಿರಸ್ಕರಿಸುತ್ತ ಬೆಳಗಿನ ಹಾದಿಯನ್ನು ನೋಡುತ್ತಿರಲು, ಪೂರ್ವದಿಕ್ಕು ಒಮ್ಮೆ ಬೆಳ್ಳಗಾಯಿತು. ಅದನ್ನು ನೋಡಿ ರಾಮರಾಜನಿಗೆ ಮೊದಲು ಸ್ವಲ್ಪ ಸಮಾಧಾನ ವಾದರೂ, ಮೋಹಜರ್ಾನಳ ವಿಯೋಗದ ಸ್ಮರಣವಾಗಿ ಆತನ ಮನಸ್ಸು, ಮತ್ತೆ ಅಸಮಾಧಾನ ಹೊಂದಿತು. ನಿದ್ದೆಗೇಡೂ, ಬುದ್ಧಿಗೇಡೂ ಆಗಿ ರಾಮರಾಜನಿಗೆ ಹುಚ್ಚು ಹಿಡಿದ ಹಾಗೆ ಆಗಿತ್ತು. ಆತನ ಕಣ್ಣುಗಳು ಉರಿಯುತ್ತಿದ್ದವು. ಮೈಯು ಒಡ್ಡು ಮುರಿಯುತ್ತಿತ್ತು, ಆತನಿಗೆ ಆಕಳಿಕೆಗಳು ಆಗಾಗ್ಗೆ ಬರುತ್ತಿದ್ದವು. ಆತನು ವಿಚಾರಮಗ್ನನಾಗಿ ಯಂತ್ರದಂತೆ ಪ್ರಾತರ್ವಿಧಿಗಳನ್ನು ತೀರಿಸಿಕೊಂಡನು. ಕೃಷ್ಣದೇವ–ಮಹಾರಾಜರನ್ನು ಕಾಣಲಿಕ್ಕೂ, ತನ್ನ ಲಗ್ನದ ವರ್ತಮಾನವನ್ನು ಕೇಳಲಿಕ್ಕೂ ಆತನಿಗೆ ಉತ್ಸಾಹವಾಗಲೊಲ್ಲದು. ಅಷ್ಟರಲ್ಲಿ ತಿರುಮಲರಾಯನು ಬರಲು, ಅವರಿಬ್ಬರೂ ರಾಜದರ್ಶನಕ್ಕಾಗಿ ಹೊರಟು ಹೋದರು.

ತಾನು ರಾಮರಾಜನಿಂದ ಕೇಳಿದ ಸುದ್ದಿಯನ್ನೆಲ್ಲ ತಿರುಮಲರಾಯನು ಈ ಮೊದಲೆ ಮಹಾರಾಜರಿಗೆ ತಿಳಿಸಿದ್ದನು. ಮತ್ತೆ ಅದನ್ನು ರಾಮರಾಜನ ಮುಖದಿಂದ ತಿಳಿದುಕೊಳ್ಳುವ ಇಚ್ಛೆಯಿಂದ ಮಹಾರಾಜರು ರಾಮರಾಜನಿಗೆ ಪ್ರಶ್ನೆ ಮಾಡಿದರು. ಹೊಂದಿಸಿ ಹೇಳಲಿಕ್ಕೆ ಅವಕಾಶ ದೊರೆತದ್ದರಿಂದ ರಾಮರಾಜನು ಮೊದಲೇ ಪಾಜ್ಞವಾಗಿ ಕೂಡಿಸಿಕೊಂಡಂತೆ ಯಾವತ್ತೂ ಸುದ್ದಿಯನ್ನು ಮಾಹಾರಾಜರ ಮುಂದೆ ಉಪ್ಪುಕಾರ ಹಚ್ಚಿ ಸವಿಮಾಡಿ ಹೇಳಿದನು. ಸುದ್ದಿ ಹೇಳುವದಾದ ಮೇಲೆ ಆತನು ಮಹಾರಾಜರಿಗೆ–ಇನ್ನು ಈ ಮುಸಲ್ಮಾನರ ಬಂದೋಬಸ್ತು ಮಾಡುವ ವಿಚಾರದ ಹೊರತು ಎರಡನೆಯ ವಿಚಾರಗಳು ನನ್ನ ಮನಸ್ಸಿನಲ್ಲಿ ಉತ್ಪನ್ನ ವಾಗುವದಿಲ್ಲ. ಹೊತ್ತಿಗೆ ತಕ್ಕ ಬಂದೋಬಸ್ತು ಮಾಡದಿದ್ದರೆ, ನಮ್ಮ ರಾಜ್ಯದ ವ್ಯವಸ್ಥೆಯೇ ನಾದೀತೆಂಬುದನ್ನು ಹೇಳಲಾಗುವದಿಲ್ಲ, ಮೊದಲು ಆ ದರ್ಗೆಯ ಮೇಲೆ ಚೆನ್ನಾಗಿ ಕಣ್ಣಿಡಬೇಕು. ನಮ್ಮ ನಂಬಿಗೆಯ ಸೇವಕರು ದರ್ಗೆಯಲ್ಲಿರುವಂತೆ ವ್ಯವಸ್ಥೆ ಮಾಡಬೇಕು. ಎಂದು ಹೇಳಿದನು. ಇದನ್ನು ಕೇಳಿ ಕೃಷ್ಣದೇವಮಹಾರಾಜರು ರಾಮರಾಜನನ್ನು ಕುರಿತು—ಈ ಎಲ್ಲ ಮಾತುಗಳ ವಿಚಾರವನ್ನು ಇನ್ನು ಮೇಲೆ ನೀವೇ ಮಾಡಬೇಕಾಗಿದೆ. ನಿಮ್ಮ ಶೌರ್ಯ–ವೀರ್ಯಗಳ ವಿಷಯವಾಗಿ ನಮಗೆ ಸಂಪೂರ್ಣ ನಂಬಿಕೆಯಿರುತ್ತದೆ. ನೀವು ಎಂಥ ಸಂಕಟಗಳಿಗೂ ಸೊಪ್ಪು ಹಾಕಲಾರಿರೆಂಬುದು ನಮಗೆ ಗೊತ್ತಿದೆ. ಒಮ್ಮೆ ನಮ್ಮೀ ಅಪೇಕ್ಷೆಯಂತೆ ಈ ಮಂಗಳ ಕಾರ್ಯವನ್ನಷ್ಟು ಸಾಂಗವಾಗಿ ಮಾಡಿಕೊಳ್ಳಿರಿ. ಆಮೇಲೆ ಯೋಗ್ಯವಾಗಿ ತೋರಿದಂತೆ ವ್ಯವಸ್ಥೆ ಮಾಡಬಹುದು. ಕಾರ್ಯವಾದ ಮೇಲೆ ನೀವು ನಾಲ್ಕು ದಿನ ಸಂಗನಪಲ್ಲಿಗೆ ಹೋಗಿ ನಿಂತು ವ್ಯವಸ್ಥೆ–ಮಾಡಿ ಬಂದರೂ ಬರಬಹುದು ಜ್ಯೋತಿಷಿಗಳು ''ಶುಭಸ್ಯಶೀಘ್ರಂ'' ಎಂದು ಅವಸರದಿಂದ ಮೂಹೂರ್ತವನ್ನು ನಿರ್ಧರಿಸಿದ್ದಾರೆ. ನಿರ್ವಿಘ್ನವಾಗಿ ಎಲ್ಲ ಕಾರ್ಯಗಳು ಜರಗುವಂತೆ ವ್ಯವಸ್ಥೆ ಮಾಡತಕ್ಕದ್ದು, ಯಾವತ್ತು ವ್ಯವಸ್ಥೆಯ ಭಾರವು ತಿರುಮಲರಾಯರ ತಲೆಯ ಮೇಲಿರುತ್ತದೆ. ನಮ್ಮ ತನಕ ಯಾವ ಮಾತನ್ನೂ ಬರಗೊಡಬಾರದು. ನಮ್ಮ ಮನಸ್ಸಿನ ಇಚ್ಛೆಯು

ಈಗ ಪೂರ್ಣವಾಗಲಿಕ್ಕೆ ಬೇಕು. ನಾವು ನಾಲ್ಕೂ ಕಡೆಗೆ ಅಪ್ಪಣೆಗಳನ್ನು ಕಳಿಸುತ್ತೇವೆ. ಎಲ್ಲ ವ್ಯವಸ್ಥೆಯು ಉತ್ತಮ ರೀತಿಯಿಂದ ಆಗಲಿಕ್ಕೆ ಬೇಕು. ನಿಮ್ಮ ಹಿರಿಯರು ಇದ್ದರೆ ನಿಮ್ಮ ಮುಂದೆ ಈ ಮಾತುಗಳನ್ನಾಡುವ ಪ್ರಸಂಗವು ನಮಗೆ ಬರುತ್ತಿದ್ದಿಲ್ಲ, ಎಂದು ಹೇಳಿದರು. ಈ ಮೇರೆಗೆ ಮತ್ತೆ ಕೆಲವು ಸಂಭಾಷಣೆಗಳು ಆದ ಬಳಿಕ ಕೃಷ್ಣದೇವರಾಜನು ಅವರಿಬ್ಬರು ಬಂಧುಗಳಿಗೆ ಅಪ್ಪಣೆ ಕೊಟ್ಟು ಕಳಿಸಿದನು.

ಏನು ಮಾಡಿದರೂ ರಾಮರಾಜನ ಮನಸ್ಸಿಗೆ ಸೊಗಸಾಗಲಿಲ್ಲ, ಪ್ರತ್ಯಕ್ಷ ರಾಜಪುತ್ರಿಯೊಡನೆ ತನ್ನ ವಿವಾಹವಾಗಿ, ತನಗೆ ರಾಜಜಾಮಾತೃಪದವಿಯು ದೊರೆಯುವ ಯೋಗವು ಸಮೀಪಿಸಿದರೂ ಆತನಿಗೆ ಸಮಾಧಾನವಾಗಲಿಲ್ಲ, ಆತನ ಅಂತರಂಗ ಬಹಿರಂಗಗಳೆರಡನ್ನೂ ಮೇಹರ್ಜಾನಳು ಆಕ್ರಮಿಸಿಬಿಟ್ಟಿದ್ದಳು. ಇನ್ನು ನಾನು ಮೇಹರ್ಜಾನಳನ್ನು ಕಾಣಲಿಕ್ಕಿಲ್ಲವೇ, ಎಂಬದೊಂದೇ ಚಿಂತೆಯು ರಾಮರಾಜನನ್ನು ಬಾಧಿಸುತ್ತಿತ್ತು, ಆತನು ಹೀಗೆ ಅಸಮಾಧಾನದಿಂದಿರುವಾಗಲೇ ಆತನ ವಿವಾಹ ಕಾರ್ಯವು ವಿಜೃಂಭಣೆಯಿಂದ ನೆರವೇರಿತು. ಸಮಾರಂಭವು ಪೂರ್ಣವಾಗುವ ಹಾದಿಯನ್ನೇ ರಾಮರಾಜನು ನೋಡುತ್ತಿದ್ದನು. ಕಡೆಯ ಸಮಾರಂಭವು ಮುಗಿದ ದಿನದ ರಾತ್ರಿಯು ಹೋಗಿ ಬೆಳಗಾಗಲು, ರಾಮರಾಜನು ರಾಜದರ್ಶನಕ್ಕೆ ಹೋದನು. ಆತನು ಮಹಾರಾಜರ ಮುಂದೆ—ನನಗೆ ಮತ್ತೆ ಇಂಥ ಇಂಥ ಹೊಸ ಸುದ್ದಿಗಳು ಹತ್ತಿರುತ್ತವೆ, ಎಂದು ಹೇಳಿ, ತನ್ನ ವರ್ಣನಾಶಕ್ತಿಯ ಪರಮಾವಧಿಯಿಂದ ಮುಸಲ್ಮಾನರ ಒಳಸಂಚಿನ ಕಾಲ್ಪನಿಕ ಸ್ವರೂಪವನ್ನು ಮಹಾರಾಜರ ಕಣ್ಣುಮುಂದೆ ಇಟ್ಟನು. ಅದರಿಂದ ಮಹಾ ರಾಜರ ಮನಸ್ಸಿನಲ್ಲಿ ಇನ್ನು ಮೇಲೆ ಈ ಸಂಬಂಧದಿಂದ ಏನಾದರೂ ವ್ಯವಸ್ಥೆ ಮಾಡಬೇಕೆಂಬ ವಿಚಾರವು ಉತ್ಪನ್ನವಾಯಿತು. ಅವರು ಇದಕ್ಕೆ ಏನು ಉಪಾಯ ಮಾಡಬೇಕೆಂದು ರಾಮರಾಜನನ್ನು ಕೇಳಿದರು. ಹೀಗೆ ಕೇಳುವದೇ ರಾಮರಾಜನಿಗೆ ಬೇಕಾಗಿತ್ತು, ಮಹಾರಾಜರು ಕೇಳಿದಕೂಡಲೇ ರಾಮರಾಜನು ಕೈಜೋಡಿಸಿ, ಅವರನ್ನು ಕುರಿತು—ತಮ್ಮ ಅಪ್ಪಣೆಯಾದರೆ, ನಾನು ಗುಪ್ತವೇಷದಿಂದ ಹೋಗಿ ಯಾವತ್ತು ಗುಪ್ತಸಂಗತಿಯನ್ನು ಚಾತುರ್ಯದಿಂದ ತಿಳಿದುಕೊಂಡು ಬರುತ್ತೇನೆ. ಇನ್ನು ಹದಿನೈದು ದಿವಸ ತುಂಗಭದ್ರೆಯ ದಂಡೆಯನ್ನು ಹಿಡಿದು ತಿರುಗುವದು ಅವಶ್ಯವಾಗಿದೆ. ನಾವಾಗಿ ಮೊದಲು ಏನೂ ಮಾಡಬಾರದು, ಎಲ್ಲ ಒಳಸಂಚುಗಳು ಬೈಲಿಗೆ ಬಿದ್ದರೆ, ಎಲ್ಲ ವ್ಯವಸ್ಥೆಯು ತಾನೇ ಆಗುತ್ತದೆ, ಎಂದು ಹೇಳಿ, ವಿದ್ಯಾನಗರದಿಂದ ಹತ್ತು ಹದಿನೈದು ದಿವಸ ಹೊರಗೆ ಹೋಗಲಿಕ್ಕೆ ಮಹಾರಾಜರಿಂದ ಅಪ್ಪಣೆಯನ್ನು ಪಡೆದನು. ಅಪ್ಪಣೆ ಕೊಡುವಾಗ ಅಳಿಯನಾದ ರಾಮರಾಜನಿಗೆ ಮಹಾರಾಜರು–ಇಲ್ಲದ ಯಾವ ಪ್ರಕಾರದ ಸಾಹಸಕ್ಕೂ ನೀವು ಹೋಗಬೇಡಿರಿ. ಜೀವಕ್ಕೆ ಜೀವ ಕೊಡುವ ಮನುಷ್ಯರನ್ನು ಸಂಗಡ ಕರಕೊಂಡು ಹೋಗಿರಿ. ಮುಖ್ಯ ಮಾತು, ಎಲ್ಲರೀತಿಯಿಂದಲೂ ಜೋಕೆ, ಎಂದು ಹೇಳಿದರು. ಹೀಗೆ ಒಪ್ಪಿಗೆ ದೊರೆತ ಕೂಡಲೆ ರಾಮರಾಜನು ಕ್ಷಣವಾದರೂ ವಿಳಂಬ ಮಾಡದೆ, ವಿದ್ಯಾನಗರದಿಂದ (ವಿಜಯನಗರದಿಂದ) ಹೊರಟು, ನೆಟ್ಟಗೆ ತನ್ನ ಕುಂಜವನದ ಹಾದಿಯನ್ನು ಹಿಡಿದನು.

# ವಿನಾಶವೃಕ್ಷ

ರಾಮರಾಜನ ಚಿತ್ತವನ್ನು ಮೇಹರ್ಜಾನಳು ಸಂಪೂರ್ಣವಾಗಿ ಆಕರ್ಷಿಸಿಕೊಂಡದ್ದರಿಂದ, ಆ ತರುಣ ಸರದಾರನು ಮೇಲೆ ಹೇಳಿದಂತೆ ಕೃಷ್ಣದೇವರಾಜನ ಮುಂದೆ ಇಲ್ಲದ್ದೊಂದು ಹೇಳಿ ಕುಂಜವನಕ್ಕೆ ಬಂದಿದ್ದನು. ಕುಂಜವನದಲ್ಲಿ ಮೇಹರ್ಜಾನಳೊಬ್ಬಳು ಇಲ್ಲದ್ದರಿಂದ ಆ ಮನೋಹರವನವು ಈಗ ರಾಮರಾಜನಿಗೆ ದುಃಖದಾಯಕವಾಗಿ ತೋರಹತ್ತಿತು. ಮೇಹರ್ಜಾನಳೊಡನೆ ತಾನು ರಮಿಸಿದ ಪ್ರತಿ ಒಂದು ಸ್ಥಳವೂ, ಲತಾಮಂಟಪಗಳೂ, ವೃಕ್ಷಲತೆಗಳೂ ರಾಮರಾಜನ ದುಃಖವನ್ನು ಹೆಚ್ಚಿಸತೊಡಗಿದವು. ಆತನು ಮೇಹರ್ಜಾನಳ ಶಯನಗೃಹವನ್ನು ಪ್ರವೇಶಿಸಿದನು. ಅಲ್ಲಿ ಆತನ ಕಣ್ಣಿಗೆ ಮೇಹರ್ಜಾನಳ ವಸ್ತ್ರಾಭರಣಗಳ ಪೆಟ್ಟಿಗೆಯು ಬಿದ್ದಿತು. ಆಗ ರಾಮರಾಜನು, ಕೌತುಕದಿಂದ ಅದನ್ನು ತೆರೆಯಹೋಗಲು, ಅದಕ್ಕೆ ಕೀಲಿಯು ಹಾಕಿತ್ತು; ಆದರೆ ಕೀಲಿಯಕೈಯು, ಪೆಟ್ಟಿಗೆಯ ಕೀಲಿಯಲ್ಲಿಯೇ ಇರುವದನ್ನು ನೋಡಿ ರಾಮರಾಜನು ಆಶ್ಚರ್ಯಪಟ್ಟು ಪೆಟ್ಟಿಗೆಯ ಕೀಲಿಯನ್ನು ತೆಗೆದನು. ಒಳಗೆ ವಸ್ತ್ರಾಭರಣಗಳು ಅಸ್ತವ್ಯಸ್ತವಾಗಿ ಬಿದ್ದಿದ್ದು, ರಾಮರಾಜನು ಅವನ್ನೆಲ್ಲ ಒಂದೊಂದೇ ಹೊರಗೆ ತೆಗೆದುನೋಡಲು. ಆತನು ಕೊಟ್ಟಿದ್ದ ವಸ್ತ್ರಾಭರಣಗಳೆಲ್ಲ ಅಚ್ಚಳಿಯದೆ ಎಲ್ಲವೂ ಇದ್ದವು! ರಾಮರಾಜನು ಕೊಟ್ಟಿದ್ದ ಒಂದು ರಿಂಬಿಯನ್ನು ಕೂಡ ಸಂಗಡ ಒಯ್ಯಲಿಕ್ಕಿಲ್ಲೆಂಬ ಪ್ರತಿಜ್ಞೆಯಿಂದ ಮೇಹರ್ಜಾನಳು ಕುಂಜವನದಿಂದ ಹೊರಟಿದ್ದನ್ನು ವಾಚಕರು ಮರೆತಿರಲಿಕ್ಕಿಲ್ಲ. ಈ ಸ್ಥಿತಿಯನ್ನು ನೋಡಿ ರಾಮರಾಜನು ಬಹಳ ಅಸಮಾಧಾನಪಟ್ಟನು. ತಾನು ಮೊದಲು ಮೇಹರ್ಜಾನಳಿಗೆ "ನಿನ್ನನ್ನು ಪಟ್ಟದ ರಾಣಿಯನ್ನಾಗಿ ಮಾಡಿಕೊಳ್ಳುವೆನೆ"ಂದು ವಚನಕೊಟ್ಟು, ಈಗ ಮೋಸ ಮಾಡಿದ್ದರಿಂದ ಆಕೆಯು ಹೀಗೆ ತನ್ನ ಮೇಲೆ ಸಿಟ್ಟಾಗಿ ಅಭಿಮಾನ ತೋರೆದು ಹೋದಳೆಂದು ತಿಳಿದು, ಆತನು ತನ್ನನ್ನು ಬಹಳವಾಗಿ ಹಳಿದುಕೊಳ್ಳಹತ್ತಿದನು; ಆದರೆ ರಾಮರಾಜನಂಥವರು ಬಹಳ ಹೊತ್ತು ತಮ್ಮನ್ನು ತಾವು ಹಳಿದುಕೊಳ್ಳುತ್ತ ಕೂಡ್ರುವ ಸಂಭವವು ಕಡಿಮೆ. ಅದರಂತೆ ರಾಮರಾಜನು ತನ್ನನ್ನು ಹಳಿದುಕೊಳ್ಳುವದನ್ನು ಬಿಟ್ಟು, ಮೇಹರ್ಜಾನಳ ಮೇಲೆ ತಪ್ಪು ಹೊರಿಸುವ ಉದ್ದೇಶದಿಂದ ತನ್ನೊಳಗೆ—"ಹೀಗೆ ಆಕೆಯು ಹೊರಟುಹೋಗುವಂಥ ಅಪರಾಧವನ್ನಾದರೂ ನಾನೇನು ಮಾಡಿದ್ದೆನು? ಕಾರ್ಯನಿಮಿತ್ತದಿಂದ ಕೆಲವು ದಿನ ಕುಂಜವನಕ್ಕೆ ಬರುವದಿಲ್ಲೆಂದು ನಾನು ಪತ್ರ ಬರೆದರೆ, ಕೊಟ್ಟ ವಚನಗಳನ್ನು ಮುರಿದ ಹಾಗಾಯಿತೇ! ರಾಜಕಾರಣಗಳಲ್ಲಿ ಪ್ರಸಂಗಕ್ಕನುಸರಿಸಿ ಸೋಗು ಹಾಕಬೇಕಾಗುತ್ತದೆಂಬ ಮಾತು ಆಕೆಗೆ ತಿಳಿಯಬಾರದೇನು? ಆಕೆಗೆ ಇಲ್ಲಿ ಯಾತರ ಕೊರತೆಯಿತ್ತು? ಇನ್ನು ಮೇಲೆ ಇಷ್ಟು ಸುಖವನ್ನು ಆಕೆಯು ಬೇರೆ ಕಡೆಗೆ ಪಡೆಯಬಹುದೋ? ಅಂದಬಳಿಕ ಆಕೆಯು ಸ್ವಲ್ಪ ಸಮಾಧಾನ ಮಾಡಿಕೊಳ್ಳತಕ್ಕದ್ದಿತ್ತು" ಎಂದು ತನ್ನೊಳಗೆ ಮಾತಾಡಿ ಕೊಂಡು ತನ್ನ ಸಮಾಧಾನ ಮಾಡಿ ಕೊಳ್ಳಹೋದನು; ಆದರೆ ಅದರಿಂದ ಆತನಿಗೆ ಸಮಾಧಾನ ವಾಗಲಿಲ್ಲ, ಆ ಶಯನಗೃಹದಲ್ಲಿ ಆತನು ಬಹಳ ಹೊತ್ತು ಕುಳಿತುಕೊಳ್ಳಲಾರದೆ ಅಲ್ಲಿಂದ ಹೊರಟು ಪುಷ್ಕರಣಿಯ ತೀರಕ್ಕೆ

ಹೋದನು. ಅಲ್ಲಿ ಆತನಿಗೆ ಅಂದಿನ ಮೋಹಜರ್ಾನಳ ನೌಕಾಕ್ರೀಡೆಯೂ, ಆಕೆಯ ಮನೋಹರವಾದ ''ಹೇರಿ ಆಜ ಸಕೀರೀ ಮೇ ಕ್ಯಾ ಕಹು'' ಎಂಬ ಹಿಂದುಸ್ಥಾನಿಯೂ ಮಂಜುಲಗಾನವೂ, ತಾನು ಅದಕ್ಕೆ ಪ್ರತ್ಯುತ್ತರವಾಗಿ ಗಾನಮಾಡಿದ ''ನಿಭೃತ ನಿಕುಂಜಗೃಹಂ'' ಎಂಬ ಸಂಸ್ಕೃತ ಪದ್ಯವೂ ನೆನಪಾಗಿ ಆತನ ಅಂತಃಕರಣವು ಮತ್ತಿಷ್ಟು ವ್ಯಥಿತವಾಗಹತ್ತಿತು. ಆತನು ಅಲ್ಲಿಯೂ ಬಹಳ ಹೊತ್ತು ನಿಲ್ಲದೆ ಭ್ರಮಿಷ್ಟನಂತೆ ಕುಂಜವನದ ಬೇರೆ ಬೇರೆ ಭಾಗಗಳಲ್ಲಿ ಸಂಚರಿಸಿ ಕಾಲಹರಣ ಮಾಡಿದನು. ಅಂದಿನ ರಾತ್ರಿಯೂ ಆತನಿಗೆ ಕಷ್ಟದಾಯಕವಾಯಿತು. ಆ ರಾತ್ರಿಯಲ್ಲಿ ಮೋಹಜರ್ಾನಳ ಸಂಬಂಧದ ಕನಸುಗಳು ಬಿದ್ದು ಆತನ ದುಃಖವು ಮತ್ತಿಷ್ಟು ಹೆಚ್ಚಾಯಿತು.

ಮೋಹಜರ್ಾನಳನ್ನು ಹುಡುಕಲಿಕ್ಕೆ ರಾಮರಾಜನಿಗೆ ಮನುಷ್ಯರ ಕೊರತೆ ಇದ್ದಿಲ್ಲ; ಆದರೆ ತಾನು ಧನಮಲ್ಲನಿಗೆ ಬಹಳ ಸಿಟ್ಟುಮಾಡಿ ಕಳಿಸಿರುವದರಿಂದ, ಆತನೇ ಇನ್ನು ಒಂದೆರಡು ದಿನಗಳಲ್ಲಿ ಮೋಹಜರ್ಾನಳ ಗೊತ್ತು ಹಚ್ಚಿಕೊಂಡು ಬರವನೆಂಬ ನಂಬಿಗೆಯಿಂದ ರಾಮರಾಜನು ಯಾರನ್ನೂ ಹುಡುಕಲಿಕ್ಕೆ ಕಳಿಸಲಿಲ್ಲ. ಇದಲ್ಲದೆ, ಸಿಟ್ಟಿನ ಭರದಲ್ಲಿ ಹೋದ ಮೋಹಜರ್ಾನಳು ಸಿಟ್ಟು ಇಳಿದ ಬಳಿಕ ಆಕೆಯು ತಾನಾಗಿ ಬರಬಹುದೆಂಬ ಆಶೆಯೂ ಆತನನ್ನು ಕೆಲಮಟ್ಟಿಗೆ ಸಮಾಧಾನಗೊಳಿಸಿತ್ತು. ಹೀಗೆ ನಾಲ್ಕೆಂಟು ದಿನಗಳು ಕ್ರಮಿಸಿದವು. ರಾಮರಾಜನ ಎಲ್ಲ ಆಶೆ ದುರಾಶೆಗಳು ವ್ಯರ್ಥವಾದವು. ಆಗ ಆತನು ಧನಮಲ್ಲನನ್ನು ಹುಡುಕಿಕೊಂಡು ಬರುವದಕ್ಕಾಗಿ ನಾಲ್ಕೂ ಕಡೆಗೆ ಆಳುಗಳನ್ನು ಕಳಿಸಿದನು. ತಾನು ನಾಲ್ಕು ದಿವಸ ಇಲ್ಲಿಯೇ ಇರಬೇಕೆಂದು ನಿಶ್ಚಯಿಸಿದನು. ಮುಂದೆ ಆ ನಾಲ್ಕು ದಿನಗಳು ಕ್ರಮಿಸಿಹೋಗಹತ್ತಿದವು. ನಾಲ್ಕನೆಯ ದಿನ ರಾತ್ರಿ ಆರು ತಾಸಿನ ಸುಮಾರಕ್ಕೆ ಆತನಿಗೊಂದು ಸ್ವಪ್ನವು ಬಿದ್ದು ಅದರಲ್ಲಿ ತಾನು ವಿದ್ಯಾನಗರಕ್ಕೆ ಹೊರಟುನಿಂತಂತೆಯೂ, ಮೋಹಜರ್ಾನಳು ದೀನವಾಣಿಯಿಂದ ತನ್ನನ್ನು ಕುರಿತು—''ಬೇಡಿರಿ, ದಯಮಾಡಿ ಹೀಗೆ ನನ್ನ ವಿಶ್ವಾಸಘಾತ ಮಾಡಬೇಡಿರಿ'' ಎಂದು ಪ್ರಾರ್ಥಿಸಿದಂತೆಯೂ ಆತನಿಗೆ ಆಯಿತು. ಕೂಡಲೆ ರಾಮರಾಜನು ಗಡಬಡಿಸಿ ಎದ್ದು ಕುಳಿತುಕೊಂಡು ನಾಲ್ಕೂ ಕಡೆಗೂ ಕಣ್ದೆರೆದು ನೋಡಿದನು. ಆತನಿಗೆ ನೋಡಿದತ್ತೆಲ್ಲ ಕನಸಿನೊಳಗಿನ ಮೋಹಜರ್ಾನಳೇ ಕಾಣಹತ್ತಿದಳು. ಆಗ ರಾಮರಾಜನು—ಛೇ ಛೇ! ಇನ್ನೆಲ್ಲಿಯ ಮೋಹಜರ್ಾನಳು! ವಿಶ್ವಾಸಘಾತಕಿಯಾದ ನನ್ನ ಮೇಲಿನ ಸಂತಾಪದಿಂದ ಇಲ್ಲಿಯದೊಂದು ರಿಂಬಿಯನ್ನು ಕೂಡ ತಕ್ಕೊಂಡು ಹೋಗದೆಯಿದ್ದ ಹಠಮಾರಿ ಸ್ವಭಾವದ ಆ ಮೋಹಜರ್ಾನಳು ತಿರುಗಿ ಬರಲಾರಳೆಂಬುದು ನನಗೆ ಇನ್ನೂ ತಿಳಿಯಬಾರದೇನು? ಇನ್ನು ವ್ಯರ್ಥವಾದ ಆಶೆಯಿಂದ ಹೀಗೆಯೇ ಕುಂಜುವನದಲ್ಲಿ ಕಾಲವನ್ನು ಕಳೆಯುತ್ತ ಕುಳಿತುಕೊಂಡರೆ, ಕೃಷ್ಣದೇವರಾಜನ ವಿಕಲ್ಪಕ್ಕೆ ಕಾರಣವಾಗಿ ಅಲ್ಲಿಯ ಕೆಲಸವೂ ಕೆಟ್ಟುಹೋದೀತು. ರಾಜ ಪುತ್ರಿಯಲ್ಲಿ ನನ್ನ ಪೂರ್ಣವಾದ ಅನುರಾಗವು ಇರತ್ತದೆಂಬ ನಂಬಿಗೆಯು ಮಹಾರಾಜರಿಗೆ ಆಗುವದು ಅವಶ್ಯವಾಗಿರುತ್ತದೆ. ಹೀಗೆ ಮೂರು ಮೂರು ದಿನಕ್ಕೊಮ್ಮೆ ಏನಾದರೂ ನೆವಮಾಡಿ ವಿಜಯನಗರವನ್ನು ಬಿಟ್ಟುಬಂದು, ಹದಿನೈದು ದಿನಗಟ್ಟಲೆ ನಾನು ಹೊರಗೆ ಇರಹತ್ತಿದರೆ, ತರ್ಕವಿತರ್ಕಗಳು ಆರಂಭವಾಗಿ, ನನ್ನ ಹುಳುಕು ಹೊರಬಿದ್ದೀತು.

ಆದ್ದರಿಂದ ನಾಳೆ ಬೆಳಗಾದ ಕೂಡಲೆ ವಿಜಯನಗರಕ್ಕೆ ಹೋಗಬೇಕು, ಎಂದು ನಿಶ್ಚಯಿಸಿದನು. ಕೃಷ್ಣದೇವರಾಯನು ತಮ್ಮ ಮಗಳನ್ನು ತಮ್ಮ ಸಮಾನಸ್ಕಂದರಾದ ಉತ್ತರ ಹಿಂದುಸ್ತಾನದ ಯಾವನೊಬ್ಬ ರಾಜಪುತ್ರನಿಗೆ ಕೊಡಬಹುದಾಗಿತ್ತು; ಆದರೆ ಮಗಳು ದೂರ ಹೋಗ ಬೇಕಾಗುವ ದರಿಂದ ಆಕೆಯ ಯೋಗಕ್ಷೇಮಕ್ಕೆ ಆಸ್ಪದವು ಉಳಿಯುವದಿಲ್ಲೆಂಬ ಕರ್ನಾಟಕದ ಸ್ವಾಭಾವಿಕವಾದ ಹೆಣ್ಣುಗಳಿಗನುಸರಿಸಿ, ಅವರು ತಮ್ಮ ದರ್ಬಾರದೊಳಗಿನ ಯಾವನೊಬ್ಬ ತರುಣ ಸರದಾರನಿಗೆ ಕೊಡಬೇಕೆಂದು ಯೋಚಿಸಿ ಆರಿಸಿ ರಾಮರಾಜನಿಗೆ ತಮ್ಮ ಮಗಳನ್ನು ಕೊಟ್ಟಿದ್ದರು! ಅಳಿಯನನ್ನು ಅರಸನ ಯೋಗ್ಯತೆಯವರೆಗೆ ಏರಿಸುವದು ತಮ್ಮ ಕೈಯೊಳಗಿರುತ್ತದೆಂದು ಅವರು ತಿಳಕೊಂಡಿದ್ದರು. ಈ ಮಾತು ರಾಮರಾಜನಿಗೂ ಗೊತ್ತಿತ್ತು. ಆದ್ದರಿಂದ ಆತನು ಆತುರಪಟ್ಟು ಬೆಳಗಾಗುವ ಹಾದಿಯನ್ನು ನೋಡದೆ ಮೇಹರ್ಜಾನಳ ವಸ್ತ್ರಾಭರಣಗಳ ಪೆಟ್ಟಿಗೆಯನ್ನು ಮುಚ್ಚಿ, ಅದಕ್ಕೆ ಬೀಗಹಾಕಿ ಇಟ್ಟು, ತನ್ನ ಕುದುರೆಯನ್ನು ತರಿಸಿ ವೇಗದಿಂದ ವಿಜಯನಗರದ ಕಡೆಗೆ ಸಾಗಿದನು.

ಮುಂದೆ ರಾಮರಾಜನಿಗೆ ೩೦ ವರ್ಷಗಳವರೆಗ ಮೇಹರ್ಜಾನಳ ಶೋಧವಾಗಲಿಲ್ಲ! ಆತನು ಈ ಮೂವತ್ತು ವರ್ಷ ಒಂದೇಸವನೆ ಆಕೆಯನ್ನು ಹುಡುಕಿಸಿದನೆನ್ನುವ ಹಾಗಿಲ್ಲ. ಮೊದಮೊದಲು ಆತನು ಒಳ್ಳೆ ಆಸಕ್ತಿಯಿಂದ ಆಕೆಯನ್ನು ಹುಡುಕಿಸಿದನು. ಆಕೆಯ ಶೋಧಕ್ಕಾಗಿ ಅಲ್ಲಲ್ಲಿ ಗುಪ್ತಚಾರರನ್ನು ಇಟ್ಟಿದ್ದನು. ಎರಡು ತಿಂಗಳಾದರೂ ಮೇಹರ್ಜಾನಳ ಗೊತ್ತೂ ಹತ್ತಲಿಲ್ಲ, ಧನಮಲ್ಲನ ಗೊತ್ತೂ ಹತ್ತಲಿಲ್ಲ. ಆಗ ಆತನು—"ಹೋದರೆ ಹೋದಳು. ನಾನೇನು ಆಕೆಯನ್ನು ಬಿಟ್ಟಿದ್ದಿಲ್ಲ. ಸುಖವನ್ನು ಭೋಗಿಸಬೇಕೆಂಬದು ಆಕೆಯ ಹಣೆಬರಹದಲ್ಲಿಯೆ ಬರೆದಿಲ್ಲ, ನಾನು ಮಾಡುವದೇನು?" ಎಂದು ಮನಸ್ಸಿನಲ್ಲಿ ಅಂದುಕೊಂಡು, ಹುಡುಕಿಸುವದನ್ನು ಬಿಟ್ಟು ಕೊಟ್ಟನು; ಆದರೆ ಆಕೆಯ ಹಳವಂಡವು ಮಾತ್ರ ಆತನಿಗೆ ಹೋಗಲಿಲ್ಲ. ಇದು ಕಡೆತನಕ ಇರತಕ್ಕದ್ದೇ ಎಂದು ರಾಮರಾಜನು ಅಂದುಕೊಳ್ಳುತ್ತಿದ್ದನು. ಹತ್ತು ಹದಿನೈದು ದಿನಗಳಿಗೊಮ್ಮೆ ಆತನು ಕುಂಜವನಕ್ಕೆ ಹೋಗುತ್ತ ಬರುತ್ತಲಿದ್ದನು. ಕುಂಜವನದ ವ್ಯವಸ್ಥೆಯನ್ನು ಮೊದಲಿನಂತೆಯೇ ಇಡಬೇಕೆಂದು ರಾಮರಾಜನ ಕಟ್ಟಪ್ಪಣೆಯಿದ್ದದ್ದರಿಂದ, ಅದರ ವ್ಯವಸ್ಥೆಯಲ್ಲಿ ಹೆಚ್ಚು ಕಡಿಮೆಯಾಗಿದ್ದಿಲ್ಲ. ರಾಮರಾಜನು ಮೇಲೆ ಮೇಲೆ ಬರುತ್ತಿರುವನೆಂಬ ಭಯವು ವ್ಯವಸ್ಥಾಪಕರಿಗೆ ಇತ್ತು. ಮೊದಲಿಗೆ ಐದಾರು ತಿಂಗಳು ಉತ್ತಮ ವ್ಯವಸ್ಥೆ ಇತ್ತು. ಮುಂದೆ ಬರುಬರುತ್ತ ರಾಮರಾಜನ ಆಸಕ್ತಿಯು ಕಡಿಮೆಯಾಯಿತು. ರಾಜಕಾರಣದ ಸಲುವಾಗಿ ಆ ಹಾದಿಯಿಂದ ಹೋದಾಗ ಆತನು ಕುಂಜವನದೊಳಗೆ ಹೋಗಿ, ವ್ಯವಸ್ಥೆಯಲ್ಲಿ ಕೊರತೆಯಾಗಿದ್ದ ಪಕ್ಷದಲ್ಲಿ ವ್ಯವಸ್ಥಾಪಕರಿಗೆ ಸಿಟ್ಟು ಮಾಡುತ್ತಿದ್ದನು. ಹೀಗೆ ಒಂದು ವರ್ಷವು ಕಳೆದುಹೋಯಿತು. ಮತ್ತೂ ಒಂದು ವರ್ಷವು ಕಳೆದುಹೋಯಿತು. ಆ ವರ್ಷದಲ್ಲಿ ರಾಮರಾಜನಿಗೆ ಕುಂಜವನದ ಅಲ್ಲವೆ ಮೇಹರ್ಜಾನಳ, ಅಥವಾ ಧನಮಲ್ಲನ ಸ್ಮರಣವಾದರೂ ಆಗಿತ್ತೋ, ಇಲ್ಲವೋ, ಎಂಬುದನ್ನು ಹೇಳಲಾಗುವದಿಲ್ಲ. ಕುಂಜವನದ ವ್ಯವಸ್ಥಾಪಕನು ಹತ್ತು-ಹದಿನೈದು ದಿವಸಗಳಿಗೊಮ್ಮೆ ಮುಜುರೆ ಮಾಡಲಿಕ್ಕೆ ಬಂದಾಗ, ರಾಮರಾಜನು ಆತನನ್ನು ಕುರಿತು—ಕುಂಜವನದ ವ್ಯವಸ್ಥೆಯು ನೆಟ್ಟಗಿರುತ್ತದಷ್ಟೇ? ನಾವು ಯಾವಾಗ ಬಂದೇವೆಂಬದರ ನಿಯಮವಿಲ್ಲ, ಜಾಗ್ರತೆಯಿಂದ

ವ್ಯವಸ್ಥೆಯನ್ನು ಕಾಯ್ದು ಕೊಳ್ಳತಕ್ಕದು, ಎಂದು ಹೇಳುವವನಲ್ಲದೆ ಮೇಹರ್ಜಾನಳ, ಅಥವಾ ಧನಮಲ್ಲನ ವಿಷಯವಾಗಿ ಚಕಾರ ಶಬ್ದವನ್ನು ತೆಗೆಯುತ್ತಿದ್ದಿಲ್ಲ.

ಹೀಗಾಗಲಿಕ್ಕೆ ತಕ್ಕ ಕಾರಣವೂ ಒದಗಿತು. ಆ ಮಹತ್ವಾಕಾಂಕ್ಷಿಯಾದ ಸರದಾರನಿಗೆ ತನ್ನ ಮಹತ್ವಾಕಾಂಕ್ಷೆಯನ್ನು ಪೂರ್ಣಮಾಡಿಕೊಳ್ಳುವ ಸಮಯವೂ, ಸಾಮಗ್ರಿಗಳೂ ಅನುಕೂಲ ವಾದವು. ತಮ್ಮ ಮಗಳನ್ನು ರಾಮರಾಜನಿಗೆ ಲಗ್ನಮಾಡಿಕೊಟ್ಟ ಸ್ವಲ್ಪ ದಿನಗಳಲ್ಲಿಯೇ ಕೃಷ್ಣದೇವರಾಯರು ಆಕಸ್ಮಾತ್ತಾಗಿ ಬೇನೆಬಿದ್ದರು. ಅವರು ರಾಮರಾಜನನ್ನು ತಮ್ಮ ಬಳಿಯಲ್ಲಿ ಕುಳ್ಳಿರಿಸಿಕೊಂಡು ರಾಜ್ಯಕಾರಭಾರವನ್ನು ನಡಿಸಹತ್ತಿದರು. ಇಷ್ಟು ಆಸ್ಪದವು ದೊರೆತಕೂಡಲೆ ರಾಮರಾಜನು ತನ್ನ ಲಾಭವನ್ನು ಚೆನ್ನಾಗಿ ಮಾಡಿಕೊಳ್ಳಹತ್ತಿದನು. ಕೃಷ್ಣದೇವರಾಜರ ಮನಸ್ಸಿನ ಬಲವನ್ನರಿತು, ಹೀಗೆ ಹೀಗೆ ಅಪ್ಪಣೆಗಳನ್ನು ಬರೆದಿರುತ್ತೇನೆ, ಎಂದು ಹೇಳಿ ಕೂಡಲೆ ಆಜ್ಞಾಪತ್ರಗಳನ್ನು ಓದಿ ತೋರಿಸಿದನು. ಇದರಿಂದ ಕೃಷ್ಣದೇವರಾಜನು ರಾಮರಾಜನ ಧೂರ್ತತನಕ್ಕೆ ಮೆಚ್ಚಿ ಆತನನ್ನು ಅಭಿನಂದಿಸ ಹತ್ತಿದನು. ಬೇನೆಯಲ್ಲಿ ಅವರಿಗೆ ಕೆಲಸ ಕಡಿಮೆಯಾಗಿ, ತಮ್ಮ ಮನಸ್ಸಿನಂತೆ ಕೆಲಸವಾದರೆ ಸಾಕಾಗಿತ್ತು. ಮುಂದೆ ಬರಬರುತ್ತ ರಾಮ ರಾಜನು ಕೃಷ್ಣದೇವರಾಜರ ಒಲವನ್ನು ಲೆಕ್ಕಿಸದೆ, ತನ್ನ ಮನಸ್ಸಿಗೆ ಬಂದಂತೆ ಆಜ್ಞಾಪತ್ರಗಳನ್ನು ಬರೆದು ಹೀಗೆ ಹೀಗೆ ಎಂದು ರಾಯರ ಮುಂದೆ ನಿವೇದಿಸಹತ್ತಿದನು. ರಾಯರ ಪ್ರಕೃತಿಯು ದಿನದಿನಕ್ಕೆ ಅಶಕ್ತವಾಗುತ್ತ ನಡೆದದರಿಂದಲೂ, ರಾಮರಾಜನ ಮೇಲೆ ಅವರ ಪೂರ್ಣವಿಶ್ವಾಸ ವಿದ್ದದ್ದರಿಂದಲೂ ರಾಮರಾಜನ ಮಾತಿನ ವಿಷಯವಾಗಿ ಅವರಿಗೆ ವಿಕಲ್ಪವು ಬಾರದಾಯಿತು. ಬರಬರುತ್ತ ರಾಮರಾಜನು ಸ್ವತಂತ್ರವಾಗಿ ರಾಜ್ಯಭಾರವನ್ನು ಸಾಗಿಸಿ. ದಿನಕ್ಕೊಮ್ಮೆ ರಾಯರ ದರ್ಶನಕ್ಕೆ ಬಂದು, ನಡೆದ ವಿಶೇಷ ಸಂಗತಿಗಳನ್ನು ಕುರಿತು ನಾಲ್ಕು ಮಾತುಗಳನ್ನು ಆಡಹತ್ತಿದನು. ರಾಯರಾದರೂ ಪ್ರಕೃತಿಗೆ ಸ್ವಸ್ಥವಿದ್ದರೆ ರಾಮರಾಜನ ಮಾತುಗಳನ್ನು ಕೇಳುತ್ತಿದ್ದರು, ಇಲ್ಲದಿದ್ದರೆ ಅದನ್ನೂ ಕೇಳುತ್ತಿದ್ದಿಲ್ಲ. ಅದ್ದರಿಂದ ರಾಮರಾಜನೇ ವಿಜಯನಗರದ ರಾಜ್ಯದ ಪ್ರತ್ಯಕ್ಷ ರಾಜನಾದನು.

ರಾಮರಾಜನಂಥ ಮಹತ್ವಾಕಾಂಕ್ಷಿಗೆ ಇಂಥ ಪ್ರಸಂಗವು ದೊರೆತ ಬಳಿಕ ಕೇಳುವದೇನು? ರಾಮರಾಜನು ತನ್ನ ಹಿತವನ್ನು ಸಾಧಿಸಿಕೊಳ್ಳಲಿಕ್ಕೆ ಬರುವ ಹಾಗಿದ್ದ ಮಟ್ಟಿಗೆ, ಅದನ್ನು ಕಸರಿಲ್ಲದೆ ಸಾಧಿಸಿಕೊಂಡನೆಂದು ಹೇಳಬಹುದು. ಆತನು ತನ್ನ ಅಣ್ಣನಾದ ತಿರುಮಲನಿಗೆ ಸೇನಾಪತಿಯ ಅಧಿಕಾರವನ್ನು ಕೊಡಿಸಿದನು; ಮತ್ತು ಶಾರ್ಙದೇವನೆಂಬ ತನ್ನ ಮಿತ್ರನಿಗೆ ಕೃಷ್ಣದೇವರಾಜರ ಖಾಸಗಿ ಕಾರಭಾರಿಯನ್ನಾಗಿ ನಿಯಮಿಸಿದನು. ಒಟ್ಟಿಗೆ, ಅರಸರ ಮುಖ್ಯ ಕಾರಭಾರವು ತನ್ನ ಕೈಯಲ್ಲಿ, ಅರಸರ ಸೈನ್ಯವು ತನ್ನ ಅಣ್ಣನ ಕೈಯಲ್ಲಿ, ಅರಸರ ಖಾಸಗಿ ಕಾರಭಾರವು ತನ್ನ ಮಿತ್ರನ ಕೈಯಲ್ಲಿ; ಹೀಗಾದ ಬಳಿಕ ಮತ್ತೆ ಬೇಕಾದದ್ದೇನು? ಎಲ್ಲಿಯೂ ಎರಡನೆಯವರ ಕೈಯನ್ನು ಸೇರಿಸಿಗೊಡ ಬಾರದೆಂದು ರಾಮರಾಜನು ನಿಶ್ಚಯಮಾಡಿಕೊಂಡಿದ್ದನು. ಕೃಷ್ಣದೇವರಾಜರಿಗೆ ಒಬ್ಬ ಮಗನಿದ್ದನು. ಮಗನನ್ನು ಪಟ್ಟಕ್ಕೆ ಕುಳ್ಳಿರಿಸಿ, ಆತನು ರಾಜ್ಯಕಾರಭಾರ ನಡಿಸುವದನ್ನು ಕಣ್ಣುತುಂಬ ನೋಡಿ, ''ಹರಿ ಹರಿ'' ಎಂದು ಸ್ವಸ್ಥವಾಗಿ ಇರಬೇಕೆಂದು ಅವರು ಇಚ್ಛಿಸುತ್ತಿದ್ದರು.

ತಮ್ಮ ಮಗನು ಪಟ್ಟಕ್ಕೆ ಕುಳಿತುಕೊಳ್ಳಲು, ರಾಮರಾಜನು ಮುಖ್ಯ ಕಾರಭಾರಿಯಾಗಿ, ಯಾರ ಬೇಳೆಯನ್ನೂ ಬೇಯಗೊಡದೆ ರಾಜ್ಯವನ್ನು ಸುಯಂತ್ರವಾಗಿ ನಡಸಿಯಾನೆಂದು ರಾಯರು ಭಾವಿಸಿದ್ದರು, ಆದರೆ ಏನಾಯಿತೋ ತಿಳಿಯದು, ಆ ರಾಜಪುತ್ರನು ವಿಷಪ್ರಯೋಗದಿಂದ ಅಕಸ್ಮಾತ್ತಾಗಿ ಸತ್ತನು. ವಿಷಪ್ರಯೋಗವನ್ನು ಯಾರು ಹ್ಯಾಗೆ ಮಾಡಿದರೆಂಬ ಬಗ್ಗೆ ಕೃಷ್ಣದೇವ ರಾಯರೂ ರಾಮರಾಜನೂ ಒಳ್ಳೆಯ ನಿಗ್ರಹದಿಂದ ಶೋಧಮಾಡಿದರು; ಆದರೆ ಅವರ ಗೊತ್ತು ಹತ್ತಲಿಲ್ಲ. ಪುತ್ರಶೋಕದಿಂದ ಕೃಷ್ಣದೇವರಾಜರು ಬೇಗನೆ ಮರಣ ಹೊಂದಿದರು. ಅವರ ತರುವಾಯ ಅವರ ಅನುಮತಿಯಿಂದ ಕಾರಾಗೃಹದಲ್ಲಿದ್ದ ಅವರ ತಮ್ಮನೊಬ್ಬನು ಸಿಂಹಾಸನದ ಮೇಲೆ ಕುಳ್ಳಿರಿಸಲ್ಪಟ್ಟನು.

ಕೃಷ್ಣದೇವರಾಜರಿಗೆ ವಿಜಯನಗರದ ಸಿಂಹಾಸನವು ಅನಾಯಾಸವಾಗಿ ದೊರೆತಿದ್ದಿಲ್ಲ. ಅವರು ತಮಗಿಂತಲೂ ಗಾದಿಯ ಮೇಲೆ ವಿಶೇಷ ಹಕ್ಕು ಇರುವ ತಮ್ಮ ಮೂವರು ತಮ್ಮಂದಿರನ್ನೂ, ಒಬ್ಬ ಅಣ್ಣನ ಮಗನನ್ನೂ ಮಹತ್ವಾಕಾಂಕ್ಷೆಯಿಂದ ಸೆರೆಯಲ್ಲಿಟ್ಟು ವಿಜಯಗರದ ಪಟ್ಟವೇರಿದ್ದರು. ತಮ್ಮ ಹೊಟ್ಟೆಯಲ್ಲಿ ಸಂತಾನವಾದದ್ದರಿಂದ, ತಮ್ಮ ತರುವಾಯ ತಮ್ಮ ವಂಶಕ್ಕೇ ಸಿಂಹಾಸನವು ಪ್ರಾಪ್ತವಾಗುವದೆಂದು ಕೃಷ್ಣದೇವರಾಯರು ತಿಳಿದಿದ್ದರು; ಆದರೆ ವಿಷಪ್ರಯೋಗದಿಂದ ಮಗನು ಆಕಸ್ಮಾತ್ ಮರಣಹೊಂದಿದ್ದರಿಂದ ಅವರ ಎಲ್ಲ ಆಸೆಗಳು ಬಯಲಾದವು. ರಾಮರಾಜನ ಮೇಲೆ ರಾಯರ ಪ್ರೀತಿಯು ವಿಶೇಷವಾಗಿತ್ತು, ಈತನು ತಮ್ಮ ಮಗನೊಡನೆ ಸ್ವಾಮಿನಿಷ್ಠೆಯಿಂದ ನಡಕೊಂಡು, ತಮ್ಮ ವೈರಿಗಳ, ಹಾಗು ತಮ್ಮ ಅಣ್ಣ-ತಮ್ಮಂದಿರ ಆಟವನ್ನು ಸಾಗಿಸಿಕೊಂಡು ಹೋಗುವನೆಂತಲೂ ಕೃಷ್ಣದೇವರಾಯರು ನಂಬಿದ್ದರು; ಆದರೆ ರಾಜಪುತ್ರನ ಆಕಸ್ಮಿಕ ಮರಣದಿಂದ ಅದೆಲ್ಲ ನಿರರ್ಥಕ ಕಲ್ಪನೆಯಾಗಿ ಹೋಯಿತು. ಕೃಷ್ಣದೇವರಾಜರ ಮರಣದಿಂದ ರಾಜ್ಯಕಾರಭಾರದಲ್ಲಿ ಬಹಳ ಹೆಚ್ಚು ಕಡಿಮೆಯಾದವು. ಸೆರೆಮನೆಯಲ್ಲಿದ್ದ ಮೂವರು ರಾಜಬಂಧುಗಳಲ್ಲಿ ಅಚ್ಯುತರಾಯನೆಂಬವನ ಪಕ್ಷದ ಜನರು ಖಟಾಟೋಪಮಾಡಿ ಆತನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿದರು; ಆದ್ದರಿಂದ ರಾಮರಾಜನ ಪಕ್ಷವು ಹಿಂದಕ್ಕೆ ಬಿದ್ದು ಆತನೂ ಆತನ ಅಣ್ಣನೂ, ಆತನ ಮಿತ್ರನೂ ಕೆಲವು ದಿನ ಅಜ್ಞಾತವಾಸ ಮಾಡಬೇಕಾಯಿತು. ಈ ಅಜ್ಞಾತವಾಸವು ರಾಮರಾಜನಿಗೆ ದುಃಸಹವಾಯಿತು. ಆದರೂ ಆತನು ಅದನ್ನು ಹ್ಯಾಗಾದರೂ ನೀಗಿದನು. ಆ ಅಜ್ಞಾತವಾಸದ ಕಾಲವನ್ನು ಆತನು ಸಕುಟುಂಬ ಕುಂಜವನದಲ್ಲಿ ವಾಸಮಾಡಿ ಕಳೆದನು. ಕುಂಜವನಕ್ಕೆ ಬಂದಬಳಿಕ ಆತನಿಗೆ ಮೋಹರ್ಜಾನಳ ನೆನಪು ಮೇಲೆ ಮೇಲೆ ಆಗಹತ್ತಿತ್ತು, ಆತನು ಸಕುಟುಂಬ ಅಲ್ಲಿ ವಾಸಮಾಡ ಹತ್ತಿದ್ದರಿಂದ, ಮನುಷ್ಯ ಸ್ವಭಾವಕ್ಕನುಸರಿಸಿ ಬರಬರುತ್ತ ಮೋಹರ್ಜಾನಳ ನೆನಪು ಸಹ ಆತನಿಗೆ ಆಗದಹಾಗಾಯಿತು. ಮೋಹರ್ಜಾನಳ ಈ ನೆನಪಿನ ಗೂಡ ರಾಮರಾಜನ ಮಹತ್ವಾಕಾಂಕ್ಷೆ ಮಾತ್ರ ಅಳಿದುಹೋಗಿದ್ದಿಲ್ಲ. ಆತನು ಅಚ್ಯುತರಾಯನ ಆಳಿಕೆಯಲ್ಲಿಯಾದರೂ ತನ್ನ ಕುದುರೆಯನ್ನು ಮುಂದಕ್ಕೆ ನೂಕಿ, ಅಚ್ಯುತರಾಯನನ್ನು ನಾಮಧಾರಿಯಾದ ಅರಸನನ್ನು ಮಾಡಬೇಕೆಂದು ಯತ್ನಿಸಹತ್ತಿದ್ದನು. ಅಚ್ಯುತರಾಯನ ಕಾಲದಲ್ಲಿ ವಿಜಯನಗರದ ಗೌರವವೂ,

ದರ್ಪವೂ ತೀರ ಕಡಿಮೆಯಾದವು. ಕೃಷ್ಣದೇವರಾಯನ ಕಾಲದಲ್ಲಿ ವಿಜಯಗರ ಸಾಮ್ರಾಜ್ಯವು ಅತ್ಯುತ್ಕರ್ಷವನ್ನು ಹೊಂದಿತ್ತು ಆಗಿನ ಕಾಲದಲ್ಲಿ ವಿಜಯನಗರದ ರಾಯರ ಭಯವು ಯಾವತ್ತು ಮುಸಲ್ಮಾನ ಬಾದಶಹರಿಗೆ ಇತ್ತು. ವಿಜಾಪುರದ ಇಸ್ಮಾಯಿಲ್ ಆದಿಲಶಹನು ಕೃಷ್ಣದೇವರಾಯನ ಕೈಯಿಂದ ವಿಜಯನಗರದ ರಾಜ್ಯದ ಕೆಲವು ಭಾಗವನ್ನು ಕಸಕೊಳ್ಳಬೇಕೆಂದೂ ಒಂದೆರಡು ಸಾರೆ ಪ್ರಯತ್ನ ಮಾಡಿದ್ದನು; ಆದರೆ ಕೃಷ್ಣದೇವರಾಯನು ಆತನ ಆಟವನ್ನು ನಡೆಯಗೊಡಲಿಲ್ಲ. ಈ ಪ್ರಸಂಗವು ಓದತಕ್ಕದ್ದಾದ್ದರಿಂದ ಅದನ್ನು ವಾಚಕರ ಸಲುವಾಗಿ ಕೊಡುವೆವು.

ಇಸ್ಮಾಯಿಲ್ ಆದಿಲ್‌ಶಹನು ರಾಯಚೂರು, ಮುದ್ದುಗಲ್ಲಗಿರಿ ಎಂಬ ಎರಡು ಸ್ಥಳಗಳನ್ನು ಕೃಷ್ಣದೇವರಾಯನ ಕೈಯೊಳಗಿಂದ ಕಸಕೊಂಡು, ಮುಸಲ್ಮಾನರ ಸಾಮರ್ಥ್ಯವು ಯಥಾಸ್ಥಿತವಿದ್ದಂತೆ ಹಿಂದುಗಳಿಗೆ ತೋರಿಸಬೇಕೆಂದು ಮಾಡಿದನು. ಆತನ ಸೈನ್ಯವು ಆ ಸ್ಥಳಗಳ ಕಡೆಗೆ ಸಾಗಿಬರಹತ್ತಿತ್ತು. ಅವೆರಡು ಸ್ಥಳಗಳು ಮೊದಲು ಮುಸಲ್ಮಾನರವು. ಅವನ್ನು ವಿಜಯನಗರದ ರಾಯರು ಗೆದ್ದುಕೊಂಡಿದ್ದರು, ಆದಿಲ್‌ಶಹನ ಈ ದಂಡಯಾತ್ರೆಯನ್ನು, ಪೂರ್ಣ ಜಾಗರೂಕನಾಗಿದ್ದ ಕೃಷ್ಣದೇವರಾಯನು ಕೇಳಿ, ತನ್ನ ಪ್ರಚಂಡ ಸೈನ್ಯವನ್ನು ಸಿದ್ಧಗೊಳಿಸಿದನು. ಕೃಷ್ಣದೇವರಾಯನ ಕಾಲದಲ್ಲಿ ವಿಜಯನಗರದ ಸಾಮ್ರಾಜ್ಯದ ಸಾಮರ್ಥ್ಯವು ಅಧಿಕವಾಗಿತ್ತು ಆದಿಲಶಹನು ದಂಡು ಸಾಗಿಸಿಕೊಂಡು ಬಂದಬಂದಂತೆ, ಕೃಷ್ಣದೇವರಾಯನೂ ತನ್ನ ಪ್ರಚಂಡ ಸೈನ್ಯವನ್ನು ಅದಕ್ಕೆ ಎದುರಾಗಿ ಸಾಗಿಸಿಕೊಂಡು ನಡೆದನು. ಆದಿಲಶಹನು ತೀರ ಸನಿಯಕ್ಕೆ ಬಂದನೆಂಬ ಸುದ್ದಿಯನ್ನು ಕೇಳಿ, ಕೃಷ್ಣದೇವರಾಯನು ಕೃಷ್ಣೆಯ ಈಚೆಯ ದಂಡೆಯಲ್ಲಿ ತನ್ನ ಸೈನ್ಯದ ಬೀಡು ಬಿಟ್ಟನು. ಆತನನ್ನು ಹಲವು ಜನ ಹಿಂದೂ ಮಾಂಡಲಿಕ ರಾಜರು ತಮ್ಮ ತಮ್ಮ ಸೈನ್ಯಗಳೊಡನೆ ಅಭಿಮಾನದಿಂದ ಬಂದು ಕೂಡಿಕೊಂಡಿದ್ದರು. ಕೃಷ್ಣದೇವರಾಜನ ಈ ಸಿದ್ಧತೆಯನ್ನು ನೋಡಿ ಅಲ್ಲಿ ಆದಿಲಶಹನು ಬೆದರಿ, ಹಿಂದಿರುಗಿ ಹೋಗುವದು ಯುಕ್ತವಾಗಿತ್ತು; ಹಾಗೆ ಮಾಡಬೇಕೆಂದು ಆತನ ಕಡೆಯ ತಿಳಿವಳಿಕೆಯ ಸರದಾರರೂ ಹೇಳಿದರು; ಆದರೆ ಮುಂದಕ್ಕಿಟ್ಟ ಹೆಜ್ಜೆಯನ್ನು ಹಿಂದಕ್ಕಿಡುವದು ಆ ಅಭಿಮಾನಿ ಪುರುಷನ ಮಾನಕ್ಕೆ ಸಾಲಲಿಲ್ಲ. ಆತನು ತಾನು ಹಿಂದಿರುಗಿ ಹೋಗಿಲಿಕ್ಕಿಲ್ಲೆಂದು ನಿಶ್ಚಯಿಸಿ ತನ್ನ ಏಳು ಸಾವಿರ ಮುಸಲ್ಮಾನ ಸೈನ್ಯಕ್ಕೆ, ತಾನು ಅಪ್ಪಣೆ ಕೊಟ್ಟ ಕೂಡಲೆ ಕೃಷ್ಣಾನದಿಯನ್ನು ದಾಟಿ ಶತ್ರುಗಳ ಮೇಲೆ ಬೀಳಬೇಕೆಂದು ಅಪ್ಪಣೆ ಮಾಡಿದನು. ನದಿಯನ್ನು ದಾಟುವದಕ್ಕಾಗಿ ಮುಸಲ್ಮಾನರು ತೆಪ್ಪಗಳನ್ನು ಕಟ್ಟಹತ್ತಿದರು. ಹೀಗಿರುವಾಗ ಒಂದು ದಿನ ಆದಿಲಶಹನು ತನ್ನ ಡೇರೆಯಲ್ಲಿ ಸ್ವಸ್ಥ ವಿಶ್ರಾಂತಿಯನ್ನು ಹೊಂದುತ್ತ ಕುಳಿತಿರಲು, ಯಾರೋ ಹೊರಗೆ—''ಏಳಪ್ಪಾ, ನಿನ್ನ ಕೈಯೊಳಗಿನ ಸುವರ್ಣದ ಪಾತ್ರೆಯನ್ನು ಹಾರಿಸಿ ಮಣ್ಣುಗೂಡಿಸುವದರೊಳಗೆ ಅದರಲ್ಲಿ ಆನಂದರೂಪವಾದ ಮದ್ಯವನ್ನು ತುಂಬಿ ಪ್ರಾಶನ ಮಾಡು'' ಎಂದು ಮಂಜುಲ ಸ್ವರದಿಂದ ಹಾಡುವದು ಆತನ ಕಿವಿಗೆ ಬಿದ್ದಿತು. ಅದನ್ನು ಕೇಳಿದ ಕೂಡಲೆ ಸುಲ್ತಾನನು ಅಕಸ್ಮಾತ್ ಸ್ಫೂರ್ತಿಗೊಂಡು—''ಅಲ್ಲಾನು ಈ ಗಾಯನದ ರೂಪದಿಂದ ನನಗೆ ನನ್ನ ಮನಸ್ಸಿನ ಕೋರಿಕೆಯನ್ನು ಪೂರ್ಣಮಾಡಿಕೊಳ್ಳಲಿಕ್ಕೆ ಇದು ಒಳ್ಳೆ ಸಮಯವೆಂದು ಸೂಚಿಸುತ್ತಾನೆ''ಂದು ತಿಳಿದು, ತನ್ನ ಜತೆಗಾರರೊಡನೆ ರಾತ್ರಿ ಯತೇಚ್ಛ ಮದ್ಯಪಾನ ಮಾಡಿ,

ಅಮಲು ತಲೆಗೇರಿರಲು, ಹಿಂದುಮುಂದಿನ ವಿಚಾರಮಾಡದೆ ಒಮ್ಮೆಲೆ ತನ್ನ ಸೈನಿಕರಿಗೆ— ''ನೀವು ಈಗಲೆ ನದಿಯನ್ನು ದಾಟಿ ಶತ್ರುಗಳ ಮೇಲೆ ಬೀಳಬೇಕೆ''ಂದು ಆಜ್ಞಾಪಿಸಿದನು. ಆಗ ವಿಚಾರವಂತ ಸರದಾರರು ಇದು ಯೋಗ್ಯವಲ್ಲೆಂದು ಸುಲ್ತಾನನಿಗೆ ಬಹಳವಾಗಿ ಹೇಳಿದರು; ಮತ್ತು ಹೀಗೆ ಅವಿಚಾರದಿಂದ ಶತ್ರುಗಳ ಮೇಲೆ ಬಿದ್ದರೆ, ಒಬ್ಬರೂ ತಿರುಗಿ ಹೋಗಲಿಕ್ಕಿಲ್ಲೆಂತಲೂ ಅವರು ಸ್ಪಷ್ಟವಾಗಿ ಸುಲ್ತಾನನಿಗೆ ತಿಳಿಸಿದರು; ಆದರೆ ಸಾರಾಯಿಯ ಗುಂಗಿನಲ್ಲಿದ್ದ ಸುಲ್ತಾನನಿಗೆ ಆಗ ಎಚ್ಚರವು ಹುಟ್ಟಲಿಲ್ಲ. ಆತನು ಪುನಃ ತನ್ನ ಸೈನಿಕರಿಗೆ—''ಈಗ ಸಿದ್ಧವಾಗಿದ್ದ ತೆಪ್ಪಗಳ ಮೇಲಿಂದ ಹೋಗಬಹುದಾದಷ್ಟು ಸೈನಿಕರು ಹೋಗಲಿ, ಉಳಿದವರು ಆನೆಯ ಮೇಲಿಂದ ಹೋಗಲಿ. ಇಂದು ಬೆಳಗಾಗುವದರೊಳಗಾಗಿ ಶತ್ರುಗಳ ಮೇಲೆ ಬೀಳಲಿಕ್ಕೇ ಬೇಕು,'' ಎಂದು ಆಜ್ಞಾಪಿಸಿದನು. ಹೀಗೆ ಮಾಡಿದರೆ ನಾಶವಾದೀತೆಂದು ಸರದಾರರು ಮತ್ತೆ ಹೇಳಿದರು; ಆದರೆ ಸಲ್ತಾನನು ಅದಕ್ಕೆ ಒಪ್ಪಲಿಲ್ಲ. ತಾನು ಮುಂದೆ ಹೋಗದಿದ್ದರೆ, ಸೈನಿಕರು ಹುರಿದುಂಬರೆಂದು ತಿಳಿದು, ಸುಲ್ತಾನನು ಇಬ್ಬರು ಸರದಾರರೊಡನೆ ಆನೆಯನ್ನು ಏರಿ ತಾನು ಸ್ವತಃ ಕೃಷ್ಣೆಯ ಪ್ರವಾಹವನ್ನು ಧುಮುಕಿದನು. ಅದನ್ನು ನೋಡಿ ಉಳಿದ ಸರದಾರನೂ ಸುಲ್ತಾನನ್ನು ಹಿಂಬಾಲಿಸಿದರು. ಎರಡು ಸಾರೆ ತೆಪ್ಪಗಳ ಮೇಲಿಂದ ಸೈನಿಕರು ಈಚೆಯ ದಂಡೆಯನ್ನು ಕಂಡರು. ಇನ್ನೂರಾಐವತ್ತು ಆನೆಗಳೂ ಸುದೈದವರಿಂದ ಏನೂ ಅಪಾಯವನ್ನು ಹೊಂದದೆ ಸುರಕ್ಷಿತವಾಗಿ ಕೃಷ್ಣೆಯನ್ನು ದಾಟಿ ಆಚೆಯ ದಂಡೆಗೆ ಬಂದವು. ಅಷ್ಟರಲ್ಲಿ ಈ ಸುದ್ದಿಯು ಕೃಷ್ಣದೇವರಾಯನಿಗೆ ಹತ್ತಲು, ಆತನ ಅಜ್ಞೆಯಿಂದ ಹಿಂದೂ ಸೈನಿಕರು ಮುಸಲ್ಮಾನರ ಮೇಲೆ ಒಳ್ಳೇ ಕಸುವಿನಿಂದ ಬಿದ್ದರು. ಹಿಂದುಗಳ ಹೊಡೆತದಿಂದ ಮುಸಲ್ಮಾನರಿಗೆ ತಿರುಗಿ ಹೋಗಲಿಕ್ಕೂ ಆಸ್ಪದ ದೊರೆಯದಾಯಿತು. ಆಗ ಅವರು ಹಂಗುದೊರೆದು ಒಳ್ಳೇ ಶೌರ್ಯದಿಂದ ಕಾದಿದರು; ಆದರೂ ಹಿಂದೂ ಜನರ ಪ್ರಚಂಡ ಸೈನ್ಯದ ಮುಂದೆ ಅವರ ಆಟ ನಡಯಲಿಲ್ಲ. ಸುಲ್ತಾನ ನಾದರೂ ಜೀವದಿಂದ ಪಾರಾಗುವನೋ ಇಲ್ಲವೋ, ಎಂಬ ಭಯವು ಮುಸಲ್ಮಾನರ ಸೈನಿಕರಲ್ಲಿ ಉತ್ಪನ್ನವಾಯಿತು. ಆಗ ಬಾದಶಹನ ಆನೆಯನ್ನು, ಅವನ ಸರದಾರರು ಹಿಂದಕ್ಕೆ ತಿರುಗಿಸಿ ಕೃಷ್ಣೆಯಲ್ಲಿ ನೂಕಿದರು. ಪ್ರವಾಹದ ಎದುರಿಗೆ ಹೋಗುವ ಪ್ರಸಂಗ ಬಂದದ್ದರಿಂದ ಸುಲ್ತಾನನ ಆನೆಯು ಬಹು ಕಷ್ಟದಿಂದ ಈಸಿ ಪಾರಾಗಿ, ಆಚೆಯ ದಂಡೆಗೆ ಹೋಯಿತು. ಮುಸಲ್ಮಾನರ ದಂಡಿನಲ್ಲಿ ಏಳು ಜನರು ಮಾತ್ರ ಪಾರಾದರು! ಉಳಿದವರೆಲ್ಲ ರಣಭೂಮಿಯಲ್ಲಿ ಬಿದ್ದರು.

ಹೀಗೆ ಬಡೆತವನ್ನು ತಿಂದು ಮಿತಿಯಿಲ್ಲದೆ ಸೈನ್ಯವನ್ನು ಹಾಳು ಮಾಡಿಕೊಂಡು ಓಡಿಹೋಗಬೇಕಾದದ್ದರಿಂದ, ಇಸ್ಮಾಯಿಲ್ ಆದಿಲಶಹನಿಗೆ ಬಹಳ ಪಶ್ಚಾತ್ತಾಪವಾಯಿತು. ಯೋಗ್ಯ ಜನರ ಹಿತದ ಮಾತನ್ನು ಮೀರಿ ಹೋದದ್ದರ ಪ್ರಾಯಶ್ಚಿತ್ತವು ಆತನಿಗೆ ಚೆನ್ನಾಗಿ ಆದಂತಾಯಿತು. ಈಗ ತನಗಾದ ಅಪಮಾನ ಸೇಡು ತೀರಿಸಿಕೊಳ್ಳುವವರೆಗೆ ಸಾರಾಯಿಯನ್ನು ಮುಟ್ಟಲಿಕ್ಕಿಲ್ಲೆಂದು ಆತನು ಪ್ರತಿಜ್ಞೆ ಮಾಡಿದನು; ಆದರೆ ಆಗ ಆತನ ಆಟವು ಏನೂ ನಡೆಯುವ ಹಾಗಿದ್ದಿಲ್ಲ. ಆತನು ಅಸದಖಾನನೆಂಬ ಹೆಸರಿನ ಸರದಾರನ ಯೋಗ್ಯವಾದ ಸೂಚನೆಯಂತೆ ವಿಜಾಪುರದ ಹಾದಿಯನ್ನು ಹಿಡಿದನು. ಈ ಜಯದಿಂದ ವಿಜಾಪುರದ

ಇಸ್ಮಾಯಿಲ್ ಆದಿಲಶಹನಿಗಷ್ಟೇ ಅಲ್ಲ, ಯಾವತ್ತು ಬಾಮನಿಯ ಬಾದಶಹರಿಗೆ ವಿಜಯನಗರದ ರಾಯರ ಭಯವು ಚೆನ್ನಾಗಿ ಕುಳಿತಿತ್ತು. ಇನ್ನು ಕೆಲವು ವರ್ಷಗಳವರೆಗಾದರೂ ಹಿಂದೂ ಜನರ ಸಂಗಡ ಯುದ್ಧಮಾಡುವದು ಅಶಕ್ಯವೆಂದು ಅವರು ತಿಳಕೊಂಡರು. ಈ ಭಯದ ಸಂಗಡ ಆ ಬಾಮನಿ ಬಾದಶಹರಲ್ಲಿ ಒಂದು ಪ್ರಕಾರದ ಜಾಗೃತಿಯೂ ಉತ್ಪನ್ನವಾಯಿತೆಂದು ಹೇಳಬಹುದು. ಕೃಷ್ಣರಾಜನು, ಅಥವಾ ವಿಜಯನಗರದ ಬೇರೊಬ್ಬ ರಾಯನು ಪ್ರಬಲನಾಗಿ ಮಹಾ ಸಾಹಸದಿಂದ ಮುಸಲ್ಮಾನರ ನಾಶವನ್ನು ಮಾಡಬಹುದಾದ್ದರಿಂದ ವಿಜಯನಗರದ ರಾಯರ ಸಮಾಚಾರ ತೆಗೆದುಕೊಳ್ಳುವ ಬಾಬಿನಲ್ಲಿಯಾದರೂ ತಾವೆಲ್ಲರೂ ಒಕ್ಕಟ್ಟಿನಿಂದ ನಡೆಯಬೇಕೆಂದು ಅವರು ತಮ್ಮೊಳಗೆ ಗೊತ್ತುಮಾಡಿಕೊಂಡರು. ಹೀಗೆ ಅವರು ಒಂದಾದದ್ದು ವಿಜಯನಗರದ ರಾಜ್ಯಕ್ಕೆ ಘಾತಕವಾದದ್ದಲ್ಲದೆ, ವಿಜಯನಗರದ ರಾಯರ ಮಿತಿಮೀರಿದ ಸೊಕ್ಕೂ ವಿಜಯನಗರದ ರಾಜ್ಯದ ನಾಶಕ್ಕೆ ಕಾರಣವಾಯಿತು. ಇರಲಿ, ಇತ್ತ ಜಯಶಾಲಿಯಾದ ಕೃಷ್ಣದೇವರಾಯನು, ಬಹು ಸಂತೋಷದಿಂದ ರಾಯಚೂರನ್ನು ಪ್ರವೇಶಿಸಿದನು. ಆತನು ಪಟ್ಟಣದೊಳಗಿನ ಜನರಿಗೆ ಬಹು ಪ್ರೇಮದಿಂದ ಅಭಯವನ್ನು ಕೊಟ್ಟು, ಜನರ ಮನಸ್ಸಿನಲ್ಲಿ ತನ್ನ ವಿಷಯವಾಗಿ ವಿಶ್ವಾಸವನ್ನುಂಟು ಮಾಡಿಕೊಂಡನು; ಆದರೆ ಆದಿಲಶಹನು ಕಳಿಸಿದ ವಕೀಲನ ಸಂಗಡ ಮಾತ್ರ ಆತನು ಬಹಳ ಸೊಕ್ಕಿನಿಂದ ನಡೆದುಕೊಂಡನು. ಒಂದು ತಿಂಗಳವರೆಗೆ ಆ ವಕೀಲನಿಗೆ ರಾಯನು ದರ್ಶನವನ್ನೇ ಕೊಡಲಿಲ್ಲ. ಆಮೇಲೆ ದರ್ಶನ ಕೊಟ್ಟರೂ, ಆ ವಕೀಲನನ್ನು ಬಹಳವಾಗಿ ಅವಮಾನಗೊಳಿಸಿದನು. ಇದರಿಂದ ಉರಿಯಲ್ಲಿ ಎಣ್ಣೆಸುರುವಿದ ಹಾಗಾಯಿತು. ಆದಿಲಶಹನಂತೆ ಬೇರೆ ಮುಸಲ್ಮಾನ ಬಾದಶಹರೂ ಕೃಷ್ಣದೇವರಾಯನ ಕಡೆಗೆ ತಮ್ಮ ವಕೀಲರನ್ನು ಕಳಿಸಿದರು; ಆದರೆ ಅರಸನಾಗಲಿ, ಆತನ ಕೈಕೆಳಗಿನ ಜನರಾಗಲಿ ಆ ವಕೀಲರ ಹಾಡನ್ನಾದರೂ ಹಾಗೆಯೇ ಮಾಡಿದರು. ಇದರ ಹೊರತು ಎಲ್ಲ ಮುಸಲ್ಮಾನ ಬಾದಶಹರ ಮನಸ್ಸು ನೋಯಲಿಕ್ಕೆ ಇನ್ನೊಂದು ಕಾರಣವಾಯಿತು; ಕೃಷ್ಣದೇವರಾಯನು ಇಸ್ಮಾಯಿಲ್ ಆದಿಲ್‌ಶಹನ ವಕೀಲನ ಸಂಗಡ ಆತನ ಒಡೆಯನಿಗೆ, ''ನೀನು ನನ್ನ ದರ್ಶನಕ್ಕೆ ಬಂದು ಮುಜುರೆ ಮಾಡಿ ನನ್ನ ಚರಣವನ್ನು ಚುಂಬಿಸಿದರೆ ನಾನು ಗೆದ್ದುಕೊಂಡಿದ್ದ ನಿನ್ನ ರಾಜ್ಯವನ್ನೆಲ್ಲ ನಿನಗೆ ತಿರುಗಿ ಕೊಡುವೆನು'' ಎಂದು ಹೇಳಿಕಳಿಸಿದ್ದನು. ಇದಕ್ಕೆ ಆದಿಲಶಹನು ಒಪ್ಪಿಕೊಳ್ಳಲಿಲ್ಲೆಂಬದಂತು ಸರಿಯೆ; ಇದರಿಂದ ಯಾವತ್ತು ಮುಸಲ್ಮಾನ ಬಾದಶಹರು ಅವಮಾನಿತರಾಗಿ ವಿಜಯನಗರದ ರಾಜ್ಯದ ಮೇಲೆ ಬೆಂಕಿಯನ್ನು ಮಾತ್ರ ಕಾರಹತ್ತಿದರು. ಆದಿಲಶಹನು ತನ್ನ ಮಾತು ನಡೆಸಲಿಲ್ಲೆಂದು ಕೃಷ್ಣದೇವರಾಜನು ಆತನ ರಾಜ್ಯದ ಮೇಲೆ ದಂಡೆತ್ತಿಹೋಗಿ, ಆತನನ್ನು ಓಂದಕ್ಕೆ ಸರಿಸುತ್ತ ಸರಿಸುತ್ತ ವಿಜಾಪುರವನ್ನು ಮುತ್ತಿ ಅದನ್ನು ಕೈವಶ ಮಾಡಿಕೊಂಡನು. ಕೆಲವು ದಿನಗಳವರೆಗೆ ರಾಯನು ವಿಜಾಪುರದಲ್ಲಿ ಇದ್ದು, ಆದಿಲಶಹನ ಸೆರೆಯಲ್ಲಿದ್ದ ಮೊದಲಿನ ದಕ್ಷಿಣದ ಸುಬೇದಾರರ ಮೂವರು ಮಕ್ಕಳ ಬಂಧ ವಿಮೋಚನೆ ಮಾಡಿದನು. ಅವರಲ್ಲಿ ಹಿರಿಯಮಗನನ್ನು ವಿಜಾಪುರದ ಪಟ್ಟದಮೇಲೆ ಕುಳ್ಳಿರಿಸಿ, ಆತನನ್ನೆ ದಕ್ಷಿಣದ ಶಹನನ್ನಾಗಿ ಮಾಡಬೇಕೆಂತಲೂ ರಾಯನು ಯೋಚಿಸಿದನು; ಆದರೆ ಅದು ಸಾಧಿಸಲಿಲ್ಲ. ಇದರಿಂದ ಬಾಮನಿ ಬಾದಶಹರ

ಮನಸ್ಸಿನೊಳಗಿದ್ದ ವಿಜಯನಗರದ ರಾಜ್ಯದ ಮೇಲಿನ ದ್ವೇಷವು ಮಾತ್ರ ಮತ್ತಿಷ್ಟು ಹೆಚ್ಚಾಯಿತು. ಹೀಗಿರುವಾಗ ಕೃಷ್ಣದೇವರಾಯನ ಮರಣವಾರ್ತೆಯು ಕಿವಿಗೆ ಬೀಳಲು ಯಾವತ್ತು ಮುಸಲ್ಮಾನ ಬಾದಶಹರಿಗೆ ಬಹಳ ಸಂತೋಷವಾದದ್ದರಲ್ಲಿ ಆಶ್ಚರ್ಯವಲ್ಲ. ಅದರಲ್ಲಿ ಅಚ್ಯುತರಾಯನಂಥ ಪುಕ್ಕರು ವಿಜಯನಗರದ ಸಿಂಹಾಸನವೇರಿದ್ದಂತು ಮುಸಲ್ಮಾನರ ಹಿತಸಾಧನಕ್ಕೆ ಮತ್ತಷ್ಟು ಅನುಕೂಲವಾದಂತಾಗಿ, ವಿಜಯನಗರದ ರಾಜ್ಯದ ವಿನಾಶಾಂಕುರವು ಬೆಳೆದು, ಅದು ವೃಕ್ಷದ ಸ್ವರೂಪವನ್ನು ಹೊಂದಿತು.

## ಒಳಸಂಚುಗಳು

ತನ್ನನ್ನು ಸೆರೆಮನೆಯಲ್ಲಿಟ್ಟಿದ್ದಕ್ಕಾಗಿ ಕೃಷ್ಣದೇವರಾಯನ ಮೇಲೆ ಅಚ್ಯುತರಾಯನ ಸಿಟ್ಟು ವಿಶೇಷವಾಗಿದ್ದದ್ದರಿಂದ, ಅಚ್ಯುತರಾಯನು ತಾನು ಸಿಂಹಾಸನವೇರಿದ ಕೂಡಲೆ ಕೃಷ್ಣದೇವರಾಯನ ಪಕ್ಷದ ರಾಮರಾಜನೇ ಮೊದಲಾದವರನ್ನು ಅಧಿಕಾರದ ದೂರಮಾಡಿದನು. ಅಚ್ಯುತರಾಯನು ಪುಕ್ಕ ಸ್ವಭಾವದವನು, ರಾಜ್ಯಕಾರಭಾರಕ್ಕೆ ಎಷ್ಟು ಮಾತ್ರವೂ ಯೋಗ್ಯನಾದವನಲ್ಲ. ಆತನು ಎರಡನೆಯವರ ಬೊಗಸೆಯಿಂದ ನೀರು ಕುಡಿಯುವ ಯೋಗ್ಯತೆಯ ಮನುಷ್ಯನಾದದ್ದರಿಂದ, ಯಾವತ್ತು ರಾಜ್ಯಕಾರಭಾರವು ಆತನ ಹೊಸಮಂತ್ರಿ ಯಾದ ಹೋಜೆ ತಿರುಮಲರಾಯನ ಕೈಸೇರಲು, ಅವನೇ ನಿಜವಾದ ರಾಜನಾದನು. ತಿರುಮಲನಲ್ಲಿ ಕರ್ತೃತ್ವಶಕ್ತಿಯು ಲೇಶವಾದರೂ ಇದ್ದಿಲ್ಲ; ಆದರೆ ಡೌಲು ಬಹಳ. ಬಾಯಿಂದ ದೊಡ್ಡ ದೊಡ್ಡ ಮಾತುಗಳಾಡುವುದು ಹೆಚ್ಚು. ಬರಬರುತ್ತ ಆತನ ಸೊಕ್ಕಿನ ನಡತೆಗೆ ಅವನ ಪಕ್ಷದ ಜನರು ಸಹ ಬೇಸತ್ತರು. ಯಾವಾಗ ಯಾರ ಅಪಮಾನವಾದೀತೆಂಬುದರ ನಿಯಮ ಉಳಿಯಲಿಲ್ಲ. ತಿರುಮಲನ ಪ್ರೀತಿಯ ಸೇವಕನಾದ ಮಣಿಮಲ್ಲನೆಂಬವನ ಪ್ರಸ್ಥವು ಹೆಚ್ಚಾಯಿತು. ಮಣಿಮಲ್ಲನ ಒಪ್ಪಿಗೆಯ ಹೊರತು ರಾಜ್ಯ ಕಾರಭಾರದ ಒಂದು ಕಡ್ಡಿ ಕೂಡ ಕದಲದಾಯಿತು. ರಾಜದರ್ಬಾರ ದೊಳಗಿನ ದೊಡ್ಡ ದೊಡ್ಡ ಜನರು ಕೂಡ ಮಣಿಮಲ್ಲನ ಮರ್ಜಿಯನ್ನು ಹಿಡಿಯಬೇಕಾಯಿತು. ಇದು ಬಹು ಜನರಿಗೆ ಸಹನವಾಗಲಿಲ್ಲ, ಕೆಲವರು ಈ ಸ್ಥಿತಿಯು ಹಿತಕರವಾದದ್ದಲ್ಲವೆಂದು ತಿರುಮಲನಿಗೆ ಹೇಳಲು, ಆದರಿಂದ ಪ್ರಯೋಜನವಾಗುವದೊತ್ತಟ್ಟಿಗೆ ಉಳಿದು, ತಿರುಮಲನು ಆ ಎಲ್ಲ ಸಂಗತಿಯನ್ನು ಮಣಿಮಲ್ಲನಿಗೆ ತಿಳಿಸಿದ್ದರಿಂದ, ಆ ಜನರ ಮೇಲೆ ಮಣಿಮಲ್ಲನ ಡಂಕು ಮಾತ್ರ ಕುಳಿತಿತು! ದರ್ಬಾರದ ಈ ಸ್ಥಿತಿಯು, ಹೊಂಚುಹಾಕಿಕೊಂಡು ಕುಳಿತಿದ್ದ ರಾಮರಾಜನ ಕಾರ್ಯಸಾಧನಕ್ಕೆ ಬಹಳ ಅನುಕೂಲವಾಯಿತು. ಆತನು ಮೊದಲು ಅಚ್ಯುತರಾಯನ ಪಕ್ಷಕಟ್ಟಿದ ಹಾಗೆ ತೋರಿಸಿ, ತಿರುಮಲನ ನಿಂದೆಯನ್ನು ಜನರ ಮುಂದೆ ಮಾಡಹತ್ತಿದನು. ಮುಂದೆ ಬರಬರುತ್ತ ತಿರುಮಲ ನನ್ನು ಶ್ಲಾಘಿಸ ಹತ್ತಿ, ಮಣಿಮಲ್ಲನನ್ನು ನಿರಾಕರಿಸಹತ್ತಿದನು. ಮೊದಮೊದಲಿಗೆ ಇದರಿಂದ ಏನೂ ಪ್ರಯೋಜನವಾಗದಿದ್ದರೂ ಬರಬರುತ್ತ ಜನರು

ರಾಮರಾಜನ ಮಾತಿಗೆ ಒಪ್ಪಿಕೊಳ್ಳಹತ್ತಿದರು. "ಅಚ್ಯುತರಾಯನೂ ಅಲ್ಲ, ತಿರುಮಲನೂ ಅಲ್ಲ, ಮಣಿಮಲ್ಲನಂಥ ಕ್ಷುದ್ರಮನುಷ್ಯನು ರಾಜ್ಯದ ಸೂತ್ರಗಳನ್ನಲ್ಲಾಡಿಸಿ ದೊಡ್ಡ ದೊಡ್ಡ ಮರ್ಯಾದಸ್ಥರ, ಹಾಗೂ ಶೂರರ ಅಪಮಾನ ಮಾಡುವದು ಯೋಗ್ಯವಾಗಬಹುದೋ," ಎಂದು ರಾಮರಾಜನು ಜನರನ್ನು ಕೇಳಹತ್ತಿದನು. ರಾಮರಾಜನ ಮಾತು ಬಹುಜನರಿಗೆ ಒಪ್ಪಿಗೆಯಾಗಿ, ಬರುಬರುತ್ತ ರಾಮರಾಜನ ಪಕ್ಷವು ಸಮರ್ಥವಾಗ ಹತ್ತಿತು. ಹೀಗೆ ತನ್ನ ಮನಸ್ಸಿನಂತೆ ಎಲ್ಲ ಅನುಕೂಲತೆಯಾದದ್ದನ್ನು ನೋಡಿ, ರಾಮರಾಜನು ಒಂದು ದಿನ ಬಂಡಾಯವನ್ನು ಹೂಡಿ ತಿರುಮಲರಾಯನನ್ನು ಸೆರೆಹಿಡಿದು, ಆತನನ್ನು ಕಾರಾಗೃಹದಲ್ಲಿಡ ಬೇಕೆಂದು ಮಾಡಿದನು; ಆದರೆ ಈ ಸಂಗತಿಯು ಗುಪ್ತವಾಗಿ ಉಳಿಯಲಿಲ್ಲ, ತಿರುಮಲನ ಕಿವಿಗೆ ಮುಟ್ಟಿತು. ಆಗ ಆತನು ಗಾಬರಿಯಾಗಿ ಮುಂದುಗಾಣದೆ ಆಲೋಚಿಸಹತ್ತಿದನು.

ಹಿಂದಿನ ಪ್ರಕರಣದಲ್ಲಿ ಹೇಳಿದಂತೆ, ವಿಜಯನಗರದ ರಾಯರ ಸೇಡು ತೀರಿಸಿಕೊಳ್ಳಲಿಕ್ಕೆ ಹೊಂಚುಹಾಕಿದ್ದ ವಿಜಾಪುರದ ಇಬ್ರಾಹಿಮ ಆದಿಲಶಹನು, ಈಗ ತುಂಗಭದ್ರೆಯ ಆಚೆಯಲ್ಲಿದ್ದ ದರ್ಗೆಯಲ್ಲಿ ತನ್ನ ಸೈನ್ಯದ ತಳಊರಿದ್ದನು. ಆತನು ಹೊತ್ತು ನೋಡಿ ವಿಜಯನಗರವನ್ನು ಕೈವಶ ಮಾಡಿಕೊಳ್ಳತಕ್ಕವನಿದ್ದನು. ವಿಜಯನಗರದೊಳಗಿನ ಈ ಅಂತಃಕಲಹದ ಸುದ್ದಿಗಳು ಕ್ಷಣಶಃ ಮುಟ್ಟುವಂತೆ ಆತನು ಗುಪ್ತಚಾರರನ್ನಿಟ್ಟಿದ್ದನು. ಇತ್ತ ಮೊದಲೇ ಗಾಬರಿಯಾಗಿದ್ದ ತಿರುಮಲನಿಗೆ ಹೆಚ್ಚು ಹೆಚ್ಚು ಭಯಂಕರವಾದ ಒಳಸಂಚಿನ ಸುದ್ದಿಗಳು ಮುಟ್ಟಹತ್ತಿದವು. ತನ್ನ ಮೇಲೆ ಎಲ್ಲರೂ ತಿರುಗಿಬಿದ್ದು ತನ್ನನ್ನೂ, ಅಚ್ಯುತರಾಯನನ್ನೂ ಇನ್ನೂ ನಾಲ್ಕೆಂಟು ದಿನಗಳಲ್ಲಿ ಹಿಡಿದು ಕೊಲ್ಲುವರೆಂಬ ವರ್ತಮಾನವನ್ನು ಸಹ ಆತನು ಕೇಳಿದನು. ತನ್ನ ಪ್ರಾಣರಕ್ಷಣ ಮಾಡಿಕೊಳ್ಳುವದಕ್ಕಾಗಿ ಬೇಕಾದದ್ದನ್ನು ಮಾಡಿಕೊಳ್ಳಲಿಕ್ಕೆ ಆತನು ಸಿದ್ಧನಾದನು. ಆಗ ಮಣಿಮಲ್ಲನು ತಿರುಮಲನಿಗೆ ನೀವು ಆದಿಲಶಹನನ್ನು ವಿಜಯನಗರಕ್ಕೆ ಕರೆಸಿಕೊಂಡು, ಆತನ ಸ್ನೇಹವನ್ನು ಸಂಪಾದಿಸಿರಿ; ಅಂದರೆ ಎಲ್ಲ ಅರಿಷ್ಟವು ಹಿಂಗುವದು, ಎಂದು ಹೇಳಿದನು. ವಿವೇಕಭ್ರಷ್ಟನಾದ ತಿರುಮಲನಿಗೆ ಕ್ಷುದ್ರ ಮಣಿಮಲ್ಲನ ಈ ಅದೂರದರ್ಶಿತನದಲ್ಲಿ ದೋಷಗಳು ತೋರಲಿಲ್ಲ. ಹೀಗೆ ಮಾಡಿದರೆ, ಮುಂದೆ ಸುಲ್ತಾನನನ್ನು ತಿರುಗಿ ಕಳಿಸಲಿಕ್ಕೆ ಎಷ್ಟು ಕಠಿಣವಾದೀತೆಂಬುದರ ಎಚ್ಚರವು ಆ ತಿಳಿಗೇಡಿ ಮಂತ್ರಿಗೆ ಹುಟ್ಟಲಿಲ್ಲ. ಕೂಡಲೆ ಆತನು ಸುಲ್ತಾನನ ಕಡೆಗೆ ವಕೀಲನನ್ನು ಕಳಿಸಿದನು. ಆದಿಲಶಹನು ವಕೀಲನ ಮಾತುಗಳನ್ನು ಕೇಳಿ ಪರಮಾನಂದಪಟ್ಟನು. "ರೋಗಿ ಬಯಸಿದ್ದೂ ಹಾಲೂ ಅನ್ನ, ವೈದ್ಯ ಹೇಳಿದ್ದೂ ಹಾಲೂ ಅನ್ನ" ಎಂಬಂತೆ ಆತನಿಗೆ ಬಹಳ ಸಂತೋಷ ವಾಯಿತು. ಸುಲ್ತಾನನು ತಿರುಮಲನ ಮಾತಿಗೆ ಸಂತೋಷದಿಂದ ಒಪ್ಪಿಕೊಂಡ ಬಳಿಕ, ವಿಜಯನಗರವನ್ನು ಪ್ರವೇಶಿಸುವ ದಿನವನ್ನು ಅವರಿಬ್ಬರೂ ಗುಪ್ತರೀತಿಯಿಂದ ಗೊತ್ತುಮಾಡಿಕೊಂಡರು. ಇತ್ತ ರಾಮರಾಜನೂ ತಿರುಮಲನನ್ನು ಸೆರೆಹಿಡಿಯುವ ದಿನವನ್ನು ಗುಪ್ತರೀತಿಯಿಂದ ಗೊತ್ತುಮಾಡಿದ್ದನು. ತಿರುಮಲನು ಬಾದಶಹನೊಡನೆ ನಡೆಸಿದ ಕಾರಸ್ಥಾನದ ಗಂಧವು ಸಹ ರಾಮರಾಜನಿಗೆ ಬಡಿದಿದ್ದಿಲ್ಲ, ರಾಮರಾಜನು ತಿರುಮಲನನ್ನು, ಗೊತ್ತುಮಾಡಿದ ದಿವಸ ಸೆರೆಹಿಡಿಯಬೇಕೆಂದು

ಸಂಚುಗಾರರೊಡನೆ ಯೋಚಿಸುತ್ತಿರುವದರೊಳಗೆ, ರಾಮರಾಜನ ಪಕ್ಷದವನೊಬ್ಬನು ತಿರುಮಲನ ಕಡೆಗೆ ಒಡೆದು. ರಾಮರಾಜನ ಒಳಸಂಚಿನ ದಿವಸವನ್ನು ತಿರುಮಲನಿಗೆ ತಿಳಿಸಿದನು. ಕೂಡಲೆ ತಿರುಮಲನು ಬಾದಶಹನನ್ನು ವಿಜಯನಗರಕ್ಕೆ ಕರೆಯಕಳುಹಿದನು. ಅತ್ತ ಹಾದಿಯನ್ನೇ ನೋಡುತ್ತ ಕುಳಿತಿದ್ದ ಬಾದಶಹನು ತಡಮಾಡದೆ ಸೈನ್ಯದೊಡನೆ ಹೊರಟು ತುಂಗಭದ್ರೆಯನ್ನು ದಾಟಿ ವಿಜಯನಗರವನ್ನು ಪ್ರವೇಶಿಸಿದನು. ತಿರುಮಲನೂ, ಅಚ್ಯುತರಾಯನೂ ಆತನನ್ನು ಎದುರುಗೊಂಡು ಕರೆತಂದು ವಿಜಯನಗರದ ಸಿಂಹಾಸನದ ಮೇಲೆ ಕೂಡ್ರಿಸಿ, ವಿಲಕ್ಷಣ ರೀತಿಯಿಂದ ಆತನ ಆದರ ಸತ್ಕಾರವನ್ನು ಮಾಡಿದರು. ಈವರೆಗೆ ಬಾದಶಹನು ವಿಜಯನಗರದ ಅರಸರ ಘನವಾದ ಐಶ್ವರ್ಯವನ್ನು ಜನರ ಮುಖದಿಂದ ಕೇಳುತ್ತ ಬಂದಿದ್ದನು; ಆತನಿಗೆ ಅದರ ಅನುಭವವಾಗಿದ್ದಿಲ್ಲ. ಈಗ ಆತನು ರಾಯರ ಐಶ್ವರ್ಯವನ್ನು ಕಣ್ಣುಮುಟ್ಟಿ ನೋಡಿ ಬೆರಗಾದನು. ಈ ಪ್ರಸಂಗದಲ್ಲಿ ತಿರುಮಲನು ಒಳ್ಳೇ ಸಂಕಟದಲ್ಲಿ ಸಿಕ್ಕಿರುವದರಿಂದ ಆತನು ಹೇಳಿದ ಹಾಗೆ ಕೇಳುವನೆಂದು ತಿಳಿದು, ಸುಲ್ತಾನನು ತಿರುಮಲನಿಗೆ ಬಹು ದೊಡ್ಡ ರಕಮಿನ ಕಪ್ಪವನ್ನು ಕೇಳಿದನು; ಮತ್ತು ಇಂದಿನಿಂದ ವಿಜಯನಗರದ ಅರಸರು ವಿಜಾಪುರದ ಬಾದಶಹರ ಮಾಂಡಲೀಕತ್ವವನ್ನು ಒಪ್ಪಿಕೊಳ್ಳಬೇಕೆಂದು ಹೇಳಿದನು. ಅದಕ್ಕೆಲ್ಲ ತಿರುಮಲನು ಒಪ್ಪಿಕೊಂಡನು.

ವಿಜಾಪುರದ ಬಾದಶಹನು ಅಕಸ್ಮಾತ್ತಾಗಿ ರಾಜಧಾನಿಯನ್ನು ಪ್ರವೇಶಿಸಿದ್ದನ್ನೂ, ತಿರುಮಲನು ಬಾದಶಹನ ಬೇಡಿಕೆಗಳನ್ನೆಲ್ಲ ಪೂರ್ಣಮಾಡಿದ್ದನ್ನೂ ಕೇಳಿ ವಿಜಯನಗರದ ಜನರಿಗೆ ಬಹಳ ವ್ಯಸನವಾಯಿತು; ಆದರೆ ಅವರ ಸೈನ್ಯದ ಸಿದ್ಧತೆ ಇದ್ದಿಲ್ಲ. ಮೇಲೆ ಬಾದಶಹನು ತಮ್ಮ ಮನೆಯಲ್ಲಿ ಬಂದು ಕುಳಿತುಕೊಂಡಿದ್ದನು. ಆತನನ್ನು ಹೊರಗೆ ಹಾಕದ ಹೊರತು ಯಾವ ಕೆಲಸ ಮಾಡಲಿಕ್ಕೂ ಬರುವಹಾಗಿದ್ದಿಲ್ಲ. ವಿಜಯನಗರದ ಪವಿತ್ರ ಸಿಂಹಾಸನದ ಮೇಲೆ ಕೇವಲ ಸ್ವಾರ್ಥಾಭಿಲಾಷೆಯಿಂದ ತಿರುಮಲನು ಸುಲ್ತಾನನನ್ನು ಕೂಡ್ರಿಸಿದ್ದಕ್ಕಾಗಿ ಜನರು ಸಂತಾಪ ಗೊಂಡರು. ಘನವಾದ ಯೋಗ್ಯತೆಯ ರಾಯರ ಚರಣಗಳ ಮೇಲೆ ಬಹುಜನ ಮಾಂಡಲಿಕ ರಾಜರು ಶಿರಸ್ಸುಗಳನ್ನಿಡುತ್ತಿರಲು, ಅಂಥರಾಯನು ಈಗ ಮುಸಲ್ಮಾನ ಬಾದಶಹನ ಮುಂದೆ ತಲೆಬಾಗಿಸುವ ಪ್ರಸಂಗ ತಂದದ್ದಕ್ಕಾಗಿ ಪ್ರತಿ ಒಬ್ಬರು ತಿರುಮಲನ ಮೇಲೆ ಹಲ್ಲು ಕಡಿಯ ಹತ್ತಿದರು; ಆದರೆ ಮಾಡುತ್ತಾರೇನು? ಬಾದಶಹನನ್ನು ವಿಜಯನಗರದಿಂದ ಹೊರಗೆ ಹಾಕದ ಹೊರತು ಏನು ಮಾಡಲಿಕ್ಕೂ ಬರುವಹಾಗಿದ್ದಿಲ್ಲ. ತನ್ನ ಒಳಸಂಚು ಸಫಲವಾಗುವದೊತ್ತಟ್ಟಿಗೆ ಉಳಿದು, ಮುಸಲ್ಮಾನ ಬಾದಶಹನು ರಾಜಧಾನಿಯಲ್ಲಿ ಬಂದು ಕುಳಿತದ್ದಕ್ಕಾಗಿ ರಾಮರಾಜನಿಗೆ ಬಹಳ ಸಂತಾಪವಾಯಿತು. ಆದರೆ ಆತನು ಅದನ್ನೆಲ್ಲ ನುಂಗಿಕೊಂಡನು. ತಿರುಮಲನನ್ನು ಮೋಸಗೊಳಿಸಿ, ಅವನ ಮುಖಾಂತರ ಬಾದಶಹನನ್ನು ರಾಜಧಾನಿಯ ಹೊರಗೆ ಕಳಿಸಬೇಕೆಂದು ಆತನು ಯೋಚಿಸಿದನು. ಆಗ ರಾಮರಾಜನು ಪ್ರಮುಖರೊಡನೆ ತಿರುಮಲನ ಬಳಿಗೆ ಹೋಗಿ ವಿನಯದಿಂದ ಆತನನ್ನು ಕುರಿತು—''ನೀವು ನಮಗೆ ಸರ್ವಥಾ ವಂದ್ಯರು. ನಿಮ್ಮ ವಿಷಯವಾಗಿ ನಮ್ಮ ಮನಸ್ಸಿನಲ್ಲಿ ಸ್ವಲ್ಪವಾದರೂ ಸಂಶಯವಿಲ್ಲ; ಆದರೆ ಈಗಿನ ಪ್ರಸಂಗದಲ್ಲಿ ನೀವು

ವಿಜಯನಗರದ ಮೇಲೆ ಬಹು ದೊಡ್ಡ ಸಂಕಟವನ್ನು ತಂದಿರುವಿರಿ. ಬಾದಶಹನನ್ನು ಕರೆತಂದು ಸತ್ಕರಿಸಿದ್ದೆಲ್ಲ ಸರಿಯೆ; ಆದರೆ ಇದರ ಪರಿಣಾಮವು ನೆಟ್ಟಗಾದೀತೆಂದು ತೋರುವದಿಲ್ಲ. ವೈರಿಯನ್ನು ಮನೆಯೊಳಗೆ ಕರಕೊಳ್ಳುವದು ಸುಲಭವು; ಆದರೆ ಆತನನ್ನು ಹೊರಗೆ ಹಾಕುವದು ಕಠಿಣವಷ್ಟೇ ಅಲ್ಲ, ಅಶಕ್ಯವೆಂತಲೂ ಹೇಳಬಹುದು. ನಮ್ಮ ಹಿಂದುಗಳ ರಾಜ್ಯವನ್ನು ನುಂಗಬೇಕೆಂದು ಜಪ್ಪು ಹಾಕಿಕೊಂಡು ಮುಸಲ್ಮಾನರ ಬಾದಶಹರು ಬಹು ದಿವಸದಿಂದ ಕುಳಿತಿರುವರೆಂಬುದು ನಿಮಗೆ ಗೊತ್ತಿಲ್ಲವೆ? ಹೀಗಿದ್ದು ನೀವು ಈಗ ಅನಾಯಾಸವಾಗಿ ಅವರ ಕಾರ್ಯಕ್ಕೆ ಅನುಕೂಲ ಮಾಡಿಕೊಟ್ಟಿರುವಿರಲ್ಲ? ಇದಕ್ಕೆ ಏನನ್ನಬೇಕು? ನೀವು ಸ್ವಾಭಾವಿಕವಾಗಿ ಈ ಕಾರ್ಯ ಮಾಡಿದಿರಿ; ಆದರೆ ಪರಿಣಾಮವು ಬಹು ಭಯಂಕರವಾಗುವ ಹಾಗೆ ತೋರುತ್ತದೆ. ನೀವು ಬಾ, ಅಂದಕೂಡಲೆ ಬಾದಶಹನು ಬಂದಂತೆ, ನೀವು ಹೋಗೆಂದಕೂಡಲೆ ಆತನು ಈಗ ಹೋಗಲಾರನು. ನೀವು ಹ್ಯಾಗಾದರೂ ಮಾಡಿ ಆತನನ್ನು ತಿರುಗಿ ಕಳಿಸಿಕೊಡಿರಿ, ನಾವೆಲ್ಲರು ಬೇಕಾದ ಆಣೆ ಮಾಡಿ ಹೇಳೆಂದರೂ ಹೇಳುತ್ತೇವೆ, ನಿಮ್ಮ ಮಾತನ್ನು ನಾವು ಸರ್ವಥಾ ಮೀರುವದಿಲ್ಲ, ನೀವು ಹೇಳಿದ ಹಾಗೆ ಕೇಳುತ್ತೇವೆ. ಆದರೆ ವಿಜಯನಗರದ ಮೇಲೆ ಬಂದಿರುವ ಈ ಕಠಿಣ ಪ್ರಸಂಗವನ್ನು ದೂರಮಾಡಿರಿ'' ಎಂದು ಹೇಳಿಕೊಂಡು ತಿರುಮಲನಿಗೆ ಮಿತಿಮೀರಿ ದೊಡ್ಡಿಸ್ತನವನ್ನು ಕೊಟ್ಟನು. ಮೂರ್ಖನಾದ, ತಿರುಮಲನು ಜನರ ಈ ದೊಡ್ಡಿಸ್ತನಕ್ಕೆ ಮರುಳಾದನು. ತಾನು ಹೋಗೆಂದರೆ ಬಾದಶಹನು ಹೋಗುವದಿಲ್ಲೆಂದು ರಾಮರಾಜನು ಅಡಿದ್ದಕ್ಕಾಗಿ ತಿರುಮಲನಿಗೆ ಬಹಳ ಸಿಟ್ಟು ಬಂದಿತು. ಅಚ್ಯುತರಾಯನು ತನ್ನ ಕೈಯೊಳಗಿರುವಂತೆ, ಆದಿಲಶಹನೂ, ತನ್ನ ಕೈಯೊಳಗಿರುವನೆಂದು ಆ ತಿಳಗೇಡಿ ತಿರುಮಲನು ತಿಳಕೊಂಡಿದ್ದನು. ಜನರು ಸುಮ್ಮನಾದ ಮೇಲೆ ಆತನು ಅವರನ್ನು ಕುರಿತು–ಅಧ್ಯತೆಯಿಂದ—''ನಿಮಗೆ ರಾಜಕಾರಣದ ಸಂಗತಿಗಳೂ ಏನೂ ತಿಳಿಯುವದಿಲ್ಲ, ನೀವು ನನ್ನ ವಿರುದ್ಧವಾಗಿ ಒಳಸಂಚು ನಡಿಸಿದ್ದಕ್ಕಾಗಿ ಈಗ ನಾನು ಬಾದಶಹನನ್ನು ಕರೆಸಿರುವದಿಲ್ಲ. ನಾಲ್ಕೈದು ಜನ ಮುಸಲ್ಮಾನ ಬಾದಶಹರು ನಮ್ಮ ರಾಜ್ಯವನ್ನು ನುಂಗಲಿಕ್ಕೆ ಹೊಂಚುಹಾಕಿ ಕುಳಿತುಕೊಂಡಿರುವದರಿಂದ ಅದರೊಳಗಿನ ಒಬ್ಬ ದೊಡ್ಡ ಬಾದಶಹನನ್ನು ನಮ್ಮ ಕಡೆಗೆ ಮಾಡಿ ಇಟ್ಟುಕೊಂಡಿರುವದು ನೆಟ್ಟಗೆಂದು ತಿಳಿದು, ಬಾದಶಹನನ್ನು ಕರೆಸಿದ್ದೇನೆ. ನಿಮ್ಮ ಒಳಸಂಚನ್ನು ಮುರಿಯುವ ಸಾಮರ್ಥ್ಯವು ನನ್ನಲ್ಲಿಲ್ಲೆಂದು ತಿಳಿಯಬೇಡಿರಿ. ನಿಮ್ಮನ್ನು ಸಾಲಗಿಡಕ್ಕೆ ತೂಗಹಾಕಿ ಕೊಲ್ಲಿಸುತ್ತಿದ್ದೆನು. ಇಲ್ಲವೆ ನೆಲದಲ್ಲಿ ಹುಗಿಸುತ್ತಿದ್ದೆನು. ವಿಜಯನಗರದ ರಾಜ್ಯದ ಅಭಿಮಾನವು ನಿಮಗೇ ಇರುವದಿಲ್ಲ, ಆ ರಾಜ್ಯದ ವಿಷಯವಾಗಿ ನಿಮಗಿಂತ ಹೆಚ್ಚು ಅಭಿಮಾನವು ನನಗಿರುತ್ತದೆ. ನಿಮ್ಮ ಸಂಚಿನ ಸಂಗತಿಗಳೆಲ್ಲ ನಮಗೆ ಗೊತ್ತಾಗಿರುವವು; ಆದರೆ ಮನೆಹೊಲಸು ತೆಗೆಯಲಿಕ್ಕೆ ಇದು ಸಮಯವಲ್ಲ, ಮೊದಲು ಹೊರಗಿನ ವೈರಿಗಳ ಸಮಾಚಾರ ವನ್ನು ತಕ್ಕೊಳ್ಳಬೇಕಾಗಿದೆ. ಈ ಮಾತು ನಿಮಗೆ ಹ್ಯಾಗೆ ತಿಳಿಯಬೇಕು. ಹೋಗಿರಿ, ನಿಮ್ಮ ಮೇಲೆ ನನ್ನ ಸಿಟ್ಟೂ ಇಲ್ಲ, ಲೋಭವೂ ಇಲ್ಲ, ನೀವು ನನ್ನ ಕಾಲು ಬೀಳಲಿಕ್ಕೆ ಬಂದದ್ದೇ ಸಾಕಾಯಿತು. ಇನ್ನು ನಿಮ್ಮನ್ನು ಯಾತಕ್ಕೆ ಕೊಲ್ಲಬೇಕು? ನೀವು ಮೊದಲೇ ಸತ್ತಿರುತ್ತೀರಿ. ಇನ್ನು ನಾನು ನಿಮಗೆ ಹೆಚ್ಚಿಗೆ

ಹೇಳುವದಿಲ್ಲ. ಸುಮ್ಮನೆ ಇಲ್ಲದ ಚಿಂತೆಯಿಂದ ಕೊರಗಬೇಡಿರಿ. ನೋಡಿರಿ, ಇನ್ನು ಬಾದಶಹನನ್ನು ಹಾ ಹಾ ಅನ್ನುವದರೊಳಗೆ ಹ್ಯಾಗೆ ಹೊರಗೆ ಹಾಕುತ್ತೇನೆಂಬುದನ್ನು!''

ತಿರುಮಲನ ಈ ಮಾತುಗಳನ್ನು ಕೇಳಿ ಜನರು ಚಕಿತರಾದರು. ರಾಮರಾಜನಿಗೆ ಇನ್ನು ಏನು ಮಾತಾಡಬೇಕೆಂದು ತಿಳಿಯದೆ ಹೋಯಿತು. ಆತನು ತಿರುಗಿ ಬಹಳ ಮಾತಾಡಲಿಲ್ಲ. ಆದರೆ ಆತನಿಗೆ ತಿರುಮಲನ ಒಂದು ಮಾತೂ ನಿಜವೆಂದು ತೋರಲಿಲ್ಲ. ತನ್ನ ಸ್ನೇಹಿತರು ತಿರುಮಲನ ಮಾತಿನಿಂದ ಮೋಸ ಹೋಗಿದ್ದರೆ, ಅವರನ್ನು ಎಚ್ಚರಗೊಳಿಸಬೇಕೆಂದು ಆತನು ನಿಶ್ಚಯಿಸಿದನು. ಆತನು ತಿರುಮಲನ ಮಾತಿಗೆ ಹೆದರಿ, ಅಥವಾ ಮರುಳಾಗಿ ಸುಮ್ಮನೆ ಕುಳಿತುಕೊಳ್ಳಲಿಲ್ಲ. ತಿರುಮಲನ ಕಿವಿಗೆ, ಆತನ ಎದೆಯೊಡೆದು ನೀರಾಗುವಂಥ ಸುದ್ದಿಗಳು ಮುಟ್ಟುವಂತೆ ಏನು ವ್ಯವಸ್ಥೆ ಮಾಡಬೇಕೆಂದು ಆತನು ಯೋಚಿಸುತ್ತಲಿದ್ದನು. ಮುಂದೆ ಬಾದಶಹನ ಒಳಸಂಚಿನ ಭಯಂಕರವಾದ ಸುದ್ದಿಗಳು ತಿರುಮಲನ ಕಿವಿಗೆ ಮುಟ್ಟುವಂತೆ ರಾಮರಾಜನು ಮಾಡಿದನು. ಒಂದು ದಿನ, ಬಾದಶಹನು ವಿಜಯನಗರದಲ್ಲಿಯೇ ಕಾಲು ಊರಿ ನಿಲ್ಲುವ ಹವಣಿಕೆಯಲ್ಲಿರುತ್ತಾನೆಂಬ ಸುದ್ದಿಯು ತಿರುಮಲನಿಗೆ ಹತ್ತಿತು. ಅದನ್ನು ಕೇಳಿ ತಿರುಮಲನು—ಇನ್ನು ಮೇಲೆ ಬಾದಶಹನು ಪಟ್ಟಣ ಬಿಟ್ಟು ಹೋಗದಿದ್ದರೆ ಪರಿಣಾಮವಾಗಲಿಕ್ಕಿಲ್ಲ. ತಾನು ಒಪ್ಪಿಕೊಂಡಂತೆ ರಾಯರು ಬಾದಶಹನ ಮಾಂಡಲಿಕರಾಗುವದೊತ್ತಟ್ಟಿಗುಳಿದು, ನಮ್ಮ ಇಡಿಯ ರಾಜ್ಯವೇ ನಷ್ಟವಾದೀತೆಂಬ ಭಯವು ಆತನನ್ನು ಬಾಧಿಸಹತ್ತಿತು. ಅಷ್ಟರಲ್ಲಿ ಬಾದಶಹನು ತಿರುಮಲರಾಯನನ್ನು ಸೆರೆ ಹಿಡಿದು ತೋಫಿನಬಾಯಿಗೆ ಕೊಡಬೇಕೆಂದು ಮಾಡಿರುತ್ತಾನೆಂಬ ಸುದ್ದಿಯು ಹತ್ತಿತು. ಮತ್ತೊಂದು ದಿನ, ಬಾದಶಹನು ವಿಜಾಪುರದಿಂದ ಹೊಸ ದಂಡು ತರಿಸಿ ವಿಜಯನಗರವನ್ನು ಒಮ್ಮೆಲೆ ಸುಲಿದು ಸುಟ್ಟು ಸೂರೆ ಮಾಡಿ, ಹೆಂಗಸರನ್ನು ಸೆರೆಹಿಡಕೊಂಡು ಹೋಗಬೇಕೆಂತಲೂ, ದೇವಾಲಯಗಳನ್ನು ನಾಶಮಾಡಬೇಕೆಂತಲೂ, ಮಾಡಿರುತ್ತಾನೆಂಬ ಸುದ್ದಿಯನ್ನು ತಿರುಮಲನು ಕೇಳಿದನು. ಈ ಸುದ್ದಿಗಳೆಲ್ಲ ಹುಟ್ಟಲಿಕ್ಕೆ ರಾಮರಾಜನೇ ಕಾರಣನೆಂದು ವಾಚಕರು ಅರಿತಿರಬಹುದು. ಒಂದರ ಹಿಂದೊಂದರಂತೆ ಇಂಥ ಸುದ್ದಿಗಳನ್ನು ಕೇಳಿದ ತಿರುಮಲನ ಎದೆಯೊಡೆದು ನೀರಾಯಿತು. ಹಾ ಹಾ ಅನ್ನುವದರೊಳಗೆ ಬಾದಶಹನನ್ನು ಕಳಿಸುವೆನೆಂದು ಡೌಲು ಬಡೆದಿದ್ದ ಆತನಿಗೆ, ತಿರುಗಿ ಹೋಗೆಂದು ಬಾದಶಹನಿಗೆ ಹ್ಯಾಗೆ ಹೇಳಬೇಕೆಂಬುದೇ ಈಗ ತಿಳಿಯದಾಯಿತು.

ಇತ್ತ ಆದಿಲಶಹನು ವಿಜಯನಗರದ ಐಶ್ವರ್ಯವನ್ನೂ, ರಾಯರಿಂದ ತನಗಾದ ಸತ್ಕಾರವನ್ನೂ ನೋಡಿ, ಆಶೆಬುರುಕತನದಿಂದ ವಿಜಯನಗರವನ್ನು ಬಿಟ್ಟು ಹೋಗದಾದನು. ತಾನು ಹೇಳಿದಂತೆ ತಿರುಮಲರಾಯನು ಕೇಳಿದ್ದನ್ನು ನೋಡಿ, ಬಾದಶಹನ ಬಾಯಲ್ಲಿ ನಿಜವಾದ ನೀರು ಒಡೆದವು. ಕೆಲವು ದಿನಗಳವರೆಗಾದರೂ ವಿಜಯನಗರದಲ್ಲಿ ಇರಬೇಕೆಂದು ಆತನು ನಿಶ್ಚಯಿಸಿದನು; ಆದರೆ ಅತ್ತ ಧೂರ್ತನಾದ ರಾಮರಾಜನು ಬಾದಶಹನಿಗೂ ಉಚ್ಚಾಟನೆಯನ್ನು ಕೊಡದೆ ಇರಲಿಲ್ಲ. ತಿರುಮಲನು ತನ್ನನ್ನು ಕರೆತಂದು ಬಹುಮಾನ ಮಾಡಿದ್ದು ತನ್ನನ್ನು ನಾಶಗೊಳಿಸುವದಕ್ಕಾಗಿಯೇ ಎಂಬ ಸಂಶಯವು ಬಾದಶಹನಿಗೆ ಉತ್ಪನ್ನವಾಗುವಂತೆ

ರಾಮರಾಜನು ಯುಕ್ತಿಯನ್ನು ಮಾಡಿದನು. ತಿರುಮಲನು ದಕ್ಷಿಣದ ನಿಟ್ಟಿನ ತನ್ನ ಸೈನ್ಯವನ್ನು ಮೆಲ್ಲಮೆಲ್ಲನೆ ಬರಮಾಡಿಕೊಳ್ಳುತ್ತಿದ್ದು, ಅದು ಬಂದಕೂಡಲೆ ತುಂಗಭದ್ರೆಯತ್ತಣ ಹಾದಿಯನ್ನು ಕಟ್ಟಿ, ತನ್ನ ನಾಶಮಾಡುವನೆಂಬ ಸಂಗತಿಯು ಬಾದಶಹನ ಕಿವಿಗೆ ಬಿದ್ದಿತ್ತು. ಈ ಮಾತಿನ ನಂಬಿಗೆಯು ಬಾದಶಹನಿಗೆ ಆಗಬೇಕೆಂದು ರಾಮರಾಜನು ಒಂದು ಯುಕ್ತಿಯನ್ನು ಮಾಡಿದನು. ಒಂದು ದಿವಸ ತಿರುಮಲನು ಬಾದಶಹನ ಭೆಟ್ಟಿಗೆ ಹೋದಾಗ, ತಿರುಮಲನ ನಂಬಿಗೆಯ ಸೇವಕನ ಮುಖಾಂತರ ಒಂದು ಪತ್ರವು ಬಾದಶಹನ ಸೇವಕರ ಕೈಗೆ ಸಿಗುವಂತೆ ರಾಮರಾಜನು ಕಟಪವನ್ನು ರಚಿಸಿದನು. ರಾಮರಾಜನ ಯುಕ್ತಿಯು ಸಫಲವಾಗಿ, ತಿರುಮಲನು ಹೋದಬಳಿಕ ಬಾದಶಹನ ಸೇವಕರು ಆ ಪತ್ರವನ್ನು ಬಾದಶಹನ ಕೈಯಲ್ಲಿ ಕೊಟ್ಟರು. ಪತ್ರವು ಕನ್ನಡದಲ್ಲಿ ಸಂಕ್ಷಿಪ್ತವಾಗಿ ಸಂದಿಗ್ಧ ರೀತಿಯಿಂದ ಬರೆಯಲ್ಪಟ್ಟಿತ್ತು. ದಕ್ಷಿಣದ ಒಬ್ಬ ದೊಡ್ಡ ಕಿಲ್ಲೇದಾರನು ಬರೆದಂತೆ ಅದು ಬರೆದಿದ್ದು, ಆ ಪತ್ರದಲ್ಲಿ ''ನೀವು ಆಜ್ಞಾಪಿಸಿದಂತೆ ಸೈನ್ಯವನ್ನು ಕಳಿಸಿ ಕೊಟ್ಟಿರುತ್ತೇನೆ. ಸಾಮಗ್ರಿಯು ಪರಿಪೂರ್ಣವಾಗಿರುತ್ತದೆ. ನಿಮ್ಮ ಇಚ್ಛೆಯು ಪೂರ್ಣವಾದರೆ ಹಾದಿಯೊಳಗಿನದೊಂದು ದೊಡ್ಡ ಮುಳ್ಳನ್ನು ಕಿತ್ತಿ ಚಲ್ಲಿದ ಹಾಗಾಗುತ್ತದೆ,'' ಎಂದು ಬರೆದಿತ್ತು. ಈ ಪತ್ರದ ಸಂಗತಿಯನ್ನು ಕೇಳಿದ ಕೂಡಲೆ ಬಾದಶಹನು ಸಂತಪ್ತನಾಗಿ, ಈಗಲೇ ತಿರುಮಲನನ್ನು ಕರೆಸಿ ಈ ಪತ್ರದ ಅರ್ಥವೇನೆಂದು ಕೇಳಿ, ಅವನ ತಲೆ ಹಾರಿಸಬೇಕೆಂದು ಮಾಡಿದನು; ಆದರೆ ಆತನ ಮಂತ್ರಿಯಾದ ಅಸದಖಾನನು—''ಹೀಗೆ ಅವಸರ ಮಾಡುವದು ಸರಿಯಲ್ಲ, ಸ್ವಲ್ಪ ಸಮಾಧಾನ ತಾಳಬೇಕು. ಇಲ್ಲದಿದ್ದರೆ ಸಂಕಟಕ್ಕೆ ಗುರಿಯಾಗಿ ಪೇಚಾಡಬೇಕಾದೀತು. ತಿರುಮಲನು ಈಗಲೇ ತುಂಗಭದ್ರೆಯ ಕಡೆಯ ಮಾರ್ಗವನ್ನು ಕಟ್ಟಿ ನಮ್ಮನ್ನು ನಾಶಮಾಡಿದರೆ ಏನು ಮಾಡಬೇಕು? ಆದ್ದರಿಂದ ಈಗ ದೊರೆತದ್ದರಲ್ಲಿ ಸಂತುಷ್ಟರಾಗಿ ನಾವು ಮೊದಲು ತುಂಗಭದ್ರೆ ಯನ್ನು ದಾಟಿಹೋಗೋಣ. ಒಂದು ಸೈನ್ಯದ ಭಾಗವು ಮಾತ್ರ ತುಂಗಭದ್ರೆಯ ಈಚೆಯ ಕಡೆಗೆ ಇರಲಿ, '' ಎಂದು ಹೇಳಿದನು.

ಹೀಗೆ ಆಲೋಚನೆಗಳು ನಡೆದಿರುವಾಗ ಮತ್ತೊಂದು ಚಮತ್ಕಾರದ ಸಂಗತಿಯು ಒದಗಿತು. ಬಾದಶಹನು ಒಂದು ದಿನ ಮುಂಜಾನೆ ಒಂದು ಸವಾರರ ಟೋಳಿಯನ್ನು ತುಂಗಭದ್ರೆಯ ಆಚೆಗೆ ಹೋಗಲಿಕ್ಕೆ ಕಳಿಸಿರಲು, ತುಂಗಭದ್ರೆಯ ಕಾವಲುಗಾರರು ''ತಿರುಮಲರಾಯರು ಪ್ರತಿಬಂಧಿಸಲಿಕ್ಕೆ ಹೇಳಿದ್ದಾರೆ''ಂದು ಆ ಸವಾರನನ್ನು ಮುಂದಕ್ಕೆ ಹೋಗಗೊಡಲಿಲ್ಲ. ಈ ವರ್ತಮಾನವನ್ನು ಆ ಟೋಳಿಯ ಮುಖ್ಯಸ್ಥನು ಬಾದಶಹನ ಮುಂದೆ ಹೇಳಲು, ಆತನು ಗಾಬರಿಯಾದನು. ತಿರುಮಲನು ಮಹಾಕಪಟಿಯಿದ್ದು ನಮ್ಮ ನಾಶ ಮಾಡಲಿಕ್ಕೆ ಹಿಂದು ಮುಂದು ನೋಡುವವನಲ್ಲವಾದ್ದರಿಂದ, ನಾವು ಇನ್ನು ಬೇಗನೆ ವಿಜಯನಗರ ವನ್ನು ಬಿಡಬೇಕೆಂದು ಮಂತ್ರಿಯೊಡನೆ ಬಾದಶಹನು ಆಲೋಚಿಸಿದನು. ತಿರುಮಲನ ವಿಷಯವಾಗಿ ಸಂಶಯ ಬಂದಂತೆ ಈಗ ತಾನು ತೋರಿಸಿದರೆ, ಈಗಲೇ ಅನರ್ಥವಾದೀತೆಂದು ತಿಳಿದು, ಬಾದಶಹನು ತನ್ನ ಸಂಶಯವನ್ನು ಹೊರಗೆ ತೋರಗೊಡದೆ, ತಿರುಮಲನ ಸಮ್ಮತಿಯಿಂದ ತುಂಗಭದ್ರೆಯನ್ನು ದಾಟಲಿಕ್ಕೆ ಆತುರನಾದನು. ಹೀಗೆ ಚಾಣಾಕ್ಷನಾದ

ರಾಮರಾಜನು ಬಾದಶಹನ ವಿಷಯವಾಗಿ ತಿರುಮಲನಲ್ಲಿಯೂ, ತಿರುಮಲನ ವಿಷಯವಾಗಿ ಬಾದಶಹನಲ್ಲಿಯೂ ಸಂಶಯವು ಉತ್ಪನ್ನವಾಗುವಂತೆ ಮಾಡಿದನು. ಬಾದಶಹನು ಒಂದು ದಿನ ತಿರುಮಲನನ್ನು ಕರಿಸಿ, ನಾನು ಇನ್ನು ವಿಜಾಪುರಕ್ಕೆ ಹೋಗುವೆನೆಂದು ಹೇಳಲು, ತಿರುಮಲನು ಮನಸ್ಸಿನಲ್ಲಿ ಸಂತೋಷಪಟ್ಟರೂ ಲೋಕರೀತಿಯಂತೆ ಬಾದಶಹನಿಗೆ—''ಇಷ್ಟು ಅವಸರವೇಕೆ? ಇನ್ನು ನಾಲ್ಕು ದಿನ ಇದ್ದು ಹೋಗಬೇಕು''. ಎಂದು ಹೇಳಿದನು. ಆಗ ಬಾದಶಹನು ಮತ್ತಿಷ್ಟು ಸಂಶಯಪಟ್ಟು, ಮನಸ್ಸಿನಲ್ಲಿ–ಈ ಠಕ್ಕನ ಸಿದ್ಧತೆಯು ಇನ್ನೂ ಪೂರ್ಣವಾದಂತೆ ತೋರುವದಿಲ್ಲ! ಆದ್ದರಿಂದಲೇ ಇನ್ನು ನಾಲ್ಕು ದಿನ ಇರೆಂದು ನನಗೆ ಹೇಳುತ್ತಾನೆ; ಆದರೆ ಈತನಿಂದ ಕಪ್ಪಕಾಣಿಕೆಯ ರಕಮನ್ನು ಇಸಕೊಂಡು, ಮಾಂಡಲೀಕತ್ವವನ್ನು ಒಪ್ಪಿಕೊಂಡ ಪತ್ರದ ಮೇಲೆ ಈತನ ಸಹಿ ಮಾಡಿಸಿಕೊಂಡು ಬೇಗನೆ ವಿಜಯನಗರವನ್ನು ಬಿಡಬೇಕು, ಎಂದು ಯೋಚಿಸಿ ಕಪ್ಪದ ಹಣವನ್ನು ಬೇಗನೆ ಕೊಡಲಿಕ್ಕೂ, ಕರಾರ ಪತ್ರದ ಮೇಲೆ ಬೇಗನೆ ಸಹಿ ಮಾಡಲಿಕ್ಕೂ ತಿರುಮಲನಿಗೆ ಆಗ್ರಹ ಮಾಡಹತ್ತಿದನು. ಆಗ ತಿರುಮಲನು—''ನಾನು ಬೇಗನೆ ಕಪ್ಪದ ಹಣವನ್ನು ಕೊಡದಿದ್ದರೆ, ಅದನ್ನೇ ನೆವಮಾಡಿ ಈತನು ಏನಾದರೂ ಅನರ್ಥ ಮಾಡಿಯಾನೆಂದು ತಿಳಿದು, ಕಪ್ಪದ ಎರಡು ಕೋಟಿ ರೂಪಾಯಿಗಳನ್ನೂ, ಬೇರೆ ನಜರಾಣೆಗಳನ್ನೂ ಕೊಟ್ಟು, ಕರಾರ ಪತ್ರಿಕೆಯ ಮೇಲೆ ಸಹಿ ಮಾಡಿದನು. ಆ ಪತ್ರದಲ್ಲಿ ವಿಜಯನಗರದ ಅರಸರು ವಿಜಾಪುರದ ಬಾದಶಹನ ಮಾಂಡಲಿಕ ರೆಂದು ಸ್ಪಷ್ಟವಾಗಿ ಒಪ್ಪಿಕೊಂಡಿತ್ತು. ಬಾದಶಹನು ತನ್ನ ಕೆಲಸವಾದ ಮೇಲೆ ಮತ್ತೆ ತಿರುಮಲನಿಗೆ—''ನಮ್ಮ ದರ್ಗೆಯು ಇನ್ನು ನಮ್ಮ ಸ್ವಾಧೀನದಲ್ಲಿರಬೇಕು. ನಮ್ಮ ವಕೀಲನೊಬ್ಬನು ನಿಮ್ಮ ರಾಜಧಾನಿಯಲ್ಲಿರುವನು. ಆತನಿಗೆ ದರ್ಗೆಗೆ ಸಮೀಪವಾಗಿರುವ ಕುಂಜವನವನ್ನು ಇರಲಿಕ್ಕೆ ಕೊಡಬೇಕು,'' ಎಂದು ಹೇಳಿದನು. ಅದಕ್ಕೂ ತಿರುಮಲನು ಒಪ್ಪಿಕೊಂಡನು. ಆತನಿಗೆ ಬಾದಶಹನು ಬೇಗನೆ ರಾಜಧಾನಿಯನ್ನು ಬಿಟ್ಟು ಹೋದರೆ ಸಾಕಾಗಿತ್ತು. ಈ ಮೇರೆಗೆ ತನ್ನ ಮನೋದಯಗಳೆಲ್ಲ ಪೂರ್ಣವಾದಂತೆ ಯಾದ್ದರಿಂದ ಬಾದಶಹನು ತಾನು ಇಂದೇ ತುಂಗಭದ್ರೆಯನ್ನು ದಾಟಿ ಹೋಗಿ ತಿರುಮಲನ ಕಪಟದ ಕೃತ್ಯಗಳಿಗಾಗಿ ಅವನ ಪ್ರಾಯಶ್ಚಿತ್ತಮಾಡಬೇಕೆಂದು ಯೋಚಿಸಿ, ವಿಜಯನಗರವನ್ನು ಬಿಟ್ಟುಹೋದನು.

ಬಾದಶಹನು ರಾಜಧಾನಿಯನ್ನು ಬಿಟ್ಟು ಹೋದದ್ದರಿಂದ ತಿರುಮಲನಿಗೂ, ರಾಮರಾಜನಿಗೂ ಕೂಡಿಯೇ ಸಂತೋಷವಾಯಿತು. ಬಾದಶಹನು ಹೋದದ್ದರಿಂದ ರಾಮರಾಜನಿಗೆ ತನ್ನ ಒಳಸಂಚಿನ ಕಾರ್ಯವನ್ನು ನಡಿಸಲಿಕ್ಕೆ ಒಂದು ದಿವಸದ ಅವಕಾಶವು ಸಹ ಬೇಕಾಗಿದ್ದಿಲ್ಲ. ಅದರಂತೆ ಆತನ ಸಿದ್ಧತೆಯೂ ಆಗಿತ್ತು, ಯಾವತ್ತೂ ಸೈನಿಕರನ್ನು , ಒಡ ಕೊಂಡಿದ್ದರಿಂದ ರಾಮರಾಜನು ಆಕಸ್ಮಾತ್ತಾಗಿ ತಿರುಮಲನ ಮನೆಯನ್ನು ಮುತ್ತಿದನು. ಮೊದಲೇ ಅಂಜುಬುರುಕನಾದ ತಿರುಮಲನಿಗೆ ಈ ಆಕಸ್ಮಿಕ ಪ್ರಸಂಗದಿಂದ ಹುಚ್ಚೇ ಹಿಡಿಯಿತೆಂದು ಹೇಳಬಹುದು. ರಾಮರಾಜನು ತಿರುಮಲನನ್ನು ಸೆರೆಹಿಡಯಬೇಕೆಂದು ಮಾತ್ರಮಾಡಿದ್ದನು. ಆದರೆ ತಿರುಮಲನು ಇನ್ನು ಮೇಲೆ ತನ್ನ ಜೀವವು ಉಳಿಯದೆಂದು ನಿಶ್ಚಯಿಸಿದನು. ತನ್ನ

ಮಿತ್ರನಾದ ಆದಿಲಶಹನಿಗೆ ಸುದ್ದಿಯನ್ನು ಕಳಿಸಲಿಕ್ಕೂ ಆತನಿಗೆ ಮಾರ್ಗವಿಲ್ಲದೆ ಹೋಯಿತು. ತಾನು ಬಾದಶಹನನ್ನು ಕರೆಸಿ ಮಿತಿಮೀರಿ ಕಪ್ಪ ಕೊಟ್ಟದ್ದೂ, ಆತನ ಮಾಂಡಲಿಕತ್ವವನ್ನು ಒಪ್ಪಿಕೊಂಡದ್ದೂ ಅಪರಾಧವಾಯಿತೆಂದು ಆತನು ಈಗ ಪಶ್ಚಾತ್ತಾಪಪಡಹತ್ತಿದನು. ಇನ್ನು ಮೇಲೆ ತಾನು ಎಷ್ಟು ಪಶ್ಚಾತ್ತಾಪಪಟ್ಟು, ಎಷ್ಟು ಬೇಡಿಕೊಂಡರೂ ಜನರು ತನ್ನನ್ನು ದೇಶದ್ರೋಹಿ ಎಂದು ತಿರಸ್ಕರಿಸಿ ತನ್ನ ಪ್ರಾಣಹರಣ ಮಾಡುವರಲ್ಲದೆ, ತನ್ನನ್ನು ಕ್ಷಮಿಸರೆಂದು ಆತನು ತಿಳಿದು ಕೊಂಡನು. ಈ ವಿಚಾರಗಳಿಂದ ಆತನಿಗೆ ಹುಚ್ಚೇ ಹಿಡಿದಂತಾಯಿತು. ಆತನು ಅರಮನೆಯ ಗಜಶಾಲೆಯೊಳಗಿನ ಆನೆಗಳನ್ನೆಲ್ಲ ತರಿಸಿ ಅವುಗಳ ಬಾಲವನ್ನು ಕಿತ್ತಿಸಿ, ಕಣ್ಣುಗಳನ್ನು ಕಳೆದು ತನ್ನ ವೈರಿಗಳ ನಾಶಮಾಡುವದಕ್ಕಾಗಿ ಅವನ್ನು ಹೊರಗೆ ಬಿಟ್ಟನು. ತಾನು ಈಗ ಎರಡು ವರ್ಷಗಳಿಂದ ತನ್ನ ಮನೆಯಲ್ಲಿ ತುಂಬಿಕೊಂಡಿದ್ದ ಬಹು ಬೆಲೆಯುಳ್ಳ ಮುತ್ತು ರತ್ನಗಳ ಆಭರಣಗಳನ್ನು ತರಿಸಿ, ಅವುಗಳೊಳಗಿನ ಮುತ್ತು ರತ್ನಗಳನ್ನು ಒಡೆದು ಚೂರು ಚೂರು ಮಾಡಿದನು. ಈ ಶ್ರೇಷ್ಠವಾದ ಅಲಂಕಾರಗಳನ್ನು ವಿಜಯನಗರದ ಪರಾಕ್ರಮಶಾಲಿಗಳಾದ ಎಷ್ಟೋ ಅರಸರು ಹಲವು ರಾಜ್ಯಗಳನ್ನು ಮಣ್ಣುಗೂಡಿಸಿ ಸಂಪಾದಿಸಿದ್ದರು. ಅಂಥವನ್ನು ಈ ದುಷ್ಟ ತಿರುಮಲನು ಕೆಲವು ತಾಸುಗಳಲ್ಲಿ ನಾಶಮಾಡಿಬಿಟ್ಟನು! ಆ ಮೇಲೆ ಆತನು ಕಂಬಕ್ಕೆ ಕತ್ತಿಯನ್ನು ಕಟ್ಟಿ, ಆದರ ಮೇಲೆ ಕಸುವಿನಿಂದ ಬಿದ್ದು ಆತ್ಮಹತ್ಯಮಾಡಿಕೊಂಡನು. ಪ್ರಿಯವಾಚಕರೇ, ಕನ್ನಡಿಗರ ಅಭಿಮಾನಾಸ್ಪದ ವಾದ ಈ ಪ್ರಬಲ ರಾಜ್ಯದ ಐಶ್ವರ್ಯನಾಶವನ್ನು ತಿರುಮಲನು ಈ ಮೇರೆಗೆ ಹಲವು ಬಗೆಯಿಂದ ಮಾಡಿದ್ದನ್ನು ನೋಡಿ, ನಿಮಗೆ ಬಹು ವ್ಯಸನವಾಗಿರಬಹುದಲ್ಲವೆ? ಆದರೆ ಉಪಾಯವಿಲ್ಲ. ಈ ಜಗತ್ತಿನ ರೂಪಾಂತರದ ಕಡೆಗೆ ಲಕ್ಷಕೊಟ್ಟು, ಈ ಜಗತ್ತಿನಲ್ಲಿ ಯಾವದೂ ಸ್ಥಿರವಲ್ಲೆಂಬದನ್ನು ಲಕ್ಷಿಸಿ, ಸಮಾಧಾನ ಮಾಡಿಕೊಂಡು ಮುಂದಿನ ಸಂಗತಿಯನ್ನು ನೀವು ಓದಬೇಕು.

ಈ ಮೇರೆಗೆ ತಿರುಮಲನ ಅಂತ್ಯವಾದ ಬಳಿಕ ರಾಜ್ಯದ ಸೂತ್ರಗಳು ಮತ್ತೆ ರಾಮರಾಜನ ಕೈಯಲ್ಲಿ ಬಂದವು. ಆತನು ಮೊದಲು ಬಾದಶಹನ ಸಮಾಚಾರವನ್ನು ತೆಗೆದುಕೊಂಡು, ಸಾಧಿಸಿದರೆ, ತಾವು ಕೊಟ್ಟಿದ್ದ ಕಪ್ಪದ ದೊಡ್ಡ ರಕಮುವನ್ನು ಕಸಕೊಳ್ಳಬೇಕೆಂದು ಒಮ್ಮೆ ಯೋಚಿಸಿದನು; ಆದರೆ ಈ ಕೆಲಸವು ಸುಲಭವಲ್ಲೆಂಬ ಮಾತು ಲಕ್ಷಕ್ಕೆ ಬಂದದ್ದರಿಂದ, ಆತನು ಮೊದಲು ತನ್ನ ಮನೆಯ ವ್ಯವಸ್ಥೆಯನ್ನು ಸರಿಯಾಗಿ ಮಾಡಿಕೊಂಡ ಬಳಿಕ ಹಿಂದುಗಡೆ ಬಾದಶಹನ ಸಮಾಚಾರ ತಕ್ಕೊಳ್ಳೋಣವೆಂದು ನಿಶ್ಚಯಿಸಿ ಮೊದಲು ತಿರುಮಲನ ಪಕ್ಷದ ಜನರನ್ನು ಸಮಾಧಾನಗೊಳಿಸಿದನು. ತಿರುಮಲನ ಪಕ್ಷದ ಜನರ ಮೊದಲಿನ ಅಧಿಕಾರಗಳನ್ನು ಅವರ ಕಡೆಗೇ ಬಿಟ್ಟು—"ನಾನು ತಿರುಮಲನಿಗೆ ಕೇಡು ಬಗೆಯುತ್ತಿದ್ದಿಲ್ಲ; ಆತನು ಜೀವ ದಿಂದಿದ್ದರೆ ಆತನಿಗೇ ಮಂತ್ರಿ ಪದವಿಯನ್ನು ಕೊಟ್ಟು, ಆತನ ಕೈಕೆಳಗೆ ನಾನು ಇರುತ್ತಿದ್ದೆನು. ರಾಜ್ಯದ ಗೌರವವನ್ನು ನಷ್ಟಪಡಿಸಿದ್ದರಿಂದ ನಾನು ತಿರುಮಲನ ಗೊಡವಿಗೆ ಹೋಗಬೇಕಾಯಿತು ಎಂದು ಹೇಳಿದನು. ಇದರಿಂದ ತಿರುಮಲನ ಪಕ್ಷದವರ ಸಮಾಧಾನವಾಯಿತು. ಮುಸಲ್ಮಾನರ ಕೈಯು ತಮ್ಮ ರಾಜ್ಯದಲ್ಲಿ ಸೇರಿದ್ದಕ್ಕಾಗಿ ರಾಮರಾಜನಿಗೆ ಬಹಳ ಅಸಮಾಧಾನವಾಗಿತ್ತು

ಮೊದಲು ಆತನು ಮುಸಲ್ಮಾನರದೊಂದು ಮಸೀದೆಯು (ದರ್ಗೆಯು) ತನ್ನ ರಾಜ್ಯದಲ್ಲಿದ್ದದ್ದಕ್ಕಾಗಿ ಅಸಮಾಧಾನ ಪಡುತ್ತಿರಲು, ಈಗ ಆ ದರ್ಗೆಯು ಮುಸುಲ್ಮಾನರ ಕೈ ಸೇರಿದ್ದಲ್ಲದೆ, ತನ್ನ ಕುಂಜವನವು ಸಹ ಬಾದಶಹನ ವಕೀಲನ ವಾಸಸ್ಥಳವಾಯಿತೆಂದು ಆತನು ಬಹಳ ಅಸಮಾಧಾನಪಟ್ಟನು. ಆತನು ಬಾದಶಹನಿಗೆ—''ಕುಂಜವನದ ಬದಲು ಬೇರೆ ಸ್ಥಳವನ್ನು ನಿಮ್ಮ ವಕೀಲನಿಗೆ ಇರಲಿಕ್ಕೆ ಕೊಡುತ್ತೇವೆ'' ಎಂದು ತಿಳಿಸಲು, ಅದಕ್ಕೆ ಬಾದಶಹನು—''ನಮ್ಮ ವಕೀಲನಿಗೆ ಅದೇ ಸ್ಥಳವು ಯೋಗ್ಯವಾದದ್ದು, ಎರಡನೆಯ ಸ್ಥಳವು ನಮಗೆ ಬೇಕಾಗಿಲ್ಲ, ಕುಂಜವನವನ್ನು ನೀವು ಕೊಡದಿದ್ದರೆ, ನಮ್ಮ ವಕೀಲನು ನಿಮ್ಮಲ್ಲಿರುವದಕ್ಕೆ ನಿಮ್ಮ ಒಪ್ಪಿಗೆಯಿರುವದಿಲ್ಲೆಂದು ತಿಳಿದು, ನಾವು ಯೋಗ್ಯ ವ್ಯವಸ್ಥೆ ಮಾಡುವೆವು'' ಎಂದು ಸ್ವಲ್ಪ ಕಠೋರತನದಿಂದ ೦.

ಉತ್ತರವನ್ನು ಬರೆದು ಕಳಿಸಿದನು. ಅದನ್ನು ಓದಿ ರಾಮರಾಜನು ಸಿಟ್ಟು ಬೆಂಕಿಯಾದನು. ''ನೀವು ಮಾಡತಕ್ಕದ್ದನ್ನು ಅವಶ್ಯವಾಗಿ ಮಾಡಿರಿ, ನಾನಂತು ಕುಂಜವನವನ್ನು ನಿಮಗೆ ಕೊಡುವದಿಲ್ಲ'' ಎಂದು ಸ್ಪಷ್ಟವಾಗಿ ಬರೆಯಬೇಕೆಂದು ಆತನು ಯೋಚಿಸಿದನು; ಆದರೆ ಮತ್ತೆ ವಿಚಾರಮಾಡಿ, ಇದು ಹೀಗೆ ಏರಿಹೋಗಲಿಕ್ಕೆ ಸಮಯವಲ್ಲ. ಈಗ ಸಮಾಧಾನ ಮಾಡಿಕೊಳ್ಳುವದೇ ಯೋಗ್ಯವು, ಎಂದು ತಿಳಿದು, ಬಾದಶಹನ ವಕೀಲನಿಗೆ ಕುಂಜವನವನ್ನು ತೆರವು ಮಾಡಿಕೊಟ್ಟನು. ಇತ್ತ ಬಾದಶಹನು ರಾಮರಾಜನಿಗೆ—''ನಿಮ್ಮ ರಾಜ್ಯದಲ್ಲಿ ಸ್ವಸ್ಥತೆಯಾದ ಬಳಿಕ ನೀವು ಸೇರಿಸುವ ಮೊದಲನೆಯ ದರ್ಬಾರಕ್ಕೆ ನಮ್ಮ ವಕೀಲನು ಬರುವನು; ಆದ್ದರಿಂದ ದರ್ಬಾರು ನೆರಸಲಿಕ್ಕೆ ಎಂಟು ದಿವಸಗಳಿರುತ್ತಲೆ ನಮಗೆ ದರ್ಬಾರದ ದಿವಸವನ್ನು ತಿಳಿಸಬೇಕು;'' ಎಂದು ಪತ್ರವನ್ನು ಬರೆದನು. ಆ ಪತ್ರವನ್ನು, ವಿಶೇಷವಾಗಿ ಆ ಪತ್ರದೊಳಗಿನ ಔದ್ಧತ್ಯದ ಬರಹವನ್ನು ನೋಡಿ ರಾಮರಾಜನ ಸರ್ವಾಂಗವು ತಪ್ತವಾಯಿತು; ಆದರೆ ಇದು ತಡಕೊಂಡು ಹೋಗತಕ್ಕ ಕಾಲವು; ಮುಂದುವರಿದು ಹೋಗತಕ್ಕ ಕಾಲವಲ್ಲೆಂಬ ಮಾತು ಲಕ್ಷದಲ್ಲಿ ಬಂದದ್ದರಿಂದ, ಆತನಿಗೆ ಬಹಳ ವ್ಯಸನವಾಯಿತು ಆತನು ಹೆಚ್ಚಿನ ಉಸಾಬರಿಗೆ ಹೋಗದೆ, ದರ್ಬಾರದ ದಿನವನ್ನು ಗೊತ್ತುಮಾಡಿ ಅದನ್ನು ಮುಂಗಡವಾಗಿ ಬಾದಶಹನಿಗೆ ಆತನ ಇಚ್ಛೆಯಂತೆ ತಿಳಿಸಿದನು.

## ರಾಮರಾಜನ ಉತ್ಕರ್ಷ

ಅಚ್ಯುತರಾಯನು ರಾಜ್ಯಕಾರಭಾರಕ್ಕೆ ಕೇವಲ ಅಯೋಗ್ಯನೆಂಬದನ್ನು ವಾಚಕರು ಅರಿತಿರುವದು. ಸ್ವತಂತ್ರ ರೀತಿಯಿಂದ ಕಾರಭಾರ ಮಾಡಲಿಕ್ಕೆ ಆತನಲ್ಲಿ ಯೋಗ್ಯತೆಯೇ ಇದ್ದಿಲ್ಲ. ಹೋಜೆ ತಿರುಮಲರಾಯನು ಇರುವ ತನಕ ಆತನ ಕೈಯೊಳಗಿನ ಸೂತ್ರದ ಗೊಂಬೆಯಾಗಿದ್ದನು. ಈಗ ರಾಮರಾಜನ ಕೈಯೊಳಗಿನ ಸೂತ್ರದ ಗೊಂಬೆಯಾದನು. ರಾಮರಾಜನ

ವಿಷಯವಾಗಿ ಯಾವತ್ತು ಜನರು ಆದರ ಬುದ್ಧಿಯುಳ್ಳವರಾಗಿದ್ದರು. ಆತನ ಬುದ್ಧಿ ಸಾಮರ್ಥ್ಯ ದಿಂದಲೇ ವಿಜಯನಗರದ ಸಂರಕ್ಷಣವಾಯಿತೆಂದು ಎಲ್ಲರು ತಿಳಿದಿದ್ದರು. ರಾಮರಾಜನು ಒಳ್ಳೇ ಚತುರನೂ, ಮಹಾ ಪರಾಕ್ರಮಿಯೂ, ನಿಜವಾದ ಹಿಂದೂ ಧರ್ಮಾಭಿಮಾನಿಯೂ ಎಂಬ ಕೀರ್ತಿಯೂ ಎಲ್ಲೆಡೆಗೆ ಹಬ್ಬಿತು. ತಿರುಮಲರಾಯನ ಮರಣದ ನಂತರದ ರಾಜ್ಯದಲ್ಲಿ ಸ್ವಾಸ್ಥ್ಯವು ನೆಲೆಗೊಂಡ ಬಳಿಕ ರಾಮರಾಜನು ದರ್ಬಾರು ಕೂಡಿಸಿ ಅಚ್ಯುತರಾಯನಿಂದ ತಾನು ಮಂತ್ರಿ ಪದದ ಉಡುಗರೆಗಳನ್ನು ಇಸುಕೊಳ್ಳಬೇಕೆಂದು ಮಾಡಿದನು. ಈ ದರ್ಬಾರದ ನೆವದಿಂದ ವಿಜಯನಗರದ ರಾಜ್ಯದ ಐಶ್ವರ್ಯವನ್ನೂ, ಸಾಮರ್ಥ್ಯವನ್ನೂ, ಪರರಾಜರ ಕಣ್ಣಿಗೆ ಹಾಕಿ, ವಿಜಯನಗರದ ಅರಸರ ವಿಷಯದ ಭಯವು ಅವರ ಮನಸ್ಸಿನಲ್ಲಿ ಉಳಿಯುವಂತೆ ಮಾಡಬೇಕೆಂದು ರಾಮರಾಜನು ಯೋಚಿಸಿದ್ದನು. ಹೋಜೆ ತಿರುಮಲನ ಕಾಲದಲ್ಲಿ ಉಂಟಾಗಿದ್ದ ವಿಜಯನಗರದ ರಾಜ್ಯದೊಳಗಿನ ಒಡಕು ಹೋಗಿ, ಪುನಃ ರಾಜ್ಯದಲ್ಲಿ ಒಕ್ಕಟ್ಟು ಉತ್ಪನ್ನವಾಗಿರುವದೆಂದು ಎಲ್ಲರಿಗೆ, ವಿಶೇಷವಾಗಿ ಮುಸಲ್ಮಾನ ಬಾದಶಹರಿಗೆ ಆತನು ತೋರಿಸಬೇಕಾತ್ತು ಹೀಗೆ ಮುಸಲ್ಮಾನ ಬಾದಶಹರು ತನ್ನ ಸಾಮರ್ಥ್ಯವನ್ನು ಅರಿತು, ಕೆಲವು ವರ್ಷಗಳವರೆಗಾದರು ತನ್ನ ಗೊಡವೆಗೆ ಬಾರದಿರುವಾಗ, ತನ್ನ ಸಾಮರ್ಥ್ಯವನ್ನು ಹೆಚ್ಚಿಸಿಕೊಂಡು ಆ ಮೇಲೆ ವಿಜಾಪುರದ ಇಬ್ರಾಹಿಮ ಆದಿಲಶಹನ ಸಮಾಚಾರವನ್ನು ತಕ್ಕೊಂಡು, ಹೋಜೆ ತಿರುಮಲರಾಯನ ಕಾಲದಲ್ಲಾಗಿದ್ದ ಅಪಮಾನದ ಸೇಡು ತೀರಿಸಿಕೊಳ್ಳಬೇಕೆಂದು ಮಾಡಿದನು. ಇಬ್ರಾಹಿಮ್ ಆದಿಲಶಹನಾದರೂ ರಾಮರಾಜನ ಯೋಗ್ಯತೆಯನ್ನು ನೋಡಿ ಅಂಜಿ ನಡೆಯುತ್ತಿದ್ದನು. ಆತನು ರಾಮರಾಜನಿಗೆ—''ನೀವು ನಿಮ್ಮ ರಾಜ್ಯಕಾರಭಾರವನ್ನು ಬೇಕಾದ ಹಾಗೆ ನಡಿಸಿರಿ, ಮಾತ್ರ ನಮ್ಮ ವಕೀಲನ ಮಾನಮರ್ಯಾದೆಗಳನ್ನು ಯೋಗ್ಯರೀತಿಯಿಂದ ನಡಿಸಿ, ಒಡಂಬಡಿಕೆಯ ಕರಾರುಗಳನ್ನು ಸರಿಯಾಗಿ ಪಾಲಿಸಿದರಾಯಿತು; ನಮಗೆ ತಿರುಮಲರಾಯನು ಕಾರಭಾರ ಮಾಡಿದರೂ ಅಷ್ಟೇ, ರಾಮರಾಜನು ಕಾರಬಾರ ಮಾಡಿದರೂ ಅಷ್ಟೇ, ಎಂದು ಹೇಳಿ ಕಳಿಸಿಕೊಡಹತ್ತಿದನು. ರಾಮರಾಜನಿಗೆ ಇಬ್ರಾಹಿಮಶಹನ ಭಯವಿದ್ದಿಲ್ಲ. ಈಗ ಅವನು ತನ್ನನ್ನು ತಡವಲಾರನೆಂಬದು ರಾಮರಾಜನಿಗೆ ಸಂಪೂರ್ಣವಾಗಿ ಗೊತ್ತಾಗಿತ್ತು

ದರ್ಬಾರದ ದಿವಸವು ಗೊತ್ತಾಯಿತು. ನಾಲ್ಕೂ ಕಡೆಗೆ ಪತ್ರಗಳು ಹೋದವು. ವಿಜಾಪುರ, ಗೋವಳಕೊಂಡ, ಅಹ್ಮದನಗರ, ಬೀದರ ಈ ನಾಲ್ವರು ಮುಸಲ್ಮಾನ ಬಾದಶಹರಿಗೂ, ಗೋವೆಯ ರಾಜ್ಯದ ಪೋರ್ತಗೀಜರಿಗೂ ನಿಮಂತ್ರಣ ಪತ್ರಿಕೆಗಳನ್ನು ಕಳಿಸಿದನು. ಸ್ವತಃ, ತನ್ನ ರಾಜ್ಯದೊಳಗಿನ ಯಾವತ್ತು ಕಿಲ್ಲೆದಾರರಿಗೂ, ಠಾಣೇದಾರರಿಗೂ ಸುಭೇದಾರರಿಗೂ, ಮಾಂಡಲಿಕ ರಾಜರಿಗೂ ಸೈನ್ಯಸಹಿತವಾಗಿ ಬರಲಿಕ್ಕೆ ರಾಮರಾಜನು ಆಜ್ಞಾ ಪತ್ರಗಳನ್ನು ಕಳಿಸಿದನು. ತನ್ನವರಲ್ಲಿ ತನಗೆ ಅನುಕೂಲರಾದ ಜನರನ್ನೂ, ತನಗೆ ಪ್ರತಿಕೂಲರಾದ ಜನರನ್ನೂ ಕೂಡಿಯೇ ಕರಿಸಿ, ಅವರನ್ನು ಕುರಿತು—''ಈಗಿನ ಪ್ರಸಂಗವು ಕಠಿಣವಾದದು, ನಮ್ಮ ರಾಜ್ಯವನ್ನು ನುಂಗಲಿಕ್ಕೆ ನಾಲ್ವರು ಮುಸಲ್ಮಾನ ಬಾದಶಹರು ಹೊಂಚು ಹಾಕಿ ಕುಳಿತಿರುವರೆಂಬುದು ನಿಮಗೆ ಗೊತ್ತೇ ಇದೆ. ಇಂಥ ಪ್ರಸಂಗದಲ್ಲಿ ನಮ್ಮಲ್ಲಿ ಒಡಕು ಇರಲಾಗದು. ನಮ್ಮ ರಾಜ್ಯದ ಐಶ್ವರ್ಯವನ್ನೂ,

ಬಲವನ್ನೂ ಹೊರಗೆಡವಿ, ಅದರಿಂದ ಎಲ್ಲರನ್ನು ಆಶ್ಚರ್ಯಚಕಿತರನ್ನಾಗಿ ಮಾಡಬೇಕು. ಅಂದರೆ ಎಲ್ಲರು ತೆಪ್ಪಗಾಗಿ, ನಮ್ಮ ಉಸಾಬರಿಗೆ ಬರಲಿಕ್ಕಿಲ್ಲ. ಆ ಮೇಲೆ ನಮ್ಮ ಬಲವನ್ನು ಹೆಚ್ಚಿಸಿಕೊಳ್ಳಲಿಕ್ಕೆ ಅನುಕೂಲವಾಗುವದು.'' ಎಂದು ಹೇಳಲು, ಆದರೆಲ್ಲರು ಒಡಂಬಟ್ಟು ರಾಮರಾಜನ ಸೂಚನೆಯಂತೆ ದರ್ಬಾರದ ವ್ಯವಸ್ಥೆಗೆ ಅನುಕೂಲವಾದರು. ರಾಮರಾಜನ ವಿಷಯವಾಗಿ ಅವರಲ್ಲಿ ಪ್ರೇಮಾದರಗಳು ಉತ್ಪನ್ನವಾದವು. ವಿದ್ಯಾನಗರದ ಅಥವಾ ವಿಜಯನಗರದ ಐಶ್ವರ್ಯವು ಅಪಾರವಾಗಿತ್ತು ರಾಜದರ್ಬಾರವೆಂದರೆ, ರಾಜ್ಯದ ಸಂಪತ್ತಿನ. ಹಾಗು ಸಾಮರ್ಥ್ಯದ ಒಂದು ಬಗೆಯ ಪ್ರದರ್ಶನವೇ ಆಗಿರುತ್ತಿತ್ತು ಈ ಪ್ರಸಂಗದಲ್ಲಿಯಂತು ರಾಮರಾಜನು ಆ ಪ್ರದರ್ಶನವನ್ನು ಅತ್ಯುತ್ತಮ ರೀತಿಯಿಂದ ಮಾಡಿದನೆಂದು ಹೇಳಬಹುದು. ಅರಮನೆಯಿಂದ ಅರಸರ ಮೆರವಣಿಗೆಯು ಹೊರಟು, ರಾಜದರ್ಬಾರಕ್ಕೆ ಬರಬೇಕೆಂದು ಗೊತ್ತಾಗಿತ್ತು, ಅದರಂತೆ ಅರಸನ ಮೆರವಣಿಗೆಯು ಅರಮನೆಯಿಂದ ಹೊರಟಿತು. ಅರಸರ ಮೆರವಣಿಗೆಯು ರಾಜಮಾರ್ಗವನ್ನು ಹಿಡಿದು ಸಾಗಿದಾಗ, ಕಣ್ಣಿಗೆ ಬೀಳುವ ವೈಭವದ ವರ್ಣನೆ ಗಳನ್ನು ಪ್ರಾಚೀನ ಕಾವ್ಯಗಳಲ್ಲಿ ವರ್ಣಿಸಿರುವರಷ್ಟೆ? ಆದರೆ ಈ ವರ್ಣನೆಗಳನ್ನು ಹಿಂದಕ್ಕೆ ಸರಿಸುವಂಥ ವೈಭವವು ಈಗಿನ ಮೆರವಣಿಗೆಯಲ್ಲಿ ಕಣ್ಣಿಗೆ ಬೀಳುವಂತೆ ರಾಮರಾಜನು ವ್ಯವಸ್ಥೆ ಮಾಡಿದ್ದನು. ಯಾವತ್ತು ಮುಸಲ್ಮಾನ ಬಾದಶಹರಿಂದ ಕಳಿಸಲ್ಪಟ್ಟಿದ್ದ ವಕೀಲರು, ವಿಜಯನಗರದ ಐಶ್ವರ್ಯ ಸಾಮರ್ಥ್ಯಗಳನ್ನು ನೋಡಿ, ಬೆರಗಾದರು. ಪಟ್ಟಣದ ಯಾವತ್ತು ರಾಜಮಾರ್ಗಗಳಿಂದ ಮೆರವಣಿಗೆಯು ಸಾಗಿಹೋಯಿತು. ಮೆರವಣಿಗೆಯ ಮುಂಭಾಗದಲ್ಲಿ ಒಂದು ದೊಡ್ಡ ಆನೆಯ ಮೇಲೆ ಒಬ್ಬ ಮನುಷ್ಯನು ವಿಜಯನಗರದ ಧ್ವಜವನ್ನು ಹಿಡಕೊಂಡು ಕುಳಿತುಕೊಂಡಿದ್ದನು. ಆ ಧ್ವಜಪಟದ ಒಂದು ಮಗ್ಗಲಿಗೆ ಶ್ರೀ ವಿಠ್ಠಲಸ್ವಾಮಿಯ ಚಿತ್ರವೂ, ಮತ್ತೊಂದು ಮಗ್ಗಲಿಗೆ ನೃಸಿಂಹನ ಚಿತ್ರವೂ ಕಣ್ಣಿಗೆ ಬೀಳುತ್ತಿದ್ದವು. ಇಂಥ ಧ್ವಜಸ್ತಂಭವನ್ನು ಆನೆಯ ಮೇಲೆ ಅತ್ತಿತ್ತ ಉಲಕಾಡದಂತೆ ನಿಲ್ಲಿಸಿದ್ದರು. ಧ್ವಜವು ಮಾತ್ರ ಗಾಳಿಯಿಂದ ಪಟಪಟ ಸಪ್ಪಳ ಮಾಡುತ್ತ ಆಕಾಶದಲ್ಲಿ ಗಾಂಭೀರ್ಯದಿಂದ ಹೊಯ್ದಾಡುತ್ತಿತ್ತು, ಈ ಆನೆಯ ಹಿಂದೆ ನೂರಾರು ಆನೆಗಳು ಸಾಲುಗೊಂಡು ಸಾಗಿದ್ದವು ಆಗ ವಿಜಯನಗರದ ಐಶ್ವರ್ಯದ ಸಾಕ್ಷಿಯಾಗಿ ಆ ರಾಜ್ಯದಲ್ಲಿ ಎರಡು ಸಾವಿರದವರೆಗೆ ಆನೆಗಳು ಇದ್ದವು. ಅವುಗಳಲ್ಲಿ ಆರಿಸಿ ತಂದಿದ್ದ ಈ ನೂರಾರು ಆನೆಗಳ ಹಿಂಡು ನೋಡುವವರ ಮನೋರಂಜನವನ್ನಲ್ಲದೆ, ನೋಡುವವರಲ್ಲಿ ಒಂದು ಪ್ರಕಾರದ ಭಯವನ್ನೂ ಉಂಟುಮಾಡುತ್ತಿತ್ತು, ಆ ಮೆರವಣಿಗೆಯಲ್ಲಿ (ಗಜ) ಬೃಂಹಿತದೊಡನೆ ಕನ್ನಡಿಗರ ಹೃದಯವು ಅಭಿಮಾನಾನಂದದಿಂದ ಕಂಪಿಸಿದರೆ, ವೈರಿಗಳ ಹೃದಯವು ಮಾತ್ಸರ್ಯಯುಕ್ತ ಭಯದಿಂದ ಕಂಪಿಸುತ್ತಿರಬಹುದು! ಈ ಆನೆಗಳ ಹಿಂದೆ ಕುದುರೆಗಳ ಸಾಲುಗಳೂ, ಅವುಗಳ ಹಿಂದಿನಿಂದ ಕಾಲಾಳುಗಳ ತಂಡಗಳೂ ಸಡಗರದಿಂದ ಸಾಗಿದ್ದವು. ಕಾಲಾಳುಗಳ ಸಂಖ್ಯೆಗೆ ಲೆಖ್ಖವಿದ್ದಿಲ್ಲ, ನಟ್ಟನಡುವೆ ಭವ್ಯವಾದ ಆನೆಯ ಮೇಲೆ ಬೆಳ್ಳಿಯ ಅಂಬಾರಿಯಲ್ಲಿ ಅಚ್ಯುತರಾಯರ ಸಾವಾರಿಯು ಶೋಭಿಸುತ್ತಲಿತ್ತು, ಅದರ ಹಿಂದೆ ಅಂಥದೇ ಮೂರು ಆನೆಗಳ ಮೇಲೆ ಬೆಳ್ಳಿಯ ಅಂಬಾರಿಯಲ್ಲಿ ರಾಮರಾಜನ, ಹಾಗು ಆತನ

ಬಂಧುವಾದ ತಿರುಮಲರಾಯನ, ಅದರಂತೆ ಆತನ ಮಿತ್ರನಾದ ಶಾರ್ಙ್ಗಧರನ ಸವಾರಿಗಳು ವಿರಾಜಮಾನ ವಾಗಿದ್ದವು. ನಾನಾಪ್ರಕಾರದ ರಣವಾದ್ಯಗಳೂ ಭೇರಿಗಳೂ ನಗಾರೆ–ನೌಬತ್ತುಗಳೂ, ಕಹಳೆ ತುತ್ತೂರಿಗಳೂ ಅಟ್ಟಹಾಸದಿಂದ ಧ್ವನಿಮಾಡುತ್ತಿದ್ದವು. ಅರಸನ ಸವಾರಿಯು ದರ್ಬಾರದ ಬಾಗಿಲಿಗೆ ಬರುವದರೊಳಗಾಗಿ ರಾಮರಾಜನೂ, ಆತನ ಬಂಧು–ಮಿತ್ರರೂ ತಮ್ಮ ಆನೆಗಳನ್ನಿಳಿದು, ಅರಸನನ್ನು ಇದಿರ್ಗೊಂಡು ಕರಕೊಂಡು ಹೋಗುವದಕ್ಕಾಗಿ ಮುಂಗಡ ಬಂದು ನಿಂತಿದ್ದರು. ದ್ವಾರದಲ್ಲಿಯೇ ಮಹಾರಾಜರ ಪಾದವಂದನವೂ, ಪ್ರೋಕ್ಷಣವೂ ಆದಮೇಲೆ, ಮುಜುರೆಗಳನ್ನು ಸ್ವೀಕರಿಸುತ್ತ ಮಹಾರಾಜರು ಸಿಂಹಾಸನಾರೂಢರಾದರು. ಆಮೇಲೆ ಬಂದವರ ಯಾದಿಯನ್ನು ಓದಹತ್ತಿದರು. ಅವರವರ ಹೆಸರು ಬಂದಬಂದಂತೆ, ಅವರವರು ಎದ್ದುನಿಂತು ವಿನಯದಿಂದ ಎದ್ದು ನಿಂತು ಅಚ್ಯುತರಾಯನನ್ನು ನಮಿಸಿ ರಾಮರಾಜನ ಅಭಿನಂದನ ಮಾಡುತ್ತಲಿದ್ದರು. ಇದರಂತೆಯೇ ಮುಸಲ್ಮಾನ ಬಾದಶಹರ ವಕೀಲರೂ ಮಾಡಿದರು. ರಾಮರಾಜನು ದರ್ಬಾರದ ಈ ಪರಮ ವೈಭವವನ್ನು ನೋಡಿ, ಪರಮಾನಂದಪಟ್ಟನು. ಆಮೇಲೆ ಅವರವರ ಮಾನಮರ್ಯಾದೆಗಳಂತೆ ಅವರವರಿಗೆ ಉಡುಗರೆಗಳೂ ಕೊಡಲ್ಪಟ್ಟವು. ರಾಮ ರಾಜನ ಮನೋದಯವು ಈ ಕಾಲದಲ್ಲಿ ಪೂರ್ಣವಾಗಿ ಸಫಲವಾಯಿತು. ಅಚ್ಯುತರಾಯನ ಕಾಲದಲ್ಲಿ ವಿಜಯನಗರದ ರಾಯರು ವಿಜಾಪುರದ ಬಾದಶಹನಿಗೆ ಸಣ್ಣಾಗಿ ನಡೆದಾಗ್ಯೂ, ಅವರ ವೈಭವ ಸಾಮರ್ಥ್ಯಗಳು ಯಥಾಸ್ಥಿತವಾಗಿರುತ್ತವೆಂತಲೂ, ರಾಮರಾಜನು ಆ ರಾಜ್ಯದ ಪುರಸ್ಕರ್ತನಾಗಿರುವ ತನಕ, ಅವು ಅಭಿವೃದ್ಧಿಯಾಗುತ್ತ ಹೋಗುವದರಲ್ಲಿ ಸಂಶಯವಿಲ್ಲೆಂತಲೂ, ಮುಸಲ್ಮಾನ ಬಾದಶಹರ ವಕೀಲರೇ ಮೊದಲಾದವರು ತಿಳಕೊಂಡರು. ದರ್ಬಾರದ ಈ ಎಲ್ಲ ಪ್ರಕಾರವನ್ನು ನೋಡಿ ಮುಸಲ್ಮಾನ ವಕೀಲರು ಚಕಿತರಾಗಿ, ರಾಮರಾಜನ ಆಳಿಕೆಯ ಕಾಲದಲ್ಲಿಯಂತು ತಮ್ಮ ಬೇಳೆಯು ಬೇಯಲಿಕ್ಕಿಲ್ಲೆಂದು ತಿಳಿದು, ಅದರಂತೆ ತಮ್ಮ ತಮ್ಮ ಬಾದಶಹರಿಗೆ ತಿಳಿಸಿದರು.

ರಾಮರಾಜನು ವಿಜಯನಗರದ ರಾಜ್ಯದಲ್ಲಿ ವ್ಯವಹರಿಸಿದ ಕಾಲವು ಬಹು ದೀರ್ಘವಾದದ್ದು. ಆತನ ಆಳಿಕೆಯ ಆರಂಭವು ವಿಜಯನಗರ ರಾಜ್ಯದ ಅತ್ಯುತ್ಕರ್ಷದ ಆರಂಭವಾಗಿದ್ದು ಆತನ ಆಳಿಕೆಯ ಸಮಾಪ್ತಿಯು ಆ ರಾಜ್ಯದ ವಿಧ್ವಂಸದ ಪರಮಾವಧಿಯಾಗಿರುವದು. ಆ ವಿಧ್ವಂಸದ ಬೀಜವನ್ನು ಆತನು ತನ್ನ ತಾರುಣ್ಯದಲ್ಲಿ ಬಿತ್ತಿ ಅದರ ಘಾತಕಫಲವನ್ನು ವೃದ್ಧಾಪ್ಯದಲ್ಲಿ ಭೋಗಿಸಿದನು. ಆತನ ದೀರ್ಘ ಕಾಲದ ಆಳಿಕೆಯಲ್ಲಿ ಬಾಮನೀರಾಜ್ಯದ ನಾಲ್ಕು ಶಾಖೆ ಗಳಲ್ಲಿಯೂ ಇಬ್ಬರಿಬ್ಬರಾದರೂ ಬಾದಶಹರು ಆಗಿ ಹೋದರು. ರಾಮರಾಜನ ತಂತ್ರಗಳು ಕೃಷ್ಣದೇವರಾಯರ ಮರಣದಿಂದ, ಅಂದರೆ ೧೫೩೦ನೇ ಇಸವಿಯಿಂದ ಆರಂಭವಾದವು. ೧೫೩೦ ರಿಂದ ೧೫೬೫ನೇ ಇಸವಿಯವರೆಗೆ ೧೩ ವರ್ಷಗಳಲ್ಲಿ ಆತನು ಕೆಲವು ವರ್ಷಗಳನ್ನು ಅಜ್ಞಾತ ವಾಸದಲ್ಲಿಯೂ, ಕೆಲವು ವರ್ಷಗಳನ್ನು ಕುಟಿಲ ತಂತ್ರರಚನೆಯಲ್ಲಿಯೂ ಕಳೆದನು. ಅಚ್ಯುತ ರಾಯನು ಮರಣ ಹೊಂದಿದ ನಂತರ ಆತನ ಅಣ್ಣನ ಮಗನಾದ ಸದಾಶಿವರಾಯನನ್ನು ರಾಮರಾಜನು ಪಟ್ಟಕ್ಕೆ ಕುಳ್ಳಿರಿಸಿದನು. ಈ ಕೆಲಸದಲ್ಲಿ ರಾಮರಾಜರ

ಬಂಧುಗಳಾದ ತಿರುಮಲನೂ, ವೆಂಕಟಾದ್ರಿಯೂ ಒಳಿತಾಗಿ ಸಹಾಯಮಾಡಿದರು. ಸದಾಶಿವರಾಯನು ಸಾಯುವವರೆಗೆ ಈ ಮೂವರ ಕೈಯೊಳಗೆ ಸೆರೆಯಾಳಿನಂತೆ ಜೀವಿಸಿದನು. ಈ ಕಾಲದಲ್ಲಿ ರಾಮರಾಜನೇ ವಿಜಯನಗರದ ನಿಜವಾದ ರಾಜನಾಗಿದ್ದನು; ಆದರೆ ಆತನು ತನ್ನನ್ನು ''ಮಹಾರಾಜನೆ''ಂದಾಗಲಿ, ''ಸಾಮ್ರಾಟನೆ''ಂದಾಗಲಿ ಕರೆಸಿಕೊಳ್ಳದೆ, ''ಮಹಾಮಂಡಲೇಶ್ವರ'' ನೆಂಬ ಕಡಿಮೆ ಪ್ರತಿಯ ಹೆಸರಿನಿಂದಲೇ ಕರೆಸಿಕೊಳ್ಳಹತ್ತಿದನು. ವರ್ಷೆರಡು ವರ್ಷಗಳಿಗೊಮ್ಮೆ ಅಥವಾ ನಾಲ್ಕು ವರ್ಷಗಳಿಗೊಮ್ಮೆ ಯಾವಾಗಾದರೂ ದರ್ಬಾರ ನೆರೆಯಿಸಿ, ಆಗ ಸದಾಶಿವರಾಯನನ್ನು ಸಿಂಹಾಸನದ ಮೇಲೆ ಕೂಡ್ರಿಸಿ, ಎಲ್ಲ ಮುಖ್ಯ ಮರ್ಯಾದೆಗಳನ್ನು ಆತನಿಗೇ ಕೊಡಿಸುತ್ತಿದ್ದನು. ಇಸವಿ ಸನ್ ೧೫೪೩ರಿಂದ ಅಂದರೆ, ತನ್ನ ನಿಜವಾದ ಆಳಿಕೆಗೆ ಆರಂಭವಾದಂದಿನಿಂದ ರಾಮರಾಜನು ವಿಜಯನಗರದ ರಾಜ್ಯದ ಉತ್ಕರ್ಷವನ್ನು ಮಾಡಲಾರಂಭಿಸಿದನು. ಆತನು ವಿಜಾಪುರದ ಇಬ್ರಾಹಿಮ ಆದಿಲಶಹನಿಗೂ, ಗೋವಳಕೊಂಡದ ಕುತುಬಶಹನಿಗೂ ಬಹಳ ತ್ರಾಸು ಕೊಡಹತ್ತಿದನು. ವಿಜಾಪುರದ ಆದಿಲಶಹನ ಮೇಲಂತು ಆತನ ಸಿಟ್ಟು ಇದ್ದೇ ಇತ್ತು, ಆತನ ಸೇಡು ತೀರಿಸಿಕೊಳ್ಳುವ ಸಂಧಿಯನ್ನು ರಾಮರಾಜನು ನೋಡುತ್ತಿದ್ದನು. ಈ ಸಂಧಿಯನ್ನು ಇಬ್ರಾಹಿಮ ಆದಿಲಶಹನೇ ಒದಗಿಸಿಕೊಟ್ಟನು. ಆತನು ಗೋವಳಕೊಂಡದ ಬಾದಶಹನ ರಾಜ್ಯವನ್ನು ಕಸಿದುಕೊಂಡು, ತನ್ನ ರಾಜ್ಯವನ್ನು ಬೆಳಿಸುವ ಇಚ್ಛೆಯಿಂದ ರಾಮರಾಜನ ಸಹಾಯವನ್ನು ಬೇಡಿದನು. ಆಗ ರಾಮರಾಜನು ಆದಿಲಶಹನಿಗೆ ಸಹಾಯಮಾಡಿ ತನ್ನ ರಾಜ್ಯದೊಳಗಿನ ಆತನ ವಕೀಲನನ್ನು ತಿರುಗಿ ಕಳುಹಿ, ಕುಂಜವನವನ್ನು ತನ್ನ ಕೈಯಲ್ಲಿ ತಕ್ಕೊಂಡನು. ಹೀಗೆ ಮುಸಲ್ಮಾನರ ನಾಲ್ವರು ಬಾದಶಹರಲ್ಲಿ ಕಲಹವನ್ನುಂಟು ಮಾಡಿ, ತಾನು ಒಮ್ಮೆ ಒಬ್ಬರಿಗೆ, ಮತ್ತೊಮ್ಮೆ ಮತ್ತೊಬ್ಬರಿಗೆ ಸಹಾಯ ಮಾಡುತ್ತ ರಾಮರಾಜನು ಬಲಿಷ್ಠನಾಗಹತ್ತಿದನು. ಮುಂದೆ ೧೫೫೭ರಲ್ಲಿ ಇಬ್ರಾಹಿಮ ಆದಿಲಶಹನು ಮರಣಹೊಂದಲು, ವಿಜಾಪುರದಲ್ಲಿ ಅಲ್ಲೀ ಆದಿಲಶಹನ ಆಳಿಕೆಗೆ ಆರಂಭವಾಯಿತು.

ಅಲೀ ಆದಿಲಶಹನು ವಿಜಾಪುರದ ಸಿಂಹಾಸನವೇರಿದ ಬಳಿಕ ಆತನಿಗೂ ಅಹಮ್ಮದನಗರದ ಹುಸೇನ ನಿಜಾಮಶಹನಿಗೂ ದ್ವೇಷವುಂಟಾಯಿತು. ತನ್ನೊಬ್ಬನಿಂದ ನಿಜಾಮಶಹನ ಪಾರಿಪತ್ಯ ಮಾಡುವದಾಗದೆಂದು ತಿಳಿದು, ಅಲೀ ಆದಿಲಶಹನು ರಾಮರಾಜನ ಸಹಾಯವನ್ನು ಕೇಳಿಕೊಂಡನು. ಅದಕ್ಕೆ ರಾಮರಾಜನು ಸಂತೋಷದಿಂದ ಒಡಂಬಟ್ಟು ಅಲ್ಲೀಗೆ ಸಹಾಯ ಮಾಡಿದನು. ಈ ಯುದ್ಧವು ೧೫೫೮ರಲ್ಲಿ ಆಯಿತು. ಈ ಪ್ರಸಂಗದಲ್ಲಿ ಅಲ್ಲಿ ಆದಿಲಶಹನೂ, ರಾಮರಾಜನೂ ಕೂಡಿ ಅಹಮ್ಮದ ನಗರ ರಾಜ್ಯದಲ್ಲಿ ಮಾಡಿದ ಅನರ್ಥವನ್ನು ವರ್ಣಿಸಲಾಸಲ್ಲ, ಪರಿಂಡೆಯಿಂದ ಜುನ್ನರದವರೆಗೆ, ಮತ್ತು ಅಹಮ್ಮದನಗರದಿಂದ ದೌಲತಾಬಾದದವರೆಗೆ ಒಂದು ಹಳ್ಳಿಯಲ್ಲಿ ಕೂಡ ಜನವಸತಿಯು ಉಳಿಯದಂತೆ ರಾಜ್ಯವನ್ನು ಬೇಚಿರಾಖು ಮಾಡಿದರು. ಮುಂದೆ ಬರಬರುತ್ತ ಅಲ್ಲಿ ಆದಿಲಶಹನಿಗೂ ರಾಮರಾಜನಿಂದ ತ್ರಾಸವಾಗಹತ್ತಿತು. ರಾಮರಾಜನು ಎಲ್ಲ ಮುಸಲ್ಮಾನ ಬಾದಶಹರಿಗೂ ತಲೆಭಾರವಾದನು.

ಆತನ ಉತ್ಕರ್ಷವನ್ನು ಆ ಬಾದಶಹರು ಸೈರಿಸದಾದರು. ಒಂದು ಸಾರೆ ಸಹಾಯ ಮಾಡಿದ್ದಕ್ಕಾಗಿಯೇ ಆದಿಲಶಹನು ರಾಮರಾಜನಿಗೆ ಗೋವಳಕೊಂಡ, ಹಾನಗಲ್ಲ, ಗಂಟೂರ ಕೋಟೆಗಳನ್ನು ಕೊಡಬೇಕಾಯಿತು. ತಮ್ಮತಮ್ಮೊಳಗೆ ಜಗಳಾಡುತ್ತಿರುವದರಿಂದ ಈ ಹಿಂದು ರಾಜನು ಇಷ್ಟು ಬಲಿಷ್ಠನಾದನು; ನಾವೇ ಒಕ್ಕಟ್ಟಿನಿಂದ ಇದ್ದರೆ ಈತನ ನಾಶಮಾಡಲಿಕ್ಕೆ ಅವಕಾಶವು ಬೇಡವೆಂದು ಎಲ್ಲ ಮುಸಲ್ಮಾನ ಬಾದಶಹರು ಭಾವಿಸಿ, ತಮ್ಮೊಳಗೆ ಒಕ್ಕಟ್ಟು ಮಾಡಿಕೊಳ್ಳಲಿಚ್ಛಿಸಿದರು. ತಾವು ಒಕ್ಕಟ್ಟು ಬೆಳೆಸಿಕೊಳ್ಳದಿದ್ದರೆ ತಮ್ಮ ರಾಜ್ಯಗಳು ರಸಾತಳಕ್ಕೆ ಇಳಿಯುವದೇ ನಿಶ್ಚಯವೆಂದು ಅವರು ತಿಳಿದರು. ಅವರಲ್ಲಿ ವಿಶೇಷವಾಗಿ ಅಲ್ಲೀ ಆದಿಲಶಹನ ಮನಸ್ಸಿಗೆ ರಾಮರಾಜನ ಉತ್ಕರ್ಷದ ಚಿಂತೆಯು ಬಹಳವಾಗಿ ಹತ್ತಿ ಆತನು ತಮ್ಮೊಳಗೆ ಒಕ್ಕಟ್ಟು ಬೆಳಿಸುವ ಕೆಲಸದಲ್ಲಿ ಮುಂದುವರಿದು ಪ್ರಯತ್ನ ಮಾಡಹತ್ತಿದನು. ಎರಡು ಸಾರೆ ಆತನು ರಾಮರಾಜನ ಸಹಾಯವನ್ನು ಪಡೆದವನಾದ್ದರಿಂದ, ರಾಮರಾಜನ ಸಾಮರ್ಥ್ಯವೂ, ಆತನ ಸೊಕ್ಕೂ ಅಲೀ ಆದಿಲಶಹನಿಗೆ ಗೊತ್ತಾಗಿದ್ದವು. ಅಲೀ ಆದಿಲಶಹನು ತನ್ನ ವಿಶ್ವಾಸದ ಸರದಾರನಾದ ಕಿಷ್ವರಖಾನನೊಡನೆ ಆಲೋಚಿಸಿ, ಎರಡು ಬಗೆಯ ತಂತ್ರಗಳನ್ನು ಹೂಡಿದನು. ಆ ತಂತ್ರಗಳಲ್ಲಿ ಒಂದನೆಯದು, ಉಳಿದ ಮೂವರು ಬಾದಶಹರ ಕಡೆಗೆ ವಕೀಲರನ್ನು ಕಳಿಸಿ ನಾವೆಲ್ಲರೂ ಕೂಡಿ ರಾಮರಾಜನನ್ನು ನಾಶಗೊಳಿಸಬೇಕೆಂದು ಆಲೋಚಿಸುವದು. ರಾಮರಾಜನ ಕಡೆಗೆ ವಕೀಲನನ್ನು ಕಳಿಸಿ, ನಾನೂ ನೀನೂ ಕೂಡಿ ಉಳಿದ ಮೂವರು ಮುಸಲ್ಮಾನ ಬಾದಶಹರನ್ನು ನಾಶಗೊಳಿಸಿ ರಾಜ್ಯವನ್ನು ಹಂಚಿಕೊಳ್ಳೋಣವೆಂದು ಆಲೋಚಿಸುವದು ಎರಡನೆಯ ತಂತ್ರವು. ಬಾದಶಹನು ಹಲವು ಉಪಾಯಗಳಿಂದ ಮುಸಲ್ಮಾನ ಬಾದಶಹರಲ್ಲಿ ಒಕ್ಕಟ್ಟು ಬೆಳಿಸುವದಕ್ಕಾಗಿ ೧೫೬೪ರಲ್ಲಿ ಕಿಷ್ವರಖಾನನನ್ನು ನಿಯಮಿಸಿ ಆತನಿಗೆ ಸಂಪೂರ್ಣ ಅಧಿಕಾರ ಕೊಟ್ಟು ಕಳಿಸಿದನು.

ಇತ್ತ ರಾಮರಾಜನ ಕಡೆಗೆ ಅಲೀ ಆದಿಲಶಹನು ಒಬ್ಬ ವಕೀಲನನ್ನು ಕಳಿಸಿ, ನಾವಿಬ್ಬರೂ ಒಂದಾಗಿ ಉಳಿದ ಮುಸಲ್ಮಾನ ರಾಜ್ಯಗಳನ್ನು ನಷ್ಟಪಡಿಸೋಣ, ಈ ಕೆಲಸವು ಪೂರ್ಣವಾಗುವವರೆಗೆ ನಮ್ಮ ಒಬ್ಬ ವಕೀಲನನ್ನು ನೀವು ನಿಮ್ಮ ರಾಜಧಾನಿಯಲ್ಲಿ ಇಟ್ಟುಕೊಳ್ಳಬೇಕು, ಎಂದು ಹೇಳಿ ಕಳಿಸಿದನು. ಅದಕ್ಕೆ ರಾಮರಾಜನು ಸಂತೋಷದಿಂದ ಒಪ್ಪಿಕೊಂಡು, ವಕೀಲನಿಗೆ ಇರಲಿಕ್ಕೆ ಈ ಸಾರೆ ತಾನಾಗಿಯೇ ಕುಂಜವನವನ್ನು ಕೊಟ್ಟನು. ಆ ವಕೀಲನು ಬಂದು ಕುಂಜವನದಲ್ಲಿ ಇರಹತ್ತಿದನಂತರ ಕೆಲವು ದಿನಗಳ ಮೇಲೆ ರಾಮರಾಜನು ದರ್ಬಾರ ನೆರೆಸುವ ದಿವಸವು ಬಂದಿತು. ಅಂದಿನ ದರ್ಬಾರಕ್ಕೆ ವಿಜಾಪುರದ ಹೊಸ ವಕೀಲನೂ ಬಂದಿದ್ದನು. ರಾಮರಾಜನು ಆ ವಕೀಲನ ಸುಂದರ ರೂಪವನ್ನೂ, ತೇಜಸ್ಸನ್ನೂ, ತಾರುಣ್ಯವನ್ನೂ ನೋಡಿ ಸಮಾಧಾನಪಟ್ಟನು. ದರ್ಬಾರದ ಕೆಲಸಕ್ಕೆ ಆರಂಭವಾಗಲು, ಎಲ್ಲರೂ ಅತ್ಯಂತ ವಿನಯದಿಂದ ನಡಕೊಂಡರು; ವಿಜಾಪುರದ ತರುಣ ವಕೀಲನು ಮಾತ್ರ ಹಾಗೆ ನಡೆಯಲಿಲ್ಲ. ಆತನ ಸೊಕ್ಕಿನ ನಡತೆಯನ್ನು ನೋಡಿ ಎಲ್ಲರಿಗೂ ಆಶ್ಚರ್ಯವಾಯಿತು. ಇದಕ್ಕಾಗಿ ರಾಮರಾಜನಿಗೂ ಸಿಟ್ಟುಬಂದಿತು. ಆ ತರುಣ ಸರದಾರನ ವಿಷಯವಾಗಿ ರಾಮರಾಜನ

ಮನಸ್ಸಿನಲ್ಲಿ ಆರಂಭಕ್ಕೆ ಉತ್ಪನ್ನವಾಗಿದ್ದ ಆದರವು ನಷ್ಟವಾಗಿ, ತಿರಸ್ಕಾರವು ಉತ್ಪನ್ನವಾಯಿತು. ಅದೇ ಕಾಲಕ್ಕೆ ಆ ತರುಣ ವಕೀಲನನ್ನು ಆತನ ಉದ್ಧಟತನದ ಸಲುವಾಗಿ ಎಚ್ಚರಗೊಳಿಸ ಬೇಕೆಂದು ರಾಮರಾಜನು ಮಾಡಿದ್ದನು; ಆದರೆ ಇನ್ನೂ ತರುಣನಾದ್ದರಿಂದ ಇವನಿಗೆ ದರ್ಬಾರದ ನಡತೆಗಳು ಗೊತ್ತಿರಲಿಕ್ಕಿಲ್ಲೆಂತಲೂ; ಇಂಥ ತರುಣನನ್ನು ವಕೀಲನನ್ನಾಗಿ ಕಳಿಸಿದ್ದರಲ್ಲಿ ಬಾದಶಹನದೇ ತಪ್ಪೆಂತಲೂ ತಿಳಿದು, ಈ ಸಂಬಂಧವಾಗಿ ಬಾದಶಹನನ್ನೇ ಬರೆದು ಕೇಳೋಣ ವೆಂದು ಆತನು ಸುಮ್ಮನಾದನು. ದರ್ಬಾರದ ಕಾರ್ಯವು ಮುಗಿದು, ಎಲ್ಲರೂ ತಮ್ಮ ತಮ್ಮ ಸ್ಥಳಗಳಿಗೆ ಹೊರಟುಹೋದರು. ವಿಜಾಪುರದ ತರುಣ ವಕೀಲನು ತನ್ನ ಕುಂಜವನಕ್ಕೆ ಹೋದನು. ಆತನು ದರ್ಬಾರದಲ್ಲಿ ಔದ್ಧತ್ಯದಿಂದ ನಡಕೊಂಡಿದ್ದಕ್ಕಾಗಿ ಆತನ ಜನರು ಆತನನ್ನು ಬಹಳವಾಗಿ ಶ್ಲಾಘಿಸಿದರು. ಅವರಲ್ಲಿ ಒಬ್ಬ ಸರದಾರನು ಆ ವಕೀಲನನ್ನು, ಅಂದರೆ ರಣಮಸ್ತಖಾನನನ್ನು ಕುರಿತು—''ನೀವು ಇಂದು ದರ್ಬಾರದಲ್ಲಿ ನಡಕೊಂಡದ್ದು ನಮ್ಮ ಬಾದಶಹರ ಗೌರವಕ್ಕೆ ಒಪ್ಪುವಹಾಗಿತ್ತು. ನಮ್ಮ ಬಾದಶಹರು ವಿಜಯನಗರದ ಮಾಂಡಲೀಕರಲ್ಲ; ವಿಜಯನಗರದ ರಾಯರ ಸರಿ ಜೋಡಿಯವರು; ಅವರು ವಿಜಯನಗರದ ರಾಜರಿಗೆ ಬಗ್ಗಿ ಕುರ್ನಿಸಾತ ಮಾಡಲವಶ್ಯವಿಲ್ಲ, ಈ ಮಾತು ದರ್ಬಾರದೊಳಗಿನವರಿಗೆಲ್ಲ ಇಂದು ಚೆನ್ನಾಗಿ ಗೊತ್ತಾಯಿತು. ನಿಮ್ಮ ನಡತೆಯನ್ನು ನೋಡಿ ದರ್ಬಾರದವರೆಲ್ಲರಿಗೂ ಸಿಟ್ಟು ಬಂದಿತು; ಆದರೆ ಸಿಟ್ಟು ಬಂದು ಮಾಡುತ್ತಾರೇನು? ಎಲ್ಲರು ಮುಂಗೈ ಕಡಿಯುತ್ತ ಸುಮ್ಮನೆ ಕುಳಿತುಕೊಂಡರು! ಒಬ್ಬೊಬ್ಬರು ಇಷ್ಟಿಷ್ಟು ಗಡುತರ ಕಣ್ಣು ತೆರೆದು ನಿಮ್ಮನ್ನು ನೋಡಹತ್ತಿದರು; ಆದರೆ ನೋಡಿ ಮಾಡುವದೇನು? ರಾಮರಾಜನಾದರೂ ಕಣ್ಣು ಕೆಕ್ಕರಿಸಿ ಕೆಕ್ಕರಿಸಿ ನಿಮ್ಮನ್ನು ನೋಡುತ್ತಿದ್ದನು; ಆದರೆ ಕಣ್ಣು ಹರಿಯುವ ಹಾಗೆ ಕೆಕ್ಕರಿಸಿ ನೋಡಿದರೂ ಆಗತಕ್ಕದ್ದೇನು?'' ಎಂದು ನುಡಿದು ರಣಮಸ್ತಖಾನನ ಸ್ತೋತ್ರ ಮಾಡಿದನು. ಅದನ್ನು ಕೇಳಿ ರಣಮಸ್ತಖಾನನು ಬಹಳ ಸಮಾಧಾನ ಪಟ್ಟು, ಆ ಸರದಾರರನ್ನು ಕುರಿತು—''ನಾವು ಬಾದಶಹನ ಪ್ರತಿನಿಧಿಗಳಾಗಿ ಬಂದಿರುವೆವು. ಪ್ರತ್ಯಕ್ಷ ಬಾದಶಹರು ಬಂದಾಗ ನಡಕೊಳ್ಳುವಂತೆ ನಾವು ಇಲ್ಲಿ ನಡಕೊಳ್ಳಬೇಕಾಗುವದು; ಮತ್ತು ವಿಜಯನಗರದ ರಾಯರು ಬಾದಶಹರಿಗೆ ಮಾನಕೊಡುವಂತೆ ನಮಗೆ ಮಾನಕೊಡಲಿಕ್ಕೇಬೇಕು. ಆ ರಾಮ ರಾಜನ ಸೊಕ್ಕು ತಲೆಗೇರಿರುವದು. ತನ್ನ ರಾಜ್ಯದ ಸುತ್ತುಮುತ್ತಲಿನ ಮುಸಲ್ಮಾನ ರಾಜ್ಯಗಳನ್ನು ಮುರಿದು ಮಹಮ್ಮದ ಪೈಗಂಬರರ ನಿಶಾನಿಯು ಶೋಭಿಸುತ್ತಿದ್ದಲ್ಲಿ, ತಮ್ಮ ಹಿಂದುಗಳ ನಿಶಾನೆಯನ್ನು ಮೆರಿಸಬೇಕೆಂದು ಆತನು ಮಾಡಿರುವನು. ಒಳ್ಳೇದು ನೋಡೋಣ, ಆತನ ಇಚ್ಛೆಯು ಪೂರ್ಣವಾಗುತ್ತದೋ ನಮ್ಮ ಇಚ್ಛೆಯು ಪೂರ್ಣವಾಗುತ್ತದೋ,'' ಅನ್ನಲು, ಆ ಸರದಾರನೂ ''ಅಲ್ ಬತ್, ನಮ್ಮ ಇಚ್ಛೆಯೇ ಪೂರ್ಣವಾಗುವದು, ಅದರಲ್ಲಿಯೂ ಈ ಕಾರ್ಯವು ನೀವು ವಕೀಲರಾಗಿರುವಾಗಲೇ ಆಗುವದೆಂದು ನಮಗೆ ತೋರುತ್ತದೆ. ನಿಮ್ಮ ಯೋಗ್ಯತೆಯನ್ನರಿತೇ ಬಾದಶಹರು ಹಲವು ಅನುಭವಿಕರನ್ನು ಹಿಂದಕ್ಕೆ ದೂಡಿ ನಿಮ್ಮನ್ನು ಇಲ್ಲಿಗೆ ವಕೀಲನನ್ನಾಗಿ ಕಳಿಸಿರುವರು. ನಿಮ್ಮ ಮಾತನ್ನು ಬಾದಶಹರು ಅಕ್ಷರಶಃ ನಡಿಸುವರು. ಈ

ಹೊತ್ತಿಗೆ ಬಾದಶಹರ ನಂಬಿಗೆಯು ನಿಮ್ಮ ಮೇಲೆ ಇದ್ದಷ್ಟು ಬೇರೆ ಯಾರ ಮೇಲೆಯೂ ಇರುವುದಿಲ್ಲ'' ಎಂದನು.

ಈ ಸ್ತುತಿಪರ ಭಾಷಣದಿಂದ ಆ ತರುಣ ರಣಮಸ್ತಖಾನನಿಗೆ ಬಹಳ ಸಂತೋಷ ವಾಯಿತು. ಆದರೆ ಅವನು ವಿನಯದಿಂದ ಆ ಸರದಾರನನ್ನು ಕುರಿತು—''ಬಾದಶಹನು ಕೈ ಹಿಡಿದರೆ ಬೇಕಾದವನು ಬೇಕಾದಂಥ ದೊಡ್ಡ ಪದವಿಗೇರಬಹುದು. ಈ ಅಧಿಕಾರದ ಮೇಲೆ ನನ್ನನ್ನು ಕಳಿಸುವಷ್ಟು ಯೋಗ್ಯತೆಯು ನನ್ನಲ್ಲಿಲ್ಲೆಂಬದು ನನಗೆ ಗೊತ್ತಿರುತ್ತದೆ. ಆದರೆ ಬಾದಶಹರ ಆಜ್ಞೆಯನ್ನು ಮೀರಲಿಕ್ಕೆ ಬರುವದಿಲ್ಲ. ನಮ್ಮ ಕೈಯಿಂದಾದಷ್ಟು ಯತ್ನಿಸಿ, ಬಾದಶಹರ ಹಿತಮಾಡಲು ಶಕ್ಯವಿದ್ದಮಟ್ಟಿಗೆ ಮಾಡಬೇಕು. ಯಾಕೆ ಫಿದಾಹುಸೇನಖಾನ, ನನ್ನ ಮಾತು ಸರಿಯಾದದ್ದಷ್ಟೇ? ನಿಮ್ಮ ಹಾಗು ಈ ಅಲೀ ಇಮಾಮಖಾನರ ಧೈರ್ಯದಿಂದ ನಾನು ಈ ಅಧಿಕಾರವನ್ನು ಪಡೆದಿರುತ್ತೇನೆ. ಇವರಿಬ್ಬರನ್ನು ನನ್ನ ಸಂಗಡ ಕಳಿಸಿದರೆ ಮಾತ್ರ ನಾನು ವಿಜಯನಗರದಲ್ಲಿ ಹೋಗಿ ನಿಂತುಕೊಳ್ಳುವೆನು, ಎಂದು ನಾನು ಬಾದಶಹರ ಮುಂದೆ ಸ್ಪಷ್ಟ ವಾಗಿ ಹೇಳಿದೆನು. ನಾನು ಸುಮ್ಮನೆ ಹಸರಿಗೆ ವಕೀಲನು, ನಿಜವಾದ ವಕೀಲರೂ, ಯೋಗ್ಯ ಆಲೋಚನೆಗಳನ್ನು ಹೇಳುವವರೂ ನೀವೇ. ನಿಮ್ಮಿಬ್ಬರನ್ನು ನಾನು ಹಿರಿಯನೆಂದು ಭಾವಿಸಿ ರುವೆನು'' ಎಂದು ಹೇಳಿದನು. ರಾತ್ರಿಯಾದದ್ದರಿಂದ ಎಲ್ಲರೂ ಹೋರಟಹೋದರು. ತರುಣ ರಣಮಸ್ತಖಾನನ ಮನಸ್ಸಿನಲ್ಲಿ ನಾನು ಬಾದಶಹನ ಕಾರ್ಯವನ್ನು ಸಾಧಿಸಿ ಹ್ಯಾಗೆ ಆತನ ಪ್ರೀತಿಗೆ ಪಾತ್ರನಾದೇನೆಂಬದೊಂದೇ ಮಾತು ಯಾವಾಗಲೂ ಕಟಿಯುತ್ತಿತ್ತು. ದರ್ಬಾರ ದಲ್ಲಿ ತಾನು ಉದ್ಧಟತನದಿಂದ ನಡೆದದ್ದಕ್ಕಾಗಿ ತನ್ನ ಜನರು ಶ್ಲಾಘಿಸಿದ್ದರಿಂದ, ಇಂದು ಆತನಿಗೆ ಬಹಳ ಸಂತೋಷವಾಗಿತ್ತು, ತಾನು ಕಡೆತನಕ ಹೀಗೆಯೇ ಶ್ಲಾಘನೆಗೆ ಹ್ಯಾಗೆ ಪಾತ್ರನಾಗುತ್ತ ಹೋದೇನೆಂಬ ಚಿಂತೆಯಿಂದ ಆತನಿಗೆ ನಿದ್ದೆ ಬರಲೊಲ್ಲದು. ಆತನ ಮನಸ್ಸಿನಲ್ಲಿ ಒಂದರ ಹಿಂದೊಂದು ಕಲ್ಪನಾತರಂಗಗಳು ಉತ್ಪನ್ನವಾಗಹತ್ತಿದವು. ಈ ಕಲ್ಪನಾ ತರಂಗಗಳ ಅಲೆದಾಟದಿಂದ, ಅಂದು ಬೆಳತನಕ ಆತನಿಗೆ ನಿದ್ದೆ ಬರಲಿಲ್ಲವೆಂದು ಹೇಳಬಹುದು. ಬೆಳಗು ಹರಿಯುತ್ತಿರಲು, ಆತನು ಸ್ವಲ್ಪ ಕಣ್ಣಿಗೆ ಕಣ್ಣು ಹಚ್ಚಿದನು. ನಿದ್ದೆ ಹತ್ತಿ ಇನ್ನೂ ಎರಡು ತಾಸು ಪೂರ್ಣವಾಗಿದ್ದಿಲ್ಲ; ಅಷ್ಟರಲ್ಲಿ ಯಾರೊ ದೊಡ್ಡ ಧ್ವನಿಯಿಂದ ತನ್ನನ್ನು ಕೂಗಿ ಎಬ್ಬಿಸುವಂತೆ ಆತನಿಗೆ ಭಾಸವಾಗಿ ಆತನು ಎಚ್ಚತ್ತು ಲಗುಬಗೆಯಿಂದ ಹೋಗಿ ಬಾಗಿಲು ತೆರೆದನು. ಆಗ ಆತನ ಸಿಪಾಯಿಯು ಸಾಷ್ಟಾಂಗ ನಮಸ್ಕಾರ ಹಾಕಿ, ಕೈಯನ್ನು ರುಮಾಲದಿಂದ ಕಟ್ಟಿಕೊಂಡು ಹಾಗೆ ಮಾಡಿ—''ಗರೀಜಿ ಪರವರ, ತಮ್ಮನ್ನು ಸುಖ ನಿದ್ರೆಯಿಂದ ಎಚ್ಚರಗೊಳಿಸಿದ ಉದ್ಧಟತನಕ್ಕಾಗಿ ಈ ದಾಸನನ್ನು ಕ್ಷಮಿಸುವದಾಗಬೇಕು. ತಮ್ಮ ಪರಮ ಪೂಜ್ಯ ಮಾತೃಶ್ರೀಯವರ ಅಪ್ಪಣೆಯಿಂದ ಹೀಗೆ ಮಾಡಿದೆನು. ಅವರು ತಮ್ಮನ್ನು ಬೇಗನೆ ಕರೆಯ ಹೇಳಿದ್ದಾರೆ'' ಅನ್ನಲು, ರಣಮಸ್ತಖಾನನು—ಏನು! ನಮ್ಮ ಮಾಸಾಹೇಬರು ನನ್ನನ್ನು ಕರೆದಿದ್ದಾರೆಯೇ? ಹೋಗು ಬೇಗನೆ ಬಿಸಿನೀರು ತಕ್ಕೊಂಡು ಬಾ. ಮೋರೆ ತೊಳಕೊಂಡು ನಮಾಜು ಮಾಡಿ ಬರುವೆನು,

ಎಂದು ಹೇಳಿದನು. ಆಗ ಸಿಪಾಯಿಯು ಓಡುತ್ತಹೋಗಿ ಅಪ್ಪಣೆಯಂತೆ ಬಿಸಿ ನೀರು ತಂದು ರಣಮಸ್ತಖಾನನ ಕೈಗೂ ಕಾಲಿಗೂ ಹಾಕಿ ಆತನ ಕೈಕಾಲುಗಳನ್ನು ಒರಸಿದನು. ರಣ ಮಸ್ತಖಾನನು ಮೋರೆಯನ್ನು ಒರಸಿಕೊಂಡು, ನಮಾಜುಮಾಡಿ ತಾಯಿಯ ಬಳಿಗೆ ಹೋದನು.

## ಜಾಜ್ವಲ್ಯವೃತ್ತಿಯು

ರಣಮಸ್ತಖಾನನ ತಾಯಿಯು ಕುಂಜವನದ ಬಂಗಲೆಯೊಳಗಿನ ಒಂದು ಕೋಣೆಯಲ್ಲಿ ಒತ್ತಟ್ಟಿಗೆ ಇದ್ದ ಹಾಗೆ ಇದ್ದಳು. ಆಕೆಯ ವಯಸ್ಸು ಸರಾಸರಿ ಐವತ್ತು ವರ್ಷವಿರಬಹುದು; ಆಕೆಯು ಒಬ್ಬ ಸಾಧು ಸ್ತ್ರೀಯಂತೆ ಕಾಲಹರಣ ಮಾಡುತ್ತಿದ್ದಳು. ಒಬ್ಬ ಬಡ ಫಕೀರಿಯು, ಮಸೀದೆಯ ಮುತವಲ್ಲಿಯು ದಯಮಾಡಿ ಕೊಟ್ಟಿದ್ದ ಮಸೀದೆಯ ಒಂದು ಕೋಣೆಯಲ್ಲಿ ಇರುವಂತೆ, ಆಕೆಯು ತನ್ನ ಮಗನ ಬಂಗಲೆಯ ಒಂದು ಕೋಣೆಯಲ್ಲಿ ಇರುತ್ತಿದ್ದಳೆಂದು ಹೇಳಬಹುದು. ಆ ಕೋಣೆಯಲ್ಲಿ ಒಂದು ನವಾರದ ಹೊರಸು ಆ ಹೊರಸಿನ ಮೇಲೆ ಏನೋ ಒಂದು ಚವ್ವಾಳಿಯ ಹಾಗೆ ಒಗೆದದ್ದು; ತಲೆಗಿಂಬಿನ ನಿಟ್ಟಿಗೆ ಚೌರಂಗದ ಮೇಲೆ ಕುರಾಣ, ಹಾಗು ಸಾಧುಸತ್ಪುರುಷರ ಚರಿತ್ರದ ನಾಲ್ಕಾರು ಪುಸ್ತಕಗಳು; ಅಲ್ಲಿಯೇ ಸಮೀಪದಲ್ಲಿ ಒಂದು ಸರ್ವಸಾಧಾರಣವಾದ ಸಮೆಯು; ಕೆಲವು ಹಸರು–ಹಳದಿ ಮಣಿಗಳು ಪೋಣಿಸಿದ ಜಪಮಾಲೆಯು; ನೀರಿನಿಂದ ತುಂಬಿದ ಕೆಲವು ಪಾತ್ರೆಗಳು, ಇವಿಷ್ಟು ಒಡವೆಗಳು ಇದ್ದವು. ಕೋಣೆಯಲ್ಲಿ ಲೋಬಾನವು (ಊದು) ವಿಶೇಷವಾಗಿ ಸುಡಲ್ಪಟ್ಟಿದ್ದರಿಂದ, ಅದರ ವಾಸನೆಯು ಕೋಣೆಯ ತುಂಬ ಇಡಿಗಿತ್ತು, ಕೋಣೆಯ ಹೊರಗೆ ಮೂರು ನಾಲ್ಕು ಜನ ಮುದುಕ–ಮುದುಕಿ ದಾಸಿಯರು ಕುಳಿತಿದ್ದರು. ಹಾಗಲ ಹಣ್ಣಿನಂತೆ ತೀರ ಮುದುಕೆಯಾದ ಒಬ್ಬ ಸ್ತ್ರೀಯು ಕೋಣೆಯೊಳಗೆ ಚೌರಂಗದ ಹತ್ತರ ಕುಳಿತಿದ್ದು, ರಣಮಸ್ತಖಾನನ ತಾಯಿಯು ಪುಸ್ತಕವನ್ನು ಅರ್ಧ ತೆರೆದು ಗಟ್ಟಿಯಾಗಿ ಓದಿ, ಆಕೆಗೆ ಅರ್ಥಮಾಡಿ ಹೇಳುತ್ತಿದ್ದಳು. ಹೀಗಿರುವಾಗ ರಣಮಸ್ತಖಾನನು ಒಳಗೆ ಹೋಗಿ, ಕೂಡಲೆ ಮಾಸಾಹೇಬರನ್ನು ವಿನಯದಿಂದ ನಮಸ್ಕರಿಸಿ–

ರಣಮಸ್ತಖಾನ—ತಮ್ಮ ಅಪ್ಪಣೆಯಂತೆ ಬಂದಿದ್ದೇನೆ. ತಮ್ಮ ಪ್ರಕೃತಿಯು ನೆಟ್ಟಗಿರುವದಷ್ಟೇ? ನಿನ್ನೆ ದರ್ಬಾರದಲ್ಲಿ ನಡೆದ ಸಂಗತಿಯನ್ನು ನಿನ್ನೆ ರಾತ್ರಿಯೇ ಬಂದು ನಿವೇದಿಸತಕ್ಕವನಿದ್ದೆನು; ಆದರೆ ಶೋಧ ಮಾಡಲಾಗಿ ತಾವು ಜಪಮಾಡುತ್ತ ಕುಳಿತಿರುವಿರೆಂದು ಸುದ್ದಿ ಬಂದದ್ದರಿಂದ, ತಮಗೆ ಉಪದ್ರವ ಕೊಡಲಿಕ್ಕೆ ಬರಲಿಲ್ಲ

ಮಾಸಾಹೇಬ—ನೀನು ಬಾರದೆಯಿದ್ದದ್ದು ವಿಹಿತವೇ ಸರಿ; ಆದರೆ ದರ್ಬಾರದ ಸುದ್ದಿಯನ್ನು ಕೇಳದಿದ್ದರೆ ನನಗೆಲ್ಲಿ ಸಮಾಧಾನವಾಗಬೇಕು? ನಾನು ಅನ್ಯರ ಮುಖದಿಂದ ಎಲ್ಲ ವೃತ್ತಾಂತವನ್ನು ಕೇಳಿದ್ದೇನೆ. ನೀನು ಬಹಳ ಒಳ್ಳೆಯ ಕೆಲಸ ಮಾಡಿದೆ. ಬಾದಶಹರ ಗೌರವಕ್ಕೆ ಒಪ್ಪುವಂತೆಯೇ ನೀನು ನಡೆಯಲಿಕ್ಕೆ ಬೇಕು; ಆದರೆ ನಾನು ನಿನ್ನನ್ನು ಈಗ ಕರೆಸಿದ ಕಾರಣವು ಬೇರೆಯಿರುತ್ತದೆ. ಅಹಮ್ಮದನಗರದಿಂದ ವಿಜಾಪುರಕ್ಕೆ ಹೋಗುವವನೊಬ್ಬನು ಸುರ್ಯೋದಯ

ವಾಗುವದಕ್ಕೆ ಮುಂಚಿತವಾಗಿ ಬಂದು, ನನ್ನ ಮುಂದೆ ತನ್ನ ವೃತ್ತಾಂತವನ್ನೆಲ್ಲ ಹೇಳಿದನು. ನಾನು ಆತನಿಗೆ ಅಭಯವನ್ನಿತ್ತು ಕುಳ್ಳಿರಿಸಿರುತ್ತೇನೆ. ನೀನು ಆತನ ಬಾಯಿಂದ ಎಲ್ಲ ಸಂಗತಿಯನ್ನು ಕೇಳಿಕೋ. ಇಂಥವರಿಗೆ ಅಭಯಕೊಡುವದು ನಮ್ಮ ಕರ್ತವ್ಯವಾಗಿರುತ್ತದೆ. ಎಲ್ಲ ಸಂಗತಿಯನ್ನು ಕೇಳಿಕೊಂಡನಂತರ, ನಿನ್ನ ಯೋಗ್ಯತೆಗೆ ಅನುರೂಪವಾಗಿ ನಡೆದುಕೋ. ನೀನು ಹಾಗೆ ನಡೆದು ಕೊಳ್ಳುತ್ತೀಯೆಂಬುದರಲ್ಲಿ ನನಗೆ ಸಂಶಯವಿಲ್ಲ. ನೀನು ಆ ವೃತ್ತಾಂತವನ್ನು ಕೇಳಿಕೊಂಡ ಮೇಲೆ ಸಂತಾಪಗೊಂಡು, ನನ್ನ ಕರ್ತವ್ಯವೆಂದು ತಿಳಿದು, ನೀನು ಅದನ್ನು ಮನಃಪೂರ್ವಕವಾಗಿ ಮಾಡೇ ಮಾಡುವೆ. ಮನುಷ್ಯರಿಗೆ ಎಚ್ಚರವಿಲ್ಲದ ಹಾಗೆ ಆಗಿದೆ, ತಾವು ಮಾಡಿದ್ದೇ ಪ್ರಮಾಣವೆಂದು ಅವರು ತಿಳಿದಿದ್ದಾರೆ! ಅವರಿಗೆ ನ್ಯಾಯವಿಲ್ಲ, ನೀತಿಯಿಲ್ಲ. ಅವರ ಉನ್ಮತ್ತತನವು ತಲೆಗೇರುತ್ತದೆ!

ರಣಮಸ್ತಖಾನ—ಮಾಸಾಹೇಬ, ತಾವು ಎಂದೂ ಸಿಟ್ಟಿನಿಂದ ಒಂದು ಶಬ್ದವನ್ನು ಕೂಡ ಉಚ್ಚರಿಸತಕ್ಕವರಲ್ಲ, ಹೀಗಿದ್ದು ಇಂದು ತಾವು ಇಷ್ಟು ಸಂತಾಪಗೊಳ್ಳಲಿಕ್ಕೆ ಕಾರಣವೇನು? ಯಾರಾದರೂ ತಮ್ಮ ಉಪಮರ್ದ ಮಾಡಿದರೋ, ಅಥವಾ ಯಾರಾದರೂ....

ಮಾಸಾಹೇಬ—ಅಪ್ಪಾ, ನಿನ್ನಂಥ ಸಮರ್ಥ ಮಗನು ಮೂರ್ತಿಮತ್ತಾಗಿ ನನ್ನ ಹತ್ತರ ಇರುತ್ತಿರಲಿಕ್ಕೆ ಅದಾರು ನನ್ನ ಉಪಮರ್ದನಮಾಡುವರು! ಆದರೆ ನನ್ನಂಥ ಬೇರೆ ಒಬ್ಬ ಸ್ತ್ರೀಯು ಅಥವಾ ನಿನ್ನ ಒಡಹುಟ್ಟಿದ ತಂಗಿಯಂತೆ ಇದ್ದ ಒಬ್ಬ ತರುಣೆಯ ಉಪಮರ್ದನ ವಾದರೆ, ನನ್ನ ಉಪಮರ್ದನವಾದ ಹಾಗಾಗಲಿಲ್ಲವೆ? ಅದರ ಪರಿಮಾರ್ಜನವನ್ನು ನಾವು ಮಾಡಿಕೊಳ್ಳ ಲಾಗದೊ? ಅಹಮ್ಮದನಗರದ ಆ ಒಬ್ಬ ಮನುಷ್ಯನು ನೀನು ಬಾದಶಹನ ದೊಡ್ಡ ವಕೀಲನೆಂದು ತಿಳಿದು, ನಿನ್ನ ಮುಂದೆ ತನ್ನ ಸಂಕಟವನ್ನು ದೂರಿಕೊಳ್ಳಲಿಕ್ಕೆ ಬಂದಿದ್ದನು; ಆದರೆ ನೀನು ಇನ್ನೂ ಎದ್ದಿಲ್ಲೆಂದು ಹೇಳಲು, ಆತನು ನಿರಾಶೆಯಿಂದ—''ಹಾಗಾದರೆ ಇನ್ನು ನಮ್ಮ ದೂರು ಯಾರು ಕೇಳಬೇಕು?'' ಎಂದು ಗಟ್ಟಿಯಾಗಿ ಅನ್ನುತ್ತಿದ್ದನು. ಅದನ್ನು ನಾನು ಇಲ್ಲಿಂದಲೇ ಕೇಳಿ ಆತನನ್ನು ಕರೆಸಿಕೊಂಡು, ಆತನ ಎಲ್ಲ ವೃತ್ತಾಂತವನ್ನು ಕೇಳಿಕೊಂಡೆನು. ಆಗ ನನಗೆ ಸರ್ವಾಂಗದಲ್ಲಿ ಸಂತಾಪವು ಉತ್ಪನ್ನವಾಯಿತು. ಕೂಡಲೆ ನಾನು ನಿನ್ನನ್ನು ಕರೆಯಕಳಿಸಿದೆನು. ಈಗ ಆ ಮನುಷ್ಯನನ್ನು ಇಲ್ಲಿಗೇ ಕರೆಸುತ್ತೇನೆ. ನೀನು ಆತನ ಮುಖದಿಂದ ಎಲ್ಲ ವೃತ್ತಾಂತವನ್ನು ಕೇಳಿಕೋ, ಎಂದು ಹೇಳಿ ಮಾಸಾಹೇಬರು ಆ ಮನುಷ್ಯನನ್ನು ಕರೆಯಲಿಕ್ಕೆ ತಮ್ಮ ದಾಸಿಯನ್ನು ಕಳಿಸಿದರು.

ದಾಸಿಯು ಕರೆದ ಕೂಡಲೆ, ಆ ಮನುಷ್ಯನು ಬಂದು ರಣಮಸ್ತಖಾನನ, ಹಾಗು ಆತನ ತಾಯಿಯ ಮುಂದೆ ಮೊಣಕಾಲೂರಿ, ಮೂರು ಮೂರು ಸಾರೆ ನೆಲಕ್ಕೆ ಹಣೆ ಹಚ್ಚಿ, ತನ್ನ ತಲೆಯಮೇಲಿನ ಮುಂಡಾಸವನ್ನು ತೆಗೆದಿಟ್ಟು, ಕೈಜೋಡಿಸಿ—ಗರೀಬ ಪರವರ, ಅಹಮ್ಮದನಗರದ ಸರದಾರನಾದ ಹುಸೇನಅಲಿ ಎಂಬುವನ ಮಗಳು, ವಿಜಾಪುರದಲ್ಲಿರುವ ತನ್ನ ಅಜ್ಜಿಯ ಮನೆಗೆ, ನಾಲ್ಕು ದಿನ ಇದ್ದು ಬರಬೇಕೆಂದು ಹೊರಟಿದ್ದಳು. ಸಂಗಡ ನನ್ನಂಥ ೮–೧೦ ಜನರನ್ನು ಕರಕೊಂಡು ಸ್ವತಃ ಆಕೆಯ ತಂದೆಯು ಬಂದಿದ್ದನು. ನಮ್ಮ ಸಂಗಡ ಸಸ್ತ್ರಾಸ್ತ್ರಗಳು ಇದ್ದವು. ಹೀಗೆ ಒಳ್ಳೆ ಬಂದೋಬಸ್ತಿನಿಂದ ನಾವು ವಿಜಯನಗರದ ರಾಜ್ಯದ ಗಡಿಯಲ್ಲಿ ಬರಲು,

ವಿಜಯನಗರದ ಕೆಲವು ಪುಂಡರು, ನಮ್ಮನ್ನೂ ನಮ್ಮ ಸಂಗಡಿಗರಾದ ಬೇರೆ ಪ್ರವಾಸಿಕರನ್ನೂ ಸುಲಿದರು. ನಮ್ಮ ಬಳಿಯಲ್ಲಿಯ ಒಂದು ಪೈಯನ್ನೂ, ಒಂದು ಚಲೋ ಅರಿವೆಯನ್ನು ಸಹ ಅವರು ಬಿಡಲಿಲ್ಲ, ಸುಲಿಸಿಕೊಂಡವರಲ್ಲಿ ಹೆಂಗಸರು ನಾಲ್ಕು ಜನರಿದ್ದರು. ನಮ್ಮ ಹುಸೇನ ಅಲಿಯ ಹದಿನೇಳು ವರ್ಷದ ಮಗಳೊಬ್ಬಳು. ಆಕೆಯ ದಾಸಿಯರಿಬ್ಬರು, ಇನ್ನೊಬ್ಬ ಗೃಹಸ್ಥನ ಹೆಂಡತಿಯೊಬ್ಬಾಕೆಯು. ಸುಲಿಗೆಯಾದ ಮೇಲೆ ದಾರಿಸಿಕ್ಕತ್ತ ನಮ್ಮ ಸಂಗಡಿಗರೆಲ್ಲರು ಓಡಿ ಹೋಗಿಬಿಟ್ಟರು. ನಮ್ಮ ಜನರು, ಯಜಮಾನನ, ಹಾಗು ಆತನ ಮಗಳ ಸಂರಕ್ಷಣದ ಸಲುವಾಗಿ ಬಹಳ ಹೆಣಗಾಡಿದರು. ಹೊಡದಾಟದಲ್ಲಿ ನಮ್ಮ ಒಡೆಯನಾದ ಹುಸೇನ ಅಲಿಖಾನನು ಮರಣ ಹೊಂದಿದನು. ಅದರಂತೆ ಬೇರೆ ಏಳೆಂಟು ಜನರು ಮರಣಹೊಂದಿದರು. ನಮ್ಮ ಸರದಾರನ ಮಗಳನ್ನೂ ಆಕೆಯ ಇಬ್ಬರು ದಾಸಿಯರನ್ನೂ ನಮ್ಮಿಬ್ಬರನ್ನೂ ಆ ದುಷ್ಟರು ಸೆರೆಹಿಡಿದು, ರಾಜದರ್ಬಾರಕ್ಕೆ ಕರಕೊಂಡು ಹೋಗಲು ನಿಶ್ಚಯಿಸಿದರು. ಇನ್ನು ಗುದ್ಯಾಡಿದರೆ ಪ್ರಯೋಜನ ವಾಗದೆಂದು ತಿಳಿದು ನಾವು ಸುಮ್ಮನೆ ಆ ತುಂಟರ ಆಧೀನರಾಗಿ, ವಿನಯದ ಸೋಗಿನಿಂದ ಅವರೊಡನೆ ಮಾರ್ಗ ಕ್ರಮಣ ಮಾಡಹತ್ತಿದೆವು. ವಿಜಾಪುರದ ಬಾದಶಹರ ವಕೀಲನು ವಿಜಯ ನಗರದಲ್ಲಿರುವನೆಂಬುದು ನನಗೆ ಗೊತ್ತಿತ್ತು; ಆದ್ದರಿಂದ ಹ್ಯಾಗಾದರೂ ಮಾಡಿ ಈ ಸುದ್ದಿಯನ್ನು ವಕೀಲ ಸಾಹೇಬರ ಕಿವಿಗೆ ಮುಟ್ಟಿಸಿದರೆ, ಹೆಂಗಸರ ಮಾನವುಳಿದೀತೆಂದು ತಿಳಿದು, ನಾನು ಕಾವಲುಗಾರರ ಕಣ್ಣು ತಪ್ಪಿಸಿ ನಿಮ್ಮ ಕಡೆಗೆ ಬಂದೆನು. ರಾಜದರ್ಬಾರಕ್ಕೆ ಹೋದಬಳಿಕ ಹೆಣ್ಣುಮಕ್ಕಳ ಮೇಲೆ ಎಂಥ ಪ್ರಸಂಗ ಬರುವದೋ ಏನೋ....''

ರಣಮುಸ್ತಖಾನನು ಆ ಮನುಷ್ಯನ ಮಾತುಗಳನ್ನೆಲ್ಲ ಲಕ್ಷಪೂರ್ವಕವಾಗಿ ಕೇಳಿಕೊಂಡನು. ಆ ಮಾತುಗಳ ತಾತ್ಪರ್ಯವು ಆತನ ಮನಸ್ಸಿಗೆ ನಟ್ಟು, ಆತನು ಸ್ಫೂರ್ತಿಗೊಂಡಿದ್ದನು. ಆತನು ಇದಕ್ಕೇನು ಮಾಡಬೇಕೆಂದು ತನ್ನೊಳಗೆ ಆಲೋಚಿಸಹತ್ತಿದನು. ರಾಮರಾಜನು ಮುಸಲ್ಮಾನರ ಉಪಮರ್ದನ ಮಾಡುವಲ್ಲಿ ಬದ್ಧ ಕಂಕಣನೆಂದು ರಣಮುಸ್ತಖಾನನು ಕೇಳಿದ್ದನು; ಅದರಂತೆ ಮುಸಲ್ಮಾನ ಸ್ತ್ರೀಯರ ಸಂಗಡ ರಾಮರಾಜನ ನಡತೆಯು, ಶೂರರಿಗೆ ಒಪ್ಪುವಹಾಗೆ ಇರುವದಿಲ್ಲೆಂಬ ಅಪಕೀರ್ತಿಯೂ ಎಲ್ಲ ಕಡೆಗೆ ಹಬ್ಬಿತ್ತು. ಇದನ್ನೆಲ್ಲ ಮನಸ್ಸಿನಲ್ಲಿ ತಂದು ರಣಮುಸ್ತಖಾನನು, ಸದ್ಯದ ಪ್ರಸಂಗದಲ್ಲಿಯಾದರೂ ಆ ಮುಸಲ್ಮಾನ ಸ್ತ್ರೀಯರ ಅಪಮಾನವನ್ನು ಮಾಡಗೊಡದೆ, ಅವರನ್ನು ತನ್ನ ಸಂಗಡ ಕುಂಜವನಕ್ಕೆ ಕರಕೊಂಡು ಬರಬೇಕೆಂದು ನಿಶ್ಚಯಿಸಿದನು. ಆತನು ಆ ಮನುಷ್ಯನಿಗೆ —''ಇಷ್ಟು ಹೊತ್ತಿಗೆ ನಿಮ್ಮ ಸಂಗಡಿಗರು ವಿಜಯನಗರವನ್ನು ಮುಟ್ಟಿರಬಹುದೇನು,'' ಎಂದು ಕೇಳಲು, ಆ ಮನುಷ್ಯನು–ಇನ್ನೂ ಮುಟ್ಟಿರಲಿಕ್ಕಿಲ್ಲ, ಇಂದು ಒಂಭತ್ತು ತಾಸಿನ ಸುಮಾರಕ್ಕೆ ಅವರು ವಿಜಯನಗರಕ್ಕೆ ಮುಟ್ಟಬಹುದು. ಅವರು ರಾತ್ರಿಯಲ್ಲಿ ಹಾದಿಯನ್ನು ನಡೆದಿರುವದಿಲ್ಲ, ರಾತ್ರಿಯಾದ್ದರಿಂದಲೇ ನನಗೆ ತಪ್ಪಿಸಿಕೊಂಡು ಬರಲಿಕ್ಕೆ ಅನುವು ದೊರೆಯಿತು, ಎಂದು ಹೇಳಿದನು. ಅದಕ್ಕೆ ರಣಮುಸ್ತಖಾನನು—''ಏನೂ ಚಿಂತೆಯಿಲ್ಲ, ನೀವು ಸ್ವಸ್ಥವಾಗಿ ಇರ್ರಿ. ಆ ಜನರು ಸುರಕ್ಷಿತವಾಗಿ ನಮ್ಮ ಮಾಹಾಸೇಬರ ಬಳಿಗೆ ಬರುವವರೆಗೆ ನಾನು ಅನ್ನ ಗ್ರಹಣ ಮಾಡುವದಿಲ್ಲ'' ಎಂದು ಪ್ರತಿಜ್ಞೆ ಮಾಡಿ, ತನ್ನ ತಾಯಿಯ ಕಡೆಗೆ ಬಹು ವಿನಯದಿಂದ ಭಕ್ತಿಪೂರ್ವಕವಾಗಿ ಒಮ್ಮೆ

ನೋಡಿ ಅಲ್ಲಿಂದ ತಟ್ಟನೆ ಹೊರಟುಹೋದನು. ಆತನ ಪ್ರತಿಜ್ಞೆಯನ್ನು ಕೇಳಿ ಮಾಹಾಸೇಬರಿಗೆ ಬಹಳ ಸಂತೋಷವಾಯಿತು. ರಣಮಸ್ತಖಾನನಿಗೆ ಆತನ ತಾಯಿಯು ಬಹು ವಂದ್ಯಳಾಗಿದ್ದಳು. ಆತನು ದೇವರ ಮೇಲಿಟ್ಟಷ್ಟು ಭಕ್ತಿಯನ್ನು ತನ್ನ ತಾಯಿಯ ಮೇಲೆ ಇಟ್ಟಿದ್ದನು. ತಾಯಿಯ ಮಾತನ್ನು ಆತನು ಸರ್ವಥಾ ಮೀರುತ್ತಿದ್ದಿಲ್ಲ.

ರಣಮಸ್ತಖಾನನು ತಾಯಿಯ ಬಳಿಯಲ್ಲಿ ಪ್ರತಿಜ್ಞೆ ಮಾಡಿ ಹೊರಟವನು ತನ್ನ ಸ್ಥಳಕ್ಕೆ ಬಂದನು. ಈಗ ಆತನು ಬಹಳ ರೊಚ್ಚಿಗೆದ್ದಿದ್ದನು. ತನ್ನ ಪ್ರತಿಜ್ಞೆಯನ್ನು ಯಾವಾಗ ಪೂರ್ಣ ಮಾಡೇನೆಂಬ ಆತುರವು ಅವನಿಗೆ ವಿಶೇಷವಾಗಿತ್ತು. ಆತನು ರಾಮರಾಜನ ತನಕ ತಾನೇ ತಟ್ಟನೆ ಹೋಗಿ, ನಡೆದ ಸಂಗತಿಯನ್ನು ಆತನಿಗೆ ಹೇಳಿ, ಬೇಗನೆ ಕೆಲಸ ಮಾಡಿಕೊಳ್ಳಬೇಕೆಂದು ಮಾಡಿದನು; ಆದರೆ ತಾನು ಪತ್ರವನ್ನು ಬರೆದು ಕಳಿಸಿದರೆ ಕೆಲಸವಾದೀತೆಂದು ತಿಳಿದು, ತಾನು ಹೋಗುವದನ್ನು ಉದಾಸೀನ ಮಾಡಿದನು. ಹರೆಯದ ಮಬ್ಬು, ರಾಮರಾಜನು ನನ್ನ ಮಾತು ಯಾಕೆ ಕೇಳುವದಿಲ್ಲೆಂಬ ಸೊಕ್ಕು, ನಾನು ವಿಜಾಪುರದ ಬಾದಶಹನ ವಕೀಲನೆಂಬ ಡೌಲು, ಇವೆಲ್ಲವುಗಳ ಯೋಗದಿಂದ ತನ್ನ ಮಾತನ್ನು ರಾಮರಾಜನು ನಡಿಸಿಯೇ ತೀರುವನೆಂದು ತಿಳಿದು, ರಣಮಸ್ತಖಾನನು ರಾಮರಾಜನಿಗೆ ಒಂದು ಪತ್ರವನ್ನು ಬರೆದು, ಒಬ್ಬ ಸೇವಕನ ಕೈಯಲ್ಲಿ ಕೊಟ್ಟು, ವಿಜಯನಗರಕ್ಕೆ ಕಳಿಸಿದನು. ಆ ಸೇವಕನು ಸ್ವಲ್ಪ ದೂರ ಹೋದನೋ ಇಲ್ಲವೋ ಮತ್ತೆ ಮತ್ತೆ ಆತನನ್ನು ಕರೆಸಿ—''ನಿನ್ನ ಕುದುರೆಯು ನೆಟ್ಟಗೆ ನಡೆಯಲಿಕ್ಕಿಲ್ಲ, ಅಶ್ವಶಾಲೆಯೊಳಗಿನ ಒಂದು ಚಲೋ ಕುದುರೆಯನ್ನು ತಕ್ಕೊಂಡು ಹೋಗು'' ಎಂದು ಹೇಳಿ ಆತನನ್ನು ಕಳಿಸಿದನು. ಆ ಸೇವಕನು ಅಶ್ವಶಾಲೆಯನ್ನು ಮುಟ್ಟುವದರೊಳಗೆ ರಣಮಸ್ತಖಾನನು. ಮತ್ತೊಬ್ಬ ಸೇವಕನನ್ನು ಕರೆದು—''ನೋಡು, ಅವನಿಗೆ ಒಳ್ಳೆಯ ಕುದುರೆಯು ಸಿಕ್ಕಿತೋ ಇಲ್ಲವೊ'' ಎಂದು ಹೇಳಿ ಕಳಿಸಿ, ಕೂಡಲೆ ''ಈ ಕೆಲಸದಲ್ಲಿ ಮಂದಿಯ ಮೇಲೆ ನಂಬಿಗೆಯಿಡುವದು ಯೋಗ್ಯವಲ್ಲ'' ಎಂದು ತಾನೇ ಅಶ್ವಶಾಲೆಗೆ ಹೋಗಿ, ಸೇವಕನು ಆರಿಸಿದ ಕುದುರೆಯು ತಕ್ಕದ್ದಲ್ಲವೆಂದು ಬಿಡಿಸಿ, ತನ್ನ ಪ್ರೀತಿಯ ಕುದುರೆಯನ್ನು ಆತನಿಗೆ ಕೊಡಿಸಿದನು. ಅಷ್ಟರಲ್ಲಿ ಆತನ ವಿಚಾರವು ಮತ್ತೆ ಬದಲಾಗಿ ಆತನು ಹೊರಟು ನಿಂತ ಸೇವಕನನ್ನು ಕುರಿತು—ನಿಲ್ಲು, ನೀನು ಹೋಗಿ ಪತ್ರದ ಉತ್ತರ ತರಬೇಕು, ಆ ಮೇಲೆ ನಾನು ಇಲ್ಲಿಂದ ಹೋಗಬೇಕು, ಇಷ್ಟು ವಿಲಂಬವನ್ನಾದರೂ ಯಾಕೆ ಮಾಡಬೇಕು? ನಾನೂ ನಿನ್ನ ಸಂಗಡ ಬಂದುಬಿಡುತ್ತೇನೆ. ನೀನು ರಾಮರಾಜನ ಬಳಿಗೆ ಹೋಗಿ ಪತ್ರದ ಉತ್ತರವನ್ನು ತರುವವರೆಗೆ, ನಾನು ವಿಜಯನಗರದ ಅಗಸೆಯ ಹೊರಗೆ ನಿಂತುಕೊಳ್ಳುವೆನು, ನೀನು ಬೇಗನೆ ಉತ್ತರವನ್ನು ತಕ್ಕೊಂಡು ಬಾ, ಎಂದು ಹೇಳಿ, ತನ್ನ ಕುದುರೆಗೆ ಜೀನು ಹಾಕಿಸಿ, ಅವಸರದಿಂದ ಪೋಷಾಕು ಹಾಕಿಕೊಂಡು, ಕುದುರೆಯನ್ನು ಹತ್ತಿ ವಿಜಯನಗರದ ಕಡೆಗೆಸಾಗಿದನು. ಅತ್ಯಂತ ಆತುರಸ್ವಭಾವದ ಆ ತರುಣನಿಗೆ ಎಷ್ಟು ಒತ್ತರದಿಂದ ನಡೆದರೂ ಹಾದಿಯು ಸವೆದಂತೆ ಆಗಲೊಲ್ಲದು. ಆತನಿಗೆ ತಾನು ಯಾವಾಗ ವಿಜಯನಗರಕ್ಕೆ ಹೋದೇನು, ಯಾವಾಗ ಕೆಲಸ ತೀರಿಸಿಕೊಂಡು ತನ್ನ ಮಾಸಾಹೇಬರಿಗೆ ಭೆಟ್ಟಿಯಾದೇನು ಅನ್ನುವ ಹಾಗೆ ಆಗಿತ್ತು. ಕೆಲಹೊತ್ತಿನ

ಮೇಲೆ ವಿಜಯನಗರದ ಅಗಸೆಯ ಬಾಗಿಲುಗಳು ಕಾಣಹತ್ತಿದವು. ಆಗ ರಣಮಸ್ತಖಾನನು ತನ್ನ ಸೇವಕನಿಗೆ—ನೀನು ಇನ್ನು ಬೇಗನೆ ನಡೆ, ನಾನು ಸಾವಕಾಶ ಬರುವೆನು. ನೀನು ಬರುವವರೆಗೆ ನಾನು ಅಗಸೆಯ ಹೊರಗೆ ಇರುತ್ತೇನೆ, ಎಂದು ಹೇಳಿ, ತಾನು ಮೆಲ್ಲನೆ ಸಾಗಹತ್ತಿದನು. ಆತನ ಮನಸ್ಸಿನಲ್ಲಿ ಹಲವು ವಿಚಾರಗಳು ಉತ್ಪನ್ನವಾದವು. ಈಗ ಆ ಅಹಮ್ಮದನಗರದ ಜನರು ಇಲ್ಲಿ ನನಗೆ ಭೆಟ್ಟಿಯಾದರೆ, ಅವರನ್ನು ಇಲ್ಲಿಂದಲೇ ನನ್ನ ಸಂಗಡ ಕರಕೊಂಡು ಕುಂಜವನಕ್ಕೆ ಹೋಗಿಬಿಡುತ್ತೇನೆ. ಆಮೇಲೆ ರಾಮರಾಜನು ಮಾಡುವದು ಮಾಡಲಿ, ಎಂದು ಆಲೋಚಿಸುತ್ತ ಹಿಂದಕ್ಕೆ ತಿರುಗಿ ನೋಡುತ್ತಿರಲು, ದೂರ ಯಾರೋ ಜನರು ಗುಂಪುಮಾಡಿ ಬರುವಂತೆ ಅವನಿಗೆ ತೋರಿತು. ಆ ಜನರು ಸ್ವಲ್ಪ ಮುಂದಕ್ಕೆ ಬರಲು, ಅವರ ನಡುವೆ ಒಂದು ಮೇಣೆಯಿದ್ದದು ಖಾನನ ಕಣ್ಣಿಗೆ ಬಿದ್ದಿತು. ಅವರೇ ಅಹಮ್ಮದನಗರದವರಿರಬೇಕೆಂದು ಆತನು ತರ್ಕಿಸಿ, ತನ್ನ ಕುದುರೆಯನ್ನು ನಿಲ್ಲಿಸಿದನು. ಆ ಜನರು ಸಮೀಪಕ್ಕೆ ಬಂದಕೂಡಲೇ, ರಣಮಸ್ತಖಾನನು ಅವರನ್ನು ಕುರಿತು ದರ್ಪದಿಂದ—ಯಾರು ನೀವು? ಈ ಮೇಣೆಯೊಳಗಿನ ಸ್ತ್ರೀಯನ್ನು ಎಲ್ಲಿಗೆ ಕರಕೊಂಡು ಹೋಗುತ್ತೀರಿ? ನನ್ನ ಪ್ರಶ್ನೆಗಳಿಗೆ ಉತ್ತರ ಕೊಟ್ಟ ಹೊರತು ನಿಮಗೆ ಒಂದು ಹೆಜ್ಜೆಯನ್ನು ಕೂಡ ಮುಂದಕ್ಕೆ ಇಡಗೊಡಲಿಕ್ಕಿಲ್ಲ, ನನಗೆ ನಿಮ್ಮ ದುಷ್ಕೃತ್ಯವೆಲ್ಲ ಗೊತ್ತಾಗಿರುತ್ತದೆ. ನಾನು ವಿಜಾಪುರದ ಬಾದಶಹನ ವಕೀಲನಿರುತ್ತೇನೆ. ಈ ಜನರು ಅಹಮ್ಮದನಗರದಿಂದ ವಿಜಾಪುರಕ್ಕೆ ಹೋಗುತ್ತಿದ್ದರು; ಆದ್ದರಿಂದ ಈಗ ಅವರು ವಿಜಾಪುರದವರಿರುತ್ತಾರೆ. ಸುಮ್ಮನೆ ನನಗೆ ಅವರನ್ನು ಒಪ್ಪಿಸಿರಿ; ಇಲ್ಲದಿದ್ದರೆ.........

ರಣಮಸ್ತಖಾನನ ಈ ಮಾತುಗಳನ್ನು ಕೇಳಿ ವಿಜಯನಗರದ ಜನರೊಳಗಿನವನೊಬ್ಬನು ಮುಂದಕ್ಕೆ ಬಂದು, ಅತ್ಯಂತ ಉಪಹಾಸಾಸ್ಪದವಾದ ಸ್ವರದಿಂದ ನಕ್ಕು—''ನಿನ್ನ ಪ್ರತ್ಯಕ್ಷ ಬಾದಶಹನು ಬಂದರೂ ವಿಜಯನಗರದಲ್ಲಿ ಈಗ ಆತನನ್ನು ಯಾರೂ ಕೇಳುವಹಾಗಿಲ್ಲ, ಅಂದ ಬಳಿಕ ನಿನ್ನಂಥ ವಕೀಲನನ್ನು ಯಾರು ಕೇಳಬೇಕು? ನೀನು ನಿನ್ನ ಹಾದಿಯನ್ನು ಹಿಡಿದು ಹೋದರೆ ಮರ್ಯಾದೆಯುಳಿದೀತು. ಸಾಕು, ಈಗ ತೋರಿಸಿದ ಪೌರುಷವಷ್ಟೇ ಸಾಕು. ಬೇಟೆಯನ್ನು ಹಿಡಕೊಂಡು ಬಂದವರು, ತಮ್ಮ ಬೇಟೆಯನ್ನು ಹಾದಿಯಲ್ಲಿಯ ಕಳ್ಳನಿಗೆ ಎಂದಾದರೂ ಒಪ್ಪಿಸ ಬಹುದೋ? ಎಂದು ನುಡಿಯುತ್ತಿರಲು, ರಣಮಸ್ತಖಾನನ ಸಂತಪ್ತನಾದನು. ಆತನು ತನ್ನ ಖಡ್ಗವನ್ನು ಒರೆಯಿಂದ ಹಿರಿದು. ಆ ಹಿಂದುವಿಗೆ ಒಂದು ಏಟುಕೊಟ್ಟನು. ಆ ಮೇಲೆ ಕೇಳುವದೇನು ಉಳಿದ ಹಿಂದುಗಳೆಲ್ಲ ರಣಮಸ್ತಖಾನನ ಮೇಲೆ ಧುಮುಕಿದರು; ಆದರೆ ರಣಮಸ್ತಖಾನನು ಸರ್ವಸಾಧಾರಣ ಮನುಷ್ಯನಿದ್ದಿಲ್ಲ, ಅವರೆಲ್ಲರಿಗೆ ಸೊಪ್ಪು ಹಾಕದವನಂತೆ ಶೌರ್ಯವನ್ನು ಪ್ರಕಟಿಸಹತ್ತಿದನು. ಅಷ್ಟರಲ್ಲಿ ಜನಸಮೂಹವು ನೆರೆಯಿತು. ಕರ್ಮಧರ್ಮ ಸಂಯೋಗದಿಂದ ವಿಜಯನಗರದ ಒಬ್ಬ ದರ್ಬಾರದ ಗೃಹಸ್ಥನು ಅತ್ತಕಡೆಯಿಂದ ಬಂದನು. ಒಬ್ಬನ ಮೇಲೆ ಎಂಟು ಹತ್ತು ಜನರು ಏರಿಹೋಗುವದನ್ನು ನೋಡಿ, ಆತನು ಅವಸರದಿಂದ ಅಲ್ಲಿಗೆ ಬಂದು ವಿಜಾಪುರದ ವಕೀಲನನ್ನು ನೋಡಿದನು. ತಾವೂ ವಿಜಾಪುರದ ಬಾದಶಹನೂ ಒಂದಾಗಿ ಉಳಿದ ಮುಸಲ್ಮಾನ ರಾಜ್ಯಗಳನ್ನು ನಷ್ಟಪಡಿಸಬೇಕೆಂದು ಮಾಡಿರುವಾಗ, ತಮ್ಮ

ಜನರು, ಒಬ್ಬನೇ ಒಬ್ಬನಾಗಿ ಸಿಕ್ಕಿದ್ದ ವಿಜಾಪುರದ ವಕೀಲನಿಗೆ ಏನಾದರೂ ಅಪಾಯ ಮಾಡಿದರೆ, ಕೆಲಸ ಕೆಟ್ಟೀತೆಂದು ತಿಳಿದು ಆತನು ತಮ್ಮ ಜನರನ್ನು ಕುರಿತು—''ತಡೆಯಿರಿ, ತಡೆಯಿರಿ,'' ಎಂದು ನಿರ್ಬಂಧಿಸುತ್ತ ರಣಮಸ್ತಖಾನನ ಬಳಿಗೆ ಬಂದನು. ಆತನು ಜಗಳದ ಕಾರಣವನ್ನೇನೂ ಅರಿಯದವನಂತೆ, ರಣಮಸ್ತಖಾನನನ್ನು ಕುರಿತು—''ಖಾನ ಸಾಹೇಬ, ನೀವು ಇಷ್ಟು ಸಿಟ್ಟಿಗೇಳಲಿಕ್ಕೆ ಕಾರಣವೇನಾಯಿತೆಂಬದನ್ನಾದರೂ ಹೇಳಿರಿ'' ಅನ್ನಲು, ಖಾನನು ಯಾವತ್ತು ಸಂಗತಿಯನ್ನು ಹೇಳಿ, ಆ ಗೃಹಸ್ಥನನ್ನು ಕುರಿತು—ನನಗೆ ಎರಡನೆಯದೇನೂ ಬೇಡ. ಈಗ ಹಿಡಿಯಲ್ಪಟ್ಟಿರುವ ಜನರು ಮುಸಲ್ಮಾನ ಬಾದಶಾಹಿಯ ಅಧೀನದವರಿರುವದರಿಂದ, ಅವರನ್ನು ನನಗೆ ಒಪ್ಪಿಸತಕ್ಕದ್ದು. ವಿಜಾಪುರದ ವಕೀಲನು ನಾನು ಇಲ್ಲಿ ಇರುತ್ತಿರುವಾಗ, ಹೀಗೆ ಮುಸಲ್ಮಾನ ಹೆಂಗಸರನ್ನು ವಿಡಂಬನವಾಗಗೊಡಲಿಕ್ಕಿಲ್ಲ. ಈಗ ಆದ ಅಪಮಾನವನ್ನು ಸಹಿಸಲಾರೆನು. ಹಾದಿ ಹಿಡಿದು ಹೋಗುವ ಮುಸಲ್ಮಾನ ಹೆಂಗಸರನ್ನು ನಿಮ್ಮ ಪುಂಡ ಜನರು ಹಿಡಿದು ತಂದು ಉಪಹಾಸ ಮಾಡುವದನ್ನು ನೋಡುತ್ತ ನಾವು ಸುಮ್ಮನೆ ಕುಳಿತುಕೊಳ್ಳಬೇಕೇನು? ಈ ಮೇಣೆಯನ್ನು ಮೊದಲು ಕುಂಜವನಕ್ಕೆ ತಕ್ಕೊಂಡು ನಡೆಯಿರಿ. ಆಮೇಲೆ ನೀವು ಹೇಳುವದನ್ನು ಕೇಳುವೆನು. ಹುಂ, ಎತ್ತಿರಿ ಮೇಣೆಯನ್ನು. ಮೊದಲು ನಮ್ಮ ಕುಂಜವನಕ್ಕೆ ಇದನ್ನು ತಕ್ಕೊಂಡು ನಡೆಯಿರಿ, ಎಂದು ಅಜ್ಞಾಪಿಸಹತ್ತಿದನು. ಅದಕ್ಕೆ ಆ ದರ್ಬಾರಿ ಮನುಷ್ಯನು—''ಯೋಗ್ಯವು, ನೀವು ಆಡುವ ಮಾತು ಅತ್ಯಂತ ಯೋಗ್ಯವಾಗಿರುತ್ತದೆ; ಆದರೆ ರಾಮರಾಜರ ಕಿವಿಯವರೆಗೆ ಈ ಸುದ್ದಿಯು ಮುಟ್ಟಬೇಕಲ್ಲವೇ? ಅವರ ಅನುಜ್ಞೆಯ ಹೊರತು ತಾವು ಹೇಳುವಂತೆ ನಡುವೆ ಕಾರಭಾರ ಹ್ಯಾಗೆ ಮಾಡಬೇಕು.

ರಣಮಸ್ತಖಾನ—ಅವರ ಕಡೆಗೆ ನಾನು ಪತ್ರವನ್ನು ಕಳಿಸಿದ್ದೇನೆ. ಅದರ ಚಿಂತೆ ನಿಮಗೆ ಬೇಡ. ಈ ಬಾಬಿನಲ್ಲಿ ನಕಾರಾತ್ಮಕ ಶಬ್ದವನ್ನು ನುಡಿಯಲಿಕ್ಕೆ ರಾಮರಾಜನಿಗೆ ಧೈರ್ಯ ವಾಗಲಾರದು.

ದರ್ಬಾರಿಗೃಹಸ್ಥ—ಧೈರ್ಯವಾಗಲಿಕ್ಕಿಲ್ಲ. ಆದರೆ ವಿಜಯನಗರದ ಗಡಿಯಲ್ಲಿ ಬಂದಬಳಿಕ, ಅವರ ಅಪ್ಪಣೆಯ ಹೊರತು ಏನೂ ಮಾಡಲಿಕ್ಕೆ ಬರುವದಿಲ್ಲ. ತಮ್ಮ ಪತ್ರವು ಹ್ಯಾಗೂ ಹೋಗಿರುತ್ತದೆ, ಅದರ ಉತ್ತರ ಬರುವತನಕ ಹಾದಿಯನ್ನು ನೋಡಿರಿ. ಮಹಾರಾಜರು ನಿಮ್ಮ ಮರ್ಜಿಗೆ ವಿರುದ್ಧವಾಗಿ ನಡೆಯಲಾರರು. ಅವರಿಗೆ ಇಂಥ ಕೃತ್ಯವು ಸೇರುವದಿಲ್ಲ.

ಈ ಮಾತುಗಳನ್ನು ಕೇಳಿ ರಣಮಸ್ತಖಾನನು ವಿಜಯನಗರದ ಕಡೆಗೆ ನೋಡಿ—''ಅಗೋ, ಬಂದನು ನೋಡಿರಿ ನಮ್ಮ ಸಿಪಾಯಿಯು'' ಎಂದು ನುಡಿಯುತ್ತಿರಲು, ಸಿಪಾಯಿಯು ಬಂದು ರಾಮರಾಜನು ಕೊಟ್ಟ ಉತ್ತರವನ್ನು ಖಾನನ ಕೈಯಲ್ಲಿ ಕೊಟ್ಟನು. ಖಾನನು ಆತುರದಿಂದ ಅದನ್ನು ಒಡೆದು ಒಳಗಿನ ಪತ್ರೋತ್ತರಗಳನ್ನು ಓದಹತ್ತಿದನು. ಮೇಲಿನ ಒಕ್ಕಣಿಕೆಯು ಮುಗಿದ ಬಳಿಕ ಮುಂದಿನ ಸಂಗತಿಯು ಅದರಲ್ಲಿ ಹೀಗೆ ಬರೆದಿತ್ತು—''ನೀವು ಬರೆದಿರುವಂತೆ ಕೃತ್ಯವು ಸಂಭವಿಸಿದ್ದರೆ, ಪರಮಾನ್ಯಾಯವು; ಆದರೆ ನಾವು ಈಗ ಒಂದು ಪಕ್ಷದವರ ಅಂಬೋಣವನ್ನು ಕೇಳಿಕೊಂಡಂತಾಯಿತು. ಇನ್ನೊಂದು ಪಕ್ಷದವರ ಅಂಬೋಣವನ್ನು ಕೇಳಿಕೊಂಡ ಹೊರತು

ಯಾವ ಮಾತನ್ನೂ ಆಡಲಿಕ್ಕೆ ಬರುವದಿಲ್ಲ. ನೀವು ಪತ್ರದಲ್ಲಿ ಬರೆದಿರುವಂತೆ ಆ ಜನರು ಇತ್ತ ಕಡೆಗೇ ಬರುವರಾದ್ದರಿಂದ, ಅವರು ಬಂದಕೂಡಲೆ ವಿಚಾರಿಸಿ, ಯೋಗ್ಯ ವ್ಯವಸ್ಥೆ ಮಾಡಲಾಗುವದು, ನಿಷ್ಕಾರಣವಾಗಿ ಬಡಬಗ್ಗರಿಗೆ ವಿಶೇಷವಾಗಿ ಸ್ತ್ರೀಯರಿಗೆ, ತ್ರಾಸವಾದದ್ದನ್ನು ಮಹಾರಾಜರು ಎಂದಿಗೂ ತಡೆಯರು. ಹೀಗೆ ತ್ರಾಸ ಕೊಟ್ಟವರನ್ನು ಶಿಕ್ಷಿಸದೆ ಅವರು ಎಂದಿಗೂ ಉದಾಸೀನ ಮಾಡಲಾರರೆಂಬುದನ್ನು ತಾವು ಪೂರ್ಣ ಲಕ್ಷ್ಯದಲ್ಲಿಡಬೇಕು.

## ಶಾಪಪ್ರದಾನ

ನಿಜವಾಗಿ ನೋಡಿದರೆ ಪತ್ರದಲ್ಲಿ ಅಯೋಗ್ಯವೇನೂ ಬರೆದಿದ್ದಿಲ್ಲ; ಬರೆಯತಕ್ಕದ್ದನ್ನು ಸ್ಪಷ್ಟವಾಗಿ ಹ್ಯಾಗೆ ಬರೆಯಬೇಕೋ, ಹಾಗೆಯೇ ಬರೆದಿತ್ತು; ಆದರೆ ರಣಮಸ್ತಖಾನನಿಗೆ ಮಾತ್ರ ಅದು ಸೇರಲಿಲ್ಲ. ಆ ಪತ್ರವು ಆತನಿಗೆ ಮುತ್ಸದ್ದಿತನದ್ದಾಗಿಯೂ, ಕಾರಸ್ಥಾನದ್ದಾಗಿಯೂ ಮೋಸದ್ದಾಗಿಯೂ ತೋರಿತು. ಕೂಡಲೆ ಅವನು ಸಿಟ್ಟಿಗೆದ್ದು ಆ ದರ್ಬಾರಿ ಗೃಹಸ್ಥನನ್ನು ಕುರಿತು ಸಂತಾಪದಿಂದ ''ನಡೆಯಿರಿ, ಈ ಜನರನ್ನು ಕರಕೊಂಡು ರಾಮರಾಜನ ಕಡೆಗೇ ನಡೆಯಿರಿ. ಇವರನ್ನು ಬಿಡಿಸಿದ ಹೊರತು ನಾನು ಅನ್ನಗ್ರಹಣ ಮಾಡಲಿಕ್ಕಿಲ್ಲೆಂದು ನಿಶ್ಚಯಿಸಿದ್ದೇನೆ. ಈ ಹೆಂಗಸರನ್ನು ನನ್ನ ಬಿಡಾರಕ್ಕೆ ಒಯ್ದು ಬಳಿಕ ಆಮೇಲೆ ಅನ್ನ-ನೀರಿನ ವಿಚಾರವು'' ಅನ್ನಲು, ಆ ಗೃಹಸ್ಥನು—ಅವರು ರಾಮರಾಜರ ಕಡೆಗೇ ಹೋಗುತ್ತಿದ್ದರು. ನಡುವೆ ನೀವು ಗೊಂದಲ ಹಾಕದಿದ್ದರೆ ಇಷ್ಟು ಹೊತ್ತಿಗೆ ಅವರು ಬಿಡುಗಡೆ ಹೊಂದಿ ಸಹ ಬರುತ್ತಿದ್ದರು, ಎಂದು ಹೇಳಿದನು. ಅದಕ್ಕೆ ರಣಮಸ್ತಖಾನನು ಏನೂ ಮಾತಾಡಲಿಲ್ಲ. ರಾಮರಾಜನ ಕಡೆಗೆ ಹೋಗುವದಕ್ಕಾಗಿ ಮಾತ್ರ ಜನರಿಗೆ ಅವಸರ ಮಾಡಹತ್ತಿದನು. ಅವರೆಲ್ಲರೂ ರಾಮರಾಜನ ಮಂದಿರದ ಕಡೆಗೆ ನಡೆದರು. ಮಂದಿರದ ಬಳಿಗೆ ಹೋದ ಕೂಡಲೆ, ರಣಮಸ್ತಖಾನನು ತಾನು ಬಂದ ವರ್ತಮಾನವನ್ನು ರಾಮರಾಜನಿಗೆ ತಿಳಿಸಿದನು. ಆಗ ರಾಮರಾಜನ ಸಿರಸ್ತೆದಾರನು ರಣಮಸ್ತಖಾನನನ್ನು ಕರಕೊಂಡು ಹೋಗುವದಕ್ಕಾಗಿ ಎದುರಿಗೆ ಬಂದನು. ಅದನ್ನು ನೋಡಿ ತರುಣ ರಣಮಸ್ತಖಾನನಿಗೆ ಸಮಾಧಾನವಾಗಲಿಲ್ಲ; ಅವನು ರೇಗಿಗೆದ್ದನು. ರಾಮರಾಜನೇ ತನ್ನನ್ನು ಕರಕೊಂಡು ಹೋಗತಕ್ಕದ್ದೆಂದು ಆತನು ಭಾವಿಸಿದನು; ಆದರೆ ಜಗಳ ತೆಗೆಯಲಿಕ್ಕೆ ಇದು ಸಮಯವಲ್ಲೆಂದು ತಿಳಿದು ಆತನು ಸಿರಸ್ತೆದಾರರ ಸಂಗಡ ಹೋದನು. ರಾಮರಾಜನು ಆಗ ತನ್ನ ವಾಡೆಯೊಳಗಿನ ಕಚೇರಿಯಲ್ಲಿ ಕೆಲಸಮಾಡುತ್ತ ಕುಳಿತಿದ್ದನು. ಆತನ ಮುಂದೆ ಸಣ್ಣ ದರ್ಬಾರವೇ ನೆರೆದಂತೆ ಆಗಿತ್ತು. ರಣಮಸ್ತಖಾನನು ಅಲ್ಲಿಗೆ ಹೋದ ಕೂಡಲೆ ರಾಮರಾಜನು ಕುಳಿತ ಸ್ಥಳ ಬಿಟ್ಟು ಏಳದೆ—''ತಮ್ಮ ಪತ್ರದ ಬೆನ್ನಹಿಂದೆ ತಾವೇ ಬರುವ ಶ್ರಮ ತಕ್ಕೊಂಡಿರಲ್ಲ? ಇದೇ ಈಗ ನಾನು ತಮ್ಮ ಪತ್ರಕ್ಕೆ ಉತ್ತರವನ್ನು ಬರೆದು ಕಳಿಸಿದ್ದೆನು'' ಎಂದು ನುಡಿದು ತನ್ನಿಂದ ಸ್ವಲ್ಪ ಅಂತರದ ಮೇಲೆ ಕುಳಿತುಕೊಳ್ಳುವದಕ್ಕಾಗಿ ಸನ್ನೆಯಿಂದ ರಣಮಸ್ತಖಾನನಿಗೆ ಸೂಚಿಸಿದನು.

ಇದರಿಂದಂತು ರಣಮಸ್ತಖಾನನ ಪಿತ್ತವು ತಲೆಗೇರಿತು. ಆತನು ಕುಳಿತುಕೊಳ್ಳದೆ, ನಿಂತುಕೊಂಡೇ ರಾಮರಾಜನಿಗೆ—''ನಾನು ಕುಳಿತುಕೊಳ್ಳುವದಕ್ಕಾಗಿ ಇಲ್ಲಿಗೆ ಬಂದಿರುವದಿಲ್ಲ, ನಾನು ಬಂದ ಕೆಲಸವಾದರೆ ಕುಳಿತುಕೊಂಡಂತೆ ಆಯಿತು. ಆ ಜನರು ಬಂದಿದ್ದಾರೆ. ಒಂದು ನಿಟ್ಟಿನ ಜನರ ವಿಚಾರವನ್ನಂತು ನೀವು ಕೇಳಿಕೊಂಡಿರುವಿರಿ. ಇನ್ನೊಂದು ನಿಟ್ಟಿನವರ ವಿಚಾರವನ್ನು ಸಾವಕಾಶ ಕೇಳಿಕೊಳ್ಳಿರಿ; ಆದರೆ ಆ ಸ್ತ್ರೀಯರ ವಿಡಂಬನೆ ಮಾಡಬೇಡಿರಿ. ಅವರನ್ನಷ್ಟು ನನಗೆ ಒಪ್ಪಿಸಿರಿ. ಉಳಿದವರ ಮುಖದಿಂದ ಕೇಳಿಕೊಳ್ಳತಕ್ಕದ್ದನ್ನು ಕೇಳಿಕೊಂಡು, ಅವರಿಗೆ ಮಾಡತಕ್ಕ ಶಿಕ್ಷೆಯನ್ನು ಮಾಡಿರಿ'' ಎಂದನು.

ರಣಮಸ್ತಖಾನನು ಅತ್ಯಂತ ಆತುರದಿಂದ ಮನಃಪೂರ್ವಕವಾಗಿ ಮಾತಾಡುತ್ತಿದ್ದನು, ರಾಮರಾಜನು ಅರ್ಧ ಆತನ ಕಡೆಗೆ ಅರ್ಧ ಬೇರೆ ಕಡೆಗೆ ನೋಡುತ್ತ ಮುಗುಳುನಗೆ ನಗುತ್ತ ಆತನ ಮಾತುಗಳನ್ನು ಕೇಳುತ್ತಿದ್ದನು. ರಣಮಸ್ತಖಾನನ ಮಾತುಗಳು ಮುಗಿದ ಕೂಡಲೆ ರಾಮರಾಜನು ಮೇಲಕ್ಕೆ ಮುಖವನ್ನೆತ್ತಿ ಆತನನ್ನು ಕುರಿತು—ಹಿಂದುಗಳ ರಾಜ್ಯದಲ್ಲಿ ಹೆಂಗಸರ ವಿಡಂಬನೆಯ ಹೆಸರು ಸಹ ತೆಗೆಯಬೇಡಿರಿ; ಆದರೆ ವಿಚಾರಮಾಡಿ, ಮಾಡತಕ್ಕದ್ದನ್ನು ಮಾಡೋಣ. ''ಯಾರವರು ಅಲ್ಲಿ? ಬಂದ ಆ ಜನರನ್ನು ಕರೆಯಿರಿ ಇತ್ತ'' ಎಂದು ಆಜ್ಞಾಪಿಸುವದರೊಳಗೆ, ಆ ಜನರು ಬಂದ ಸುದ್ದಿಯನ್ನು ಒಬ್ಬ ಸೇವಕನು ರಾಮರಾಜನಿಗೆ ಹೇಳಿದನು. ಆಗ ರಾಮರಾಜನು ಈಗಲೇ ಅವರನ್ನು ಇಲ್ಲಿ ನನ್ನ ಎದುರಿಗೆ ಕರೆದುಕೊಂಡು ಬರ್ರಿ. ಎಂದು ಹೇಳುತ್ತಿರಲು, ರಣಮಸ್ತ ಖಾನನು—''ತಾವು ಈ ಅಪ್ಪಣೆಯನ್ನು ಯಾರ ಸಲುವಾಗಿ ಮಾಡುವಿರಿ? ಒಳಗೆ ತಮ್ಮ ಎದುರಿಗೆ ಯಾರನ್ನು ಕರಕೊಂಡು ಬರತಕ್ಕದ್ದು? ಆ ಸ್ತ್ರೀಯರನ್ನು ಕರಕೊಂಡು ಬರಬೇಕೆಂದು ತಮ್ಮ ಅಪ್ಪಣೆಯಿರುವದೋ ಏನು? ಹೀಗೆ ಆಜ್ಞಾಪಿಸಿ ಸ್ತ್ರೀಯರನ್ನು ದರ್ಬಾರದಲ್ಲಿ ಬರಮಾಡುವದು ತೀರ ಅಯೋಗ್ಯವು. ಈ ಮಾತನ್ನು ತಮಗೆ ನಾನು ಸ್ಪಷ್ಟವಾಗಿ ಹೇಳುತ್ತೇನೆ'' ಅನ್ನಲು ರಾಮರಾಜನು ಹುಬ್ಬುಗಂಟಿಕ್ಕಿ, ರಣಮಸ್ತಖಾನನ ಕಡೆಗೆ ನೋಡಿದನು ಮಾತ್ರ. ಆಮೇಲೆ ಆತನು ಗಟ್ಟಿಯಾಗಿ ತನ್ನ ಸಿರಸ್ತೆದಾರರನ್ನು ಕುರಿತು— ''ಎಲ್ಲರನ್ನು ಕರೆತಂದು ನನ್ನ ಮುಂದೆ ನಿಲ್ಲಿಸಿರಿ. ವಿಜಾಪುರದವರು ನಮ್ಮ ಮಿತ್ರರೆನಿಸಿ ಕೊಳ್ಳುತ್ತಿದ್ದರೂ, ಅವರು ಅಹಮ್ಮದನಗರದವ ರೊಡನೆ ಒಕ್ಕಟ್ಟು ಬೆಳಿಸಿ, ಕಾರ್ಯಸಾಧನ ನಡಿಸುತ್ತಿರುವರೆಂಬ ಸುದ್ದಿಯು ನಮ್ಮ ಕಿವಿಗೆ ಬಿದ್ದಿರುತ್ತದೆ. ಆ ಸುದ್ದಿಗೆ ಇದೊಂದು ಪ್ರತ್ಯಕ್ಷ ಸಾಕ್ಷಿಯಾಗಿರುವಂತೆ ನನಗೆ ತೋರುವುದು, ಹೀಗೆ ಹೆಂಗಸರನ್ನು ಕಳಿಸುವ ನೆವದಿಂದ ಇಲ್ಲಿಯ ಸರದಾರರು ಅಲ್ಲಿಗೆ ಹೋಗಿ, ಅಲ್ಲಿಯ ಸರದಾರರು ಇಲ್ಲಿಗೆ ಬಂದು ಗುಪ್ತ ಸುದ್ದಿಯನ್ನು ತಿಳಿಸುತ್ತಿರುವರು. ಇವರಲ್ಲಿ ಕಾಗದಪತ್ರಗಳೇನಾದರೂ ಇರುತ್ತವೆಯೋ ಹ್ಯಾಗೆಯೆಂಬದನ್ನು ಪರೀಕ್ಷಿಸಿ, ಆಮೇಲೆ ಬಿಟ್ಟುಬಿಡೋಣ. ಇಂಥ ಜನರನ್ನು ಇಟ್ಟುಕೊಂಡು ನಾವು ಮಾಡುವದೇನು?'' ಅನ್ನಲು, ತನ್ನನ್ನು ಉದ್ದೇಶಿಸಿ ನುಡಿದ ಈ ಮಾತುಗಳನ್ನು ಕೇಳಿ ರಣಮಸ್ತಖಾನನ ಕಣ್ಣುಗಳು ಕೆಂಡದಂತಾದವು. ಅಷ್ಟರಲ್ಲಿ ಎಲ್ಲ ಜನರನ್ನು ಒಳಗೆ ಕರಕೊಂಡು ಬಂದರು. ಅವರಲ್ಲಿ ಸ್ತ್ರೀಯರೂ ಇದ್ದರು.

ರಾಮರಾಜನು ರಣಮಸ್ತಖಾನನಿಗೆ ಮತ್ತೊಮ್ಮೆ—''ತಾವು ಇಲ್ಲಿ ಕುಳಿತುಕೊಳ್ಳಿರಿ. ಎಲ್ಲ ವಿಚಾರವು ತಮ್ಮ ಸಮಕ್ಷಮ ಆಗುವದು'' ಎಂದು ಹೇಳಿ, ತನ್ನ ಬಲಗಡೆ ಇದ್ದ ಸ್ಥಳದಲ್ಲಿ ಕುಳಿತುಕೊಳ್ಳಲಿಕ್ಕೆ ಕೈಯಿಂದ ತೋರಿಸಿದನು, ಆದರೆ ರಣಮಸ್ತಖಾನನಿಗೆ ಅದೂ ಒಂದು ಅಪಮಾನದ ಸಂಗತಿಯಾಗಿಯೇ ತೋರಿತು. ತಮ್ಮ ಸ್ತ್ರೀಯರನ್ನು ದರ್ಬಾರದಲ್ಲಿ ಕರತರಬೇಡಿ ರೆಂದು ತಾನು ಹೇಳಿದ್ದನ್ನು ನಿರಾಕರಿಸಿದ್ದಕ್ಕಾಗಿ ರಣಮಸ್ತಖಾನನಿಗೆ ಪರಮಾವಧಿ ಸಂತಾಪ ವಾಯಿತು. ಆತನಲ್ಲಿ ಸಾಮರ್ಥ್ಯವಿದ್ದರೆ, ರಾಮರಾಜನನ್ನು ಅದೇ ಕ್ಷಣದಲ್ಲಿ ನಿಲ್ಲಿಸಿ ಸುಡಿಸಲಿಕ್ಕೆ ಅವನು ಅಪ್ಪಣೆ ಕೊಡುತ್ತಿದ್ದನು; ಆದರೆ ಸದ್ಯಕ್ಕೆ ಆತನು ತನ್ನ ತುಟಿಗಳನ್ನು ತಾನೇ ಕಡಕೊಳ್ಳುತ್ತ ಸುಮ್ಮನೆ ನಿಂತುಕೊಳ್ಳಬೇಕಾಯಿತು. ಆಮೇಲೆ ರಾಮರಾಜನು ರಣಮಸ್ತಖಾನನ ಕಡೆಗೆ ವಿಶೇಷ ಲಕ್ಷಗೊಡಲಿಲ್ಲ. ಆತನು ತನ್ನ ಜನರನ್ನು ಕುರಿತು—''ಈ ಹಿಡಿದು ತಂದ ಜನರ ಮುಖ್ಯರು ಯಾರು?'' ಎಂದು ಕೇಳಿದನು. ಆಗ ಪಾಳಯಗಾರರಲ್ಲಿ ಮುಖ್ಯನಾದವನು ಮುಂದಕ್ಕೆ ಬಂದು—''ಮಹಾರಾಜ, ಇವರ ಮುಖ್ಯಸ್ಥನಿದ್ದವನು ಹೊಡೆದಾಟದಲ್ಲಿ ಮರಣಹೊಂದಿದನು. ಇವರಿಗೆ ನಾವು ಮೊದಲು ಒಳ್ಳೆಯ ಮಾತಿನಿಂದ ಹೇಳಿದೆವು; ನೀವು ನಮ್ಮ ಸಂಗಡ ಏನೂ ಮಾತಾಡಬೇಡಿರಿ; ಬಡಿದಾಟ–ಹೊಡೆದಾಟ ಮಾಡಬೇಡಿರಿ; ನಮ್ಮ ಮಹಾರಾಜರ ಬಳಿಗೆ ಕರಕೊಂಡು ಹೋಗುವೆವು; ಹೇಳಿಕೊಳ್ಳುವದನ್ನು ನೀವು ಅಲ್ಲಿ ಹೇಳಿಕೊಳ್ಳಿರಿ; ಎಂದು ಪರಿಪರಿಯಾಗಿ ಹೇಳಿದೆವು; ಆದರೆ ನಮ್ಮ ಮಾತನ್ನು ಅವರು ಕೇಳಲಿಲ್ಲ. ಒಮ್ಮೆಲೆ ಕತ್ತಿಗಳನ್ನು ಹಿರಿದು ನಮ್ಮ ಮೈಮೇಲೆ ಬಂದರು. ಆಗ ನಾವೂ ನಿರ್ವಾಹವಿಲ್ಲದೆ ಕತ್ತಿಗಳನ್ನು ಹಿರಿಯ ಬೇಕಾಯಿತು. ಬಡೆದಾಟದಲ್ಲಿ ಕೆಲವರು ಸತ್ತರು, ಕೆಲವರು ಗಾಯಹೊಂದಿದರು, ಕೆಲವರು ಓಡಿ ಹೋದರು. ಉಳಿದವರನ್ನು ಕರಕೊಂಡು ಬಂದಿದ್ದೇವೆ. ಪ್ರಭುಗಳು ಕೇಳುವದನ್ನು ಕೇಳಿಕೊಳ್ಳ ಬೇಕು. ಇವರ ಮುಖ್ಯಸ್ಥನು ದೊಡ್ಡ ಸರದಾರನಿದ್ದನೆಂದು ಗೊತ್ತಾಗುತ್ತದೆ'' ಎಂದು ಹೇಳಿದನು. ಆಗ ರಾಮರಾಜನು ಆ ಹಿಡಿದು ತಂದ ಜನರಲ್ಲಿ ಒಬ್ಬೊಬ್ಬನನ್ನು ಮುಂದಕ್ಕೆ ಕರೆದು, ''ನಿಮ್ಮ ಬಳಿಯಲ್ಲಿ ರಾಜಕಾರಣದ ಏನಾದರೂ ಕಾಗದಪತ್ರಗಳಿದ್ದರೆ ನಮಗೆ ಒಪ್ಪಿಸಿ, ಬಿಡಿರಿ. ಅಂದರೆ ನಾವು ನಿಮ್ಮನ್ನು ಈಗಲೇ ಬಿಟ್ಟುಬಿಡುವೆವು. ನಿರುಪದ್ರವಿಗಳಾದ ದಾರಿಕಾರರಿಗೆ ತ್ರಾಸಕೊಡುವ ಇಚ್ಛೆಯು ನಮಗಿಲ್ಲ. ನಮ್ಮ ಸಂಬಂಧವಿದ್ದ ಮಟ್ಟಿಗೆ ನಾವು ನೋಡಬೇಕಾಗುವದು, ಎಂದು ನುಡಿದು, ರಣಮಸ್ತಖಾನನ ಕಡೆಗೆ ತಿರುಗಿ—ಅಹಮ್ಮದನಗರದಿಂದ ವಿಜಾಪುರಕ್ಕೆ ಹೋಗುವ ಹಾದಿಯು ನಮ್ಮ ಹದ್ದಿನೊಳಗಿಂದಲೇ ಹಾದು ಹೋಗಿರುತ್ತದೆನ್ನುವಹಾಗಿಲ್ಲ. ನಿಜವಾಗಿ ನೋಡಿದರೆ ಅಹಮ್ಮದನಗರದಿಂದ ವಿಜಾಪುರಕ್ಕೆ ಹೋಗುವವರು ನಮ್ಮ ಗಡಿಯನ್ನು ಸ್ಪರ್ಶಮಾಡುವ ಕಾರಣವಿಲ್ಲ. ಬೇರೆ ಕಡೆಯಿಂದ ಹಾದಿಯಿರುತ್ತದೆ. ಹೀಗಿದ್ದು ಬುದ್ಧಿಪೂರ್ವಕ ವಾಗಿ ನಮ್ಮ ಹದ್ದಿನೊಳಗಿಂದ ಹಾಯಬೇಕಾದರೆ, ಇವರ ಉದ್ದೇಶವು ಬೇರೆ ಪ್ರವಾಸಿಗಳ ಉದ್ದೇಶದಂತೆ ಸರಳವಾದದ್ದಿರಲಿಕ್ಕಿಲ್ಲ. ನಮ್ಮದಿಷ್ಟು ಸಂಶಯವನ್ನು ನೀವು ದೂರಮಾಡಿಕೊಟ್ಟು, ಈಗಲೇ ಇವರನ್ನು ಕರಕೊಂಡು ಹೋಗಿರಿ, ನಮ್ಮದೇನೂ ಪ್ರತಿಬಂಧವಿಲ್ಲ; ಆದರೆ ನಾನು ಹೇಳಿದಂತೆ ಸಂಶಯಕ್ಕೆ ಆಸ್ಪದವಿರುತ್ತದೋ, ಇಲ್ಲವೋ ನೀವೇ ಹೇಳಿರಿ. ಬುದ್ಧಿಪೂರ್ವಕವಾಗಿ

ಇವರು ನಮ್ಮ ಸೀಮೆಯೊಳಗಿಂದ ಹೋಗಲಿಕ್ಕೆ ಕಾರಣವೇನೆಂಬುದನ್ನು ನೀವೇ ವಿಚಾರ ಮಾಡಿರಿ; ಎಂದು ಹೇಳಿದನು. ಅದಕ್ಕೆ ರಣಮಸ್ತಖಾನನು—"ಈ ಕಾಲದಲ್ಲಿ ನಾನು ಏನೂ ಮಾತಾಡುವದಿಲ್ಲ ಯಾವ ವಿಚಾರವನ್ನೂ ಮಾಡುವದಿಲ್ಲ, ನೀವು ವಿಚಾರ ಮಾಡಬೇಕಾದದ್ದನ್ನು ಮಾಡಿಕೊಳ್ಳಿರಿ." ಎಂದು ನುಡಿದು, ಮೊದಲಿನಂತೆ ಕ್ರುದ್ರದೃಷ್ಟಿಯಿಂದ ನೋಡುತ್ತ ನಿಂತುಕೊಂಡನು. ಅದನ್ನು ನೋಡಿ ರಾಮರಾಜನು ತನ್ನೊಳಗೆ ನಕ್ಕು, ಹಿಡಿಯಲ್ಪಟ್ಟಿದ್ದ ಜನರನ್ನು ಕುರಿತು ಯಾಕರಿ, ನಮ್ಮ ಪ್ರಶ್ನವು ನಿಮಗೆ ತಿಳಿಯಿತೋ ಇಲ್ಲವೋ? ನಿಮ್ಮಲ್ಲಿ ಕಾಗದಪತ್ರಗಳೇನಾದರೂ ಇರುವವೋ ಹ್ಯಾಗೆ? ನೀವು ವಿಜಾಪುರಕ್ಕೆ ಹೋಗುವ ಸರಳಮಾರ್ಗವನ್ನು ಬಿಟ್ಟು ನಮ್ಮ ಸೀಮೆಯೊಳಗಿಂದ ಯಾಕೆ ಬಂದಿರಿ? ಇವೆರಡು ಪ್ರಶ್ನೆಗಳಿಗೆ ಸರಳವಾದ ಸಮಾಧಾನಕಾರಕ ಉತ್ತರಗಳು ನಿಮ್ಮಿಂದ ದೊರೆತರೆ, ಈಗಲೇ ನಿಮ್ಮನ್ನು ಬಿಟ್ಟುಕೊಡುವೆವು; ಅಥವಾ ನಮ್ಮ ಈ ವಕೀಲರಿಗೆ ನಿಮ್ಮನ್ನು ಒಪ್ಪಿಸುವೆವು. ಹಾಗೆ ಉತ್ತರ ದೊರೆಯದೆ ಇದ್ದ ಪಕ್ಷದಲ್ಲಿ, ಯಾರ ಮುಲಾಜನ್ನೂ ಹಿಡಿಯದೆ ಮಾಡತಕ್ಕದ್ದನ್ನು ನಾವು ಮಾಡುವೆವು.

ರಾಮರಾಜನ ಈ ಮಾತುಗಳನ್ನು ಕೇಳಿ ಹಿಡಿದುತಂದ ಮನುಷ್ಯರಲ್ಲಿಯೊಬ್ಬನು ಧೀರ ಗಂಭೀರ ಸ್ವರದಿಂದ—"ಕಾಗದಪತ್ರಗಳೇನೂ ನಮ್ಮ ಬಳಿಯಲ್ಲಿ ಇರುವದಿಲ್ಲ, ನಿಮ್ಮ ಸೀಮೆಯೊಳಗಿಂದ ಹಾದುಹೋಗಲಿಕ್ಕೆ, ನಮ್ಮ ಒಡೆಯನ ಮಗಳಾದ ಈ ಹೆಣ್ಣುಮಗಳಿಗೆ ಸಂಗನಪಲ್ಲಿಯ ದರಗೆಯ ದರ್ಶನ ಮಾಡಿಸಬೇಕೆಂದು ನಮ್ಮ ಒಡೆಯನು ಇಚ್ಛಿಸಿದ್ದೇ ಕಾರಣವು" ಎಂದು ಹೇಳಿದನು. ದರಗೆಯ ಹೆಸರು ಕಿವಿಗೆ ಬಿದ್ದ ಕೂಡಲೆ ರಾಮರಾಜನು ಉಪಹಾಸದಿಂದ ನಕ್ಕು—ಸರಿಸರಿ. ಈ ದರಗೆಯು, ನಮ್ಮ ರಾಜ್ಯದ ಸ್ಥಿತಿಗತಿಗಳನ್ನು ನೋಡಿ ಹೋಗಲಿಕ್ಕೂ ಗುಪ್ತ ಒಳಸಂಚುಗಳನ್ನು ಮಾಡಲಿಕ್ಕೂ ನಿಮಗೆ ತಕ್ಕ ಸ್ಥಳವಾಗಿರುತ್ತದೆ. ಆ ದರಗೆಯು ಇಲ್ಲದ ಹಾಗೆ ಆದ ದಿನವೇ ಸುದಿನವು. ಈಗಂತು ನಮ್ಮ ಸಂಶಯವು ಮತ್ತಿಷ್ಟು ಹೆಚ್ಚಾಯಿತು. ನೀವು ನಮ್ಮ ರಾಜ್ಯದೊಳಗಿನ ಗುಪ್ತಸಂಗತಿಗಳನ್ನು ತಿಳಕೊಳ್ಳಲಿಕ್ಕೆ ಬಂದಂತೆ ತೋರುತ್ತದೆ. ಈ ಗೋಷೆಯಲ್ಲಿದ್ದವರು ಹೆಣ್ಣುಮಕ್ಕಳೇ ಇರುವರೋ ಎಂಬ ಬಗ್ಗೆ ನಮಗೆ ಸಂಶಯ ಬರಹತ್ತಿದೆ. ತರುಣರು, ವೃದ್ಧರು, ಗೋಷೆಯ ಹೆಂಗಸರ ಸೋಗಿನಿಂದ ಗುಪ್ತಚಾರರ ಕೆಲಸಗಳನ್ನು ಮಾಡುತ್ತಿರುವರು. ಹಿಂದೂ ಜನರು ಸ್ತ್ರೀಯರನ್ನು ತಡವುವದಿಲ್ಲೆಂಬುದು ಎಲ್ಲರಿಗೂ ಗೊತ್ತಿರುವದು. ಯಾರಾದರೂ ಹೆಂಗಸರ ಅಪಮಾನ ಮಾಡಿದರೆ, ನಮಗೆ ಸಂತಾಪವಾಗುವದು. ನಮ್ಮ ಈ ಉದಾರಗುಣದ ಲಾಭ ಮಾಡಿಕೊಂಡು, ಹೆಂಗಸರ ಸೋಗಿನಿಂದ ಕಾಗದ ಪತ್ರಗಳನ್ನು ಬಚ್ಚಿಕೊಂಡಿಟ್ಟರೆ ನಾವು ಮಾಡುವದೇನು? ಆದ್ದರಿಂದ ಈ ಮೂವರೂ ಹೆಂಗಸರು ತಮ್ಮ ತಮ್ಮ ಬುರುಕಿಗಳನ್ನು ತೆಗೆದು, ತಮ್ಮ ಮೋರೆಗಳನ್ನು ತೋರಿಸಿದರೆ ಅವರ ಬಿಡುಗಡೆಯಾಗುವದು. ಇಲ್ಲದಿದ್ದರೆ ಇಲ್ಲ ಎಂದು ನುಡಿಯಲು, ಮೊದಲೇ ಸಂತಪ್ತನಾಗಿದ್ದ ರಣಮಸ್ತಖಾನನು, ರಾಮರಾಜನ ಈ ಮಾತುಗಳನ್ನು ಕೇಳಿ ಕ್ರೋಧಪರವಶವಾಗಿ ಕಂಪಿತ ಸ್ವರದಿಂದ—"ಈ ಸ್ತ್ರೀಯರ ಬುರುಕಿಗಳನ್ನು ನಾನು ಕಾಲತ್ರಯದಲ್ಲಿಯೂ ತೆಗೆಯಗೊಡಲಿಕ್ಕಿಲ್ಲ, ಇದೇನು ಹುಡುಗಾಟಿಕೆಯೋ ಏನು?" ಎಂದು ಕೇಳಿದನು. ರಾಮರಾಜನು ಆತನ ಈ ಮಾತಿನ ಕಡೆಗೆ

ಎಷ್ಟು ಮಾತ್ರವೂ ತನ್ನ ಲಕ್ಷವಿಲ್ಲದಂತೆ ತೋರಿಸಿ, ಮತ್ತೆ ಆ ಹೆಂಗಸರನ್ನು ಕುರಿತು—''ಅವರವರು ತಮ್ಮ ತಮ್ಮ ಬುರುಕಿಗಳನ್ನು ತಾವೇ ತೆಗೆದು ಮೋರೆ ತೋರಿಸಬೇಕು; ಇಲ್ಲದಿದ್ದರೆ ಎರಡನೆಯವರು ಬುರುಕಿ ತೆಗೆಯಬೇಕಾಗುವದು. ಯಾರು ಯಾರು ಬುರಕಿಗಳನ್ನು ತೆಗೆಯಲಿಕ್ಕೆ ಎಷ್ಟು ಎಷ್ಟು ತಡಮಾಡುವರೋ ಅಷ್ಟು ಅಷ್ಟು ನಮ್ಮಲ್ಲಿ ಅವರ ವಿಷಯವಾಗಿ ಹೆಚ್ಚು ಹೆಚ್ಚು ಸಂಶಯವು ಉತ್ಪನ್ನವಾಗುವುದು; ಆದ್ದರಿಂದ ಇನ್ನು ನಮ್ಮ ನಿಶ್ಚಯದಲ್ಲಿ ಎಂದಿಗೂ ಅಂತರ ವಾಗಲಿಕ್ಕಿಲ್ಲ.

ಈ ಮಾತುಗಳನ್ನು ಕೇಳಿ ರಣಮಸ್ತಖಾನನ ಮೈಮೇಲೆ ಎಚ್ಚರವು ತಪ್ಪಿದಂತಾಯಿತು. ಆತನಿಗೆ ಏನು ಮಾತಾಡಬೇಕು, ಏನು ಮಾಡಬೇಕು ಎಂಬದು ತಿಳಿಯದೆ ಹೋಯಿತು. ಆತನು ಕ್ರೋಧಾತಿರೇಕದಿಂದ ಥರ ಥರ ನಡುಗಹತ್ತಿದನು. ಆಗಿನ ಕಾಲದ ಆತನ ಮುದ್ರೆಯನ್ನು ನೋಡಿ, ಸ್ವತಃ ರಾಮರಾಜನು ಕೂಡ ಸ್ವಲ್ಪ ಬೆದರಿದನು. ಇನ್ನು ಇದಕ್ಕೂ ಹೆಚ್ಚಿಗೆ ಮುಂದಕ್ಕೆ ಹೋಗದೆ, ಇಲ್ಲಿಂದ ಹಿಂದಕ್ಕೆ ಸರಿಯಬೇಕೆನ್ನುವ ಹಾಗೆ ಆತನಿಗೆ ಒಮ್ಮೆ ಅನಿಸಿತು; ಆದರೆ ಆತನು ತನ್ನ ಮನಸ್ಸನ್ನು ತಿರುಗಿಸಿ, '' ತನ್ನ ಮುಖದಿಂದ ಒಮ್ಮೆ ಉಚ್ಚರಿಸಿಹೋದ ಮಾತನ್ನು ಇನ್ನು ನಡಿಸದಿದ್ದರೆ, ಜನರ ಮನಸ್ಸಿನ ಮೇಲೆ ತನ್ನ ದರ್ಪದ ವಿಷಯವಾಗಿ ದುಷ್ಪರಿಣಾಮವಾದೀತು, ಆದ್ದರಿಂದ ತಾನು ನುಡಿದಂತೆ ನಡೆಯಲೇಬೇಕು'' ಎಂದು ವಿಚಾರ ಮಾಡಿ, ಆತನು ಪುನಃ ಆ ಹೆಂಗಸರನ್ನುದ್ದೇಶಿಸಿ–ಯಾಕೆ, ಸುಮ್ಮನೆ ನಿಂತಿರಿ? ನೀವು ಬುರುಕಿಗಳನ್ನು ತೆಗೆಯಲೇಬೇಕು. ಎಲ್ಲರ ಬುರುಕಿಗಳನ್ನು ತೆಗೆಸಿ, ನಿಮ್ಮ ಮುಖಮುದ್ರೆಯನ್ನು ನೋಡದ ಹೊರತು ನಾನು ಬಿಡುವವನಲ್ಲ, ಎಂದು ನುಡಿದು ರಣಮಸ್ತ ಖಾನನ ಕಡೆಗೆ ತಿರುಗಿ–ನೀವು ನಿಮ್ಮ ಪದವಿಗೆ ಯೋಗ್ಯವಾಗಿ ಆಚರಿಸಿರಿ. ನೀವು ಏನು ತಿಳಿಸಬೇಕಾದದ್ದನ್ನು ನಿಮ್ಮ ಬಾದಶಹರಿಗೆ ತಿಳಿಸಿರಿ. ಇಲ್ಲಿ ಅಮಲು ನಮ್ಮದಿರುತ್ತದೆ. ನಮ್ಮ ರಾಜ್ಯದ ಸುರಕ್ಷಿತೆಯ ಬಗ್ಗೆ ನಾವು ಎಚ್ಚರಪಡಲಿಕ್ಕೆ ಬೇಕು. ನೀವು ಸಾಹಸದಿಂದ ಮುಂದುವರಿದದ್ದರಿಂದ ಏನಾದರೂ ಅನರ್ಥವಾದರೆ, ಅದರ ಜವಾಬುದಾರಿಯು ನಮ್ಮ ಮೇಲೆ ಇರುವದಿಲ್ಲ. ಹಿಂದೂ ಜನರು ಸ್ತ್ರೀಯರ ವಿಡಂಬನೆಯನ್ನು ಎಂದೂ ಮಾಡುವದಿಲ್ಲ. ಒಂದು ಪಕ್ಷದಲ್ಲಿ ಅಪ್ಪಿತಪ್ಪಿ ಅಂಥ ಅಪರಾಧವು ಅವರಿಂದ ಘಟಿಸಿದರೆ, ಅದನ್ನು ಕೇಳುವ ಅಧಿಕಾರವು ನಿಮಗೆ ಇರುವದಿಲ್ಲ. ನೀವು ಹಿಂದಕ್ಕೆ ಸರಿದು, ನಿಮ್ಮ ಸ್ಥಳಕ್ಕೆ ಹೋಗಿರಿ. ನೀವು ಇಲ್ಲಿ ಒಬ್ಬರೇ ಇರುತ್ತೀರಿ. ಎಷ್ಟು ಹಾರಾಡಿದರೂ ನಿಮ್ಮ ಮಾತು ನಡೆಯಗೊಡಲಿಕ್ಕಿಲ್ಲ.

ತನ್ನ ನಿರ್ಧಾರದ ಮಾತುಗಳನ್ನು ಕೇಳಿದಕೂಡಲೆ ರಣಮಸ್ತಖಾನನು ಅಂಜಿ ಹಿಂದಕ್ಕೆ ಸರಿದಾನೆಂದು ರಾಮರಾಜನು ತಿಳಿದಿದ್ದನು; ಆದರೆ ಆ ತರುಣ ವಕೀಲನು ಹಾಗೇನು ಮಾಡದೆ, ಮತ್ತೆ ಎರಡು ಹೆಜ್ಜೆ ಮುಂದಕ್ಕೆ ಬಂದು ಆ ಸ್ತ್ರೀಯರನ್ನು ಕುರಿತು—''ನೀವು ಬುರುಕಿಯನ್ನು ತೆಗೆದುಗಿಗಿದೀರಿ. ಯಾರು ನಿಮ್ಮ ಮೈಮುಟ್ಟುತ್ತಾರೋ ನಾನು ನೋಡುತ್ತೇನೆ'' ಎಂದು ನುಡಿದು, ತನ್ನ ಖಡ್ಗವನ್ನು ಒರೆಯಿಂದ ಹಿರಿದನು. ಇದರಿಂದ ರಾಮರಾಜನ ಶಾಂತಮುದ್ರೆಯು ಅಣುಮಾತ್ರವು ಕುಗ್ಗಲಿಲ್ಲ. ಆತನು ರಣಮಸ್ತಖಾನನಿಗೆ—''ನಿಮ್ಮ ಈ ದುರಾಗ್ರಹವನ್ನು ನೋಡಿ

ನನ್ನ ಮನಸ್ಸಿನಲ್ಲಿ ಮತ್ತೊಂದು ಸಂಶಯವು ಉತ್ಪನ್ನವಾಗಿರುತ್ತದೆ. ನೀವು ಇವರನ್ನು ಇಷ್ಟು ಮೇಲುಗಟ್ಟಿ ಬರುವದರಿಂದ, ನಿಮಗೆ ಇವರ ಸಂಬಂಧವೇನಾದರೂ ಇರಲಿಕ್ಕೆ ಬೇಕು. ಸರಿ ಸರಿ, ಈಗ ನನ್ನ ಲಕ್ಷದಲ್ಲಿ ಬಂದಿತು. ಈ ಜನರು ನಿಮ್ಮ ಬಳಿಗೆ ಕಾಗದ ಪತ್ರಗಳನ್ನು ಕೊಡುವ ದಕ್ಕಾಗಿಯೇ ಈ ಹಾದಿಯಿಂದ ಬಂದಿರಬಹುದು. ನೀವು ಏನೇನು ಒಳಸಂಚುಗಳನ್ನು ನಡಿಸಿರುವಿರೆಂಬದನ್ನು ಕೇಳಿಕೊಂಡು ಹೋಗುವ ಉದ್ದೇಶವೂ ಇವರದಿರಬಹುದು. ದರಗೆಯ ಹರಕೆ–ಗಿರಕೆಗಳೆಲ್ಲ ಸುಳ್ಳು; ಇಲ್ಲದಿದ್ದರೆ ನೀವು ಇಷ್ಟು ಮೇಲುಗಟ್ಟಿ ಬರುವ ಕಾರಣವೇನು? ಈಗ ನಾನು ಕೈಮುಟ್ಟಿ ಪ್ರತಿಯೊಬ್ಬರ ಬುರುಕಿಯನ್ನು ತೆಗೆಯುತ್ತೇನೆ, ನೀವು ನನ್ನ ಜೀವಕ್ಕೆ ಅಪಾಯ ಮಾಡಲಿಕ್ಕೆ ಮುಂದುವರಿದರೆ......''

ಆದರೆ ಆತನ ಮುಖದಿಂದ ಮುಂದಿನ ಮಾತುಗಳು ಹೊರಡಲಿಲ್ಲ. ಆತನು ಸ್ವಲ್ಪ ಹೊತ್ತು ಸುಮ್ಮನಿದ್ದು, ಬಹು ಕಷ್ಟದಿಂದ ಖಾನನ್ನು ಕುರಿತು—''ನಿಮಗೆ ಸ್ವಲ್ಪವೂ ಅಪಾಯ ವಾಗಬಾರದೆಂದು ನಾನು ಇಚ್ಛಿಸುತ್ತೇನೆ; ಇದರ ಮೇಲೆ ನಿಮ್ಮ ಇಚ್ಛೆಯು'' ಅನ್ನಲು, ಆಗ ರಣಮಸ್ತಖಾನನು—'' ನನ್ನ ಶರೀರ ಸಾವಿರಾರು ಚೂರುಗಳಾದರೂ ಚಿಂತೆಯಿಲ್ಲ; ಆದರೆ ನಾನು ಬದುಕಿರುವವರೆಗೆ ಈ ಸ್ತ್ರೀಯರ ಮೈಮೇಲಿನ ಬುರುಕಿಗಳನ್ನು ದೂರ ಮಾಡಲಿಕ್ಕಿಲ್ಲ'' ಎಂದು ಉತ್ತರ ಕೊಟ್ಟನು. ಮಾತಾಡುವಾಗಿನ ಆತನ ಆವಿರ್ಭಾವವು ವಿಲಕ್ಷಣವಾದದ್ದಿತ್ತು. ಈತನು ನುಡಿದಂತೆ ನಡೆಯದೆ ಬಿಡನೆಂದು ಎಲ್ಲರ ನಂಬಿಗೆಯಾಯಿತು. ರಣಮಸ್ತಖಾನನು ಇಷ್ಟು ಮಾತಾಡುವದರೊಳಗಾಗಿ ಏನು ಚಮತ್ಕಾರವಾಯಿತೋ ತಿಳಿಯದು. ಆ ಸ್ತ್ರೀಯಳಲ್ಲಿ ಮುಖ್ಯಳಾದ ತರುಣಿಯು, ಒಮ್ಮೆಲೆ ತನ್ನ ಬುರಕಿಯನ್ನು ಕಳಚಿ ಚೆಲ್ಲಿ, ತನ್ನ ಟೊಂಕದ ಮೇಲೆ ಎರಡೂ ಕೈಯಿಟ್ಟುಕೊಂಡು ಮುಖವೆತ್ತಿ ನಿಂತಳು. ಆಗ ಆಕೆಯ ಮುಖದಿಂದ — 'ಛೇ ಛೇ' ನನ್ನ ಸಲುವಾಗಿ ಇಂಥ ಶೂರ ಪುರುಷನ ಶರೀರ ಸಾವಿರಾರು ತುಣುಕುಗಳಾಗುವದು ಸರಿಯಲ್ಲ, ಅರಸಾ ನೋಡು; ನಿನ್ನ ಸಂಶಯವಿದ್ದದ್ದನ್ನು ದೂರಮಾಡಿಕೊ. ಆದರೆ ನೀನು ಸೆರಗಿಗೆ ಗಂಟು ಹೊಡೆದುಕೊಳ್ಳು; ಇಂದಿನ ನಿನ್ನ ಈ ಕೃತಿಯ ಪರಿಣಾಮವು ಘೋರವಾಗುವದು! ಬಹಳ ಘೋರವಾಗವದು!!

## ಸಂಭಾಷಣ

ಇಷ್ಟು ಶಬ್ದಗಳನ್ನು ಆ ತರುಣಿಯು ಅಚ್ಚ ಪಾರಸೀ ಭಾಷೆಯಲ್ಲಿ ತನ್ನ ಸ್ವಾಭಾವಿಕವಾದ ಮಂಜುಲಸ್ವರದಿಂದ, ಆದರೆ ಸಂತಾಪದ ಮೂಲಕ ಅತ್ಯಂತ ತೀವ್ರಸ್ವರದಿಂದ ನುಡಿಯಲು, ಅವು ಎಲ್ಲರ ಹೃದಯದಲ್ಲಿ ವಿಷಲಿಪ್ತ ಬಾಣಗಳಂತೆ ನೆಟ್ಟವು. ಎಲ್ಲರು ಬೆರಗಾಗಿ ಭಯದಿಂದ ಆಕೆಯನ್ನು ನೋಡಹತ್ತಿದರು. ರಣಮಸ್ತಖಾನನ ಕಣ್ಣುಗಳಂತು ಪೂರ್ಣವಾಗಿ ಆಕೆಯ ಮುಖಮುದ್ರೆಯಲ್ಲಿ ನಟ್ಟುಹೋದವು. ''ಆಕೆಯು ಅತ್ಯಂತ ರೂಪವತಿಯಾಗಿದ್ದಳು.

ರಾಮರಾಜನಾದರೂ ಆಕೆಯನ್ನು ಎವೆಯಿಕ್ಕದೆ ನೋಡಹತ್ತಿದನು. ಆ ಸಂತಪ್ತಳಾದ ಸುಂದರಿಯು ಸುಮ್ಮನಾದಕೂಡಲೆ ಆಕೆಯ ವಿಶಾಲವಾದ ನೇತ್ರಗಳಿಂದ ಒಂದೇ ಸವನೆ ಅಶ್ರುಗಳು ಸುರಿಯಹತ್ತಲು, ಅವುಗಳನ್ನು ನೋಡಿ ಜನರ ಮನಸ್ಸಿನ ಸ್ಥಿತಿಯು ಬಹು ಚಮತ್ಕಾರವಾಯಿತು. ರಾಮರಾಜನ ಮನಸ್ಸಿನ ಸ್ಥಿತಿಯಂತೂ ವಿಲಕ್ಷಣವಾಯಿತು. ಮುಂದೆ ಏನು ಮಾಡಬೇಕೆಂಬದು ಆತನಿಗೆ ತೋಚಲೊಲ್ಲದು. ಆ ಸ್ತ್ರೀಯು ಕೊಟ್ಟ ಶಾಪವು ತನಗೆ ತಟ್ಟ ಬಹುದೋ, ಎಂಬ ಸಂಶಯವು ಆತನನ್ನು ಬಾಧಿಸಹತ್ತಿತು. ಆಕೆಯು ಶಾಪವನ್ನೇ ಕೊಟ್ಟಳೆಂದು ಆತನು ತಿಳಕೊಂಡನು. ದರ್ಬಾರದೊಳಗಿನ ಬಹು ಜನರು ಹಾಗೆಯೇ ತಿಳಕೊಂಡರು; ಆದರೆ ಈ ಪ್ರಸಂಗದಿಂದ ಹ್ಯಾಗಾದರೂ ಪಾರಾಗಬೇಕೆಂದು ತಿಳಿದು ರಾಮರಾಜನು ರಣಮಸ್ತಖಾನ ನಿಗೆ—''ಇನ್ನು ನೀವು ಈ ಜನರನ್ನು ನಿಮ್ಮ ಬಿಡಾರಕ್ಕೆ ಕರಕೊಂಡು ಹೋಗಿ, ಇವರನ್ನು ಮುಂದಕ್ಕೆ ಕಳಿಸುವ ವ್ಯವಸ್ಥೆ ಮಾಡಿರಿ. ಸಾಮೋಪಚಾರದಿಂದ ಎಲ್ಲ ಮಾತಿನ ವಿಚಾರಮಾಡಿದ್ದರೆ, ಈ ಮನೆಗೆ ಬರುತ್ತಿದ್ದಿಲ್ಲ'' ಎಂದು ನುಡಿದು, ಆ ತರುಣಿಯನ್ನು ಕುರಿತು, ಆದರೆ ಆಕೆಯ ಕಡೆಗೆ ನೋಡದೆ—''ಇನ್ನು ನೀವು ನಿಮ್ಮ ಬುರುಕಿಯನ್ನು ಹಾಕಿಕೊಂಡು ಇವರ ಸಂಗಡ ಹೋಗಿರಿ. ಇವರು ನಿಮ್ಮನ್ನು ನಿಮ್ಮ ಊರಿಗೆ ಕಳಿಸುವ ವ್ಯವಸ್ಥೆ ಮಾಡುವರು'' ಎಂದು ಹೇಳಿದನು. ಆಮೇಲೆ ಅಲ್ಲಿ ಕುಳಿತಿರುವ ಜನರಿಗೆ ಹೊರಟುಹೋಗಲು ಸಂಜ್ಞೆಮಾಡಿ, ತಾನು ಕುಳಿತ ಸ್ಥಳದಿಂದ ಎದ್ದು ಮತ್ತೆ ರಣಮಸ್ತಖಾನನಿಗೆ–ನೀವು ನನ್ನ ಮಾತು ಕೇಳುವಹಾಗಿದ್ದರೆ, ಇವರನ್ನು ನಮ್ಮ ರಮ್ಯೋದ್ಯಾನಕ್ಕೆ ಕರಕೊಂಡು ಹೋಗಿ, ಅಲ್ಲಿ ಉಪಹಾರ ಮಾಡಿರಿ. ವಿಶ್ರಾಂತಿಯನ್ನು ಹೊಂದಿದ ಬಳಿಕ, ಇವರನ್ನು ಕುಂಜವನಕ್ಕೆ ಕರಕೊಂಡು ಹೋಗಿರಿ. ಇವರಿಗೆ ಬೇಕಾಗುವ ಮೇಣೆ ಮೊದಲಾದವುಗಳ ವ್ಯವಸ್ಥೆಯನ್ನು ನಾನು ಮಾಡಿಸುತ್ತೇನೆ, ಅನ್ನಲು–ಅದನ್ನು ಕೇಳಿ, ಆ ತರುಣಿಯು ಮತ್ತೊಮ್ಮೆ ಸಂತಾಪದಿಂದ—''ಇನ್ನು ನಾನು ನಿಮ್ಮ ಗಡಿಯಲ್ಲಿ ಅನ್ನೋದಕ ಗ್ರಹಣ ಮಾಡುವದಂತು ಇರಲಿ, ಉಗುಳು ಸಹ ಗುಟಕರಿಸುವ ಹಾಗಿಲ್ಲ, ಇನ್ನು ಈ ಜಗತ್ತಿನಲ್ಲಿ ನನ್ನದೇನು ಆಗಬೇಕಾಗಿದೆ? ನನ್ನ ತಂದೆಯು.....'' ಎಂದು ನುಡಿಯುತ್ತಿರಲು, ಮುಂದಿನ ಶಬ್ದಗಳು ಆಕೆಯ ಮುಖದಿಂದ ಹೊರಡದಾದವು. ಆಕೆಯ ಕಣ್ಣುಗಳೊಳಗಿಂದ ಒಂದೇಸವನೆ ನೀರುಗಳು ಸುರಿಯಹತ್ತಿದವು. ಅದನ್ನು ನೋಡಿ ರಾಮರಾಜನು ಮತ್ತೊಮ್ಮೆ ರಣಮಸ್ತ ಖಾನನಿಗೆ ''ನಾನು ಇನ್ನು ವಿಶೇಷ ಹೇಳುವದಿಲ್ಲ, ಈ ನಮ್ಮ ಮನುಷ್ಯನನ್ನು ನಿಮ್ಮ ವಶಕ್ಕೆ ಕೊಟ್ಟಿರುತ್ತೇನೆ. ಆತನು ನಿಮಗೆ ಬೇಕಾದ ಅನುಕೂಲತೆಯನ್ನು ಮಾಡಿಕೊಡುವನು'' ಎಂದು ಹೇಳಿ ಅಲ್ಲಿಂದ ಹೊರಟುಹೋದನು. ರಾಮರಾಜನು ಹೊರಟುಹೋದ ಬಳಿಕ ರಣಮಸ್ತ ಖಾನನ ಮೈಮೇಲೆ ಎಚ್ಚರ ಬಂದಂತಾಯಿತು. ಆ ಮೇಲೆ ಆತನು ಆ ಸುಂದರಿಯ ಕಡೆಗೆ ಹೊರಳಿ—''ಈ ಹದ್ದಿನಲ್ಲಿ ನೀರು ಸಹ ಕುಡಿಯಲಿಕ್ಕಿಲ್ಲೆಂದು ನೀವು ಹೇಳಿದ್ದು ಯೋಗ್ಯವೇ ಸರಿ, ಆದರೆ ಕುಂಜವನವು ಇಲ್ಲಿಂದ ದೂರವಿರುವದರಿಂದ ಸ್ವಲ್ಪ ಉಪಾಹಾರಮಾಡುವದು ನೆಟ್ಟಗೆ ಕಾಣುತ್ತದೆ, ಸುಮ್ಮನೆ ಉಪವಾಸ ಬಿದ್ದರೆ ಪ್ರಯೋಜನವಾಗದು.'' ಎಂದು ಹೇಳಲು, ಆ ತರುಣಿಯು ಅದಕ್ಕೆ ಒಪ್ಪಲಿಲ್ಲ. ಆಮೇಲೆ ರಣಮಸ್ತಖಾನನು, ಆಗ್ರಹಮಾಡದೆ ರಾಮರಾಜನ ಸೇವಕನಿಗೆ ಹೇಳಿ,

ತನಗೆ ಬೇಕಾದ ಅನುಕೂಲತೆಯನ್ನು ಮಾಡಿಸಿಕೊಂಡು ಆ ಸ್ತ್ರೀಯರೊಡನೆ ಬೇಗನೆ ಕುಂಜವನದ ಕಡೆಗೆ ಸಾಗಿದನು.

ಈ ಮೊದಲೆ ಕುಂಜವನದಿಂದ ವಿಜಯನಗರಕ್ಕೆ ಬರುವಾಗ ರಣಮಸ್ತಖಾನನು ತನ್ನ ಕುದುರೆಯನ್ನು ವೇಗದಿಂದ ಬಿಟ್ಟಂತೆ ಈಗ ಬಿಡುವಹಾಗಿದ್ದಿಲ್ಲ; ಯಾಕೆಂದರೆ, ಆ ಸ್ತ್ರೀಯರ ಮೇಣೆ–ಡೋಲಿಗಳನ್ನನುಸರಿಸಿ ಆತನು ಈಗ ಹೋಗಬೇಕಾಗಿತ್ತು. ಹೀಗೆ ಸಾವಕಾಶವಾಗಿ ಹೋಗುವಾಗ ಆತನ ಮನಸ್ಸಿನಲ್ಲಿ ಹಲವು ವಿಚಾರಗಳು ಉತ್ಪನ್ನವಾದವು. ಆ ತರುಣಿಯ ರೂಪಕ್ಕೆ ರಣಮಸ್ತಖಾನನು ಮೋಹಿತನಾಗಿದ್ದನು. ರಾಮರಾಜನು ಈ ತರುಣಿಯ ಬರುಕಿಯನ್ನು ತೆಗೆಸಿ ಅನ್ಯಾಯಮಾಡಿದರೂ, ಅದೊಂದು ತನ್ನ ಮೇಲೆ ದೊಡ್ಡ ಉಪಕಾರವೇ ಆದಂತಾಯಿತೆಂದು ಖಾನನು ತಿಳಿದನು. ರಾಮರಾಜನು ಹಾಗೆ ಮಾಡದಿದ್ದರೆ, ಆ ಸುಂದರಿಯ ರೂಪವು ರಣಮಸ್ತಖಾನನ ಕಣ್ಣಿಗೆ ಬೀಳುವ ಸಂಭವವಿದ್ದಿಲ್ಲ. ಇದರಿಂದ ರಣಮಸ್ತಖಾನನು ದುರಾಚಾರಕ್ಕೆ ಮನಸ್ಸು ಮಾಡುವಂಥ ಕ್ಷುದ್ರನಿದ್ದನೆಂದಾಗಲಿ, ರಾಮರಾಜನ ಮೇಲಿನ ಯಾವತ್ತು ಸಿಟ್ಟನ್ನು ಆ ತರುಣ ಮುಸಲ್ಮಾನನು ಬಿಟ್ಟು ಬಿಟ್ಟನೆಂದಾಗಲಿ ವಾಚಕರು ಭಾವಿಸಬಾರದು. ಆದರೆ ಮನುಷ್ಯಸ್ವಭಾವಕ್ಕನುಸರಿಸಿ, ಆ ತರುಣನ ಮನಸ್ಸು ಆ ತರುಣಿಯ ಸೌಂದರ್ಯದಿಂದ ಆಕರ್ಷಿತವಾಗಲು, ಆ ಗೊಂದಲದಲ್ಲಿ ಆತನ ಮನಸ್ಸು ಅನ್ಯವಿಚಾರಗಳನ್ನು ಬಿಟ್ಟು, ಆ ಸುಂದರಿಯ ವಿಷಯದ ವಿಚಾರದಲ್ಲಿಯೇ ತೊಡಗಿತೆಂದು ತಿಳಿಯಬೇಕು. ಹಾದಿಯಲ್ಲಿ ಹೋಗಹೋಗುತ್ತ ಇದೊಂದೇ ವಿಚಾರಕ್ಕೆ ಆತನಿಗೆ ಆಸ್ಪದ ದೊರೆತದ್ದರಿಂದ ಆತನು ವಿಚಾರ ಮಾಡುತ್ತ ಮಾಡುತ್ತ ಬಹುದೂರದ ವಿಚಾರಕ್ಕೆ ಹೋಗಹತ್ತಿದನು. ಈ ಸುಂದರಿಯು ಜನ್ಮದ ಸಂಗಾತಿಯು ತನಗಾದರೆ ಧನ್ಯವಾದೇನಲ್ಲ ಎಂತಲೂ ಆತನು ಭಾವಿಸಹತ್ತಿದನು. ನಮ್ಮಿಬ್ಬರ ಸಂಘಟನದ ಯೋಗವಿರುವದರಿಂದಲೇ ಈ ಆಕಲ್ಪಿಕ ಪ್ರಸಂಗವು ಒದಗಿತೆಂದು ಆತನು ತಿಳಕೊಂಡನು. ಆದರೆ ಈ ಮಾತು ಹ್ಯಾಗೆ ಕೂಡಿಬರಬೇಕೆಂಬ ಸಂಶಯದಿಂದ ಆತನು ನಡುನಡುವೆ ಸ್ವಲ್ಪ ಉದಾಸೀನನಾದನು. ಈಕೆಯು ದೊಡ್ಡ ಸರದಾರನ ಮಗಳಾದದ್ದರಿಂದ ನನ್ನ ಕೈ ಹಿಡಿಯುವ ಸಂಭವವಿಲ್ಲೆಂಬ ನಿರಾಶೆಯು ಆತನನ್ನು ಬಾಧಿಸಹತ್ತಿತು; ಆದರೂ ಈಕೆಯನ್ನು ವಿಜಾಪುರಕ್ಕೆ ಈಕೆಯ ಅಬಜಿಯ ಮನೆಗೆ ಕಳಿಸುವದರೊಳಗೆ ಈಕೆಯ ಮನಸ್ಸಿನೊಳಗಿದ್ದದ್ದನ್ನು ತಿಳಿಕೊಳ್ಳಬೇಕೆಂದು ಆತನು ನಿಶ್ಚಯಿಸಿದನು. ರಾಮರಾಜನಿಂದ ನಮ್ಮಿಬ್ಬರಿಗೂ ಆದ ಅಪಮಾನದ ಸೇಡು ತೀರಬೇಕಾದರೆ, ನಮ್ಮಿಬ್ಬರ ವಿವಾಹವಾಗುವದೇ ಅನುಕೂಲವೆಂದು ಆತನು ತಿಳಿದನು. ಹಾದಿಯಲ್ಲಿ ನಡೆಯುವಾಗೆಲ್ಲ ಇವೇ ವಿಚಾರಗಳು ರಣಮಸ್ತಖಾನನ ಮನಸ್ಸಿನಲ್ಲಿ ನಡೆದಿದ್ದವು. ಆ ಸುಂದರಿಯ ಮನಸ್ಸಿನೊಳಗಿದ್ದದ್ದನ್ನು ಆಕೆಯ ದಾಸಿಯ ಮುಖಾಂತರವಾಗಿ ಇಲ್ಲವೆ ತನ್ನ ತಾಯಿಯ ವೃದ್ಧದಾಸಿಯ ಮುಖಾಂತರವಾಗಿ ತಿಳಕೊಳ್ಳಬೇಕೆಂದು ಆತನು ಗೊತ್ತುಮಾಡಿದನು. ಮುಂದೆ ಕೆಲವು ಹೊತ್ತಿನ ಮೇಲೆ ಅವರೆಲ್ಲರು ಕುಂಜವನವನ್ನು ಮುಟ್ಟಿದರು. ರಣಮಸ್ತಖಾನನು ಆ ತರುಣಿಯನ್ನು ತನ್ನ ತಾಯಿಯ ಬಳಿಗೆ ಕಳಿಸಿ, ಆಕೆಯ ಯಾವತ್ತು ಯೋಗಕ್ಷೇಮದ ಬಗ್ಗೆ ಅನುಕೂಲಮಾಡಿಕೊಟ್ಟನು. ಆ ಮೇಲೆ ರಣಮಸ್ತಖಾನನ ಊಟವಾಯಿತು; ಬಂದ ಜನರೂ ಉಂಡರು.

ಇತ್ತ ರಾಮರಾಜನು ಬಹಳ ಪಶ್ಚಾತ್ತಾಪಕ್ಕೆ ಒಳಗಾಗಿದ್ದನು. ಆತನ ಮನಸ್ಸಿಗೆ ಬಹಳ. ಚಡಪಡಿಕೆಯಾಗಿತ್ತು, ಆತನು ಈವರೆಗೆ ಎಷ್ಟೋ ನ್ಯಾಯಾನ್ಯಾಯದ ಕೆಲಸಗಳನ್ನು ಮಾಡಿದ್ದನು ಆದರೆ ಅವುಗಳಲ್ಲಿ ಒಂದಾದರೂ ಇಂದಿನ ಪ್ರಸಂಗದಷ್ಟು ಆತನ ಮನಸ್ಸಿಗೆ ಹತ್ತಿದ್ದಿಲ್ಲ. ''ನಾನು ಇಂದು ಒಬ್ಬ ಕುಲಸ್ತ್ರೀಯ ಅಪಮಾನವನ್ನಷ್ಟೇ ಅಲ್ಲ, ಲಜ್ಜಾಹರಣವನ್ನೂ ಮಾಡಿದೆನಲ್ಲ! ಹೀಗೆ ಮಾಡಲಿಕ್ಕೆ ಕಾರಣವೇನೂ ಇದ್ದಿಲ್ಲ. ಗಂಡಸರು ಬುರುಕಿಯ ನೆವದಿಂದ ಹೆಂಗಸರಂತೆ ನಟಿಸುತ್ತಾರೆಂಬ ಸಂಶಯ ಬಂದಿದ್ದರೆ, ಅವರ ಪರೀಕ್ಷೆಯನ್ನು ನಮ್ಮ ಸ್ತ್ರೀಯರ ಮುಖಾಂತರ ಮಾಡಬಹುದಾಗಿತ್ತು, ಕೂಡಿದ ದರ್ಬಾರದಲ್ಲಿ ಹೆಂಗಸರ ಬುರುಕೆಯನ್ನು ತೆಗೆಸಿದ್ದು ಅನ್ಯಾಯ ವಾಯಿತು''ಎಂಬ ವಿಚಾರದಿಂದ ಆತನ ಮನಸ್ಸು ಅಸಮಾಧಾನಪಡುತ್ತಿರುವಾಗ, ದುಷ್ಪರಿಣಾಮವಾದದ್ದು ನೆನಪಾಗಿ, ಆತನ ಮನಸ್ಸು ಮತ್ತಿಷ್ಟು ಉದ್ವಿಗ್ನವಾಯಿತು. ''ಇಂದಿನ ಈ ನಿನ್ನ ಕೃತ್ಯದ ಪರಿಣಾಮವು ಘೋರವಾಗುವದು ಬಹು ಘೋರವಾಗುವದು'' ಎಂದು ಆ ಸ್ತ್ರೀಯು ಸಂತಾಪದಿಂದ ನುಡಿದದ್ದು ಆತನ ಕಿವಿಯಲ್ಲಿ ಬಾಧಿಸಹತ್ತಿತು. ತನಗೆ ಆ ಶಬ್ದದ ಸ್ಮರಣವಾಗಬಾರದೆಂದು ಆತನು ಬಹಳ ಪ್ರಯತ್ನ ಮಾಡಿದನು; ಆದರೆ ಅದೆಲ್ಲ ವ್ಯರ್ಥವಾಯಿತು. ತನ್ನ ಕೆಲಸಗಳನ್ನೆಲ್ಲ ತೀರಿಸಿಕೊಂಡು ಆತನು ಶಯ್ಯಾಗೃಹದಲ್ಲಿ ಹೋಗಿ ಮಲಗಿಕೊಂಡನು. ಆದರೆ ಆ ತರುಣಿಯು ಉಚ್ಚರಿಸಿದ ಶಬ್ದಗಳು ಆತನಿಗೆ ಕೇಳಿಸದೆಯಿರ ಲೊಲ್ಲವು; ಮತ್ತು ಆ ತರುಣ ಸ್ತ್ರೀಯ ಉಗ್ರಮೂರ್ತಿಯು ಆತನ ಕಣ್ಣಿಗೆ ಕಟ್ಟಿದ್ದು ಮರೆಯಾಗ ಲೊಲ್ಲದು. ಇಂಥ ಸಣ್ಣಮಾತಿಗಾಗಿ ಇಷ್ಟು ಅಸಮಾಧಾನವಾದ ಬಳಿಕ ಮುಂದಿನ ದೊಡ್ಡ ದೊಡ್ಡ ಕಾರ್ಯಗಳು ನನ್ನಿಂದ ಹ್ಯಾಗಾದಾವು! ನಾನು ಯೋಗ್ಯವಾದುದನ್ನೇ ಮಾಡಿದ್ದೇನೆ. ಹೆಂಗಸರ ಕೆಲಸ, ಕೂಡಿದ ದರ್ಬಾರದಲ್ಲಿ ಬುರುಕೆ ತೆಗೆದದ್ದರಿಂದ ಸಂತಾಪವಾಗಿ ನಾಲ್ಕು ಬಿರುನುಡಿಗಳನ್ನು ಆಡಿರಬಹುದು. ಇದರಲ್ಲಿ ಶಾಪ ಕೊಟ್ಟ ಹಾಗೇನಾಯಿತು! ಮುಸಲ್ಮಾನರೆಲ್ಲರು ಒಕ್ಕಟ್ಟಾಗುವಂತೆ ಈಗ ಒಳಸಂಚು ನಡೆದಿರುವದರಿಂದ ನಾನು ಹೀಗೆ ಶೋಧಿಸಿದ್ದರಲ್ಲಿ ಅನ್ಯಾಯವಾದರೂ ಏನಿರುತ್ತದೆ? ನಾನೇನು ಅವರ ರೂಪವನ್ನು ನೋಡಬೇಕೆಂದು ಅವರ ಬುರುಕೆಗಳನ್ನು ತೆಗೆಸಿರುವದಿಲ್ಲ, ಇಷ್ಟೂ ತೆಗೆಸುತ್ತಿದ್ದಿಲ್ಲ; ಆದರೆ ನಾನಾಗಿ ನನ್ನ ರಾಜ್ಯದಲ್ಲಿ ಇಟ್ಟುಕೊಂಡಿದ್ದ ಆ ತರುಣ ವಕೀಲನು ಸೊಕ್ಕಿನಿಂದ ನಡೆದನು. ಅವನ ಸೊಕ್ಕಿನ ನಡತೆಯನ್ನು ನಡೆಯಗೊಡುವದು ನನಗೆ ಅಪಮಾನಕರವಲ್ಲವೇ? ಎಂಬವೇ ಮೊದಲಾದ ವಿಚಾರಗಳಿಂದ ಅವನು ತನ್ನ ಮನಸ್ಸಿನ ಸಮಾಧಾನ ಮಾಡಿಕೊಳ್ಳಹೋದನು; ಆದರೆ—'' ''ದುರ್ಬುದ್ಧಿಯಿಂದಲೇ ಈ ಕಾರ್ಯ ಮಾಡಿದೆಯೆಂದು'' ಆತನ ಮನಸ್ಸು ಕಟಿಯುಹತ್ತಿತು. ಆತನು ಅಂದಿನ ಪ್ರಸಂಗವನ್ನು ಮೊದಲಿನಿಂದ ಕಡೆಯವರೆಗೆ ಮತ್ತೊಮ್ಮೆ ನೆನಪು ಮಾಡಿಕೊಂಡನು. ಅಂದು ಅವನ ಮನಸ್ಸು ಪಶ್ಚಾತ್ತಾಪದಿಂದ ಶುದ್ಧವಾದಂತೆ ಆಗಿತ್ತು, ಈ ಸ್ಥಿತಿಯಲ್ಲಿ, ಆತನು ಬಹುದಿವಸದಿಂದ ಮರೆತುಬಿಟ್ಟಂತೆ ಆಗಿದ್ದ ಮೆಹರ್ಜಾನಳ ಸುಂದರಪ್ರತಿಮೆಯು ಆತನ ಮನಃಪಟಲದ ಮೇಲೆ ಮೂಡಿತು. ಕೂಡಲೆ ಆಕೆಯ ಅತ್ಯಂತ ಸುಂದರರೂಪದ, ಹಾಗು ಅತ್ಯಂತ ಪ್ರೇಮಲ ಸ್ವಭಾವದ ಸ್ಮರಣವಾಗಿ ರಾಮರಾಜನು ಬಹು ದುಃಖಿತನಾದನು. ಆತನು ಹಾಸಿಗೆಯ ಮೇಲೆ

ಮಲಗಿಕೊಳ್ಳಲಾರದೆ, ಚಟ್ಟನೆ ಮೇಲಕ್ಕೆದ್ದು ಹುಚ್ಚನ ಹಾಗೆ ಅತ್ತಿತ್ತ ನೋಡಹತ್ತಿದನು. ಆತನಿಗೆ ಮೇಹರ್ಜಾನಳ ವೃತ್ತಾಂತವೆಲ್ಲ ನೆನಪಾಯಿತು. ಇದು ಆತನ ತಾರುಣ್ಯದೊಳಗಿನ ಅತ್ಯಂತ ರಮಣೀಯವಾದದ್ದೊಂದು ಪ್ರಸಂಗವಾಗಿತ್ತು "ತಾನು ಅಡಿದಂತೆ ಆಕೆಯನ್ನು ಪಟ್ಟರಾಣಿಯಾಗಿ ಮಾಡಿಕೊಳ್ಳುವದರೊಳಗೇ ಆ ಮೇಹರ್ಜಾನಳು ತನ್ನ ಮೇಲೆ ತಪ್ಪು ಹೊರಿಸಿ, ಅವಸರದಿಂದ ಹೊರಟುಹೋದಳು," ಎಂದು ಆತನು ಸಮಾಧಾನ ಮಾಡಿಕೊಳ್ಳಹತ್ತಿದನು. ಆದರೆ ಅದರಿಂದ ಪ್ರಯೋಜನವೇನೂ ಆಗದೆ, ಈಗಲೇ ಕುಂಜವನಕ್ಕೆ ಹೋಗಿ ಬರಬೇಕೆಂಬ ಇಚ್ಛೆಯು ಮಾತ್ರ ಆತನಿಗೆ ಉತ್ಪನ್ನವಾಯಿತು. ಆಗ ಮಧ್ಯರಾತ್ರಿಯಾಗುತ್ತ ಬಂದಿತ್ತು ಅಂಥ ಹೊತ್ತಿನಲ್ಲಿ ಒಬ್ಬನೇ ಕುಂಜವನಕ್ಕೆ ಹೋಗುವದು ಸರಿಯಲ್ಲೆಂಬದು ಆತನ ಮನಸ್ಸಿನಲ್ಲಿ ಬರಲಿಲ್ಲ, ಇದಲ್ಲದೆ ಕುಂಜವನವು ಈಗ ವಿಜಾಪುರದ ವಕೀಲನ ಕೈಯೊಳಗಿರುತ್ತದೆಂಬದನ್ನು ಆತನು ಮರೆತಿದ್ದನೋ ಏನೋ ಯಾರಿಗೆ ಗೊತ್ತು! ಆತನು ಒಮ್ಮೆಲೆ ತನ್ನ ಸೇವಕನನ್ನು ಕರೆದು, ತನ್ನ ಕುದುರೆಗೆ ಜೀನು ಹಾಕಿಕೊಂಡು ಬಾರೆಂದು ಆಜ್ಞಾಪಿಸಿದನು. ಈ ಅಪ್ಪಣೆಯನ್ನು ಕೇಳಿ ಸೇವಕನಿಗೆ ಬಹಳ ಆಶ್ಚರ್ಯವಾಯಿತು. ಇಷ್ಟು ರಾತ್ರಿಯಲ್ಲಿ ಎಲ್ಲಿಗೆ ಹೋಗುತ್ತಿರಬಹುದೆಂದು ಆ ಸೇವಕನು ಆಲೋಚಿಸತೊಡಗಿದನು; ಆದರೆ ಬಾಯಿಬಿಟ್ಟು ಹಾಗೆ ರಾಮರಾಜನನ್ನು ಕೇಳುವ ಧೈರ್ಯವು ಆತನಿಗಾಗಲಿಲ್ಲ, ಆದರೂ ಆತನು ತನ್ನ ಒಡೆಯನಿಗೆ—"ಸಂಗಡ ಯಾರು ಬರುವರು?" ಎಂದು ಕೇಳಲು, ರಾಮರಾಜನು ಒಮ್ಮೆಲೆ ಅವನ ಮೈಮೇಲೆ ಕವಕ್ಕನೆ ಹೋಗಿ— "ಯಾರೆಂದರೆ? ಧನಮಲ್ಲನು! ಎಲ್ಲಿ ಹೋದನವನು?" ಎಂದು ಪ್ರಶ್ನೆ ಮಾಡಿದನು. ಈ ಪ್ರಶ್ನವನ್ನು ಕೇಳಿಯಂತು ಈ ಸೇವಕನು ಬೆರಗಾದನು. ಬಹಳ ದಿನಗಳ ಹಿಂದೆ ಧನಮಲ್ಲನೆಂಬ ಒಬ್ಬ ಸೇವಕನು ಇದ್ದನೆಂಬದು ಆ ಹೊಸ ಸೇವಕನಿಗೆ ಕೇಳಿ ಮಾತ್ರ ಗೊತ್ತಿತ್ತು, ಧನಮಲ್ಲನು ಒಮ್ಮಿಂದೊಮ್ಮೆ ಇಲ್ಲದ ಹಾಗೆ ಆದನೆಂಬದನ್ನೂ ಜನರ ಮುಖದಿಂದ ಆ ಸೇವಕನು ಕೇಳಿದ್ದನು. ಅಂಥವನ ನೆನಪು ಈಗ ಮಹಾರಾಜನಿಗೆ ಒಮ್ಮಿಂದೊಮ್ಮೆ ಯಾಕೆ ಆಗಿರಬಹುದು? ನೆನಪು ಆದರೂ ಆಗಲಿ, ಅವನೇ ಈಗ ಚಾಕರಿಯ ಮೇಲೆ ಇರುವನೋ ಅನ್ನುವಂತೆ ಮಹಾರಾಜರು ಈಗ ಯಾಕೆ ಮಾತಾಡಿರ ಬಹುದು? ಎಂಬ ಪ್ರಶ್ನೆಗಳು ಉತ್ಪನ್ನವಾಗಿ, ಆ ಸೇವಕನಿಗೆ ಆಶ್ಚರ್ಯವಾಯಿತು. ಆದರೆ ಹಾಗೆ ಆಶ್ಚರ್ಯಪಡುತ್ತ ನಿಂತುಕೊಳ್ಳಲಿಕ್ಕೆ ಅದು ಸಮಯ ವಾಗಿದ್ದಿಲ್ಲ, ಧನಮಲ್ಲನು ಈಗೆಲ್ಲಿ ಇದ್ದಾನೆ? ಎಂದು ರಾಮರಾಜನನ್ನು ಕೇಳಲಿಕ್ಕೂ ಆತನಿಗೆ ಧೈರ್ಯವಾಗಲೊಲ್ಲದು. ಆತನು ಸುಮ್ಮನೆ ಅಲ್ಲಿಂದ ಹೊರಟು ಅಶ್ವಶಾಲೆಗೆ ಹೋದನು. ತನ್ನ ಒಡೆಯನಿಗೆ ಏನೋ ಭ್ರಾಂತಿಯಾದಂತೆ ಆಗಿರುವದರಿಂದ, ಈ ಸ್ಥಿತಿಯಲ್ಲಿ ಆತನನ್ನು ಒಬ್ಬನನ್ನೇ ಹೋಗಗೊಡುವದು ಯೋಗ್ಯವಲ್ಲೆಂದು ಆತನು ಆಲೋಚಿಸುತ್ತ ಕುದುರೆಗೆ ಜೀನು ಹಾಕಿ ತಂದು ನಿಲ್ಲಿಸಿದನು, ಪ್ರಸಂಗಬಂದರೆ ತಾನೂ ಸಂಗಡ ಹೋಗಬೇಕೆಂದು ತಿಳಿದು, ಆತನು ತನ್ನ ಕುದುರೆಯನ್ನೂ ಜೀನುಹಾಕಿಸಿ ಮತ್ತೊಬ್ಬ ಸೇವಕನಿಂದ ತರಿಸಿ ನಿಲ್ಲಿಸಿದ್ದನು. ಅಷ್ಟರಲ್ಲಿ ರಾಮರಾಜನು ಪೋಷಾಕು ಹಾಕಿಕೊಂಡು, ಸೇವಕನು ತಂದ ಕುದುರೆಯನ್ನು ಚಟ್ಟನೆ ಹತ್ತಿದನು. ಆಗ ಸೇವಕನು—ನಾನು ಸಂಗಡ ಬರಲಷ್ಟೆ? ಎಂದು ಕೇಳಲು, ರಾಮರಾಜನು ಬರಿಯ

ತಲೆಯಲ್ಲಾಡಿಸಿ ಬರಬಹುದೆಂದು ಸೂಚಿಸಿದನು. ಕೂಡಲೇ ಆ ಸೇವಕನು ಸಿದ್ಧವಾಗಿ ನಿಂತಿದ್ದ ತನ್ನ ಕುದುರೆಯನ್ನು ಹತ್ತಿ ಒಡೆಯನನ್ನು ಹಿಂಬಾಲಿಸಿ ಭರದಿಂದ ಸಾಗಿದನು. ಉಳಿದ ಸೇವಕರು–ಇಷ್ಟು ರಾತ್ರಿಯಲ್ಲಿ ಮಹಾರಾಜರು ಎಲ್ಲಿಹೋಗುತ್ತಿರಬಹುದು, ಎಂದು ತಮ್ಮ ತಮ್ಮೊಳಗೆ ಪ್ರಶ್ನೆ ಮಾಡಹತ್ತಿದರು. ಆದರೆ ಯಾರಿಗಾದರೂ ಗೊತ್ತಿದ್ದರಷ್ಟೇ ಅವರ ಪ್ರಶ್ನಕ್ಕೆ ಉತ್ತರವನ್ನು ಹೇಳುವರು.

ಈ ಮೇರೆಗೆ ಸ್ವಚ್ಛಂದವಾಗಿ ಹೊರಟಿದ್ದ ರಾಮರಾಜನು ಕುದುರೆಯನ್ನು ಭರದಿಂದ ಸಾಗಿಸಿಕೊಂಡು ಹೋಗಿ ತಾಸು ಹೊತ್ತು ಏರಿರುವಾಗ ಕುಂಜವನವನ್ನು ಮುಟ್ಟಿದನು. ಆಗ ಕುಂಜವನವು ರಣಮಸ್ತಖಾನನ ಸ್ವಾಧೀನದಲ್ಲಿದ್ದದ್ದರಿಂದ, ರಾಮರಾಜನು ಅದನ್ನು ಒಮ್ಮೆಲೆ ಪ್ರವೇಶಿಸುವಂತೆ ಇದ್ದಿಲ್ಲ. ಆತನು ಮೊದಲು ಒಂದು ಸಾರೆ ಕುಂಜವನವನ್ನು ಸುತ್ತುವರಿದು ಬಂದು ಅದರ ದ್ವಾರರಕ್ಷಕರಿಗೆ, ತಾನು ಬಂದಿರುವೆನೆಂದು ರಣಮಸ್ತಖಾನನಿಗೆ ಸುದ್ದಿಯನ್ನು ಹೇಳಲು ಆಜ್ಞಾಪಿಸಿದನು. ದ್ವಾರರಕ್ಷಕರು ಹೋಗಹೋಗುತ್ತ ಹಾದಿಯಲ್ಲಿ ಈ ಸುದ್ದಿಯನ್ನು ತಮ್ಮ ಜನರಿಗೆ ಹೇಳಲು, ಅವರು ಪರಮಾಶ್ಚರ್ಯಪಟ್ಟರು. ಅದರೊಳಗೆ, ನಿನ್ನಿನ ದರ್ಬಾರದಲ್ಲಿ ಅನರ್ಥಪ್ರಸಂಗ ಒದಗಿರಲು, ಇಂದು ಬೆಳಗಾಗುವದರೊಳಗೆ ರಾಮರಾಜನು ಒಬ್ಬನೇ ಯಾಕೆ ಬಂದಿರ ಬಹುದೆಂದು ಅವರಿಗೆ ತಿಳಿಯದಾಯಿತು. ಇಲ್ಲಿಯವರೆಗೆ ರಾಮರಾಜನು ಮುಂಗಡ ಸೂಚನೆಯನ್ನು ಕಳಿಸದೆ ಎಂದೂ ಬಂದಿದ್ದಿಲ್ಲ. ನಿಜವಾಗಿ ನೋಡಿದರೆ, ಆಗಿನ ಕಾಲದಲ್ಲಿ ಶತ್ರುಗಳ ಬಿಡಾರವನ್ನೂ ರಾಮರಾಜನಂಥವರು, ಸಂಗಡ ಒಬ್ಬನೇ ಒಬ್ಬ ಸೇವಕನನ್ನು ಕರಕೊಂಡು ಹೋಗವದು ಪರಮ ಸಾಹಸದ ಕಾರ್ಯವೆಂದು ಹೇಳಬಹುದಾಗಿತ್ತು. ಮುಸಲ್ಮಾನ ವಕೀಲನ ಭಾವಣೆಯಲ್ಲಿಯೇ ಆಗಲೊಲ್ಲದೇಕೆ, ತನ್ನ ಜೀವವನ್ನು ತನ್ನ ಶತ್ರುವಿನ ಕೈಯಲ್ಲಿ ಒಪ್ಪಿಸುವದು ಚಮತ್ಕಾರದ ಸಂಗತಿಯೇ ಸರಿ; ಅದರಲ್ಲಿ ನಿನ್ನಿನ ದರ್ಬಾರದಲ್ಲಿ ವಿಲಕ್ಷಣ ಪ್ರಸಂಗ ಒದಗಿತ್ತು. ಆದರೆ, ರಾಮರಾಜನ ಮನಸ್ಸಿನಲ್ಲಿ ಯಾವ ವಿಚಾರವು ಉತ್ಪನ್ನವಾಯಿತೋ, ಆತನು ಇಂಥ ಸಾಹಸವನ್ನು ಯಾಕೆ ಮಾಡಿದನೋ ದೇವರಿಗೇ ಗೊತ್ತು. ಬಂದವನು ರಾಮರಾಜನೇ ಎಂಬ ನಂಬಿಗೆಯು ಸೇವಕನಿಗಿದ್ದದ್ದರಿಂದ ಆತನು ನೆಟ್ಟಗೆ ಹೋಗಿ ರಣಮಸ್ತಖಾನನಿಗೆ ಸುದ್ದಿಯನ್ನು ಹೇಳಿದನು. ಇದನ್ನು ಕೇಳಿ ರಣಮಸ್ತಖಾನನಿಗೂ ಪರಮಾಶ್ಚರ್ಯವಾಯಿತು. ಆತನು ಸ್ವಲ್ಪ ಹೊತ್ತಿನ ಮೇಲೆ ತನ್ನ ಮನಸ್ಸಿನಲ್ಲಿ—"ನಿನ್ನಿನ ಸಮಗ್ರ ಪ್ರಕರಣವನ್ನು ರಾಮರಾಜನು ಮನಸ್ಸಿನಲ್ಲಿ–ತಂದು, ತನ್ನಿಂದಾದ ಉದ್ಧಟತನಕ್ಕೆ ಭಯಪಟ್ಟು ನನಗೆ ಹೇಳಿ ಕೊಳ್ಳಲಿಕ್ಕೆ ಬಂದಿರಬಹುದೆಂದು ಕಾಣುತ್ತದೆ. ಆ ಮಾತಿನ ಸಲುವಾಗಿ ಪಶ್ಚಾತ್ತಾಪವಾಗಿರಲು, ಆ ಪಶ್ಚಾತ್ತಾಪದ ಭರದಲ್ಲಿ ಸವಾರಿಯು ಹೊರಟುಬಂದಿರಬಹುದು, ಎಂದು ಕಲ್ಪಿಸಿ, ಆತನು ಮನಸ್ಸಿನಲ್ಲಿ ಉಬ್ಬಿದನು. ಹ್ಯಾಗೇ ಇರಲಿ, ಈಗ ತಾನು ಆತನನ್ನು ಕಾಣಲಿಕ್ಕೆ ಬೇಕೆಂದು ತಿಳಿದು, ರಣಮಸ್ತಖಾನನು ಸೇವಕನಿಗೆ—"ಹೋಗು ನಾನು ಎದುರಿಗೆ ಬರುವೆನು, ನೀನು ಅವರನ್ನು ಒಳಗೆ ಬರಗೊಡು," ಎಂದು ಹೇಳಿ, ತಾನು ಪೋಷಾಕು ಹಾಕಿಕೊಂಡು ಹೊರಡಲನುವಾದನು. ಇತ್ತ ರಾಮರಾಜನು ಸೇವಕನ ವಿಜ್ಞಾಪನೆಯಂತೆ ಕುಂಜವನವನ್ನು ಪ್ರವೇಶಿಸಿದನು. ಆತನು

ಕೆಲವು ಅಂತರವನ್ನು ಕ್ರಮಿಸಿ ಹೋಗುತ್ತಿರಲು, ಅಲ್ಲಿ ಆತನ ಧನಮಲ್ಲನು ರಣಮಸ್ತಖಾನನ ಸೇವಕರಿಂದ ಸುತ್ತುಗಟ್ಟಲ್ಪಟ್ಟವನಾಗಿ ಅಕಸ್ಮಾತ್ ಅವನ ಕಣ್ಣಿಗೆ ಬಿದ್ದನು. ಈಗ ೩೦ ವರ್ಷಗಳ ಮೇಲೆ ಹೀಗೆ ಅಕಸ್ಮಾತ್ ಧನಮಲ್ಲನು ಕಣ್ಣಿಗೆ ಬಿದ್ದದ್ದನ್ನು ನೋಡಿ ರಾಮರಾಜನು ಆಶ್ಚರ್ಯ ಪಟ್ಟನು. ಆತನು ತನ್ನ ಕುದುರೆಯ ಕಡಿವಾಣವನ್ನು ಬಿಗಿಹಿಡದು ನಿಲ್ಲಿಸಲು, ಆ ಸ್ವಾಮಿಸೇವಕರು ಪರಸ್ಪರ ಒಬ್ಬರನ್ನೊಬ್ಬರು ನೋಡಿದರು. ಧನಮಲ್ಲನು ಆಶ್ಚರ್ಯಚಕಿತನಾಗಿ ಎದ್ದು ನಿಂತನು. ರಣಮಸ್ತಖಾನನ ಸೇವಕರು ಇವರೆಲ್ಲರನ್ನು ನೋಡುತ್ತ ಸುಮ್ಮನೆ ನಿಂತುಕೊಂಡರು. ಐದು ಪಳವಾಯಿತು, ಹತ್ತು ಪಳವಾಯಿತು, ಗಳಿಗೆಯಾಯಿತು; ಆದರೂ ಅವರಿಬ್ಬರು ಸುಮ್ಮನೆ ಒಬ್ಬರನ್ನೊಬ್ಬರು ನೋಡುತ್ತ ನಿಂತುಕೊಂಡರು. ರಣಮಸ್ತಖಾನನ ಸೇವಕರು, ಧನಮಲ್ಲನನ್ನು ರಾಮರಾಜನ ಗುಪ್ತಚಾರನೆಂದು ಭಾವಿಸಿದರು. ತನ್ನ ಗುಪ್ತಚಾರನು ವೈರಿಗಳ ಕೈಯಲ್ಲಿ ಸಿಕ್ಕದ್ದರಿಂದ ತನ್ನ ಗುಟ್ಟು ಹೊರಬೀಳುವದೆಂದು ತಿಳಿದು ರಾಮರಾಜನು ಹೀಗೆ ಆಶ್ಚರ್ಯದಿಂದ ನೋಡುವನೆಂದು ಅವರು ತಿಳಿದರು. ಹೀಗೆ ತಾನು ನಿಲ್ಲುವದು ಸಂಶಯಕ್ಕೆ ಕಾರಣವೆಂದು ತಿಳಿದು, ಏನೋ ತನ್ನ ಮನಸ್ಸಿನಲ್ಲಿ ನಿಶ್ಚಯಿಸಿ, ರಾಮರಾಜನು ತನ್ನ ಕುದುರೆಯನ್ನು ಮುಂದಕ್ಕೆ ನೂಕಿದನು. ಇತ್ತ ರಣಮಸ್ತಖಾನನ ಸೇವಕರು ಧನಮಲ್ಲನನ್ನು ಕರಕೊಂಡು ಎರಡನೆಯ ಕಡೆಗೆ ನಡೆದರು. ಧನಮಲ್ಲನು ಎಲ್ಲಿಂದಲೋ ಕುಂಜವನಕ್ಕೆ ಅದೇ ಬಂದಿದ್ದನು.

ರಾಮರಾಜನು ಮಂದಿರದ ಸನಿಯಕ್ಕೆ ಬರುತ್ತಿರಲು, ರಣಮಸ್ತಖಾನನು ತನ್ನ ಕೆಲ ಜನರೊಡನೆ ಆತನ ಎದುರಿಗೆ ಹೋದನು. ಆಗ ರಾಮರಾಜನು ಕುದುರೆಯಿಂದ ಇಳಿದು ರಣಮಸ್ತಖಾನನ ಕೈಯನ್ನು ಹಿಡಕೊಂಡು ಮಂದಿರದ ಕಡೆಗೆ ನಡೆದನು. ಕುಂಜವನವು ಈ ಮೊದಲೆ ರಾಮರಾಜನು ಮೇಹರ್ಜಾನಳೊಡನೆ ರಮಿಸಿದ ಸ್ಥಳವಾದ್ದರಿಂದ ಆತನಿಗೆ ಅಲ್ಲಿಯ ಯಾವ ಪ್ರದೇಶವೂ ಅಪರಿಚಿತವಾದದ್ದಿದ್ದಿಲ್ಲ. ಕುಶಲ ಪ್ರಶ್ನೆಗಳನ್ನು ಕೇಳುತ್ತ ಸಮಯೋಚಿತ ಮಾತುಗಳನ್ನಾಡುತ್ತ ಅವರೆಲ್ಲರು ಬಂಗಲೆಯ ಕಡೆಗೆ ನಡೆದರು. ಬಂಗಲೆಯೊಳಗಿನ ದರ್ಬಾರಖಾನೆ ಯಲ್ಲಿ ಹೋದಕೂಡಲೆ ರಣಮಸ್ತಖಾನನು ರಾಮರಾಜನನ್ನು ಮಧ್ಯಸ್ಥಾನದ ಉಚ್ಚಾಸನದಲ್ಲಿ ಕುಳ್ಳಿರಿಸಿ—''ಇಷ್ಟು ಆಕಸ್ಮಿಕವಾಗಿ, ಅದರಲ್ಲಿಯೂ ಮೊದಲು ಸುದ್ದಿಯನ್ನು ಹೇಳಿಕಳಿಸದೆ ಬರಲಿಕ್ಕೆ ಕಾರಣವೇನೆಂದು'' ರಾಮರಾಜನನ್ನು ಕೇಳಿದನು. ಅದಕ್ಕೆ ರಾಮ ರಾಜನು—''ಏನೂ ಇಲ್ಲ, ಸಹಜವಾಗಿ ಬಂದೆನು. ಈ ಕುಂಜವನದಲ್ಲಿ ನಾನು ಎಷ್ಟೋ ಸುಖದ ದಿವಸಗಳನ್ನು ಕಳೆದಿದ್ದೆನು; ಆದ್ದರಿಂದ ಯಾವಾಗಾದರೊಮ್ಮೆ ಇದನ್ನು ನೋಡಬೇಕೆಂಬ ಉತ್ಕಟೇಚ್ಛೆಯು ನನಗೆ ಆಗುತ್ತದೆ. ಅದರಂತೆ ನಿನ್ನೆ ರಾತ್ರಿ ಇಚ್ಛೆಯಾಗಲು, ಕೂಡಲೆ ಹೊರಟು ಬಂದೆನು'' ಎಂದು ಹೇಳಿದನು. ಅದನ್ನು ಕೇಳಿ ರಣಮಸ್ತಖಾನನಾದರೂ ಅತ್ಯಂತ ಆದರದಿಂದ ರಾಮರಾಜನಿಗೆ—''ಕುಂಜವನವು ತಮ್ಮದೇ ಇರುವದರಿಂದ ತಾವು ಯಾವಾಗ ಬಂದರೂ ನಾವು ತಮ್ಮ ಆದರ ಸತ್ಕಾರವನ್ನು ಮಾಡಲಿಕ್ಕೆ ಸಿದ್ಧರೇ ಇರುತ್ತೇವೆ; ಆದರೆ ಮೊದಲು ಸೂಚನೆಯಾದರೆ ಮಾನ ಮರ್ಯಾದೆಗೆ ತಕ್ಕಂತೆ ಎಲ್ಲ ವ್ಯವಸ್ಥೆ ಮಾಡಲಿಕ್ಕೆ ಅನುಕೂಲ ವಾಗುವದು. ಆಕಸ್ಮಿಕವಾಗಿ ಬರುವದರಿಂದ ನಮ್ಮಿಂದಲ್ಲದ್ದಿದರೂ, ನಮ್ಮ ಸೇವಕರಿಂದ

ತಪ್ಪುಗಳಾಗುವ ಸಂಭವವಿರುತ್ತದೆ; ಇದಕ್ಕಾಗಿಯೇ ಸೂಚಿಸಿದೆನಲ್ಲದೆ ಬೇರೆ ಏನೂ ಇಲ್ಲ, ತಾವು ಬೇಕಾದಾಗ ಬರಬಹುದು, ನಿನ್ನಿನ ಪ್ರಸಂಗವನ್ನೆಲ್ಲ ಮರೆತು ಇಂದು ತಾವು ಬಂದದ್ದಕ್ಕಾಗಿ ನಮಗೆ ಬಹಳ ಆನಂದವಾಗಿದೆ. ಏನಾದರೂ ವಿಶೇಷತರದ ಅಪ್ಪಣೆಯಿದ್ದರೆ ತಿಳಿಸುವ ಕೃಪೆಯಾಗಬೇಕು. ಮನಸ್ಸಿನಲ್ಲಿ ಯಾವ ಪ್ರಕಾರದ ಸಂಕೋಚವನ್ನೂ ತಂದುಕೊಳ್ಳಬಾರದು, ಎಂದು ಹೇಳಿದನು. ರಣಮಸ್ತಖಾನನ ಈ ಮಾನ ಮರ್ಯಾದೆಯ, ಹಾಗು ವಿನಯದ ಮಾತುಗಳನ್ನು ಕೇಳಿ ರಾಮರಾಜನು ಅವನನ್ನು ಕುರಿತು ''ನೀವು ಬಹಳ ಸುಜ್ಞರಿರುತ್ತೀರಿ. ತರುಣರಿದ್ದು ಬಹಳ ವಿವೇಕಿಗಳಿರುತ್ತೀರಿ. ನಿಮ್ಮನ್ನು ನೋಡಿ ನನಗೆ ಬಹಳ ಸಂತೋಷ ವಾಗಿರುತ್ತದೆ. ನಿನ್ನಿನ ಪ್ರಸಂಗದ ವಿಷಯವಾಗಿ ನಾನು ಮನಸ್ಸಿನಲ್ಲಿ ಏನೂ ಹಿಡಿದಿರುವದಿಲ್ಲ, ನಿಮ್ಮ ಸ್ಥಿತಿಯಲ್ಲಿ ನಾನು ಇರುತ್ತಿದ್ದರೆ, ನೀವು ಮಾಡಿದಂತೆಯೇ ನಾನೂ ಮಾಡುತ್ತಿದ್ದೆನು. ಆದ್ದರಿಂದ ನಿನ್ನಿನ ನಡತೆಯ ವಿಷಯವಾಗಿ ನನ್ನಲ್ಲಿ ಸ್ವಲ್ಪವಾದರೂ ಕುಭಾವನೆಯಿರುವದಿಲ್ಲ, ತಿರುಗಿ ಕೇಳಿದರೆ, ನಿಮ್ಮ ತೇಜಸ್ವಿತೆಗಾಗಿ ನಾನು ನಿಮ್ಮ ಅಭಿನಂದನವನ್ನೇ ಮಾಡೇನು'' ಎಂದು ನುಡಿದು, ರಾಮರಾಜನು ಕೆಲವು ವೇಳೆಯವರೆಗೆ ಸುಮ್ಮನೆ ಕುಳಿತು ಕೊಂಡನು. ಆ ಮೇಲೆ ರಣಮಸ್ತಖಾನನನ್ನು ಕುರಿತು—''ನಾನು ನಿಮ್ಮ ಸಂಗಡ ಕೆಲವು ಏಕಾಂತದ ಮಾತುಗಳನ್ನು ಆಡಬೇಕಾಗಿದೆ, ಆದ್ದರಿಂದ ಈ ಸ್ಥಳವನ್ನಾದರೂ ನಿರ್ಜನವಾಗಿ ಮಾಡಿರಿ; ಅಥವಾ ನಾವೇ ಬೇರೆ ನಿರ್ಜನ ಪ್ರದೇಶಕ್ಕೆ ಹೋಗೋಣ'' ಎಂದು ನುಡಿಯಲು ರಣಮಸ್ತಖಾನನು ಸ್ವಲ್ಪ ಹೊತ್ತು ವಿಚಾರಮಾಡಿ ತನ್ನ ಜನರ ಕಡೆಗೆ ತಿರುಗಿ—''ನೀವು ಎಲ್ಲರೂ ಇಲ್ಲಿಂದ ಹೊರಟು ಹೋಗಿರಿ, ಒಬ್ಬರೂ ನನ್ನ ಹತ್ತಿರ ಇರಲಾಗದು,'' ಎಂದು ಆಜ್ಞಾಪಿಸಿದನು.

ರಣಮಸ್ತಖಾನನು ಹೀಗೆ ಆಜ್ಞಾಪಿಸಿದ ಕೂಡಲೆ ಎಲ್ಲ ಜನರು ಹೊರಟು ಹೋಗಹತ್ತಿದರು. ಅದರಲ್ಲಿ ಒಬ್ಬಿಬ್ಬರು ಸಂಶಯದ ಸ್ವಭಾವದವರಾಗಿದ್ದರು. ಅವರ ಮನಸ್ಸಿಗೆ ಏನು ತಿಳಿಯಿತೋ ಏನೋ, ಅವರು ತಮ್ಮ ಶಸ್ತ್ರಗಳ ಮೇಲೆ ಕೈಯಿಟ್ಟು ಕೊಂಡು ರಣಮಸ್ತಖಾನನನ್ನೂ, ರಾಮ ರಾಜನನ್ನೂ ನೋಡುತ್ತ ನಿಂತುಕೊಂಡರು, ರಾಮರಾಜನು ಇದನ್ನು ನೋಡಿ ನಗುತ್ತ ಅವರಿಗೆ– ಹೋಗಿರಿ ಹೋಗಿರಿ, ನಿಮ್ಮ ಯಜಮಾನನ ಜೀವದ ಚಿಂತೆಯನ್ನು ನೀವು ಸ್ವಲ್ಪವೂ ಮಾಡಬೇಡಿರಿ. ನಾನು ಅಂಥ ದುರಾಲೋಚನೆಯಿಂದ ಇಲ್ಲಿಗೆ ಬಂದವನಲ್ಲ. ಮೇಲಾಗಿ ತಮ್ಮ ಸಂರಕ್ಷಣವನ್ನು ಮಾಡಿಕೊಳ್ಳಲಿಕ್ಕೆ ನಿಮ್ಮ ಯಜಮಾನರು ಸ್ವತಃ ಸಮರ್ಥರೇ ಇದ್ದಾರೆ, ಎಂದು ಹೇಳಿದನು. ಅದನ್ನು ಕೇಳಿ ರಣಮಸ್ತಖಾನನೂ ನಗುತ್ತ–ಎಂಥಾ ಹುಚ್ಚರಿರುವಿರೋ ನೀವು? ಹೋಗಿರಿ ಹೋಗಿರಿ; ಏನೂ ಚಿಂತೆ ಮಾಡಬೇಡಿರಿ, ಎಂದು ಹೇಳಲು ಆ ಸೇವಕರು ಹೊರಟುಹೋದರು. ಆಗ ರಣಮಸ್ತಖಾನನು ರಾಮರಾಜನಿಗೆ–ಏನು ಮಾತಾಡುವದನ್ನು ಇನ್ನು ನಿಶ್ಯಂಕೆಯಿಂದ ಮಾತಾಡಬೇಕು, ಎಂದು ಸೂಚಿಸಿದನು.

# ವಿಲಕ್ಷಣ ಭಾವನೆ

ರಾಮರಾಜನಿಗೆ ಏಕಾಂತದ ಮಾತುಗಳನ್ನು ಹೇಳಲಿಕ್ಕೆ ಸಂಕೋಚವಾಗಹತ್ತಿತು. ಆತನಿಗೆ ರಣಮಸ್ತಖಾನನನ್ನು ನೋಡಿ ಒಂದು ಬಗೆಯ ಸಂಶಯವು ಉತ್ಪನ್ನವಾಗಿತ್ತು. ಮೇಹರ್ಜಾನಳು ತನ್ನನ್ನು ಬಿಟ್ಟುಹೋದಾಗ ಗರ್ಭಿಣಿಯಿದ್ದದ್ದು ರಾಮರಾಜನಿಗೆ ಗೊತ್ತಿತ್ತು. ಆ ಮಾತಿಗೆ ಸರಾಸರಿ ೩೦–೩೫ ವರ್ಷಗಳಾಗಿದ್ದು, ರಣಮಸ್ತಖಾನನ ವಯಸ್ಸೂ ಅಷ್ಟೇ ವರ್ಷದ್ದಾಗಿತ್ತು. ರಣಮಸ್ತಖಾನನ ರೂಪವು ರಾಮರಾಜನ ರೂಪವನ್ನು ಅಚ್ಚಳಿಯದೆ ಹೋಲುತ್ತಿತ್ತು. ಮತ್ತು ರಣಮಸ್ತಖಾನನನ್ನು ನೋಡಿದ ಕೂಡಲೆ ರಾಮರಾಜನ ಮನಸ್ಸಿನಲ್ಲಿ ಒಂದು ಪ್ರಕಾರದ ಪ್ರೇಮವು ಸ್ವಾಭಾವಿಕವಾಗಿಯೇ ಉತ್ಪನ್ನವಾಗುತ್ತಿತ್ತು. ಮೇಲಾಗಿ ಮೇಹರ್ಜಾನಳ ಮುಖ ಮುದ್ರೆಯ ಕೆಲವು ಚಿಹ್ನಗಳು ರಣಮಸ್ತಖಾನನ ಮುಖದಲ್ಲಿ ತೋರುತ್ತಿದ್ದವು. ಇವೆಲ್ಲ ಲಕ್ಷಣಗಳಿಂದ ರಾಮರಾಜನು ಮನಸ್ಸಿನಲ್ಲಿ—''ರಣಮಸ್ತಖಾನನು ಮೇಹರ್ಜಾನಳಲ್ಲಿ ಹುಟ್ಟಿದ ತನ್ನ ಮಗನಾಗಿರಬಹುದೋ ಎಂಬ ಸಂಶಯವು ಉತ್ಪನ್ನವಾಗುತ್ತಿತ್ತು. ನಿನ್ನೆ ರಾತ್ರಿ ಮೇಹರ್ಜಾನಳ ನೆನಪು ಆದಕೂಡಲೆ ಇವೆಲ್ಲ ಮಾತುಗಳು ಅವನ ಮನಸ್ಸಿನಲ್ಲಿ ಒಮ್ಮೆಲೆ ಹೊಳೆಯಲು, ಆತನು ಕುಂಜವನದಲ್ಲಿ ಮೇಹರ್ಜಾನಳು ಇರಬಹುದೆಂದು ಸಂಶಯದಿಂದ ತಟ್ಟನೆ ಕುಂಜವನಕ್ಕೆ ಬಂದಿದ್ದನು. ಇದೇ ವಿಷಯವಾಗಿಯೇ ಕೆಲವು ಮಾತುಗಳನ್ನು ರಣಮಸ್ತಖಾನನಿಗೆ ಏಕಾಂತದಲ್ಲಿ ಕೇಳಬೇಕೆಂದು ಆತನು ಮಾಡಿದ್ದನು; ಆದರೆ ಹಾಗೆ ಕೇಳಲಿಕ್ಕೆ ಪರಮಾವಧಿ ಸಂಕೋಚವಾಗಿ ಆತನು ಆ ಮಾತಿನ ಉಸಾಬರಿಯನ್ನೇ ಬಿಟ್ಟು, ಸುಮ್ಮನೆ ಏನಾದರೂ ಮಾತಾಡಿ ಹೊತ್ತುಗಳೆಯುವದಕ್ಕಾಗಿ ಆತನು ರಣಮಸ್ತಖಾನನನ್ನು ಕುರಿತು—ನಾನು ಹ್ಯಾಗು ಇಂದು ಇಲ್ಲಿಗೆ ಅನಾಯಾಸವಾಗಿ ಬಂದಿದ್ದೇನೆ. ಒಮ್ಮೆ ಆ ಪುಷ್ಕರಣಿಯ ಕಡೆಗೆ ಹೋಗಿಬರೋಣ. ದಂಡೆಯ ಮೇಲಿಂದ ಒಮ್ಮೆ ಅದರ ಪ್ರದಕ್ಷಿಣೆ ಹಾಕಬೇಕೆಂಬ ಇಚ್ಛೆಯು ನನಗೆ ಆಗಿರುತ್ತದೆ. ನೀವು ಸಂಗಡ ಬರುತ್ತಿದ್ದರೆ ಬರ್ರಿ, ಇಲ್ಲವೆ ನನ್ನೊಬ್ಬನನ್ನೇ ಅಲ್ಲಿಗೆ ಹೋಗಗೊಡಿರಿ. ನಾನು ಒಮ್ಮೆ ಸುತ್ತುವರಿದು ಬರುವೆನು. ಮನಸ್ಸಿಗೆ ಬಂದರೆ ಒತ್ತಟ್ಟಿಗೆ ಗಳಿಗೆರಡುಗಳಿಗೆ ಕುಳಿತು ಸ್ವಲ್ಪ ವಿಶ್ರಾಂತಿಯನ್ನು ಹೊಂದುವೆನು, ಇಲ್ಲದಿದ್ದರೆ ಬೇಗನೆ ತಿರುಗಿ ಬರುವೆನು,'' ಎಂದು ನುಡಿಯಲು ರಾಮರಾಜನ ಇಂದಿನ ವಿಚಿತ್ರ ಸ್ಥಿತಿಯನ್ನು ನೋಡಿ ರಣಮಸ್ತಖಾನನಿಗೆ ಬಹಳ ಆಶ್ಚರ್ಯವಾಯಿತು. ರಾಮರಾಜನ ದಿನದ ಉದ್ದಾಮವೃತ್ತಿಯು ಇಂದು ಎಲ್ಲಿಯೋ ಹೋಗಿಬಿಟ್ಟಿತ್ತು. ಕುಂಜವನದೊಳಗೆ ಬಂದಾಗಿನಿಂದ ಈತನು ತನ್ನ ಸಂಗಡ ಇಷ್ಟು ನಮ್ರತೆಯಿಂದ ಯಾಕೆ ನಡಕೊಳ್ಳುತ್ತಾನೆಂಬದು ರಣಮಸ್ತಖಾನನಿಗೆ ತಿಳಿಯದಾಯಿತು. ರಾಮರಾಜನ ನಡತೆಯಲ್ಲಿ ಬರಿಯ ನಮ್ರತೆಷ್ಟೇ ಅಲ್ಲ, ಸ್ವಲ್ಪ ಪ್ರೇಮದ ಲಕ್ಷಣವೂ ರಣಮಸ್ತಖಾನನಿಗೆ ತೋರಿತು. ಆಗ ಆ ತರುಣ ಸರದಾರನ ಮನಸ್ಸಿನಲ್ಲಿ—ಈ ಸ್ಥಳವು ರಾಮರಾಜನದಿದ್ದು, ಈತನಿಗೆ ಒಂದು ಸಾರೆ ಪುಷ್ಕರಣಿಯ ಸುತ್ತು ತಿರುಗಿ ಬರಲಿಕ್ಕೆ ಬೇಡವೆನ್ನುವದು ಹ್ಯಾಗೆಂದು ಯೋಚಿಸಿ, ರಾಮರಾಜನನ್ನು ಕುರಿತು—ಅಲಬತ್ ಅಲಬತ್! ತಾವು ಅವಶ್ಯವಾಗಿ ಪುಷ್ಕರಣಿಯನ್ನು ಸುತ್ತು

ಹಾಕಿಕೊಂಡು ಬರ್ರಿ ತಮ್ಮ ಮನಸ್ಸಿಗೆ ಅಲ್ಲಿ ಕೆಲವು ಹೊತ್ತು ಕುಳಿತುಕೊಳ್ಳುವ ಹಾಗಾದರೆ ಅವಶ್ಯವಾಗಿ ಕುಳಿತುಕೊಳ್ಳಿರಿ. ನೀವು ಹೀಗೆ ಸಂಕೋಚ ಪಡುವುದೇಕೆ? ಎಂದು ಕೇಳಿದನು. ಅದಕ್ಕೆ ರಾಮರಾಜನು–ಸಂಕೋಚವೇನೂ ಇಲ್ಲ; ಆದರೆ ನೀವು ನನ್ನ ಸಂಗಡ ಬರುವ ಹಾಗಿದ್ದರೆ ಬರ್ರಿ, ಪುಷ್ಕರಣಿಯ ದರ್ಶನದಿಂದ ನನಗೆ ಬಹಳ ಸಮಾಧಾನ ವಾಗುವದು, ಆದ್ದರಿಂದ ಬರ್ರಿ, ಹೋಗಿ ಬರೋಣ.

ರಣಮಸ್ತಖಾನನು ರಾಮರಾಜನ ಈ ಮಾತಿಗೆ ಒಪ್ಪಿಕೊಂಡು ಆತನೊಡನೆ ಪುಷ್ಕರಣಿಯ ದಾರಿಯನ್ನು ಹಿಡಿದನು. ಬರುತ್ತ ಬರುತ್ತ ಅವರಿಬ್ಬರು ಪುಷ್ಕರಣಿಯ ದಂಡೆಯನ್ನು ಮುಟ್ಟಿದರು. ಅಲ್ಲಿ ಹೋದ ಕೂಡಲೆ ರಾಮರಾಜನಿಗೆ ಹಿಂದಿನದೆಲ್ಲ ನೆನಪಾಗಿ, ಮೇಹರ್ಜಾನಳು ಆತನ ಕಣ್ಣಿಗೆ ಕಟ್ಟಿದಳು. ಪುಷ್ಕರಣಿಯ ದಂಡೆಯ ಮೇಲೆ ನಿಂತುಕೊಂಡು ಆತನು ಸುತ್ತುಮುತ್ತು ನೋಡುತ್ತಿದ್ದನು. ಹಿಂದಕ್ಕೆ ೩೫ ವರ್ಷಗಳ ಹಿಂದೆ ಇದ್ದಂತೆಯೇ ಪುಷ್ಕರಣಿಯ ಸೌಂದರ್ಯವು ಈಗಾದರೂ ಇತ್ತು, ತನ್ನ ಸಂಗಡ ರಣಮಸ್ತಖಾನನು ಇರುವನೆಂಬದನ್ನು ರಾಮರಾಜನು ಮರೆತು ಬಿಟ್ಟಂತೆ ತೋರಿತು. ಆತನಿಗೆ ಪುಷ್ಕರಣಿಯ ಹೊರತು ಬೇರೆಯೇನೂ ಕಾಣುತ್ತಿದ್ದಿಲ್ಲ. ಅವನು ಪುಷ್ಕರಣಿಯ ಸುತ್ತುಮುತ್ತು ನೋಡಿದನು, ಕೆಳಗೆ ಕಮಲಮಯವಾದ ಜಲದ ಕಡೆಗೆ ನೋಡಿದನು. ಆ ಮೇಲೆ ಆಕಾಶದ ಕಡೆಗೆ ನೋಡಿ ಒಮ್ಮೆ ಗಟ್ಟಿಯಾಗಿ ನಿಟ್ಟುಸಿರುಬಿಟ್ಟನು. ಅಷ್ಟರಲ್ಲಿ ಒಂದು ಮಗ್ಗಲಿಗೆ ಕಟ್ಟಿದ್ದ ನೌಕೆಯ ಕಡೆಗೆ ಆತನ ದೃಷ್ಟಿಯು ಹೋಯಿತು. ನೌಕೆಯನ್ನು ನೋಡಿದ ಕೂಡಲೆ ರಾಮರಾಜನ ವೃತ್ತಿಯು ಅತ್ಯಂತ ವ್ಯಾಕುಲವಾಯಿತು. ಕೂಡಲೆ ಆತನ ಕಣ್ಣೊಳಗಿಂದ ನೀರುಗಳು ಬಂದವು. ಆತನು ತನ್ನ ಮೋರೆಯನ್ನು ಒತ್ತಟ್ಟಿಗೆ ತಿರುಗಿಸಿ ಕಣ್ಣು ಮುಚ್ಚಲು, ಕಣ್ಣೀರ ಹನಿಗಳು ಆತನ ಗಲ್ಲಗಳ ಮೇಲೆ ಪಟಪಟ ಬಿದ್ದವು. ಅದನ್ನು ರಾಮರಾಜನು ಮೆಲ್ಲನೆ ಒರಿಸಿಕೊಂಡು ಎರಡು ಕ್ಷಣ ಹಾಗೇ ಕಣ್ಣುಗಳನ್ನು ಮುಚ್ಚಿಕೊಂಡಿದ್ದನು. ಆ ಮೇಲೆ ಕಣ್ಣು ತೆರೆಯಲು ಎದುರಿಗಿನ ಲತಾಮಂಟಪದಲ್ಲಿ ಒಬ್ಬ ಸ್ತ್ರೀಯು ನಿಂತುಕೊಂಡಿದ್ದು, ಆಕೆಯು ತನ್ನನ್ನು ಎವೆಯಿಕ್ಕದೆ ನೋಡುತ್ತಿರುವಂತೆ ರಾಮರಾಜನಿಗೆ ತೋರಿತು. ಆಗ ಆತನಿಗೆ ತಾನು ಎಲ್ಲಿ ರುತ್ತೇನೆ, ಏನು ಮಾಡುತ್ತೇನೆ ಎಂಬುದರ ಎಚ್ಚರ ಉಳಿಯದೆ, ಆತನು ಬಾಯಿಂದ—"ಮೇಹರ್ಜಾನ! ಮೇಹರ್ಜಾನ!" ಎಂದು ಒಟಗುಟ್ಟುತ್ತ ಆ ಕುಂಜವನದ ಕಡೆಗೆ ಓಡಿದನು. ಕರ್ಮಧರ್ಮ ಸಂಯೋಗದಿಂದ ರಾಮರಾಜನು ಒಟಗುಟ್ಟಿದ್ದು ರಣಮಸ್ತಖಾನನಿಗೆ ಕೇಳಲಿಲ್ಲ, ಕೇಳಿದ್ದರೂ ಅದರ ಅರ್ಥವು ಆತನಿಗೆ ನೆಟ್ಟಗೆ ತಿಳಿಯಲಿಲ್ಲ, ಏನಾದರೂ ನೆನಪಾದದ್ದರಿಂದ ಈತನು ಒಟಗುಟ್ಟುತ್ತ ಹೀಗೆ ಓಡಿ ಹೋಗಿರಬಹುದು; ಆದರೆ ನಾನು ಆತನ ಬೆನ್ನ ಹತ್ತಿ ಹೋಗುವದು ಸರಿಯಲ್ಲ ಎಂದು ರಣಮಸ್ತಖಾನನು ಅಲ್ಲಿಯೇ ನಿಂತುಕೊಂಡನು. ಇನ್ನೊಂದು ಮಾತಿನಲ್ಲಿ ದೇವರು ಕಾದನು; ಯಾಕೆಂದರೆ, ರಾಮರಾಜನ ಕಣ್ಣಿಗೆ ಬಿದ್ದ ಸ್ತ್ರೀಯು ರಣಮಸ್ತಖಾನನ ಕಣ್ಣಿಗೆ ಬೀಳಲಿಲ್ಲ.

ರಾಮರಾಜನು ಓಡಿದವನು ಆ ಲತಾಮಂಟಪವನ್ನು ಪ್ರವೇಶಿಸಿ ನೋಡಿದನು; ಆದರೆ ಅಲ್ಲಿ ಸ್ತ್ರೀಯು ಇದ್ದಿಲ್ಲ, ಆಕೆಯು ಇಲ್ಲಿಯೇ ಎಲ್ಲಿಯಾದರೂ ಗಿಡಗಳ ಮರೆಯಲ್ಲಿ

ಅಡಗಿರಬಹುದೆಂದು ತಿಳಿದು ಆತನು—''ಮೇಹೇರಜಾನ! ಮೇಹೇರಜಾನ!'' ಎಂದು ಗಟ್ಟಿಯಾಗಿ ಕೂಗುತ್ತ ಅತ್ತ ಇತ್ತ ಓಡಾಡಿ ಹುಡುಕಹತ್ತಿದನು. ಆದರೆ ಯಾರೂ ಕಣ್ಣಿಗೆ ಬೀಳಲಿಲ್ಲ. ತಾನು ಕುಂಜವನದಲ್ಲೆಲ್ಲ ಹುಡುಕಿದರೂ ಮೇಹರ್ಜಾನಳು ಸಿಗದಿರಲು, ರಾಮರಾಜನು ಒಂದು ಕಡೆಗೆ ಸುಮ್ಮನೆ ನಿಂತುಕೊಂಡನು. ನಿಂತನಿಂತಿರುವಾಗ ಆತನು. ಮನಸ್ಸಿನಲ್ಲಿ—''ಇದು ಕೇವಲ ನನ್ನ ಭ್ರಾಂತಿಯಾಗಿರಬಹುದು. ಇಲ್ಲದಿದ್ದರೆ ಇಷ್ಟು ವರ್ಷಗಳ ಮೇಲೆ ಮೇಹರ್ಜಾನಳು ಇಲ್ಲಿ ನನ್ನ ಕಣ್ಣಿಗೆ ಹ್ಯಾಗೆ ಬಿದ್ದಾಳು? ಭ್ರಾಂತಿಯು ನಿಶ್ಚಯವಾಗಿ ಭ್ರಾಂತಿಯು'' ಎಂದು ತನ್ನ ಮನಸ್ಸಿನಲ್ಲಿ ಅಂದುಕೊಂಡು, ಇನ್ನು ಹಿಂದಕ್ಕೆ ತಿರುಗಬೇಕೆನ್ನುತ್ತಿರಲು, ಮತ್ತೆ ಆತನ ಮಸ್ಸಿನಲ್ಲಿ—''ಭ್ರಾಂತಿಯೆಂದು ಹ್ಯಾಗೆ ಅನ್ನಬೇಕು? ಮೇಹರಜಾನನಳನ್ನು ನಾನು ಈಗ ಪ್ರತ್ಯಕ್ಷ ನೋಡಿದ್ದೇನೆ. ಮೇಲಾಗಿ ರಣಮಸ್ತಖಾನನ ರೂಪವು ನನ್ನ ರೂಪವನ್ನು ಅಚ್ಚಳಿಯದೆ ಹೋಲುತ್ತದೆ. ಇದಲ್ಲದೆ ಮೇಹರಜಾಹನಳ ಕೆಲವು ಲಕ್ಷಣಗಳು ಆ ತರುಣ ಸರದಾರನ ಮೋರೆ–ಮಾತು–ನಡಿಗೆ ದನಿ ಮೊದಲಾದವುಗಳಲ್ಲಿ ತೋರುತ್ತವೆ. ಮೇಹರಜಾನನಳು ಇಲ್ಲಿಗೆ ಬಂದಿರಲಿಕ್ಕಿಲ್ಲೆಂದು ಹ್ಯಾಗೆ ಹೇಳಬೇಕು? ಅದರಲ್ಲಿ ಧನಮಲ್ಲನೂ ಇಲ್ಲಿಯೇ ಇದ್ದಾನೆ, ಇವೆಲ್ಲವುಗಳ ಮೇಲಿಂದ ಮೇಹೇರಜಾನಳು ನಿಶ್ಚಯವಾಗಿ ಇಲ್ಲಿಯೇ ಇದ್ದಾಳೆ; ರಣಮಸ್ತಖಾನನು ನನ್ನಿಂದ ಆಕೆಯಲ್ಲಿ ಹುಟ್ಟಿದ ಮಗನೇ ನಿಶ್ಚಯವು! ಆದರೆ ಆತನು ವಿಜಾಪುರದ ಬಾದಶಹನ ವಕೀಲನಾಗಿ ಬರುವ ಸಂಭವವು ಹ್ಯಾಗೆ? ಮೇಹೇರಜಾನಳು ನನಗೆ ವಿರೋಧಿಯಾಗಿದ್ದ ಪಕ್ಷದಲ್ಲಿ ತನ್ನ ಮಗನನ್ನು ವಕೀಲನನ್ನಾಗಿ ಹ್ಯಾಗೆ ಬರಗೊಟ್ಟಾಳು? ನನ್ನ ಮೇಲೆ ಆಕೆಯ ಪ್ರೇಮವು ಯಥಾಸ್ಥಿತವಾಗಿದ್ದ ಪಕ್ಷದಲ್ಲಿ ಇಷ್ಟು ದಿನ ಆಕೆಯು ನನ್ನ ಬಳಿಗೆ ಬಾರದೆ ಉಳಿಯುವದಾದರೂ ಹ್ಯಾಗೆ? ಒಟ್ಟಿಗೆ ಇದೇನು ನಿಜವೋ, ಭ್ರಾಂತಿಯೋ, ಸ್ವಪ್ನವೋ ನನಗಂತು ತಿಳಿಯದಾಗಿದೆ. ಎಲ! ನಾನು ಭಯಂಕರವಾದ ಇಂದ್ರಜಾಲದಲ್ಲಿ ಸಿಕ್ಕಿಕೊಂಡೆನೋ ಏನೋ?

ಈ ಮೇರೆಗೆ ರಾಮರಾಜನು ಭ್ರಮಿಷ್ಟನಂತೆ ಆಚರಿಸುತ್ತಿರಲು, ರಣಮಸ್ತಖಾನನು ಆತನು ನಿಂತ ಸ್ಥಳದಲ್ಲಿಯೇ ನಿಂತುಕೊಂಡು ಅವನನ್ನು ನೋಡಿ, ಈತನು ಇಂದು ಹೀಗೆ ಯಾಕೆ ಮಾಡುತ್ತಿರಬಹುದೆಂದು ಯೋಚಿಸಹತ್ತಿದನು. ಆತನಿಗೆ ರಾಮರಾಜನು ಒದರಿದ್ದೂ ಕೇಳಿಸಿದ್ದಿಲ್ಲ; ಕಣ್ಣೀರು ಸುರಿಸಿದ್ದೂ ಕಂಡಿದ್ದಿಲ್ಲ; ವಿಲಕ್ಷಣ ಬುದ್ಧಿಶಾಲಿಯಾದ ಈ ಕುಲೀನ ಮನುಷ್ಯನು ಇಂದು ಹೀಗೆ ಯಾಕೆ ಮಾಡುತ್ತಿರಬಹುದೆಂಬದರ ಗೂಢವೇ ರಣಮಸ್ತಖಾನನಿಗೆ ತಿಳಿಯದಾಯಿತು. ತನ್ನ ಪ್ರೀತಿಯ ಕುಂಜವನದಲ್ಲಿ ಹಿಂದಕ್ಕೆ ಒದಗಿದ್ದೊಂದು ಮನೋಹರ ಪ್ರಸಂಗದ ನೆನಪಾದದ್ದರಿಂದ ಈತನು ಹೀಗೆ ಮಾಡುತ್ತಿರಬಹುದೆಂದು ತರ್ಕಿಸಿ ಆತನು ತನ್ನ ಸಮಾಧಾನ ಮಾಡಿಕೊಳ್ಳುತ್ತಿದ್ದನು. ಅಷ್ಟರಲ್ಲಿ ರಾಮರಾಜನು ನಿಂತಲ್ಲಿಗೆ ಬಂದು–ಕುಂಜವನವನ್ನು ನೋಡಲಿಕ್ಕೆ ನನಗೆ ಪರವಾನಿಗೆಯನ್ನು ಕೊಟ್ಟದ್ದರಿಂದ ನನ್ನ ಮೇಲೆ ನೀವು ಬಹಳ ಉಪಕಾರಮಾಡಿದಂತಾಯಿತು. ಆ ಉಪಕಾರವನ್ನು ಹ್ಯಾಗೆ ತೀರಿಸಬೇಕೆಂಬುದು ನನಗೆ ತಿಳಿಯದಾಗಿದೆ. ತಿರುಗಿ ಮತ್ತೆ ಯಾವಾಗ ನನಗೆ ಕುಂಜವನಕ್ಕೆ ಬರುವ ಮನಸ್ಸಾದೀತೋ ಆಗ ನಾನು ಬರುವೆನು. ಈಗಿನಂತೆಯೇ ಆಗ ನನಗೆ ಪರವಾನಿಗೆಯನ್ನು ಕೊಡಿರೆಂದರಾಯಿತು'' ಅನ್ನಲು, ರಣಮಸ್ತಖಾನನು ಅತ್ಯಂತ

ಸಹಾನುಭೂತಿಯಿಂದ ಛೇ ಛೇ, ಇದೇನು ಮಾತಾಡೋಣವು! ಕುಂಜವನವು ನಿಮ್ಮದಿದ್ದು ನನಗಿಷ್ಟು ಯಾಕೆ ಹೇಳಿಕೊಳ್ಳಬೇಕು? ಕುಂಜವನದ ಮೇಲೆ ತಮ್ಮದಿಷ್ಟು ಪ್ರೇಮವಿರುತ್ತದೆಂಬದು ನನಗೆ ಮೊದಲಿಗೆ ಗೊತ್ತಾಗಿದ್ದರೆ, ನಾನು ಇಲ್ಲಿ ಇರುತ್ತಿದ್ದಿಲ್ಲ, ಬೇರೆ ಕಡೆಗೆ ಇರುತ್ತಿದ್ದೆನು. ಸ್ಥಳವು ನಿಮ್ಮದು, ನಾನೇನು ನಾಲ್ಕು ದಿವಸ ಇದ್ದು ಹೋಗುವವನು. ತಾವು ಬೇಕಾದಾಗ ಬರ್ರಿ, ಬೇಕಾದ ಹಾಗೆ ತಿರುಗಾಡಿರಿ. ನಿಮಗೆ ಬೇಡೆನ್ನುವವರು ಯಾರು? ಈಗ ನಾನು ವಿನಯದಿಂದ ತಮ್ಮನ್ನು ಬೇಡಿಕೊಳ್ಳುವದೇನಂದರೆ, ಹೊತ್ತು ಬಹಳವಾಗಿದೆ. ಸ್ನಾನ-ಸಂಧ್ಯೆ ತೀರಿಸಿಕೊಂಡು ಊಟಮಾಡಿ ಹೋಗಬೇಕು, ಇಲ್ಲಿ ಬಂದು ತಾವು ಉಪವಾಸ ಹೋಗುವದೂ, ತಮ್ಮನ್ನು ನಾನು ಹಾಗೆ ಹೋಗಗೊಡುವದೂ ಸರಿಯಲ್ಲ; ಎಲ್ಲ ಪದಾರ್ಥಗಳನ್ನು ಸಿದ್ಧಮಾಡಿಸಿಕೊಡುವೆನು. ತಮಗೆ ಅಡಿಗೆಮಾಡಿ ಹಾಕಲಿಕ್ಕೆ ಜನರು ಇಲ್ಲಿ ಇರುತ್ತಾರೆ. ಅನ್ನುತ್ತಿರಲು, ರಾಮರಾಜನು ಅದನ್ನು ಪೂರಾ ಕಿವಿಯ ಮೇಲೆ ಸಹ ಹಾಕಿಕೊಳ್ಳದೆ, ಬಗೆಬಗೆಯಿಂದ ಆತನನ್ನು ಕುರಿತು—ಬೇಡ ಬೇಡ, ಅದರ ಸಲುವಾಗಿ ನೀವು ನನಗೆ ಅಗ್ರಹ ಮಾಡಬೇಡಿರಿ. ಉಂಡದಕ್ಕಿಂತಲೂ ಹೆಚ್ಚೆಂದು ತಿಳಿಯಿರಿ. ನಾನು ಇನ್ನು ಇಲ್ಲಿ ಒಂದು ಕ್ಷಣವಾದರೂ ನಿಂತುಕೊಳ್ಳಲಿಚ್ಛಿಸುವದಿಲ್ಲ ಎಂದು ನುಡಿದವನೇ ತಟ್ಟನೆ ಹೊರಟನು. ರಣಮಸ್ತಖಾನನೂ ಆತನ ಬೆನ್ನುಹತ್ತಿ ನಡೆದನು. ರಾಮರಾಜನು ತನ್ನ ಕುದುರೆಯನ್ನು ಬಿಟ್ಟಿದ್ದ ಸ್ಥಳಕ್ಕೆ ಬಂದು ಅದನ್ನು ಹತ್ತಿದನು; ಇಲ್ಲಿಯವರೆಗೆ ತನ್ನ ಸಂಗಡಬಂದಿದ್ದ ಸೇವಕನ ನೆನಪು ಸಹ ಆತನಿಗೆ ಆಗಿದ್ದಿಲ್ಲ ಆದರೆ ಸೇವಕನು ತನ್ನ ಬಳಿಯಲ್ಲಿ ನಿಂತಿದ್ದನ್ನು ನೋಡಿ ರಾಮರಾಜನು ಆತನಿಗೆ ''ನಡೆ'' ಎಂದು ನುಡಿದು, ರಣಮಸ್ತಖಾನನ ಕಡೆಗೆ ಹೊರಳಿ ಆತನ ಅನುಜ್ಞೆಯನ್ನು ಪಡೆದಂತೆ ಸಂಜ್ಞೆಮಾಡಿ ಕುದುರೆಯನ್ನು ಮುಂದಕ್ಕೆ ಬಿಟ್ಟನು. ಇತ್ತ ರಣಮಸ್ತ ಖಾನನು ಇಂದಿನ ರಾಮರಾಜನ ವಿಲಕ್ಷಣ ಸ್ಥಿತಿಯ ಬಗ್ಗೆ ಆಲೋಚಿಸುತ್ತ ತನ್ನ ತಾಯಿಯ ಕೋಣೆಯ ಕಡೆಗೆ ಹೊರಟನು. ನಿನ್ನೆ ತನ್ನ ಬಳಿಗೆ ಬಂದಿದ್ದ ಸುಂದರಿಯ ಯೋಗಕ್ಷೇಮವನ್ನು ತಕ್ಕೊಳ್ಳುವದಕ್ಕೆ ಆತನ ಮನಸ್ಸು ಹರಿಯಹತ್ತಿತು. ಆತನು ತನ್ನ ತಾಯಿಯ ವೃದ್ಧ ದಾಸಿಯಾದ ಲೈಲಿಯೆಂಬವಳನ್ನು ಕಂಡು ಆಕೆಯನ್ನು ಕುರಿತು-

ರಣಮಸ್ತಖಾನ—ನಿನ್ನೆ ಬಂದಿರುವ ತರುಣಿಯ ಯೋಗಕ್ಷೇಮವು ಸರಿಯಾಗಿ ನಡೆದಿರುವದಷ್ಟೇ?

ದಾಸಿ—ಆ ತರುಣಿಯ ವ್ಯವಸ್ಥೆಯು ಬಹಳ ನೆಟ್ಟಗಿರುತ್ತದೆ. ಮಾಸಾಹೇಬರು ಆಕೆಗೆ ತಮ್ಮ ಹತ್ತರ ಇರ ಹೇಳಿದ್ದಾರೆ. ರಾತ್ರಿ ಆಕೆಯ ಹಾಸಿಗೆಯನ್ನು ಸಹ ತಮ್ಮ ಬಳಿಯಲ್ಲಿ ಹಾಸಬೇಕೆಂದು ಹೇಳಿದರು. ಏನು ಚಮತ್ಕಾರವೋ ತಿಳಿಯದು, ಆ ತರುಣಿಯು ಕೇವಲ ಹೊಟ್ಟೆಯ ಮಗಳಂತೆ ಮಾಸಾಹೇಬರ ಸೇವೆಯನ್ನು ಮಾಡಹತ್ತಿದ್ದಾಳೆ. ಆಕೆಯ ಸ್ಥಿತಿಯನ್ನು ನೋಡಿದರೆ, ಆಕೆಯು ಇಲ್ಲಿಂದ ಹೋಗುವ ಹಾಗೆ ತೋರುವದಿಲ್ಲ

ರಣಮಸ್ತಖಾನ—ಏನಂದಿ? ಆಕೆಯು ಇಲ್ಲಿಂದ ಹೋಗುವಹಾಗೆ ಕಾಣುವದಿಲ್ಲವೆ? ಹಾಗಾದರೆ ಆಕೆಯು ಇಲ್ಲಿಯೇ ಇರುತ್ತಾಳೋ ಏನು?

ದಾಸಿ—ಹೌದು, ಆಕೆಯು ಇಲ್ಲಿಯೇ ಇರುವಂತೆ ತೋರುತ್ತದೆ. ಇಂದು ಮುಂಜಾನೆ ನನ್ನ ಮುಂದೆ ಆಕೆಯು ಮಾಸಾಹೇಬರ ಸಹವಾಸದಲ್ಲಿಯೇ ನನ್ನ ಜನ್ಮವನ್ನು ಕಳೆಯುವ

ಪ್ರಸಂಗ ಬಂದರೆ, ನಾನು ಧನ್ಯಳಾಗುವೆನು, ಎಂದು ಹೇಳಿದಳು. ನಿಮ್ಮನ್ನಂತು ಆಕೆಯು ''ನವಾಬ ಸಾಹೇಬರು'' ಎಂದು ಕರೆದ ಹೊರತು ಬಾಯಿ ಎತ್ತುವದಿಲ್ಲ.

ರಣಮಸ್ತಖಾನ—ಶಾಬಾಶ! ಆ ತರುಣಿಯು ಒಳ್ಳೇ ಸುಂದರ ಹೆಸರು ಹುಡುಕಿ ತೆಗೆದಿದ್ದಾಳೆ ಬಿಡು! ಇದಕ್ಕಾಗಿ ನಾನು ಆಕೆಯನ್ನು ಪ್ರತ್ಯಕ್ಷ ಕಂಡು ಕೃತಜ್ಞತೆಯನ್ನು ಪ್ರಕಟಿಸತಕ್ಕದ್ದು ನೀನು ಅದಷ್ಟು ಸಂಧಿಯನ್ನು ಸಾಧಿಸಿಕೊಳ್ಳುವಹಾಗಿದ್ದರೆ ನೋಡಬಾರದೆ?

ದಾಸಿ–ಆ ಸಂಧಿಯನ್ನು ಒದಗಿಸಿಕೊಡಲಿಕ್ಕೆ ನಾನು ಯಾಕೆ ಬೇಕು? ಆಕೆಯ ಮನಸ್ಸಿಗೆ ಬಂದರೆ ತಾನಾಗಿ ನಿಮಗೆ ಆ ಸಂಧಿಯನ್ನು ಒದಗಿಸಿಕೊಟ್ಟಾಳು. ಆಕೆಯ ಎಲ್ಲ ಸ್ಥಿತಿ ರೀತಿಗಳನ್ನು ನೋಡುವದರ ಮೇಲಿಂದ, ಆಕೆಯು ಸ್ವಚ್ಛಂದ ವೃತ್ತಿಯವಳಿರುವಂತೆ ನನಗೆ ತೋರುತ್ತದೆ. ಈಗ ಆಕೆಯು ಪುಷ್ಕರಣಿಯ ಕಡೆಗೆ ಹೋಗಿರುತ್ತಾಳೆ.

ದಾಸಿಯ ಈ ಮಾತುಗಳನ್ನು ಕೇಳಿ ರಣಮಸ್ತಖಾನನು ಅಲ್ಲಿ ಬಹಳ ಹೊತ್ತು ನಿಲ್ಲದೆ ಅಲ್ಲಿಂದ ಹೊರಟು ಹೋದನು. ಆ ಸುಂದರಿಯು ಕುಂಜವನದಲ್ಲಿ ಹೋಗಿರುವದರಿಂದ ತಾನೂ ಅತ್ತ ಕಡೆಗೆ ಹೋಗಬೇಕೆಂದು ಮಾಡಿದನು. ಆದರೆ ಅಪರಿಚಿತ ತರುಣಿಯೊಬ್ಬಳು, ಅಕಸ್ಮಾತ್ತಾಗಿ ತನ್ನ ಮನೆಗೆ ಬಂದಿರಲು, ತಾನು ಆಕೆಯನ್ನು ಏಕಾಂತದಲ್ಲಿ ಕಾಣಲಿಚ್ಛಿಸುವದೂ, ಆಕೆಯೊಡನೆ ಏಕಾಂತದಲ್ಲಿ ಮಾತಾಡುವದೂ ದೊಡ್ಡಸ್ತನಕ್ಕೆ ಒಪ್ಪುವದಿಲ್ಲೆಂಬ ವಿಚಾರವು ಆತನ ಮನಸ್ಸಿನಲ್ಲಿ ಉತ್ಪನ್ನವಾಯಿತು; ಆದರೂ ಆತನು ತನ್ನ ವಿಚಾರವನ್ನು ತಿರುಗಿಸಲಿಲ್ಲ. ದೂರಿಂದ ಆಕೆಯನ್ನು ನೋಡಿದರೆ ತಪ್ಪೇನು? ಮುಂದೆ ಪ್ರಸಂಗ ನೋಡಿ, ನಡೆದರಾಯಿತು, ಎಂದು ಆಲೋಚಿಸುತ್ತಿರಲು, ಮಂದಿರದ ಕಡೆಗೆ ನಡೆದಿದ್ದ ಅವನ ಕಾಲುಗಳು ಮೆಲ್ಲಮೆಲ್ಲನೆ ಕುಂಜವನದೊಳಗಿನ ಪುಷ್ಕರಣಿಯ ಕಡೆಗೆ ಸಾಗಹತ್ತಿದವು. ಆತನು ಹಲವು ಲತಾಮಂಟಪಗಳನ್ನು ಲಕ್ಷಪೂರ್ವಕವಾಗಿ ಹುಡುಕಿದನು; ಆದರೆ ಎಲ್ಲಿಯೂ ಆ ಸುಂದರಿಯ ಗೊತ್ತು ಹತ್ತಲಿಲ್ಲ. ಆ ಸುಂದರಿಯು ಆಕಸ್ಮಾತ್ತಾಗಿ ಭೆಟ್ಟಿಯಾದರೆ, ತಾನು ಹ್ಯಾಗೆ ನಿಲ್ಲಬೇಕು? ಹ್ಯಾಗೆ ಮಾತಾಡಬೇಕು ಎಂಬ ವಿಚಾರಗಳಲ್ಲಿ ಆತನ ಮನಸ್ಸು ತೊಡಗಿತ್ತು. ಆತನು ಆ ತರುಣಿಯನ್ನು ಶೋಧಿಸುತ್ತ ಹೋಗುತ್ತಿರಲು, ಲತಾಮಂಟಪದೊಳಗಿನ ಪೀಠದಲ್ಲಿ ತಾನು ಹುಡುಕುತ್ತಿದ್ದ ತರುಣಿಯು ಸಚಿಂತ ಮುದ್ರೆಯಿಂದ ಆಲೋಚಿಸುತ್ತ ಕುಳಿತದ್ದನ್ನು ಆತನು ನೋಡಿದನು. ಆಗ ಆ ತರುಣಿಯ ದರ್ಶನದ ವಿಷಯವಾಗಿ ಅತ್ಯಂತ ಆತುರವಾಗಿದ್ದ ಆ ತರುಣ ಸರದಾರನು ಹಿಂದುಮುಂದಿನ ವಿಚಾರವಿಲ್ಲದೆ ತಟ್ಟನೆ ಆಕೆಯ ಮುಂದೆ ಹೋಗಿ ನಿಂತು ಕೊಂಡನು. ಹೀಗೆ ರಣಮಸ್ತಖಾನನು ಆ ತರುಣಿಯ ಎದುರಿಗೆ ಹೋಗಿ ನಿಂತದ್ದೊಂದೇ ತಡ, ಆಕೆಯು ಮೆಟ್ಟಿಬಿದ್ದು ತಟ್ಟನೆ ಎದ್ದು ನಿಂತುಕೊಂಡು ಮೈತುಂಬ ಸೆರಗು ಹೊದ್ದುಕೊಂಡಳು. ಆಗ ರಣಮಸ್ತಖಾನನ ಮನಸ್ಸಿನಲ್ಲಿ ಈವರೆಗೆ ಎಂದೂ ಅನುಭವಕ್ಕೆ ಬಾರದ ವಿಲಕ್ಷಣ ಭಾವನೆಯುಂಟಾಯಿತು.

# ಪ್ರತಿಜ್ಞೆ

ಈ ತರುಣ ಸ್ತ್ರೀಯು ಹೀಗೆ ಗಾಬರಿಯಾಗಿ ಎದ್ದು ನಿಂತಳಷ್ಟೇ ಅಲ್ಲ, ಆಕೆಯು ಥರ ಥರ ನಡುಗಹತ್ತಿದಳು. ಅದನ್ನು ನೋಡಿದ ಕೂಡಲೆ ರಣಮಸ್ತಖಾನನು ಆಶ್ಚರ್ಯಮಗ್ನನಾದನು. ತರುಣಿಯು ಆನಂದ ವೃತ್ತಿಯವಳಿದ್ದು, ಆಕೆಯು ಕುಂಜವನದಲ್ಲಿ ಈಗ ಉಲ್ಲಾಸದಿಂದ ಗಾಯನ ಮಾಡುತ್ತ ರಮಿಸಹತ್ತಿರಬಹುದೆಂದು ಆತನು ಆ ವೃದ್ಧ ದಾಸಿಯ ಮಾತಿನ ಮೇಲಿಂದ ತಿಳಿದಿದ್ದನು; ಆದರೆ ಅದರ ವಿರುದ್ಧ ಸ್ಥಿತಿಯು ರಣಮಸ್ತಖಾನನ ಕಣ್ಣಿಗೆ ಬಿದ್ದಿತು. ಆತನು ಆಕೆಯ ಮುಂದೆ ನಿಂತುಕೊಂಡಿದ್ದನು, ಆಕೆಯು ಆತನ ಮುಂದೆ ನಿಂತುಕೊಂಡಿದ್ದಳು; ಅವಳು ನೆಲವನ್ನು ನೋಡುತ್ತಿದ್ದಳು. ಆತನು ಆಕೆಯ ಬಾಡಿದ ಮೋರೆಯನ್ನು ನೋಡುತ್ತಿದ್ದನು. ತನ್ನ ಕಣ್ಣೊಳಗಿಂದ ಹೊರಸೂಸುವ ನೀರುಗಳು ಆತನ ಕಣ್ಣಿಗೆ ಬೀಳಬಾರದೆಂದು ಆಕೆಯು ಯತ್ನಿಸುತ್ತಿದ್ದಳು. ಆತನಾದರೂ ತನ್ನ ಕಣ್ಣೊಳಗಿಂದ ನೀರುಗಳು ಬರಬಾರದೆಂದು ಪ್ರಯತ್ನ ಮಾಡುತ್ತಿದ್ದನು. ಆಕೆಯ ದೇಹವು ಥರಥರ ನಡುಗುತ್ತಿತ್ತು, ಆತನ ಹೃದಯವು ಕಂಪಿಸತೊಡಗಿತ್ತು. ಮಾತಾಡುವ ಇಚ್ಛೆಯು ಅವಳಿಗಿತ್ತೋ ಇಲ್ಲವೋ ದೇವರಿಗೆ ಗೊತ್ತು, ಈತನು ಮಾತ್ರ ಯಾವಾಗ ಮಾತಾಡೇನೆಂದು ಆತುರಪಡುತ್ತಲಿದ್ದನು. ನೂರಜಹಾನಳು ಬಹಳ ಸುಂದರಿಯಿದ್ದಳು. ರಾಮರಾಜನ ದರ್ಬಾರದಲ್ಲಿ ಆಕೆಯು ಸಂತಪ್ತ ಮುದ್ರೆಯಿಂದಾಗ್ಯೂ ಆಕೆಯ ಸೌಂದರ್ಯದಲ್ಲಿ ಕೊರತೆಯುಂಟಾಗಿದ್ದಿಲ್ಲ, ಈಗ ಮನಸ್ಸಿನ ವ್ಯಾಕುಲತೆಯಿಂದ ಅತ್ಯಂತ ಮ್ಲಾನವದನಳಾಗಿದ್ದರೂ, ಆಕೆಯ ಸೌಂದರ್ಯದಲ್ಲಿ ಈಗೂ ಕೊರತೆಯುಂಟಾಗಿದ್ದಿಲ್ಲ, ಸ್ವಾಭಾವಿಕವಾಗಿಯೇ ಸುಂದರವಾಗಿದ್ದ ಅಪ್ಸರೆಯು, ಕ್ರೋಧದಿಂದ ಸಂತಪ್ತಳಾಗಿರಲಿ, ದುಃಖದಿಂದ ದಗ್ಧಳಾಗಿರಲಿ ಆಕೆಯ ಸೌಂದರ್ಯದಲ್ಲಿ ಕೊರತೆಯು ಹ್ಯಾಗೆ ಉಂಟಾಗಬೇಕು? ಬೇರೆ ಬೇರೆ ವಿಕಾರಗಳಿಂದ ಆ ಸೌಂದರ್ಯದ ಬೇರೆ ಬೇರೆ ರೂಪಾಂತರಗಳಾದಂತಾಗಿ, ಅದಕ್ಕೆ ಬೇರೆ ಬೇರೆ ಮನೋಹರ ದ್ರವ್ಯ ಸ್ವರೂಪಗಳು ಪ್ರಾಪ್ತವಾಗುತ್ತಿರುವವಷ್ಟೇ? ನೂರಜಹಾನಳ ಸ್ಥಿತಿಯಾದರೂ ಹಾಗೆಯೇ ಆಯಿತು. ರಣಮಸ್ತಖಾನನ ಕಣ್ಣಿಗೆ ಆಕೆಯ ಸ್ವರೂಪ ಸೌಂದರ್ಯದಲ್ಲಿ ಏನೂ ಕೊರತೆಯು ಕಂಡು ಬರಲಿಲ್ಲ, ತನ್ನನ್ನು ಒತ್ತಾಯದಿಂದ ಇಲ್ಲಿ ಇಟ್ಟುಕೊಂಡಿರುವರೆಂಬ ಕಲ್ಪನೆಯಿಂದ ಈಕೆಯು ಇಷ್ಟು ಶೋಕಾಕುಲಳಾಗಿದ್ದರೆ, ಈಕೆಯನ್ನು ಇಂದೇ ಊರಿಗೆ ಕಳಿಸಿ ಕೊಡಬೇಕೆಂದು ರಣಮಸ್ತಖಾನನು ಯೋಚಿಸಿ ಧೈರ್ಯದಿಂದ ಆಕೆಯನ್ನು ಕುರಿತು—"ನಾನು ಪಂಜರದಲ್ಲಿ ಸಿಕ್ಕುಬಿದ್ದೆನು, ಇಲ್ಲಿಂದ ಹಾರಿಹೋಗಬೇಕೆಂಬ ಇಚ್ಛೆಯು ಅರಗಿಳಿಗೆ ಆಗಿರುವದೇನು? ಯಾಕೆ, ಮೌನವೇಕೆ? ಅರಗಿಳಿಯೂ ಯಾಕೆ ಮಾತಾಡುವದಿಲ್ಲ? ನಾನು ಪಂಜರದಲ್ಲಿರುತ್ತೇನೆಂದು ಅರಗಿಳಿಯು ತಿಳಿಯಬಾರದು. ಹಾರಿಹೋಗುವ ಇಚ್ಛೆಯಾದ ಕೂಡಲೆ ಅದು ಹಾರಿ ಹೋಗಬಹುದು."

ಈ ಅತ್ಯಂತ ಪ್ರೇಮಯುಕ್ತ ಭಾಷಣದಿಂದ ಧೈರ್ಯ ಬಂದದ್ದರಿಂದಲೋ ಏನೋ ನೂರಜಹಾನಳು ರಣಮಸ್ತಖಾನನನ್ನು ಕುರಿತು—"ನಿಮ್ಮ ಮನೆಯ ಕುಂಭಗಳ ಮೇಲೆ ಕುಳಿತು

ಕೊಳ್ಳುವ ಕ್ಷುದ್ರ ಪಕ್ಷಿಗಳ ಯೋಗ್ಯತೆಯೂ ನನಗೆ ಇಲ್ಲದಿರಲು, ನನಗೆ ಅರಗಿಳಿಯಂಥ ಸುಂದರ ಪಕ್ಷಿಯ ಹೆಸರು ಕೊಡುವದೇಕೆ? ಅರಗಿಳಿಯ ಯಾವ ಯೋಗ್ಯತೆಯನ್ನು ನನ್ನಲ್ಲಿ ನೋಡಿದಿರಿ?'' ಎಂದು ಮಾತಾಡಲು, ಆಕೆಯ ಈ ಅತ್ಯಂತ ಮಧುರ ಸ್ವರಯುಕ್ತ ವಿನಯವಾಣಿಯನ್ನು ಕೇಳಿ, ಆನಂದದಿಂದ ರಣಮಸ್ತಖಾನನ ಮೈಮೇಲಿನ ಕೂದಲುಗಳು ನೆಟ್ಟಗಾದವು. ತನ್ನ ಮಾತುಗಳಿಗೆ ಈಕೆಯು ಉತ್ತರವನ್ನು ಕೊಟ್ಟಾಳೋ ಎಂದು ಆತುರದಿಂದ ಆತನು ಎದುರು ನೋಡುತ್ತಿರುವಾಗ, ಆ ಸುಂದರಿಯು ಹೀಗೆ ಮಂಜುಲ ಸ್ವರದಿಂದ ನುಡಿದದ್ದನ್ನು ಕೇಳಿ ಖಾನನು ಅತ್ಯಾನಂದದಿಂದ—''ನಾನು ಕೊಟ್ಟ ಹೆಸರು ನಿಮ್ಮ ಯೋಗ್ಯತೆಗೆ ತಕ್ಕದ್ದಲ್ಲ. ಬೇರೆ ಸುಂದರವಾದ ಹೆಸರು ಗೊತ್ತಾಗದ್ದರಿಂದ ಅದನ್ನೇ ನಾನು ನಿಮಗೆ ಕೊಟ್ಟೆನು; ಆದರೆ ನಿನ್ನೆ ನನಗೆ ಕೊಟ್ಟಿರುವ 'ನವಾಬ' ಎಂಬ ಹೆಸರು ಮಾತ್ರ ನಿಶ್ಚಯವಾಗಿ ನನ್ನ ಯೋಗ್ಯತೆಯನ್ನು ಮೀರಿದ್ದಿರುತ್ತದೆ, ಆದರೆ ಇಂಥ ಗೌರವದ ಹೆಸರನ್ನು ನನಗೆ ಕೊಡುವ ಕಾರಣವೇನು? ಎಂದು ಕೇಳಲು ಆತನ ಮಾತುಗಳಿಂದ ನೂರಜಹಾನಳ ಅಂಜಿಕೆಯು ಮತ್ತಿಷ್ಟು ದೂರವಾಗಿ, ಆಕೆಯು ರಣಮಸ್ತಖಾನನನ್ನು ಕುರಿತು—ಅದಕ್ಕೂ ಯೋಗ್ಯವಾದ ಹೆಸರು ನೆನಪಾಗದ್ದರಿಂದಲೇ ಆಗ ಆ ಹೆಸರನ್ನು ರಾಮಗೆ ನಾನು ಕೊಟ್ಟೆನು, ಅದರಿಂದ ತಮಗೆ ಸಿಟ್ಟು ಬಂದಿದ್ದರೆ, ನಾನು ಕ್ಷಮೆಯನ್ನು ಯಾಚಿಸುತ್ತೇನೆ; ಆದರೆ.......

ಈ ಮೇರೆಗೆ ನುಡಿದು ಅಷ್ಟಕ್ಕೆ ನೂರಜಹಾನಳು ಸುಮ್ಮನಾದಳು, ಮುಂದೆ ಆಡಬೇಕೆಂದಿದ್ದ ಮಾತುಗಳನ್ನು ಆಕೆಯು ನುಂಗಿಕೊಂಡಳು. ಅದನ್ನು ನೋಡಿ ರಣಮಸ್ತಖಾನನು—''ಮಾತುಗಳನ್ನು ನುಂಗುವದೇಕೆ? ಆಡಿಬಿಟ್ಟರಾಯಿತು. ನಿಮ್ಮ ಬಹುಮಾನವಾಚಕ ಶಬ್ದದಿಂದ ನನ್ನನ್ನು ಕರೆಯುವಾಗ, ಅದರಲ್ಲಿ ಉಪಹಾಸ ಭಾವನೆಯಿರದಿದ್ದರೆ ಆಯಿತು.''

ನೂರಜಹಾನ–(ಗಂಭೀರಮುದ್ರೆಯಿಂದ) ಏನು? ನಿಮ್ಮ ಸಲುವಾಗಿ ಉಪಹಾಸವೆ? ನಿಮ್ಮನ್ನು ನಾನು ಉಪಹಾಸದಿಂದ ಕರೆಯುವೆನೆ? ಛೀ, ಛೀ! ಯಾವ ಕೈಗಳು ನನ್ನ ಪ್ರಾಣವನ್ನು, ವಿಶೇಷವಾಗಿ ಪ್ರಾಣಕ್ಕಿಂತಲೂ ಹೆಚ್ಚಿನ ಮರ್ಯಾದೆಯನ್ನು ಒಳ್ಳೇ ಕಠಿಣಪ್ರಸಂಗದಲ್ಲಿ ರಕ್ಷಿಸಿದವೊ, ಅಂಥ ಕೈಗಳನ್ನು ಹರಿದುಕೊಳ್ಳುವಂಥ ದುಷ್ಟ ಡಾಕಿನಿಯು ನಾನಲ್ಲ! ನಿಮ್ಮಿಂದಾದ ಉಪಕಾರವು ಹ್ಯಾಗೆ ತೀರೀತೆಂಬ ವಿಚಾರದಲ್ಲಿ ನಾನು ಮಗ್ನಳಾಗಿರುವೆನು!

ರಣಮಸ್ತಖಾನ—ಇದರಲ್ಲಿ ಉಪಕಾರವೇತರದು? ಯಾರು ಯಾರ ಮೇಲೆ ಉಪಕಾರ ಮಾಡಿದರು? ಅದನ್ನು ಯಾರು ತೀರಿಸಬೇಕು? ನಿಜವಾದ ಸಾಲವಿದ್ದರೆ ಮಾತ್ರ ಅದನ್ನು ತೀರಿಸುವದು, ಅಥವಾ ಅದನ್ನು ತೀರಿಸುವದಕ್ಕಾಗಿ ಚಿಂತಿಸುವದು. ಕಾಲ್ಪನಿಕ ಸಾಲವನ್ನು ತೀರಿಸುವದಕ್ಕಾಗಿ ಚಿಂತಿಸುವದು ಎಲ್ಲಿಯ ರೀತಿಯು? ನಾನು ನನ್ನ ಕರ್ತವ್ಯವನ್ನು ಮಾಡಿದ್ದೇನೆ. ಅದರಲ್ಲಿ ಉಪಕಾರವೇತರದು? ಆದರೂ ಇಲ್ಲದ ಉಪಕಾರವನ್ನು ಕಲ್ಪಿಸಿ ಅದನ್ನು ತೀರಿಸಬೇಕೆಂದು ನೀವು ಇಚ್ಛಿಸುತ್ತಿದ್ದರೆ, ಅದಕ್ಕೆ ಹಾದಿಯಿಲ್ಲೆಂದು ಮಾತ್ರ ತಿಳಿಯಬೇಡಿರಿ.

ರಣಮಸ್ತಖಾನನು ಇಷ್ಟು ಮಾತಾಡಿ, ತನ್ನ ನಾಲಿಗೆಯನ್ನು ಕಚ್ಚಿಕೊಂಡನು. ನಾನು ಇದೇನು ಹುಚ್ಚನ ಹಾಗೆ ಮಾತಾಡಿದೆನು, ಎಂದು ಆತನು ತನ್ನ ನಾಲಿಗೆಯನ್ನು ಬಿಗಿಹಿಡಿದು

ಸುಮ್ಮನಾದನು. ಆತನ ಮಾತುಗಳ ಭಾವವು ನೂರಜಹಾನಳಿಗೆ ತಿಳಿಯಲಿಲ್ಲ. ಆತನ ಮುಖವನ್ನು ನೋಡುವದರಿಂದ ತಿಳಿದರೆ ನೋಡಬೇಕೆಂತಲೋ ಏನೋ ಆಕೆಯು ಮುಗುಳುನಗೆ ನಕ್ಕು, ಆಶ್ಚರ್ಯದಿಂದ ಆತನ ಮೋರೆಯನ್ನು ನೋಡಿದಳು. ಅಷ್ಟರಲ್ಲಿ ಇನ್ನೊಂದು ಮೋಜು ಆಯಿತು. ಆಕೆಯು ಮುಖವೆತ್ತಿ ನೋಡಲಿಕ್ಕೂ, ಗಾಳಿಯಿಂದ ಗಿಡದ ಎಲೆಗಳು ಒತ್ತಟ್ಟಿಗಾಗಿ ಒಂದು ಸೂರ್ಯಕಿರಣದ ರೇಖೆಯು ಆಕೆಯ ಮುಖದ ಮೇಲೆ ಬೀಳಲಿಕ್ಕೂ ಗಂಟೇಬಿದ್ದಿತು. ಕಿಂಚಿತ್ ಹಾಸ್ಯ, ಕಿಂಚಿತ್ ಆಶ್ಚರ್ಯ ಗಿಡದ ಎಲೆಗಳ ಸಂದಿಯೊಳಗಿಂದ ಹಾದುಬಿದ್ದ ಸೂರ್ಯ ಕಿರಣದ ಕಾಂತಿ ಇವುಗಳ ಯೋಗದಿಂದ, ಮೊದಲೇ ಸುಂದರವಾಗಿದ್ದ ಆಕೆಯ ಮುಖವು ಮತ್ತಿಷ್ಟು ಸುಂದರವಾಗಿ ತೋರಿ, ಖಾನನ ಮನಸ್ಸು ಚಂಚಲವಾಯಿತು. ಆತನು ಚಕಿತನಾಗಿ ನೂರಜಹಾನಳ ಮುಖವನ್ನು ಎವೆಯಿಕ್ಕದೆ ನೋಡುತ್ತ ನಿಂತುಕೊಂಡನು. ಆತನ ಮನಸ್ಸಿನಲ್ಲಿ ಉತ್ಪನ್ನವಾಗಿದ್ದ ಪ್ರೇಮವಿಕಾರಾಂಕುರವು ದೊಡ್ಡದಾಯಿತು. ಆತನು ಪ್ರೇಮದ ಭರದಲ್ಲಿ ನೂರಜಹಾನಳನ್ನು ಅಪ್ಪಿಕೊಳ್ಳಬೇಕೆಂದು ಕೈಗಳನ್ನು ಇನ್ನು ಮುಂದಕ್ಕೆ ಚಾಚತಕ್ಕವನಿದ್ದನು; ಅಷ್ಟರಲ್ಲಿ ಪರಸ್ತ್ರೀಯೆಂಬ ಎಚ್ಚರವು ಹುಟ್ಟಿದ್ದರಿಂದ ಆತನು ತನ್ನ ಕೈಗಳನ್ನು ಬಿಗಿಹಿಡಿದು, ಇನ್ನು ಇವು ಮುಂದಕ್ಕೆ ಹೋಗಬಾರದೆಂದು ಒಂದನ್ನೊಂದು ಹಿಡಿದುಕೊಂಡು ಪ್ರತಿಬಂಧಿಸಲ್ಪಡುವಂತೆ, ಅವನ್ನು ಸ್ವಸ್ತಿಕಾಕಾರವಾಗಿ ಎದೆಯ ಮೇಲೆ ಇಟ್ಟುಕೊಂಡನು; ಆದರೆ ಕಣ್ಣುಗಳ ಮೇಲೆ ಮಾತ್ರ ಆತನ ಆಜ್ಞಾಶಕ್ತಿಯು ನಡೆಯಲಿಲ್ಲ. ಅವು ಒಂದೇಸವನೆ ನೂರಜಹಾನಳನ್ನು ನೋಡುತ್ತಲಿದ್ದವು. ತರುಣನ ಈ ಸಂಕಟವನ್ನು ತಿಳಿದು, ಅದನ್ನು ದೂರಮಾಡುವದಕ್ಕಾಗಿಯೋ ಅನ್ನುವಂತೆ ನೂರಜಹಾನಳು ರಣಮಸ್ತಖಾನನನ್ನು ಕುರಿತು—''ಸಾಲತೀರಿಸುವ ಉಪಾಯವಿರುವದೆಂದು ಹೇಳಿದಂತೆ, ಆ ಉಪಾಯವನ್ನಿಷ್ಟು ನನಗೆ ಹೇಳಿಬಿಡಬೇಕು; ಅಂದರೆ ಕೈಯೊಳಗಿದ್ದರೆ ನಾನು ಸಾಲ ತೀರಿಸಿಬಿಡುತ್ತೇನೆ.''

ರಣಮಸ್ತಖಾನ—ನಿಮ್ಮ ಕೈಯೊಳಗೇ ಇರುತ್ತದೆ, ಇಲ್ಲವೆನ್ನುವ ಹಾಗಿಲ್ಲ; ಆದರೆ ಮೂಲತಃ ಸಾಲವೇ ಇಲ್ಲ. ಇಲ್ಲದ ಸಾಲವನ್ನು ಕಲ್ಪಿಸಿ ಅದನ್ನು ತೀರಿಸಬೇಕೆಂದರೆ ನಿಮ್ಮ ಕೈಯೊಳಗಿದ್ದರೂ ಅದನ್ನು ತೀರಿಸಲಿಕ್ಕೆ ನಿಮಗೆ ಬರುವಹಾಗಿಲ್ಲ.

ನೂರಜಹಾನ—ಏನು? ನನ್ನ ಕೈಯೊಳಗಿದ್ದರೂ ಅದನ್ನು ತೀರಿಸಲಿಕ್ಕೆ ಬರುವಹಾಗಿಲ್ಲವೇ? ಅಂಥ ಉಪಾಯವಾದರೂ ಯಾವದದು?

ರಣಮಸ್ತಖಾನ—ಅದನ್ನು ನನಗೆ ಹೇಳಲಿಕ್ಕೆ ಬರುವ ಹಾಗೂ ಇಲ್ಲ.

ನೂರಜಹಾನ—(ನಕ್ಕು) ಇದೊಳ್ಳೆಯ ಉಪಾಯವು! ನೀವು ಹೇಳದಿದ್ದರೆ ನನಗಾದರೂ ಅದು ಹ್ಯಾಗೆ ಗೊತ್ತಾಗಬೇಕು? ಗೊತ್ತಾಗದ ಹೊರತು ಅದನ್ನು ತೀರಿಸಲಿಕ್ಕೆ ಬರುವದೋ ಇಲ್ಲವೋ ಎಂಬದಾದರೂ ನನಗೆ ಹ್ಯಾಗೆ ತಿಳಿಯಬೇಕು? ಉಪಾಯವು ತಕ್ಕದಿರುತ್ತದೆಂಬದೇ ನನಗೆ ತಿಳಿಯದೆ ಹೋದಬಳಿಕ, ಸಾಲವನ್ನು ನಾನು ತೀರಿಸುವದಾದರೂ ಹ್ಯಾಗೆ? ನನಗಂತೂ ಸಾಲ ತೀರಿಸುವ ಇಚ್ಛೆಯು ಬಹಳವಾಗಿರುತ್ತದೆ.

ಇದನ್ನು ಕೇಳಿ ರಣಮಸ್ತಖಾನನು ನಕ್ಕನು, ಆತನು ಬಹಳ ಹೊತ್ತು ಸುಮ್ಮನೆ ನಿಂತುಕೊಂಡನು. ಮಾತಾಡಬೇಕೆಂದರೆ ಆತನ ಮುಖದಿಂದ ಅಕ್ಷರಗಳೇ ಹೊರಡಲೊಲ್ಲವು. ಇದು ನೂರಜಹಾನಳಿಗೆಗೊತ್ತಾಯಿತು. ಆತನು ಒಂದೇಸವನೆ ನೂರಜಹಾನಳನ್ನು ನೋಡುತ್ತಲಿದ್ದನು. ಆಗ ಆಕೆಯು ರಣಮಸ್ತಖಾನನ ಕಡೆಗೆ ನೋಡದೆ, ಮೊದಲಿನಂತೆ ನೆಲವನ್ನು ನೋಡುತ್ತ ಅಂಗುಷ್ಠದಿಂದ ನೆಲವನ್ನು ಗೀರತೊಡಗಿದಳು. ಹೀಗೆ ಬಹಳ ಹೊತ್ತಾದಮೇಲೆ ರಣಮಸ್ತಖಾನನು ನೂರಜಹಾನಳನ್ನು ಕುರಿತು—ನೂರಜಹಾನ, ಅರಗಿಳಿಯೇ ನನ್ನ ಮನಸ್ಸಿನಲ್ಲೇನಿರುತ್ತದೆಂಬದನ್ನು ನಾನು ಆಡಿಯೇ ತೋರಿಸಬೇಕೇನು? ನನ್ನ ಮನಸ್ಸಿನ ಸ್ಥಿತಿಯೇನಾಗಿರುವದೆಂಬುದು ನಿನಗೆ ಕಾಣುವದಿಲ್ಲವೆ? ಆಡಿಯೇ ತೋರಿಸಬೇಕೆಂದು ನೀನು ಆಗ್ರಹಪಡುತ್ತಿದ್ದರೆ, ನಾನು ಅದಕ್ಕೆ ಈಗ ಹಿಂದುಮುಂದು ನೋಡುವದಿಲ್ಲ, ಆದರೆ.... ಆದರೆ..... ಆದರೆ...... ನನ್ನ ಮನೋದಯವು ಪೂರ್ಣವಾಗುವ ಆಶೆಯು ಸ್ವಲ್ಪವಾದರೂ ಇದ್ದರೆ, ನಾನು ಅದನ್ನು ಬಾಯಿಂದಲೂ ಆಡಿಬಿಡುವೆನು.

ಈ ಕಾಲದ ರಣಮಸ್ತಖಾನನ ಧ್ವನಿಯನ್ನು ಕೇಳಿದ ಕೂಡಲೆ ನೂರಜಹಾನಳು ಚಕಿತಳಾಗಿ, ಕೂಡಲೆ ಆತನ ಮುಖದ ಕಡೆಗೆ ನೋಡಿದಳು. ಆಗ ಆತನ ಮುಖಲಕ್ಷಣವು ವಿಲಕ್ಷಣವಾಗಿತ್ತು. ಆತನ ಮನಸ್ಸಿನಲ್ಲಿರುವದನ್ನು ಒಡನುಡಿಯುವ ಅವಶ್ಯಕತೆಯು ನೂರಜಹಾನಳಿಗೆ ತೋರಲಿಲ್ಲ. ಖಾನನ ಭಾವವು ಆಕೆಗೆ ತಿಳಿದಿದ್ದರೂ, ಅದನ್ನು ಆಕೆಯು ಆಡಿ ತೋರಿಸದಾದಳು. ಆತನ ಮುಖದಿಂದಲೇ ಹೊರಟರೆ ನೆಟ್ಟಗೆಂದು ಆಕೆಯ ಮನಸ್ಸಿಗೆ ತೋರುತ್ತಿತ್ತು. ನೀವೇ ಹೇಳಿರೆಂದು ನುಡಿಯಲಿಕ್ಕೂ ಈಗ ಆಕೆಗೆ ಬಾಯಿ ಬರಲೊಲ್ಲದು. ಹೀಗಾಗಿ ಆಕೆಯು, ಖಾನನ ಮುಖಚರ್ಯದ ಕಡೆಗೆ ನೋಡುತ್ತ ನಿಂತುಕೊಂಡಳು. ಅದನ್ನು ನೋಡಿ ರಣಮಸ್ತಖಾನನು ಮತ್ತಿಷ್ಟು ಉತ್ಕಂಠಿತನಾದನು. ಆಕೆಯು ತನ್ನ ಮಾತಿಗೆ ಏನು ಉತ್ತರ ಕೊಡುವಳೆಂಬದನ್ನೂ, ತನ್ನ ಮಾತಿನ ಅರ್ಥವು ಈಕೆಗೆ ತಿಳಿಯಿತೋ ಇಲ್ಲವೋ ಎಂಬುದನ್ನೂ ನೋಡುವವನಂತೆ ಆತನೂ ನೂರಜಹಾನಳ ಕಡೆಗೆ ಎವೆಯಿಕ್ಕದೆ ನೋಡುತ್ತ ನಿಂತುಕೊಂಡನು. ತನ್ನ ಮನಸ್ಸಿನ ಭಾವವು ಈಕೆಗೆ ಗೊತ್ತಾಯಿತೆಂಬದು ಕೂಡಲೆ ಆತನಿಗೆ ತಿಳಿಯಿತು; ಆದ್ದರಿಂದ ಆತನು ಮಾತಾಡಲಿಕ್ಕೆ ಧೈರ್ಯ ಗೊಂಡು—ಸುಂದರಿ, ಸ್ಪಷ್ಟವಾಗಿ ಮಾತಾಡಬೇಕಾದದ್ದರಿಂದ ನಿರ್ವಾಹವಿಲ್ಲದೆ ಮಾತಾಡುತ್ತೇನೆ, ಅದಕ್ಕಾಗಿ ನನ್ನನ್ನು ಕ್ಷಮಿಸು. ನನ್ನ ಜೀವದ ಸರ್ವಸ್ವವನ್ನು ನಿನ್ನ ಚರಣಕ್ಕೆ ಅರ್ಪಿಸಿದ್ದೇನೆ; ನೀನು ನನ್ನನ್ನು ಅಗಲಿ ಹೋದರೆ ನಾನು ಮೃತಪ್ರಾಯನಾಗುವೆನು. ನನ್ನ ಕೈಯಿಂದ ಏನಾದರೂ ಮಹಾತ್ಕಾರ್ಯಗಳಾಗಬೇಕಾಗಿದ್ದರೆ, ನೀನು ನನ್ನ ಕೈ ಹಿಡಿಯುವದರಿಂದಲೇ ಅವು ಆದಾವು, ಎಂದು ನುಡಿದು, ಈಕೆಯು ಏನು ಉತ್ತರ ಕೊಡುವಳೋ ನೋಡಿ ಮತ್ತೆ ಮಾತಾಡಬೇಕೆಂದು ಆತನು ಆತುರದಿಂದ ನೂರು ಜಹಾನಳ ಕಡೆಗೆ ನೋಡುತ್ತ ನಿಂತುಕೊಂಡನು. ನೂರಜಹಾನಳು ಸ್ತಬ್ಧಳಾಗಿ ನಿಂತುಕೊಂಡಿದ್ದಳು. ಆಕೆಗೆ ಏನು ಮಾತಾಡಬೇಕೆಂಬದು ತೋಚದಾಯಿತು. ಆದರೂ ಪ್ರಯತ್ನದಿಂದ ಆಕೆಯು ರಣಮಸ್ತಖಾನನನ್ನು ಕುರಿತು—

ನೂರಜಹಾನ—ಸ್ತ್ರೀಯರು ಕೇವಲ ಪರಾಧೀನರು. ಅದರಲ್ಲಿ ನಾನಂತೂ ನಿನ್ನಿನವರೆಗೆ ಕೇವಲ ಪರಾಧೀನಳಾಗಿದ್ದೆನು, ಆದರೆ ಇಂದು ಮುಂಜಾವಿನಿಂದ ನಾನು ಬೇರೆ ಸ್ತ್ರೀಯರಂತೆ

ಪರಾಧೀನಳಾಗಿರುವದಿಲ್ಲ. ನಿನ್ನಿನವರೆಗೆ ನಾನು ನನ್ನ ಹಿರಿಯರ ಅಧೀನದಲ್ಲಿದ್ದೆನು, ಇಂದಿನಿಂದ ನನ್ನಷ್ಟಕ್ಕೆ ನಾನು ಸ್ವತಂತ್ರಳಾಗಿರುತ್ತೇನೆ.

ರಣಮಸ್ತಖಾನ—(ಅತ್ಯಂತ ಹರುಷದಿಂದ) ಹಾಗಾದರೆ ಮತ್ತೇನು ಬೇಕು? ನನ್ನ ಮನೋದಯವು ಪೂರ್ಣವಾಗಲಿಕ್ಕೆ ಪ್ರತಿಬಂಧವೇ ಇಲ್ಲದ ಹಾಗಾಯಿತಲ್ಲ?

ನೂರಜಹಾನ—(ಸುಮ್ಮನಿರಲು ಕೈಯಿಂದ ಸನ್ನೆಮಾಡಿ) ನಾನು ಸ್ವತಂತ್ರಳಾದೆನೆಂದು ಹೇಳಿದ್ದೇನೋ ನಿಜವು, ಆದರೆ ಕೆಲವೊಂದು ಸಂಗತಿಯಿಂದ ನಾನು ಪರಾಧೀನಳೇ ಇರುತ್ತೇನೆ.

ರಣಮಸ್ತಖಾನ—(ದೈನ್ಯದಿಂದ) ನನ್ನ ಅರಗಿಳಿಯೇ, ಹೀಗೆ ನನ್ನನ್ನು ನಿರಾಶಗೊಳಿಸ ಬೇಡ, ನನ್ನನ್ನು ಸಂಶಯಗ್ರಸ್ತನಾಗಿ ಮಾಡಬೇಡ. ಏನು ಹೇಳುವದನ್ನು ಸ್ಪಷ್ಟವಾಗಿ ಹೇಳು, ಯಾವ ಬಾಬಿನಿಂದ ನೀನು ಪರಾಧೀನಳಾಗಿರುತ್ತಿ? ನಿನ್ನ ಸಲುವಾಗಿ ಕೇವಲ ಪರಾಧೀನ ವಾಗಿರುವ ನನ್ನ ಮನಸ್ಸನ್ನು ಹೆಚ್ಚಿಗೆ ಗಾಸಿಮಾಡಬೇಡ. ನನ್ನ ಸ್ಥಿತಿಯು ನಿನ್ನ ಸ್ಥಿತಿಗೆ ಕೇವಲ ವಿರುದ್ಧವಾಗಿರುತ್ತದೆ. ನೀನು ನಿನ್ನಿನವರೆಗೆ ಪರತಂತ್ರಳಾಗಿದ್ದು ಇಂದಿನಿಂದ ಸ್ವತಂತ್ರಳಾದೆನೆಂದು ಹೇಳುತ್ತೀ. ಆದರೆ ನಿನ್ನಿನವರೆಗೆ ಸ್ವತಂತ್ರನಾಗಿದ್ದ ನಾನು, ನಿನ್ನನ್ನು ನೋಡಿದಾಗಿನಿಂದ ಪರತಂತ್ರನಾದೆನು. ನಿನ್ನ ಹಾಗೆ ನಾನು ಯಾವ ಬಾಬಿನಿಂದಲೂ ಈಗ ಸ್ವತಂತ್ರನಾಗಿರುವದಿಲ್ಲ; ನನ್ನ ಪ್ರಾಣಗಳನ್ನೆಲ್ಲ ನಿನಗೆ ಒಪ್ಪಿಸಿದ್ದೇನೆ; ಆದ್ದರಿಂದ ನನ್ನನ್ನು ಉಳಿಸುವದು ಅಥವಾ ಕೊಲ್ಲುವದು ನಿನ್ನೀ ಕೈಯಲ್ಲಿಯೇ ಇರುತ್ತದೆ. ಜೀವದಾನವನ್ನು ಬೇಡಿಕೊಳ್ಳುವ ತಪ್ಪುಗಾರನು, ತಾನು ಹೇಳತಕ್ಕದ್ದನ್ನೆಲ್ಲ ಬಾದಶಹನ ಮುಂದೆ ಹೇಳಿಕೊಂಡನು, ದೇವರನ್ನು ಬೇಡಿಕೊಳ್ಳತಕ್ಕ ಹಾಗೆ ಬೇಡಿಕೊಂಡನು, ಇನ್ನು ಬಾದಶಹನು ಏನು ಅಪ್ಪಣೆ ಕೊಡುವನೆಂಬದರ ಕಡೆಗೆ ಆ ತಪ್ಪುಗಾರನು ನೋಡುತ್ತಿರುವನು. ಆಯಿತು, ನೂರಜಹಾನ, ಇನ್ನು ನಾನು ಏನೂ ಮಾತಾಡು ವದಿಲ್ಲ, ಮಾತಾಡು, ಅರಗಿಳಿಯೇ ಮಾತಾಡು—ಸೋಕ್ಷವೋ ಮೋಕ್ಷವೋ ಎಂಬುದನ್ನು ಹೇಳಿಬಿಡು.

ನೂರಜಹಾನ—ನಾನು ಇಂದಿನಿಂದ ಸ್ವತಂತ್ರಳಾದೆನೆಂದು ಹೇಳಿದೆನಲ್ಲ? ಅದು ಎಷ್ಟು ಮಾತ್ರವೂ ನಿಜವಲ್ಲ.

ಇದನ್ನು ಕೇಳಿದ ಕೂಡಲೆ ರಣಮಸ್ತಖಾನನು ಏನೋ ಮಾತಾಡಬೇಕೆನ್ನುತ್ತಿರಲು, ನೂರಜಹಾನಳು ಪುನಃ ಕೈಯಿಂದ ಸಂಜ್ಞೆಮಾಡಿ ಸುಮ್ಮನಿರಿಸಿ—"ಇನ್ನು ನನ್ನ ಮಾತುಗಳನ್ನು ಕೇಳಿಕೊಳ್ಳಿರಿ," ಎಂದು ಹೇಳಿದಳು. ಅದಕ್ಕೆ ರಣಮಸ್ತಖಾನನು—ನಿನ್ನ ಮಾತುಗಳನ್ನೆಲ್ಲ ನಾನು ಕೇಳಿಕೊಳ್ಳುವದು ಆಶ್ಚರ್ಯವಲ್ಲ, ನೀನು ಯಾವಾಗಲೂ ನನ್ನ ಸಂಗಡ ಮಾತಾಡುತ್ತಲೇ ಇರಬೇಕೆಂದು ನನ್ನ ಉತ್ಕಟೇಚ್ಛೆಯಿರುತ್ತದೆ. ಅಮೃತವೃಷ್ಟಿಯಾಗುತ್ತಿರಲು, ಅದು ಮೈಮೇಲೆ ಬೀಳಬಾರದೆಂದು ಯಾರಾದರೂ ಇಚ್ಛಿಸಬಹುದೋ? ಆದರೆ ವೃಷ್ಟಿಯಾಗುವ ಮೊದಲು ಅದು ಅಮೃತದ್ದೋ ವಿಷದ್ದೋ ಎಂಬುದು ಗೊತ್ತಾದರೆ ನೆಟ್ಟಗೆ! ಒಂದು ಬಿಂದುವು ಮೊದಲು ನನ್ನ ಕಿವಿಯಲ್ಲಿ ಬೀಳಲಿ. ಅದು ಅಮೃತದ್ದೇ ಎಂಬುದು ನನ್ನ ಮನಸ್ಸಿಗೆ ಗೊತ್ತಾಗಲಿ, ಆಮೇಲೆ ನಾನಾಗಿಯೇ ಆ ವೃಷ್ಟಿಯಲ್ಲಿ ತಪ್ಪನೆ ತೋಯಿಸಿಕೊಳ್ಳಲಿಕ್ಕೆ ಸಿದ್ಧನಾಗುವೆನು. ಒಂದೇ

ಮಾತು—ನಾನು ನಿನ್ನವನೋ, ನಿನ್ನವನಲ್ಲವೋ? ಹೇಳು ಎಂದು ಕೇಳಲು, ನೂರಜಹಾನಳು ನಕ್ಕು—ಮೊದಲು ನನ್ನ ಮಾತುಗಳನ್ನೆಲ್ಲ ಸಮಾಧಾನದಿಂದ ಕೇಳಿಕೊಳ್ಳಿರಿ; ಅಂದರೆ ಎಲ್ಲ ನಿಮಗೆ ಗೊತ್ತಾಗುವದು, ಎಂದು ಹೇಳಿದಳು. ಇಷ್ಟು ಮಾತಾಡುವದರೊಳಗೆ ಆಕೆಯ ಸುಂದರ ಮುಖದಲ್ಲಿಯ ನಗೆಯು ಅಡಗಿ, ಆ ಮುಖವು ಬಹಳ ಗಂಭೀರವಾಯಿತು. ಬರಿಯ ಗಾಂಭೀರ್ಯ ವಷ್ಟೇ ಅಲ್ಲ, ಬರಬರುತ್ತ ಆ ಮುಖದ ಗಾಂಭೀರ್ಯದಲ್ಲಿ ಸಂತಾಪಯುಕ್ತ ಖೇದದ ಮಿಶ್ರಣವಾದಂತೆ ತೋರಹತ್ತಿತು. ಆಕೆಯ ವಿಸ್ತೀರ್ಣವಾದ ಭಾಲಪ್ರದೇಶದಲ್ಲಿ ನಿರಿಗೆಗಳು ತೋರಹತ್ತಿದವು. ಆಕೆಯ ಹುಬ್ಬುಗಳು ಆಕುಂಚಿತವಾದದ್ದರಿಂದ, ಆಕೆಯ ವಿಶಾಲ ನೇತ್ರಗಳೂ ಆಕುಂಚಿತವಾಗಿ ಉಗ್ರವಾದವು. ಆಕೆಯ ಮುಖದಲ್ಲಿ ನಿಶ್ಚಯದ ಚಿಹ್ನವು ತೋರಹತ್ತಿತು. ಇದನ್ನೆಲ್ಲ ನೋಡಿ ರಣಮಸ್ತಖಾನನು ಬೆರಗಾದನು. ಒಮ್ಮಿಂದೊಮ್ಮೆ ಆದ ಈ ರೂಪಾಂತರವು ತನ್ನ ಆಶಾತಂತುವು ಹರಿದುಹೋಗುವದಕ್ಕೆ ಕಾರಣವಾಯಿತೆಂದು ಅವನು ತಿಳಿದು ಕೊಂಡನು. ಆತನು ಏನೋ ಮಾತಾಡಬೇಕೆಂದು ತುಟಿಯನ್ನು ಅಲ್ಲಾಡಿಸುತ್ತಿರಲು, ಪುನಃ ನೂರಜಹಾನಳು ಸಂಜ್ಞೆಮಾಡಿ ಸುಮ್ಮನಿರಿಸಿ, ಕೂಡಲೆ ಮಾತಾಡಹತ್ತಿದಳು—

ನವಾಬಸಾಹೇಬರೇ. ನಾನು ಒಬ್ಬ ಯಃಕಶ್ಚಿತ ಮನುಷ್ಯನ ಮಗಳಿರುವೆನು. ಯಾವನೊಬ್ಬ ಬಾದಶಹನ ಮಗಳಲ್ಲ, ಸ್ವರ್ಗದೊಳಗಿನ ದೇವತೆಯಲ್ಲ; ಆದರೆ ನನ್ನ ಶೀಲವು ನನಗೆ ಅತ್ಯಂತ ಪ್ರಿಯವಾಗಿರುವದು. ನಿನ್ನೆ ಒಬ್ಬ ಹಿಂದೂ ರಾಜನು, ಕೂಡಿದ ದರ್ಬಾರದಲ್ಲಿ ಎಲ್ಲ ಗಂಡಸರ ಮುಂದೆ ನನ್ನ ಲಜ್ಜಾಹರಣವನ್ನು ಮಾಡಿದನು. ಆ ನೀಚನು ಅಷ್ಟಕ್ಕೆ ಸುಮ್ಮನಿರದೆ, ಇಂದು ಬೆಳಗಿನಲ್ಲಿ ನನ್ನನ್ನು ಹರಣಮಾಡುವದಕ್ಕಾಗಿ ಈ ಕುಂಜವನಕ್ಕೆ ಬಂದಿದ್ದನು. ನನ್ನ ಶೋಧಮಾಡುತ್ತ ಮೊದಲು ಆತನು ಬಂಗಲೆಗೆ ಬಂದನು. ನಾನು ಕುಂಜವನದಲ್ಲಿರು ವೆನೆಂದು ಗೊತ್ತಾದ ಕೂಡಲೆ, ಆತನು ನಿಮ್ಮನ್ನು ಕರಕೊಂಡು ಇಲ್ಲಿಗೆ ಬಂದನು. ಆ ದುಷ್ಟನು ಚಿಗರೆಯ ಬೇಟೆಯಾಡುವಂತೆ ಕುಂಜವನದ ತುಂಬ ನನ್ನನ್ನು ಹುಡುಕುತ್ತ ತಿರುಗಾಡಿದನು. ನಾನು ಅವನ ಕಣ್ಣಿಗೆ ಬಿದ್ದಿದ್ದರೆ, ಏನು ಮಾಡುತ್ತಿದ್ದನೆಂಬುದನ್ನು ಹೇಳಲಾರೆನು. ನಾನು ಅವನ ಮುಂದೆ ನನ್ನ ಬುರುಕಿಯನ್ನು ತೆಗೆದು ನಿಂತಾಗಿನಿಂದ ಅವನ ಮೈಮೇಲಿನ ಎಚ್ಚರವು ತಪ್ಪಿರಲೇಬೇಕು. ಇಲ್ಲದಿದ್ದರೆ ಅವನು ಇಷ್ಟು ಬೇಗನೆ ಕುಂಜವನಕ್ಕೆ ಬರುತ್ತಿದ್ದಿಲ್ಲ, ಇಷ್ಟು ಬೇಗನೆ ಇಲ್ಲಿ ಬರಬೇಕಾದರೆ ನಿನ್ನೆ ಅವನು ಯಾವಾಗ ಹೊರಟಿರಬಹುದೆಂಬದನ್ನು ನೀವೇ ಕಲ್ಪಿಸಿರಿ. ನನ್ನ ಮೇಲೆ ಆತನ ಅಭಿಲಾಷೆಯು ಇಲ್ಲದಿದ್ದರೆ ಆತನು ಇಷ್ಟು ಬೇಗನೆ ಕುಂಜವನಕ್ಕೆ ಬರುತ್ತಿದ್ದನೆ? ಹಿಂದಕ್ಕೆ ಎಂದಾದರೂ ಹೀಗೆ ಬಂದಿದ್ದನೆ? ಬಂದರೂ ಬರಲಿ, ತಾನು ಯಾತರ ಸಲುವಾಗಿ ಬಂದನೆಂಬದನ್ನು ನಿಮ್ಮ ಮುಂದೆ ಹೇಳಿದನೊ? ಆತನು ಬಂದು ಏನು ಮಾಡಿದನೆಂಬುದರ ಕಲ್ಪನೆಯಾದರೂ ನಿಮಗೆ ಇರುತ್ತದೆಯೋ? ಇನ್ನು ಈ ದುಷ್ಟನು ಹೀಗೆಯೇ ಎಷ್ಟು ಜನ ಮುಸಲ್ಮಾನ ತರುಣಿಯರ ಲಜ್ಜಾಹರಣ ಮಾಡುವನು? ನಿಮ್ಮ ಬಾದಶಹನು ಹೀಗೆಯೇ ಎಷ್ಟು ದಿನ ಕಣ್ಣುಮುಚ್ಚಿಕೊಂಡು ಕುಳಿತುಕೊಳ್ಳುವನು? ಗಂಡಸರೆನಿಸುವ ನೀವು ಸುಮ್ಮನೆ ಅವಿಚಾರತನವನ್ನು ಸಹಿಸುತ್ತಹೋಗುವವರೆಗೆ, ನಮ್ಮಂಥ

ಅನಾಥ ಅಬಲೆಯರ ಮೇಲೆ ಈ ತೋಳಗಳು ಹೀಗೆ ಮುಗಿಬೀಳುವುದೇ ಸರಿ! ದೂರವೇಕೆ, ಇಲ್ಲಿ ನೋಡಿರಿ, ಆ ದುಷ್ಟನು ನನ್ನ ಬೆನ್ನುಹತ್ತಿ ಇಂದು ಬಂದನೋ ಇಲ್ಲವೋ? ನೀವು ಆತನ ಸಂಗಡ ಇರದೇ ನಾನು ಆತನ ಕೈಗೆ ಸಿಕ್ಕಿದ್ದರೆ, ಆತನು ನನ್ನನ್ನು ಎಲ್ಲಿಯೋ ಅಡಗಿಸಿ ಇಟ್ಟುಬಿಡುತ್ತಿದ್ದನು. ಆತನು ಒಬ್ಬನೇ ಬಂದಿದ್ದನೆಂದು ನಿಮ್ಮ ತಿಳುವಳಿಕೆ ಯಾಗಿರಬಹುದು; ಆದರೆ ಈ ಕಾರ್ಯಕ್ಕಾಗಿ ಆತನು ಎಷ್ಟು ಜನರನ್ನು ಕುಂಜವನದ ಹೊರಗೆ ನಿಲ್ಲಿಸಿದ್ದನೆಂಬುದು ನಿಮಗೆ ಗೊತ್ತಿದೆಯೋ? ನೀವು ಅದರ ಶೋಧ ಮಾಡಿಸಿರುವಿರಾ? ಇಷ್ಟು ದಿನ ಇಲ್ಲಿ ನೀವು ಇದ್ದರೂ ನಿಮಗೆ ಗೊತ್ತಾಗದ ಒಂದು ಸಂಗತಿಯನ್ನು ನಾನು ಹೇಳುತ್ತೇನೆ ಕೇಳಿರಿ. ಇದೇ ಈ ಕುಂಜವನದಲ್ಲಿ ಈ ದುಷ್ಟ ರಾಮರಾಜನು ಹಿಂದಕ್ಕೆ ನನ್ನಂಥ ಒಬ್ಬ ಅಬಲೆಯನ್ನು ತಂದಿಟ್ಟು, ಆಕೆಯ ಸುಖಸರ್ವಸ್ವವನ್ನು ಮಣ್ಣುಗೂಡಿಸಿದನು. ಈಗಿಷ್ಟು ಮುದುಕನಾಗಿದ್ದರೂ ಈ ಕಾಮಾಂಧನು ನನ್ನ ಅಭಿಲಾಷೆಯಿಂದ ಇಲ್ಲಿ ಬಂದನು. ಯಾಕೆ, ಮಾತಾಡಿದ ನನ್ನ ಮಾತಿನ ವಿರುದ್ಧವಾಗಿ ನಿಮ್ಮ ಕಲ್ಪನೆಯೇನಾಗಿರುತ್ತದೆಂಬದನ್ನು ಸ್ಪಷ್ಟವಾಗಿ ಹೇಳಿರಿ. ನನ್ನ ಸ್ಪಷ್ಟ ಮಾತುಗಳಿಗಾಗಿ ವಿಕಲ್ಪವೆಣಿಸದೆ, ದಯವಿಟ್ಟು ನನ್ನನ್ನು ಕ್ಷಮಿಸಬೇಕು. ನವಾಬಸಾಹೇಬ, ನಿನ್ನೆ ದರ್ಬಾರದಲ್ಲಿ ಎಲ್ಲ ಗಂಡಸರ ಎದುರಿಗೆ ಬುರುಕಿಯನ್ನು ತೆಗೆದು ನಿಂತಾಗಲೇ ನಾನು ನಾಚಿಕೆ ಯನ್ನು ಬಿಟ್ಟು ಬಿಟ್ಟಿರುತ್ತೇನೆ. ಇನ್ನು ಯಾವನು ಈ ದುಷ್ಟನ ಶಾಸನ ಮಾಡುವನೋ, ಹೀಗೆ ಸ್ತ್ರೀಯರ ಪಾತಿವ್ರತ್ಯ ಭಂಗವಾಗುತ್ತಿರುವ ಈ ವಿಜಯನಗರದ ರಾಜ್ಯವನ್ನು ಯಾವನು ನಷ್ಟಪಡಿ ಸುವನೋ, ಆ ಪುರುಷಶ್ರೇಷ್ಠನೇ ನನಗೆ ಪುನಃ ಬುರುಕಿಯನ್ನು ಹೊದಿಸಲಿಕ್ಕೆ ಅಧಿಕಾರಿ ಯಾಗುವನು!

ಈ ಮೇರೆಗೆ ನುಡಿದು ನೂರಜಹಾನಳು ಸುಮ್ಮನಾದಳು. ರಣಮಸ್ತಖಾನನು ಆಕೆಯ ಮಾತುಗಳನ್ನು ಕೇಳಿ ಅತ್ಯಂತ ಚಕಿತನಾದನು. ಆಕೆಯ ಮುಂಗಾಲು ಪುಟಿಕೆಯ ಪ್ರತಿ ಒಂದು ಮಾತು ಆತನಿಗೆ ಅಕ್ಷರಶಃ ನಿಜವಾಗಿ ತೋರಿತು. ರಾಮರಾಜನು ಈ ದಿನ ಭ್ರಮಿಷ್ಟನ ಹಾಗೆ ಮಾಡಿದ್ದರ ಕಾರಣವು ಅವನ ಮನಸ್ಸಿಗೆ ಈಗ ಹೊಳೆದು, ಆತನು ಸಂತಾಪಗೊಂಡನು. ತಾನು ಇಲ್ಲಿಗೆ ಇಷ್ಟು ದೊಡ್ಡ ವಕೀಲನಾಗಿ ಬಂದಿದ್ದು ಇಷ್ಟು ಸ್ವಾಭಾವಿಕ ಮಾತಿನ ಕಲ್ಪನೆಯಾಗದ್ದಕ್ಕೆ ಆತನು ತನ್ನನ್ನು ಬಹಳವಾಗಿ ಹಳಿದುಕೊಂಡನು. ನಾನು ಮಹಾಮೂರ್ಖನು, ನನ್ನನ್ನು ಮೋಸಗೊಳಿಸಲಿಕ್ಕೆ ಆ ನೀಚನು ಬಂದಿದ್ದನು, ಎಂದು ಯೋಚಿಸುವಾಗ ಆತನ ಕಣ್ಣುಗಳು ಕೆಂಡದಂತಾಗಿದ್ದವು, ತುಟಿಗಳು ನಡುಗಹತ್ತಿದವು. ಏನು ಮಾಡಲಿ ಏನು ಬಿಡಲಿ ಅನ್ನುವ ಹಾಗಾಗಿ, ಆತನು ಏನೋ ಮಾತಾಡಬೇಕೆಂದು ನೂರಜಹಾನಳ ಕಡೆಗೆ ನೋಡಿದನು. ಆಗ ಆಕೆಯ ಕಣ್ಣೊಳಗಿಂದ ಒಂದೇ ಸವನೆ ನೀರು ಸುರಿಯುತ್ತಿದ್ದವು. ಆಕೆಗೆ ಉಂಟಾಗಿದ್ದ ಸಂತಾಪದಿಂದ ಆಕೆಯ ಅವಸಾನವು ಕುಗ್ಗಿದಂತೆ ಆಗಲು, ಆಕೆಯು ಗಿಡದ ಬೊಡ್ಡೆಗೆ ಆತುಕೊಂಡು ಅದರ ಆಶ್ರಯದಿಂದ ನಿಂತುಕೊಂಡಳು. ಆದರೆ ರಣಮಸ್ತಖಾನನು ತನ್ನ ಕಡೆಗೆ ನೋಡಿದ ಕೂಡಲೆ ಆಕೆಯು ಅವಸಾನ ಗೊಂಡು ತನ್ನ ಕಣ್ಣೀರುಗಳನ್ನು ಒರಸಿಕೊಂಡು ಆತನನ್ನು ಕುರಿತು—''ನಾನು ಒಬ್ಬ ಯಃಕಶ್ಚಿತ ಸ್ತ್ರೀಯು, ನನ್ನನ್ನು ಹಿಡಕೊಂಡು ಹೋಗಿ ಅವಮಾನ

ಗೊಳಿಸಿದ್ದರೂ ಮಹತ್ವವಿದ್ದಿಲ್ಲ. ಆದರೆ ಈವರೆಗೆ ನನ್ನಂಥ ಎಷ್ಟು ಜನರನ್ನು ಆ ದುಷ್ಟನು ಅವಮಾನಗೊಳಿಸಿರುವನೋ ಯಾರಿಗೆ ಗೊತ್ತು! ಒಬ್ಬ ಸುಂದರಿಯ ಸಂಸಾರಗೇಡನ್ನು ಇದೇ ದುಷ್ಟನೇ ಇದೇ ಕುಂಜವನದಲ್ಲಿ ಮಾಡಿದ ನೆಂದು ನಾನು ಕೇಳಿದ್ದೇನೆ! ಇದರ ಮೇಲಿಂದ ನೋಡುತ್ತಿರಲು, ನಮ್ಮ ಮುಸಲ್ಮಾನ ಜನರಲ್ಲಿ ರಕ್ಷಕರು ಯಾರೂ ಉಳಿಯಲಿಲ್ಲೆಂದು ಅನ್ನಬೇಕಾಗುತ್ತದೆ. ಅಂದಬಳಿಕ ನಮ್ಮಂಥ ತರುಣಿಯರು ತಮ್ಮ ಜನ್ಮವನ್ನು ಹೀಗೆಯೇ ಅವಿವಾಹಿತ ಸ್ಥಿತಿಯಲ್ಲಿ ಯಾಕೆ ಕಳೆಯಬಾರದು? ನಮ್ಮನ್ನು ಹಡೆದವರು ನಮ್ಮ ಲಗ್ನವನ್ನು ಯಾಕೆ ಮಾಡಿಕೊಡಬೇಕು? ನಮ್ಮ ಗಂಡಂದಿರು, ತಮ್ಮ ಹೆಂಡಿರೆಂದು ನಮ್ಮನ್ನು ಯಾಕೆ ಕರೆಯಬೇಕು? ಮೈಯಲ್ಲಿ ಸಾಮರ್ಥ್ಯವಿದ್ದರೆ ನಾವು ನಮ್ಮ ಸಂರಕ್ಷಣವನ್ನು ಮಾಡಿಕೊಳ್ಳ ತಕ್ಕದ್ದು, ಇಲ್ಲದಿದ್ದರೆ ಭಾವಿಕೆರೆಗಳ ಪಾಲಾಗತಕ್ಕದ್ದು! ಅದೂ ಆಗದಿದ್ದರೆ, ಆ ದುಷ್ಟ ರಾಮರಾಜನ ರಾಣೀವಾಸವನ್ನು ಸೇರತಕ್ಕದ್ದು! ನಾನಂತು ಹೀಗೆಯೇ ಮಾಡಬೇಕೆಂದು ನಿಶ್ಚಯಿಸಿದ್ದೇನೆ. ನಾನು ಸರ್ವಥಾ ವಿವಾಹ ಮಾಡಿಕೊಳ್ಳುವದಿಲ್ಲ; ಯಾಕಂದರೆ, ತಮ್ಮ ಹೆಂಡಿರ ಮರ್ಯಾದೆಯನ್ನು ರಕ್ಷಿಸಿಕೊಳ್ಳುವ ಸಾಮರ್ಥ್ಯವು ಮುಸಲ್ಮಾನ ಪುರುಷರಲ್ಲಿ ಉಳಿದಿರುವದಿಲ್ಲ! ದೇಶಾಂತರಕ್ಕೆ ತೆರಳಬೇಕೆಂತಲೂ ನನ್ನ ಮನಸ್ಸಿನಲ್ಲಿ ಮಾಡಿದ್ದೇನೆ. ಇದೇ ನನ್ನ ನಿರ್ಧಾರವು; ಇದೇ ನನ್ನ ಪ್ರತಿಜ್ಞೆಯು, ನಾನು ಯಃಕಶ್ಚಿತ ಸ್ತ್ರೀಯಾಗಿದ್ದರೂ ನನ್ನಂಥ ತರುಣಿಯರಿಗೆ ನಾನು ಇದೇ ಮಾತನ್ನು ಉಪದೇಶಿಸುವೆನು. ಇನ್ನು ನಾನು ನನ್ನಷ್ಟಕ್ಕೆ ಸ್ವತಂತ್ರಳಾದೆನು. ನನ್ನ ದಾನ ಮಾಡಲಿಕ್ಕೆ ನನ್ನ ತಂದೆಯು ಮಾಲಕನಲ್ಲ, ನನ್ನ ದಾನ ತಕ್ಕೊಳ್ಳಲಿಕ್ಕೆ ಯಾವ ಪುರುಷನೂ ಸಮರ್ಥನಲ್ಲ. ದಾನ ತಕ್ಕೊಳ್ಳುವವನಲ್ಲಿಯಾದರೂ ದತ್ತ ವಸ್ತುವಿನ ಸಂರಕ್ಷಣ ಮಾಡುವ ಸಾಮರ್ಥ್ಯವಿರ ಬೇಕಾಗುತ್ತದಲ್ಲವೆ?

ಆಯಿತು, ನೂರಜಹಾನಳ ಮಾತುಗಳ ಪರಮಾವಧಿಯಾಯಿತು. ಪ್ರಯತ್ನಪೂರ್ವಕವಾಗಿ ಒಟ್ಟುಗೂಡಿಸಿದ ಆಕೆಯ ಧೈರ್ಯವೆಲ್ಲ ಲುಪ್ತವಾಗಿ ಹೋಗಿ ಗಿಡದ ಬೊಡ್ಡೆಗೆ ಆತು ನಿಲ್ಲುವಷ್ಟು ಅವಕಾಶವೂ ಆಕೆಯಲ್ಲಿ ಈಗ ಉಳಿಯಲಿಲ್ಲ, ಆಕೆಯು ಹಾಗೆಯೇ ನೆಲಕ್ಕೆ ಕುಳಿತಳು. ಆಕೆ ಮೂರ್ಛಿತಳಾಗಿ ಬೀಳುವ ಹಾಗೆ ತೋರಿತು. ಆದರೆ ಆಕೆಯನ್ನು ಹಿಡಿಯಬೇಕೆಂಬ ಎಚ್ಚರವೂ ರಣಮಸ್ತಖಾನನಿಗೆ ಉಳಿದಿದ್ದಿಲ್ಲ, ನೂರಜಹಾನಳ ಮಾತಿನ ಪೆಟ್ಟುಗಳಿಂದ ಆತನು ತೀರ ಶೂನ್ಯಚಿತ್ತನಾಗಿದ್ದನು. ಆತನಿಗೆ ಬಧಿರತ್ವವು ಪ್ರಾಪ್ತವಾದಂತಾಗಿತ್ತು, ಆಕೆಯ ಪ್ರತಿಯೊಂದು ಶಬ್ದವು ಕಾದಸೀಸದ ರಸದಂತೆ ಆತನ ಕಿವಿಯೊಳಗಿಂದ ಹಾದುಹೋಗಿ ಆತನ ಹೃದಯದಲ್ಲಿ ತುಂಬಿಕೊಂಡಿತ್ತು! ಅದರಿಂದ ಆತನ ಮೈಮೇಲಿನ ಎಚ್ಚರವು ತಪ್ಪಿತು. ತಾನಾಡುವ ಮಾತುಗಳನ್ನು ಕೇಳುವ ಸ್ಥಿತಿಯಲ್ಲಿ ನೂರಜಹಾನಳು ಇರುವಳೋ, ಇಲ್ಲವೋ ಎಂಬದನ್ನು ತಿಳಕೊಳ್ಳುವಷ್ಟು ಎಚ್ಚರವೂ ಆತನ ಮೈಮೇಲೆ ಇದ್ದಿದ್ದಿಲ್ಲ, ಸಂತಾಪದಿಂದ ಅವನ ಸರ್ವಾಂಗವು ತಪ್ತವಾಗಿತ್ತು ಆತನು ಕಡೆಗೆ ನೂರಜಹಾನಳನ್ನು ಕುರಿತು—''ನೆಟ್ಟಗಾಯಿತು, ನೀನು ಇಂದು ನನ್ನ ಕಣ್ಣುಗಳನ್ನು ತೆರದೆ! ನಾನು ಈಗ ಬಹಳ ಮಾತಾಡುವದಿಲ್ಲ, ನನ್ನಲ್ಲಿ ಏನಾದರೂ ಸಾಮರ್ಥ್ಯವಿದ್ದದ್ದೇ ನಿಜವಿದ್ದರೆ, ಆ ದುಷ್ಟನ ಶಾಸನವನ್ನು ಮಾಡಿ ತೀರುವೆನು. ನನ್ನ ಬರ್ಚಿಯ ತುದಿಗೆ ಆ ದುಷ್ಟನ

ರುಂಡವನ್ನು ಚುಚ್ಚಿಕೊಂಡು ಬಂದು, ನಿನ್ನ ಚರಣದ ಮೇಲೆ ಕೆಡವುವೆನು. ಈ ಅಧರ್ಮದ ರಾಜ್ಯವನ್ನು ಮಣ್ಣುಗೂಡಿಸಿದ ಬಳಿಕ ನಿನ್ನ ಪ್ರಾಣಗ್ರಹಣದ ಮಾತು. ಅಲ್ಲಿಯವರೆಗೆ ನೀನು ಮಾತ್ರ ಈಗ ಇದ್ದ ಹಾಗೆಯೇ ಇರು. ನನ್ನ ಈ ಪ್ರತಿಜ್ಞೆಯು ಒಂದು ವರ್ಷದೊಳಗೆ ನಿಜವಾಗ ದಿದ್ದರೆ, ನಿನಗೆ ಮೋರೆ ತೋರಿಸಲಿಕ್ಕಿಲ್ಲ!'' ಎಂದು ನುಡಿದು ರಣಮಸ್ತಖಾನನು ತಟ್ಟನೆ ಅಲ್ಲಿಂದ ಹೊರಟುಹೋದನು. ಮಗನ ಈ ಪ್ರತಿಜ್ಞೆಯನ್ನು ಅಕಸ್ಮಾತ್ತಾಗಿ ಅಲ್ಲಿಗೆ ಬಂದು ಮರೆಗೆ ನಿಂತಿದ್ದ ಮಾಸಾಹೇಬರು ಕೇಳಿ ಚಕಿತರಾದರು.

## ಸಂಬಂಧ ಸೂಚನೆ

ಹಿಂದಿನ ೧೪ನೆಯ ಪ್ರಕರಣದಲ್ಲಿ ಹೇಳಿದಂತೆ ರಾಮರಾಜನು ಕುಂಜವನದಿಂದ ಹೊರಟವನು ವಿಜಯನಗರದ ಕಡೆಗೆ ಒತ್ತರದಿಂದ ಸಾಗಿದ್ದನು; ಆದರೆ ಆತನ ಚಿತ್ತಕ್ಕೆ ಸಮಾಧಾನ ವಿದ್ದಿಲ್ಲ. ಆತನು ಭ್ರಮಿಷ್ಟನಂತೆ ಆಗಿದ್ದನು.ತಾನು ಕುಂಜವನದಲ್ಲಿ ಮೋಹಜರ್ಾನಳನ್ನು ನೋಡಿದಂತೆ ಭಾಸವಾದಾಗಿನಿಂದ, ಆತನಿಗೆ ೩೫ ವರ್ಷದ ಹಿಂದಿನ ತನ್ನ ಕರ್ಮಕಥೆಯೆಲ್ಲ ನೆನಪಾಗಿತ್ತು ಅದರಲ್ಲಿ ಧನಮಲ್ಲನು ಈಗ ೩೫ ವರ್ಷಗಳ ಮೇಲೆ ಅಕಸ್ಮಾತ್ತಾಗಿ ಕುಂಜವನದಲ್ಲಿ ಅಂದೇ ಕಣ್ಣಿಗೆ ಬಿದ್ದಿದ್ದನು. ರಾಮರಾಜನು ಕುದುರೆಯ ಮೇಲೆ ಕುಳಿತು ಸಾಗಿದ್ದರೂ, ಕುದುರೆಯ ನಡಿಗೆಯ ಕಡೆಗೆ ಆತನ ಲಕ್ಷವಿದ್ದಿಲ್ಲ, ಸುಮ್ಮನೆ ಪರಾಧೀನನಂತೆ ಕುದುರೆ ಒಯ್ದತ್ತ ಸಾಗಿದ್ದನು. ಕುದುರೆ ಹಾದಿಯನ್ನು ಹಿಡಿದಿರುವದೋ, ಅಡವಿಯನ್ನು ಬಿದ್ದಿರುವದೋ ಎಂಬದನ್ನು ಆತನು ನೋಡುತ್ತಿದ್ದಿಲ್ಲ! ಕುದುರೆಯು ಬಹು ಸೂಕ್ಷ್ಮ ಸ್ವಭಾವದ್ದಿದ್ದದ್ದರಿಂದ ಅದು ನೆಟ್ಟಗೆ ವಿಜಯನಗರದ ಹಾದಿಯನ್ನು ಹಿಡಿದು ಸಾವಕಾಶವಾಗಿ ನಡೆದಿತ್ತು, ಆತನು ಹಲವು ವಿಚಾರಗಳ ಗುಂಗಿನಲ್ಲಿರುವಾಗ, ವಿಜಯನಗರವನ್ನು ಮುಟ್ಟಿ ತನ್ನ ಮಂದಿರವನ್ನು ಪ್ರವೇಶಿಸಿದನು; ಆತನ ಊಟ ಉಪಚಾರಗಳು ಆದವು; ಆತನ ನಿತ್ಯದ ರಾಜಕಾರಣದ ಕಾರ್ಯಗಳೂ ನಡೆದವು; ಆತನು ಜನರ ದರ್ಶನ ತಕ್ಕೊಳ್ಳಹತ್ತಿದನು; ಆಜ್ಞಾಪತ್ರಗಳನ್ನು ಕಳಿಸಹತ್ತಿದನು. ಆದರೆ ಅವೆಲ್ಲ ವ್ಯಾಪಾರಗಳು ನಿದ್ರೆಯೊಳಗಿನ ವ್ಯಾಪಾರಗಳಂತೆ ಆದವು. ಹೀಗೆ ಭ್ರಮಿಷ್ಟನಂತೆ ಆಗಿದ್ದ ರಾಮರಾಜನ ವ್ಯವಹಾರಗಳು ಮನಃಪೂರ್ವಕವಾಗಿ ನಡೆಯದೆಯಿದ್ದಾಗ, ಕುಂಜವನದಿಂದ ಒಬ್ಬ ಗುಪ್ತಚಾರನು ಬಂದಿದ್ದಾನೆಂದು ದ್ವಾರರಕ್ಷನು ಆತನಿಗೆ ಹೇಳಿದನು. ಅದನ್ನು ಕೇಳಿದ ಕೂಡಲೆ ರಾಮರಾಜನು ಆ ಚಾರನನ್ನು ಕರಿಸಿಕೊಂಡು ಸುದ್ದಿಯೇನೆಂದು ಕೇಳಲು, ಆ ಚಾರನು—''ನೂರಜಹಾನಳನ್ನು ಕಳಿಸುವದಕ್ಕಾಗಿ ರಣಮಸ್ತಖಾನನು ವಿಜಾಪುರಕ್ಕೆ ಹೋದನೆ''ಂದು ಹೇಳಿದನು.

ಈ ಸುದ್ದಿಯನ್ನು ಕೇಳಿದಕೂಡಲೆ ರಾಮರಾಜನ ಮನಸ್ಸಿಗೆ ಹ್ಯಾಗೆ ಹ್ಯಾಗೋ ಆಯಿತು. ಕೆಲಹೊತ್ತಿನವರೆಗೆ ಆತನು ಆ ಗುಪ್ತಚಾರನಿಗೆ ಏನೂ ಪ್ರಶ್ನಮಾಡದೆ ಸುಮ್ಮನೆ ಕುಳಿತು

ಕೊಂಡನು. ಆಮೇಲೆ ಆತನು ಚಾರನನ್ನು ಕುರಿತು—ರಣಮಸ್ತಖಾನನ ಸಂಗಡ ಮತ್ತೆ ಯಾರು ಹೋದರು? ಸಂಗಡ ಎಷ್ಟು ಜನರು ಹೋಗಿರುವರು? ಆತನ ಮನೆಯ ಜನರೂ ಹೋದರೇನು? ಎಂದು ಕೇಳಲು, ಚಾರನು—ಇಲ್ಲ, ಅವರ ತಾಯಿಯೇ ಮೊದಲಾದವರು, ರಣಮಸ್ತಖಾನನು, ಹಾಗೂ ಅವನ ಕೆಲವು ಪರಿವಾರವು ಇಷ್ಟೇ ಜನರು ವಿಜಾಪುರಕ್ಕೆ ಹೋಗಿರುವರು, ಉಳಿದವರೆಲ್ಲ ಇಲ್ಲಿಯೇ ಇರುವರು, ಎಂದು ಹೇಳಿದನು. ಪುನಃ ರಾಮರಾಜನು ಸುಮ್ಮನೆ ಕುಳಿತುಕೊಂಡನು. ಆಮೇಲೆ ಆತನು ಮತ್ತೆ ಚಾರನನ್ನು ಕುರಿತು— "ನೀನು ನಿನ್ನ ಕೆಲಸವನ್ನು ನೆಟ್ಟಗೆ ಮಾಡುವ ದಿಲ್ಲೆನ್ನುವ ಹಾಗೆ ಕಾಣುತ್ತದೆ. ನಿನ್ನೆ ಮುಂಜಾನೆ ನಾನು ಅಲ್ಲಿಗೆ ಬಂದಾಗ ಒಬ್ಬ ಬಲಭೀಮ ನಂಥ ಲಠ್ಠ ಕರಿಯ ಮನುಷ್ಯನನ್ನು ವಕೀಲನ ಜನರು ಮುತ್ತಿ ಆತನನ್ನು ಏನೇನೋ ಕೇಳುತ್ತಿದ್ದದ್ದನ್ನು ನಾನು ನೋಡಿದೆನು; ಆದರೆ ಆ ಕರಿಯ ಮನುಷ್ಯನು ಯಾರು? ಅಲ್ಲಿಗೆ ಯಾವಾಗ ಬಂದನು? ಎಂಬುದನ್ನೇನೂ ನೀನು ನನ್ನ ಮುಂದೆ ಹೇಳಲಿಲ್ಲ? ಆ ಸುದ್ದಿಯನ್ನು ಹೇಳುವದು ನಿನ್ನ ಕೆಲಸವಲ್ಲವೊ?" ಎಂದು ಕೇಳಲು ಆ ಚಾರನು–ಸರಕಾರ, ತಾವು ಬರುವದಕ್ಕಿಂತ ಮೊದಲು ಗಳಿಗೆ ಎರಡು ಗಳಿಗೆಯ ಸುಮಾರಕ್ಕೆ ಆ ಮನುಷ್ಯನು ಅಲ್ಲಿಗೆ ಬಂದಿದ್ದನು. ವಕೀಲನ ಜನರು ಆತನಿಗೆ ಹಲವು ಪ್ರಶ್ನೆಗಳನ್ನು ಕೇಳುತ್ತಿದ್ದರು; ಆದರೆ ಆ ಬಲಭೀಮನು ಕೇವಲ ಮೂಕನಂತೆ ಸುಮ್ಮನೆ ನಿಂತುಬಿಟ್ಟಿದ್ದನು. ಜನರ ಮಾತು ಆತನಿಗೆ ಕೇಳುತ್ತಿರುವಂತೆ ತೋರಲಿಲ್ಲ, ಆಗಿನಿಂದ ಆತನ ವೃತ್ತಾಂತವನ್ನು ತಿಳಿಕೊಳ್ಳಬೇಕೆಂದು ನಾನು ಬಹಳವಾಗಿ ಯತ್ನಿಸುತ್ತಿರುವೆನು; ಆದರೆ ಒಂದು ಸುದ್ದಿಯೂ ಗೊತ್ತಾಗಲಿಲ್ಲ, ಅಲ್ಲಿಯ ಜನರಿಗೇ ಅವನ ವೃತ್ತಾಂತವು ಗೊತ್ತಾಗದ ಬಳಿಕ, ಅದು ನನಗೆ ಹ್ಯಾಗೆ ಗೋತ್ತಾಗಬೇಕು? ನಾನು ಆತನ ಬಳಿಗೆ ಹೋಗಿ, ತಮಿಳು, ತೆಲಗು, ಕನ್ನಡ ಅರವು ಈ ನಾಲ್ಕು ಭಾಷೆಗಳಲ್ಲಿಯೂ ಕೇಳಿ ನೋಡಿದೆನು; ಆದರೆ ಅದರಿಂದ ಏನೂ ಪ್ರಯೋಜನವಾಗಲಿಲ್ಲ, ಅಂದಬಳಿಕ ನಾನು ತಮ್ಮ ಮುಂದೆ ಬಂದು ಏನು ಹೇಳಲಿ? ತಾವು ಸ್ವತಃ ಆ ಮನುಷ್ಯನನ್ನು ನೋಡಿದ್ದರಿಂದ "ಇಂಥ ಮನುಷ್ಯನು ಬಂದಿದ್ದಾನೆ"ಂದು ಹೇಳುವ ಅವಶ್ಯವು ನನಗೆ ತೋರಲಿಲ್ಲ, ಆ ಮನುಷ್ಯನ ಸಂಬಂಧದಿಂದ ವಿಶೇಷ ಸಂಗತಿಗಳೇನಾದರೂ ತಿಳಿದರೆ, ಬಂದು ಹೇಳಬೇಕೆಂದು ಬಿಟ್ಟಿದ್ದೆನು. ಅಷ್ಟರಲ್ಲಿ ಆ ವಕೀಲಸಾಹೇಬರು ವಿಜಾಪುರಕ್ಕೆ ಹೋದ ಸಂಗತಿಯನ್ನು ಹೇಳಲವಶ್ಯವಾದದ್ದರಿಂದ, ಕೂಡಲೆ ಬಂದು ಹೇಳಿದೆನು. ಇನ್ನೊಂದು ವಿಶೇಷ ಸಂಗತಿಯನ್ನು ಹೇಳುವೆನು. ಆ ಮನುಷ್ಯನು ಯಾರೆಂಬದು ನನಗೆ ಗೊತ್ತಾಗದೆಯಿದ್ದರೂ, ಆ ಮನುಷ್ಯನಿಗೂ ಮಾಸಾಹೇಬರಿಗೂ ಭೆಟ್ಟಿಯಾದದ್ದನ್ನು ನಾನು ನೋಡಿದೆನು. ಅವರಿಬ್ಬರ ಭೆಟ್ಟಿಯಾಯಿತೆನ್ನುವದಕ್ಕಿಂತ, ಆ ಕರಿಯ ಮನುಷ್ಯನೇ ಮಾಸಾಹೇಬರ ಭೆಟ್ಟಿಯನ್ನು ಬುದ್ಧಿಪೂರ್ವಕವಾಗಿ ತೆಗೆದುಕೊಂಡನೆಂದು ಹೇಳಬಹುದು; ಯಾಕಂದರೆ ಮಾಸಾಹೇಬರು ತಮ್ಮ ಮನೆಯ ಪಾವಟಿಗೆಗಳನ್ನು ಹತ್ತಿ ಹೋಗುತ್ತಿರುವದನ್ನು ನೋಡಿ, ಆ ಬಲಭೀಮನು ತನ್ನನ್ನು ಸುತ್ತುಹಾಕಿದ ಜನರೊಳಗಿಂದ ನುಸಿದು ನೆಟ್ಟಗೆ ಬಾಣಹೊಡೆದ ಹಾಗೆ ಮಾಸಾಹೇಬರ ಬಳಿಗೆ ಓಡಿಹೋದನು. ಅತ್ತ ಮಾಸಾಹೇಬರ ವೃದ್ಧ ದಾಸಿಯೂ, ಮಾಸಾಹೇಬರೂ ಏನೋ ಗುಜಗುಟ್ಟುತ್ತಿರುವಷ್ಟರಲ್ಲಿ, ಬಲಭೀಮನು ಮಾಸಾಹೇಬರ ತೀರ ಹತ್ತಿರಕ್ಕೆ ಹೋದನು. ಆಗ

ಅವರ ಕಾವಲುಗಾರರು ಓಡಿ ಹೋಗಿ ಅವನನ್ನು ಹಿಂದಕ್ಕೆ ಜಗ್ಗಿ ಕೊಂಡರು. ಅದನ್ನು ನೋಡಿ ಮಾಸಾಹೇಬರು ತಮ್ಮ ಜನರಿಗೆ—''ಅವನನ್ನು ಬಿಡಿರಿ. ಪಾಪ! ನನ್ನ ಮುಂದೆ ಏನೋ ಹೇಳಲಿಕ್ಕೆ ಬಂದಿದ್ದಾನೆ. ಕೇಳಿಕೊಳ್ಳುವೆನು, ಎಂದು ಹೇಳಿದ್ದರಿಂದ, ಅವನನ್ನು ಕಾವಲುಗಾರರು ಬಿಟ್ಟರು. ಆ ಮೇಲೆ ಮಾಸಾಹೇಬರ ವೃದ್ಧ ದಾಸಿಯು ಆತನನ್ನು ಕರಕೊಂಡು ಮನೆಯೊಳಗೆ ಹೋದಳು. ಅಗಿನಿಂದ, ಇಲ್ಲಿಗೆ ನಾನು ಬರುವದಕ್ಕಾಗಿ ಹೊರಡುವವರೆಗೆ ಯಾವ ಸುದ್ದಿಯೂ ನನಗೆ ಗೊತ್ತಾಗಲಿಲ್ಲ. ಮಾಸಾಹೇಬರ ಜನರು ತಮ್ಮೊಳಗೆ ಗುಜುಗುಟ್ಟುತ್ತಿದ್ದರು, ಮಾಸಾಹೇಬರಿಗೂ, ಆ ಮನುಷ್ಯನಿಗೂ ಮೊದಲಿನ ಪರಿಚಯವಿರಬಹುದೆಂಬುದು ಅವರ ಗುಜುಗುಟ್ಟು ತ್ತಿರುವದರ ತಾತ್ಪರ್ಯವಾಗಿರುವದು.

ಗುಪ್ತಚಾರನ ಈ ಮಾತುಗಳನ್ನು ರಾಮರಾಜನು ಲಕ್ಷ ಪೂರ್ವಕವಾಗಿ ಕೇಳುತ್ತಿದ್ದನು. ಕೇಳ ಕೇಳುತ್ತ ಆತನು ನಡುವೆ ಚಾರನನ್ನು ನಿಲ್ಲಿಸಿ—ರಣಮಸ್ತಖಾನನು ವಿಜಾಪುರಕ್ಕೆ ಯಾಕೆ ಹೋದನೆಂಬ ಸುದ್ದಿಯೇನಾದರೂ ನಿನಗೆ ಗೊತ್ತಿದೆಯೋ? ನೂರಜಹಾನಳನ್ನು ಕಳಿಸಲಿಕ್ಕಷ್ಟೇ ಆತನು ಹೋಗಿರಲಿಕ್ಕಿಲ್ಲೆಂದು ನಿನ್ನನ್ನು ಕೇಳುತ್ತೇನೆ, ಎಂದು ಪ್ರಶ್ನಮಾಡಿದನು. ಅದಕ್ಕೆ ಚಾರನು–ಸರಕಾರ, ನನಗೆ ಬಹಳ ಲಾಂಛನದ ಮಾತು, ನನಗೆ ನಿಜವಾದ ಕಾರಣವು ನಂಬಿಗೆ ಯಾಗುವಂತೆ ತಿಳಿದಿರುವದಿಲ್ಲೆಂದು ಅಸಮಾಧಾನದಿಂದ ಹೇಳಿಕೊಳ್ಳುವನು. ಆ ಸಂಬಂಧದಿಂದ ಅಲ್ಲಿಯ ಜನರ ತರ್ಕವೇನಾಗಿರುತ್ತದೆಂಬದನ್ನು ಹೇಳುತ್ತೇನೆ. ''ವಕೀಲರು ವಿಜಾಪುರಕ್ಕೆ ಹೋಗುವದರ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲ, ಬೇಗನೆ ಯುದ್ಧವು ಆರಂಭವಾಗಬಹುದಾಗಿ ತೋರುತ್ತದೆ'' ಎಂದು ಅವರು ಮಾತಾಡುತ್ತಿರುವರು. ಹೀಗೆ ಆ ಜನರು ಆಡಿದ್ದನ್ನು ನಾನು ಕಿವಿ ಮುಟ್ಟಿ ಕೇಳಿದೆನಾದ್ದರಿಂದಲೇ ಇದಿಷ್ಟು ಸಂಗತಿಯನ್ನು ಮಹಾರಾಜರ ಕಿವಿಯ ಮೇಲೆ ಹಾಕಬೇಕೆಂದು ಬಂದೆನು.'' ಎಂದು ಹೇಳಲು, ರಾಮರಾಜನು ವಿಚಾರಮಗ್ನನಾದನು. ಕೆಲಹೊತ್ತಿನ ಮೇಲೆ ಆತನು ತನ್ನೊಳಗೆ—''ಅದರ ಹೊರತು ಎರಡನೆಯ ಮಾರ್ಗವಿಲ್ಲ'' ಎಂದು ನುಡಿದು, ಚಾರನನ್ನು ಕುರಿತು—''ನಾನು ನಿನ್ನ ಸಹಾಯಕ್ಕಾಗಿ ಏಳೆಂಟು ಜನರನ್ನು ಕೊಡುತ್ತೇನೆ. ಏನಾದರೂ ಹಂಚಿಕೆಮಾಡಿ ನೀವು ಆ ಬಲಭೀಮನನ್ನು ನನ್ನ ಕಡೆಗೆ ಕರಕೊಂಡು ಬರ್ರಿ. ನಾನು ಕರೆದಿರುತ್ತೇನೆಂದು ಮೊದಲು ಸಾಮೋಪಚಾರದಿಂದ ಆತನಿಗೆ ಹೇಳಿರಿ. ಅವನು ಬಂದರೆ ಒಳಿತಾಯಿತು. ಇಲ್ಲದಿದ್ದರೆ ಹ್ಯಾಗಾದರೂ ಮಾಡಿ ಅವನನ್ನು ಎಳಕೊಂಡು ಬರ್ರಿ. ಮುಖ್ಯ ಮಾತು, ಅವನನ್ನು ಕರಕೊಂಡು ಬರ್ರಿ, ಬಿಟ್ಟು ಬರಬೇಡಿರಿ'' ಎಂದು ನಿರ್ಧಾರದಿಂದ ಹೇಳಿ, ಸಹಾಯಕ್ಕೆ ಕೊಡತಕ್ಕ ಜನರನ್ನು ಕೊಟ್ಟನು. ಆ ಕರಿಯ ಮನುಷ್ಯನು ಧನಮಲ್ಲನೇ ಎಂದು ರಾಮರಾಜನು ನಿಶ್ಚಯವಾಗಿ ತಿಳಿದಿದ್ದನು. ಆತನನ್ನು ಹಿಡಕೊಂಡು ಬಂದರೆ; ಮೋಹರ್ಜಾನಳ ವೃತ್ತಾಂತವು ತಿಳಿಯುವದೆಂದು ಆತನು ನಂಬಿದ್ದನು. ರಣಮಸ್ತಖಾನನು ತನ್ನ ಮಗನೂ, ಆತನ ತಾಯಿಯೂ ಮೋಹರ್ಜಾನಳೂ ಆಗಿರಬಹುದೆಂದ ರಾಮರಾಜನ ಸಂಶಯವು ಇಂದಿನ ಚಾರನ ಮಾತಿನಿಂದ ಮತ್ತಿಷ್ಟು ದೃಢವಾಯಿತು. ಈ ಸಂಶಯದ ದೃಢೀಕರಣದಿಂದ ಆತನಿಗೆ ಸಮಾಧಾನವಾಗಲಿಲ್ಲ, ಆ ಸ್ತ್ರೀಯು ಮೋಹರ್ಜಾನಳೇ ಎಂಬದು

ನಿಸ್ಸಂಶಯವಾಗಿ ತನಗೆ ಗೊತ್ತಾಗಬೇಕೆಂದು ಆತನು ಆತುರಪಡುತ್ತಿದ್ದನು. ಮೋಹರ್ಜಾನಳೇ ಎಂಬದು ತನಗೆ ಗೊತ್ತಾದ ಬಳಿಕ, ತಾನು ಆಕೆಯನ್ನು ಕಂಡು ಯಾವತ್ತೂ ಸಂಗತಿಯನ್ನು ಕೇಳಿಕೊಳ್ಳಬೇಕೆಂದು ಆತನು ಮಾಡಿದ್ದನು. ತನ್ನನ್ನು ಬಿಟ್ಟುಹೋದ ಬಗ್ಗೆ ಆಕೆಗೆ ಪಶ್ಚಾತ್ತಾಪವಾಗಿರ ಬಹುದೋ? ಹಾಗೆ ಪಶ್ಚಾತ್ತಾಪವಾಗಿರದಿದ್ದರೆ ಆಕೆಯು ಮಗನನ್ನು ಕಟ್ಟಿಕೊಂಡು ಇಲ್ಲಿಗೆ ಯಾಕೆ ಬಂದಳು? ಪಶ್ಚಾತ್ತಾಪವೇ ಆಗಿದ್ದ ಪಕ್ಷದಲ್ಲಿ ನಮ್ಮಿಬ್ಬರ ಸಂಬಂಧವು ಮೊದಲಿನಂತೆ ಯಾಕೆ ಕೂಡಲಿಕ್ಕಿಲ್ಲ? ಎಂಬಿವೇ ಮೊದಲಾದ ವಿಚಾರಗಳು ರಾಮರಾಜನ ಮನಸ್ಸಿನಲ್ಲಿ ಉತ್ಪನ್ನವಾದವು. ರಣಮಸ್ತಖಾನನನ್ನು ನೋಡಿ ಈವರೆಗೆ ರಾಮರಾಜನಿಗೆ ಕೌತುಕವಷ್ಟೇ ಆಗುತ್ತಿತ್ತು ಇಂದು ಆ ಕೌತುಕವು ಪುತ್ರಪ್ರೇಮ, ಪುತ್ರವಾತ್ಸಲ್ಯಗಳ ರೂಪವನ್ನು ಧರಿಸಿತು. ಈ ಹೊತ್ತಿಗೆ ನಮ್ಮ ರಾಜ್ಯದಲ್ಲಿ ಎಷ್ಟೋ ಜನ ಮುಸಲ್ಮಾನ ಸೈನಿಕರನ್ನು ಚಾಕರಿಗೆ ಇಟ್ಟು ಕೊಂಡಿರುತ್ತೇವೆ, ಅವರಲ್ಲಿ ಈತನೊಬ್ಬನನ್ನೂ ಇಟ್ಟುಕೊಳ್ಳೋಣ. ಪ್ರಸಂಗಬಂದರೆ, ಆ ಯಾವತ್ತು ಮುಸಲ್ಮಾನ ಸೈನಿಕರ ಮೇಲೆ ಈಗಿರುವ ಹಿಂದೂ ಮುಖ್ಯಸ್ಥನನ್ನು ತೆಗೆದು, ಅವರ ಮೇಲೆ ರಣಮಸ್ತಖಾನನ್ನು ನಿಯಮಿಸಬಹುದು. ತರುಣ ರಣಮಸ್ತಖಾನನು ಈ ಕೆಲಸಕ್ಕೆ ಯೋಗ್ಯನೂ ಇದ್ದಾನೆ. ಒಂದು ವೇಳೆಯಲ್ಲಿ ಈತನನ್ನು ಸೇನಾಪತಿಯನ್ನಾಗಿಯಾದರೂ ಮಾಡಬಹುದು. ಈತನು ವಿಜಾಪುರದ ಬಾದಶಹನ ಚಾಕರಿಯನ್ನು ಯಾಕೆ ಮಾಡಬೇಕು? ರಣಮಸ್ತಖಾನನಿಗೆ ನನ್ನ ಸಂಬಂಧವು ತಿಳಿದರೆ ಆತನ ಮನಸ್ಸಿಗೆ ಹ್ಯಾಗಾಗಬಹುದು? ನನ್ನ ವಿಷಯವಾಗಿ ಆತನಲ್ಲಿ ಅಭಿಮಾನವು ಉತ್ಪನ್ನವಾಗಬಹುದೋ, ತಿರಸ್ಕಾರವು ಉತ್ಪನ್ನವಾಗ ಬಹುದೋ? ಛೇ! ತಿರಸ್ಕಾರವು ಯಾಕೆ ಉತ್ಪನ್ನವಾದೀತು? ಅಭಿಮಾನವೇ ಉತ್ಪನ್ನವಾಗುವದು, ಎಂದು ಯೋಚಿಸಿದನು. ಆದರೆ ಇದರ ವಿರುದ್ಧ ಭಾವನೆಯು ರಣಮಸ್ತಖಾನನಲ್ಲಿ ಹ್ಯಾಗೆ ಉತ್ಪನ್ನವಾಗುತ್ತ ಹೋಯಿತೆಂಬದನ್ನು ನೋಡೋಣ.

ರಣಮಸ್ತಖಾನನ ಪ್ರೇಮವು ನೂರಜಹಾನಳಲ್ಲಿ ವಿಶೇಷವಾಗಿತ್ತು, ಆತನು ಆಕೆಯನ್ನು ವಿಜಾಪುರಕ್ಕೆ ಕರೆದುಕೊಂಡು ಹೋಗುವಾಗ ಆ ಪ್ರೇಮವು ಮತ್ತಿಷ್ಟು ದೃಢವಾಯಿತು. ಆದರೆ ಆಕೆಯು ತಾನು ಮಾಡಿದ ಪ್ರತಿಜ್ಞೆಯನ್ನು ಏನು ಮಾಡಿದರೂ ಬಿಡಲೊಲ್ಲಳು. ಆಕೆಯು ಹಾದಿಯಲ್ಲಿ ಒಂದೆರಡು ಸಾರೆ ರಣಮಸ್ತಖಾನನು ತನಗೆ ಭೆಟ್ಟಿಯಾದಾಗ ಆತನಿಗೆ— ''ನವಾಬಸಾಹೇಬ, ನಾನು ಇನ್ನು ಸ್ವತಂತ್ರಳಾದೆನು, ನಿಮ್ಮ ಹೊರತು ನಾನು ಬೇರೆಯವರನ್ನು ಲಗ್ನವಾಗುವದಿಲ್ಲ; ಆದರೆ ಕೂಡಿದ ದರ್ಬಾರದಲ್ಲಿ ನನ್ನ ಲಜ್ಜಾಹರಣ ಮಾಡಿದ ಆ ದುಷ್ಟ ರಾಮರಾಜನ ನಾಶಮಾಡಿರಿ. ಅವನ ರಾಜ್ಯವನ್ನು ಮಣ್ಣುಗೂಡಿಸಿರಿ'' ಎಂದು ಸ್ಪಷ್ಟವಾಗಿ ಹೇಳಿದಳು. ಅದನ್ನು ಕೇಳಿ ರಣಮಸ್ತಖಾನನು, ಈ ಕಠಿಣ ಕಾರ್ಯವನ್ನು ಹ್ಯಾಗೆ ಸಾಧಿಸಬೇಕೆಂಬ ವಿಚಾರದಲ್ಲಿ ತೊಡಗಿದ್ದನು. ಎಷ್ಟೋ ವರ್ಷಗಳಿಂದ ಯಾವತ್ತು ಬಾಮನಿ ಬಾದಶಹರು ವಿಶ್ವಪ್ರಯತ್ನದಿಂದ ಸಾದಿಸದೆ ಇದ್ದ ಕಾರ್ಯವು ತನ್ನಂಥ ಅಲ್ಪನಿಂದ ಹ್ಯಾಗೆ ಸಾಧಿಸಬೇಕೆಂಬ ವಿಚಾರದಲ್ಲಿ ಆತನು ಮಗ್ನನಾದನು. ಈ ವಿಚಾರದ ಭರದಲ್ಲಿಯೇ ಆತನು ವಿಜಾಪುರವನ್ನು ಮುಟ್ಟಿದನು. ವಿಜಾಪುರವನ್ನು ಮುಟ್ಟಿದ ಕೂಡಲೆ, ಇನ್ನು ನೂರಜಹಾನಳ ವಿಯೋಗವಾಗುವ

ದೆಂದು ತಿಳಿದು ಆತನು ಬಹಳ ವ್ಯಸನಪಟ್ಟನು. ನೂರಜಹಾನಳು ಕುಲೀನಳು, ಆಕೆಯು ನನ್ನಂಥವನಿಗೆ ಹ್ಯಾಗೆ ಲಭಿಸುವಳು? ಆಕೆಯ ಆಪ್ತೇಷ್ಟರು ನನ್ನೊಡನೆ ಆಕೆಯ ಲಗ್ನವನ್ನು ಹ್ಯಾಗೆ ಆಗಗೊಟ್ಟಾರು? ಎಂಬ ದುಃಖದಾಯಕವಾದ ವಿಚಾರಗಳು ಆತನ ಮನಸ್ಸನ್ನು ನೋಯಿಸ ಹತ್ತಿದವು. ತಾನು ಕುಲೀನನಲ್ಲೆಂಬ ವಿಚಾರವು ಆತನ ಮನಸ್ಸನ್ನು ನೋಯಿಸುತ್ತಿದ್ದಷ್ಟು, ಬೇರೆ ಯಾವ ವಿಚಾರಗಳೂ ಆತನ ಮನಸ್ಸನ್ನು ನೋಯಿಸುತ್ತಿದ್ದಿಲ್ಲ. ಆತನಿಗೆ ತನ್ನ ಕುಲದ ಇತಿಹಾಸವು, ಇವನು ನಾಲ್ಕು ಇಪ್ಪತ್ತೈದು ವರ್ಷದವನಾಗುವ ತನಕ ಗೊತ್ತೇ ಆಗಿದ್ದಿಲ್ಲ. ಆ ಮೇಲೆ ಅದು ಆತನಿಗೆ ಸ್ವಲ್ಪಮಟ್ಟಿಗಾದರೂ ಗೊತ್ತಾಯಿತು. ಒಂದು ದಿನ ಆತನು ತನ್ನ ಕುಲವೃತ್ತಾಂತವೇನೆಂದು ತನ್ನ ತಾಯಿಯನ್ನು ಕೇಳಿದನು. ಅದಕ್ಕೆ ಆಕೆಯು ತನ್ನ ವೃದ್ಧ ದಾಸಿಯಾದ ಲೈಲಿಯನ್ನು ಕೇಳೆಂದು ಹೇಳಲು, ರಣಮಸ್ತಖಾನನು ಲೈಲಿಯನ್ನು ಕೇಳಿದನು. ಲೈಲಿಯು ಮಹಾ ಚತುರಳೂ, ಬಹುಶ್ರುತಳೂ ಇದ್ದಳು. ಆಕೆಯು ರಣಮಸ್ತಖಾನನನ್ನು ಒತ್ತಟ್ಟಿಗೆ ಕರಕೊಂಡು ಹೋಗಿ ಆತನ ಮನಸ್ಸನ್ನು ನೋಯಿಸದಂತೆ ಆತನನ್ನು ಕುರಿತು–ಒಡೆಯರೇ, ಇಂದು ನಾನು ನಿಮಗೆ ಎಲ್ಲ ವೃತ್ತಾಂತವನ್ನು ಹೇಳುತ್ತೇನೆ. ಒಮ್ಮೆ ಅದನ್ನು ಕೇಳಿದ ಬಳಿಕ, ತಿರುಗಿ ಅದರ ಚಕಾರಶಬ್ದವನ್ನೂ ಮಾಸಾಹೇಬರ ಮುಂದೆ ನೀವು ತೆಗೆಯಬೇಡಿರಿ. ಅದನ್ನು ಕೇಳಿ ನಿಮ್ಮ ಮಾಸಾಹೇಬರಿಗೆ ಬಹಳ ವ್ಯಸನವಾಗುತ್ತದೆ. ಅವರು ನಿಮ್ಮ ಸಲುವಾಗಿ ಎಷ್ಟು ಕಷ್ಟ ಪಟ್ಟರೆಂಬದನ್ನು ನೀವು ಬಲ್ಲಿರಿ. ಅದರ ಉಪಕಾರವನ್ನು ಸ್ವಲ್ಪವಾದರೂ ತೀರಿಸುವ ಇಚ್ಛೆ ನಿಮಗಿದ್ದರೆ, ತಿರುಗಿ ಈ ಮಾತನ್ನು ನೀವು ಅವರ ಮುಂದೆ ತೆಗೆಯಬೇಡಿರಿ. ಅವರಿಗೆ ಈ ಮಾತಿನ ನೆನಪಾಗುವಂತೆ ಸರ್ವಥಾ ನೀವು ಮಾಡಬಾರದು. ನಿಮ್ಮ ತಂದೆ–ತಾಯಿಗಳಿಬ್ಬರೂ ದೊಡ್ಡ ಕುಲದವರಿರುತ್ತಾರೆ. ನಿಮ್ಮ ಹಿರಿಯರು ನಿಮ್ಮ ತಾಯಂದಿರನ್ನು, ಅವರು ಅವಿವಾಹಿತರಾಗಿರುವಾಗ ಹುಲಿಯ ಬಾಯೊಳಗಿಂದ ಬಿಡಿಸಿದರು. ಆಗಿನ ಕಾಲದ ನಿಮ್ಮ ಹಿರಿಯರ ಶೌರ್ಯವನ್ನು ನೋಡಿ, ನಿಮ್ಮ ತಾಯಿಯವರು ಅವರನ್ನು ಲಗ್ನವಾಗಬೇಕೆಂದು ಇಚ್ಛಿಸಿದನು. ಆದರೆ ಅವೆರಡೂ ಮನೆತನಗಳು ಪರಸ್ಪರ ದ್ವೇಷಿಸುತ್ತಿದ್ದರಿಂದ, ನಿಮ್ಮ ತಾಯಿಯವರ ಲಗ್ನಕ್ಕೆ ಅವರ ತಂದೆಯ, ಅಂದರೆ ನಿಮ್ಮ ಅಜ್ಜಂದಿರ ಒಪ್ಪಿಗೆಯು ದೊರೆಯುವಹಾಗಿದ್ದಿಲ್ಲ; ಆದ್ದರಿಂದ ನಿಮ್ಮ ತಾಯಂದಿರು ಗುಪ್ತರೀತಿಯಿಂದ ನಿಮ್ಮ ಹಿರಿಯರನ್ನು ಲಗ್ನಮಾಡಿಕೊಂಡರು. ಕಾರಣ ನಿಮ್ಮ ಅಜ್ಜಂದಿರಿಗೆ ಬಹಳ ಸಂತಾಪವಾಯಿತು. ಕಾರಣ ನಿಮ್ಮ ಹಿರಿಯರು, ತಮ್ಮ ಮನೆಯವರಿಗೆ ಈ ಲಗ್ನದ ಸಂಗತಿಯು ತಿಳಿದರೆ ತಮ್ಮನ್ನು ಮನೆಬಿಡಿಸಿ ಹೊರಗೆ ಹಾಕಿಯಾರೆಂಬ ಭಯದಿಂದ ಅವರೂ ತಮ್ಮ ಲಗ್ನದ ಸಂಗತಿಯನ್ನು ಗುಪ್ತವಾಗಿ ಇಟ್ಟರು. ಕೆಲವು ದಿನಗಳವರೆಗೆ ನಿಮ್ಮ ತಾಯಿ ತಂದೆಗಳಿಬ್ಬರೂ ಒಂದು ಗುಪ್ತ ಸ್ಥಳದಲ್ಲಿ ಪರಮಾನಂದದಿಂದ ಇದ್ದರು. ನಿಮ್ಮ ಹಿರಿಯರು ಕೆಲವು ದಿನದಿನಾಲೂ ಆ ಗುಪ್ತ ಸ್ಥಳಕ್ಕೆ ಬರುತ್ತಿದ್ದರು. ಮುಂದೆ ಬರಬರುತ್ತ ನಾಲ್ಕು ದಿನಗಳಿಗೊಮ್ಮೆ, ಎಂಟು ದಿನಗಳಿಗೊಮ್ಮೆ ಬರಹತ್ತಿದರು. ಒಂದು ದಿನ ಮಾಸಾಹೇಬರು ನಿದ್ದೆ ಹತ್ತಿ ಮಲಗಿರುವಾಗ, ಅವರ ಬಳಿಯಲ್ಲಿ ನಿಮ್ಮ ಹಿರಿಯರು ಒಂದು ಪತ್ರವನ್ನು ಬರೆದು ಇಟ್ಟು, ಹೊರಟುಹೋದರು. ಅಂದಿನಿಂದ ಇಲ್ಲಿಯವರೆಗೆ ನಿಮ್ಮ ಹಿರಿಯರು ಮಾಸಾಹೇಬರ ಯೋಗಕ್ಷೇಮವನ್ನು ವಿಚಾರಿಸುವದಿಲ್ಲ.

ಮಾಸಾಹೇಬರು ಜೀವಿಸಿರುವರೋ, ಸತ್ತಿರುವರೋ ಎಂಬ ಸುದ್ದಿಯನ್ನು ಸಹ ಅವರು ಕೇಳಿಕೊಂಡಿರುವದಿಲ್ಲ. ಇದಕ್ಕೂ ಹೆಚ್ಚಿಗೆ ನಾನು ಹೇಳಲಾರೆನು. ನಿಮ್ಮ ತಂದೆಯ ಹೆಸರನ್ನು ಮಾತ್ರ ನೀವು ಕೇಳಬೇಡಿರಿ. ಈ ಸಂಗತಿಯು ಮಾಸಾಹೇಬರಿಗೇ ಮತ್ತು ನನಗೆ ಅಲ್ಲದೆ ಬೇರೆ ಮತ್ತೊಬ್ಬರಿಗೆ ಗೊತ್ತಿಲ್ಲ. ಅದನ್ನು ಇಂದೇ ನಿಮ್ಮ ಮುಂದೆ ಮಾತ್ರ ಹೇಳಿದ್ದೇನೆ. ನಾನು ನಿಮ್ಮ ತಂದೆಯ ಹೆಸರನ್ನು ಗುಪ್ತವಾಗಿಡುವದರಿಂದ ಅದರಲ್ಲೇನಾದರೂ ಮನಸ್ಸಿಗೆ ಹತ್ತುವ ಪ್ರಸಂಗವಿದ್ದೀತೆಂದು ನಿಮಗೆ ತೋರಬಹುದು; ಆದರೆ ಹಾಗೆ ತೋರಗೊಡಬೇಡಿರಿ. ಎಲ್ಲಿಯವರೆಗೆ ನಿಮ್ಮ ಹಿರಿಯರು ನಿಮ್ಮಿಬ್ಬರನ್ನು ತಾವಾಗಿ ಕರೆಸಿಕೊಳ್ಳುವದಿಲ್ಲವೋ, ಅಲ್ಲಿಯವರೆಗೆ ನಿಮ್ಮ ಹಿರಿಯರಿಗೆ ತಮ್ಮ ವೃತ್ತಾಂತವನ್ನು ತಿಳಿಸಬಾರ ದೆಂದು ಮಾಸಾಹೇಬರು ಈ ಮೊದಲೇ ನಿಶ್ಚಯಿಸಿರುವರು. ನಿಮ್ಮ ಶೌರ್ಯಪ್ರಭಾವವು ನಿಮ್ಮ ಹಿರಿಯರಿಗೆ ತಿಳಿಯಬಂದ ದಿವಸವೇ ಮಾಸಾಹೇಬರು ಅವರ ಪರಿಚಯವನ್ನು ನಿಮಗೆ ಮಾಡಿಕೊಡುವರು. ಬರೇ ಪರಿಚಯವಷ್ಟೇ ಏಕೆ, ಅವರನ್ನು ನಿಮಗೆ ಪ್ರತ್ಯಕ್ಷವಾಗಿ ತೋರಿಸುವರು. ಅಲ್ಲಿಯವರೆಗೆ ಸಂಪೂರ್ಣ ವೃತ್ತಾಂತವನ್ನು ಬೇರೆ ಯಾರಿಗೂ ತಿಳಿಸಲಿಕ್ಕಿಲ್ಲೆಂದು ಹಿಂದಕ್ಕೆ ಮಾಸಾಹೇಬರು ಪ್ರತಿಜ್ಞೆ ಮಾಡಿರುವರು. ಅವರು ನಿಮ್ಮ ಸಲುವಾಗಿ ಎಷ್ಟು ಕಷ್ಟಪಟ್ಟಿರುವರೆಂಬದನ್ನೂ, ಅವರು ತಮ್ಮ ಗೌರವಕ್ಕೆ ಬಾಧೆ ಬಾರದಂತೆ ಇಲ್ಲಿಯವರೆಗೆ ಕಷ್ಟದಿಂದ ಹ್ಯಾಗೆ ಕಾಲಹರಣ ಮಾಡಿದರೆಂಬದನ್ನೂ ನಾನು ಪೂರಾಬಲ್ಲೆನು. ನಿಮಗಾದರೂ ಬಹು ಮಟ್ಟಿಗೆ ಅದು ಗೊತ್ತಿರುತ್ತದೆ. ಅಂದಬಳಿಕ ಇದಕ್ಕೂ ಹೆಚ್ಚಿಗೆ ನಾನೇನು ಹೇಳಲಿ ? ಇಷ್ಟರಿಂದಲೇ ನೀವು ಸಮಾದಾನಪಡತಕ್ಕದ್ದು'' ಎಂದು ಹೇಳಿ ಆಕೆಯು ಕಣ್ಣೀರು ಸುರಿಸಹತ್ತಿದಳು.

ಲೈಲಿಯು ಹೇಳುವ ಈ ವೃತ್ತಾಂತವನ್ನು ರಣಮಸ್ತಖಾನನು ತಟಸ್ಥವೃತ್ತಿಯಿಂದ ಕೇಳುತ್ತ ಕುಳಿತ್ತಿದ್ದನು. ತನ್ನ ತಂದೆಯು ತನ್ನ ತಾಯಿಯನ್ನು ನಿಷ್ಕಾರಣವಾಗಿ ಬಿಟ್ಟ ರೀತಿಯನ್ನು ಕೇಳಿ, ನಡುವೆ ಒಂದೆರಡು ಸಾರೆ ರಣಮಸ್ತಖಾನನಿಗೆ ಸಂತಾಪವಾಗಿ ''ಇಂಥವನು ಯಾವನವನು, ಹೆಸರು ಹೇಳಬಾರದೆ ಒಂದು ಕೈ ನೋಡಿಬಿಡುತ್ತೇನೆ'' ಎಂದು ಗಟ್ಟಿಯಾಗಿ ನುಡಿಯಬೇಕೆಂದು ಆತನು ಮಾಡಿದ್ದನು. ಆದರೆ ಆತನು ಮಾಸಾಹೇಬರಂಥ ಆತ್ಮಸಂಯಮನದ ಸ್ತ್ರೀಯ ಹೊಟ್ಟೆ ಯಲ್ಲಿ ಹುಟ್ಟಿದವನಾದ್ದರಿಂದ, ಅಷ್ಟಕ್ಕೆ ತಡಕೊಂಡು ಸುಮ್ಮನೆ ಎಲ್ಲ ವೃತ್ತಾಂತವನ್ನು ಕೇಳಿಕೊಂಡರು. ಲೈಲಿಯು ಅಳುವದನ್ನು ನೋಡಿ ಆತನ ಹೊಟ್ಟೆಯಲ್ಲಿ ಬಹಳ ಕಷ್ಟವಾಯಿತು. ಏನುಮಾತಾಡ ಬೇಕೆಂಬದು ಆತನಿಗೆ ತಿಳಿಯದಾಯಿತು. ಅಷ್ಟರಲ್ಲಿ ಲೈಲಿಯು ಮತ್ತೆ ಆತನಿಗೆ— ''ಅಪ್ಪಾ, ನಿಮ್ಮ ಅವ್ವನು ಬಹು ದೊಡ್ಡ ಮನುಷ್ಯಳು, ಮಹಾ ಪತಿವ್ರತೆಯು. ಆಕೆಯ ಉಗುರಿನ ಯೋಗ್ಯತೆಯನ್ನು ಸಹ ಬೇರೆ ಪತಿವ್ರತಾ ಸ್ತ್ರೀಯರು ಹೋಲಲಾರರು.'' ಎಂದು ಹೇಳಿದಳು. ಅದನ್ನು ಕೇಳಿ ರಣಮಸ್ತಖಾನನಿಗೆ ಬಹುಮಟ್ಟಿಗೆ ಸಮಾಧಾನವಾಯಿತು. ಆತನು ತನ್ನ ತಾಯಿಯ ಬಳಿಗೆ ಹೋಗಿ ಆಕೆಯ ಚರಣಗಳ ಮೇಲೆ ಮಸ್ತಕವನ್ನಿಟ್ಟು ತನ್ನನ್ನು ಕ್ಷಮಿಸಬೇ ಕೆಂದು ಪ್ರಾರ್ಥಿಸಿದನು. ತಮ್ಮ ಮನಸ್ಸನ್ನು ನೋಯಿಸುವ ಇಂಥ ಪ್ರಸಂಗವನ್ನು ಇನ್ನು ಪುನಃ ಬರಗೊಡುವದಿಲ್ಲೆಂದು ಆತನು ನಿರ್ಧಾರದಿಂದ ಮಾಸಾಹೇಬರಿಗೆ ಹೇಳಿದನು. ಈ ಸಂಗತಿಯು

ರಣಮಸ್ತಖಾನನು ವಿಜಯ ನಗರದ ವಕೀಲನಾಗಿ ಬರುವದಕ್ಕೆ ಮುಂಚೆ ಕೆಲವು ವರ್ಷಗಳ ಹಿಂದೆ ಒದಗಿತ್ತು ಅದಕ್ಕೂ ಮೊದಲು ನಾಲ್ಕು ವರ್ಷಗಳ ಹಿಂದೆ ಮಾಸಾಹೇಬರು ಲೈಲಿಯೂ ರಣಮಸ್ತಖಾನನನ್ನು ಕಟ್ಟಿಕೊಂಡು ಬಂದು ವಿಜಾಪುರದಲ್ಲಿ ಇರಹತ್ತಿದರು. ಮಾಸಾಹೇಬರ ಪರೋಪಕಾರ ಸ್ವಭಾವ, ಸಾಧುವೃತ್ತಿಗಳ ಮೂಲಕ ಅವರ ಕೀರ್ತಿಯು ನಾಲ್ಕೂ ಕಡೆಗೆ ಪಸರಿಸುತ್ತ, ರಾಣಿಯ ಮುಖಾಂತರ ಸ್ವತಃ ಬಾದಶಹರವರ ಕಿವಿಯವರೆಗೆ ಹೋಯಿತು. ಮಾಸಾಹೇಬರ ಮೇಲೆ ರಾಣಿಯ ಭಕ್ತಿಯು ಬಹಳ. ಬಾದಶಹರು ಒಮ್ಮೆ ಮಾಸಾಹೇಬರ ದರ್ಶನ ತಕ್ಕೊಳ್ಳುವ ಇಚ್ಛೆಯನ್ನು ಪ್ರಕಟಿಸಿದ್ದರಿಂದ, ಬಾದಶಹನ ರಾಣಿಯು ಆ ಪ್ರಸಂಗವನ್ನು ಒದಗಿಸಿಕೊಟ್ಟಳು. ಹೀಗೆ ದರ್ಶನವಾದ ದಿವಸದಿಂದ ಬಾದಶಹನ ದೃಢಭಕ್ತಿಯು ಮಾಸಾಹೇಬರಲ್ಲಿ ಉಂಟಾಗಿ, ಅವರ ಮಗನನ್ನು ತಾವು ಕೈಹಿಡಿದು ದೊಡ್ಡ ಪದವಿಗೇರಿಸ ಬೇಕೆಂದು ಅವರು ನಿಶ್ಚಯಿಸಿದರು. ಬಾದಶಹರ ಕೃಪೆಯಿಂದ ರಣಮಸ್ತಖಾನನು ದಿನದಿನಕ್ಕೆ ಉತ್ಕರ್ಷವನ್ನು ಪಡೆಯಹತ್ತಿದನು. ಆತನ ಉತ್ಕರ್ಷವನ್ನು ನೋಡಿ ಉಳಿದ ಮುಸಲ್ಮಾನ ಸರದಾರರು ಹೊಟ್ಟೆಕಿಚ್ಚುಪಡಹತ್ತಿದರು. ಇದನ್ನು ನೋಡಿ ಮಾಸಾಹೇಬರು ಅಸಮಾಧಾನ ಪಟ್ಟರು. ಈ ಹೊಟ್ಟೇಕಿಚ್ಚಿನ ಜನರು "ಇವನು ಯಾರು, ಎಲ್ಲಿಯವನು ಯಾರ ಮಗನು" ಎಂದು ತಮ್ಮ ಮಗನನ್ನು ವಿಚಾರಿಸಹತ್ತಿ ಇಲ್ಲದ ಕುಚೇಷ್ಟೆಯನ್ನು ಎಬ್ಬಿಸಬಹುದೆಂಧು ತಿಳಿದು, ತಾವು ಮಗನನ್ನು ಕಟ್ಟಿಕೊಂಡು, ಇವರ ಉಪದ್ರವ ತಗಲದ ಸ್ಥಳದಲ್ಲಿ ಒತ್ತಟ್ಟಿಗೆ ಇರಬೇಕೆಂದು ಅವರು ನಿಶ್ಚಯಿಸಿದರು. ಇದಕ್ಕೆ ವಿಜಯನಗರವು ತಕ್ಕ ಸ್ಥಳವಾಗಿ ಅವರಿಗೆ ತೋರಿತು. ಆಗ ಮಾಸಾಹೇಬರು "ತನ್ನ ಮಗನನ್ನು ವಿಜಯನಗರದ ವಕೀಲನನ್ನಾಗಿ ನಿಯಮಿಸಬೇಕೆ"ಂದು ಬಾದಶಹನನ್ನು ಪ್ರಾರ್ಥಿಸಲು, "ಬಹಳ ತರುಣನೆ"ಂದು ಬಾದಶಹರು ಮೊದಲು ಮಾಸಾಹೇಬರ ಮಾತನ್ನು ಅಲ್ಲಗಳೆದರು. ಆದರೆ ಕಡೆಗೆ ಮಾಸಾಹೇಬರ ಮನಸ್ಸನ್ನು ಮುರಿಯಲಾರದೆ, ಬಾದಶಹರು ರಣಮಸ್ತಖಾನನನ್ನು ವಿಜಯನಗರದ ವಕೀಲನನ್ನಾಗಿ ನಿಯಮಿಸಿ ಕಳಿಸಿದರು. ಅದೇ ರಣಮಸ್ತಖಾನನು ಈಗ ಬಾದಶಹನ ದರ್ಶನಕ್ಕಾಗಿ ನೂರಜಹಾನಳನ್ನು ಕಳಿಸುವ ನೆವದಿಂದ ವಿಜಾಪುರಕ್ಕೆ ಬಂದಿದ್ದನು. ಆಗ ವಿಜಾಪುರದ ದರ್ಬಾರದಲ್ಲಿ ಏನು ನಡೆಯಿತೆಂಬದನ್ನು ಮುಂದಿನ ಪ್ರಕರಣದಲ್ಲಿ ಹೇಳುವೆವು.

## ಔದಾಶೀನ್ಯ

ರಣಮಸ್ತಖಾನನು ವಿಜಾಪುರಕ್ಕೆ ಹೋಗಿ ನೂರಜಹಾನಳನ್ನು ಆಕೆಯ ಆಪ್ತರಿಗೆ ಒಪ್ಪಿಸಿದನು. ಆತನು ಒಂದು ದಿನ ಬಾದಶಹನ ದರ್ಶನಕ್ಕೆ ಹೋದಾಗ ವಿಜಯನಗರದ ದರ್ಬಾರದಲ್ಲಿ ನಡೆದ ಸಂಗತಿಯನ್ನೆಲ್ಲ ವಿಜ್ಞಾಪಿಸಲು, ಅದನ್ನು ಕೇಳಿ ಬಾದಶಹನಿಗೆ ಸಂತಾಪವಾಯಿತು. ಸಂತಾಪದ ಭರದಲ್ಲಿ ಆತನು ಈಗಲೇ, ವಿಜಯನಗರದ ಮೇಲೆ ದಾಳೀ

ಮಾಡಿ ರಾಮರಾಜನ ಸೊಕ್ಕು ಇಳಿಸಬೇಕೆಂದು ಮಾಡಿದನು. ಹಿಂದಕ್ಕೆ ಸನ್ ೧೪೦೬ನೇ ಇಸವಿಯಲ್ಲಿ ಗೋವಳಕೊಂಡದ ಬಾದಶಹನಾದ ಫಿರೋಜಶಹನ ಕಾಲದಲ್ಲಿ ಇಂಥ ಪ್ರಸಂಗವೇ ಒದಗಿತ್ತು ಆಗಿನ ವಿಜಯನಗರದ ಅರಸು ದೇವರಾಜನು ಗೋವಳಕೊಂಡದ ರಾಜ್ಯದೊಳಗಿನ ಒಬ್ಬ ಚಲುವೆಯಾದ ಒಕ್ಕಲಿಗನ ಮಗಳನ್ನು ಅಪಹರಿಸಿಕೊಂಡು ಬಂದಿದ್ದನು. ಅದರ ಸೇಡು ತೀರಿಸುವದಕ್ಕಾಗಿ ಫಿರೋಜಶಹನು ವಿಜಯನಗರದ ರಾಜ್ಯದ ಮೇಲೆ ದಂಡೆತ್ತಿ ಹೋಗಿ, ದೇವರಾಜನನ್ನು ಸೋಲಿಸಿ, ವಿಜಯನಗರದ ಅರಸು ಮನೆತನಕ್ಕೆ ಸಂಬಂಧಿಸಿದ ಒಬ್ಬ ಕುಮಾರಿಯನ್ನು ತಾನು ಲಗ್ನಮಾಡಿಕೊಂಡು ಆಕೆಯನ್ನು ತನ್ನ ಜನಾನಖಾನೆಯಲ್ಲಿ ಸೇರಿಸಿಕೊಂಡಿದ್ದನು. ಈಗಂತು ರಾಮರಾಜನು ಕೂಡಿದ ದರ್ಬಾರದಲ್ಲಿ ಒಬ್ಬ ದೊಡ್ಡ ಸರದಾರನ ಮಗಳ ಲಜ್ಜಾಹರಣ ಮಾಡಿದ್ದನು. ಆದ್ದರಿಂದ ರಾಮರಾಜನ ಸಮಾಚಾರವನ್ನು ನೆಟ್ಟಗೆ ತಕ್ಕೊಳ್ಳಬೇಕೆಂದು, ಬಾದಶಹನು ಆರಂಭದ ಆವೇಶದಲ್ಲಿ ನಿಶ್ಚಯಿಸಿದನು. ಆ ಸಂಬಂಧದಿಂದ ಆಲೋಚಿಸುವದಕ್ಕಾಗಿ ಮುಖ್ಯ ಮುಖ್ಯ ಮುತ್ಸದ್ದಿಗಳ ಗುಪ್ತ ದರ್ಬಾರವನ್ನು ನೆರಿಸಬೇಕೆಂದು ಯೋಚಿಸಿ, ಅದರಂತೆ ಬೇಗನೆ ದರ್ಬಾರವನ್ನು ನೆರಿಸಿದನು. ಆದರೆ ದರ್ಬಾರದ ಕೆಲಸವು ಅತ್ಯಂತ ಗುಪ್ತವಾಗಿ ನೆರವೇರಿಸಿದ್ದರಿಂದ ಜನರಿಗೆ ಅದರ ಸುದ್ದಿಯೇನೂ ಗೊತ್ತಾಗಲಿಲ್ಲ, ಅದರ ಸಂಬಂಧ ದಿಂದ ಜನರಲ್ಲಿ ತರ್ಕವಿತರ್ಕಗಳಿಗೆ ಆರಂಭವಾಯಿತು. ವಿಜನಗರದ ಸೇಡು ತೀರಿಸುವದಕ್ಕಾಗಿ ಈ ಗುಪ್ತ ದರ್ಬಾರವು ಕೂಡಿರುವದರಿಂದ, ಇನ್ನು ಬೇಗನೆ ವಿಜಯನಗರದ ಸಂಗಡ ಯುದ್ಧವು ಉತ್ಪನ್ನವಾಗುವದೆಂದು ಜನರು ಅಲ್ಲಲ್ಲಿ ಮಾತಾಡಹತ್ತಿದರು. ಆಗ ವಿಜಾಪುರದಲ್ಲಿ ಎಲ್ಲಿ ಹೋದರೂ ಈ ಯುದ್ಧದ ವಿಷಯವನ್ನೇ ಕುರಿತು ಜನರು ಮಾತಾಡುತ್ತ ಲಿದ್ದರು. ಒಬ್ಬ ಸರದಾರನ ಮಗಳ ಮಾನಖಂಡನ ಮಾಡಿದ್ದನ್ನು ಬಾದಶಹನು ಎಂದಿಗೂ ಸೈರಿಸಿಕೊಳ್ಳ ಲಾರನೆಂದು, ಎಲ್ಲರು ನಿಶ್ಚಯಿಸಿದ್ದರು. ಇನ್ನು ಬೇಗನೆ ವಿಜಯನಗರದ ಮೇಲೆ ಸಾಗಿಹೋಗ ಬೇಕಾಗುವದೆಂದು, ಪ್ರತಿಯೊಬ್ಬ ಮುಸಲ್ಮಾನನು ಸ್ಫೂರ್ತಿಗೊಂಡನು. ಪ್ರತಿಯೊಂದು ಮನೆಯಲ್ಲಿ ಮಸೀದೆಯಲ್ಲಿ ಜನರು ತಮ್ಮ ತಮ್ಮೊಳಗೆ– "ಬಾದಶಹನು ಈ ಪ್ರಸಂಗದಲ್ಲಿ ಹಿಂದಕ್ಕೆ ಸರಿಯಾಲಾಗದೆ"ಂದು ಪ್ರತಿಪಾದಿಸಹತ್ತಿದರು. ವಿಜಯನಗರದ ಮೇಲೆ ದಂಡೆತ್ತಿ ಹೋಗುವದಕ್ಕೆ ಪ್ರತಿಯೊಬ್ಬರ ಬಾಹುಗಳು ಸ್ಫುರಿಸಹತ್ತಿದವು. ಪ್ರತಿಯೊಬ್ಬನು ಬಾಯಿಗೆ ಬಂದಂತೆ ಪೌರುಷದ ಮಾತುಗಳನ್ನು ಆಡಹತ್ತಿದನು. ವಿಜಯ ನಗರದಲ್ಲಿ ಅಪಾರವಾದ ಸಂಪತ್ತು ತುಂಬಿರುವದೆಂಬ ಸುದ್ದಿಯನ್ನು ಅವರು ಕೇಳಿಯೇ ಇದ್ದರು; ಆದ್ದರಿಂದ ಯುದ್ಧದ ಕೊನೆಯಲ್ಲಿ ಆ ಪಟ್ಟಣವನ್ನು ಸುಲಿಯಲಿಕ್ಕೆ ತಮಗೆ ಆಸ್ಪದ ದೊರೆಯಬೇಕೆಂದು ಪ್ರತಿ ಒಬ್ಬ ಮುಸಲ್ಮಾನ ವೀರನು ದಂಡಿನಲ್ಲಿ ಸೇರಲಿಕ್ಕೆ ಆತುರಪಡ ಹತ್ತಿದ್ದನು. ದಂಡು ಕೂಡಲಿಕ್ಕೆ ಯಾವಾಗ ಆರಂಭವಾಗುವದೋ ಎಂದು ಅವರು ಎದುರು ನೋಡಹತ್ತಿದರು. ಆದರೆ ಬಾದಶಹನು ಗುಪ್ತ ದರ್ಬಾರದಲ್ಲಿ ನಡಿಸಿದ ಆಲೋಚನೆಯ ಪರಿಣಾಮವು ಇದಕ್ಕೆ ತೀರ ವಿರುದ್ಧವಾಗಿ ಆಯಿತು. ಬಾದಶಹನು ದೊಡ್ಡ ದರ್ಬಾರ ನೆರಸಿ, ರಾಮರಾಜನು ನೂರಜಹಾನಳ ಲಜ್ಜಾಹರಣ ಮಾಡಿದ ಯಾವತ್ತು ವೃತ್ತಾಂತವನ್ನು ದರ್ಬಾರದಲ್ಲಿ ನಿವೇದಿಸುವಂತೆ ರಣಮಸ್ತಖಾನನನ್ನು ಆಜ್ಞಾಪಿಸಿದನು. ಆಗ ರಣಮಸ್ತಖಾನನು ತನ್ನ ವಾಕ್ಚಾತುರ್ಯವನ್ನೆಲ್ಲ ಒಟ್ಟುಗೂಡಿಸಿ, ಅತ್ಯಂತ ಆವೇಶದಿಂದ ಆ

ವೃತ್ತಾಂತವನ್ನೆಲ್ಲ ನಿವೇದಿಸಿದನು. ಅದನ್ನು ಕೇಳಿ ಯಾವತ್ತು ದರ್ಬಾರದ ಜನರು ರೊಚ್ಚಿಗೆದ್ದರು. ಈಗಲೇ ರಾಮರಾಜನ ಶಾಸನ ಮಾಡಲಿಕ್ಕೆ ವಿಜನಗರದ ಮೇಲೆ ಸಾಗಿಹೋಗತಕ್ಕದ್ದೆಂಬ ಉದ್ಗಾರಗಳು ಅಲ್ಲಲ್ಲಿ ಹೊರಡಹತ್ತಿದವು. ಬಾದಶಹನು ಬಹು ಶಾಂತಮುದ್ರೆಯನ್ನು ತಾಳಿದ್ದನು. ತಮ್ಮ ತಮ್ಮ ಮನಸ್ಸಿಗೆ ಬಂದಂತೆ ಜನರಿಗೆ ಮಾತಾಡಗೊಟ್ಟು, ಅವರು ಆಡುವ ಮಾತುಗಳನ್ನೆಲ್ಲ ಆತನು ಸಮಾಧಾನದಿಂದ ಕೇಳಿಕೊಳ್ಳುತ್ತಲಿದ್ದನು.

ಈ ಮೇರೆಗೆ ದರ್ಬಾರದಲ್ಲಿ ಒಮ್ಮೆಲೆ ಎದ್ದ ಜನರ ಉದ್ಗಾರದ ತರಂಗಗಳು ಸ್ವಲ್ಪ ಶಾಂತವಾದ ಮೇಲೆ, ಬಾದಶಹನು ಆಜ್ಞಾಪಿಸಿದ್ದೇನೆಂದರೆ— ''ರಣಮಸ್ತಖಾನನು ವರ್ಣಿಸಿದ ಸಂಗತಿಯು ತಾಪದಾಯಕವೆಂಬುದೇನೋ ನಿಜ. ಆದರೆ ಅಷ್ಟಕ್ಕಾಗಿ ಇಷ್ಟು ರೊಚ್ಚಿಗೇಳುವದು ಸರಿಯಲ್ಲ; ಈ ಸಂಬಂಧದಿಂದ ರಾಮದೇವರಾಜನು ಏನು ಹೇಳುವನೆಂಬದನ್ನು ಮೊದಲು ಕೇಳಿಕೊಂಡು, ಆಮೇಲೆ ಮಾಡತಕ್ಕದ್ದನ್ನು ಮಾಡಬೇಕು.'' ಬಾದಶಹನ ಈ ಅಪ್ಪಣೆಯನ್ನು ಕೇಳಿ, ದರ್ಬಾರದ ಜನರು ಬಹಳ ನಿರಾಶೆಪಟ್ಟರು. ಬಾದಶಹನು ಹೀಗೆ ಆಜ್ಞಾಪಿಸಬಹುದೆಂಬದು ಯಾರ ಕನಸು ಮನಸುಗಳಲ್ಲಿಯೂ ಬಂದಿದ್ದಿಲ್ಲ. ಎಲ್ಲ ಜನರು ಖಿನ್ನರಾದರು. ಅವರಿಗೆ ಪರಮಾಶ್ಚರ್ಯವಾಯಿತು. ಅವರು ಬಾದಶಹನನ್ನುದ್ದೇಶಿಸಿ— ''ಇನ್ನೇನು ರಾಮರಾಜನನ್ನು ವಿಚಾರಿಸುವದು? ರಣಮಸ್ತ ಖಾನನು ಎಲ್ಲ ಸಂಗತಿಗಳನ್ನು ಹೇಳಿಯೇ ಇದ್ದಾನೆ. ಪ್ರತ್ಯಕ್ಷ ನಮ್ಮ ವಕೀಲನು ದರ್ಬಾರದಲ್ಲಿದ್ದು, ಹೀಗೆ ಮಾಡುವದು ಯೋಗ್ಯವಲ್ಲೆಂದು ಆತನು ನಿರ್ಧಾರದಿಂದ ನಿಷೇಧಿಸುತ್ತಿರಲು, ಅದನ್ನು ಲೆಕ್ಕಿಸದೆ ರಾಮರಾಜನು ಒಬ್ಬ ಸರದಾರನ ಮಗಳ ಮಾನ ಖಂಡನ ಮಾಡಿದ ಬಳಿಕ ಇನ್ನೇನು ಉಳಿಯಿತು? ಈ ಪ್ರಸಂಗದಲ್ಲಿ ರಾಮದೇವರಾಜನನ್ನು ಕೇಳುವ ಕಾರಣವಿಲ್ಲ. ಆತನ ಹಂಗು ಇಡದೆ ವಿಜಯನಗರದ ಮೇಲೆ ದಂಡೆತ್ತಿ ಹೋಗಲು ಸೈನ್ಯಕ್ಕೆ ಅಪ್ಪಣೆಯನ್ನು ಕೊಡಬೇಕು. ಆ ಹಿಂದು ರಾಜನು ಬಹಳ ಅಂಗಲಾಚಿ ಹೇಳಿಕೊಂಡರೆ, ಬೇಕಾದರೆ ಆತನಿಂದ ಅಪಾರವಾದ ಕಪ್ಪವನ್ನು ಸ್ವೀಕರಿಸಿ, ಆತನ ಮನೆತನಕ್ಕೆ ಸಂಬಂಧಿಸಿದ ಒಬ್ಬ ಕನ್ಯೆಯನ್ನು ಜನಾನಖಾನೆಯಲ್ಲಿ ಸೇರಿಸಿಕೊಳ್ಳತಕ್ಕದ್ದು'' ಎಂದು ಪೌರುಷದ ಮಾತುಗಳನ್ನು ಆಡಿದ್ದಲ್ಲದೆ, ಅದರಂತೆ ತಮ್ಮ ತಮ್ಮೊಳಗೂ ಮಾತಾಡಿಕೊಳ್ಳ ಹತ್ತಿದರು ! ಆದರೆ ಬಾದಶಹನು ಈ ಪ್ರಸಂಗದಲ್ಲಿ ಬಹು ಸಮಾಧಾನವನ್ನು ತಾಳಿದನು. ಆತನು ತನ್ನ ಮಾತನ್ನು ತಿರುಗಿಸಲಿಲ್ಲ. ರಾಮದೇವರಾಜನ ವಿಚಾರವನ್ನು ಕೇಳಿಕೊಂಡ ಹೊರತು ಏನೂ ಮಾಡುವ ಹಾಗಿಲ್ಲೆಂದು ಸ್ಪಷ್ಟವಾಗಿ ಹೇಳಿದನು. ಅದನ್ನು ಕೇಳಿ ಜನರಿಗೆ ಮತ್ತಿಷ್ಟು ಆಶ್ಚರ್ಯವಾಯಿತು. ಬಾದಶಹನು ಇಂದು ಹೀಗೆ ವಿಲಕ್ಷಣ ರೀತಿಯಿಂದ ನಡೆದದ್ದನ್ನು ನೋಡಿ ಜನರು ಬಾದಶಹನ ಬುದ್ಧಿಯು ಭ್ರಂಶವಾಯಿತೆಂತಲೂ, ಆತನು ರಾಮರಾಜನಿಗೆ ಹೆದರುವನೆಂತಲೂ ಭಾವಿಸ ಹತ್ತಿದರು. ಈ ಅಂಜುಬುರುಕತನದಿಂದ ರಾಮರಾಜನು ಮತ್ತಿಷ್ಟು ಸೆಟೆಯಲು, ಬಾದಶಹರ ಗೌರವಕ್ಕೆ ಬಾಧೆಬರುವದೆಂದು ತಿಳಿದು, ಬಾದಶಹರ ಮನಸ್ಸನ್ನು ತಿರುಗಿಸಲಿಕ್ಕೆ ಅವರ ವಿಶ್ವಾಸದ ಕೆಲವು ಜನರಿಗೆ ಸೂಚಿಸಿದರು. ಆದರೆ ಅಂದು ಬಾದಶಹನ ಮುಂದೆ ಯಾರ ಆಟವೂ ನಡೆಯಲಿಲ್ಲ. ಕಡೆಗೆ ಬಾದಶಹನು ತನ್ನ ಮನಸ್ಸಿನಂತೆ ಪತ್ರವನ್ನು ಬರೆದು ಸಿದ್ಧಮಾಡಿ, ಅದನ್ನು ಒಯ್ದು ರಾಮ

ದೇವರಾಯನಿಗೆ ಕೊಡುವಂತೆ ರಣಮಸ್ತಖಾನನಿಗೆ ಅಜ್ಞಾಪಿಸಿದನು. ಅದಕ್ಕೆ ರಣಮಸ್ತ ಖಾನನು— "ಇಂಥ ಪತ್ರವನ್ನು ನಾನು ತಕ್ಕೊಂಡು ಹೋಗಿ ರಾಮರಾಜನಿಗೆ ಮುಟ್ಟಿಸುವದು ಬಹಳ ಅಪಮಾನಕರವಾದದ್ದರಿಂದ,ಬಾದಶಹರು ದಯಮಾಡಿ ನನ್ನನ್ನು ಕಳಿಸಬಾರದು."ಎಂದು ಪ್ರಾರ್ಥಿಸಿದನು. ಇದಕ್ಕಾಗಿ ಬಾದಶಹನು ರಣಮಸ್ತಖಾನನ ಮೇಲೆ ಸಿಟ್ಟಾಗಿ, ಕಡೆಗೆ ಬೇರೊಬ್ಬ ಸರದಾರನಿಗೆ ಆ ಪತ್ರವನ್ನು ರಾಮರಾಜನಿಗೆ ಒಯ್ದು ಕೊಡುವಂತೆ ಅಜ್ಞಾಪಿಸಿದನು. ತನ್ನ ಆಜ್ಞೆಯನ್ನು ಮೀರಿದ ಶಿಕ್ಷೆಯೆಂದು ಬಾದಶಹನು ರಣಮಸ್ತಖಾನನಿಗೆ ಕೆಲವು ದಿನ ದರ್ಬಾರಕ್ಕೆ ಬರಲಾಗದೆಂದು ಅಜ್ಞಾಪಿಸಲಿಕ್ಕೆ ಸಹ ಹಿಂದುಮುಂದು ನೋಡಲಿಲ್ಲ.

ಬಾದಶಹನ ಈ ಕೃತಿಯಂತು ದರ್ಬಾರದ ಜನರ ಮನಸ್ಸಿಗೆ ಎಷ್ಟು ಮಾತ್ರವೂ ಬರಲಿಲ್ಲ. ಈ ಸಂಬಂಧದಿಂದ ಬಾದಶಹನು ಬಹಳ ಅನ್ಯಾಯ ಮಾಡಿದನೆಂದು ಅವರು ಭಾವಿಸ ಹತ್ತಿದರು. ಆದರೆ ಬಾದಶಹನ ಮುಂದೆ ಯಾರ ಆಟ ನಡೆಯುವದು? ಅವರೆಲ್ಲರೂ ಬಾಯಿ ಮುಚ್ಚಿಕೊಂಡು ತೆಪ್ಪಗೆ ಕುಳಿತುಕೊಳ್ಳಬೇಕಾಯಿತು. ಇತ್ತ ಬಾದಶಹನು ಕಳಿಸಿದ ಸರದಾರನು ವಿಜಯನಗರಕ್ಕೆ ಹೋಗಿ, ರಾಮರಾಜನಿಗೆ ಪತ್ರವನ್ನು ಕೊಟ್ಟನು. ಪತ್ರದೊಳಗಿನ ಸಂಗತಿಯನ್ನು ಓದಿ ರಾಮರಾಜನಿಗೆ ಬಹಳ ಸಮಧಾನವಾಯಿತು. ರಾಮರಾಜನ ಗುಪ್ತಚಾರರೂ ಬಾದಶಹನ ಗುಪ್ತ ದರ್ಬಾರದಲ್ಲಿ ನಡೆದ ಸಂಗತಿಯನ್ನು ಹೇಳಿ, ಬಾದಶಹನು ರಣಮಸ್ತಖಾನನಿಗೆ ಕೆಲವು ದಿನ ದರ್ಬಾರಕ್ಕೆ ಬಾರದಿರುವಂತೆ ಅಜ್ಞಾಪಿಸಿದ್ದನ್ನು ತಿಳಿಸಿದ್ದನು. ಚಾರನ ಈ ಗುಪ್ತಮಾತನ್ನು ಕೇಳಿಯಂತು ರಾಮರಾಜನು, ತನಗೆ ಬಾದಶಹನು ಹೆದರುವನೆಂದು ಭಾವಿಸಿದನು. ಆ ಪತ್ರವನ್ನು ತಂದ ವಕೀಲನ ಮುಂದೆ ರಾಮರಾಜನು, ರಣಮಸ್ತಖಾನನನ್ನು ಬಹಳವಾಗಿ ನಿಂದಿಸಿದನು. ಆತನು ಆ ವಕೀಲನಿಗೆ, "ಒಬ್ಬ ಅನುಭವಿಕನಾದ ವಕೀಲನನ್ನೇ ಕಳಿಸಿಕೊಟ್ಟಿದ್ದರೆ, ಇಂಥ ಪ್ರಸಂಗವೇ ಬರುತ್ತಿದ್ದಿಲ್ಲ. ನಾನು ಮಾಡಿದ್ದು ಅನ್ಯಾಯವಲ್ಲ. ಅಂಥ ಪ್ರಸಂಗದಲ್ಲಿ ಬೇರೆ ಯಾರಿದ್ದರೂ ನನ್ನ ಹಾಗೆಯೇ ಮಾಡುತ್ತಿದ್ದರು. ನಮಗೆ ಸಂಶಯ ಬಂದಬಳಿಕ ಬುರುಕಿ ತೆಗೆಸಿ ನೋಡಿದರೆ ತಪ್ಪೇನು? ವಿಜಾಪುರದ ಬಾದಶಹರೊಬ್ಬರು ತಮ್ಮ ಮಿತ್ರರಿರುವರು. ಆದರೆ ಅಹಮ್ಮದನಗರ— ಗೋವಳ ಕೊಂಡಗಳ ಬಾದಶಹರ ಸಂಗಡ ನಮ್ಮ ಮಿತ್ರತ್ವವಿಲ್ಲ. ವಿಜಾಪುರದವರ ಹೆಸರು ಹೇಳಿ ಬೇರೆ ಯಾರಾದರೂ ನಮ್ಮ ವಿರುದ್ಧ ಒಳಸಂಚು ನಡೆಸಿದ ಸಂಶಯ ಬಂದರೆ, ಅದರ ನಿವಾರಣವನ್ನು ನಾವು ಮಾಡಿಕೊಳ್ಳಬಾರದೋ?" ಎಂದು ಕೇಳಲು, ಹೊಸದಾಗಿ ಬಂದ ಆ ವಕೀಲನು— "ಅಲಬತ್, ಅಲಬತ್, ತಾವು ಸಂಶಯ ನಿವಾರಣ ವನ್ನು ಮಾಡಿಕೊಳ್ಳಲೇಬೇಕು. ಈ ಮಾತನ್ನು ಮನಸ್ಸಿನಲ್ಲಿ ತಂದುಕೊಂಡೇ ಬಾದಶಹರು ನನ್ನನ್ನು ತಮ್ಮ ಬಳಿಗೆ ಕಳಿಸಿದ್ದಾರೆ. ತಾವು ಈಗ ಹೇಳುವ ಸಂಗತಿಗಳ ಮೇಲಿಂದ ತಮ್ಮ ಕಡೆಗೆ ಏನೂ ತಪ್ಪು ಇದ್ದಂತೆ ನನಗೆ ತೋರುವದಿಲ್ಲ. ತಮಗೆ ಒದಗಿದ ಪ್ರಸಂಗವೇ ಬಾದಶಹರಿಗೆ ಒದಗಿದ್ದರೆ, ಅವರೂ ತಮ್ಮಂತೆಯೇ ನಡೆಯುತ್ತಿದ್ದರು. ರಣಮಸ್ತ ಖಾನನಂಥ ಏರಿಕೆಯ ರಕ್ತದ ತರುಣನನ್ನು ವಕೀಲನನ್ನಾಗಿ ಕಳಿಸತಕ್ಕದ್ದೇ ಇದ್ದಿಲ್ಲ; ಆದರೆ ಕೆಲವು ಅಂತಸ್ಥ ಮುರವತ್ತುಗಳಿಂದ ಆತನನ್ನು ಬಾದಶಹರು ನಿಯಮಿಸಿ ಕಳಿಸಬೇಕಾಯಿತು. ನೆಟ್ಟಗಾಯಿತು. ಬಾದಶಹರಿಗೆ ರಣಮಸ್ತಖಾನನ

ನಿಜವಾದ ಯೋಗ್ಯತೆಯು ಈಗಾದರೂ ಗೊತ್ತಾದದ್ದು ನೆಟ್ಟಗಾಯಿತು. ತಾವು ಹೇಳಿದ ಮಾತುಗಳನ್ನೆಲ್ಲ ನಾನು ಬಾದಶಹರ ಚರಣದೆಡೆಯಲ್ಲಿ ವಿಜ್ಞಾಪಿಸಿಕೊಳ್ಳುವೆನು. ತಾವೂ ಪತ್ರವನ್ನು ಬರೆದೆ ಬರೆಯುವಿರಿ. ಬೇಗನೆ ಪತ್ರವನ್ನು ಕೊಟ್ಟು, ನನ್ನನ್ನು ದಾಟಹಾಕಬೇಕು'' ಎಂದು ಹೇಳಿದನು. ವಕೀಲನ ಈ ಮಾತುಗಳನ್ನು ಕೇಳಿ ರಾಮರಾಜನಿಗೆ ಬಹಳ ಸಮಾಧಾನವಾಯಿತು. ಆತನು ಆ ವಕೀಲನ ಮಾನ-ಮರ್ಯಾದೆಗಳನ್ನು ಅತ್ಯುತ್ತಮ ರೀತಿಯಿಂದ ಮಾಡಿದನು. ಪತ್ರೋತ್ತರವನ್ನಾದರೂ ಬೇಗನೆ ಬರೆದು ವಕೀಲನ ಕೈಯಲ್ಲಿ ಕೊಟ್ಟನು. ವಕೀಲನು ರಾಮರಾಜನ ಅನುಜ್ಞೆಯನ್ನು ಪಡೆದು ವಿಜಾಪುರಕ್ಕೆ ಹೋದನು.

ವಕೀಲನು ವಿಜಾಪುರಕ್ಕೆ ಹೋಗಿ ರಾಮರಾಜನ ಆ ಪತ್ರವನ್ನು ಬಾದಶಹನ ಕೈಯಲ್ಲಿ ಕೊಟ್ಟನು. ಬಾದಶಹನು ಅದನ್ನು ಏಕಾಂತದಲ್ಲಿ ಓದಿದನು. ಆ ಪತ್ರದಲ್ಲಿ ರಾಮರಾಜನು— ''ಆ ತರುಣ ಸ್ತ್ರೀಯ ಲಜ್ಜಾಹರಣ ಮಾಡುವ ಉದ್ದೇಶವು ನಮ್ಮದಿದ್ದಿಲ್ಲ. ನಮ್ಮ ವಿರುದ್ಧವಾಗಿ ಒಳಸಂಚುಗಳು ನಡೆದು, ಗುಲಬರ್ಗೆಯ ಕಡೆಯಿಂದ ಅಹಮ್ಮದ ನಗರದ ಕಡೆಗೆ ಇವರು ಪತ್ರಗಳನ್ನು ಒಯ್ಯುತ್ತಾರೆಂಬ ಸಂಶಯವು ನಮಗೆ ಬಂದಿತು. ಹೀಗೆ ಒಳಸಂಚುಗಳು ನಡೆದಿರುವ ವೆಂದು ಅಲ್ಲಿದ್ದ ನಮ್ಮ ಗುಪ್ತಚಾರರು ನಮಗೆ ಹೇಳಿದ್ದರು; ಆದ್ದರಿಂದ ಹಾಗೆ ನಾವು ಬುರುಕಿ ತೆಗೆದು ಶೋಧಿಸಿ ನೋಡಬೇಕಾಯಿತು. ನಮ್ಮ ಸ್ಥಿತಿಯಲ್ಲಿ ತಾವು ಇದ್ದರೆ, ತಾವೂ ನಮ್ಮ ಹಾಗೆಯೇ ನಡೆಯಬೇಕಾಗುತ್ತಿತ್ತು. ನಮಗೂ ತಮಗೂ ಸ್ನೇಹವಿರುತ್ತದೆ. ಅದನ್ನು ಮುರಿಯುವ ಇಚ್ಛೆಯು ನಮಗೆ ಎಳ್ಳಷ್ಟಾದರೂ ಇರುವದಿಲ್ಲ. ಆದರೆ ಅಷ್ಟಕ್ಕಾಗಿ ಸುಮ್ಮನೆ ತಮ್ಮ ಹೆಸರಿನಿಂದ ನಮ್ಮನ್ನು ಬೆದರಿಸಿ ಅನ್ಯರು ಬೇಕಾದ ಹಾಗೆ ಒಳಸಂಚುಗಳನ್ನು ನಡೆಸಿದರೆ, ನಾವು ಬೆದರಿ ಅವನ್ನು ನಡಿಸಿಕೊಡ ಬೇಕೆಂದು ನೀವು ಸರ್ವಥಾ ಹೇಳುವದಿಲ್ಲೆಂಬ ನಂಬಿಗೆಯು ನಮಗೆ ಇರುತ್ತದೆ. ಹೀಗೆಂದು ನಾವು ನಿಮ್ಮ ತರುಣ ವಕೀಲರಿಗೆ ಬೇಕಾದಷ್ಟು ಹೇಳಿದೆವು. ಆದರೆ ಅವರು ನಮ್ಮ ಮಾತನ್ನು ಸರ್ವಥಾ ಕೇಳಲಿಲ್ಲ. ಕೂಡಿದ ದರ್ಬಾರದಲ್ಲಿ ಅದರೊಳಗೆ ನಮ್ಮ ದರ್ಬಾರದಲ್ಲಿ ನಮ್ಮ ಮುಂದೆ ನಮ್ಮ ತಿರಸ್ಕಾರವನ್ನು ಮಾಡಿದರು. ಆಗಲೇ ಅವರನ್ನು ಪ್ರತಿಬಂಧದಲ್ಲಿಡುತ್ತಿದ್ದೆವು; ಆದರೆ ತಮ್ಮ ಮೋರೆಯನ್ನು ನೋಡಿ ನಾವು ಹಾಗೆ ಮಾಡಲಿಲ್ಲ. ಆ ನಿಮ್ಮ ತರುಣ ವಕೀಲರು, ನಿಮ್ಮ ಹೆಸರು ಹೇಳಿ ನಮ್ಮನ್ನು ಬಹಳವಾಗಿ ಗದ್ದರಿಸಿದರು; ನಾವು ನಾಳೆ ವಿಜಾಪುರಕ್ಕೆ ಹೋಗಿ ಬಾದಶಹರಿಗೆ ಎಲ್ಲ ಸಂಗತಿಯನ್ನು ತಿಳಿಸಿದರೆ, ನಿಮ್ಮ ರಾಜ್ಯದ ಮೇಲೆ ದಂಡೆತ್ತಿ ಬರಲಿಕ್ಕೆ ವಿಲಂಬವಾಗದೆಂಬರ್ಥವನ್ನು ಸೂಚಿಸಿ ನಮ್ಮನ್ನು ಬೆದರಿಸುವ ಪ್ರಯತ್ನವನ್ನೂ ಒಂದೆರಡು ಸಾರೆ ಮಾಡಿದರು; ಆದರೆ ಅದರ ಕಡೆಗೆ ಲಕ್ಷ್ಯಗೊಡದೆ ನಮಗೆ ಯೋಗ್ಯವೆಂದು ತೋರಿದ ಮಾರ್ಗದಿಂದ ನಮ್ಮ ಸಂಶಯ ನಿವಾರಣವನ್ನು ನಾವು ಮಾಡಿಕೊಂಡು, ಕೂಡಲೇ ನಾವಾಗಿಯೇ ಆ ತರುಣೆಯನ್ನೂ, ಬೇರೆ ಜನರನ್ನೂ ಆ ನಿಮ್ಮ ವಕೀಲರಿಗೆ ಒಪ್ಪಿಸಿಬಿಟ್ಟೆವು. ಪುನಃ ನಮ್ಮ ರಾಜ್ಯದಲ್ಲಿ ಅವರ ಕೂದಲು ಕೊಂಕದಂತೆ ವ್ಯವಸ್ಥೆ ಮಾಡಿದೆವು. ಅವರ ಸಂರಕ್ಷಣಕ್ಕಾಗಿ ಜನರನ್ನು ಕೊಟ್ಟೆವು. ವಿಜಾಪುರದವರೆಗೆ ಸಹ ಅವರನ್ನು ಕಳಿಸುವ ವ್ಯವಸ್ಥೆ ಮಾಡುವೆವೆಂದು ನಿಮ್ಮ ವಕೀಲರ ಮುಂದೆ ಹೇಳಿದೆವು.ಇದಲ್ಲದೆ, ಮರುದಿನ ನಸುಕಿನಲ್ಲಿಯೇ ನಾವು ಸ್ವತಃ ನಿಮ್ಮ ವಕೀಲರ ಬಳಿಗೆ

ಹೋಗಿ, ಅವರಿಗೆ ನಾನಾ ಪ್ರಕಾರದ ಆಶ್ವಾಸನಗಳನ್ನು ಕೊಟ್ಟೆವು; ಅದಕ್ಕೆಅವರು ಒಪ್ಪಿಗೆಯನ್ನು ಇತ್ತರು; ಆದರೆ ತಿರುಗಿ ಮತ್ತೇನು ಅವರ ಮನಸ್ಸಿನಲ್ಲಿ ಬಂದಿತೋ ಏನೋ ಅವರು ಸ್ವತಃ ತಮ್ಮ ತನಕ ಓಡಿಬಂದಿದ್ದಾರೆ! ತಾವು ಬಹು ಯೋಗ್ಯ ವಿಚಾರ ಮಾಡಿದಿರಿ. ಇಲ್ಲದಿದ್ದರೆ ವ್ಯರ್ಥವಾಗಿ ಉಭಯ ಪಕ್ಷಗಳ ಅರ್ಥಹಾನಿ ಪ್ರಾಣಹಾನಿಗಳಾಗಬೇಕಾಗುತ್ತಿತ್ತು. ತಾವು ತಿರುಗಿ ವಕೀಲರನ್ನು ಕಳಿಸುವಾಗ ಯೋಗ್ಯ ಮನುಷ್ಯನನ್ನು ಕಳಿಸುವ ವ್ಯವಸ್ಥೆಯಾಗಬೇಕು. ಹೆಚ್ಚಿಗೆ ಏನೂ ಇಲ್ಲ'' ಇತ್ಯಾದಿ ಸಂಗತಿಗಳನ್ನು ಬರೆದು ನಂತರ ಕಡೆಗೆ ವಿನೋದದಿಂದ—''ಇದೆಲ್ಲ ಕಾಮದೇವರ ಆಟವಿರುತ್ತದೆ. ನೀವು ನಿಮ್ಮ ವಕೀಲರ ಲಗ್ನವನ್ನು ಆ ಕುಮಾರಿಯೊಡನೆ ಮಾಡಿರಿ; ಅಂದರೆ ನಮ್ಮ ಮೇಲಿನ ನಿಮ್ಮ ವಕೀಲರ ಸಿಟ್ಟು ಶಾಂತವಾಗುವದು. ಅವರಿಬ್ಬರ ವಿವಾಹವು ಅವರಿಬ್ಬರಿಗೂ ಬಹು ಇಷ್ಟವಾಗುವ ದೆಂಬದು,ಇಲ್ಲಿರುವಾಗ ಅವರ ವರ್ತನದಿಂದ ನಮಗೆ ನಂಬಿಗೆಯಾಗಿದೆ. ಆ ವಿವಾಹಕ್ಕೆ ನಮ್ಮನ್ನು ಕರಿಸಿದರೆ, ನಾವು ಬಹಳ ಸಂತೋಷದಿಂದ ಬಂದು ಅಕ್ಷತೆಯನ್ನು ಹಾಕುವೆವು. ನಿಮ್ಮ ವಕೀಲನ ಮೇಲೆ ನಮ್ಮ ಪ್ರೇಮವು ವಿಶೇಷವಾಗಿರುತ್ತದೆ. ಅವರಲ್ಲಿ ತಾರುಣ್ಯದ ರಂಗು ಬಹಳವಿರುತ್ತದೆಂಬದಿಷ್ಟೇ ಅವರಲ್ಲಿಯ ದೋಷವು; ಆದರೆ ಕಾಲಾಂತರದಿಂದ ಅದು ಹೊರಟುಹೋಗಬಹುದು. ಅವರ ಮೇಲೆ ತಾವು ಸಿಟ್ಟಾಗಿರುವಿರೆಂದು ಕೇಳಿದ್ದೇವೆ. ಆದರೆ ಹಾಗೆ ಮಾಡದೆ, ಈವರೆಗೆ ಮಾಡಿದ ಅವರ ಚಾಕರಿಗೆ ಲಕ್ಷಗೊಟ್ಟು, ಅವರಿಗೆ ಪತ್ನಿಯನ್ನು ದೊರಕಿಸಿ ಕೊಡತಕ್ಕದ್ದು. ಅದರಂತೆ ಅವರ ಪದವಿಯನ್ನಾದರೂ ಹೆಚ್ಚಿಸತಕ್ಕದ್ದು. ಅವರಿಗೆ ಸರದಾರ ಪದವಿಯನ್ನು ಕೊಡಬೇಕೆದು ನಾವು ಮನಃಪೂರ್ವಕವಾಗಿ ಸಿಫಾರಸು ಮಾಡುತ್ತೇವೆ. ನಮ್ಮ ಪದರಿನಲ್ಲಿ ಅವರು ಇರುತ್ತಿದ್ದರೆ, ನಾವು ಹಾಗೆ ನಿಶ್ಚಯವಾಗಿ ಮಾಡುತ್ತಿದ್ದೆವು.''

ಹೀಗೆ ಪತ್ರದ ಕಡೆಯಲ್ಲಿ ಬರೆದಿದ್ದ ವಿನೋದದ ಮಾತುಗಳನ್ನು ಓದಿದ ಕೂಡಲೆ ಬಾದಶಹನಿಗೆ ನಗೆ ಬಂದಿತು. ಆತನು ರಣಮಸ್ತಖಾನನನ್ನು ಕರೆಸಿಕೊಂಡು ಪತ್ರವನ್ನು ಓದಿ ತೋರಿಸಿದನು. ಆಮೇಲೆ ಮತ್ತೆ ಗುಪ್ತಾಲೋಚನೆಗಳಾದವು. ಬಳಿಕ ಬಾದಶಹನು ಮತ್ತೆ ದರ್ಬಾರು ನೆರಿಸಿ— ರಾಮರಾಜನ ಪತ್ರವು ಬಂದು ಅದರಿಂದ ಬಾದಶಹರ ಸಮಾಧಾನವಾಗಿರುತ್ತದೆ. ಆ ಸಂಬಂಧದಿಂದ ಇನ್ನು ಮಾಡತಕ್ಕದ್ದೇನೂ ಉಳಿಯಲಿಲ್ಲ. ಇದು ರಣಮಸ್ತಖಾನನ ಕಾರಣವಿಲ್ಲದ ಉತಾವಳಿಯ ಪರಿಣಾಮವಾದದ್ದರಿಂದ, ಆತನು ಇನ್ನು ಮೇಲೆ ತನ್ನ ಸ್ಥಿತಿಯನ್ನು ಸುಧಾರಿಸಿ ಕೊಳ್ಳತಕ್ಕದ್ದು. ಈಗ ನಾವು ಪುನಃ ಆತನನ್ನು ವಕೀಲನನ್ನಾಗಿ ವಿಜಯನಗರಕ್ಕೆ ಕಳಿಸುತ್ತೇವೆ; ಆದರೆ ಆತನೊಬ್ಬನ ಮೇಲೆ ನಮ್ಮ ವಿಶ್ವಾಸವಾಗದ್ದರಿಂದ, ಆತನ ಮೇಲೆ ಕಣ್ಣಿಡುವದಕ್ಕಾಗಿ ಖಾನಖಾನಾನ ಮಹಾಮೂದಖಾನ ಎಂಬವನನ್ನು ಕಳಿಸಿಕೊಡುವೆವು. ಖಾನಖಾನಾನನೇ ಮುಖ್ಯನು; ರಣಮಸ್ತಖಾನನು ಆತನ ಕೈಕೆಳಗಿನವನಾಗಿ ನಡೆಯತಕ್ಕದ್ದು, ಎಂದು ಜಾಹೀರು ಮಾಡಿದನು. ಇದರಿಂದ ದರ್ಬಾರದ ಜನರ, ವಿಶೇಷವಾಗಿ ತರುಣರ ಉತ್ಸಾಹವು ಕಡಿಮೆಯಾಯಿತು. ಹೀಗೆ ಮಾಡಿದ್ದರಿಂದ ಬರಿಯ ಬಿಜಾಪುರದ ಬಾದಶಹನಷ್ಟೆ ಅಲ್ಲಾಡಿಯ ಮುಸಲ್ಮಾನ ಬಾದಶಹರ ಮಹತ್ವವು ಕಡಿಮೆಯಾಗಿ, ಇದರಿಂದ ರಾಮರಾಜನು ಮತ್ತಿಷ್ಟು ಏರುವನೆಂದು ಆ ತರುಣರು ತಿಳಕೊಂಡರು. ರಣಮಸ್ತಖಾನನ ಗೌರವವನ್ನೇ ಕಡಿಮೆ ಮಾಡತಕ್ಕದ್ದಿದ್ದರೆ ಹೀಗೆ ದರ್ಬಾರದಲ್ಲಿ

ಮಾಡದೆ, ಬಾದಶಹನು ಗುಪ್ತರೀತಿಯಿಂದ ಮಾಡತಕ್ಕದ್ದಿತ್ತೆಂದು ಅವರು ತಮ್ಮೊಳಗೆ ಮಾತಾಡಿಕೊಳ್ಳಹತ್ತಿದರು. ಅದರಂತೆ, ಈಗ ಮೇಲೆಯೊಬ್ಬರನ್ನು ನಿಯಮಿಸಿ ಪುನಃ ರಣಮಸ್ತಖಾನನನ್ನು ವಿಜಾಪುರದ ವಕೀಲನನ್ನಾಗಿ ನಿಯಮಿಸಿ ಕಳಿಸಿದ್ದು ನೆಟ್ಟಗಾಗಲಿಲ್ಲೆಂದು ಆ ತರುಣರ ಮತವಾಯಿತು. ಕೆಲವರು ವೃದ್ಧರಿಗೂ, ವಿಚಾರವಂತರಿಗೂ ಮಾತ್ರ ಬಾದಶನ ಕೃತಿಯು ಸಮರ್ಪಕವಾಗಿ ತೋರಿತು.ಇಷ್ಟು ಕ್ಷುಲ್ಲಕ ಕಾರಣಕ್ಕಾಗಿ ಉಭಯ ಪಕ್ಷದ ಅರ್ಥಹಾನಿ- ಪ್ರಾಣಹಾನಿಗಳನ್ನು ಮಾಡಗೊಡದೆಯಿದ್ದದ್ದು ಬಹು ಯೋಗ್ಯವಾಯಿತೆಂದು ಅವರು ಭಾವಿಸಿದರು. ರಣಮಸ್ತಖಾನನ ಮೇಲೆ ಒಬ್ಬ ತಿಳುವಳಿಕೆಯ ವಕೀಲನನ್ನು ಕಳಿಸಿದ್ದೂ ಅವರಿಗೆ ಸಮರ್ಪಕವಾಗಿ ತೋರಿತು. ಸ್ವತಃ ರಣಮಸ್ತಖಾನನಿಗೆ ಬಾದಶಹನ ಈ ಕೃತಿಯು ಸ್ವಾಭಾವಿಕವಾಗಿಯೇ ಸೇರಲಿಲ್ಲ. ಆತನು ಬಾದಶಹರಿಗೆ— ನನ್ನ ಮಾನಹಾನಿಯನ್ನು ಇಷ್ಟುಮಾಡಬಾರದೆಂತಲೂ, ನನ್ನನ್ನು ತಿರುಗಿ ವಿಜಯನಗರಕ್ಕಾದರೂ ಕಳಿಸಬಾರದೆಂತಲೂ, ವಿಜಾಪುರದಲ್ಲಿ ತಮ್ಮ ಬಳಿಯಲ್ಲಿಯೇ ನನ್ನನ್ನು ಇಟ್ಟುಕೊಳ್ಳಿರೆಂತಲೂ ಬಹಳವಾಗಿ ಹೇಳಿಕೊಂಡನು. ಆದರೆ ಬಾದಶಹನು ಆತನ ಮಾತನ್ನು ಕೇಳಲಿಲ್ಲ, ನನ್ನ ಅಪ್ಪಣೆಯನ್ನು ನೀನು ಪಾಲಿಸಲೇಬೇಕೆಂದು ನಿಷ್ಠುರವಾಗಿ ಹೇಳಿದನು. ಅದರಿಂದ ರಣಮಸ್ತಖಾನನಿಗೆ ವಿಜಯನಗರಕ್ಕೆ ಹೋದಹೊರತು ಎರಡನೆಯ ಮಾರ್ಗವೇ ಉಳಿಯದಾಗಲು, ಅವನು ಸುಮ್ಮನೆ ಅದಕ್ಕೆ ಒಪ್ಪಿಕೊಂಡನು. ರಣಮಸ್ತಖಾನನ ಸಂಗಡ ಖಾನಖಾನಾನ ಮಹಮೂದಖಾನನೂ ಹೊರಟನು. ಅವರಿಬ್ಬರೂ ವಿಜಯನಗರಕ್ಕೆ ಬಂದರು. ರಣಮಸ್ತಖಾನನು ಬಹಳ ಲಜ್ಜೆಯಿಂದ ಕುಂಜವನ ವನ್ನು ಪ್ರವೇಶಿಸಿದನು. ಪಾಪ! ಏನು ಮಾಡ್ಯಾನು! ಬರುವಾಗ ವಿಜಾಪುರದಲ್ಲಿ ನೂರಜಹಾನಳನ್ನು ಕಾಣಲಿಕ್ಕೆ ಸಹ ಆತನಿಗೆ ಸಂಧಿಯು ದೊರೆಯಲಿಲ್ಲ, ಆದರೆ ಆಕೆಯು ತನ್ನ ಪ್ರತಿಜ್ಞೆಯಂತೆ ನಿಶ್ಚಯವಾಗಿ ನಡೆಯುವಳೆಂಬ ನಂಬಿಗೆಯು ಆತನಿಗಿತ್ತು, ವಿಜಾಪುರಕ್ಕೆ ಹೋದನಂತರ ಆಕೆಯ ಸಂಗಡ ಪ್ರತ್ಯಕ್ಷ ಮಾತಾಡುವದಂತು ಇರಲಿ, ಆಕೆಗೆ ಪತ್ರ ಬರೆದು ಕಳಿಸಲಿಕ್ಕೆ ಸಹ ರಣಮಸ್ತಖಾನನಿಗೆ ಅನುಕೂಲವಾಗಲಿಲ್ಲ, ಆತನು ತಿರುಗಿ ವಿಜಯನಗರಕ್ಕೆ ಬರಲಿಕ್ಕೆ ತಿಂಗಳ ಮೇಲೆ ಹಿಡಿಯಿತು. ಈ ಅವಧಿಯಲ್ಲಿ ಆತನು ತನ್ನ ತಾಯಿಗೆ ಪತ್ರ ಹಾಕಿದ್ದನು. ಆತನ ತಾಯಿಯ ಕಡೆಯಿಂದಲೂ ಆತನಿಗೆ ಪತ್ರಗಳು ಬಂದಿದ್ದವು. ರಣಮಸ್ತಖಾನನು ಕುಂಜವನಕ್ಕೆ ಬಂದ ಕೂಡಲೆ ಆತನು ಮೊದಲು ತನ್ನ ತಾಯಿಯ ದರ್ಶನ ಮಾಡಿಕೊಂಡು ಆಕೆಯ ಚರಣಕ್ಕೆರಗಿದನು. ಮಗನನ್ನು ನೋಡಿ ತಾಯಿಗೆ ಬಹಳ ಸಂತೋಷವಾದರೂ, ಬಾದಶಹನಿಂದ ಆತನು ನಿರಾಕರಿಸ ಲ್ಪಟ್ಟಿದ್ದಕ್ಕಾಗಿ ಆಕೆಯು ದುಃಖಿತಳಾಗಿದ್ದಳು. ರಣಮಸ್ತಖಾನನು ವಿಜಾಪುರದ ದರ್ಬಾರದಲ್ಲಿ ನಡೆದ ಸಂಗತಿಗಳನ್ನು ಒಂದುಳಿಯದಂತೆ ಯಥಾಸ್ಥಿತವಾಗಿ ತಾಯಿಯ ಮುಂದೆ ಹೇಳಿ, ತನ್ನ ಅಪಮಾನವು ಬಹಳವಾಯಿತೆಂದು ಆಕೆಯ ಮುಂದೆ ಆಡಿ ತೋರಿಸಿದನು. ಇನ್ನು ಮೇಲೆ ರಾಮರಾಜನು ನನ್ನನ್ನು ನಿರಾಕರಿಸುವನೆಂಬುದನ್ನು ಆತನು ತನ್ನ ತಾಯಿಯ ಮುಂದೆ ಹೇಳದೆಯಿರಲಿಲ್ಲ.

# ಒಳಸಂಚು

ಬಾದಶಹನು ಕಳಿಸಿದ ಇಬ್ಬರೂ ವಕೀಲರಿಗೆ ಇರಲಿಕ್ಕೆ ಕುಂಜವನವು ಸಾಲುವಂತಿದ್ದಿಲ್ಲ; ರಾಮರಾಜನು ಖಾನಖನಾನ ಮಹಮೂದಖಾನನಿಗೆ ಬೇರೆ ಸ್ಥಳವನ್ನು ಇರಲಿಕ್ಕೆ ಕೊಟ್ಟು, ರಣಮಸ್ತಖಾನನನ್ನು ಕುಂಜವನದಲ್ಲಿಯೇ ಇರಗೊಟ್ಟನು. ಇದೊಂದು ಪರಿಯಿಂದ ರಣಮಸ್ತಖಾನನಿಗೆ ಯಾರ ಉಪದ್ರವವೂ ಇಲ್ಲದೆ ಸ್ವತಂತ್ರದಿಂದ ಇರಲಿಕ್ಕೆ ಅನುಕೂಲ ವಾಯಿತು; ಆದರೆ ವಿಜಾಪುರದಿಂದ ಬಂದಂದಿನಿಂದ ಆತನ ವೃತ್ತಿಯಲ್ಲಿ ಬಹಳ ಹೆಚ್ಚು ಕಡಿಮೆಯಾಗಿತ್ತು ರಣಮಸ್ತಖಾನನು ವಿಜಾಪುರದಿಂದ ಬಂದಕೂಡಲೆ ಆತನನ್ನು ರಾಮರಾಜನು ಬುದ್ಧಿಪೂರ್ವಕವಾಗಿ ಒಮ್ಮೆ ತನ್ನ ಬಳಿಗೆ ಕರೆಸಿಕೊಂಡು, ಏಕಾಂತದಲ್ಲಿ ಆತನನ್ನು ಕುರಿತು– ಆದ ಮಾತಿನ ಸಲುವಾಗಿ ನಾನು ಎಷ್ಟು ಮಾತ್ರವೂ ಮನಸ್ಸಿನಲ್ಲಿ ಸಿಟ್ಟು ಹಿಡಿದಿರುವದಿಲ್ಲ. ನಿಮ್ಮ ಈಗಿನ ವಯಸ್ಸಿನಲ್ಲಿ ಇಂಥ ತಪ್ಪುಗಳು ಆಗತಕ್ಕವೇ; ಆದ್ದರಿಂದ ನಾನು ಎಲ್ಲ ಸಂಗತಿಗಳನ್ನು ಮರೆತು ಬಿಟ್ಟಂತೆ, ನೀವೂ ಮರೆತು ಬಿಡಿರಿ. ನಿಮ್ಮ ವಿಷಯವಾಗಿ ನನ್ನ ಅಭಿಪ್ರಾಯವೇನಿರುತ್ತದೆಂಬದನ್ನು ನಾನು ಬಾದಶಹರಿಗೆ ಬರೆದು ತಿಳಿಸಿದ್ದೆನು. ಅವರು ನನ್ನ ಪತ್ರದಂತೆ ನಿಮ್ಮ ಮದುವೆಯನ್ನು ಮಾಡಿಕೊಡತಕ್ಕದ್ದಿತ್ತು, ನಿಮ್ಮ ಅಧಿಕಾರವನ್ನಾದರೂ ಹೆಚ್ಚಿಸತಕ್ಕದ್ದಿತ್ತು; ಆದರೆ ಹಾಗೆ ಮಾಡದೆಯಿದ್ದದ್ದಕ್ಕಾಗಿ ನನಗೆ ಬಹಳ ಆಶ್ಚರ್ಯವಾಗಿದೆ. ನನ್ನ ಪದರಿನಲ್ಲಿ ನೀವು ಇರುತ್ತಿದ್ದರೆ ನಿಶ್ಚಯವಾಗಿ ನಿಮ್ಮ ಲಗ್ನವನ್ನು ಮಾಡಿಕೊಟ್ಟು, ನಿಮ್ಮ ಪದವಿಯನ್ನು ಹೆಚ್ಚಿಸುತ್ತಿದ್ದೆನು. ಯಾಕಂದರೆ, ರಾಜಕಾರಣದ ದೃಷ್ಟಿಯಿಂದ ನಿಮ್ಮ ನಡತೆಯು ಯೋಗ್ಯವಲ್ಲದಿದ್ದರೂ ರಾಜ್ಯದ ಗೌರವ ಕಾಯುವ ದೃಷ್ಟಿಯಿಂದ ಅದು ಯೋಗ್ಯವಾದದ್ದೇ ಇತ್ತೆಂಬದನ್ನು ನಾನು ಬಲ್ಲೆನು. ನಿಮಗೆ ಜಾಗರೂಕರಾಗಿರುವ ಬಗ್ಗೆ ಸೂಚನೆ ಕೊಡುವದಕ್ಕಿಂತ ಹೆಚ್ಚಿನ ಕೆಲಸವನ್ನೇನು ಬಾದಶಹರು ಮಾಡತಕ್ಕದ್ದಿದ್ದಿಲ್ಲ. ನಾನು ನಿಮ್ಮ ವಯಸ್ಸಿನಲ್ಲಿರುವಾಗ ನನ್ನ ಸ್ವಭಾವವು ನಿಮ್ಮಂತೆಯೇ ಇತ್ತು; ಆದ್ದರಿಂದ ನೀವು ಮನಸ್ಸಿನಲ್ಲಿ ಖಿನ್ನರಾಗಬೇಡಿರಿ. ನಿಮ್ಮಂಥ ತರುಣನೂ, ಉತ್ಸಾಹಶಾಲಿಯೂ ಆದವನು ನನ್ನ ಬಳಿಯಲ್ಲಿದ್ದರೆ, ಆತನನ್ನು ಸೈನ್ಯದ ಮೇಲೆ ನಿಯಮಿಸುತ್ತಿದ್ದೆನು. ನಿಮ್ಮ ಶೌರ್ಯವನ್ನೂ ನಿಮ್ಮ ತೇಜಸ್ಸನ್ನೂ ನಾನು ಬಲ್ಲೆನು. ಒಟ್ಟಿನಮೇಲೆ, ನಿಮ್ಮ ವೃತ್ತಿಯನ್ನೆಲ್ಲ ನಾನು ಮನಸ್ಸಿನಲ್ಲಿ ತಂದರೆ, ನಾನು ನಿಮ್ಮಷ್ಟು ವಯಸ್ಸಿನಲ್ಲಿದ್ದಾಗಿನ ನನ್ನ ವೃತ್ತಿಯ ಸ್ಮರಣವು ಅಚ್ಚಳಿಯದೆ ನನಗೆ ಆಗುತ್ತದೆ; ಕನ್ನಡಿಯಲ್ಲಿ ನೋಡಿದಹಾಗೆ ಅದು ನನಗೆ ಸ್ಪಷ್ಟವಾಗಿ ಕಾಣುವದು, ಎಂದು ಹೇಳಿದನು. ರಾಮರಾಜನ ಈ ಮಾತುಗಳನ್ನು ಕೇಳಿ ರಣಮಸ್ತಖಾನನಿಗೆ ವಿಷಾದವಾಯಿತೋ, ಸಿಟ್ಟುಬಂತೋ, ಸಂತೋಷವಾಯಿತೋ ಎಂಬದನ್ನು ಹೇಳಲಿಕ್ಕೆ ಬರುವ ಹಾಗಿದ್ದಿಲ್ಲ, ಯಾಕಂದರೆ ಅವನ ಮುಖಚರ್ಯದಲ್ಲಿ ಯಾವ ವಿಕಾರವೂ ತೋರುತ್ತಿದ್ದಿಲ್ಲ, ಬಾದಶಹನು ತನಗೆ ಬುದ್ಧಿಗಲಿಸಿದ್ದರಿಂದ ರಣಮಸ್ತಖಾನನಿಗೆ ಬಹಳ ವಿಷಾದವಾಗಿತ್ತು, ರಾಮರಾಜನಿಗೆ ಪ್ರತ್ಯುತ್ತರವಾಗಿ ಏನೂ ಮಾತಾಡದೆ, ಅವನಿಗೆ ಅನುಕೂಲವಾಗುವಂತೆ ಬರಿಯ ತಲೆಹಾಕಿ ರಣಮಸ್ತಖಾನನು ಕುಂಜವನಕ್ಕೆ ಹೊರಟುಹೋದನು.

ವಿಜಾಪುರದಿಂದ ಬಂದಂದಿನಿಂದ ರಣಮಸ್ತಖಾನನ ವೃತ್ತಿಯು ಬಹಳ ಉದಾಸೀನ ವಾಯಿತು. ಆತನು ಬಹುತರ ಯಾರ ಸಂಗಡವೂ ವಿಶೇಷ ಮಾತಾಡದಾದನು. ತನ್ನ ತಾಯಿಯ ಸಂಗಡ ಸಹ ಆತನು ಹೆಚ್ಚು ಮಾತಾಡುತ್ತಿದ್ದಿಲ್ಲ. ಆಕೆಯಾಗಿಯೇ ಆತನನ್ನು ಕರೆದುಕೊಂಡು ಹೋಗಿ ಏನಾದರೂ ಕೇಳಿದರೆ ನಾಲ್ಕು ಮಾತುಗಳನ್ನು ಆಡುತ್ತಿದ್ದನು. ಮೊದಲಿನಂತೆ ಆತನು ಆದದ್ದನ್ನೆಲ್ಲ ಒಂದುಳಿಯದಂತೆ ತಾಯಿಯ ಮುಂದೆ ಹೇಳಿ, ಏನು ಮಾಡಬೇಕಾದದ್ದನ್ನು ತಾಯಿಯನ್ನು ಕೇಳಿ ಮಾಡದಾದನು. ಆತನು ಈಗ ಏಕಾಂತದಲ್ಲಿ ಬಹಳ ಹೊತ್ತುಗಳೆಯ ಹತ್ತಿದನು. ತಾಸು ತಾಸು, ಮೂರು ಮೂರು ತಾಸು ಕುಂಜವನದಲ್ಲಿ ಆತನು ಕುಳಿತು ಕೊಂಡು, ಇಲ್ಲವೆ ಪುಷ್ಕರಣಿಯ ದಂಡೆಗುಂಟ ತಿರುಗಾಡಿ ಕಾಲಹರಣ ಮಾಡುತ್ತಿದ್ದನು. ಆದ್ದರಿಂದ ಬಾದಶಹನಿಂದಾದ ಅಪಮಾನವು ಈತನ ಮನಸ್ಸಿಗೆ ಬಹಳ ಹತ್ತಿತ್ತೆಂದು ಬಹುತರ ಎಲ್ಲರೂ ತರ್ಕಿಸಹತ್ತಿದರು. ಲೈಲಿಯೂ ಆತನ ತಾಯಿಯೂ ಮಾತ್ರ ಹೀಗಾಗಲಿಕ್ಕೆ ಬೇರೆ ಕಾರಣವನ್ನು ಕಲ್ಪಿಸಿದರು. ನೂರಜಹಾನಳ ಮೇಲೆ ಈತನ ಪ್ರೇಮವು ವಿಶೇಷವಾಗಿದ್ದು ಆಕೆಯು ಪ್ರಾಪ್ತವಾಗುವದು ಅಶಕ್ಯವಾಗಿ ತೋರುವದರಿಂದ ಈತನ ಸ್ಥಿತಿಯು ಹೀಗೆ ಆಗಿರುವ ದೆಂತಲೂ ಅದರಲ್ಲಿ ಬಾದಶಹನಿಂದಾದ ಅಪಮಾನವೊಂದು ಕೂಡಿತೆಂತಲೂ ಅವರು ತಿಳಿದರು. ನಿಜವಾದ ಕಾರಣವು ಇಂಥದೇ ಎಂದು ಯಾರಿಗೂ ಗೊತ್ತಾಗುವ ಸಂಭವವಿದ್ದಿಲ್ಲ. ಲೈಲಿಯು ರಣಮಸ್ತ ಖಾನನ ಮನಸ್ಸಿನಲ್ಲಿದ್ದದ್ದನ್ನು ತಿಳಿಕೊಳ್ಳುವದಕ್ಕಾಗಿ ಪ್ರಯತ್ನ ಮಾಡುತ್ತಲಿದ್ದಳು. ಒಮ್ಮೆ ಆಕೆಯು ರಣಮಸ್ತಖಾನನನ್ನು ಕುರಿತು ಸಲಿಗೆಯಿಂದ—''ನೀವು ಇಷ್ಟು ಉದಾಸೀನರಾಗಿರುವ ಕಾರಣವೇನು? ನೂರಜಹಾನಳ ಚಿಂತೆಯು ನಿಮ್ಮನ್ನು ಬಾಧಿಸುವದೋ? ನಾನು ಒಮ್ಮೆ ವಿಜಾಪುರಕ್ಕೆ ಹೋಗಿ ನೂರಜಹಾನಳನ್ನು ಕಂಡು ಆಕೆಯ ಮನಸ್ಸಿನಲ್ಲಿದ್ದದ್ದನ್ನು ತಿಳಿಕೊಂಡು ಬರಲೇನು? ಅಥವಾ ನೂರಜಹಾನಳದಾದರೂ ಏನು ಪ್ರತಿಷ್ಠೆಯು? ಆಕೆಯಿಲ್ಲದಿದ್ದರೆ ಆಕೆಯಂಥ ನೂರಾರು ಮಂದಿ ತರುಣಿಯರು ನಿಮ್ಮ ಕಾಲಮೇಲೆ ಉರಳಾಡುತ್ತ ಬಂದಾರು'' ಎಂದು ನುಡಿಯಲು, ರಣಮಸ್ತಖಾನನು ಸುಮ್ಮನೆ ಮುಗುಳುನಗೆ ನಕ್ಕನು ಮಾತ್ರ; ಬಾಯಿಂದ ಪಿಟ್ಟೆಂದು ಮಾತಾಡಲಿಲ್ಲ! ಆಗ ಲೈಲಿಯು ನಿರಾಶೆಪಟ್ಟು, ಮಾಸಾಹೇಬರ ಬಳಿಗೆ ಹೋಗಿ ನಿಮ್ಮ ಮಗನ ಮನಸ್ಸಿನೊಳಗಿದ್ದದ್ದನ್ನು ತಿಳಿಕೊಳ್ಳುವದು ಸುಲಭವಲ್ಲೆಂದು ಹೇಳಿದಳು. ಅದನ್ನು ಕೇಳಿ ಮಾಸಾಹೇಬರಿಗೆ ಬಹಳ ಅಸಮಾಧಾನವಾಯಿತು. ತಾವು ಸ್ವತಃ ಒಮ್ಮೆ ಮಗನನ್ನು ಕೇಳಿ ನೋಡಬೇಕೆಂದು ಅವರು ಮಾಡಿದರು. ಆದರೆ ಹಾಗೆ ಮಾಡಲಿಕ್ಕೆ ಅವರಿಗೆ ಒಮ್ಮೆಲೆ ಧೈರ್ಯವಾಗಲೊಲ್ಲದು. ಮಗನು ಮೊದಲಿನಂತೆ ಈಗ ಸರಳ ಮನಸ್ಸಿನಿಂದ ಮನಸ್ಸು ಬಿಚ್ಚಿ ತಮ್ಮ ಸಂಗಡ ಮಾತಾಡುವದಿಲ್ಲವಾದ್ದರಿಂದ, ಈಗ ತಾವು ಕೇಳಿದರೆ ಆತನು ಏನು ಉತ್ತರ ಕೊಡುವನೋ ಎಂದು ಅವರು ಶಂಕಿಸಹತ್ತಿದರು; ಆದರೂ ತಾಯಿಯ ಕರುಳು! ಕೇಳದೆ ಸುಮ್ಮನೆ ಹ್ಯಾಗೆ ಬಿಡಬೇಕು? ಮಾಸಾಹೇಬರು ಹಾಗೆಯೇ ನಾಲ್ಕೆಂಟು ದಿನ ಹೋಗಬಿಟ್ಟು, ಆಮೇಲೆ ಒಂದು ದಿನ ಮಗನನ್ನು ಕರಕೊಂಡು ಹೋಗಿ– ''ಬಾಳಾ, ರಣಮಸ್ತ ನೀನು ಇಷ್ಟು ಉದಾಸೀನನು ಯಾಕಾಗಿರುವೆ? ನಿನ್ನ ಮೋರೆಯು ಮೇಲಿನ ಕಳೆಯೇ ಹೋಯಿತಲ್ಲ! ನಿನ್ನ

ಮನಸ್ಸಿನಲ್ಲಿದ್ದದ್ದನ್ನು ನನ್ನ ಮುಂದೆ ಹೇಳುವದಿಲ್ಲವೇ?'' ಎಂದು ಅತ್ಯಂತ ಕಾರುಣ್ಯದಿಂದ ಕೇಳಿದರೂ ರಣಮಸ್ತಖಾನನು ಉತ್ತರಕೊಡದೆ ಬಹಳಹೊತ್ತು ಸುಮ್ಮನೆ ಕುಳಿತುಕೊಂಡನು. ಅದನ್ನು ನೋಡಿ ಮಾಸಾಹೇಬರ ನೇತ್ರಗಳು ಅಶ್ರುಪೂರ್ಣವಾಗಲು, ಅವರು ಗದ್ಗದ ಸ್ವರದಿಂದ ಮತ್ತೆ ಮಗನನ್ನು ಕುರಿತು– ''ಮಾತಾಡುವದಿಲ್ಲೇನಪ್ಪಾ? ರಣಮಸ್ತ ಮಾತಾಡುವದಿಲ್ಲವೆ? ನೀನು ಹೀಗೆ ಉದಾಸೀನ ಮಾಡಿದ ಬಳಿಕ ನನ್ನನ್ನು ಕೇಳುವವರಾರು? ನಿನ್ನ ಸ್ಥಿತಿಯನ್ನು ನೋಡಿ ನನಗೆ ಅನ್ನವು ಸವಿಹತ್ತುವದಿಲ್ಲ, ಅಲ್ಲಾನ ಧ್ಯಾನದಲ್ಲಿಯೂ ಮನಸ್ಸು ನಿಲ್ಲದಾಗಿದೆ.'' ಅನ್ನಲು, ರಣಮಸ್ತಖಾನನು ತಟ್ಟನೆ ತಾಯಿಯನ್ನು ಕುರಿತು—''ಮಾಸಾಹೇಬ, ನಿಜವಾಗಿಯೆಂದರೆ, ನನ್ನ ಮನಸ್ಸಿನ ಅಸಮಾಧಾನಕ್ಕೆ ಬೇರೆ ಕಾರಣವೇನೂ ಇಲ್ಲವೇ ಇಲ್ಲ. ಅಂದಬಳಿಕ ನಾನೇನು ಕಾರಣವನ್ನು ಹೇಳಲಿ? ನನ್ನ ಮನಸ್ಸಿನ ಅಸಮಾಧಾನದ ಕಾರಣವನ್ನು ನಿಮ್ಮ ಮುಂದೆ ಈ ಮೊದಲೇ ಹೇಳಿಬಿಟ್ಟಿದ್ದೇನೆ. ಬಾದಶಹರು ನನ್ನನ್ನು ಅವಮಾನಗೊಳಿಸಿದ್ದು ನನಗೆ ದುಸ್ಸಹವಾಗಿದೆ.ಇದರ ಹೊರತು ಬೇರೆ ಕಾರಣವೇನೂ ಇರುವದಿಲ್ಲ. ನಾನು ಆವೇಶದಿಂದ ಮುಂದಕ್ಕೆ ಸಾಗುತ್ತಿರುವಾಗ, ಬಾದಶಹರು ನನ್ನ ಕಾಲುಗಳನ್ನೇ ಮುರಿದಂತಾಯಿತು. ನನ್ನ ಮಹತ್ವಾಕಾಂಕ್ಷೆಗಳೆಲ್ಲ ಲಯವಾದವು. ಇನ್ನು ವಿಜಾಪುರದ ರಾಜ್ಯದಲ್ಲಿ ಕೆಲಸಮಾಡದೆ ಬೇರೆಯೊಂದು ರಾಜ್ಯದಲ್ಲಿ ಕೆಲಸಮಾಡಿ ದೈವವನ್ನು ಪರೀಕ್ಷಿಸಬೇಕೆಂದು ಮಾಡಿದ್ದೇನೆ. ನನಗೆ ಏನೂ ತಿಳಿಯದಾಗಿದೆ. ಒಮ್ಮೊಮ್ಮೆಯಂತು ವಿಲಕ್ಷಣ ಕಲ್ಪನೆಗಳು ಮನಸ್ಸಿನಲ್ಲಿ ಬರುತ್ತವೆ. ನನ್ನ ಮನಸ್ಸಿನಲ್ಲಿದ್ದದ್ದನ್ನು ಈಗ ಸ್ಪಷ್ಟವಾಗಿ ಹೇಳಿದ್ದೇನೆ. ಇನ್ನು ಮೇಲೆ ನನ್ನನ್ನು ಏನೂ ಕೇಳಬೇಡಿರಿ. ಅದರಿಂದ ನನ್ನ ಜೀವಕ್ಕೆ ತಾಪವಾಗುತ್ತದೆ'' ಎಂದು ನುಡಿದವನೇ ಅಲ್ಲಿಂದ ತಟ್ಟನೆ ಹೊರಟುಹೋದನು. ತನ್ನ ತಾಯಿಯು ತಿರುಗಿ ಏನು ಮಾತಾಡುವಳೆಂಬದರ ಹಾದಿಯನ್ನು ಸಹ ಆತನು ನೋಡಲಿಲ್ಲ.

ಮಗನು ಹೀಗೆ ತಟ್ಟನೆ ಹೊರಟುಹೋದದ್ದನ್ನು ನೋಡಿ ಮಾಸಾಹೇಬರಿಗೆ ಬಹಳ ಆಶ್ಚರ್ಯವಾಯಿತು. ಆದರೂ ಆವೇಶದ ಭರದಲ್ಲಿ ಹೋಗಿರುವನು; ಇನ್ನೊಮ್ಮೆ ಕರಿಸಿ ಸಮಾಧಾನದಿಂದ ನಾಲ್ಕು ಒಳ್ಳೆಯ ಮಾತುಗಳನ್ನು ಹೇಳಿದರೆ ಕೇಳುವೆನೆಂದು ಮಾಸಾಹೇಬರು ಸಮಾಧಾನ ಮಾಡಿಕೊಂಡರು. ಅನಕಾ ಕೆಲವು ದಿವಸ ಆತನನ್ನು ಮಾತಾಡಿಸದೆ ಹಾಗೇ ಬಿಡಬೇಕೆಂದು ಅವರು ಮಗನ ಉಸಾಬರಿಯನ್ನು ಬಿಟ್ಟುಬಿಟ್ಟರು; ಆದರೆ ಅದರಿಂದ ಹಿತವಾಗಲಿಲ್ಲ, ರಣಮಸ್ತಖಾನನ ಸ್ಥಿತಿಯು ದಿನದಿನಕ್ಕೆ ಕೆಡುತ್ತ ಹೋಯಿತು. ಆತನು ರಾತ್ರಿಯಲ್ಲಿ ಸಹ ಮನಬಂದಂತೆ ತಿರುಗಹತ್ತಿದನು. ಅದನ್ನು ನೋಡಿ ಮಾತ್ರ ಮಾಸಾಹೇಬರು ಬಹಳ ಚಿಂತೆಗೊಳಗಾದರು. ಇನ್ನು ಮೇಲೆ ಮಗನನ್ನು ಹಾದಿಗೆ ಹಚ್ಚದಿದ್ದರೆ ಪರಿಣಾಮವಾಗದೆಂದು ಅವರು ತಿಳಕೊಂಡರು. ಲೈಲಿಯೊಡನೆ ಅವರ ಆಲೋಚನೆಗಳು ನಡೆದವು. ಬರಿಯ ಬಾದಶಹನ ಅಪಮಾನದಿಂದ ಹೀಗಾಗಿರದೆ, ನೂರಜಹಾನಳ ಹಳವಂಡವೇ ಮಗನನ್ನು ಈ ಮನೆಗೆ ತಂದುಬಿಟ್ಟಿತೆಂದು ಮಾಸಾಹೇಬರು ನಿಶ್ಚಯಿಸಿದರು. ನೂರಜಹಾನಳ ಸಂಬಂಧದಿಂದ ಏನಾದರೂ ಹೆಚ್ಚು ಕಡಿಮೆಯಾದ್ದರಿಂದ ಮಗನ ಸ್ಥಿತಿಯು ಹೀಗಾಗಿದೆ, ಆದ್ದರಿಂದ ನಾವಿಬ್ಬರೂ

ವಿಜಾಪುರಕ್ಕೆ ಹೋಗಿ ನಿಜವಾದ ಸಂಗತಿಗಳನ್ನು ತಿಳಕೊಂಡು ಬರೋಣವೆಂದು ಮಾಸಾಹೇಬರು ಲೈಲಿಯೊಡನೆ ಆಲೋಚಿಸಿದರು. ಅವರ ಆ ಆಲೋಚನೆಯು ನಿಶ್ಚಿತವಾಯಿತು. ಆ ನಿರ್ಧಾರದ ಸ್ತ್ರೀಯು ಕೂಡಲೆ ಮಗನನ್ನು ಕರೆಸಿ, ''ನಾನು ಲೈಲಿಯನ್ನು ಕರಕೊಂಡು ವಿಜಾಪುರಕ್ಕೆ ಹೋಗಿ ಎಲ್ಲ ಸಂಗತಿಯನ್ನು ತಿಳಕೊಂಡು ಬರುತ್ತೇನೆ'' ಎಂದು ಹೇಳಿದಳು. ತನ್ನ ತಾಯಿಯ ಕೈಯಿಂದ ಇನ್ನು ಯಾವ ಕೆಲಸವೂ ಆದೀತೆಂದು ರಣಮಸ್ತಖಾನನಿಗೆ ತೋರಲಿಲ್ಲ; ಆದ್ದರಿಂದ ಆತನು ಮಾಸಾಹೇಬರನ್ನು ಕುರಿತು—''ನೀವು ಹೋಗಿ ಮಾಡುವದೇನು? ಬಾದಶಹರು ತಮ್ಮ ಅಪ್ಪಣೆಯನ್ನು ಎಂದೂ ತಿರುಗಿಸುವವರಲ್ಲ. ಒಂದು ಪಕ್ಷದಲ್ಲಿ ತಮ್ಮ ಅಪ್ಪಣೆಯನ್ನು ತಿರುಗಿಸಿದರೂ, ಅದರಿಂದ ವಿಶೇಷ ಪ್ರಯೋಜನವಾಗದು. ಇದಲ್ಲದೆ ಇಲ್ಲಿ ಇರಲಿಕ್ಕೆ ಈಗ ನನ್ನ ಮನಸ್ಸೂ ಒಡಂಬಡುವದಿಲ್ಲ,'' ಅನ್ನಲು, ಮಾಸಾಹೇಬರು— ಏನೇ ಆಗಲಿ, ನಾವು ವಿಜಾಪುರಕ್ಕೆ ಹೋಗಿ ಬರುವತನಕ ನೀನು ಸ್ವಸ್ಥವಾಗಿರು. ಕೆಲಸವಾಗುವದಿಲ್ಲೆಂದು ಕಂಡುಬಂದರೆ, ಏನು ಮಾಡಬೇಕೆಂಬುದನ್ನು ನಾವಿಬ್ಬರೂ ಕೂಡಿ ಆಲೋಚಿಸೋಣ, ಎಂದು ಬಹಳ ಪ್ರಕಾರವಾಗಿ ಹೇಳಿ, ವಿಜಾಪುರಕ್ಕೆ ಹೋಗಲಿಕ್ಕೆ ಮಗನ ಅನುಮತಿಯನ್ನು ಪಡೆದರು. ರಣಮಸ್ತಖಾನನು ಸಂಗಡ ತಕ್ಕಷ್ಟು ಜನರನ್ನು ಕೊಡಲು, ಈ ನಿಶ್ಚಯದ ಸ್ವಭಾವದ ಹೆಣ್ಣುಮಗಳು ಲೈಲಿಯೊಡನೆ ವಿಜಾಪುರಕ್ಕೆ ಹೋದಳು.

ಮಾಸಾಹೇಬರು ವಿಜಾಪುರಕ್ಕೆ ಹೋದಬಳಿಕ ಇತ್ತ ರಣಮಸ್ತಖಾನನನ್ನು ಕೇಳುವವರೇ ಇಲ್ಲದಾಯಿತು. ಅವರು ಹೋದ ಮೂರು-ನಾಲ್ಕು ದಿನಗಳ ಮೇಲೆ ರಾಮರಾಜನು, ಹಿಂದಕ್ಕೆ ಒಮ್ಮೆ ಬಂದಂತೆ ನಸುಕಿನಲ್ಲಿ ಕುಂಜವನಕ್ಕೆ ಬಂದನು. ಆತನು ತಾನು ಬಂದ ಸುದ್ದಿಯನ್ನು ರಣಮಸ್ತಖಾನನಿಗೆ ಹೇಳಿಕಳಿಸಲು ಖಾನನು ಎದುರಿಗೆ ಬಂದು ರಾಮರಾಜನನ್ನು ವಿನಯದಿಂದ ಕರಕೊಂಡು ಹೋದನು. ಆಗ ರಾಮರಾಜನು ರಣಮಸ್ತಖಾನನಿಗೆ- ''ಖಾನಸಾಹೇಬ, ಪುನಃ ಕುಂಜವನವನ್ನು ನೋಡುವಹಾಗಾದ್ದರಿಂದ ಮತ್ತೆ ಬಂದನು; ಅದಕ್ಕೆ ನಿಮ್ಮ ಒಪ್ಪಿಗೆ ಇರುವ ದಷ್ಟೆ?'' ಎಂದು ಕೇಳಲು, ರಣಮಸ್ತಖಾನನು ಅತ್ಯಂತ ವಿಯನದಿಂದ— ಕುಂಜವನವು ತಮ್ಮದು, ನನ್ನ ಪರವಾನಿಗೆಯೇತಕ್ಕೆ? ಅವಶ್ಯವಾಗಿ ಒಳಗೆ ಹೋಗಬಹುದು, ಎಂದು ಹೇಳಿದನು. ಅದಕ್ಕೆ ರಾಮರಾಜನು-ನಡೆಯಿರಿ, ನಾವಿಬ್ಬರೂ ಪುಷ್ಕರಣಿಯ ಕಡೆಗೆ ಹೋಗೋಣ. ನಿಮ್ಮೊಡನೆ ನಾನು ಕೆಲವು ಮಾತುಗಳನ್ನು ಆಡಬೇಕಾಗಿದೆ. ಏಕಾಂತಕ್ಕೆ ತಕ್ಕ ಸ್ಥಳವಿದ್ದರಿಂದ ಅತ್ತ ನೀವು ಬಂದರೆ ಎರಡೂ ಕೆಲಸಗಳಾಗುವವು, ಅನ್ನಲು ರಣಮಸ್ತಖಾನನು— ''ನನ್ನೊಡನೆ ಯಾವ ಮಾತುಗಳನ್ನಾಡುವನೋ'' ಎಂದು ಆಲೋಚಿಸುತ್ತ ರಾಮರಾಜನೊಡನೆ ಹೊರಟನು. ಆತನನ್ನು ಕಟ್ಟಿಕೊಂಡು ರಾಮರಾಜನು ಸಂದಿಗೊಂದಿಗಳು ಕೂಡ ಉಳಿಯದಂತೆ ಕುಂಜ ವನವನ್ನೆಲ್ಲ ತಿರುಗಿದನು. ಇವರಿಬ್ಬರು ಹೀಗೆ ತಿರುಗುವದನ್ನು ನೋಡಿ ರಣಮಸ್ತಖಾನನ ಜನರು ಆಶ್ಚರ್ಯ ಪಟ್ಟು, ತಮ್ಮೊಳಗೆ ಗುಜುಗುಟ್ಟಹತ್ತಿದರು. ಕುಂಜವನದಲ್ಲಿ ಓಡಾಡುತ್ತಿರುವಾಗ ರಾಮರಾಜನು ರಣಮಸ್ತಖಾನನಿಗೆ— ನಾನು ನಿಮಗೆ ಮತ್ತೆ ಮತ್ತೆ ಹೇಳುವ ಕಾರಣವಿಲ್ಲ, ಹಿಂದಕ್ಕೆ ಆದದ್ದನ್ನು ನೀವು ಮನಸ್ಸಿನಲ್ಲಿ ಹಿಡಿಯಬೇಡಿರಿ. ನಿಮ್ಮನ್ನು ನೋಡಿದಾಗಿನಿಂದ ನಿಮ್ಮ

ವಿಷಯವಾಗಿ ನನ್ನಲ್ಲಿ ಆದರವು ಉತ್ಪನ್ನವಾಗಿದೆ. ನಾನು ಬಾದಶಹರ ಕಡೆಗೆ ಕಳಿಸಿದ ಪತ್ರದಲ್ಲಿ ನಿಮಗೆ ಅನುಕೂಲವಾಗಿಯೇ ಬರೆದಿದ್ದೆನು. ಅವರು ಅದನ್ನು ನಿಮಗೆ ಹೇಳಿದರೋ ಇಲ್ಲವೋ? ಅವರೇ ನಿಮ್ಮ ಲಗ್ನ ಮಾಡದೆ ಕಳಿಸಿದ್ದಕ್ಕಾಗಿಯೂ, ನಿಮ್ಮ ಮೇಲೆ ಒಬ್ಬ ವಕೀಲನನ್ನು ನಿಯಮಿಸಿ ಕಳಿಸಿದ್ದಕ್ಕಾಗಿಯೂ, ನನಗೆ ಬಹಳ ವಿಷಾದವಾಗಿದೆ. ನಿಮ್ಮಂಥ ತರುಣ–ಶೂರರು ವಕೀಲಿಯ ಕೆಲಸದಲ್ಲಿ ಕೊಳೆಯುವದು ನನಗೆ ನೆಟ್ಟಗೆ ಕಾಣುವದಿಲ್ಲ. ನೀವು ಸೈನ್ಯದಲ್ಲಿ ಅಧಿಕಾರವನ್ನು ಪಡೆದು ಪರಾಕ್ರಮವನ್ನು ತೋರಿಸುತ್ತ ಸೇನಾಪತಿಯ ಪದವಿಯನ್ನು ಹೊಂದಲಿಕ್ಕೆ ತಕ್ಕವರಾಗಿರುತ್ತೀರಿ. ನಮ್ಮ ದಂಡಿನಲ್ಲಿ ಪಠಾಣರೂ, ಬೇರೆ ಮುಸಲ್ಮಾನರೂ ಬಹು ಜನರು ಇದ್ದಾರೆ. ವಿಜಾಪುರದ ದಂಡಿನಲ್ಲಿಯಾದರೂ ಹಿಂದೂ ದಂಡಾಳುಗಳು ಬಹು ಜನರು ಇರುವರು. ಅವರಲ್ಲಿ ಉತ್ತರ ಹಿಂದುಸ್ಥಾನದ ರಜಪೂತರು ಸಹ ಇರುವರು. ಅವರು ತೀರ ಸ್ವಲ್ಪ ಜನರು ಇರಬಹುದು; ಆದರೆ ಇರುವದು ನಿಜ. ನಮ್ಮಲ್ಲಿರುವ ಮುಸಲ್ಮಾನ ಸೈನ್ಯದ ಮೇಲೆ ನಿಮ್ಮಂಥವರು ಅಧಿಕಾರಿಗಳಿದ್ದರೆ, ಬಹಳ ಒಪ್ಪುವದು, ಎಂದು ನುಡಿಯುತ್ತಿರಲು, ರಣಮಸ್ತಖಾನನು ರಾಮರಾಜನನ್ನು ಕೆಕ್ಕರಿಸಿ ನೋಡಹತ್ತಿದನು. ಆಗ ರಾಮರಾಜನು ತನ್ನ ಮಾತನ್ನು ಅಷ್ಟಕ್ಕೆ ಬಿಟ್ಟು ರಣಮಸ್ತಖಾನನಿಗೆ— ನಿಮಗೆ ನನ್ನ ಮಾತುಗಳು ಸೇರದಿದ್ದರೆ ನಾನು ಆಡುವದಿಲ್ಲ. ಸುಮ್ಮನೆ ಮಾತಿಗೆ ಮಾತು ಬಂದು ಆಡಿದೆನು. ಹೇಳಿರಿ, ನನ್ನ ಮಾತಿನಲ್ಲಿ ಯಾವ ಮಾತು ನಿಮಗೆ ಸೇರಲಿಲ್ಲ? ಎಂದು ಕೇಳಲು, ರಣಮಸ್ತಖಾನನು— ನಿಮ್ಮ ಮಾತು ಸೇರದಿರಲಿಕ್ಕೆ ನೀವು ಈಗ ಅಯೋಗ್ಯ ಮಾತು ಆಡಿದ್ದೇನು? ನೀವು ಒಂದು ಪಕ್ಷದಲ್ಲಿ ಅಂಥ ಮಾತುಗಳನ್ನು ಆಡಿದರೂ ಯೋಗ್ಯವಾದವನ್ನಷ್ಟು ಮಾತ್ರ ನಾನು ಗ್ರಹಿಸುವೆನು. ಆಡಿರಿ, ನಿಮ್ಮ ಮಾತುಗಳನ್ನೆಲ್ಲ ನಾನು ಕೇಳುತ್ತೇನೆ, ಸಂಕೋಚ ವಿಲ್ಲದೆ ಮಾತಾಡಿರಿ, ಎನ್ನಲು, ರಾಮರಾಜನು— ಸುಮ್ಮನೆ ನಾನು ಉದ್ದಕ್ಕೆ ಮಾತಾಡುತ್ತ ಹೋಗುವದರಿಂದ ಪ್ರಯೋಜನವೇನು? ಹತ್ತು ಮಾತಿಗೆ ಒಂದಾದರೂ ನೀವು ಉತ್ತರಕೊಟ್ಟರೆ, ಮಾತಾಡಲಿಕ್ಕೆ ನೆಟ್ಟಗೆ. ನಿಮಗೆ ಮಾತಾಡಲಿಕ್ಕೇನು ಬಂದದ್ದು? ಆಡಿರಿ. ನಿಮಗೆ ತಿಳಿದದ್ದನ್ನು ನೀವು ಸ್ಪಷ್ಟವಾಗಿ ಆಡಿರಿ. ಸುಮ್ಮನೆ ವಿನೋದಕ್ಕಾಗಿ ಆಡುವ ಮಾತುಗಳೆಂತಲೇ ನಾವು ತಿಳಿಯೋಣ ಅನ್ನಲು ರಣಮಸ್ತಖಾನನು ರಾಮರಾಜನನ್ನು ನೋಡುತ್ತ ಸುಮ್ಮನೆ ನಿಂತುಕೊಂಡನು.

ರಾಮರಾಜ— ಖಾನಸಾಹೇಬ, ಹೀಗೆ ಆಶ್ಚರ್ಯಪಡುವದೇಕೆ? ನೀವು ನಮ್ಮ ಸೈನ್ಯದಲ್ಲಿ ಚಾಕರಿಗೆ ನಿಂತುಕೊಳ್ಳಿರಿ; ನಾನು ನಿಮಗೆ ದೊಡ್ಡ ಅಧಿಕಾರ ಕೊಡುತ್ತೇನೆ. ನಮ್ಮ ಹಿಂದೂ ಸರದಾರರ ಪಂಚಾಯಿತ್ತಿಯಲ್ಲಿ ನಿಮ್ಮನ್ನು ಕೂಡಿಸುತ್ತೇನೆ. ನಿಮ್ಮನಂತು ನನ್ನ ಅಂಗರಕ್ಷಕರನ್ನಾಗಿ ನಿಯಮಿಸುವೆನು. ಯಾಕೆ? ಏನೂ ಮಾತಾಡಲೊಲ್ಲಿರಿ? ನಾನೇನು ಅಯೋಗ್ಯ ಮಾತುಗಳನ್ನಾಡಿರುವದಿಲ್ಲ. ನಿಮಗೆ ಅಯೋಗ್ಯವಾಗಿ ಕಂಡರೆ ಹೇಳಿರಿ.

ರಣಸಮಸ್ತಖಾನ— (ಹುಬ್ಬುಗಂಟಿಕ್ಕಿ) ನಿಮ್ಮ ಯಾವತ್ತು ಮಾತುಗಳನ್ನು ಕೇಳಿ ನನಗೆ ಬಹಳ ಆಶ್ಚರ್ಯವಾಗಿದೆ ! ನಮ್ಮ ಒಡೆಯನ ಮೇಲೆ ತಿರುಗಿ ಬೀಳಲಿಕ್ಕೆ ಹೇಳಿದರೆ, ನಾನು ತಿರುಗಿ ಬಿದ್ದೇನೆಂಬ ನಂಬಿಗೆಯಾದರೂ ನಿಮಗೆ ಹ್ಯಾಗಾಯಿತು?

ರಾಮರಾಜ— ತಿರುಗಿ ಬೀಳುವದೆ? ಒಡೆಯನ ಮೇಲೆ ತಿರುಗಿ ಬೀಳುವದೇ ಖಾನ ಸಾಹೇಬ ! ಒಡೆಯನ ಮೇಲೆ ತಿರುಗಿ ಬೀಳಿರೆಂದು ಯಾರು ನಿಮಗೆ ಉಪದೇಶಿಸಿದರು? ಇಂಥ ನೀಚತನಕ್ಕೆ ನಾನು ಸರ್ವಥಾ ಹೋಗತಕ್ಕವನಲ್ಲ; ಬಾದಶಹರಿಗೆ ನಿಮ್ಮ ಚಾಕರಿಯು ಮನಸ್ಸಿಗೆ ಬಂದಿರುವದಿಲ್ಲ; ನೀವು ಮನಃಪೂರ್ವಕವಾಗಿ ಸ್ವಾಮಿನಿಷ್ಠೆಯಿಂದ ಮಾಡಿದ ಕೆಲಸದ ಅಭಿನಂದನ ಮಾಡದೆ, ಅವರು ನಿಮ್ಮ ಉಪಹಾಸ ಮಾಡಿದರು; ನಿಮ್ಮ ಸ್ವಾತಂತ್ರ್ಯವನ್ನು ನಷ್ಟಪಡಿಸಿ ನಿಮ್ಮ ಮೇಲಾಧಿಕಾರಿಯಾಗಿ ಬೇರೊಬ್ಬ ವಕೀಲನನ್ನು ಕಳಿಸಿಕೊಟ್ಟರು; ಆದ್ದರಿಂದ ನೀವು ಸ್ಪಷ್ಟ ರೀತಿಯಿಂದ ಬಾದಶಹರಿಗೆ— ''ನಿಮ್ಮ ಚಾಕರಿಯನ್ನು ನಾನು ಒಲ್ಲೆನು'' ಎಂದು ಹೇಳಿ ನನ್ನನ್ನು ಕೂಡಿಕೊಳ್ಳಿರೆಂದಿಷ್ಟೇ ನಿಮಗೆ ನಾನು ಹೇಳಿದೆನು. ಈ ಸರಳ ಮಾರ್ಗದಲ್ಲಿ ಒಡೆಯನ ಮೇಲೆ ತಿರುಗಿ ಬಿದ್ದ ಹಾಗೆ ಎಲ್ಲಿ ಆಗುತ್ತದೆ? ನಾವು ಮಾಡುವ ಕೆಲಸವು ನಮ್ಮ ಯಜಮಾನನ ಮನಸ್ಸಿಗೆ ಬಾರದಿರುವಾಗ, ಮತ್ತೊಬ್ಬರು ನಮ್ಮನ್ನು ಆದರದಿಂದ ಚಾಕರಿಗೆ ಇಟ್ಟುಕೊಳ್ಳುತ್ತಿರಲು, ನಾವು ನಮ್ಮ ಮೊದಲಿನ ಯಜಮಾನನಿಗೆ ಸ್ಪಷ್ಟವಾಗಿ ಹೇಳಿ, ಆ ಎರಡನೆಯವರ ಚಾಕರಿ ಮಾಡುವಲ್ಲಿ ದ್ರೋಹವೇನು? ಇದರಿಂದ ಒಡೆಯನ ಮೇಲೆ ತಿರುಗಿ ಬಿದ್ದಹಾಗೆ ಹ್ಯಾಗಾಯಿತು? ಹೀಗೆ ಹೇಳದೆ ನಾನು ನಿಮಗೆ— ''ನೀವು ಬಾದಶಹನ ನೌಕರರಾಗಿಯೇ ಇದ್ದು ಗುಪ್ತರೀತಿಯಿಂದ ನಮಗೆ ಸಹಾಯ ಮಾಡಿರಿ; ನಿಮ್ಮ ಬಾದಶಹರು ನಡಿಸಿದ ಒಳಸಂಚುಗಳನ್ನೂ, ಅವರ ಕಡೆಯ ಗುಪ್ತವಾದ ಸುದ್ದಿಗಳನ್ನೂ ನಮಗೆ ಗುಪ್ತರೀತಿಯಿಂದ ಹೇಳಿರಿ'' ಎಂದು ಹೇಳಿದ್ದರೆ, ಆ ಮಾತು ಬೇರೆಯಾಗಿತ್ತು, ಆ ಪ್ರಸಂಗದಲ್ಲಿ ಸ್ವಾಮಿದ್ರೋಹವೆಂಬ ನಿಮ್ಮ ಮಾತಿಗೆ ನಾನು ಒಪ್ಪಿಕೊಳ್ಳುತ್ತಿದ್ದೆನು; ಆದರೆ ಈಗ ನಾನು ನಿಮಗೆ ಹಾಗೆ ಹೇಳುವದಿಲ್ಲ. ಬಾದಶಹನಿಗೆ ನೀವು— ''ನಿಮ್ಮ ಚಾಕರಿಯನ್ನು ನಾನು ಮಾಡುವದಿಲ್ಲ''ಂದು ಸ್ಪಷ್ಟವಾಗಿ ತಿಳಿಸಿ, ನೀವು ನಮ್ಮ ಕಡೆಗೆ ಬರಬೇಕೆಂದು ನಿಮಗೆ ಹೇಳುತ್ತೇನೆ. ಹೀಗೆ ಹೇಳಲಿಕ್ಕೆ ನಿಮಗೆ ಪ್ರತಿಬಂಧವೇನು? ನನಗಂತು ಯಾವ ಪ್ರತಿಬಂಧವಿದ್ದಂತೆಯೂ ತೋರುವದಿಲ್ಲ.

ರಣಮಸ್ತಖಾನ— (ಸ್ವಲ್ಪ ಸಿಟ್ಟಿನಿಂದ) ತಮ್ಮ ಎಲ್ಲ ಮಾತುಗಳನ್ನು ನಾನು ಈ ವರೆಗೆ ಲಕ್ಷಪೂರ್ವಕವಾಗಿ ಕೇಳಿಕೊಂಡೆನು. ಇನ್ನು ಯಾವ ಮಾತು ಹೇಳುವ ಅವಶ್ಯಕತೆಯೂ ಉಳಿದಿರುವದಿಲ್ಲ. ಆದರೆ ನನ್ನಿಷ್ಟಕ್ಕೆ ನಾನು ಏನು ವಿಚಾರಮಾಡುವದನ್ನು ಮಾಡುವೆನು. ತಿರುಗಿ ತಾವು ಈ ಸಂಬಂಧದಲ್ಲಿ ನನ್ನನ್ನು ಏನೂ ಕೇಳಬಾರದು.

ರಾಮರಾಜ— ನನ್ನ ಮಾತಿನಿಂದ ತಮಗೆ ಸ್ವಲ್ಪ ಸಿಟ್ಟು ಬಂದಂತೆ ತೋರುತ್ತದೆ. ಆದರೆ ನಿಜವಾಗಿ ಸಿಟ್ಟು ಬರಲಿಕ್ಕೆ ಕಾರಣವಿಲ್ಲ. ನೀವು ಬಾದಶಹರ ಚಾಕರಿಗೆ ಬೇಸತ್ತಿರುವದರಿಂದ, ನಿಮ್ಮ ಪರಾಕ್ರಮವನ್ನು ಪ್ರಕಟಿಸಲಿಕ್ಕೆ ಮಾರ್ಗ ದೊರೆಯಬೇಕೆಂದು ಸೂಚಿಸಿದೆನಿಷ್ಟೇ. ನಮಗೆ ನಮ್ಮ ಸೈನ್ಯವಿರುತ್ತದೆ. ಸೇನಾಪತಿಗಳಿರುತ್ತಾರೆ. ಎಲ್ಲ ತರದ ಅನುಕೂಲತೆಗಳೂ ಇರುತ್ತವೆ. ಆದರೂ ಬಾದಶಹನ ಸೈನ್ಯದ ಸ್ಥಿತಿಯನ್ನು ಬಲ್ಲ ಶೂರ ವೀರನೊಬ್ಬನ ಅವಶ್ಯಕತೆಯು ನಮಗಿರುತ್ತದೆ. ಅಂತೇ ನಾನು ನಿಮ್ಮನ್ನು ಕೇಳಿದೆನು. ನೀವು ಒಪ್ಪಿಕೊಳ್ಳದಿದ್ದರೆ ಮತ್ತೆ ಯಾರಾದರೂ

ಒಪ್ಪಿಕೊಂಡಾರು, ಇದರೊಳಗೇನು? ಅದಿರಲಿ ಬಿಡಿರಿ. ನಿಮಗೆ ಬೇಡಾಗಿದ್ದರೆ ಆ ಮಾತನ್ನೇ ಬಿಟ್ಟುಬಿಡೋಣ.

ಈ ಮೇರೆಗೆ ನುಡಿದು, ರಾಮರಾಜನು ಸುಮ್ಮನಾಗಿ ಕುಂಜವನವನ್ನು ನೋಡುತ್ತ ಸಾಗಿದನು. ರಣಮಸ್ತಖಾನನೂ ಸುಮ್ಮನೆ ಆತನ ಬೆನ್ನುಹತ್ತಿ ನಡೆದಿದ್ದನು. ರಾಮರಾಜನು ಯಾವತ್ತು ಕುಂಜವನವನ್ನು ತಿರುವಿ ಹಾಕಿದನು. ಪುಷ್ಕರಣಿಯನ್ನಂತು ಎರಡು ಸಾರೆ ಆತನು ಸುತ್ತುವರಿದು ಬಂದನು. ಕಲವು ಹೊತ್ತಿನ ಮೇಲೆ ರಣಮಸ್ತಖಾನನು ''ಆಗಲೇ ನೀವು ಪ್ರಶ್ನಮಾಡಿದಿರಲ್ಲ? ಅದಕ್ಕೆ ಉತ್ತರವನ್ನು ನಾನು ಈಗ ಕೊಡುತ್ತೇನೆ; ಆದರೆ ಇಲ್ಲಿ ಬೇಡ. ನಮ್ಮ ಬಂಗಲೆಯಲ್ಲಿ ನಡೆಯಿರಿ'' ಎಂದು ಹೇಳಲು, ರಾಮರಾಜನು ಉತ್ಸುಕತೆಯಿಂದ ರಣಮಸ್ತನ ಮುಖವನ್ನು ನೋಡಿ ಸಂತೋಷಪಟ್ಟು— ಆಗಲಿ, ಬಂಗಲೆಯಲ್ಲಿಯೇ ಹೇಳಿರಿ, ಎಂದು ಬಂಗಲೆಯು ಕಡೆಗೆ ನಡೆದನು. ಬಂಗಲೆಗೆ ಹೋದಬಳಿಕ ರಣಮಸ್ತಖಾನನು ರಾಮರಾಜನನ್ನು ಉಚ್ಚಾಸನದಲ್ಲಿ ಕುಳ್ಳಿರಿಸಿ, ಆತನನ್ನು ಕುರಿತು— ನಾನು ನನ್ನಷ್ಟಕ್ಕೆ ಈ ಮಾತಿನ ವಿಚಾರ ಮಾಡುತ್ತೇನೆಂದು ಆಗಲೆ ನಿಮಗೆ ಹೇಳಿದ್ದೆನಲ್ಲವೆ? ಆದರೆ ಈಗ ನನ್ನ ನಿಶ್ಚಯವಾಗಿರುತ್ತದೆ. ಬಾದಶಹನ ಚಾಕರಿಯಿಂದ ನನ್ನ ಗೌರವವು ಹೆಚ್ಚುವದಿಲ್ಲೆಂಬದು ನನಗೆ ಪೂರಾ ಗೊತ್ತಾಯಿತು. ಬಾದಶಹನು ನನ್ನ ಅಪಮಾನ ಮಾಡಿದ್ದಕ್ಕಾಗಿ ಆತನ ಸೇಡು ತೀರಿಸಿಕೊಳ್ಳಬೇಕೆಂಬ ಬುದ್ಧಿಯು ನನ್ನಲ್ಲಿ ಉತ್ಪನ್ನವಾಗಹತ್ತಿದೆ. ಆದ್ದರಿಂದ ನಾನು ನಿಮ್ಮ ಚಾಕರಿಯನ್ನು ಮಾಡಲು ಒಪ್ಪಿಕೊಳ್ಳುತ್ತೇನೆ; ಆದರೆ ಸದ್ಯಕ್ಕೆ ನಾನು ಅದನ್ನು ಗುಪ್ತರೀತಿಯಿಂದ ಮಾಡಲು ಒಪ್ಪಿಕೊಳ್ಳುವೆನು. ಇಂದು ನಾನು ಬಾದಶಹರಿಗೆ— ''ನಿಮ್ಮ ಚಾಕರಿಯನ್ನು ನಾನು ಮಾಡುವದಿಲ್ಲೆಂ''ದು ಸ್ಪಷ್ಟವಾಗಿ ಹೇಳುವದಿಲ್ಲ, ನಾನು ಪ್ರಸಿದ್ಧ ರೀತಿಯಿಂದ ಬಾದಶಹನ ಚಾಕರನೂ, ಗುಪ್ತರೀತಿಯಿಂದ ನಿಮ್ಮ ಚಾಕರನೂ ಆಗುವೆನು. ಹೀಗೆ ಮಾಡದೆ ಪ್ರಸಿದ್ಧ ರೀತಿಯಿಂದ ನಿಮ್ಮ ಚಾಕರಿಯನ್ನು ಮಾಡಿದರೆ ಆಗ ತಕ್ಕಷ್ಟು ಲಾಭವಾಗದು. ನಾನು ಇಲ್ಲಿ ಬಾದಶಹನ ವಕೀಲನಾಗಿ ಬಂದಿರುವ ದೃಷ್ಟಿಯಿಂದ ಆಗಬಹುದಾದ ಲಾಭಗಳನ್ನು ಮಾಡಿಕೊಂಡರೇ ನಿಮ್ಮ ಹಿತವು ಸಂಪೂರ್ಣವಾಗಿ ಸಾಧಿಸುವದು. ನಿಮ್ಮ ಹಿತಚಿಂತನ ಮಾಡಬೇಕೆಂದು ನಾನು ನಿರ್ಧರಿಸಿರುವೆನು. ಮೂವರು ಬಾದಶಹರ ಒಳಸಂಚುಗಳ ಗೊತ್ತು ನಿಮಗೆ ಹತ್ತಿದರೇ ಲಾಭವಾಗುವದು. ಇಲ್ಲದಿದ್ದರೆ ಲಾಭವೇನು ಆಗುವದು? ನಿಮ್ಮ ರಾಜ್ಯವನ್ನು ನುಂಗಿ ನೀರು ಕುಡಿದು, ಅವನ್ನು ತಮ್ಮೊಳಗೆ ಹಂಚಿ ಕೊಳ್ಳಬೇಕೆಂದು ಮೂವರೂ ಬಾದಶಹರು ಯತ್ನಿಸುತ್ತಿದ್ದಾರೆ. ಅವರ ಒಳಸಂಚುಗಳು ನನಗೆ ಗೊತ್ತಾಗುತ್ತ ಹೋದಂತೆ, ನಾನು ಅವನ್ನು ನಿಮಗೆ ತಿಳಿಸುತ್ತ ಹೋಗಿ ನಿಮ್ಮನ್ನು ಎಚ್ಚರ ಗೊಳಿಸುವೆನು. ಅದಲ್ಲದೆ ನಡನಡುವೆ ನನ್ನಿಂದಾಗತಕ್ಕ ಸಹಾಯವನ್ನೂ ಮಾಡುತ್ತ ಹೋಗುವೆನು. ಎಂದು ನುಡಿದು ರಣಮಸ್ತಖಾನನು ಒಮ್ಮೆಲೆ ಸುಮ್ಮನಾಗಿ ಗೂಢವಿಚಾರದಲ್ಲಿ ಮಗ್ನನಾದವನಂತೆ ಕುಳಿತುಕೊಂಡನು.

ಇಷ್ಟು ಅನುಕೂಲವಾಗಿ ರಣಮಸ್ತಖಾನನು ಮಾತಾಡಬಹುದೆಂದು ರಾಮರಾಜನು ತಿಳಿದಿದ್ದಿಲ್ಲ. ಬಹಳವಾದರೆ ಖಾನನು ಪ್ರಸಿದ್ಧ ರೀತಿಯಿಂದ ತನ್ನ ಚಾಕರಿಯನ್ನು ಮಾಡಲಿಕ್ಕೆ

ಒಪ್ಪಿಕೊಳ್ಳ ಬಹುದೆಂದು ಆತನು ತಿಳಿದಿದ್ದನು; ಆದರೆ ''ಕುರುಡ ಬೇಡಿದ್ದು ಒಂದು ಕಣ್ಣು ದೇವರು ಕೊಟ್ಟದ್ದು ಎರಡು ಕಣ್ಣು'' ಎಂಬಂತೆ ರಣಮಸ್ತಖಾನನು ಈಗ ಆಡಿದ್ದನ್ನು ಕೇಳಿ ರಾಮರಾಜನಿಗೆ ಪರಮಾಶ್ಚರ್ಯವಾಯಿತು. ಹೀಗೆ ಆತನಿಗೆ ಆಶ್ಚರ್ಯವಾದದ್ದನ್ನು ತಿಳಿದೋ ಏನೋ ಅನ್ನುವಂತೆ, ರಣಮಸ್ತಖಾನನು ರಾಮರಾಜನನ್ನು ಕುರಿತು— ನನ್ನ ಮಾತನ್ನು ಕೇಳಿ ನೀವು ಆಶ್ಚರ್ಯಪಟ್ಟದ್ದು ಸೋಜಿಗವಲ್ಲ! ಆದರೆ ನಾನು ಪ್ರಸಿದ್ಧರೀತಿಯಿಂದ ನಿಮ್ಮನ್ನು ಕೂಡಿಕೊಂಡರೆ, ಯಾವ ಕಾಲದಲ್ಲಿ ನನ್ನ ಘಾತವಾದೀತೆಂಬದನ್ನು ಹೇಳಲಾಗುವದಿಲ್ಲ; ಯಾಕಂದರೆ ಮೂವರು ಬಾದಶಹರಿಗೂ ಸಂಬಂಧಿಸಿದ ಹಲವು ಸಂಗತಿಗಳು ನನಗೆ ಗೊತ್ತಾಗುತ್ತವೆ. ಅವುಗಳನ್ನು ನಾನು ನಿಮಗೆ ತಿಳಿಸಿದರೆ, ಸರ್ವಸ್ವದ ಘಾತವಾದೀತೆಂದು ತಿಳಿದು ಆ ಮೂವರೂ ಬಾದಶಹರೂ ಏನಾದರೂ ಹಂಚಿಕೆ ಮಾಡಿ, ನನ್ನನ್ನು ಕೊಲ್ಲಿಸದೆ ಬಿಡರು; ಆದ್ದರಿಂದ ಹೀಗಾಗಗೊಡುವದು ಇಷ್ಟವಿಲ್ಲ. ನಿಷ್ಕಾರಣವಾಗಿ ನನ್ನ ಮಾನಖಂಡನ ಮಾಡಿದ್ದಕ್ಕಾಗಿ ನಾನು ಬಾದಶಹನ ಸೇಡು ತೀರಿಸಿಕೊಳ್ಳುವದು ಅವಶ್ಯವಾಗಿದೆ. ಇದರ ಸಂಗಡ ಬೇರೆ ಸಾಧಿಸಬೇಕಾಗುವ ನನ್ನ ಕಾರ್ಯಗಳನ್ನು ಸಾಧಿಸಿಕೊಳ್ಳಲಿಕ್ಕೆ ಬರಬಹುದು. ಯೋಗ್ಯ ಪ್ರಸಂಗದಲ್ಲಿ ನಾನು ನಿಮ್ಮನ್ನು ಕೂಡಿಕೊಂಡೆನೆಂದರೆ, ಚೆನ್ನಾಗಿ ಅವರ ಹಲ್ಲು ಮುರಿದಂತಾಗುವದು, ಆದ್ದರಿಂದ ಆಗಲೆ ನಿಮಗೆ ಹೇಳಿದಂತೆ, ನಾನು ನಿಮ್ಮ ನೌಕರನೂ ಆಗಿರುವೆನು. ನನಗೆ ಗೊತ್ತಾದ ಗುಪ್ತ ಸಂಗತಿಗಳನ್ನು ನಿಮ್ಮ ಮುಂದೆ ಹೇಳುತ್ತ ಹೋಗುವೆನು. ಅದರಂತೆ ನೀವು ಸಿದ್ಧತೆ ಮಾಡಿಕೊಳ್ಳುತ್ತ ಸಾಗಿರೆಂದಾಯಿತು. ನನ್ನ ಈ ಕೃತಿಯು ನಮ್ಮ ತಾಯಿಯ ಮನಸ್ಸಿಗೆ ಎಷ್ಟು ಮಾತ್ರಕ್ಕೂ ಬರಲಿಕ್ಕಿಲ್ಲ; ಆಕೆಯು ಇದಕ್ಕೆ ಸರ್ವಥಾ ಒಪ್ಪಿಕೊಳ್ಳಲಾರಳು. ನಾನು ಇಂಥ ಕೃತಿಯಲ್ಲಿ ತೊಡಗಿರುವೆನೆಂಬ ಸುದ್ದಿಯು ಹತ್ತಿದರೆ ಸಾಕು, ಆಕೆಯು ನನ್ನ ಮುಖಾವಲೋಕನ ಮಾಡಲಿಕ್ಕಿಲ್ಲ. ಆಕೆಯು ಒಳ್ಳೇ ನಿರ್ಧಾರದವಳೂ, ಅತ್ಯಂತ ಚತುರಳೂ ಇರುವಳು. ಈ ದಿನ ಆಕೆಯು ಇಲ್ಲಿ ಇಲ್ಲದ್ದರಿಂದಲೇ ನಮಗೆ ಸಮಾಧಾನದಿಂದ ಮಾತಾಡಲಿಕ್ಕೆ ಆಸ್ಪದವುಂಟಾಗಿದೆ. ಆಕೆಯು ಇಲ್ಲಿ ಇರುತ್ತಿದ್ದರೆ, ಇಷ್ಟು ಮಾತಾಡಲಿಕ್ಕೆ ಮಾರ್ಗವಿದ್ದಿಲ್ಲ. ಹೇಳಿರಿ, ನಿಮಗೆ ನನ್ನ ಮಾತು ಮಾನ್ಯವಾಗಿರುವದೋ ಇಲ್ಲವೋ? ಸದ್ಯಕ್ಕೆ ನನಗೆ ನಿಮ್ಮಿಂದ ಸಂಬಳ ಬೇಕಾಗಿಲ್ಲ, ಅಧಿಕಾರ ಬೇಕಾಗಿಲ್ಲ, ನನಗೆ ಬಾದಶಹನ ಸೇಡು ತೀರಿಸಿಕೊಳ್ಳಲಿಕ್ಕೆ ಆಸ್ಪದ ದೊರೆತರೆ ಸಾಕು. ಯಾಕೆ? ಮಾತಾಡಿರಿ, ಈಗ ಸುಮ್ಮನೆ ಯಾಕೆ ಕುಳಿತುಕೊಂಡಿರಿ? ಇದರಲ್ಲಿ ನಿಮ್ಮ ಹಾನಿಯೇನೂ ಇರುವದಿಲ್ಲ, ಸಂಪೂರ್ಣಲಾಭವೇ ಇರುತ್ತದೆ. ಹೂ ! ಯಾಕೆ ಮಾತಾಡಲೊಲ್ಲಿರಿ? ಎಂದು ಆತುರಪಡಹತ್ತಿದನು. ಅದಕ್ಕೆ ರಾಮರಾಜನು ಸಂತೋಷಾತಿಶಯದಿಂದ— ನನಗೆ ಮಾತಾಡಲಿಕ್ಕೆ ನೀವು ಆಸ್ಪದವನ್ನೇ ಇಟ್ಟಿಲ್ಲವೆಂದ ಬಳಿಕ ನಾನೇನು ಮಾತಾಡಲಿ? ಒಂದು ಬೇಡಿದರೆ ಎರಡು ಸಿಕ್ಕಂತಾದವು. ಸಂತೋಷವು ಬಹಳ ಸಂತೋಷವು! ನೆಟ್ಟಗಾಯಿತು. ಬಹಳ ನೆಟ್ಟಗಾಯಿತು! ಇದರಲ್ಲಿ ನನ್ನ ಲಾಭವು ಸಂಪೂರ್ಣವಾಗುತ್ತದೆಂದೇನು ನನಗೆ ತಿಳಿಯುವದಿಲ್ಲವೆ? ನಿಮ್ಮ ಮಾತಿಗೆ ನಾನು ಸಂಪೂರ್ಣವಾಗಿ ಒಪ್ಪಿಕೊಳ್ಳುತ್ತೇನೆ. ಎತ್ತ ಕಡೆಯಿಂದೇ ಆಗಲಿ, ನಮ್ಮಿಬ್ಬರ ವಿಚಾರೈಕ್ಯವಾಗಬೇಕೆಂಬುದೇ ನನ್ನ ಮುಖ್ಯ ಹೇತುವು.

ರಾಮರಾಜನು ಹೀಗೆ ಒಪ್ಪಿಕೊಂಡಿದ್ದನ್ನು ನೋಡಿ ರಣಮಸ್ತಖಾನನು— ಸರಿ ಸರಿ ! ನಿಮ್ಮ ಹೇತುವು ಸಾಧಿಸಿದ ಹಾಗಾಯಿತಷ್ಟೇ? ಆದರೆ ಇನ್ನೂ ಮುಂದಿನ ಸಂಗತಿಗಳ ವಿಚಾರವನ್ನು ನೆಟ್ಟಗೇ ಮಾಡಲಿಕ್ಕೆ ಬೇಕು. ಆ ವಿಚಾರಗಳೇನೆಂಬುದನ್ನು ನಾನು ಹೇಳುತ್ತೇನೆ ಕೇಳಿರಿ— ಇನ್ನು ಮೇಲೆ ನೀವು ಇತ್ತ ಕಡೆಗೆ ಎಂದೂ ಬರಬಾರದು. ನೀವು ಮೇಲಿಂದ ಮೇಲೆ ಇತ್ತಕಡೆ ಬರಹತ್ತಿದಿರೆಂದರೆ, ನಮ್ಮ ಜನರು ಏನಾದರೂ ಕುತರ್ಕಗಳನ್ನು ಕಲ್ಪಿಸಿ ಅನರ್ಥವನ್ನುಂಟು ಮಾಡುವರು. ಮಹಮೂದ ಖಾನನ ಕಡೆಯಿಂದಲೂ, ಸ್ವಂತಃ ಬಾದಶಹರ ಕಡೆಯಿಂದಲೂ ನನ್ನ ಮೇಲೆ ಗುಪ್ತಚಾರರು ನಿಯಮಿಸಲ್ಪಟ್ಟಿರಬಹುದು. ಅಂಥ ಗುಪ್ತಚಾರರು ನನ್ನ ಸೇವಕರಲ್ಲಿಯೇ ಇರಲಿಕ್ಕಿಲ್ಲೆಂದು ಯಾರು ಹೇಳಬೇಕು? ಇನ್ನು ಮೇಲೆ ಕೆಲಸಬಿದ್ದಾಗ ನಾನೇ ನಿಮ್ಮ ಕಡೆಗೆ ಬರುತ್ತ ಹೋಗುವೆನು, ಇಲ್ಲವೆ ಪ್ರಸಿದ್ಧ ರೀತಿಯಿಂದ ನನ್ನನ್ನು ನೀವು ಕರಿಸಿಕೊಳ್ಳುತ್ತ ಹೋಗಿರಿ. ನಾನು ಮಹಮೂದಖಾನನ ಒಪ್ಪಿಗೆಯನ್ನು ಪಡೆದು ತಮ್ಮ ಕಡೆ ಬರುತ್ತ ಹೋಗುವೆನು. ನಿಮ್ಮ ಕಡೆಯ ಸುದ್ದಿಗಳನ್ನು ತಿಳಕೊಳ್ಳಲಿಕ್ಕೆ ಅನುಕೂಲವಾಗಬೇಕೆಂದು ಮಹಮೂದಖಾನನಿಗೆ ಹೇಳಿ, ಎರಡು ದಿನಕ್ಕೊಮ್ಮೆ ನಿಮ್ಮ ದರ್ಬಾರಕ್ಕೆ ಬರಲಿಕ್ಕೆ ಆತನಿಂದ ಅಪ್ಪಣೆಯನ್ನು ಒಮ್ಮೆಲೆ ತಕ್ಕೊಂಡು ಇಟ್ಟು ಬಿಡುವೆನು. ನನ್ನ ದರ್ಬಾರದಿಂದ ಇತ್ತ ಕಡೆಗೆ ಬಂದೆನೆಂದರೆ, ನನ್ನ ಮನಸ್ಸಿಗೆ ಯೋಗ್ಯ ತೋರಿದಂತೆ ಮಹಮೂದಖಾನನಿಗೆ ಏನಾದರೂ ಹೇಳಿಬಿಡುವೆನು. ನನ್ನ ಸಲುವಾಗಿ ನೀವು ಯಾವಾಗಲೂ ಸಂಶಯವನ್ನು ವ್ಯಕ್ತಮಾಡಿರಿ. ಕೂಡಿದ ದರ್ಬಾರದಲ್ಲಿಯಾದರೂ ನೀವು ನನ್ನ ವಿಷಯವಾಗಿ ಸಂಶಯವನ್ನು ಪ್ರಕಟಿಸತಕ್ಕದ್ದು. ನನ್ನೊಡನೆ ಒಳಗಿನ ಸಂಬಂಧವು ಬೇರೆಯಿರುತ್ತದೆಂಬುದರ ಗೊತ್ತನ್ನು ಯಾರಿಗೂ ಹತ್ತಗೊಡಬೇಡಿರಿ. ಈಗ ಸದ್ಯಕ್ಕೆ ನನಗೂ ನಿಮಗೂ ಲಗ್ಗೆ ಜಗಳವಾಯಿತೆನ್ನುವ ಹಾಗೆ ಜನರಿಗೆ ಇಲ್ಲಿಂದ ನೀವು ಸಂತಾಪಗೊಂಡು ಹೋಗುತ್ತೀರೆನ್ನುವ ಹಾಗೆ ಜನರಿಗೆ ತೋರಿಸಿರಿ. ತಿರುಗಿ ನೀವು ಇತ್ತ ಕಡೆಗೆ ಎಂದೂ ಬರಬೇಡಿರಿ. ಎಂದು ಹೇಳಿದನು. ಅದಕ್ಕೆ ರಾಮರಾಜನು— ಆಗಲಿ, ಹಾಗೆಯೇ ಆಗಲಿ. ಒಳ್ಳೇ ಯೋಗ್ಯ ವಿಚಾರವು ! ರಣಮಸ್ತ ಖಾನ, ಚಿಕ್ಕ ವಯಸ್ಸಿನ ನಿಮ್ಮಲ್ಲಿ ಇಷ್ಟು ರಾಜಕಾರಣ ಕುಶಲತ್ವವು ಇದ್ದೀತೆಂದು ನನಗೆ ತೋರಿದ್ದಿಲ್ಲ, ಇಂದು ಅದು ನಿಮ್ಮಲ್ಲಿದ್ದದ್ದನ್ನು ನೋಡಿ ನನಗೆ ಬಹಳ ಸಂತೋಷವಾಯಿತು. ನಿಮ್ಮ ವಿಚಾರವು ಬಹು ಸಮರ್ಪಕವಾಗಿರುತ್ತದೆ. ನಾನು ನಿಮ್ಮ ಮಾತಿನಂತೆ ಅಕ್ಷರಶಃ ನಡೆಯುವೆನು. ಆದರೆ ನೀವು ಮೇಲಿಂದ ಮೇಲೆ ನನ್ನನ್ನು ಕಾಣದೆ ಮಾತ್ರ ಇರಬೇಡಿರಿ. ನಿಮ್ಮನ್ನು ಕಾಣದಿದ್ದರೆ..........ಎಂದು ನುಡಿಯುತ್ತಿರಲು, ರಣಮಸ್ತಖಾನನು ನಡುವೆ ಬಾಯಿ ಹಾಕಿ— ಅದರ ಸಂಶಯವನ್ನು ನೀವು ಹಿಡಿಯಬಾರದು. ಅದರಂತೆ ನಾನೆಲ್ಲ ನಡೆದು ಕೊಳ್ಳುವೆನು. ಸದ್ಯಕ್ಕೆ ನೀವು ಸಂತಾಪಗೊಂಡಂತೆ ಇಲ್ಲಿಂದ ಹೊರಟುಹೋಗಿರಿ. ನಮ್ಮಿಬ್ಬರಲ್ಲಿ ವೈಮನಸ್ಸು ಉಂಟಾದ ವರ್ತಮಾನವು ಮಹಮೂದ ಖಾನನಿಗೂ, ಗುಪ್ತಚಾರರ ಮುಖಾಂತರ ಗೊತ್ತಾಗಲಿಕ್ಕೆ ಬೇಕು. ನೀವು ಅತ್ತ ಹೋದ ನಂತರ ನಾನು ನಿಮಗೆ ಬಾಯಿಂದ ಬಂದಹಾಗೆ ಅಂದೇನು. ಅದನ್ನು ನೀವು ಮನಸ್ಸಿಗೆ ಹಚ್ಚಿಕೊಳ್ಳಬೇಡಿರಿ. ತಿರುಗಿ ನನ್ನ ಮೇಲೆ ಸಿಟ್ಟಾದಂತೆ ತೋರಿಸಿರಿ, ಎಂದು ಹೇಳಿದನು. ಅದಕ್ಕೆ ರಾಮರಾಜನು— ಇಲ್ಲ, ಮನಸ್ಸಿಗೆ ಹಚ್ಚಿಕೊಳ್ಳುವದಿಲ್ಲ, ನಿಮ್ಮ ವಿಷಯವಾಗಿ ನನ್ನಲ್ಲಿ ತಿರಸ್ಕಾರವು ಉತ್ಪನ್ನವಾದಂತೆ ತೋರಿಸುವೆನು. ಇಲ್ಲಿಂದ ನಿಮ್ಮನ್ನು

ವಿಜಾಪುರಕ್ಕೆ ಕರಿಸಿಕೊಳ್ಳಬೇಕೆಂದು ಬಾದಶಹನಿಗೆ ಸಹ ತಿಳಿಸುವೆನು, ಎಂದು ನುಡಿದನು. ಮತ್ತೆ ಕೆಲವು ಮಾತುಕಥೆಗಳು ನಡೆದ ಬಳಿಕ ರಾಮರಾಜನು ಸಂತಾಪದಿಂದ ಬಂಗಲೆಯಿಂದ ಹೊರಬಿದ್ದು, ಸಿಟ್ಟಿನಿಂದ ಉರಿಯುತ್ತ ವಿಜಯನಗರದ ಕಡೆಗೆ ಸಾಗಿದನು.

## ಮಾತೃದ್ರೋಹೋಪಕ್ರಮ

ಈ ಮೇರೆಗೆ ರಾಮರಾಜನು ಸಿಟ್ಟಿನಿಂದ ಹೋಗುವದನ್ನು ರಣಮಸ್ತಖಾನನ ಜನರು ನೋಡಿ ಸಮಾಧಾನಪಟ್ಟರು. ಅವರಿಬ್ಬರು ಕೂಗಿ ಕೂಗಿ ಮಾತಾಡಿ ಕಲಹ ಬೆಳಸಿದ್ದನ್ನು ಕೆಲವರು ಕೇಳಿದ್ದರು. ಇವರಿಬ್ಬರ ಕಲಹವು ಆ ರಣಮಸ್ತಖಾನನ ಜನರಿಗೆ ಬಹು ಇಷ್ಟವಾಗಿ ತೋರಿತು. ಅವರಲ್ಲಿ ಕೆಲವರು—''ನಾವು ಹೀಗೆ ಆಗುವದೆಂದು ಮೊದಲೇ ತರ್ಕಿಸಿದ್ದೆವು'' ಎಂದು ಹೇಳಿದರು. ಕೆಲವರು ಹೀಗಾದದ್ದು ಬಹಳ ನೆಟ್ಟಗಾಯಿತು. ರಾಮರಾಜನು ಬಹು ಸವಿಮಾತಿನವನಾದದ್ದರಿಂದ ನಮ್ಮ ತರುಣ ಸರದಾರನ ಮನಸ್ಸನ್ನು ಎಲ್ಲಿ ಕೆಡಿಸುವನೋ ಎಂಬ ಅಂಜಿಕೆಯು ನಮಗೆ ಬಹಳವಾಗಿ ಇತ್ತು, ತಾನು ಇಂಥ ದೊಡ್ಡ ರಾಜ್ಯದ ಶ್ರೇಷ್ಠ ಅಧಿಕಾರಿ ಎಂದರೇನು? ಸಂಗಡ ಯಾರನ್ನು ಕರಕೊಳ್ಳದೆ ತಾನು ಒಬ್ಬನೇ ನಮ್ಮ ಛಾವಣಿಗೆ ಬರುವದೆಂದರೇನು? ಇದೆಲ್ಲ ಆತನ ಕಪಟನಾಟಕದ ಆರಂಭವೆಂದು ನಾವು ತಿಳಿದಿದ್ದೆವು; ಆದರೆ ಇಂದಿನ ಅವರ ಜಗಳದಿಂದ ಒಂದು ಅರಿಷ್ಟವು ಹಿಂಗಿದ ಹಾಗಾಯಿತು ಎಂದು ಮಾತನಾಡಿದರು. ಹೀಗೆ ಒಬ್ಬರು ಒಂದು ವಿಧವಾಗಿ, ಮತ್ತೊಬ್ಬರು ಮತ್ತೊಂದು ವಿಧವಾಗಿ ಮಾತಾಡಿ ಎಲ್ಲರೂ ಸಮಾಧಾನಪಟ್ಟರು; ಆದರೆ ರಣಮಸ್ತಖಾನನಿಗೆ ಮಾತ್ರ ಸಮಾಧಾನ ವಾಗಿದ್ದಿಲ್ಲ. ರಾಮರಾಜನು ಹೋದಬಳಿಕ ಅವನು ವಿಚಾರಮಗ್ನನಾದನು. ಈಗ ತಾನು ನಡಿಸಿದ ಒಳಸಂಚನ್ನು ತನ್ನ ತಾಯಿಗೆ ಹೇಳಬೇಕೋ ಹೇಳಬಾರದೋ ಎಂಬ ವಿಚಾರವು ಆತನಲ್ಲಿ ಉತ್ಪನ್ನವಾಯಿತು. ಈವರೆಗೆ ಆತನು ಹೀಗೆ ಎಂದೂ ಆಲೋಚಿಸದೆ, ನಡೆದ ಸಂಗತಿಗಳನ್ನೆಲ್ಲ ಆಗಾಗ್ಗೆ ಸರಳ ಮನಸ್ಸಿನಿಂದ ತನ್ನ ತಾಯಿಯ ಮುಂದೆ ಹೇಳುತ್ತ ಆಕೆಯ ಆಲೋಚನೆಗಳನ್ನು ಕೇಳಿಕೊಳ್ಳುತ್ತ ಬಂದಿದ್ದನು. ನೂರ ಜಹಾನಳೊಡನೆ ಪ್ರೇಮ ಸಲ್ಲಾಪಗಳೂ, ಪ್ರೇಮಸಂಧಿಯೂ ಆದಂದಿನಿಂದ ಆತನ ಈ ಸ್ಥಿತಿಯು ರೂಪಾಂತರಿಸಹತ್ತಿತ್ತು. ದಿನದಿನಕ್ಕೆ ಆತನು ಹೆಚ್ಚು ಹೆಚ್ಚು ಮೂಕನೂ ಉದಾಸೀನನೂ ಆಗಹತ್ತಿದನು. ನನ್ನ ತಾಯಿಯು ಒಳ್ಳೆಯ ಚತುರಳು, ತೀಕ್ಷ್ಣ ದೃಷ್ಟಿಯವಳು ಮೇಲಾಗಿ ಅತ್ಯಂತ ಸಚ್ಛೀಲಳು. ತಗಲು ದಾಟುಗಳನ್ನು ತಡೆಯದವಳು; ಅಂದಬಳಿಕ ವಿಶ್ವಾಸಘಾತದ ಮಜಲಿಗೆ ಬಂದಿರುವ ನನ್ನ ನೀಚ ಒಳಸಂಚನ್ನು ಆಕೆ ಹ್ಯಾಗೆ ಒಪ್ಪಿಕೊಂಡಾಳು? ಆಕೆಯು ಒಪ್ಪಿಕೊಳ್ಳದ ಬಳಿಕ ನನ್ನ ಕಾರ್ಯವು ಸಾಧಿಸುವ ಬಗೆ ಹೇಗೆ? ಆದ್ದರಿಂದ ನನ್ನ ವಿಚಾರಗಳನ್ನೂ, ಉದ್ದೇಶವನ್ನೂ ನನ್ನ ಹೊರತು ಬೇರೆ ಯಾರಿಗೂ ಗೊತ್ತಾಗದಂತೆ ನಾನೇ ಎಚ್ಚರಪಡುವದು ಅವಶ್ಯವು, ಎಂದು ಆತನು ನಿಶ್ಚಯಿಸಿದನು.

ನೂರಜಹಾನಳು ಬರುವದಕ್ಕಿಂತ ಮೊದಲು ರಣಮಸ್ತಖಾನನ ಪ್ರೇಮವು ಆತನ ತಾಯಿಯಲ್ಲಿಯೇ ಒಟ್ಟುಗೂಡಿತ್ತು; ಆದ್ದರಿಂದ ಆತನಿಗೆ ತನ್ನ ತಾಯಿಯು ಪ್ರತ್ಯಕ್ಷ ದೇವತಾಸ್ತ್ರೀಯಂತೆ ಕಾಣುತ್ತಿದ್ದಳು. ಆದರೆ ನೂರಜಹಾನಳ ಮುಂದೆ "ರಾಮರಾಜನ ಶಿರಸ್ಸನ್ನು ತುಂಡರಿಸಿ ನಿನಗೊಪ್ಪಿಸುವೆನೆಂದ." ಪ್ರತಿಜ್ಞೆ ಮಾಡಿದ ದಿವಸ, ಆ ಪ್ರೇಮದಲ್ಲಿ ಸಮನಾಗಿ ಎರಡು ಭಾಗವಾಗಿ, ಒಂದು ಭಾಗವು ನೂರಜಹಾನಳಲ್ಲಿ ಒಂದು ಭಾಗವು ಮಾಸಾಹೇಬರಲ್ಲಿ ಹಂಚಲ್ಪಟ್ಟವು. ಮುಂದೆ ರಣಮಸ್ತಖಾನನು ನೂರಜಹಾನಳನ್ನು ಕರಕೊಂಡು ವಿಜಾಪುರಕ್ಕೆ ಹೋದಬಳಿಕ, ಅಲ್ಲಿ ನನ್ನ ಕುಲಶೀಲಗಳನ್ನು ಸ್ಪಷ್ಟವಾಗಿ ಹೇಳಿ, ನೂರಜಹಾನಳ ಮನಸ್ಸನ್ನು ಒಲಿಸಲಿಕ್ಕೆ ಅನುಕೂಲವಾಗದಿರಲು, ತನ್ನ ತಾಯಿಯು ಈವರೆಗೆ ತನಗೆ ತನ್ನ ಕುಲವೃತ್ತಾಂತವನ್ನು ಯಾಕೆ ಹೇಳಿರಲಿಕ್ಕಿಲ್ಲೆಂದು ಸಂತಾಪಗೊಳ್ಳುವಾಗ ತನ್ನ ತಾಯಿಯಲ್ಲಿದ್ದ ಆತನ ಪ್ರೇಮದ ಅರ್ಧ ಭಾಗದಲ್ಲಿ ಕೆಲವು ಭಾಗವು ನೂರಜಹಾನಳ ಪ್ರೇಮದಲ್ಲಿ ಕೂಡಿಕೊಂಡಿತು. ಹೀಗೆ ನೂರಜಹಾನಳ ಹಳವಂಡವು ದಿನದಿನಕ್ಕೆ ಹೆಚ್ಚಾಗುತ್ತ ಹೋದಂತೆ ರಣಮಸ್ತಖಾನನ ಪ್ರೇಮಾಂಶವು ನೂರಜಹಾನಳಲ್ಲಿ ಒಟ್ಟುಗೂಡುತ್ತ ಹೋಗಿ, ತಾಯಿಯ ಮೇಲಿನ ಆತನ ಮಮತೆಯು ಕಡಿಮೆಯಾಗಲು ಆತನ ದೂಷಿತ ಮನಸ್ಸಿನಲ್ಲಿ ಸ್ವಾರ್ಥಮೂಲವಾದ ವಿಶ್ವಾಸಘಾತಾದಿ ದುರ್ವಿಚಾರಗಳು ಉತ್ಪನ್ನವಾಗಹತ್ತಿದವು. ಆಯಾ ಕಾಲದಲ್ಲಿ ಹೀಗೆ ತನ್ನ ಮನಸ್ಸಿನ ರೂಪಾಂತರವಾದದ್ದು ರಣಮಸ್ತಖಾನನ ಅನುಭವಕ್ಕೆ ಬರಲಿಲ್ಲ, ತನ್ನ ತಾಯಿಯು ವಿಜಾಪುರದಿಂದ ತಿರುಗಿ ಬಂದಿದ್ದರೂ ಚಿಂತೆಯಿಲ್ಲೆಂದು ಆತನು ಭಾವಿಸ ಹತ್ತಿದನು; ಯಾಕಂದರೆ ತನ್ನ ಕಪಟಕೃತಿಯು ಫಲಿಸಲಿಕ್ಕೆ ತಾಯಿಯ ಸಾನ್ನಿಧ್ಯವು ಆತನಿಗೆ ಘಾತಕವಾಗಿ ತೋರಹತ್ತಿತ್ತು! ಆದರೆ ರಣಮಸ್ತಖಾನನ ಈ ತೋರಿಕೆಗೂ ಆತನ ತಾಯಿಯ ಬರುವಿಕೆಗೂ ಏನೂ ಸಂಬಂಧವಿದ್ದಿಲ್ಲ, ಆತನ ತಾಯಿಯು ತಾನು ಬರುವ ಹಾಗೆ ವಿಜಾಪುರದಿಂದ ಹೊರಟು ಕುಂಜವನಕ್ಕೆ ಒಂದು ದಿನ ಬಂದುಬಿಟ್ಟಳು.

ಮಾಸಾಹೇಬರು ಬರುವದರೊಳಗಾಗಿ ರಣಮಸ್ತಖಾನನ ಮನಸ್ಸಿನ ನಿಶ್ಚಯವಾಗಿ ಆತನು ತನ್ನ ಒಳಸಂಚಿನಂತೆ ಕೃತಿಗಳನ್ನು ನಡಿಸಹತ್ತಿದನು. ಮಹಮೂದಖಾನನ ಪರವಾನಿಗೆಯನ್ನು ಪಡೆದು ವಿಜಯನಗರದ ದರ್ಬಾರಕ್ಕೆ ದಿನಾಲು, ಇಲ್ಲವೆ ಒಂದು ದಿನ ಬಿಟ್ಟು ಒಂದು ದಿನ ಹೋಗ ಹತ್ತಿದನು. ಮಧ್ಯರಾತ್ರಿಯಲ್ಲಿ ಸಹ ಆತನು ಅಕಸ್ಮಾತ್ತಾಗಿ ವಿಜಯನಗರಕ್ಕೆ ಹೋಗುತ್ತಲಿದ್ದನು. ತನ್ನ ವಿಚಾರವನ್ನು ತನ್ನ ತಾಯಿಗೆ ತಿಳಿಸಲಿಕ್ಕಿಲ್ಲೆಂದು ನಿಶ್ಚಯವನ್ನಂತು ಆತನು ಯಾವಾಗೋ ಮಾಡಿಬಿಟ್ಟನು. ಮಾಸಾಹೇಬರು ಬಂದ ಬಳಿಕ ರಣಮಸ್ತಖಾನನು ಒಮ್ಮೆ ಅವರ ದರ್ಶನಕ್ಕೆ ಹೋದನು. ಆಗ ಹೆಚ್ಚಿನ ಮಾತಿಲ್ಲ ಕಥೆಯಿಲ್ಲ. ಸುಮ್ಮನೆ ಕುಳಿತುಕೊಂಡನು. ತಾವು ಹೋಗುವಾಗ ಮಗನ ಮೋರೆಯ ಮೇಲಿದ್ದ ವರ್ಚಸ್ಸು ಸಹ ಈಗ ಇದ್ದಂತೆ ಮಾಸಾಹೇಬರಿಗೆ ತೋರಲಿಲ್ಲ, ರಣಮಸ್ತಖಾನನು ವಿಜಾಪುರದ ಕಡೆಯ ಸುದ್ದಿಯನ್ನು ಕೇಳುವ ವಿಷಯವಾಗಿಯೂ ಆತುರವನ್ನು ತೋರಿಸದಾದನು. ಇದನ್ನು ನೋಡಿ ಮಾಸಾಹೇಬರಿಗೆ ಬಹಳ ವಿಷಾದವಾಯಿತು. ಅವರಾಗಿಯೇ ಹೇಳಿದ ನಾಲ್ಕು ಮಾತುಗಳನ್ನು ಕೇಳಿಕೊಂಡು ರಣಮಸ್ತಖಾನನು ಸುಮ್ಮನೆ

ತಾಯಿಯ ಬಳಿಯಿಂದ ಹೊರಟುಹೋದನು. ಹೆಚ್ಚು ಹೊತ್ತು ಕುಳಿತುಕೊಳ್ಳಲಿಲ್ಲ ಸಹ. ಹೀಗೆ ಮಗನ ಸ್ಥಿತಿಯು ಯಾಕೆ ಆಗಿರಬಹುದೆಂಬ ವಿಚಾರದಲ್ಲಿ ಮಾಸಾಹೇಬರು ಮತ್ತೆ ತೊಡಗಿದರು. ನೂರಜಹಾನಳ ಕಾಲಲ್ಲಿ ತನ್ನ ಮಗನ ಹಾಡು ಹಿಗಾಗಿದ್ದರೆ ಆಕೆಯ ಪ್ರಾಪ್ತಿಯಂತೂ ಅತ್ಯಂತ ದುರ್ಲಭವಾಗಿರುವದರಿಂದ, ಮಗನ ಪರಿಣಾಮವು ನೆಟ್ಟಗೆ ಕಾಣುವದಿಲ್ಲೆಂದು ಅವರು ಚಿಂತಿಸಹತ್ತಿದರು. ಅವರು ತಮ್ಮ ಸೇವಕರನ್ನು ಕರೆಸಿ—''ನಾವು ಊರಿಗೆ ಹೋದಬಳಿಕ ಏನು ನಡೆಯಿತು?'' ಎಂದು ಕೇಳಲು, ಅವರು—ರಾಮರಾಜನು ಕುಂಜವನಕ್ಕೆ ಬಂದಂದಿನಿಂದ ಆತನು ರಣಮಸ್ತಖಾನನೊಡನೆ ಜಗಳಾಡಿ ಸಿಟ್ಟಿನಿಂದ ಹೊರಟು ಹೋದವರೆಗೆ ಯಾವತ್ತು ಸುದ್ದಿಯನ್ನು ಹೇಳಿ, ಮಧ್ಯರಾತ್ರಿಯಲ್ಲಿ ಒಮ್ಮೊಮ್ಮೆ ಖಾನರು ವಿಜಯನಗರದ ಕಡೆಗೆ ಹೋಗುವರೆಂಬದನ್ನೂ ಹೇಳಿದರು. ಅದನ್ನುಕೇಳಿದ ಬಳಿಕಂತು ಮಾಸಾಹೇಬರು ಮತ್ತಿಷ್ಟು ಸಂಶಯಗ್ರಸ್ತರಾದರು. ಅವರು ಮನಸ್ಸಿನಲ್ಲಿ— ರಾಮರಾಜನೊಡನೆ ಆದ ಜಗಳಕ್ಕೂ, ರಣಮಸ್ತಖಾನನು ಮಧ್ಯರಾತ್ರಿಯಲ್ಲಿ ವಿಜಯನಗರದ ಕಡೆಗೆ ಹೋಗಲಿಕ್ಕೂ ಸಂಬಂಧವೇನು? ಮೇಲಾಗಿ ರಣಮಸ್ತಖಾನನು ದಿನಾಲು, ಇಲ್ಲವೆ ಎರಡು ದಿವಸಗಳಿಗೊಮ್ಮೆ ವಿಜಯನಗರದ ದರ್ಬಾರಕ್ಕೆ ಹೋಗುತ್ತಾನೆಂತಲೂ ಜನರು ಹೇಳುತ್ತಾರೆ. ಇದರ ಗೂಢವೇನಿರ ಬಹುದು? ರಾಮರಾಜನು ತನ್ನ ಸವಿಮಾತುಗಳಿಂದ ಮಗನ ಮನಸ್ಸನ್ನು ಮತ್ತೆ ತಿರುಗಿಸಿಕೊಂಡಿರ ಬಹುದೇನು? ಅಥವಾ ಜಗಳವೇ ಮೋಸದ್ದಿರುವುದೋ? ಮಧ್ಯರಾತ್ರಿಯಲ್ಲಿ ಮಗನು ಹೋಗಲಿಕ್ಕೆ ಗುಪ್ತ ರಾಜಕಾರಣವಾಗಲಿ, ಪರಸ್ತ್ರೀಲಂಪಟತ್ವವಾಗಲಿ ಕಾರಣವಾಗಿರಬೇಕು. ಆದರೆ ನೂರಜಹಾನಳ ಪ್ರಾಪ್ತಿಯು ಅಶಕ್ಯವಾಗಿ ತೋರಿದ ಕೂಡಲೆ ಅನ್ಯ ಸ್ತ್ರೀಯಲ್ಲಿ ಲಂಪಟನಾಗುವಷ್ಟು ತನ್ನ ಮಗನು ಚಂಚಲ ಮನಸ್ಸಿನವನೂ, ಕ್ಷುದ್ರನೂ ಅಲ್ಲೆಂಬುದು ಮಾಸಾಹೇಬರಿಗೆ ಗೊತ್ತಿತ್ತು, ಆದ್ದರಿಂದ ಮಗನು ಮಧ್ಯರಾತ್ರಿಯಲ್ಲಿ ವಿಜಯನಗರದ ಕಡೆಗೆ ಹೋಗಲಿಕ್ಕೆ ಗುಪ್ತ ಒಳಸಂಚೇ ಕಾರಣವೆಂದು ಅವರು ತರ್ಕಿಸಿದರು. ರಾಮರಾಜನು ಒಳ್ಳೆ ಸವಿಮಾತಿನವನೆಂದು ಮಾಸಾಹೇಬರು ಜನರಿಂದ ಕೇಳಿದ್ದರಲ್ಲದೆ, ಅವರಿಗೂ ಆ ಮಾತಿನ ಅನುಭವವು ಚೆನ್ನಾಗಿ ಬಂದಿತ್ತು; ಆದ್ದರಿಂದ ರಾಮರಾಜನು ಕಡೆಗೆ ತನ್ನ ಮಗನನ್ನು ಗೊತ್ತಿಗೆ ಹಚ್ಚದೆ ಬಿಡನೆಂದು ತಿಳಿದು, ಬೇಗನೆ ಮಗನನ್ನು ಎಚ್ಚರಗೊಳಿಸಬೇಕೆಂದು ಅವರು ನಿಶ್ಚಯಿಸಿ, ತಾವೇ ಈ ಕೆಲಸವನ್ನು ಮಾಡಬೇಕೆಂದು ಗೊತ್ತುಮಾಡಿದರು. ಮಗನನ್ನು ಯಾವ ಉಪಾಯದಿಂದೆಚ್ಚರಗೊಳಿಸಬೇಕೆಂದು ಮಾಸಾಹೇಬರು ಆಲೋಚಿಸುತ್ತಲೇ ಇದ್ದರು. ಅವರ ಪರಮೇಶ್ವರನ ಪ್ರಾರ್ಥನೆಯೂ, ಜಪವೂ ಎತ್ತೋ ಹೋದವು. ಒಂದು ದಿನ ಅವರು ನಸುಕಿನಲ್ಲಿ ರಣಮಸ್ತಖಾನನು ಎದ್ದಿರುವನೋ ಇಲ್ಲವೋ ನೋಡಿ ಬರಲಿಕ್ಕೆ ಲೈಲಿಯನ್ನು ಕಳಿಸಿದರು. ಆದರೆ ಖಾನನು ಇನ್ನೂ ಎದ್ದಿದ್ದಿಲ್ಲ, ನಿನ್ನೆ ಮಧ್ಯರಾತ್ರಿಯಲ್ಲಿ ಹೋದವರು ಬೆಳಗು ಮುಂಜಾನೆ ಬಂದಿದ್ದರಿಂದ ಇನ್ನೂ ಎದ್ದಿರುವದಿಲ್ಲೆಂದು ಸೇವಕರು ಹೇಳಿದರು. ಲೈಲಿಯು ಖಾನನನ್ನು ಎಬ್ಬಿಸಲಾರದೆ—''ಎದ್ದಕೂಡಲೆ ಮಾಸಾಹೇಬರು ಕರೆದಿರುವರೆಂದು ಹೇಳಿ ಕಳಿಸಿಕೊಡಿರಿ.'' ಸೇವಕರಿಗೆ ಹೇಳಿ, ತಿರುಗಿ ಬಂದು ಮಾಸಾಹೇಬರ ಮುಂದೆ ಎಲ್ಲ ಸಂಗತಿಯನ್ನು ಹೇಳಿದಳು.

ಇತ್ತ ರಣಮಸ್ತಖಾನನು ತಾಯಿಯ ಸಂಗಡ ನೆಟ್ಟಗೆ ಮಾತಾಡದೆ ತಾನು ತಟ್ಟನೆ ಹೊರಟುಬಂದದ್ದಕ್ಕಾಗಿ ಪಶ್ಚಾತ್ತಾಪಪಡಹತ್ತಿದನು. ಆ ಪಶ್ಚಾತ್ತಾಪದಲ್ಲಿ ಆ ರಾತ್ರಿ ಆತನಿಗೆ ನಿದ್ದೆಹತ್ತಲಿಲ್ಲ. ಆತನುಹೀಗೆ ಪಶ್ಚಾತ್ತಾಪ ಪಡುವಾಗ ತಾಯಿಯ ಒಂದು ತಪ್ಪು ಆತನ ಮನಸ್ಸಿಗೆ ಹೊಳೆಯಲು, ಆತನ ಪಶ್ಚಾತ್ತಾಪವು ಕಡಿಮೆಯಾಗಹತ್ತಿತ್ತು. ತನ್ನ ತಾಯಿಯ ಪ್ರೇಮವು ತನ್ನ ಮೇಲೆ ವಿಶೇಷವಿರುತ್ತದೇನೋ ನಿಜ; ಆದರೆ ಆಕೆಯು ತನ್ನ ಮನಸ್ಸಿನೊಳಗಿನ ಮಾತುಗಳನ್ನೆಲ್ಲ ನನ್ನ ಮುಂದೆ ಇಲ್ಲಿಯವರೆಗೆ ಎಲ್ಲಿ ಹೇಳಿದ್ದಾಳೆ? ಆಕೆಯು ನನ್ನ ತಂದೆಯ ಹೆಸರನ್ನ ನನ್ನ ಮುಂದೆ ಯಾಕೆ ಹೇಳಬಾರದು? ಹೀಗೆ ಗುಪ್ತವಾಗಿ ಇಡುವದು ಯೋಗ್ಯವೋ? ಈಗ ಕೆಲವು ವರ್ಷಗಳ ಹಿಂದೆ ನಾನು ಸತ್ಯಾಗ್ರಹ ಮಾಡಿದಾಗ ನನ್ನ ಕುಲವೃತ್ತಾಂತವನ್ನು ಲೈಲಿಯ ಕೈಯಿಂದ ಹೇಳಿಸಿದ ಹಾಗೆ ಮಾಡಿದಳು. ಅದರಂತೆ ಈಗ ನಾನಾದರೂ ನನ್ನ ಒಳಸಂಚಿನ ಸುದ್ದಿಯನ್ನು ಮಾಸಾಹೇಬರ ಮುಂದೆ ಹೇಳದಿದ್ದರೆ ತಪ್ಪೇನು? ಎಂದು ಆತನು ತನ್ನ ಸಮಾಧಾನ ಮಾಡಿಕೊಳ್ಳಹತ್ತಿದನು. ತಾನು ತನ್ನ ತಾಯಿಯಲ್ಲಿ ದೋಷಗಳನ್ನು ಕಲ್ಪಿಸಿ, ತನ್ನ ಸಮಾಧಾನ ಮಾಡಿಕೊಳ್ಳುವಾಗ ಸರಿರಾತ್ರಿಯಾಯಿತು; ಆದರೂ ಆತನಿಗೆ ನಿದ್ದೆ ಬರಲಿಲ್ಲ. ಕೂಡಲೆ ಆತನು ತನ್ನ ಕುದುರೆಗೆ ಜೀನು ಹಾಕಿಸಿ ತರಿಸಿ ವಿಜಯನಗರದ ಕಡೆಗೆ ಒಬ್ಬನೇ ಹೋದವನು ಬೆಳಗುಮುಂಜಾನೆ ಬಂದು ಮಲಗಿಕೊಂಡಿದ್ದನು. ಎರಡು ತಾಸು ಹೊತ್ತು ಏರಿದರೂ ಆತನಿಗೆ ಎಚ್ಚರವಾಗಲಿಲ್ಲ. ಇತ್ತ ಮಾಸಾಹೇಬರಂತು, ಮಗನು ಯಾವಾಗ ಎದ್ದಾನೆಂದು ಚಡಪಡಿಸಹತ್ತಿದರು. ಅವರು ಮಗನು ಎದ್ದಿರುವನೋ ಇಲ್ಲವೋ ನೋಡಿ ಬರಲಿಕ್ಕೆ ಒಂದು ತಾಸಿನಲ್ಲಿ ನಾಲ್ಕು ಸಾರೆ ಸೇವಕರನ್ನು ಓಡಾಡಿಸಿದರು; ಆದರೆ ಆತನು ಇನ್ನೂ ಎದ್ದಿದ್ದಿಲ್ಲ. ಮಾಸಾಹೇಬರು ಅತ್ಯಂತ ಆತುರರಾಗಿದ್ದರು. ಅವರ ಮನಸ್ಸಿಗೆ ಸಮಾಧಾನವಾಗಲೊಲ್ಲದು. ಇನ್ನು ಆತನು ಏಳುವ ಹಾದಿಯನ್ನು ನೋಡದೆ ತಾವೇ ಆತನ ಕೋಣೆಯವರೆಗೆ ಹೋಗಿ ಆತನನ್ನು ಎಬ್ಬಿಸಿ, ಹೇಳುವದನ್ನು ಹೇಳಿಬಿಡೋಣ. ಎಂದು ನಿಶ್ಚಯಿಸಿ,ಆತನ ಕೋಣೆಯ ಕಡೆಗೆ ಹೊರಟರು. ಇಂದಿನವರೆಗೆ ಮಾಸಾಹೇಬರು ಹೀಗೆ ಎಂದೂ ಮಾಡಿದ್ದಿಲ್ಲ. ಅವರು ರಣಮಸ್ತಖಾನನ ಮಲಗುವ ಕೋಣೆಯ ಬಾಗಿಲಿಗೆ ಹೋಗಿ ಅಲ್ಲಿದ್ದ ಸೇವಕನಿಗೆ—''ನಿಮ್ಮ ಖಾನರನ್ನು ಎಬ್ಬಿಸಿ, ನಾನು ಬಂದಿದ್ದೇನೆಂದು ಅವರಿಗೆ ಹೇಳು'' ಎಂದು ಸೂಚಿಸಿದರು. ಮಾಸಾಹೇಬರು ಬಳಿಯಲ್ಲಿರದಿದ್ದರೆ ಕೂಗಿ ಎಬ್ಬಿಸುವ ಧೈರ್ಯವು ಆ ಸೇವಕನಿಗೆ ಎಂದೂ ಆಗುತ್ತಿದ್ದಿಲ್ಲ. ಸೇವಕನು ಮಾಸಾಹೇಬರು ಬಂದಿದ್ದಾರೆಂಬ ಧೈರ್ಯದಿಂದ ರಣಮಸ್ತಖಾನನನ್ನು ಗಟ್ಟಿಯಾಗಿ ಕೂಗಿ ಎಬ್ಬಿಸಿ—''ಮಾಸಾಹೇಬರು ತಮ್ಮನ್ನು ಕಾಣಲಿಕ್ಕೆ ಬಂದಿದ್ದಾರೆಂದು'' ಕೂಗಿ ಹೇಳಿದನು. ''ಮಾಸಾಹೇಬರು ಬಂದಿದ್ದಾರೆಂಬ'' ಶಬ್ದವು ಕಿವಿಗೆ ಬಿದ್ದಕೂಡಲೆ ರಣಮಸ್ತಖಾನನು ತನ್ನ ಪಲ್ಲಂಗದಿಂದ ಕೆಳಗೆ ಬಂದು ನಿಂತು—''ಬಂದೆನು, ಈಗ ಬಂದೆನು. ನಾನು ಅವರ ಕೋಣೆಗೆ ಬರುತ್ತೇನೆಂದು ಹೇಳು. ಅವರು ಇಲ್ಲಿಯವರೆಗೆ ಬರುವ ಆಯಾಸವನ್ನು ಯಾಕೆ ಮಾಡಿಕೊಂಡರು? ಅವರು ತಮ್ಮ ಕೋಣೆಯನ್ನು ಮುಟ್ಟುವ ದರೊಳಗಾಗಿ, ನಾನು ಬಂದೆನೆಂದು ಹೇಳು.'' ಎಂದು ಗಟ್ಟಿಯಾಗಿ ನುಡಿದು, ಹತ್ತರ ಹೂಜಿ ಯಲ್ಲಿಟ್ಟಿದ್ದ ನೀರಿನಿಂದ ಬಾಯಿಮುಕ್ಕಳಿಸಿಕೊಂಡು ಮೋರೆಯನ್ನು ತೊಳಕೊಂಡನು.

ರಣಮಸ್ತಖಾನನು ತನ್ನ ಸೇವಕನಿಗೆ ಹೇಳಿದ್ದನ್ನು ಮಾಸಾಹೇಬರು ಕೇಳಿ ಕ್ಷಣಮಾತ್ರ ವಿಚಾರಮಗ್ನನಾದರು. ತಾವು ಇಲ್ಲಿಯೇ ಇರಬೇಕೊ, ತಮ್ಮ ಕೋಣೆಗೆ ಹೋಗಬೇಕೋ ಎಂದು ಅವರು ಆಲೋಚಿಸತೊಡಗಿದರು. ಕಡೆಗೆ ಅವರು ತಮ್ಮ ಕೋಣೆಗೆ ಹೋಗುವದೇ ನೆಟ್ಟಗೆ, ಅಲ್ಲಿ ಸಮಾಧಾನದಿಂದ ಮಾತಾಡಲಿಕ್ಕೆ ಅನುಕೂಲವಾದಂತೆ ಬೇರೆ ಸ್ಥಳದಲ್ಲಿ ಆಗಲಿಕ್ಕಿಲ್ಲ ಎಂದು ನಿಶ್ಚಯಿಸಿ ರಣಮಸ್ತಖಾನನಿಗೆ—''ಹಾಗಾದರೆ ನಾನು ಮುಂದೆ ಹೋಗುತ್ತೇನೆ; ನೀನು ಬೇಗನೆ ಬಾ'' ಎಂದು ಹೇಳಲು ಖಾನನು 'ಹೂ' ಎಂದು ಒಪ್ಪಿಗೆಯನ್ನಿತ್ತನು. ಕೂಡಲೆ ಮಾಸಾಹೇಬರು ತಮ್ಮ ಕೋಣೆಗೆ ಹೋಗಿ ತಮ್ಮ ಆಸನದಲ್ಲಿ ಕುಳಿತುಕೊಂಡರು. ರಣಮಸ್ತಖಾನನು ಅವರ ಬೆನ್ನ ಹಿಂದೆಯೇ ಬಂದನು. ನಿದ್ದೆಗೆಟ್ಟಿದ್ದರಿಂದ ಆತನ ಮುಖವು ನಿಸ್ತೇಜನವಾಗಿತ್ತು, ಸದಾ ಚಿಂತಾಮಗ್ನನಾಗಿರುತ್ತಿದ್ದರಿಂದ ಅವನ ಕಣ್ಣುಗಳು ಒಳನಟ್ಟಿದ್ದವು. ಆತನ ಉಲ್ಲಸಿತ ವೃತ್ತಿಯು ಎತ್ತೋ ಹೊರಟುಹೋಗಿತ್ತು, ನೂರಜಹಾನಳ ಪ್ರಕರಣವು ಉಪಸ್ಥಿತವಾಗುವದಕ್ಕಿಂತ ಮೊದಲಿನ ರಣಮಸ್ತಖಾನನಲ್ಲಿಯೂ, ಈಗಿನ ರಣಮಸ್ತಖಾನನಲ್ಲಿಯೂ ಭೂವ್ಯಾಕಾಶದಷ್ಟು ಅಂತರವಾಗಿತ್ತು. ಇದನ್ನು ನೋಡಿ ಮಾಸಾಹೇಬರ ಹೊಟ್ಟೆಯಲ್ಲಿ ಬಹಳ ಕಷ್ಟವಾಯಿತು. ಅವರು ಬಾಯಿಂದ ಮಾತಾಡದೆ ಕೈಚಾಚಿ ಮಗನನ್ನು ಹತ್ತಿರ ಕರೆದರು. ಆತನ ಬೆನ್ನಮೇಲೆ ಕೈಯಿಟ್ಟು, ಆತನ ನಿಸ್ತೇಜವಾದ ಮುಖವನ್ನು ದಿಟ್ಟಿಸಿ ನೋಡಿ, ಅವರು ಆತನನ್ನು ಕುರಿತು ಅತ್ಯಂತ ವಾತ್ಸಲ್ಯದಿಂದ– ''ಬಾಳಾ, ರಣಮಸ್ತ, ನನ್ನ ಜೀವಕ್ಕೆ ನೀನೊಂದೇ ಆಧಾರತಂತುವೆಂಬದನ್ನು ನೀನು ಅರಿಯೆಯಾ? ನಿನ್ನ ಜೀವಕ್ಕೇನಾಗುತ್ತದೆಂಬದನ್ನು ನನ್ನ ಮುಂದೆ ಹೇಳುವದಿಲ್ಲವೇ? ನನ್ನ ಮೇಲಿದ್ದ ನಿನ್ನ ವಿಶ್ವಾಸವು ಎತ್ತ ಹೋಯಿತು? ನನ್ನನ್ನು ನೀನು ಹೀಗೆ ವಂಚಿಸುವ ಕಾರಣವೇನು? ನಿನ್ನ ಮನಸ್ಸನ್ನು ಯಾವ ಚಿಂತಾರೋಗವು ಆವರಿಸಿತು?'' ಎಂದು ಇನ್ನೂ ಏನೇನೋ ಹೇಳುತ್ತಿರಲು, ರಣಮಸ್ತಖಾನನು ನಡುವೇ ಬಾಯಿ ಹಾಕಿ—''ಮಾಸಾಹೇಬರೇ, ನೀವು ನನ್ನನ್ನು ಏನೇನೋ ಕೇಳುವಿರಿ; ಆದರೆ ನನಗೆ ಅವುಗಳ ಉತ್ತರವನ್ನು ಹೇಳಲಿಕ್ಕೆಬರುವದಿಲ್ಲ. ನನ್ನ ಜೀವಕ್ಕೆ ಏನಾಗಿದೆ ಎಂಬುದು ನನಗೆ ಗೊತ್ತಾಗದಿರಲು, ನಿಮಗೇನು ಹೇಳಲಿ? ನನ್ನ ಜೀವಕ್ಕೆ ಏನಾಗುತ್ತದೆಂಬುದು ನನಗೇ ನಿಶ್ಚಯವಾಗಿ ತಿಳಿಯಲೊಲ್ಲದು'' ಎಂದು ಹೇಳಿದನು. ಹೀಗೆ ಮಗನು ನಡುವೆ ಉತ್ತರಕೊಟ್ಟಾನೆಂದು ಮಾಸಾಹೇಬರು ತಿಳಿದಿದ್ದಿಲ್ಲ, ಆತನು ತಮ್ಮ ಮಾತುಗಳನ್ನು ಕೇಳುತ್ತ ಸುಮ್ಮನೆ ಕುಳಿತುಕೊಂಡಾನೆಂದು ಅವರು ಮಾಡಿದ್ದರು. ಅಷ್ಟರಲ್ಲಿ ಮಗನ ಈ ಉತ್ತರವನ್ನು ಕೇಳಿ ಅವರು ಕ್ಷಣಮಾತ್ರ ಸುಮ್ಮನೆ ಕುಳಿತುಕೊಂಡರು. ಆಮೇಲೆ ಅವರು ರಣಮಸ್ತಖಾನನಿಗೆ– ಹೀಗೆ ನೀನು ಮಾತಾಡಿದರೆ ನನಗೆ ಹ್ಯಾಗೆ ಸಮಾಧಾನವಾಗಬೇಕು? ಸಣ್ಣವನಿರುವಾಗ ನಿನಗೆ ಮಾತಾಡಲಿಕ್ಕೆ ಬರುತ್ತಿದ್ದಿಲ್ಲ, ಏನಾಗುತ್ತದೆಂಬದನ್ನು ಹೇಳಲಿಕ್ಕೆ ಬರುತ್ತಿದ್ದಿಲ್ಲ. ಆಗ ನೀನು ಅಳುವದನ್ನು ನೋಡಿ ತರ್ಕದಿಂದ ನಿನಗಾದ ಬೇನೆ ಬೇಸರಿಕೆಗಳನ್ನೂ, ಹಸಿವೆ ನೀರಡಿಕೆಗಳನ್ನು, ತಿಳಿಕೊಂಡು ನಾನು ತಕ್ಕ ಉಪಾಯಮಾಡಿ ನಿನ್ನನ್ನು ದೊಡ್ಡವನಾಗಿ ಮಾಡಿದೆನು. ಈಗ ನಿನಗೆ ಮಾತಾಡಲಿಕ್ಕೆ ಬರುತ್ತದೆ, ಹೇಳಲಿಕ್ಕೆ ಬರುತ್ತದೆ. ಹೀಗಿದ್ದು ನೀನು– 'ನನಗೆ ತಿಳಿಯುವದಿಲ್ಲೆಂದು' ಉತ್ತರ ಕೊಟ್ಟರೆ, ನನಗೆ ಹ್ಯಾಗೆ ಸಮಾಧಾನವಾಗಬೇಕು? ನಿನ್ನ

ಮನಸ್ಸಿನೊಳಗಿರುವದನ್ನು ನನಗೆ ಹೇಳಬಾರದೆಂದು ನೀನು ಬುದ್ಧಿಪೂರ್ವಕವಾಗಿ ಬಚ್ಚಿಡುವದೇನು ನನಗೆ ಗೊತ್ತಾಗವದಿಲ್ಲವೇ? ಛೀ, ಛೀ. ಹೀಗೆ ಮಾಡಬೇಡ. ನಿನ್ನ ಸಲುವಾಗಿಯೇ ನಾನು ಪ್ರಾಣಧಾರಣ ಮಾಡಿರುವೆನು. ನಿನ್ನ ಸಲುವಾಗಿಯೆ ಸೋಸ ಬಾರದ ಕಷ್ಟಗಳನ್ನು ನಾನು ಸೋಸಿದೆನು. ನಿನ್ನ ಸಲುವಾಗಿಯೇ ನಾನು ಆತ್ಮಹತ್ಯೆಯನ್ನು ಮಾಡಿಕೊಂಡಿರುವದಿಲ್ಲ. ನನ್ನ ಪ್ರಾಣದ ವಿಶ್ರಾಂತಿಸ್ಥಾನವು ನೀನು. ಅಂಥ ನೀನು ನನಗೆ ಇಂದು ಎರವಾಗುತ್ತೀಯಾ? ಈವರೆಗೆ ನಮ್ಮಿಬ್ಬರಲ್ಲಿ ಭೇದವಿದ್ದಿಲ್ಲ. ಈಗ ಆ ಭೇದವು ಉಂಟಾಗಿದೆ. ನನ್ನ ಮುಂದೆ ನೀನು ಏನೂ ಮುಚ್ಚಿಕೊಳ್ಳತಕ್ಕವನಲ್ಲ. ಇಂದೇ ಯಾಕೆ ಹೀಗೆ ಮಾಡುತ್ತೀ?''

ರಣಮಸ್ತಖಾನ—ನಾನೇನು ಮಾಡುತ್ತೇನೆ? ಏನೂ ಮಾಡುವದಿಲ್ಲ.

ಮಾಸಾಹೇಬ—ಛೀ, ಛೀ, ಛೀ. ನೀನು ಏನೂ ಮಾಡುವದಿಲ್ಲೆಂಬ ಮಾತು ಸುಳ್ಳು. ನೀನು ಈಗ ಏನೋ ಒಳಸಂಚು ನಡಿಸಿರುತ್ತೀ. ನನ್ನ ಮುಂದೆ ಮಾತ್ರ ಅದನ್ನು ಹೇಳುವದಿಲ್ಲ, ಬೇಡ, ಬೇಡ; ನೀನು ಈಗ ಏನು ಒಳಸಂಚು ನಡಿಸಿರುತ್ತೀಯೆಂಬುದನ್ನು ನನ್ನ ಮುಂದೆ ಹೇಳು.

ರಣಮಸ್ತಖಾನ–ಒಳಸಂಚು ಯಾರದು? ನಾನು ಒಳಸಂಚು ನಡೆಸಿರುವೆನೇ? ಯಾರ ಸಂಗಡ? ನಾನು ಯಾರವನೆಂಬುದನ್ನೇ ನನಗೆ ಹೇಳಲಿಕ್ಕೆ ಬಾರದಿರುವಾಗ ನನ್ನ ಒಳಸಂಚನ್ನು ಯಾರು ಕೇಳುವರು? ನನ್ನನ್ನು ಒಳಸಂಚಿನಲ್ಲಿ ಕೂಡಿಸಿಕೊಳ್ಳುವವರಾದರೂ ಯಾರು? ಮಾಸಾಹೇಬರೇ, ಸುಮ್ಮನೆ ಇಲ್ಲದ್ದೊಂದು ಕಲ್ಪಿಸಿ ನನಗೆ ಪ್ರಶ್ನಮಾಡಬೇಡಿರಿ. ಯಃಕಶ್ಚಿತವಾದ ನಾನು ಎಲ್ಲಿಯಾದರೂ ಹ್ಯಾಗಾದರೂ ಹುಟ್ಟಿದವರಂತೆ, ಯಃಕಶ್ಚಿತನಾದ ನಾನು ಎಲ್ಲಿಯಾದರೂ ಹ್ಯಾಗಾದರೂ ಸಾಯುವೆನು! ಬೇರೆಯವರಂತೆ ಮಹತ್ಕೃತ್ಯಗಳನ್ನು ಮಾಡಿ ದೊಡ್ಡಸ್ತನವನ್ನು ಪಡೆಯುವದು ನನಗೆ ಶಕ್ಯವಿಲ್ಲ. ನಾನು ಏನಾದರೂ ಮಾಡುತ್ತಿದ್ದರಷ್ಟೇ ನಿಮ್ಮ ಮುಂದೆ ಅದನ್ನು ಮುಚ್ಚುವದು! ನನ್ನಿಂದ ಇಂಥ ಮಹತ್ಕೃತ್ಯವಾದೀತು ಎಂಬ ಆಶೆಯನ್ನೇ ನೀವು ಬಿಟ್ಟುಬಿಡಿರಿ. ನನಗೆ ಬೇಕಾಗಿರುವ ಹೆಂಡತಿಯನ್ನು ಸಂಪಾದಿಸಿಕೊಳ್ಳಲಾರದ ನಾನು,ಬೇರೆ ಮಹತ್ಕೃತ್ಯಗಳನ್ನೇನು ಮಾಡೇನು?

ಮಾಸಾಹೇಬ—ರಣಮಸ್ತ, ನೀನಾಡುವ ಮಾತುಗಳ ಮರ್ಮವು ನನಗೆ ತಿಳಿಯುವ ದಿಲ್ಲೆಂದು ನೀನು ಭಾವಿಸಬೇಡ. ನೀನು ಎಲ್ಲಿಯಾದರೂ ಹ್ಯಾಗಾದರೂ ಹುಟ್ಟಿ ಯಃಕಶ್ಚಿತ ನಾಗುವಂತೆ ತೋರಿದ್ದರೆ, ನಿನಗೆ ನಾನು ಜನ್ಮವನ್ನೇ ಕೊಡುತ್ತಿದ್ದಿಲ್ಲ. ಪ್ರತಿಜ್ಞೆಯ ಮೂಲಕ ನಿಜವಾದ ಸಂಗತಿಯನ್ನು ಈಗ ನುಡಿಯದೆ ಸುಮ್ಮನಿರುವ ನನ್ನನ್ನು, ನೀನೂ ಮಾತಿನಿಂದ ಛಲಿಸುವೆಯಾ? ಆಗಲಿ, ರಣಮಸ್ತ ಬಹಳ ಜಾಣನಾಗಿರುವೆ. ನಿನ್ನ ತಾಯಿಯ ಯೋಗ್ಯತೆಯು ಈಗ ನಿನಗೆ ಇಷ್ಟು ಕ್ಷುಲ್ಲಕವಾಗಿ ತೋರಹತ್ತಿತಲ್ಲವೆ? ಹಾಗೇ ಆಗಲಿ. ನೀನು ಯಾವ ಒಳಸಂಚಿನೊಳಗೂ ಇಲ್ಲದಿದ್ದರೆ, ನೀನು ದಿನಾಲು ವಿಜಯನಗರದ ದರ್ಬಾರಕ್ಕೆ ಯಾಕೆ ಹೋಗುತ್ತಿರುವೆ? ನಿನ್ನೆ ರಾತ್ರಿ ಯಾರಿಗೂ ಹೇಳದೆ ಕೇಳದೆ ಎಲ್ಲಿಗೆ ಹೋಗಿದ್ದೆ? ಹೀಗೆ ನೀನು ಆಗಾಗ್ಗೆ ರಾತ್ರಿ ಹೊರಗೆ ಹೋಗುವದೇಕೆ?

ರಣಮಸ್ತಖಾನ—ಯಾಕಂದರೆ, ನನ್ನ ತಲೆಯ ಮೇಲೆ ಮೆಣಸು ಅರೆಯುವದಕ್ಕಾಗಿ ನಿಯಮಿಸಲ್ಪಟ್ಟಿರುವ ಮುಖ್ಯವಕೀಲನಾದ ಮಹಮೂದಖಾನನ ಅಪ್ಪಣೆಯನ್ನು ಮೀರ ಲಾರದ್ದಕ್ಕಾಗಿ ವಿಜಯನಗರದ ದರ್ಬಾರಕ್ಕೆ ಆಗಾಗ್ಗೆ ನಾನು ಹೋಗುತ್ತೇನೆ; ಮತ್ತು ರಾತ್ರಿ ನಿದ್ದೆ ಬಾರದಹಾಗಾಗಲು, ಹಲವು ವಿಚಾರಗಳು ಉತ್ಪನ್ನವಾಗಿ ಮನಸ್ಸು ವ್ಯಥೆಪಡುತ್ತದೆ. ಆ ವ್ಯಥೆಯನ್ನು ಸಮಾಧಾನ ಮಾಡಿಕೊಳ್ಳುವದಕ್ಕಾಗಿ ಎಲ್ಲಿಯಾದರೂ ತಿರುಗಾಡಲಿಕ್ಕೆ ಹೋಗುತ್ತೇನೆ. ಹೀಗೆ ತಿರುಗಾಡುವದರಿಂದ ಮನಸ್ಸಿಗೆ ಸಮಧಾನವಾಗುವ ಕಾರಣ ಯಾವಾಗಲೂ ರಾತ್ರಿ ಹೊರಗೆ ಹೋಗುತ್ತಿರುವೆನು!

ಮಾಸಾಹೇಬ—ಅಪ್ಪಾ, ರಣಮಸ್ತಾ ನೀನು ನನ್ನ ಸಂಗಡ ಇಷ್ಟು ಸ್ಪಷ್ಟವಾಗಿ ಮಾತಾಡೀಯೆಂದು ನಾನು ತಿಳಿದಿದ್ದಿಲ್ಲ. ಆಗಲಿ,ಹ್ಯಾಗಿದ್ದರೂ ಬಿಟ್ಟುಹೋಗುವ ಮಾತಲ್ಲ. ನಿನ್ನ ಹೊರತು ನನಗೆ ಗತಿಯಿಲ್ಲ. ಆದ್ದರಿಂದ ನಿನ್ನ ಮನಸ್ಸಿನಲ್ಲಿ ಬರುವ ವಿಚಾರಗಳಾದರೂ ಯಾವುವು ಹೇಳು. ಅವುಗಳ ಸಂಬಂಧದಿಂದ ನನಗೇನಾದರೂ ಉಪಾಯಗಳು ತೋಚಿದರೆ ಹೇಳುವೆನು. ನಾನು ನಿನ್ನ ಸುಖ–ದುಃಖಗಳ ಪಾಲುಗಾರಳಾಗಿರುವದಿಲ್ಲವೇ? ಸ್ವತಃ ನನ್ನ ಸುಖ–ದುಃಖ ಗಳೇನಿರುವುವು ಹೇಳು? ನಿನ್ನ ಸುಖ–ದುಃಖಗಳೇ ನನ್ನ ಸುಖ–ದುಃಖಗಳು! ಈ ಮಾತು ಚಿಕ್ಕಂದಿನಿಂದಲೂ ನಿನ್ನ ಅನುಭವಕ್ಕೆ ಬಂದಿದೆ. ಸಣ್ಣವನಿರುವಾಗ ನೀನು ಸುಖದಿಂದಿದ್ದರೆ ನಾನು ಸುಖದಿಂದಿರುತ್ತಿದ್ದೆನು, ನೀನು ದುಃಖದಿಂದಿದ್ದರೆ ನಾನು ದುಃಖದಿಂದಿರುತ್ತಿದ್ದೆನು. ಈಗ ಮಾತ್ರ ನಿನ್ನ ಸುಖ–ದುಃಖದ ಪಾಲನ್ನು ನನಗೆ ಯಾಕೆ ಕೊಡದಾದೆ?

ರಣಮಸ್ತಖಾನ–ಮಾಸಾಹೇಬ, ನಾನು ಅಜ್ಞಾನಿಯಾಗಿರುವ ತನಕ ನನ್ನ ಸುಖ–ದುಃಖದ ಪಾಲನ್ನು ನಿಮಗೆ ಕೊಡುವದು ಬಿಡುವದು ನನ್ನ ಕೈಯೊಳಗಿದ್ದಿಲ್ಲ. ಈಗ ನನಗೆ ಚೆನ್ನಾಗಿ ತಿಳಿಯುತ್ತದೆ. ನಾನು ತರಬರುವ ಹಾಗಾಗಿದ್ದೇನೆ. ನನಗೆ ಈಗಲೇಶವಾದರೂ ಸುಖವಿಲ್ಲದೆ ಬರಿಯ ದುಃಖವೇ ಆಗುತ್ತಿರಲು, ನಿಮ್ಮನ್ನು ಬರಿಯ ದುಃಖಕ್ಕೆ ಪಾಲುಗಾರರನ್ನಾಗಿ ನಾನು ಯಾಕೆ ಮಾಡಲಿ? ನಾನು ಸಣ್ಣವನಿರುವಾಗ ನನ್ನ ಬಾಲಲೀಲೆಯಿಂದ ನನಗೂ ನಿಮಗೂ ಕೂಡಿಯೇ ಸುಖವಾಗುತ್ತಿರಬಹುದು; ನನ್ನ ಬೇನೆ–ಬೇಸರಿಕೆಗಳಿಂದ ನಮಗೂ ನಿಮಗೂ ಕೂಡಿಯೇ ದುಃಖವಾಗುತ್ತಿರಬಹುದು; ಆದರೆ ನನಗೆ ಈಗ ಸುಖವಿಲ್ಲ. ಹೆಜ್ಜೆ–ಹೆಜ್ಜೆಗೆ ನನ್ನ ಮಾನಹಾನಿ ಯಾಗುತ್ತದೆ. ನನಗೆ ಬೇಕಾಗಿರುವ ವಸ್ತುವು ದೊರೆಯುವುದಿಲ್ಲ. ಇದರಿಂದ ನನ್ನ ಮನಸ್ಸು ಯಾವಾಗಲೂ ಉದ್ವಿಗ್ನವಾಗಿರುತ್ತದೆ. ಅಂದಬಳಿಕ ನನ್ನ ದುಃಖದ ಕಾರಣವನ್ನೆಲ್ಲ ನಿಮಗೆ ಹೇಳಿ ಸುಮ್ಮನೆ ನಿಮ್ಮ ಮನಸ್ಸನ್ನು ಯಾಕೆ ಉದ್ವಿಗ್ನವಾಗಿ ಮಾಡಬೇಕು? ನನ್ನ ಮಾರ್ಗದಲ್ಲಿರುವ ತೊಂದರೆಗಳು ನನಗೇ ಗೊತ್ತು, ಅವು ನಿಮಗೆ ಹ್ಯಾಗೆ.... (ನಡುವೆ ಅಷ್ಟಕ್ಕೆ ಸುಮ್ಮಾಗಿ ಮತ್ತೆ) ಇನ್ನು ಮುಂದೆ ನನ್ನ ಉಸಾಬರಿಯನ್ನು ಬಿಟ್ಟುಬಿಡಿರಿ. ಪರಮೇಶ್ವರನ ಚಿಂತನದಲ್ಲಿ ಕಾಲಹರಣ ಮಾಡುವ ನಿಮ್ಮ ಕ್ರಮವನ್ನು ಹಾಗೆಯೇ ನಡಿಸಿರಿ. ಅದರಿಂದಲೇ ನಿಮಗೆ ಸುಖವಾಗುವದು. ನನ್ನ ಬೆನ್ನುಹತ್ತುವದರಿಂದ ನಿಮಗೆ ಸುಖವಾಗಲಿಕ್ಕಿಲ್ಲ. ನನ್ನ ಕರ್ಮವನ್ನು ನಾನು ಭೋಗಿಸುವೆನು. ನನ್ನ ಚಿಂತೆಯನ್ನು ನೀವು ಬಿಟ್ಟುಬಿಡಿರಿ ನೋಡೋಣ. ನನ್ನಿಂದ ನಿಮಗೆ ಎಂದಿಗೂ ಸುಖವಾಗದು,

ಇನ್ನು ನಾನು ಹೋಗುವೆನು. ನೀವು ಕರೆದದ್ದರಿಂದ ನಾನು ನೆಟ್ಟಗೆ ಮೋರೆಯನ್ನು ಸಹ ತೊಳೆದುಕೊಳ್ಳದೆ ಹಾಸಿಗೆಯಿಂದ ಎದ್ದ ಕೂಡಲೇ ಹಾಗೆಯೇ ಬಂದಿದ್ದೇನೆ.

ಈ ಮೇರೆಗೆ ನುಡಿದು ರಣಮಸ್ತಖಾನನು ಎದ್ದು ಹೋಗಿಬಿಟ್ಟನು. ಆತನು ತನ್ನ ತಾಯಿಯ ಕಡೆಗೆ ಹೊರಳಿ ಸಹ ನೋಡಲಿಲ್ಲ. ಇದನ್ನು ನೋಡಿ ಮಾಸಾಹೇಬರು ಆಶ್ಚರ್ಯ ಮಗ್ನರಾಗಿ ಸ್ತಬ್ಧವಾಗಿ ಕುಳಿತುಬಿಟ್ಟರು! ತಾವು ಮಗನೊಡನೆ ನಡಿಸುವ ಸಂಭಾಷಣದ ಪರ್ಯವಸಾನವು ಹೀಗಾದೀತೆಂದು ಅವರಿಗೆ ತೋರಿದ್ದಿಲ್ಲ. ತಮ್ಮ ಮಗನು ತಮ್ಮ ಸಂಗಡ ಇಷ್ಟು ಔದಾಸೀನ್ಯದಿಂದಲೂ, ನೈಷ್ಠುರ್ಯದಿಂದಲೂ, ಕಠೋರತನದಿಂದಲೂ ನಡೆದುಕೊಂಡಾನೆಂದು ಅವರು ಕನಸು–ಮನಸುಗಳಲ್ಲಿ ಎಣಿಸಿದ್ದಿಲ್ಲ.ಅವರ ಕಲ್ಪನೆಗೆ ಮೀರಿದ ವಿಷಯವನ್ನು ಅವರು ಇಂದು ಕಣ್ಣಿನಿಂದ ನೋಡಿದರು, ಕಿವಿಯಿಂದ ಕೇಳಿದರು. ಮನಸ್ಸಿನಿಂದ ಅನುಭವಿಸಿದರು. ಅವರು ಅತ್ಯಂತ ಶೂನ್ಯಹೃದಯದವರಾದದ್ದರಿಂದ ಮಗನು ಹೊರಟುಹೋದದ್ದು ಸಹ ಅವರಿಗೆ ಗೊತ್ತಾಗಲಿಲ್ಲ. ಐದು ಪಳವಾಯಿತು, ಹತ್ತು ಪಳವಾಯಿತು, ಗಳಿಗೆಯಾಯಿತು, ನಾಲ್ಕು ಗಳಿಗೆಯಾಯಿತು, ಆದರೂ ಅವರು ಹಾಗೆಯೇ ಸ್ತಬ್ಧವಾಗಿ ಕುಳಿತಿದ್ದರು. ಮುಂದೆ ಅವರು ಎಚ್ಚತ್ತು ಮಗನ ಸ್ಥಿತಿಯನ್ನು ಕುರಿತು ಆಲೋಚಿಸತೊಡಗಿದರು. ಮಾಸಾಹೇಬರು ಒಳ್ಳೇ ಚತುರರು, ಬಹು ವಿಚಾರವಂತರು, ದೂರದರ್ಶಿಗಳು; ಶಾಂತಸ್ವಭಾವದವರು. ಅವರು ವಿಚಾರದ ಕೊನೆಯಲ್ಲಿ ತಮ್ಮ ಮಗನು ಬಾದಶಹನ ಸೇಡು ತೀರಿಸಿಕೊಳ್ಳುವದಕ್ಕಾಗಿ ರಾಮರಾಜನ ಸಂಗಡ ಒಳಸಂಚು ನಡೆಸಿರುವದೇ ನಿಶ್ಚಯವೆಂದು ತರ್ಕಿಸಿ, ಅದರ ಶೋಧದ ಉಪಾಯಗಳನ್ನು ಯೋಚಿಸಹತ್ತಿದರು!

## ದುಃಸ್ವಪ್ನವು

ವಾಚಕರು ಮಾಸಾಹೇಬರ ಇಲ್ಲಿಯವರೆಗಿನ ಆಚರಣೆಯನ್ನು ನೋಡಿರುವದರಿಂದ, ಅವರ ಯೋಗ್ಯತೆಯನ್ನು ಕುರಿತು ಹೆಚ್ಚಿಗೆ ಬರೆಯಲವಶ್ಯವಿಲ್ಲ. ಮಾಸಾಹೇಬರು ಒಮ್ಮೆ ನಿಶ್ಚಯ ಮಾಡಿದರೆಂದರೆ, ತಿರುಗಿ ಹಿಂದಕ್ಕೆ ಸರಿಯುತ್ತಿದ್ದಿಲ್ಲ. ತಮ್ಮ ಮಗನ ಕೃತಿಗಳನ್ನು ಗುಪ್ತರೀತಿಯಿಂದ ನೋಡಿ ಆತನ ಒಳಸಂಚಿನ ಸ್ವರೂಪವನ್ನು ತಿಳಿದುಕೊಳ್ಳಬೇಕೆಂದು ನಿಶ್ಚಯಿಸಿದ ಕೂಡಲೆ ಅವರು ರಣಮಸ್ತಖಾನನ ನಂಬಿಗೆಯ ಸೇವಕನಾದ ನಜೀರನನ್ನು ಕರೆಯಿಸಿ ಆತನಿಂದ ಆಣೆಮಾಡಿಸಿ, ಆತನಿಗೆ ತಮ್ಮ ಆಣೆಯನ್ನಿಟ್ಟು ಆತನನ್ನು ಕುರಿತು, "ನಜೀರ, ನಾನು ಈಗ ಹೇಳುವ ಕೆಲಸವನ್ನು ರಣಮಸ್ತಖಾನನಿಗೆ ಗೊತ್ತಾಗದಂತೆ ನೀನು ಮಾಡತಕ್ಕದ್ದು" ಎಂದು ಹೇಳಿದರು. ಮಾಸಾಹೇಬರ ಮೇಲೆ ಎಲ್ಲ ಜನರ ಭಕ್ತಿಯು. ಅವರ ಆಜ್ಞೆಗಳನ್ನು ಪಾಲಿಸಲಿಕ್ಕೆ ಎಲ್ಲರೂ ಆತುರರು. ಬಹಳವೇಕೆ, ಅವರ ಅಪ್ಪಣೆಯನ್ನು ಪಾಲಿಸುವ ಪ್ರಸಂಗವು ಬರಬಹುದೋ ಎಂದು ಎಲ್ಲರೂ ಹಾದಿಯನ್ನೇ ನೋಡುತ್ತಿದ್ದರೆಂದು ಹೇಳಬಹುದು. ಅಂದಬಳಿಕ ನಜೀರನು

ಮಾಸಾಹೇಬರ ಅಪ್ಪಣೆಯನ್ನು,ಅದರಲ್ಲೂ ಅವರು ಆಣೆಯಿಟ್ಟುಮಾಡಿದ ಅಪ್ಪಣೆಯನ್ನು ಈಗ ಹ್ಯಾಗೆ ಪಾಲಿಸದೆಯಿದ್ದಾನು? ಆತನು ಸಾಹೇಬರನ್ನು ಕುರಿತು—''ಮಾಸಾಹೇಬರೇ, ತಾವು ಹೇಳಿದರೆ ಪ್ರಾಣವನ್ನರ್ಪಿಸಲಿಕ್ಕೂ ನಾನು ಸಿದ್ಧನಿರುವಾಗ, ಉಳಿದ ಕೆಲಸಗಳ ಪಾಡೇನು? ತಾವು ಹೇಳುವದೊಂದೇ ತಡ. ಇನ್ನು ಗೌಪ್ಯವಾಗಿಡುವ ಸಂಬಂಧದಿಂದ ಕೇಳಿದರೆ, ಈ ನಾಲಿಗೆಯು ಆ ಮಾತನ್ನು ಎಂದಿಗೂ ಉಚ್ಚರಿಸಲಿಕ್ಕಿಲ್ಲ. ಬೇಕಾದರೆ ನಿಮ್ಮ ನಂಬಿಗೆಗಾಗಿ ನನ್ನ ನಾಲಿಗೆಯನ್ನು ಕಿತ್ತಿ ಈಗ ನಿಮ್ಮ ಮುಂದೆ ಇಡುತ್ತೇನೆ'' ಎಂದು ಹೇಳಿದನು. ನಜೀರನ ಈ ಮಾತುಗಳನ್ನು ಕೇಳಿ ಮಾಸಾಹೇಬರಿಗೆ ಬಹಳ ಸಂತೋಷವಾಯಿತು. ಅವರು ನಜೀರನಿಗೆ—''ನೀನು ಅಂಥ ಮನುಷ್ಯನೆಂತಲೇ ನಿನ್ನನ್ನು ಕರೆಸಿದ್ದೇನೆ. ಕೆಲಸವೇನು ಬಹಳವಿಲ್ಲ. ಇಂದಿನ ರಾತ್ರಿಯಲ್ಲಿ ಅಥವಾ ನಾಳಿನ ರಾತ್ರಿಯಲ್ಲಿ ನಿಮ್ಮ ಒಡೆಯನು ಹೊರಬಿದ್ದ ಕೂಡಲೆ, ನೀನು ಆತನಿಗೆ ಗೊತ್ತಾಗದಂತೆ ಆತನ ಬೆನ್ನಹತ್ತಿಹೋಗಿ ಆತನು ಯಾವ ದಿಕ್ಕಿಗೆ ಹೋಗುತ್ತಾನೆಂಬುದನ್ನು ನನಗೆ ಬಂದು ಹೇಳು. ಆತನು ಕುದುರೆಯ ಮೇಲಿಂದ ಹೋಗುವವನು,ನೀನು ಕಾಲಲ್ಲಿ ನಡೆದು ಹೋಗುವವನು; ಆದ್ದರಿಂದ ದಿಕ್ಕುನೋಡಿಕೊಂಡು ಬರುವದರ ಹೊರತು ಹೆಚ್ಚಿನ ಕೆಲಸವೇನೂ ನಿನ್ನಿಂದ ಆಗಲಿಕ್ಕಿಲ್ಲ; ಕುದುರೆ ಹತ್ತಿಹೋಗುವಂತೆ ನಿನಗೆ ನಾನು ವ್ಯವಸ್ಥೆ ಮಾಡಿಕೊಡುತ್ತಿದ್ದೆನು. ಆದರೆ ರಾತ್ರಿಯಲ್ಲಿ ಅದು ರಣಮಸ್ತಖಾನನಿಗೆ ಗೊತ್ತಾಗದೆ ಹೋಗಲಿಕ್ಕಿಲ್ಲ. ಆದ್ದರಿಂದ ಕಾಲಿನಿಂದ ನಡೆದು ಹೋಗಲಿಕ್ಕೆ ಶಕ್ಯವಿದ್ದ ಮಟ್ಟಿಗೆ ನೀನು ನಡೆದುಹೋಗಿ, ದಿಕ್ಕನ್ನಷ್ಟು ತಿಳಿದುಕೊಂಡು ಬಾ, ಆಮೇಲೆ ಏನು ಮಾಡಬೇಕೆಂಬದನ್ನು ನಿನಗೆ ಹೇಳುತ್ತೇನೆ'' ಎಂದು ಹೇಳಿದರು.

ನಜೀರನು ಮಾಸಾಹೇಬರಮಾತಿಗೆ ಸಂತೋಷದಿಂದ ಒಪ್ಪಿಕೊಂಡು ಹೋದನು; ಆದರೆ ಮಾಸಾಹೇಬರು ಅಷ್ಟಕ್ಕೆ ಸ್ವಸ್ಥವಾಗಿ ಕುಳಿತುಕೊಳ್ಳಲಿಲ್ಲ. ನಜೀರನು ಹೇಳುವ ಸುದ್ದಿಯು ನಿಜವೆಂಬುದನ್ನು ಬೇರೆ ಸಾಕ್ಷಿಯಿಂದ ಮನಗಾಣುವದು ಅವಶ್ಯವೆಂದು ತಿಳಿದು, ಅವರು ತಮ್ಮ ಸೇವಕರಲ್ಲಿ ನಂಬಿಗೆಯವನಾದ ಕರೀಮಭಕ್ಷನೆಂಬವನನ್ನು ಕರೆದು ಅವನಿಗೊಂದು ಕೆಲಸವನ್ನು ಒಪ್ಪಿಸಿದರು. ಆತನು ಈ ದಿನ ಸಂಜೆಗೇ ವಿಜಯನಗರದ ಅರ್ಧ ಹಾದಿಯ ಮೇಲೆ ಎಲ್ಲಿಯಾದರೂ ಕುಳಿತು, ರಣಮಸ್ತಖಾನನು ರಾತ್ರಿ ಆ ಹಾದಿಯಿಂದ ಹೋಗುವನೋ ಹೇಗೆಂಬದನ್ನು ತಿಳಿದು ಬಂದು ಮಾಸಾಹೇಬರಿಗೆ ಹೇಳಬೇಕಾಯಿತು. ಕರೀಮಬಕ್ಷನೂ ಮಸಾಹೇಬರ ಮಾತಿಗೆ ಸಂತೋಷದಿಂದ ಒಪ್ಪಿಕೊಂಡು, ಇಳಿಯ ಹೊತ್ತಾದ ಕೂಡಲೆ ವಿಜಯನಗರದ ಹಾದಿಯನ್ನು ಹಿಡಿದನು. ಇವರಿಬ್ಬರೂ ತಮ್ಮ ಮಾತಿಗೆ ಒಪ್ಪಿಕೊಂಡದ್ದಕ್ಕಾಗಿ ಮಾಸಾಹೇಬರಿಗೆ ಬಹಳ ಸಂತೋಷವಾಯಿತು. ಯಾವಾಗ ಹೊತ್ತು ಮುಣುಗೀತೆಂದು ಅವರು ಹಾದಿಯನ್ನು ನೋಡುತ್ತ ಕುಳಿತುಕೊಂಡರು. ಇಂದು ಅವರಜಪ–ತಪಗಳೆಲ್ಲ ಹಿಂದಕ್ಕೆ ಬಿದ್ದುವು. ಪುತ್ರದೇವನ ಮುಂದೆ ಯಾವ ದೇವರೂ ಸುಳಿಯದಾದರು! ಮಗನು ರಾಮರಾಜನ ಪಾಶದಲ್ಲಿ ಸಿಕ್ಕಿಕೊಂಡನೆಂದು ಅವರು ತಿಳಿದುಕೊಂಡು ಬಿಟ್ಟಿದ್ದರು. ಅದನ್ನು ಪರೀಕ್ಷಿಸಿ ನೋಡಲಿಕ್ಕೆ ಅವರು ಆತುರಪಡುತ್ತಲಿದ್ದರು. ಅವರ ಮನಸ್ಸು ಬಹಳ ಚಂಚಲವಾಯಿತು. ಅವರ ಮನಸ್ಸಿನ

ಈ ಸ್ಥಿತ್ಯಂತರವು ಲೈಲಿಗೆ ಗೊತ್ತಾಯಿತು; ಆದರೆ ಕಾರಣವನ್ನು ಈಗೆಯೇ ಯಾಕೆ ಕೇಳಬೇಕು. ಸಂಜೆಗಿಂಜೆ ಮುಂದೆ ಮಾಸಾಹೇಬರನ್ನು ಕೇಳೋಣವೆಂದು ಆಕೆಯು ಸುಮ್ಮನೆಯಿದ್ದಳು. ಮುಂದೆ ಆಕೆಗೆ ಕೇಳಲಿಕ್ಕೆ ಆಸ್ಪದವೇ ದೊರೆಯಲಿಲ್ಲ. ಹೊತ್ತು ಮುಳುಗಿ ಸ್ವಲ್ಪ ರಾತ್ರಿಯಾದ ಕೂಡಲೆ ಮಾಸಾಹೇಬರ ಮನಸ್ಸಿಗೆ ಏನು ಹೊಳೆಯಿತೋ ಏನೋ, ಅವರು ಲೈಲಿಗೆ ಇಂದು ಹಗಲೆಲ್ಲ ಜಪಮಾಡಲಿಕ್ಕೆ ನನಗೆ ಅನುಕೂಲವಾಗಲಿಲ್ಲ; ಆದ್ದರಿಂದ ನಾನು ಈಗ ನನ್ನ ಕೋಣೆಯಲ್ಲಿ ಹೋಗಿ ಕುಳಿತುಕೊಳ್ಳುತ್ತೇನೆ. ನನ್ನನ್ನು ಕರೆಯಲಿಕ್ಕೆ, ಇಲ್ಲವೆ ನನ್ನನ್ನೇನಾದರೂ ಕೇಳಲಿಕ್ಕೆ ನೀನು ಸರ್ವಥಾ ಬರಬೇಡ—ಎಂದು ಹೇಳಿ, ಕೋಣೆಯೊಳಗೆ ಹೋಗಿ ಬಾಗಿಲು ಹಾಕಿ ಕೊಂಡು ಕುಳಿತುಕೊಂಡು ಬಿಟ್ಟರು ! ಆಯಿತು, ಲೈಲಿಯು ಸಂಜೆಯ ಮುಂದೆ ಕೇಳಬೇಕೆಂದಿದ್ದು ಅಲ್ಲಿಯೇ ಉಳಿಯಿತು. ಲೈಲಿಯು ಕೆಲಸ ಬೊಗಸೆಗಳನ್ನೆಲ್ಲ ತೀರಿಸಿಕೊಂಡು, ದಿನಾಲು ತಾನು ಮಲಗಿಕೊಳ್ಳುವ ಸ್ಥಳದಲ್ಲಿ ಬಂದು ಬಿದ್ದುಕೊಂಡಳು. ಲೈಲಿಯಾದರೂ ಸಾಧಾರಣ ಯೋಗ್ಯತೆಯ ಮನುಷ್ಯಳಿದ್ದಿಲ್ಲ. ಆಕೆಯು ಬಹುಜನ ಸಾಧು–ಸತ್ಪುರುಷರ ಬಳಿಯಲ್ಲಿದ್ದವಳಾದ್ದರಿಂದ ಸುಜ್ಞಳಿದ್ದಳು. ಆದರೆ ಸ್ವಲ್ಪ ಪುಕ್ಕ ಸ್ವಭಾವದವಳು. ಆಕೆಗೆ ಸಂಕೋಚ ಬಹಳ. ತಾನು ಮಾಸಾಹೇಬರನ್ನು ಚಿಕ್ಕದಿನಿಂದ ಎತ್ತಿ ಆಡಿಸಿದವಳಾಗಿದ್ದರೂ,ಅವರ ಮೇಲೆ ಹೊಟ್ಟೆಯ ಮಕ್ಕಳಿಗಿಂತ ಆಕೆಯು ಹೆಚ್ಚು ಪ್ರೀತಿಯನ್ನು ಮಾಡುತ್ತಿದ್ದರೂ, ಮಾಸಾಹೇಬರ ತೇಜಸ್ಸಿಗೆ ಆಕೆಯು ಅಂಜುತ್ತಿದ್ದಳು. ಪ್ರಸಂಗದಲ್ಲಿ ಒಮ್ಮೆ ಬಾಯಿಬಿಟ್ಟಳೆಂದರೆ ಮಾಸಾಹೇಬರ ಹಂಗು ಇಲ್ಲದೆ ನಿಜವಾದ ಸಂಗತಿಯನ್ನು ಸ್ಪಷ್ಟವಾಗಿ ಹೇಳಲಿಕ್ಕೆ ಲೈಲಿಯು ಹಿಂದು–ಮುಂದು ನೋಡುತ್ತಿದ್ದಿಲ್ಲ; ಆದರೆ ಎಲ್ಲ ಪ್ರಸಂಗದಲ್ಲಿ ದಿಟ್ಟತನದಿಂದ ಮಾಸಾಹೇಬರನ್ನು ಹಾಗೆ ತಟ್ಟನೆ ಕೇಳುವ ಧೈರ್ಯವು ಆಕೆಗೆ ಆಗುತ್ತಿದ್ದಿಲ್ಲ. ಮಾಸಾಹೇಬರಾದರೂ ಲೈಲಿಯ ಯೋಗ್ಯತೆಯನ್ನು ಅರಿತಿದ್ದರು. ಆಕೆಯು ಬಹುಶ್ರುತಳೆಂತಲೂ, ಸುಜ್ಞಳೆಂತಲೂ ತಿಳಿದು ಆಕೆಯ ವಿಷಯವಾಗಿ ಅವರು ಆದರ ಭಾವವುಳ್ಳವರಾಗಿದ್ದರು. ಆದರೆ ಸಲಿಗೆಯಿಂದ ಒಮ್ಮೊಮ್ಮೆ ಆಕೆಯ ಹಂಗನ್ನು ಅವರು ಎಷ್ಟು ಮಾತ್ರವೂ ಇಡುತ್ತಿದ್ದಿಲ್ಲ. ಇರಲಿ ಲೈಲಿಗೆ ಸ್ವಲ್ಪಹೊತ್ತಿನಲ್ಲಿ ನಿದ್ರೆಹತ್ತಿತು. ಮಾಸಾಹೇಬರು ಜಪಮಾಡುವದನ್ನು ಬಿಟ್ಟು, ಮಗನು ಈ ದಿನ ಹೊರಗೆ ಹೋಗಿರಬಹುದೋ ಎಂದು ಚಡಪಡಿಸುತ್ತ ಕುಳಿತುಕೊಂಡಿದ್ದರು. ಅವರಿಗೆ ಹಿಂದಿನ ವೃತ್ತಾಂತವೆಲ್ಲ ನೆನಪಾಗಿತ್ತು. ಅವರು ವಿಚಾರ ಮಾಡಿಮಾಡಿ ದಣಿದು ಮಲಗಿಕೊಂಡರು; ಆದರೆ ಅವರಿಗೆ ನಿದ್ರೆಯು ಬರಲೊಲ್ಲದು. ಅವರು ಹಲವು ಸಾರೆ ಕಿಡಿಕಿಯಲ್ಲಿ ಹಣಿಕಿ ನೋಡಿದರು. ಸ್ವಚ್ಛವಾದ ಬೆಳದಿಂಗಳಲ್ಲಿ ಯಾರಾದರೂ ಹೋಗುವುದು ಕಂಡರೆ ನೋಡಬೇಕೆಂತಲೂ, ಯಾರಾದರೂ ಹೋಗುವ ಸಪ್ಪಳವು ಕಿವಿಗೆ ಬಿದ್ದರೆ ಕೇಳಬೇಕೆಂತಲೂ ಅವರು ಆತುರಪಡುತ್ತಿದ್ದರು. ಅಂದು ಅವರ ಮನಸ್ಸಿನ ಸ್ಥಿತಿಯು ವಿಲಕ್ಷಣವಾಗಿತ್ತು.

ಇತ್ತ ಅದೇ ರಾತ್ರಿ ರಣಮಸ್ತಖಾನನು ತನ್ನ ಕೋಣೆಯಲ್ಲಿ ಅಸಮಾಧಾನದಿಂದ ಹಾಸಿಗೆಯ ಮೇಲೆ ಹೊರಳಾಡುತ್ತಿದ್ದನು. ಇಂದು ಮುಂಜಾನೆ ಮಾಸಾಹೇಬರ ಸಂಗಡ ಬಹು

ನಿಷ್ಠುರತನದಿಂದ ನಡೆದುಕೊಂಡನೆಂಬ ಬಗ್ಗೆ ಆತನಿಗೆ ಬಹಳ ಪಶ್ಚಾತ್ತಾಪವಾಗಿತ್ತು. ಆದರೂ ತಾನು ಹೀಗೆ ನಡೆಯದಿದ್ದರೆ ನಿರ್ವಾಹವೇ ಇದ್ದಿಲ್ಲೆಂದು ಆತನು ಸಮಾಧಾನಮಾಡಿ ಕೊಳ್ಳುತ್ತಿದ್ದನು. ನೂರಜಹಾನಳ ವೃತ್ತಾಂತವೆಲ್ಲ ಆತನ ಕಣ್ಣುಮುಂದೆ ಕಟ್ಟಿದಂತೆ ಆಗಿ, ತಾನು ಯಾವ ಉಪಾಯದಿಂದ ನೂರಜಹಾನಳ ಲಗ್ನವಾಗಬೇಕಾದೀತೆಂದು ಆತನು ಆಲೋಚಿಸ ತೊಡಗಿದನು. ಆ ಕಾರ್ಯಕ್ಕೆ ತಾನು ಈಗ ರಾಮರಾಜನೊಡನೆ ನಡೆಸುವ ಒಳಸಂಚೇ ಅನುಕೂಲವಾದದ್ದೆಂದು ಆತನು ನಿರ್ಧರಿಸಿದನು. ಅಷ್ಟರಲ್ಲಿ ರಾತ್ರಿಯು ಐದು ತಾಸಿಗೆ ಬಂದಿತ್ತು. ಕೂಡಲೆ ರಣಮಸ್ತಖಾನನು ತನ್ನ ಸೇವಕನಾದ ನಜೀರನನ್ನು ಕರೆದು— ಹೋಗು, ಅಲೀಖಾನನಿಗೆ ನನ್ನ ಕುದುರೆಯನ್ನು ಜೀನು ಹಾಕಿಕೊಂಡು ನಿನ್ನಿನ ಸ್ಥಳದಲ್ಲಿ ನಿಲ್ಲಿಸೆಂದು ಹೇಳು. ನಾನು ಇಂದೂ ನಿನ್ನಿನಂತೆಯೇ ಹೊರಗೆಹೋಗುತ್ತೇನೆ. ಬೆಳಗುಮುಂಜಾನೆ ಬರುವೆನು. ಮಾಸಾಹೇಬರು ಕದಾಚಿತ್ ಇಂದು ನನ್ನ ಶೋಧಮಾಡಬಹುದು. ಅವರಿಗೆ ನಾನು ಮಲಗಿಕೊಂಡಿರುವೆನೆಂದು ಹೇಳು. ಅವರು ನನ್ನನ್ನು ಎಬ್ಬಿಸಹೇಳಿದರೆ, 'ಯಾರು ಎಬ್ಬಿಸೆಂದರೂ ಎಬ್ಬಿಸಬೇಡೆಂದು' ಸಕ್ತ ತಾಕಿತಮಾಡಿ ಮಲಗಿರುತ್ತಾರೆಂದು ಹೇಳಿಬಿಡು, ಎಂದು ಹೇಳಿದನು. ನಜೀರನಿಗೆ ಇಷ್ಟೆ ಬೇಕಾಗಿತ್ತು. ಅವನು ಅಲೀಖಾನನ ಬಳಿಗೆ ಓಡುತ್ತ ಹೋಗಿ ರಣಮಸ್ತಖಾನನ ಅಪ್ಪಣೆಯನ್ನು ತಿಳಿಸಿದನು. ಈ ಸುದ್ದಿಯನ್ನು ಮಾಸಾಹೇಬರ ಮುಂದೆ ಯಾವಾಗ ಹೇಳೇನೆನ್ನುವ ಹಾಗೆ ನಜೀರನಿಗೆ ಆಗಿತ್ತು. ಆತನು ಈಗಲೇ ಈ ಸುದ್ದಿಯನ್ನು ಮಾಸಾಹೇಬರಿಗೆ ತಿಳಿಸಿ ಹೋಗಬೇಕೆಂಬ ಉಬ್ಬಿನಿಂದ, ರಣಮಸ್ತಖಾನನ ಬಂಗಲೆಯ ಕಡೆಗೆ ಹೋಗದೆ, ಮಾಸಾಹೇಬರ ಮನೆಯ ಕಡೆಗೆ ತಿರುಗಿದನು. ಅವನು ಹೋಗುವದರೊಳಗೆ ಮಾಸಾಹೇಬರು ಬಾಗಿಲು ಹಾಕಿಕೊಂಡು ಕುಳಿತಿದ್ದರು. ಲೈಲಿಯು ಹೊರಗೆ ಗೊರಿಕೆ ಹೊಡೆಯುತ್ತ ಮಲಗಿಕೊಂಡಿದ್ದಳು. ಮಾಸಾಹೇಬರು ಕೋಣೆಯಲ್ಲಿರುವಾಗ ಕರೆಯಲಾಗದೆಂದು ನಜೀರನಿಗೆ ಗೊತ್ತಿದ್ದರೂ, ಆತನು ಗೌರವದಿಂದ ಮಾಸಾಹೇಬರ ಬಾಗಿಲನ್ನು ನೂಕಿದನು. ಕೂಡಲೆ ಮಾಸಾಹೇಬರು— ''ಯಾರವರು?'' ಎಂದು ಕೇಳಲು, ''ನಾನು ನಜೀರನು'' ಎಂಬ ಉತ್ತರವು ಮಾಸಾಹೇಬರ ಕಿವಿಗೆ ಬಿದ್ದಿತು. ಕೂಡಲೆ ಮಾಸಾಹೇಬರು ಬಾಗಿಲು ತೆರೆದು ನಜೀರನಿಗೆ ''ಯಾಕೋ? ಏನಾದರೂ ವಿಶೇಷ ಸುದ್ದಿಯು?'' ಎಂದು ಕೇಳಿದ ಕೂಡಲೆ, ನಜೀರನು ಖಾನಸಾಹೇಬರು ನಿನ್ನಿನಂತೆಯೇ ಇಂದೂ ಹೊರಗೆ ಹೋಗುವವರಿದ್ದಾರೆ. ಅವರ ಅಪ್ಪಣೆಯಂತೆ ಅಲಿಖಾನನಿಗೆ ಕುದುರೆಯನ್ನು ಜೀನುಹಾಕಿ ಸಂಕೇತಸ್ಥಳದಲ್ಲಿ ತಂದು ನಿಲ್ಲಿಸೆಂದು ಇದೇ ಈಗ ನಾನೇ ಹೇಳಿ ಬಂದೆನು. ನನಗೆ ಖಾನಸಾಹೇಬರು ಸಖ್ತತಾಕಿದ ಮಾಡಿದ್ದಾರೆ. ಯಾರು ಬಂದು ಕೇಳಿದರೂ, ಸ್ವತಃ ನೀವು ಬಂದು ಕೇಳಿದರೂ ಒಳಗೆ ಮಲಗಿಕೊಂಡಿರುತ್ತಾರೆಂದು ಹೇಳಬೇಕಂತೆ. ಈ ಸುದ್ದಿಯನ್ನು ನಿಮಗೆ ಹೇಳಿಹೋಗಬೇಕೆಂದು ಬಂದೆನು, ಎಂದು ಹೇಳಿದನು. ಅದಕ್ಕೆ ಮಾಸಾಹೇಬರು ಉತ್ಸಾಹದಿಂದ— ''ಶಾಬಾಸ ! ಶಾಬಾಸ! ಇನ್ನು ನೀನು ಆತನಿಗೆ ತಿಳಿಯದ ಹಾಗೆ ಆತನ ಬೆನ್ನಹತ್ತಿ ಹೋಗಿ ಆತನು ಯಾವ ದಿಕ್ಕಿಗೆ ಹೋಗುತ್ತಾನೆಂಬದನ್ನು ನನಗೆ ಬಂದು ಹೇಳು'' ಎಂದು ನಜೀರನನ್ನು ಪ್ರೋತ್ಸಾಹಿಸಿ ಕಳಿಸಿಕೊಟ್ಟರು. ನಜೀರನಿಗೆ ಇಂದು ಮೈಯಲ್ಲಿ ಒಂದು ಬೆರಳು ಮಾಂಸ ಬಂದಹಾಗಾಯಿತು.

ಇತ್ತಿತ್ತ ರಣಮಸ್ತಖಾನನ ಸ್ವಭಾವವು ಬಹು ಸಂಶಯಗ್ರಸ್ತವಾಗಿತ್ತು; ಆತನು ಹೊರಗೆ ಹೊರಡುವದಕ್ಕಾಗಿ ಉಡುಪು-ತೊಡಪುಗಳನ್ನು ಧರಿಸಬೇಕಾದ್ದರಿಂದ ನಜೀರನ ಹಾದಿಯನ್ನು ನೋಡಹತ್ತಿದ್ದನು. ಸುದ್ದಿ ಹೇಳಬರಲಿಕ್ಕೆ ನಜೀರನಿಗೆ ಇಷ್ಟು ಹೊತ್ತು ಬೇಡೆಂಬದು ಸಹ ಆತನ ಮನಸ್ಸಿನಲ್ಲಿ ತಟ್ಟನೆ ಬಂದಿತು. ನಜೀರನು ಬಂದಕೂಡಲೆ ಆತನನ್ನು ಕುರಿತು ರಣಮಸ್ತಖಾನನು— ''ಬರಿಯ ಸುದ್ದಿಯನ್ನು ಹೇಳಿ ಬರಲಿಕ್ಕೆ ಇಷ್ಟುಹೊತ್ತು ಯಾಕೆ?'' ಎಂದು ಕೇಳಿದನು. ಕೂಡಲೆ ನಜೀರನ ಮೋರೆಯು ಕಪ್ಪಿಟ್ಟಿತು. ಆತನಿಗೆ ಏನು ಹೇಳಬೇಕೆಂಬುದು ತಿಳಿಯದಾಯಿತು; ಅಷ್ಟರಲ್ಲಿ ರಣಮಸ್ತಖಾನನೇ ನಜೀರನಿಗೆ—''ಹೊತ್ತಿಲ್ಲ ವೇಳೆಯಿಲ್ಲ; ತಂಬಾಕದ ಝುರಕೆಗಳನ್ನು ಹೊಡೆಯುತ್ತ ಕುಳಿತುಕೊಂಡಿದ್ದೆಯೊದೀತು, ಮತ್ತೇನಿದೆ?'' ಎಂದನು. ಇದು ಅನಾಯಾಸವಾಗಿ ನಜೀರನ ಹೊತ್ತಿಗೆ ಬಿದ್ದಿತು. ಆತನು ದೇಶಾವರಿಯ ನಗುವನ್ನು ನಗುತ್ತ ರಣಮಸ್ತಖಾನನ ಉಡಪು-ತೊಡಪುಗಳನ್ನು ತಂದು ಕೊಡಹತ್ತಿದನು. ರಣಮಸ್ತಖಾನನು ಅವಸರದಿಂದ ಪೋಷಾಕು ಹಾಕಿಕೊಂಡನು. ಆತನು ಪುನಃ ನಜೀರನಿಗೆ— ''ನಾನು ಎಲ್ಲಿಗೆ ಹೋದೆನೆಂಬದನ್ನು ಮಾಸಾಹೇಬರಿಗೆ ತಿಳಿಸಬೇಡ'' ಎಂದು ಗಟ್ಟಿಯಾಗಿ ಹೇಳಿ, ಅಲಿಖಾನನು ಸಂಕೇತಸ್ಥಳದಲ್ಲಿ ನಿಲ್ಲಿಸಿದ್ದ ಕುದುರೆಯನ್ನು ಹತ್ತಿ ಹಾದಿಯ ಹಿಡಿದನು. ನಜೀರನು ಕಾಲಲ್ಲಿ ಬಲು ಹಗುರು ಇದ್ದನು. ರಣಮಸ್ತಖಾನನಾದರೂ ಕುದುರೆಯನ್ನು ಸಾವಕಾಶವಾಗಿ ಬಿಟ್ಟಿದ್ದನು; ಆದ್ದರಿಂದ ನಜೀರನಿಗೆ ರಣಮಸ್ತಖಾನನ ಬೆನ್ನುಹತ್ತಿ ಹೋಗಿ ಆತನು ಯಾವ ದಿಕ್ಕಿಗೆ ಹೋಗುತ್ತಾನೆಂಬುದನ್ನು ನೋಡಿಕೊಳ್ಳಲಿಕ್ಕೆ ಬಹಳ ಅನುಕೂಲವಾಯಿತು. ರಣಮಸ್ತಖಾನನು ವಿಜಯನಗರದ ದಿಕ್ಕನ್ನೇ ಹಿಡಿದಿದ್ದನು. ಆದಷ್ಟು ಗಟ್ಟಿಮುಟ್ಟಿಯಾಗಿ ಗೊತ್ತಾದ ಕೂಡಲೆ ನಜೀರನು ಹಿಂದಿರುಗಿ ಮಾಸಾಹೇಬರ ಬಳಿಗೆ ಹೋಗಿ ಆ ಸುದ್ದಿಯನ್ನು ಹೇಳಿದನು. ಅದನ್ನು ಕೇಳಿ ಮಾಸಾಹೇಬರ ಚಿತ್ತವೃತ್ತಿಯು ವಿಲಕ್ಷಣವಾಯಿತು; ಆದರೂ ಅದನ್ನೇನು ಹೊರಗೆ ತೋರಗೊಡದೆ ಅವರು ನಜೀರನನ್ನು ಹೊಗಳಿ—''ಹೋಗು, ಓಡಿ ಓಡಿ ದಣಿದಿರುತ್ತೀ, ಮಲಗಿಕೋ. ಇನ್ನು ಮೇಲೆ ರಣಮಸ್ತಖಾನನು ಯಾವಾಗ ಬರುತ್ತಾನೆಂಬದನ್ನು ನನಗೆ ಬೆಳಗಾದ ಬಳಿಕ ಯಾವಾಗಾದರೂ ಹೇಳು '' ಎಂದ ಹೇಳಿದರು. ನಜೀರನು ಬಹಳ ಆನಂದಪಟ್ಟನು. ''ತಪ್ಪದೆ ಹೇಳುತ್ತೇನೆ'' ಎಂದು ಹೇಳಿ ಆತನು ಹೊರಟುಹೋದನು. ಮಾಸಾಹೇಬರ ಚಿತ್ತವು ಅತ್ಯಂತ ಅಸ್ವಸ್ಥವಾಯಿತು. ರಣಮಸ್ತಖಾನನ ಬೆನ್ನುಹತ್ತಿ ಅಶ್ವಾರೂಢಳಾಗಿ ನಾನೇ ಹೋಗಲಾ, ಅನ್ನುವ ಹಾಗೆ ಅವರಿಗೆ ಆಯಿತು; ಆದರೆ ಹಾಗೆ ಮಾಡಲಿಕ್ಕೆ ಬರುವ ಹಾಗಿದ್ದಿಲ್ಲ; ಇದಲ್ಲದೆ ಅವರು ಕರೀಮಬಕ್ಷನನ್ನು ವಿಜಯನಗರದ ಅರ್ಧಹಾದಿಯ ಮೇಲೆ ಕುಳಿತಿರುವಂತೆ ನಿಯಮಿಸಿ ಕಳಿಸಿದ್ದರು. ಆತನು ಮುಂಜಾನೆ ಬಂದು ಸುದ್ದಿಯನ್ನು ಹೇಳಿದ ಬಳಿಕ ಏನು ಮಾಡತಕ್ಕದನ್ನು ಮಾಡೋಣವೆಂದು ಅವರು ನಿಶ್ಚಯಿಸಿದರು. ವಿಚಾರ ಮಾಡಿ ಮಾಡಿ ಅವರಿಗೆ ದಣಿವಿಕೆ ಬಂದಹಾಗಾದ್ದರಿಂದ ಅವರು ಹಾಸಿಗೆಯ ಮೇಲೆ ಹೋಗಿ ಬಿದ್ದುಕೊಂಡರು; ಆದರೆ ಅವರಿಗೆ ನಿದ್ದೆ ಬರಲೊಲ್ಲದು! ಜೀವಕ್ಕೆ ಬಹಳ ತಾಪವಾಗಹತ್ತಿತು. ಹೀಗೆ ಕೆಲವು ಹೊತ್ತು

ತಳಮಳಿಸುತ್ತಿರಲು, ಬೆಳಗು ಮುಂಜಾನೆ ಅವರಿಗೆ ಸ್ವಲ್ಪ ನಿದ್ದೆ ಹತ್ತಿದ ಹಾಗಾಗಿ,ಅವರು ವಿಲಕ್ಷಣ ಕನಸನ್ನು ಕಂಡರು. ಅದೇನೆಂದರೆ–

ಒಂದು ಎತ್ತರವಾದ ಪರ್ವತದ ಶಿಖರದ ಮೇಲೆ ಯಾರದೋ ಹಾದಿಯನ್ನು ನೋಡುತ್ತ ತಾವು ಒಬ್ಬರೇ ನಿಂತುಕೊಂಡಿರುವಂತೆ ಮಾಸಾಹೇಬರಿಗೆ ತೋರಿತು. ಅಷ್ಟರಲ್ಲಿ ರಾಮರಾಜನು ಅಲ್ಲಿಗೆ ಬಂದನು. ಆತನನ್ನು ನೋಡಿದ ಕೂಡಲೆ ತಮ್ಮ ಸರ್ವಾಂಗವು ತಪ್ತವಾಗಿ ಕೆಂಪಡರಿದ ಕಣ್ಣುಗಳಿಂದ ತಾವು ಆತನನ್ನು ನೋಡುತ್ತಿರುವಂತೆ ಮಾಸಾಹೇಬರಿಗೆ ಭಾಸವಾಯಿತು. ಆಗ ತಾವು ತಮ್ಮ ಹಲ್ಲುಗಳಿಂದ ತಮ್ಮ ತುಟಿಯನ್ನು ಕಚ್ಚುತ್ತಿರುವಂತೆಯೂ, ತಮ್ಮ ಬಿಗಿಯಾದ ಮುಷ್ಟಿಯನ್ನು ಕಸುವಿನಿಂದ ಹಿಂದಕ್ಕೆ ಜಾಗಿಸಿ ಹಿಡಿದಂತೆಯೂ, ಸಿಟ್ಟಿನಿಂದ ಮುಸುಗುಟ್ಟುತ್ತಿರುವಂತೆಯೂ ಅವರಿಗೆ ತೋರಿತು. ರಾಮರಾಜನು ಮಾತ್ರ ಅಂತ್ಯಂತ ಶಾಂತಮುದ್ರೆಯಿಂದ ಮುಗುಳುನಗೆ ನಗುತ್ತ ತಮ್ಮ ಕಡೆಗೆ ನೋಡಿದ ಹಾಗಾಯಿತು. ರಾಮರಾಜನು ನೋಡನೋಡುತ್ತ ತಮ್ಮನ್ನು ಅಪ್ಪಿಕೊಳ್ಳಲಿಕ್ಕೆ ಬರುವಂತೆ ಮಾಸಾಹೇಬರಿಗೆ ತೋರಿತು. ರಾಮರಾಜನು ತಮ್ಮನ್ನು ಅಪ್ಪಿಕೊಳ್ಳಲಿಕ್ಕೆ ಹತ್ತಿರ ಬಂದರೆ, ಆತನನ್ನು ಪರ್ವತದ ಶಿಖರದ ಕೆಳಗೆ ನೂಕಿಬಿಡಬೇಕೆಂದು ತಾವು ತೀರ ತುದಿತುದಿಗೆ ಹೋಗುವ ಹಾಗೆ ಅವರಿಗೆ ಕಂಡಿತು. ಅಷ್ಟರಲ್ಲಿ ರಾಮರಾಜನು ತೀರ ಹತ್ತರ ಬಂದು ತನ್ನ ಅತ್ಯಂತ ಮಧುರ ಧ್ವನಿಯಿಂದ– ''ಸುಂದರೀ, ಎಂದೂ ತಪ್ಪಿಸಲಿಕ್ಕೆ ಬಾರದಿರುವಾಗ ಯಾಕೆ ತಪ್ಪಿಸಿಕೊಳ್ಳಲು ಯತ್ನಿಸುತ್ತಿ? ಎಂದೂ ಆಗದೆ ಇರುವದನ್ನು ಯಾಕೆ ಮಾಡಲಿಕ್ಕೆ ಹೋಗುತ್ತೀ? ಇಗೋ ನೋಡು, ಈತನು ನನ್ನ ಮಗನು'' ಹೀಗೆ ಅನ್ನುತ್ತಿರುವಾಗ ರಣಮಸ್ತಖಾನನು ರಾಮರಾಜನ ಬಳಿಯಲ್ಲಿ ನಿಂತಂತೆ ಮಾಸಾಹೇಬರಿಗೆ ಕಂಡಿತು. ತಾವು ಅತಿ ನಿರ್ಬಲರೂ, ನಿಶ್ಚಲರೂ ಆದದ್ದನ್ನು ನೋಡಿ ಮತ್ತಿಷ್ಟು ಮಧುರಹಾಸ್ಯ ಮಾಡಿ ರಾಮರಾಜನು ತೀರ ಹತ್ತಿರಕ್ಕೆ ಬಂದ— ನೋಡು ನೋಡು, ನಾನು ಈತನನ್ನು ಸ್ವಾಧೀನಪಡಿಸಿಕೊಂಡಿದ್ದೇನೆ. ಈತನು ನನ್ನವನು, ನನಗೆ ಸಿಕ್ಕನು, ಈಗ ನೀನಷ್ಟೇ ಯಾಕೆ ದೂರಹೋಗುತ್ತೀ? ಬಾ, ಬಾ, ಎಂದು ತಮ್ಮನ್ನು ಹಿಡಿಯಲಿಕ್ಕೆ ಬರುವಂತೆ ಮಾಸಾಹೇಬರಿಗೆ ತೋರಿತು. ಅಷ್ಟರಲ್ಲಿ ರಣಮಸ್ತಖಾನನು ಮುಂದಕ್ಕೆ ಬಂದಂತಾಯಿತು. ಆತನ ಬಳಿಯಲ್ಲಿ ನೂರಜಹಾನಳೂ ನಿಂತಂತೆ ತೋರಿತು. ಆಕೆಯು ಏನೋ ರಣಮಸ್ತಖಾನನಿಗೆ ಸನ್ನೆಮಾಡಿದ ಹಾಗಾಯಿತು. ಕೂಡಲೇ ರಣಮಸ್ತಖಾನನು—ಹೋಗಿರಿ, ಹಾಳಾಗಿ ಹೋಗಿರಿ; ನನ್ನ ಆಯುಷ್ಯವನ್ನು ನೀವಿಬ್ಬರೂ ಮಣ್ಣುಗೂಡಿಸಿಬಿಟ್ಟಿರಿ, ಎನ್ನುತ್ತ ತಮ್ಮನ್ನೂ, ರಾಮರಾಜನನ್ನೂ ಕೂಡಿಯೇ ಪರ್ವತ ಶಿಖರದ ಕೆಳಗೆ ದೂಡಿಕೊಟ್ಟಂತೆ ಮಾಸಾಹೇಬರಿಗೆ ಆಯಿತು. ಹೀಗಾದ ಕೂಡಲೆ ಮಾಸಾಹೇಬರು ಚಿಟ್ಟನೆ ಚೀರಿ ಹೊರಸಿನ ಕೆಳಗೆ ಬಿದ್ದರು.

ಹೀಗೆ ಚೀರಿದ್ದನ್ನು ಲೈಲಿಯು ಕೇಳಿ ಗಾಬರಿಯಾಗಿ ಬಂದಳು. ಕರ್ಮಧರ್ಮ ಸಂಯೋಗ ದಿಂದ ಬಾಗಲಿಗೆ ಒಳಚಿಲಕ ಹಾಕದ್ದರಿಂದ ಲೈಲಿಯು ಬಾಗಿಲು ತೆರೆದು ಒಳಗೆ ಹೋಗಿ ನೋಡಲು, ಮಾಸಾಹೇಬರು ನೆಲದ ಮೇಲೆ ಅಸ್ತವ್ಯಸ್ತವಾಗಿ ಬಿದ್ದಿದ್ದರು. ಅವರ ಮೈಮೇಲೆ ಎಚ್ಚರವಿದ್ದಿಲ್ಲ. ಲೈಲಿಯು ಅವಸರದಿಂದ ನೀರು ತಂದು ಅವರ ಕಣ್ಣಿಗೆ ಹಚ್ಚಿ ನೆತ್ತಿಗೆ ತಟ್ಟಿದಳು;

ಆದರೆ ಬಹಳ ಹೊತ್ತಾದರೂ ಎಚ್ಚರವಾಗಲಿಲ್ಲ. ಇನ್ನೂ ಅವರು ಆಗಾಗ್ಗೆ ಚಿಟ್ಟಚಿಟ್ಟನೆ ಚೀರುತ್ತಲೇ ಇದ್ದರು. ಲೈಲಿಯು ಎಚ್ಚರವಾಗಬೇಕೆಂದು ಬಹಳ ಯತ್ನಿಸಿದಳು; ಆದರೆ ವ್ಯರ್ಥವು, ಕಡೆಗೆ ರಣಮಸ್ತಖಾನನ್ನು ಕರೆಕಳುಹಿಸಿದಳು. ಅವರು ರಾತ್ರಿ ಹೋದವರು ಇನ್ನೂ ಬಂದಿಲ್ಲೆಂದು ಸುದ್ದಿಯು ಬಂದಿತು. ಹೊರಗೆ ತಾಸುಹೊತ್ತು ಏರಿತ್ತು. ಕಡೆಗೆ ಲೈಲಿಯು ತನಗೆ ಗೊತ್ತಿದ್ದ ಬೇರೆ ಬೇರೆ ಉಪಾಯಗಳನ್ನು ಮಾಡಿದಳು. ಆಗ ಬಹಳ ಹೊತ್ತಿನ ಮೇಲೆ ಮಾಸಾಹೇಬರಿಗೆ ಎಚ್ಚರವಾಯಿತು; ಆದರೆ ಅವರು ಭ್ರಮಿಷ್ಟರಂತೆ ನಾಲ್ಕೂ ಕಡೆಗೆ ನೋಡಹತ್ತಿದರು. ತಾವು ಎಲ್ಲಿ ಇರುತ್ತೇವೆಂಬದರ ನಿಶ್ಚಯವು ಅವರಿಗೆ ಆದಂತೆ ತೋರಲಿಲ್ಲ. ಅವರು ಬಹಳ ಹೊತ್ತು ಲೈಲಿಯನ್ನು ದಿಟ್ಟಿಸಿ ನೋಡಿದರು. ಆದರೆ ತಾವು ಯಾರನ್ನು ನೋಡುತ್ತೇವೆಂಬ ಪ್ರತಿಜ್ಞೆಯೂ ಅವರಿಗೆ ಇದ್ದಿಲ್ಲ. ಅವರಿಗೆ ಇನ್ನೂ ಕನಸಿನ ಗುಂಗು ಇದ್ದಂತೆ ತೋರಿತು. ಲೈಲಿಯು ಈಗ ನಾಲ್ವತ್ತೈದು ವರ್ಷಗಳಿಂದ ಮಾಸಾಹೇಬರ ಬಳಿಯಲ್ಲಿರುತ್ತ ಬಂದಿದ್ದಳು; ಅವಳಿಗೆ ಇಂಥ ಪ್ರಸಂಗವು ಎಂದೂ ಬಂದಿದ್ದಿಲ್ಲ; ಆದರೆ ಈಗ ಸುಮಾರು ಮೂವತ್ತುವರ್ಷಗಳ ಹಿಂದೆ ಒಮ್ಮೆ ಮಾಸಾಹೇಬರು ಹೀಗೆಯೇ ಚೀರಿ ನೆಲದ ಮೇಲೆ ಬಿದ್ದದ್ದು ಲೈಲಿಗೆ ನೆನಪಾಯಿತು. ಆಗಾದರೂ ಇಷ್ಟು ಹೊತ್ತು ಎಚ್ಚರ ತಪ್ಪಿ ಮಾಸಾಹೇಬರು ಬಿದ್ದಿದ್ದಿಲ್ಲ. ಲೈಲಿಯು ಹ್ಯಾಗಾದರೂ ಮಾಡಿ ಮಾಸಾಹೇಬರನ್ನು ಅವರ ಹೊರಸಿನ ಮೇಲೆ ಮಲಗಿಸಿದಳು. ಆಗ ಮಾಸಾಹೇಬರು ಒಂದೇ ಸವನೆ ಬಿಕ್ಕಿಬಿಕ್ಕಿ ಅಳಹತ್ತಿದರು. ಅದನ್ನು ನೋಡಿ ಲೈಲಿಯು ಮತ್ತಿಷ್ಟು ಗಾಬರಿಯಾದಳು. ಹೀಗೆ ಕೆಲಕಾಲ ಕ್ರಮಿಸಿದ ಮೇಲೆ ಮಾಸಾಹೇಬರು ಹೊರಸಿನ ಮೇಲೆ ಎದ್ದು ಕುಳಿತು ಲೈಲಿಯನ್ನು ಕುರಿತು—''ಲೈಲೀ, ಆ ನಜೀರನನ್ನು ಕರದುಕೊಂಡು ಬಾ'' ಎಂದು ಹೇಳಿದರು. ಹೀಗೆ ಮಾಸಾಹೇಬರು ಎಚ್ಚರಿಕೆಯಿಂದ ಮಾತಾಡಿದ್ದನ್ನು ಕೇಳಿ ಲೈಲಿಗೆ ಪರಮಾನಂದವಾಯಿತು. ಆ ಆನಂದದಲ್ಲಿ ಆಕೆಯು ನಜೀರನನ್ನು ಕರೆಯಹೋಗಲಿಕ್ಕೆ ಸ್ವಲ್ಪ ತಡಮಾಡಲು, ಮಾಸಾಹೇಬರು ಲೈಲಿಗೆ— ನಾನು ಹೇಳಿದ್ದು ನಿನಗೆ ಕೇಳಿಸಲಿಲ್ಲವೇನು? ನಜೀರನನ್ನು ಕರಕೊಂಡು ಬಾ, ನಜೀರನನ್ನು. ಎಂದು ಹೇಳಲು, ಲೈಲಿಯು ನಜೀರನನ್ನು ಕರಕೊಂಡು ಬಂದಳು. ಆಗ

ಮಾಸಾಹೇಬ— ನಿಮ್ಮ ಒಡೆಯನು ನಿನ್ನೆ ರಾತ್ರಿ ಯಾವಾಗ ಬಂದನು? ಇನ್ನೂ ಮಲಗಿಯೇ ಇರುವನೋ ಎದ್ದಿರುವನೋ? ಕರೀಮ ಬಕ್ಷನು ಇನ್ನು ಯಾಕೆ ಬರಲಿಲ್ಲ?

ನಜೀರ—ಮಾಸಾಹೇಬ, ಒಡೆಯರು ನಿನ್ನೆ ರಾತ್ರಿ ಹೋದವರು ಇನ್ನು ತಿರುಗಿ ಬಂದೇಯಿಲ್ಲ!

ಮಾಸಾಹೇಬ— (ಭಯದಿಂದ ಹೊರಸುಬಿಟ್ಟು ತಟ್ಟನೆ ಇಳಿದು ನಜೀರನ ಬಳಿಗೆ ಬಂದು) ಏನಂದಿ? ರಣಮಸ್ತಖಾನನು ಇನ್ನೂ ಬಂದಿರುವದಿಲ್ಲವೆ? ಹಾಗಾದರೆ ಕರೀಂಬಕ್ಷನ ಗತಿಯೇನು?

ನಜೀರ— (ಸಮಾಧಾನದಿಂದ) ಅವನೂ ಇನ್ನೂ ಬಂದಿಲ್ಲ.

ಮಾಸಾಹೇಬ—ಅವನೂ ಇನ್ನೂ ಬಂದಿಲ್ಲ! ಅವನೂ ಇನ್ನೂ ಬಂದಿಲ್ಲವೆ? ಏನು? ನೀನು ಅನ್ನುತ್ತೀಯಾದರೂ ಏನು? ಅವನು ಇನ್ನೂ ಬಂದಿಲ್ಲವೆ?

ನಜೀರ—(ಅತ್ಯಂತ ನಮ್ರತೆಯಿಂದ )ಜೀ ಸರಕಾರ, ಅವನು ಇನ್ನೂ ಬಂದಿಲ್ಲ.

# ಕಡೆಯ ಉಪಾಯ

ನಜೀರನ ಈ ಮಾತನ್ನು ಕೇಳಿ ಮಾಸಾಹೇಬರು ಅತ್ಯಂತ ಚಕಿತರಾಗಿ ಸುಮ್ಮನೆ ನಿಂತು ಕೊಂಡುಬಿಟ್ಟರು. ಅವರು ಯಾವದೋ ವಿಚಾರದಲ್ಲಿ ಮಗ್ನರಾಗಿರುವಂತೆ ತೋರಿತು. ಅವರು ಕೆಲಹೊತ್ತಿನ ಮೇಲೆ ನಜೀರನನ್ನು ಕುರಿತು— ನಜೀರ, ನೀನು ಈಗಲೇ, ಹೊರಡು, ವಿಜಯನಗರದ ಹಾದಿಯ ಮೇಲೆ ತಿರುಮಲನ ಧರ್ಮಶಾಲೆಯಿರುವದು. ಅಲ್ಲಿಗೆ ಹೋಗಿ ಅಲ್ಲಿ ಕರೀಮಬಕ್ಷನು ಇದ್ದರೆ ನೋಡಿ ಬಾ. ಯಾರದಾದರೂ ಕುದುರೆಯನ್ನು ತೆಗೆದುಕೊಂಡು ಹೋಗು. ಹಾದಿಯಲ್ಲಿ ಎಲ್ಲಿಯೂ ನಿಲ್ಲಬೇಡ. ನೆಟ್ಟಗೆ ಹೋಗು. ಅಲ್ಲಿ ಕರೀಮಬಕ್ಷನು ನಿನಗೆ ಸಿಗಬಹುದು; ಅಥವಾ ಹಾದಿಯಲ್ಲಿ ನಿನಗೆ ಅವನು ಎದುರಾಗಬಹುದು. ನಡೆ, ನನ್ನ ಮೋರೆಯನ್ನು ನೋಡುತ್ತ ನಿಲ್ಲಬೇಡ. ಈಗಲೇ ಮುಂದಕ್ಕೆ ಸಾಗು. ಎಂದು ಹೇಳಲು ನಜೀರನು ಕೂಡಲೆ ಹೊರಟುಹೋದನು. ಇದನ್ನೆಲ್ಲ ನೋಡುತ್ತ ನಿಂತಿದ್ದ ಲೈಲಿಗೆ ಏನೂ ಗೊತ್ತಾಗಲಿಲ್ಲ. ಅತ್ತ ನಜೀರನು ಹೋದ ಬಳಿಕ ಆಕೆಯು ಮಾಸಾಹೇಬರನ್ನು ಕುರಿತು— ''ಕರೀಮನು ಆ ಧರ್ಮಶಾಲೆಗೆ ಯಾತಕ್ಕೆ ಹೋದನು? ಯಾವಾಗ ಹೋದನು? ಇದರ ಸಂಗತಿಯೇನೂ ನನಗೆ ತಿಳಿಯದಲ್ಲ! ನಿಮ್ಮ ಸ್ಥಿತಿಯು ಇಂದು ಹೀಗೇಕೆ ಆಗಿದೆ?'' ಎಂದು ಕೇಳಲು ಮಾಸಾಹೇಬರು— ನೀನು ಇನ್ನು ಒಂದೆರಡು ದಿವಸ ನನ್ನನ್ನು ಏನೂ ಕೇಳಬೇಡ. ನನ್ನ ಜೀವಕ್ಕಾಗುವ ವ್ಯಥೆಯಷ್ಟೇ ಸಾಕು. ಮತ್ತೆ ನಿನ್ನ ಜೀವವನ್ನೇಕೆ ವ್ಯಥೆಗೆ ಈಡು ಮಾಡುತ್ತಿ? ನನಗೆ ಇನ್ನು ಹುಚ್ಚು ಹಿಡಿಯುವದು. ಈಗ ಕಳೆದುಹೋಗಿರುವ ದಿನಗಳೇ ಒಳ್ಳೆಯವೆಂದು ತಿಳಿ. ಇನ್ನು ಬರುವ ದಿನಗಳು ಬಹಳ ಕೆಟ್ಟವು. ಇರಲಿ, ನೀನು ನನಗಿಷ್ಟು ಹಾಲು ತಂದುಕೊಡು ಹೋಗು. ನಿನ್ನೆಯಿಂದ ನಾನು ಭ್ರಮಿಷ್ಠಳಂತೆ ಆಗಿದ್ದೇನೆ. ಪ್ರಸಂಗ ಒದಗಿತೆಂದರೆ ನಿನಗೆಲ್ಲ ಸಂಗತಿಗಳು ಗೊತ್ತಾಗುವವು. ನಿನಗೆ ಗೊತ್ತಾಗದೆ ಯಾವ ಕೆಲಸವಾಗುವ ಹಾಗಿದೆ? ನನಗಿಷ್ಟು ಕುಡಿಯಲಿಕ್ಕೆ ಹಾಲು ತಂದು ಕೊಂಡುತ್ತೀಯಷ್ಟೆ? ಎಂದು ಕೇಳಿದಳು. ಪಾಪ! ಲೈಲಿಯು ತಿರುಗಿ ಮಾತಾಡದೆ ಹಾಲು ತರಲಿಕ್ಕೆ ಹೋದಳು. ಇತ್ತ ಮಾಸಾಹೇಬರು ವಿಚಾರಮಗ್ನರಾಗಿಯೇ ಇದ್ದರು. ಇಷ್ಟು ಹೊತ್ತಾದರೂ ಮಗನು ಬಾರದೆಯಿರುವದು ಅವರಿಗೆ ಸಲಕ್ಷಣವಾಗಿ ತೋರಲಿಲ್ಲ. ಅವರ ಮನಸ್ಸು ಬಹಳ ಅಸ್ವಸ್ಥವಾಯಿತು. ನಾನು ನಿನ್ನೆ ಆಡಿದ ಮಾತಿಗೆ ರಣಮಸ್ತನು ಸಿಟ್ಟಾಗಿ ಎಲ್ಲಿಗಾದರೂ ಹೊರಟುಹೋಗಿರಬಹುದೋ? ಹಾಗಾಗಿದ್ದರೆ ಮುಂದೆ ನನ್ನ ಗತಿಯೇನು? ಛೇ, ನನ್ನ ರಣಮಸ್ತನು ಹೀಗೆ ಮಾಡಲಿಕ್ಕಿಲ್ಲ. ಆತನು ಹೀಗೆ ನನ್ನನ್ನು ಎಂದೂ ಬಿಟ್ಟುಹೋಗಲಿಕ್ಕಿಲ್ಲ. ಸಿಟ್ಟಾಗಿ ತಾಸೆರಡು–ತಾಸು ಹೋಗುವದರೊಳಗೇ ಆತನಿಗೆ ಪಶ್ಚಾತ್ತಾಪವಾದೀತು. ಎಂಬಿವೇ ಮೊದಲಾದ ವಿಚಾರಗಳಿಂದ ಅವರು ತಲ್ಲಣಿಸುತ್ತಿರಲು, ಲೈಲಿಯು ಹಾಲು ತಕ್ಕೊಂಡು ಬಂದಳು. ಮಾಸಾಹೇಬರು ಹಾಲನ್ನು ಕುಡಿದರು; ಆದರೂ ಅವರಿಗೆ ಸಮಾಧಾನವಾಗಲಿಲ್ಲ. ಅವರು ತಮ್ಮ ಕೋಣೆಯಿಂದ ಹೊರಬಿದ್ದು ಮಗನ ಬಂಗಲೆಗೆ ಹೋದರು. ಅಲ್ಲಿಂದ ಕುಂಜವನವನ್ನು ಪ್ರವೇಶಿಸಿದರು. ಹೋದ ನಜೀರನು ಇನ್ನೂ ಬರಲಿಲ್ಲವಲ್ಲ? ಕರೀಮನು ಹಾದಿಯಲ್ಲಿ

ಭೆಟ್ಟಿಯಾಗಿದ್ದರೆ ನಜೀರನು ಇಷ್ಟುಹೊತ್ತಿಗೆ ಬರುತ್ತಿದ್ದನು. ಕರೀಮನು ಹಾದಿಯಲ್ಲಿ ಭೆಟ್ಟಿಯಾದಂತೆ ತೋರುವದಿಲ್ಲ. ಇನ್ನು ಏನು ಮಾಡಬೇಕು? ನಾನಾದರೂ ಹೋಗಲಾ! ಏನೂ ಗೊತ್ತಿಲ್ಲದೆ ಹೋಗುವದಾದರೂ ಎತ್ತ? ಎಂದು ಚಡಪಡಿಸುತ್ತ ಕುಂಜವನವನ್ನೆಲ್ಲ ತಿರುಗಿದರಲ್ಲದೆ, ವಿಜಯನಗರದ ಹಾದಿಯ ಕಡೆಗೆ ಹೋಗಿ ನೋಡಿ ನೋಡಿ ದಣಿದರು. ಇಷ್ಟರಲ್ಲಿ ಮಧ್ಯಾಹ್ನವು ತಿರುಗಿತು. ಆದರೂ ಯಾರೂ ಸುಳಿಯಲಿಲ್ಲ.

ಆಗ ಲೈಲಿಯು ಮಾಸಾಹೇಬರ ಬಳಿಗೆ ಬಂದು—"ನಿನ್ನೆಯಿಂದ ಅನ್ನವಿಲ್ಲ, ಊಟಮಾಡಬೇಕೆಂದು" ಹೇಳಿಕೊಳ್ಳಲು, ಮಾಸಾಹೇಬರು— ಹುಡುಗನ ಗೊತ್ತು ಹತ್ತುವವರೆಗೆ ಅನ್ನ-ನೀರು ವರ್ಜ್ಯವು. ಆತನು ನನ್ನ ಮೇಲೆ ಸಿಟ್ಟಾಗಿ ಹೋಗಿರುವನು. ಆತನ ಗೊತ್ತುಹಚ್ಚಿ, ಆತನ ಸಂಗಡ ಎರಡು ಮಾತುಗಳನ್ನಾಡಿದ ಬಳಿಕ ಊಟವು, ಅಲ್ಲಿಯವರೆಗೆ ಊಟವಿಲ್ಲ, ಸುಮ್ಮನೆ ಆಗ್ರಹ ಮಾಡಬೇಡ. ಎಂದು ಸ್ಪಷ್ಟವಾಗಿ ಹೇಳಿದರು. ಲೈಲಿಯು ಎಷ್ಟು ಹೇಳಿಕೊಂಡರೂ ಅವರು ಕೇಳಲಿಲ್ಲ, ಆಗ ಲೈಲಿಯು—ಊಟವಿಲ್ಲದಿದ್ದರೆ ಇಲ್ಲ, ಹೀಗೆ ಬಿಸಲಲ್ಲಿ ಎಡತಾಕುವದನ್ನು ಬಿಟ್ಟು ಒಳಗಾದರೂ ನಡೆಯಿರಿ, ಎಂದು ಹೇಳಿದಳು. ಅದಕ್ಕೂ ಮಾಸಾಹೇಬರು ಕಿವಿಗೊಡಲಿಲ್ಲ. ಕಡೆಗೆ ತಾಯಿಯು ಮಗಳನ್ನು ಸಥಿಯಿಂದ ಸಿಟ್ಟುಮಾಡಿ ಒಳಗೆ ಕರಕೊಂಡು ಹೋಗುವಂತೆ, ಲೈಲಿಯು ಮಾಸಾಹೇಬರನ್ನು ಸಿಟ್ಟುಮಾಡಿ ಒಳಗೆ ಕರಕೊಂಡು ಹೋದಳು. ಮಾಸಾಹೇಬರು ಬಹು ಅಶಕ್ತರಾಗಿದ್ದರು. ತಮ್ಮ ಕೋಣೆಯೊಳಗೆ ಹೋದ ಕೂಡಲೇ ಅವರು ಹೊರಸಿನ ಮೇಲೆ ಕಣ್ಣುಮುಚ್ಚಿ ಸುಮ್ಮನೆ ಮಲಗಿಕೊಂಡರು. ಹೀಗಿರುವಾಗ ಹೊತ್ತು ಮುಣುಗಿತು, ಕತ್ತಲಾಗ ಹತ್ತಿತು. ರಣಮಸ್ತಖಾನನೂ ಇಲ್ಲ, ಆತನನ್ನು ನೋಡಲಿಕ್ಕೆ ಹೋದವನೂ ಇಲ್ಲ. ಇನ್ನು ತಾವು ಸ್ವತಃ ಹೋದಹೊರತು ಎರಡನೆಯ ಮಾರ್ಗವಿಲ್ಲೆಂದು ಮಾಸಾಹೇಬರು ನಿಶ್ಚಯಿಸಿದರು; ಆದರೆ ಅವರು ಎಲ್ಲಿಗಂತ ಹೋಗಬೇಕು? ರಣಮಸ್ತಖಾನನು ಇಂಥಲ್ಲಿ ಇರುವನೆಂದು ಗೊತ್ತಾದರೆ ಹೋಗುವದು ನೆಟ್ಟಗೆ, ಏನೂ ಗೊತ್ತಿಲ್ಲದೆ ಹೋಗಿ ಫಲವೇನು? ಎಂಬ ಪ್ರಶ್ನವು ಉತ್ಪನ್ನವಾಗಿ ಅವರು ನಿರಾಶೆಪಡುತ್ತಿರಲು, ನಜೀರನು ಬಂದ ಸುದ್ದಿಯನ್ನು ಲೈಲಿಯು ಹೇಳಿ, ಆತನನ್ನು ಮಾಸಾಹೇಬರ ಎದುರಿಗೆ ತಂದು ನಿಲ್ಲಿಸಿದಳು. ನಜೀರನು ಬಂದವನು ತೇಗುತ್ತಲೇ ಬಂದಿದ್ದನು. ಅವನಿಗೆ ತಟ್ಟನೆ ಮಾತಾಡಲಿಕ್ಕೆ ಬರಲೊಲ್ಲದು. ಮಾಸಾಹೇಬರು ಆತನನ್ನು ನೋಡಿ, 'ಏನು ಸುದ್ದಿಯನ್ನು ತಂದಿರುವೆ?' ಎಂದು ಕಣ್ಣು ಸನ್ನೆಯಿಂದಲೇ ಕೇಳಿದರು. ಅದನ್ನು ನೋಡಿ ತೇಗುತ್ತಲೇ ನಜೀರನು ಮಾಸಾಹೇಬರನ್ನು ಕುರಿತು—

ನಜಿರ— ಮಾಸಾಹೇಬ, ನನ್ನ ಬೆನ್ನ ಹಿಂದೆಯೇ ಕರೀಮನು ಬರುತ್ತಾನೆ. ಆತನು ಎಲ್ಲ ಸುದ್ದಿಯನ್ನು ಏಕಾಂತದಲ್ಲಿ ತಮಗೆ ಹೇಳುವನು.

ಮಾಸಾಹೇಬ— (ಹಾಸಿಗೆಯಿಂದ ಎದ್ದು ಕುಳಿತು) ಅವನು ಹೇಳುವದನ್ನು ಹೇಳಲಿ; ಆದರೆ ರಣಮಸ್ತಖಾನನು ಬಂದನೇ? ಆತನು ಸುರಕ್ಷಿತನಾಗಿರುವನೇ?

ನಜೀರ— ಅದೇನೂ ನನಗೆ ಗೊತ್ತಿಲ್ಲ. ನವಾಬ ಸಾಹೇಬರು ಕರೀಮನ ಸಂಗಡವಂತು ಇಲ್ಲ. ಅಂದಬಳಿಕ ಅವರು ಎಲ್ಲಿರುವವನೋ ಏನೋ ಯಾರಿಗೆ ಗೊತ್ತು!

ಈ ಮೇರೆಗೆ ಅವರಿಬ್ಬರು ಮಾತನಾಡುತ್ತಿರಲು ಕರೀಮನು ಬಂದನೆಂಬ ಸುದ್ದಿಯು ಮಾಸಾಹೇಬರಿಗೆ ಹತ್ತಿತ್ತು. ಆಗ ಅವರು ಎಲ್ಲರನ್ನು ಹೊರಗೆ ಕಳಿಸಿ, ಕರೀಮನನ್ನು ಏಕಾಂತದಲ್ಲಿ ಕರೆದರು. ಆಗ ಕರೀಮನು ಮಾಸಾಹೇಬರ ಬಳಿಗೆ ಬಂದು ಮೂರುಸಾರೆ ಕುರ್ನಿಸಾತ ಮಾಡಿ ಕೈಜೋಡಿಸಿಕೊಂಡು— ''ಗರೀಬಪರವರ'' ಈ ಗುಲಾಮನಿಂದ ದೊಡ್ಡ ಅಪರಾಧವಾಗಿದೆ; ಕ್ಷಮೆಯ ಬಗ್ಗೆ ಆಶ್ವಾಸನೆ ದೊರೆತರೆ ಎಲ್ಲ ಸಂಗತಿಯನ್ನು ಅರಿಕೆ ಮಾಡಿಕೊಳ್ಳುವೆನು, ಅನ್ನಲು, ಮಾಸಾಹೇಬರು— ''ಹೇಳು ಹೇಳು, ಎಂದು ಆತುರಪಡಹತ್ತಿದರು. ಆಗ ಕರೀಮನು ರುಮಾಲದಿಂದ ಕೈಯನ್ನು ಕಟ್ಟಿಕೊಂಡು ದೈನ್ಯಭಾವದಿಂದ–ಗರೀಬಪರವರ, ಮಾಲಿಕ ಸಾಹೇಬರು ತಮಗೆ ಹೇಳಿದ ಮಾತನ್ನು –ಕಟ್ಟಕಡೆಯ ಮಾತನ್ನು ಯಾವ ಮೋರೆಯಿಂದ ನಾನು ತಮ್ಮ ಮುಂದೆ ಹೇಳಲಿ?

ಮಾಸಾಹೇಬ—(ಕೂಡಲೆ ಗಾಬರಿಯಾಗಿ) ಕಡೆಯ ಮಾತು! ಎಲಾ! ನಮ್ಮ ರಣಮಸ್ತಖಾನನು ನೆಟ್ಟಗಿದ್ದಾನಷ್ಟೇ? ಕಡೆಯ ಮಾತು ಎಂದು ಹೇಳುವೆಯಲ್ಲ? ಹಾಗೆಂದರೇನು? ಹೇಳು ಮೊದಲು ಆತನು ಸುರಕ್ಷಿತವಾಗಿ ಇದ್ದಾನೆಯೋ ಇಲ್ಲವೋ ಹೇಳು, ಆಮೇಲೆ ಮುಂದಿನ ಮಾತು.

ಕರೀಮ—ಹೋ ಹೋ! ಮಾಸಾಹೇಬ, ಅವರು ಸುರಕ್ಷಿತವಾಗಿದ್ದಾರೆ; ಚಕ್ಕಂದದಿಂದ ಇದ್ದಾರೆ; ಆನಂದದಿಂದ ಇದ್ದಾರೆ; ಆದರೆ ಪುನಃ ಅವರು ತಮ್ಮ ಕಣ್ಣಿಗೆ ಮಾತ್ರ ಬೀಳಲಾರರು.

ಮಾಸಾಹೇಬ—ಎಲ್ಲಿರುತ್ತಾನೆ? ಅದನ್ನು ಮೊದಲು ನನಗೆ ಹೇಳು.

ಕರೀಮ— ಆಗಲೇ ಅವರು ರಾಮರಾಜನ ಸಂಗಡ ವಿಜಯನಗರಕ್ಕೆ ಹೋದರು. ನಾನು ತಮ್ಮ ಅಪ್ಪಣೆಯಂತೆ ತಿರುಮಲನ ಧರ್ಮಶಾಲೆಗೆ ಮುಂಗಡ ಹೋಗಿ ಅವರ ಹಾದಿಯನ್ನು ನೋಡುತ್ತ ಕುಳಿತುಕೊಂಡೆನು. ಮೊದಲು ನನ್ನನ್ನು ಆ ಧರ್ಮಶಾಲೆಯಲ್ಲಿ ಯಾರು ಬರಗೊಡ ಲೊಲ್ಲರು; ಆದರೆ ನನಗೊಂದು ಹಂಚಿಕೆಯು ತೋಚಿದ್ದರಿಂದ ನಾನು ಕಾವಲು ಗಾರರಿಗೆ— ''ನನ್ನನ್ನು ರಣಮಸ್ತಖಾನರೇ ಮುಂದೆ ಕಳಿಸಿದ್ದಾರೆ. ಹಿಂದಿನಿಂದ ಅವರು ಬರುವರು'' ಎಂದು ಹೇಳಿದೆನು. ನಾನು ಸುಮ್ಮನೆ ಒಂದು ಹಳ್ಳು ಒಗೆದು ನೋಡಬೇಕೆಂದು ಮಾಡಿದೆನು; ಆದರೆ ಅಷ್ಟರಿಂದ ನನ್ನ ಕೆಲಸವೇ ಆಯಿತು. ನನ್ನ ಮಾತನ್ನು ಕೇಳಿದಕೂಡಲೇ ಅವರು ನನ್ನನ್ನು ಒಳ್ಳೇ ಮರ್ಯಾದೆಯಿಂದ ಆದರಪೂರ್ವಕವಾಗಿ ನಡಿಸಿಕೊಳ್ಳಹತ್ತಿದರು. ಆಗ ನಾನು ನನಗೆಲ್ಲ ಗೊತ್ತಿರುವದೆಂಬದನ್ನು ತೋರಿಸುವ ಉದ್ದೇಶದಿಂದ ಅವರನ್ನು ಕುರಿತು — ''ರಾಮ ರಾಜರು ಯಾವಾಗ ಬರುತ್ತಾರೆ! ನಿನ್ನೆ ಬಂದ ಹೊತ್ತಿಗೇ ಬರುವರೋ?'' ಎಂದು ಸುಮ್ಮನೆ ಕೇಳಿನೋಡಿದೆನು. ಕೂಡಲೆ ಆ ಕಾವಲುಗಾರರ ಮುಖ್ಯಸ್ಥನು ನನ್ನನ್ನು ಕುರಿತು—''ಬರುತ್ತೇ ವೆಂದು ಹೇಳಿಯಂತು ಕಳಿಸಿದ್ದಾರೆ'' ಎಂದು ಹೇಳಿದನು. ನಾನು ಒಗೆದ ಎರಡು ಹಳ್ಳು ಗಳಿಂದಲೂ ಕಾರ್ಯವು ಚೆನ್ನಾಗಿ ಸಾಧಿಸಿತು. ಆಮೇಲೆ ನಾನು ಅವರೊಳಗೆ ಬೆರೆತುಕೊಂಡು

ತಂಬಾಕದ ಝುರಕೆಗಳ ಮೇಲೆ ಝುರಕೆಗಳನ್ನು ಹೊಡೆಯಹತ್ತಿದ್ದೆನು. ಅಷ್ಟರಲ್ಲಿ ರಾಮರಾಜರು ಬಂದರೆಂಬ ಸುದ್ದಿಯು ಬಂದಿತು. ಆಗ ಕಾವಲುಗಾರರು ಗಡಬಡಿಸಿ ಓಡಹತ್ತಿದರು. ರಾಮರಾಜನು ಕಾವಲುಗಾರನನ್ನು ಏನೋ ಅವರ ಮಾತಿನಿಂದ ಕೇಳಲು, ಆ ಕಾವಲುಗಾರರ ಮುಖ್ಯಸ್ಥನು ನನ್ನ ಕಡೆಗೆ ಬೆರಳುಮಾಡಿ ಏನೋ ಹೇಳಿದನು. ಆಗ ರಾಮರಾಜರು ಅತ್ಯಂತ ತೀಕ್ಷ್ಣ ದೃಷ್ಟಿಯಿಂದ ನನ್ನನ್ನು ನೋಡಹತ್ತಿದರು. ನಾನು ಸ್ವಸ್ಥವಾಗಿ ಕುಳಿತಿದ್ದೆನು. ಆಗ ಅವರು ನನ್ನನ್ನು ತಮ್ಮ ಹತ್ತರಕ್ಕೆ ಕರೆದು—ನಿನ್ನನ್ನು ಅವರು ಇಂದು ಮುಂದೆ ಯಾಕೆ ಕಳಿಸಿದರು? ಅವರು ಬರಲಿಕ್ಕೆ ಇನ್ನೂ ವಿಲಂಬವಿರುವದೋ ಏನು? ಎಂದು ಕೇಳಿದರು. ಅದಕ್ಕೆ ನಾನು— "ಹೌದು, ಸ್ವಲ್ಪ ತಡಮಾಡಿ ಬರಬಹುದು" ಎಂದು ಇಷ್ಟೇ ಹೇಳಿದೆನು. ಒಂದು ಸುಳ್ಳುಮಾತು ಆಡಿದ ಕೂಡಲೆ ಅದನ್ನು ಮುಚ್ಚಲಿಕ್ಕೆ ಎರಡನೆಯ ಸುಳ್ಳು, ಆ ಎರಡನೆಯ ಸುಳ್ಳನ್ನು ಮುಚ್ಚಲಿಕ್ಕೆ ಮೂರನೆಯ ಸುಳ್ಳು ಎಂಬಂತೆ ನನ್ನ ಈ ಕೃತಿಯು ಅವರಿಗೆ ತಿಳಿದರೆ, ನನ್ನ ಗತಿಯು ಏನಾದೀತೆಂಬದರ ಎಚ್ಚರವು ಆಗ ನನಗೆ ಉಳಿಯಲಿಲ್ಲ. ದುರ್ದೈವದಿಂದ ಖಾನಸಾಹೇಬರು ಅಲ್ಲಿಗೆ ಬಂದುಬಿಟ್ಟರು. ಅವರನ್ನು ನೋಡಿದಕೂಡಲೇ ನನ್ನ ಕಣ್ಣುಗಳು ತೆರೆದು ನಾನು ಹಿಂದಹಿಂದಕ್ಕೆ ಸರಿಯಹತ್ತಿದೆನು ಅಷ್ಟರಲ್ಲಿ ರಾಮರಾಜನು ಖಾನಸಾಹೇಬರನ್ನು ಕುರಿತು—ನೀವು ಮುಂದೆ ಕಳಿಸಿದ ಮನುಷ್ಯನು ಇದೇ ಈಗ ಇಲ್ಲಿಗೆ ಬಂದನು...... ಎಂದು ಇನ್ನೂ ಏನೋ ಮಾತಾಡುತ್ತಿರಲು, ಅಷ್ಟರಲ್ಲಿ ಖಾನಸಾಹೇಬರು—ನಮ್ಮ ಮನುಷ್ಯನು? ನಮ್ಮ ಮನುಷ್ಯನು ಯಾವನವನು? ನಾನಂತು ಯಾರನ್ನೂ ಮುಂದೆ ಕಳಿಸಿರುವದಿಲ್ಲ. ಎಲ್ಲಿ ಇದ್ದಾನೆ ಅವನು? ಎಂದು ಕೇಳಿದರು. ಆಗ ನನ್ನ ಮೋರೆ ಹುಚ್ಚು ಇಟ್ಟಿತು. ನನಗೆ ಎಲ್ಲಿ ಅಡಗಿಕೊಳ್ಳಲಿ ಎಲ್ಲಿ ಬಿಡಲಿ ಎನ್ನುವ ಹಾಗೆ ಆಯಿತು. ಆದರೆ ಮಾಡಲೇನು? ತೆಪ್ಪಗೆ ಖಾನಸಾಹೇಬರ ಮುಂದೆ ನಿಂತುಕೊಳ್ಳಬೇಕಾಯಿತು. ಕಾವಲುಗಾರರು ನನ್ನನ್ನು ತಬ್ಬಿಕೊಂಡು ತಂದೇಬಿಟ್ಟರು."

ಇಲ್ಲಿಯವರೆಗೆ ಮಾಸಾಹೇಬರು ಕರೀಮನ ಮಾತುಗಳನ್ನು ಸುಮ್ಮನೆ ಕೇಳುತ್ತಲಿದ್ದರು. ಈಗ ಮಾತ್ರ ಅವರು ಕರೀಮನಿಗೆ— ಛೀ, ಬುದ್ಧಿಗೇಡಿ! ನೀನು ಇಷ್ಟು ಎಬಡನಿದ್ದೀ ಎಂಬದು ನನಗೆ ಗೊತ್ತಿದ್ದಿಲ್ಲ. ಒಳ್ಳೆಯದು ಮುಂದೇನಾಯಿತು ಹೇಳು, ಎಂದು ಕೇಳಿದರು. ಅದಕ್ಕೆ ಕರೀಮನು—ಮುಂದೇನಾಗುವದು? ನಾನು ಖಾನಸಾಹೇಬರ ಎದುರಿಗೆ ನಿಂತುಕೊಂಡು ಕೂಡಲೆ ಅವರು ನನ್ನ ಗುರುತು ಹಿಡಿದು ಗದ್ದರಿಸಿ—ಎಲಾ ಗುಪ್ತಚಾರನನ್ನಾಗಿ ಯಾರು ಕಳಿಸಿದರು ನಿನ್ನನ್ನು? ಮಾಸಾಹೇಬರಲ್ಲವೇ? ಹೌದು. ಅವರೇ ನಿನ್ನನ್ನು ಕಳಿಸಿದರು ನಿನ್ನ ಮೋರೆಯೇ ಹಾಗೆ ಹೇಳುತ್ತದೆ. ಸುಳ್ಳು ಹೇಳಬೇಡ. ಒಳ್ಳೆಯದು, ಇನ್ನು ಕದ್ದುಮುಚ್ಚಿಯಾದರೂ ಯಾತಕ್ಕೆ! ಸ್ವಲ್ಪ ನಿಲ್ಲು ನಿನ್ನ ಮುಂದೆಯೇ ಮಾಸಾಹೇಬರಿಗೆ ಸ್ಪಷ್ಟವಾಗಿ ಹೇಳಿ ಕಳಿಸಿಬಿಡುತ್ತೇನೆ. ಇಡಿರೋ ಇವನನ್ನು ಅನಕಾ ಪ್ರತಿಬಂಧದಲ್ಲಿ ನಾನು ಪುನಃ ಹೇಳಿದಾಗ ಕರಕೊಂಡು ಬರುವಿರಂತೆ, ಎಂದು ಹೇಳಿ ಅವರು ರಾಮರಾಜನೊಡನೆ ಏಕಾಂತಮಾಡಲಿಕ್ಕೆ ಹೋದರು. ಅಲ್ಲಿ ಬಹಳಹೊತ್ತು ಅವರ ಏಕಾಂತ ವಾಯಿತು. ಆಮೇಲೆ ಖಾನಸಾಹೇಬರು ಪುನಃ ತಮ್ಮ ಬಳಿಗೆ ನನ್ನನ್ನು ಕರಿಸಿಕೊಂಡು ನನಗೆ— "ಲುಚ್ಚಾ, ನಿನ್ನನ್ನು ಒಂದು ಗಿಡಕ್ಕೆ ತೂಗಗಟ್ಟಿಸಿ ಈಗ

ಹೊಡೆಸುತ್ತಿದ್ದೆನು; ಆದರೆ ನಿನ್ನಿಂದ ಒಂದು ಮಹತ್ವದ ಕೆಲಸಮಾಡಿಸಿಕೊಳ್ಳಬೇಕಾಗಿರುತ್ತದೆ. ಆದ್ದರಿಂದ ಬಿಟ್ಟಿದ್ದೇನೆ. ಹೀಗೆ ಮುಂದಕ್ಕೆ ಬಾ. ನಾನು ಹೇಳುವದನ್ನು ಚೆನ್ನಾಗಿ ಲಕ್ಷದಲ್ಲಿಟ್ಟುಕೋ ಮಾಸಾಹೇಬರ ಮುಂದೆ ಹೇಳುವಾಗ ಒಂದು ಶಬ್ದವನ್ನಾದರೂ ತಪ್ಪಬೇಡ. ನಾನು ಹೇಳಿದಂತೆ ಒಂದು ಅಕ್ಷರ ಬಿಡದೆ ಅವರ ಮುಂದೆ ಹೇಳು. ಇನ್ನುಮೇಲೆ ಅವರಿಗೂ ನನಗೂ ಭೆಟ್ಟಿಯಾಗ ಲಾರದೆಂದು ಸ್ಪಷ್ಟವಾಗಿ ಅವರಿಗೆ ಹೇಳು. ನಾನು ಅವರಿಗೆ ಎರವಾದೆನು. ಅವರು ನನಗೆ ಎರವಾದರು. ನಾನು ವಿಜಾಪುರದ ಬಾದಶಹನ ಚಾಕರಿಯನ್ನು ಬಿಟ್ಟೆನು ಈಗ ಹಿಂದೂ ರಾಜನ–ರಾಮರಾಜನ ನೌಕರನಾಗಿರುತ್ತೇನೆ. ನಾನು ಇನ್ನು ವಿಜಾಪುರದವರ, ಅದೇಕೆ ಎಲ್ಲಾ ಮುಸಲ್ಮಾನರಾಜರ ಸೇಡು ತೀರಿಸಿಕೊಳ್ಳತಕ್ಕವನು. ನೀವು ಗುಪ್ತರೀತಿಯಿಂದ ಶೋಧಮಾಡಿಸಿ ತಿಳಕೊಳ್ಳವುದಕ್ಕಿಂತ ಹೆಚ್ಚು ಸ್ಪಷ್ಟವಾಗಿ ನಾನು ತಿಳಿಸಿರುತ್ತೇನೆಂದು ಮಾಸಾಹೇಬರಿಗೆ ಹೇಳು, ಎಂದು ನನ್ನ ಮುಂದೆ ಖಾನಸಾಹೇಬರು ಹೇಳಿದರು.

ಕರೀಮನ ಈ ಮಾತುಗಳನ್ನು ಕೇಳಿದ ಕೂಡಲೆ ಮಾಸಾಹೇಬರಿಗೆ ದಶದಿಕ್ಕುಗಳು ಶೂನ್ಯವಾದವು. ಇತ್ತ ಕರೀಮನು ತಾನು ಹೇಳುವ ಈ ಎಲ್ಲ ಸುದ್ದಿಯನ್ನು ಕೇಳಿದ ಬಳಿಕ ಮಾಸಾಹೇಬರು ತನಗೆ ಯಾವ ಶಿಕ್ಷೆಯನ್ನು ವಿಧಿಸುವರೋ ಏನೋ, ಅಷ್ಟರಲ್ಲಿ ತಾನು ಕಾಲಿಗೆ ಬುದ್ಧಿಯನ್ನು ಹೇಳಿಸಬೇಕೆಂದು ಯೋಚಿಸಿ, ಆತನು ಅಲ್ಲಿಂದ ಪಲಾಯನ ಸೂಕ್ತವನ್ನು ಪಠಿಸಿದನು. ಮಾಸಾಹೇಬರು ತಮ್ಮೊಳಗೆ ವಿಚಾರಮಗ್ನರಾಗಿದ್ದರು. ಅವರು ಮನಸ್ಸಿನಲ್ಲಿ— ಇದೇನು! ಇದೆಲ್ಲಿಯ ಬಡಿಗಲ್ಲು ಬಂದಿತು? ನಾನು ಎಚ್ಚತ್ತಿರುವೆನೋ, ಕನಸಿನಲ್ಲಿರುವೆನೋ! ಈತನು ನನ್ನೆದುರಿಗೆ ನಿಂತು ಹೇಳುವುದೇನು, ನಾನು ಜಾಗ್ರತಾವಸ್ಥೆಯಲ್ಲಿ ಕೇಳುವೆನೋ, ಸ್ವಪ್ನಾವಸ್ಥೆಯಲ್ಲಿ ಕೇಳುವೆನೋ? ನನ್ನ ಮಗನು, ಯಾವನನ್ನು ಒಂದು ಉದ್ದಿಷ್ಟಕಾರ್ಯವನ್ನು ಸಾಧಿಸುವ ಉದ್ದಿಶ್ಯವಾಗಿ ಜನ್ಮದಾರಭ್ಯ ಪರಿಪರಿಯ ಕಷ್ಟಗಳಿಗೆ ಗುರಿಯಾಗಿ ನಾನು ಇಲ್ಲಿಯವರೆಗೆ ಸಂರಕ್ಷಿಸಿದೆನೋ, ಆ ನನ್ನ ಮಗನು ನನ್ನ ಉದ್ದಿಷ್ಟ ಕಾರ್ಯವನ್ನು ಮಣ್ಣುಗೂಡಿಸಿ, ನನ್ನ ಆಶಾತಂತುವನ್ನು ಹರಿದು ನನ್ನನ್ನು ದೂರ ದಬ್ಬಿಕೊಟ್ಟು ಯಾರ ಕಡೆಗೆ ಹೋದನು, ಆತನು ಯಾರ ಸ್ನೇಹವನ್ನು ಬಳಿಸಿದನು? ಯಾರನ್ನು ದ್ವೇಷಿಸಹತ್ತಿದನು? ಯಾರಿಗೆ ಇಂಥ ನಿಷ್ಠುರ ಮಾತುಗಳನ್ನು ಹೇಳಿಕಳಿಸಿದನು? ಇನ್ನುಮುಂದೆ ನಾನು ಏನುಮಾಡಲಿ? ಇನ್ನು ನನಗೆ ಬದುಕುವ ಆಶೆ ಏತಕ್ಕೆ? ಪರವರದಿಗಾರ, ಅಲ್ಲಾ ಈವರೆಗೆ ನಿನ್ನನ್ನು ಸೇವಿಸಿದ್ದು ವ್ಯರ್ಥವಾಯಿತೇ? ಇಷ್ಟುದಿವಸ ನನಗೆ ಯಾಕೆ ಆಶೆಯನ್ನು ತೋರಿಸಿದಿ? ಇಷ್ಟು ದಿವಸ ನನ್ನ ಕೈಯಿಂದ ಆತನ ಸಂಗೋಪನವನ್ನಾದರೂ ಯಾಕೆ ಮಾಡಿಸಿದಿ? ಆತನು ಹುಟ್ಟುತ್ತಲೇ ಸತ್ತು ಹೋಗಿದ್ದರೆ ನೆಟ್ಟಗಾಗುತ್ತಿದ್ದಿಲ್ಲವೆ? ನಾನು ಆತನ ಮಾಯಾಪಾಶದಲ್ಲಿ ಸಿಕ್ಕಿಕೊಳ್ಳದೆ ಅನನ್ಯಭಾವದಿಂದ ನಿನ್ನ ಆರಾಧನೆಯನ್ನಾದರೂ ಮಾಡುತ್ತಿದ್ದೆನು. ಪರಮೇಶ್ವರಾ, ಈಗ ನಾನು ಅನನ್ಯಭಾವದಿಂದ ನಿನ್ನಲ್ಲಿ ಲೀನಳಾಗಿರುವುದಿಲ್ಲ, ನಿನ್ನಲ್ಲಿ ಅರ್ಧಭಾಗವನ್ನೂ ಮಗನಲ್ಲಿ ಅರ್ಧ ಭಾಗವನ್ನೂ ಇಟ್ಟಿರುವೆನು. ಈ ತಪ್ಪಿಗಾಗಿಯೇ ನನ್ನನ್ನು ನೀನು ಹೀಗೆ ದಂಡಿಸಿರುವದಿಲ್ಲವಷ್ಟೆ? ಎಂಥಾ ಭಯಂಕರ ಶಿಕ್ಷೆ ಇದು! ಹೊಟ್ಟೆಯ ಮಗನಿಂದ ಇಂಥ ಭಯಂಕರ ಶಿಕ್ಷೆಯನ್ನು ಅನುಭವಿಸುವುದಕ್ಕಿಂತ ಸಾವು

ಬಂದರೆ ನೆಟ್ಟಗಲ್ಲವೆ? ಎಂದು ಆಲೋಚಿಸಹತ್ತಿದರು. ಹೀಗೆ ಆಲೋಚಿಸುವಾಗ ಅವರಿಗೆ ಅಂದು ಮುಂಜಾವಿನಲ್ಲಿ ಬಿದ್ದಿದ್ದ ಸ್ವಪ್ನದ ನೆನಪಾಯಿತು. ತಮ್ಮ ಮಗನು ತಮ್ಮನ್ನು ಪರ್ವತದ ಕೆಳಗೆ ದೂಡಿಕೊಟ್ಟಿದ್ದರ ಚಿತ್ರವು ಅವರ ಕಣ್ಣಿಗೆ ಕಟ್ಟಿತು. ಅವರು ಮನಸ್ಸಿನಲ್ಲಿ—''ಆ ಕೆಟ್ಟ ಕನಸು ಬಿದ್ದಿದ್ದರಿಂದಲೇ ನಾನು ಇಂಥಾ ಅನರ್ಥದ ಸುದ್ದಿಯನ್ನು ಕೇಳಿದೆನು. ಈ ಅನರ್ಥವನ್ನು ಸೂಚಿಸುವದಕ್ಕಾಗಿಯೇ ನನಗೆ ಆ ಕನಸು ಬಿದ್ದಿರಬಹುದೋ? ಹೌದು, ಹಾಗಲ್ಲದಿದ್ದರೆ ಅಂಥ ಭಯಂಕರ ಸ್ವಪ್ನವು ಹ್ಯಾಗೆ ಬೀಳುವದು? ನಾನು ಇನ್ನು ಏನು ಮಾಡಲಿ! ಈ ಕುಂಜವನದ ವಾಸವು ಇನ್ನು ನನಗೆ ಯಾತಕ್ಕೆ? ಇದರ ಸಂಬಂಧವು ನನಗೆ ಏನು? ಇನ್ನು ಮೇಲೆ ನನ್ನನ್ನು ಇಲ್ಲಿ ಇರಗೊಡುವವರಾದರೂ ಯಾರು? ಇರಗೊಟ್ಟರೂ ನಾನು ಇರಬೇಕೇಕೆ? ಇನ್ನು ನಾನು ಹೋಗುವುದಾದರೂ ಎಲ್ಲಿಗೆ? ಮಗನು ಮುಸಲ್ಮಾನರ ವೈರಿಯನ್ನು ಕೂಡಿಕೊಂಡಿದ್ದರಿಂದ ನಾನು ಯಾವ ಮೋರೆಯಿಂದ ಮುಸಲ್ಮಾನರ ರಾಜ್ಯದಲ್ಲಿ ಆಶ್ರಯವನ್ನು ಪಡೆಯಲಿ? ವಿಜಾಪುರಕ್ಕೆ ಹೋದರೆ, ಜನರು ನನ್ನನ್ನು ಎಷ್ಟು ನಿರಾಕರಿಸಬಹುದಲ್ಲ! ಜನರು ನನ್ನ ಕಡೆಗೆ ಬೆರಳು ಮಾಡಿ— ''ಈ ಚಂಡಾಲಳ ಮಾತಿಗೆ ಮರುಳಾಗಿಯೇ ಬಾದಶಹರು ರಣಮಸ್ತಖಾನನನ್ನು ದೊಡ್ಡ ಪದವಿಗೇರಿಸಿದರು; ಮತ್ತು ಎಷ್ಟೋ ಜನರು ಅನುಭವಿಕರಿದ್ದರೂ, ಅವರನ್ನೆಲ್ಲ ಬಿಟ್ಟು ವಿಜಯ ನಗರದಂಥ ರಾಜ್ಯದ ದರ್ಬಾರಿನಲ್ಲಿ ರಣಮಸ್ತಖಾನನನ್ನು ವಕೀಲನನ್ನಾಗಿ ಬಾದಶಹರು ಕಳಿಸಿದ್ದು ಈ ದುಷ್ಟಳ ಮಾತಿನಿಂದಲೇ, ಆದರೆ ಕಡೆಗೆ ಆ ಅಧಮ ರಣಮಸ್ತನು ತನ್ನ ಮೋರೆಗೆ ಕಪ್ಪು ಬಡಕೊಂಡದ್ದಲ್ಲದೆ ಬಾದಶಹರ ಗೌರವಕ್ಕೂ ಬಾಧೆ ತಂದನು, ಎಂದು ಜನರು ದೂರಿಕೊಳ್ಳುವರು. ಅಂದಬಳಿಕ ವಿಜಾಪುರಕ್ಕಂತು ನಾನು ಹೋಗುವ ಹಾಗಿಲ್ಲ, ಇನ್ನು ಬೇರೆ ಕಡೆಗೆ ನಾನು ಹೋಗುವದಾದರೂ ಯಾತಕ್ಕೆ? ಈ ಪುಷ್ಕರಣಿಯಲ್ಲಿ ಹಾರಿಕೊಂಡು ಬಿಟ್ಟರಾಯಿತು. ಈಗ ಮೂವತ್ತು ವರ್ಷಗಳ ಹಿಂದೆಯೇ ಮಾಡಬೇಕಾಗಿದ್ದ ಕೆಲಸವನ್ನು ಈಗ ಮಾಡಬೇಕು. ಆಗ ನನ್ನ ಹೊಟ್ಟೆಯಲ್ಲಿ ಮತ್ತೊಂದು ಜೀವವಿದ್ದದ್ದರಿಂದ ಅದರ ಮೋಹವು ಬಾಧಿಸಲು ಪ್ರಾಣವನ್ನು ಅರ್ಪಿಸುವದು ನನ್ನಿಂದಾಗಲಿಲ್ಲ, ಆಗಿನ ನನ್ನ ಆಶೆಯೇ ಬೇರೆ ಇತ್ತು, ಯಾವ ಮಗನಿಂದ ರಾಮರಾಜನ ಶಾಸನ ಮಾಡಿಸಬೇಕೆಂದು ನಾನು ಮಾಡಿದ್ದೆನೋ, ಆ ಮಗನೇ ಹೀಗೆ ನನ್ನ ಶಾಸನ ಮಾಡಿದ ಬಳಿಕ ಇನ್ನು ಮೇಲೆ ನನಗೆ ಯಾತರ ಆಶೆ? ಅಥವಾ ನನ್ನನ್ನು ಶಿಕ್ಷಿಸಲಿಕ್ಕೆ ಮಗನಾದರೂ ಎಷ್ಟರವನು? ಪರಿವರದಿಗಾರ ಖುದಾನೇ ನನ್ನ ಅಪರಾಧಕ್ಕಾಗಿ ನನ್ನನ್ನು ಶಿಕ್ಷಿಸಿರುವನು. ನಾನು ಪ್ರತ್ಯಕ್ಷ ಪತಿಯ ಸೇಡನ್ನು ಭಯಂಕರ ರೀತಿಯಿಂದ ತೀರಿಸಲು ಯೋಚಿಸಿದ್ದು ಅಪರಾಧವಲ್ಲವೇ? ಅಲ್ಲಾನಿಗೆ ಅನ್ಯಾಯವಾಗಿ ತೋರಿದರೆ ರಾಮರಾಜನನ್ನು ಆತನೇ ಶಿಕ್ಷಿಸುತ್ತಿದ್ದನು. ಶಿಕ್ಷಿಸುವುದು ರಕ್ಷಿಸುವುದು ಆತನ ಕೆಲಸವಿದ್ದು, ಅದರಲ್ಲಿ ನಾನು ಯಾಕೆ ಕೈಹಾಕಬೇಕು? ಮೊದಲು ನನ್ನ ಮನಸ್ಸಿನಲ್ಲಿ ಪ್ರೇಮದ ಹೊರತು ಎರಡನೆಯ ವಿಕಾರವೇ ಇದ್ದಿಲ್ಲ, ಅಂದಬಳಿಕ ಅದರ ಸ್ಥಳದಲ್ಲಿ ನಾನು ಈರ್ಷೆಯನ್ನು ಯಾಕೆ ಬರಗೊಡಬೇಕು? ನನ್ನ ಈ ಅಪರಾಧಕ್ಕಾಗಿ ನನಗೆ ದೇಹಾಂತ ಶಿಕ್ಷೆಯಾಗುವುದೇ ನ್ಯಾಯವು.

ಈ ಮೇರೆಗೆ ಮಾಸಾಹೇಬರ ಮನಸ್ಸಿನಲ್ಲಿ ಹಲವು ವಿಚಾರಗಳು ಉತ್ಪನ್ನವಾದವು. ಅವರು ಏನೂ ತೋಚದೆ, ಸ್ತಬ್ಧವಾಗಿ ಕುಳಿತುಕೊಂಡುಬಿಟ್ಟರು. ತಮಗೆ ಸುದ್ದಿಯನ್ನು ಹೇಳಿದ ಕರೀಮನು ಯಾವಾಗ ಹೋದನೆಂಬದು ಅವರಿಗೆ ಗೊತ್ತೇ ಆಗಲಿಲ್ಲ. ಅದರಂತೆ ಅವರ ಬಳಿಯಲ್ಲಿ ಲೈಲಿಯು ನಿಂತಿದ್ದೂ ಅವರಿಗೆ ಗೊತ್ತಾಗಲಿಲ್ಲ. ಮಾಸಾಹೇಬರ ಈ ವಿಚಿತ್ರ ಸ್ಥಿತಿಯನ್ನು ನೋಡಿ ಲೈಲಿಗೆ ಅವರನ್ನು ಮಾತಾಡಿಸುವ ಧೈರ್ಯವಾಗದೆ ಆಕೆಯು ಸುಮ್ಮನೆ ಒತ್ತಟ್ಟಿಗೆ ಆಲೋಚಿಸುತ್ತ ನಿಂತುಬಿಟ್ಟಿದ್ದಳು. ಮಾಸಾಹೇಬರಾದರೂ ಹೀಗೆ ಎಷ್ಟು ಹೊತ್ತು ವಿಚಾರ ಮಾಡುತ್ತ ನಿಂತುಕೊಳ್ಳುವರು? ಶರೀರಕ್ಕಿರುವಂತೆ ಮನಸ್ಸಿಗಾದರೂ ದಣುವಿಕೆಯು ಇದ್ದೇ ಇರುವುದು. ಅವರು ಮುಂದೆ ಸ್ವಲ್ಪ ಹೊತ್ತಿನಲ್ಲಿ ಎಚ್ಚತ್ತು ಲೈಲಿಯ ಕಡೆಗೆ ನೋಡಿದರು. ಆಗ ಅವರು ಶಾಂತಮುದ್ರೆಯಿಂದ ಲೈಲಿಯನ್ನು ಕುರಿತು—ಲೈಲೀ, ಇನ್ನು ಇಲ್ಲಿಯ ನಮ್ಮ ಅವತಾರವು ಮುಗಿದಂತಾಯಿತು. ನಮ್ಮ ಮನಸ್ಸಿನಲ್ಲಿದ್ದುದು ಒಂದು, ಖುದಾನ ಮನಸ್ಸಿನಲ್ಲಿದ್ದದ್ದು ಮತ್ತೊಂದು. ಖುದಾನು ತನ್ನ ಮನಸ್ಸಿನಂತೆ ಮಾಡಿಬಿಟ್ಟನು. ಇನ್ನು ಮುಂದೆ ನಾವು ಏನು ಮಾಡಬೇಕೆಂಬುದನ್ನು ಗೊತ್ತುಮಾಡಿಕೊಂಡು ಇನ್ನು ಹಿಂದೆರಡು ತಾಸಿನೊಳಗೆ ನಿನಗೆ ಹೇಳುವೆನು. ಪುನಃ ಅಜ್ಞಾತವಾಸ ಮಾಡದ ಹೊರತು ನಮಗೆ ಬೇರೆ ಮಾರ್ಗವಿಲ್ಲ. ಇನ್ನು ಮೇಲೆ ನಾವು ಮಾಡಬೇಕಾಗಿರುವ ಅಜ್ಞಾತವಾಸವು ಎಂದೆಂದೂ ಯಾರುಯಾರಿಗೂ ಗೊತ್ತಾಗದಂತೆ ಇರಬೇಕು! ಎಂದು ನುಡಿದು, ಮಾಸಾಹೇಬರು ಸ್ವಲ್ಪ ನಕ್ಕರು. ಅವರ ನಗೆಯ ಅರ್ಥವು ಲೈಲಿಗೆ ತಿಳಿಯಲಿಲ್ಲೆಂತಲ್ಲ. ಮಾಸಾಹೇಬರು ಆಕೆಯ ಮುಂದೆ ಯಾವ ಸುದ್ದಿಯನ್ನು ಹೇಳದಿದ್ದರೂ, ಲೈಲಿಯು ಕರೀಮನನ್ನೂ, ನಜೀರನನ್ನೂ ಕೇಳಿ ಎಲ್ಲ ಸುದ್ದಿಯನ್ನು ಕೇಳಿಕೊಂಡಿದ್ದಳು. ಸೇವಕರ ಬಾಯಲ್ಲಿ ಮಾತು ಎಲ್ಲಿ ನಿಲ್ಲುವವು? ಅದರಲ್ಲಿ ರಣಮಸ್ತಖಾನನು ಫಿತೂರಾಗಿ ಹಿಂದೂ ಜನರನ್ನು ಕೂಡಿಕೊಂಡಿದ್ದ ಸುದ್ದಿಯು; ಅಂದಬಳಿಕ ಅದು ಗುಪ್ತವಾಗಿ ಬಹಳ ಹೊತ್ತು ಹ್ಯಾಗೆ ಉಳಿಯಬೇಕು? ಆ ಸುದ್ದಿಯು ಲೈಲಿಯ ಕಿವಿಗೆ ಮುಟ್ಟಿದ್ದಲ್ಲದೆ ಕುಂಜವನದ ತುಂಬ ಹಬ್ಬಿ, ಸ್ವಲ್ಪ ಹೊತ್ತಿನಲ್ಲಿ ಅದು ಮುಖ್ಯ ವಕೀಲನ ಕಿವಿಯವರೆಗೂ ಹೋಯಿತು. ಇರಲಿ, ಮಾಸಾಹೇಬರ ಮಾತನ್ನು ಕೇಳಿ ಲೈಲಿಯು ತಾನು ಏನೋ ಮಾತಾಡಬೇಕೆನ್ನುತ್ತಿರಲು, ಅದನ್ನರಿತು ಮಾಸಾಹೇಬರು ಪುನಃ ಲೈಲಿಯನ್ನು ಕುರಿತು— ಲೈಲೀ, ನೀನು ಇನ್ನು ಯಾವ ಮಾತನ್ನೂ ಆಡಬೇಡ. ಮಾತಾಡುವದರಲ್ಲೇನೂ ಅರ್ಥವಿರುವದಿಲ್ಲ. ಈಗ ಮೂವತ್ತು ವರ್ಷಗಳ ಹಿಂದೆ ನಾವು ಈ ಕುಂಜವನವನ್ನು ಬಿಟ್ಟುಹೋಗುವಾಗ ಇದ್ದಂತೆಯೇ ಈಗ ಇರುತ್ತೇವೆಂದು ತಿಳಿ. ನಡುವೆ ಆದದ್ದನ್ನೆಲ್ಲ ಮರೆತುಬಿಡು. ಹೋಗು, ಒಳಗೆ ಹೋಗು. ನಾನು ಕರೆದ ಕೂಡಲೆ ಬಾ, ಆಗ ಮಾತಾಡೋಣ. ಈಗ ನೀನು ಯಾವ ಮಾತನ್ನೂ ಆಡಬೇಡ, ಎಂದು ಹೇಳಿ ಲೈಲಿಯನ್ನು ಕಳಿಸಿ ಮಾಸಾಹೇಬರು ವಿಚಾರ ಮಗ್ನರಾದರು. ಅವರ ಮನಸ್ಸಿನಲ್ಲಿ ಬಹು ಭಯಂಕರವಾದ ವಿಚಾರತರಂಗಗಳು ಉತ್ಪನ್ನವಾದವು. ಕಡೆಗೆ ಅವರು ಪುಷ್ಕರಣಿಯಲ್ಲಿ ದುಮುಕಿ ತಾವು ಪ್ರಾಣತ್ಯಾಗ ಮಾಡಬೇಕೆಂದು ನಿಶ್ಚಯಿಸಿದರು. ಹೀಗೆ ನಿಶ್ಚಯಮಾಡಿದ ಬಳಿಕ ಅವರ ಮನಸ್ಸಿಗೆ ಸ್ವಲ್ಪ ಸಮಾಧಾನವಾದಂತಾಯಿತು. ಬಳಿಕ ಅವರು, ತಾವು ಪ್ರಾಣತ್ಯಾಗ ಮಾಡುವ ಪೂರ್ವದಲ್ಲಿ ಏನು

ಮಾಡಬೇಕೆಂಬುದನ್ನು ಕುರಿತು ಆಲೋಚಿಸತೊಡಗಿದರು. ತಮ್ಮ ನಿಜವಾದ ವೃತ್ತಾಂತವನ್ನೆಲ್ಲ ರಣಮಸ್ತಖಾನನಿಗೆ ತಿಳಿಸಬೇಕೆಂದು ಮೊಟ್ಟಮೊದಲು ಅವರು ನಿಶ್ಚಯಿಸಿದರು. ನಾನು ಇಂದು ಪ್ರಾಣತ್ಯಾಗ ಮಾಡಿದರೂ ರಣಮಸ್ತಖಾನನಿಗೆ ನಿಜವಾದ ಸಂಗತಿಯನ್ನು-ತಿಳಿಸಬೇಕು; ಅಂದರೆ ತಾನು ಯಾರ ಪಕ್ಷವನ್ನು ವಹಿಸಿರುವೆನೆಂಬುದು ಆತನಿಗೆ ಗೊತ್ತಾಗಿ, ಆತನು ರಾಮರಾಜನ ಸೇಡು ತೀರಿಸಿಕೊಳ್ಳದೆ ಬಿಡಲಿಕ್ಕಿಲ್ಲ; ಅಂದಬಳಿಕ ನನ್ನ ಸಂಕಲ್ಪವು ಪೂರ್ಣವಾದದ್ದನ್ನು ನಾನು ಕಣ್ಣಮುಟ್ಟ ನೋಡದಿದ್ದರೂ, ಪರಲೋಕದಲ್ಲಾದರೂ ಅದು ನನಗೆ ಗೊತ್ತಾದರೆ ನನ್ನ ಸಮಾಧಾನವಾದೀತು. ಏನು ಮಾಡದಿದ್ದರೂ ನಿಜವಾದ ಸಂಗತಿಯನ್ನು ರಣಮಸ್ತಖಾನನಿಗೆ ತಿಳಿಸಿಯಾದರೂ ಬಿಡಬೇಕು. ಅದು ಒಂದು ಬಗೆಯಿಂದ ನನ್ನ ಕರ್ತವ್ಯವೇ ಆಗಿರುವದು.

ಹೀಗೆ ಬಹಳ ಹೊತ್ತು ಆಲೋಚಿಸಿದ ಬಳಿಕ ಮಾಸಾಹೇಬರ ವಿಚಾರವು ಸ್ಥಿರವಾಯಿತು. ಅವರು ನಿಜವಾದ ವೃತ್ತಾಂತವನ್ನು ರಣಮಸ್ತಖಾನನಿಗೆ ತಿಳಿಸಲೇಬೇಕೆಂದು ನಿಶ್ಚಯಿಸಿದರು. ಆದರೆ ಈ ನಿಶ್ಚಯವನ್ನು ಹ್ಯಾಗೆ ಪಾರುಗಾಣಿಸಬೇಕು? ಯಾರ ಕೈಯಿಂದ ಪಾರುಗಾಣಿಸಬೇಕು? ಎಂಬ ವಿಚಾರವು ಅವರಲ್ಲಿ ಉತ್ಪನ್ನವಾಯಿತು. ಈ ಕಲಸವನ್ನು ಮಾಡಲಿಕ್ಕೆ ಅವರಿಗೆ ಇಬ್ಬರು ಯೋಗ್ಯರಾಗಿ ತೋರಿದರು. ಒಬ್ಬರು ಸ್ವತಃ ತಾವು ಎರಡನೆಯವರು ಲೈಲಿಯು. ತಮ್ಮಿಬ್ಬರ ಹೊರತು ಎರಡನೆಯವರಿಗೆ ಯಾವ ಸಂಗತಿಯೂ ಗೊತ್ತಿಲ್ಲದ್ದರಿಂದ ಬೇರೆ ಯಾರಿಂದಲೂ ಆ ಕಾರ್ಯವಾಗುವಂತೆ ಅವರಿಗೆ ತೋರಲಿಲ್ಲ. ಅದರಲ್ಲಿ ತಾವು ಸ್ವತಃ ಎಲ್ಲಿಯೂ ಹೋಗುವಂತೆ ಇದ್ದಿಲ್ಲ, ಅದರಲ್ಲಿ ರಾಮರಾಜನ ರಾಜ್ಯದಲ್ಲಿ ಹೋಗಿ ತಮ್ಮ ಮಗನನ್ನು ಕಾಣುವದಂತು ಅವರಿಗೆ ಶಕ್ಯವೇ ಇದ್ದಿಲ್ಲ, ಆದ್ದರಿಂದ ಅವರ ಹೇತುವನ್ನು ಪೂರ್ಣ ಮಾಡಲಿಕ್ಕೆ ಲೈಲಿಯೊಬ್ಬಳು ಮಾತ್ರ ಅವರಿಗೆ ಸಮರ್ಥಳಾಗಿ ತೋರಿದಳು. ಆಗ ಅವರು ಲೈಲಿಯನ್ನು ಕೂಗಿ ಕರೆದು ತಮ್ಮ ಎದುರಿಗೆ ಕುಳ್ಳಿರಿಸಿಕೊಂಡು— "ಮಾರ್ಜೀನೇ, ಈಗ ನಿನಗೆ ಕಟ್ಟಕಡೆಯದೊಂದು ಮಹತ್ವದ ಕೆಲಸವನ್ನು ಹೇಳುತ್ತೇನೆ" ಎಂದು ಹೇಳಿದರು. "ಮಾರ್ಜೀನೆ" ಎಂದು ಕರೆದದ್ದನ್ನು ಕೇಳಿದ ಕೂಡಲೆ ಲೈಲಿಯು ಗಾಬರಿಯಾಗಿ ಸುತ್ತಮುತ್ತು ನೋಡಹತ್ತಿದಳು. ಆಕೆಯು ಹೀಗೆ ನೋಡುವದರ ಭಾವವನ್ನರಿತು ಮಾಸಾಹೇಬರು— "ಮಾರ್ಜೀನೆ, ಬಹು ದಿವಸಗಳ ಮೇಲೆ ನಿನ್ನ ನಿಜವಾದ ಹೆಸರಿನಿಂದ ನಾನು ನಿನ್ನನ್ನು ಕರೆದದ್ದನ್ನು ಕೇಳಿ, ನೀನು ಗಾಬರಿಯಾದದ್ದು ಆಶ್ಚರ್ಯವಲ್ಲ; ಆದರೆ ನಿನ್ನ ನಿಜವಾದ ಹೆಸರಿನಿಂದ ಕರೆದ ನನ್ನನ್ನು, ಇನ್ನು ಮೇಲೆ ಜನರು ಮೇಹರ್ಜಾನಳೆಂದು ಕರೆದರೂ ನಾನು ಹೆದರುವ ಹಾಗಿಲ್ಲ, ಇನ್ನು ಹ್ಯಾಗೂ ಯಾವತ್ತು ನಿಜವಾದ ವೃತ್ತಾಂತವನ್ನು ರಣಮಸ್ತಖಾನನಿಗೆ ನಾವು ಹೇಳಲೇಬೇಕಾಗಿದೆ. ಆ ಕಾರ್ಯವನ್ನು ನೀನೇ ಮಾಡತಕ್ಕದ್ದು, ಇಷ್ಟುಹೊತ್ತಿಗೆ ರಣಮಸ್ತಖಾನನಿಗೆ ನಿಜವಾದ ವೃತ್ತಾಂತವನ್ನೆಲ್ಲ ನಾವು ಹೇಳಿಬಿಟ್ಟಿದ್ದರೆ ನೆಟ್ಟಗಾಗುತ್ತಿತ್ತೆಂದು ನನಗೆ ತೋರುತ್ತದೆ. ಹಾಗೆ ಮಾಡಿದ್ದರೆ ಈಗಿನ ಅನರ್ಥದ ಪ್ರಸಂಗವೇ ಒದಗುತ್ತಿದ್ದಿಲ್ಲ, ಬಹಳವಾದರೆ ನನ್ನ ಮಗನು ನನ್ನ ನಿರಾಕರಣವನ್ನು ಮಾಡಿ ನನ್ನನ್ನು

ಅಗಲಿಹೋಗುತ್ತಿದ್ದನು. ಈಗಿನಂತೆ ರಾಮರಾಜನ ಸ್ನೇಹವನ್ನು ಸಂಪಾದಿಸುತ್ತಿದ್ದಿಲ್ಲ. ತಿರುಗಿ ಕೇಳಿದರೆ ಆತನು ರಾಮರಾಜನ ಶಾಸನದ ಉಪಾಯವನ್ನು ಯೋಚಿಸಬಹುದಾಗಿತ್ತು. ಇಂದು ಹೇಳೋಣ, ನಾಳೆ ಹೇಳೋಣವೆಂದು ನಾವು ದಿನವೇಕ ಮಾಡಿದ್ದು ನೆಟ್ಟಗಾಗಲಿಲ್ಲ. ಇರಲಿ, ಹೋದಮಾತು ಇನ್ನು ಬರುವಹಾಗಿಲ್ಲ. ಇನ್ನು ನೀನು ಕರೀಮಬಕ್ಷನನ್ನು ಸಂಗಡ ಕರೆದುಕೊಂಡು ರಣಮಸ್ತನಿದ್ದಲ್ಲಿಗೆ ಹೋಗಿ ಅವನಿಗೆ ನಮ್ಮ ಯಾವತ್ತು ನಿಜವಾದ ವರ್ತಮಾನವನ್ನು ಹೇಳಿಬಿಡು. ಮಾರ್ಜಿನೇ, ನೀನು ಹೋಗು, ನನ್ನದಿಷ್ಟು ಕಡೆಯ ಕೆಲಸವನ್ನು ಮಾಡಿಬಿಡು, ನೀನು ಮಾಡುತ್ತೇನೆಂದು ಒಮ್ಮೆ ಒಪ್ಪಿಕೊಂಡ ಬಳಿಕ ಮುಂದೆ ಎಷ್ಟು ಸಂಕಟಗಳು ಒದಗಿದರೂ ಅದನ್ನು ಲೆಕ್ಕಿಸದೆ ನೀನು ಕೆಲಸವನ್ನು ಮಾಡತಕ್ಕವಳು. ಹೋಗು, ಇದೇ ಕಡೆಯ ಕೆಲಸವು ಇನ್ನು ಪುನಃ ನನ್ನ ಕೆಲಸ ಮಾಡುವ ಪ್ರಸಂಗವು ನಿನಗೆ ಬರಲಿಕ್ಕಿಲ್ಲ ಎಂದು ಹೇಳಿದಳು. ''ಇದೇ ಕಡೆಯ ಕೆಲಸವು, ಇದೇ ಕಡೆಯ ಕೆಲಸವು'' ಎಂದು ಮೂರು ಸಾರೆ ಮೇಹರ್ಜಾನಳು ಅಂದದ್ದನ್ನು ಕೇಳಿ ಮಾರ್ಜಿನೆಯು— ''ತಾವು ಹೇಳುವ ಕಾರ್ಯವನ್ನು ನಾನು ಅವಶ್ಯವಾಗಿ ಮಾಡುವೆನು; ''ಇದೇ ಕಡೆಯ ಕೆಲಸ''ವೆಂದು ನೀವು ಮೇಲೆ ಮೇಲೆ ಯಾಕೆ ಅನ್ನುತ್ತೀರಿ? ಇನ್ನು ಮೇಲೆ ನೀವು ನನ್ನನ್ನು ಬಿಟ್ಟು ಎಲ್ಲಿಗಾದರೂ ಹೋಗುವಿರೋ ಏನು? ನೀವು ನನ್ನನ್ನು ಅಗಲಿ ಹೋಗುವ ಹಾಗಿದ್ದರೆ, ನಾನು ನಿಮ್ಮ ಕಡೆಯ ಕೆಲಸವನ್ನು ಮಾಡುವದಕ್ಕಿಂತ ನೀವೇ ನನ್ನ ಕಡೆಯ ಕೆಲಸ ಮಾಡಿಬಿಡಿರಿ. ನೀವು ಪುಷ್ಕರಣೆಯಲ್ಲಿ ನನ್ನನ್ನು ನೂಕಿಬಿಟ್ಟರೆ ಕೆಲಸವು ಮುಗಿದುಹೋಗುವದು.''

ಮಾರ್ಜೀನೆಯ ಈ ಮಾತುಗಳನ್ನು ಕೇಳಿ ಮೇಹರ್ಜಾನಳ ಮನಸ್ಸಿಗೆ ಹ್ಯಾಗೆ ಹ್ಯಾಗೋ ಆಯಿತು! ಈಕೆಗೆ ತನ್ನ ವಿಚಾರವು ಗೊತ್ತಾಗಿರಬಹುದೋ ಎಂಬ ಸಂಶಯವು ಮೇಹರ್ಜಾನಳನ್ನು ಬಾಧಿಸಹತ್ತಿತ್ತು; ಆದರೆ ವಿಚಾರಾಂತದಲ್ಲಿ ಹಾಗೆ ಗೊತ್ತಾಗುವ ಸಂಭವವಿಲ್ಲೆಂದು ತರ್ಕಿಸಿ ಆಕೆಯು ಮಾರ್ಜೀನೆಯನ್ನು ಕುರಿತು— ''ಅಲ್ಲೇ, ಮಾರ್ಜೀನೆ, ಕಡೆಯ ಕೆಲಸವೆಂದರೆ, ಮಹತ್ವದ ಕೆಲಸಗಳಲ್ಲಿ ಕಡೆಯದೆಂದು ನಿನಗಿಷ್ಟು ತಿಳಿಯಬಾರದೇನು? ಈ ಜನ್ಮದಲ್ಲಿ ನಮ್ಮಿಬ್ಬರಿಗೆ ಬಿಡುವ ಹಾಗಿದೆಯೇ? ನಿನ್ನ ಬಿಟ್ಟರೆ ನನಗೆ ಗತಿಯಿಲ್ಲ, ನನ್ನ ಬಿಟ್ಟರೆ ನಿನಗೆ ಗತಿಯಿಲ್ಲ. ನಿನ್ನನ್ನು ನನ್ನ ಈ ಕೈಗಳಿಂದ ಪುಷ್ಕರಣೆಯಲ್ಲಿ ನೂಕಲಾ? ಹಾಗೆ ಮಾಡುವ ದಕ್ಕಿಂತ ನಾವಿಬ್ಬರು ತೆಕ್ಕೆಬಿದ್ದು ಒಮ್ಮೆಲೆ ಪುಷ್ಕರಣೆಯಲ್ಲಿ ಹಾರಿಕೊಳ್ಳುವದು ನೆಟ್ಟಗಲ್ಲವೆ? ಕಡೆಗೆ ಹಾಗೆಯೇ ಮಾಡೋಣವಂತೆ. ಮೊದಲು ರಣಮಸ್ತನಿಗೆ ನನ್ನ ನಿಜವಾದ ಸಂಗತಿಯನ್ನಷ್ಟು ಹೇಳಿಬಾ.'' ಅನ್ನಲು, ಮಾರ್ಜೀನಿಗೆ ಇದ್ದದ್ದರಲ್ಲಿ ಸ್ವಲ್ಪ ಸಮಾಧಾನ ವಾದಂತಾಯಿತು. ಆಕೆಯು ಮೇಹರ್ಜಾನಳ ಅನುಮತಿಯಿಂದ ಕರೀಮಬಕ್ಷನನ್ನು ಸಂಗಡ ಕರಕೊಂಡು ರಣಮಸ್ತಖಾನನ ಕಡೆಗೆ ಹೊರಟುಹೋದಳು.

# ರಾಮರಾಜನ ಹೊಸವಿಚಾರ

ರಣಮಸ್ತಖಾನನು ಕರೀಮಬಕ್ಷನ ಸಂಗಡ ತನ್ನ ತಾಯಿಗೆ (ಮಾಸಾಹೇಬರಿಗೆ) ಹಾಗೆ ಸ್ಪಷ್ಟವಾಗಿ ಹೇಳಿಕಳಿಸಿದ್ದನ್ನು ನೋಡಿ ರಾಮರಾಜನಿಗೆ ಪರಮಾನಂದವಾಯಿತು. ರಣಮಸ್ತಖಾನನು ತನ್ನನ್ನು ಕೂಡಿಕೊಂಡದ್ದರಲ್ಲಿ ಮೋಸವೇನೂ ಇಲ್ಲೆಂಬ ನಂಬಗೆಯು ಆತನಿಗಾಯಿತು. ತಾನು ದೊಡ್ಡದೊಂದು ವ್ಯೂಹವನ್ನು ರಚಿಸಿ, ಮಹಾಕಾರ್ಯವನ್ನು ಸಾಧಿಸಿದನೆಂದು ಆತನು ಆನಂದಪಡಹತ್ತಿದನು. ಆತನು ವ್ಯೂಹರಚನೆಯಲ್ಲಿ ಮಹಾ ಸಮರ್ಥಪಿದ್ದು, ತನ್ನ ಆ ಸಾಮರ್ಥ್ಯದ ಬಲದಿಂದ ಆತನು ಈವರೆಗೆ ಹಲವು ಕಾರ್ಯಗಳನ್ನು ಸಾಧಿಸುತ್ತ ಬಂದಿದ್ದನು. ಆ ಕಾರ್ಯಗಳಲ್ಲೆಲ್ಲ ರಣಮಸ್ತಖಾನನ್ನು ತನ್ನ ಕಡೆಗೆ ಒಡಕೊಂಡದ್ದು ಹೆಚ್ಚಿನದೆಂದು ಆತನು ಭಾವಿಸಹತ್ತಿದನು. ಬಹಮನಿ ಬಾದಶಹರಲ್ಲಿ ಪರಸ್ಪರ ವೈಮನಸ್ಯವೂ, ಮಾತ್ಸರ್ಯವೂ ಇರುವವರೆಗೆ ತನ್ನ ರಾಜ್ಯಕ್ಕೆ ಭಯವಿಲ್ಲೆಂದು ರಾಮರಾಜನು ತಿಳಿದುಕೊಂಡಿದ್ದು ಆ ವೈಮನಸ್ಸೂ, ಮಾತ್ಸರ್ಯವೂ ಯಾವಾಗಲೂ ಇರುವಂತೆ ರಾಮರಾಜನು ತಂತ್ರವನ್ನು ಒಡ್ಡುತ್ತಬಂದಿದ್ದನು; ಆದರೆ, ಮೂವರು ಬಹಮನೀ ಬಾದಶಹರು ಒಂದಾದರೆ ಹ್ಯಾಗೆ ಮಾಡಬೇಕೆಂಬ ಭಯದಿಂದ ಮುಕ್ತನಾಗಲಿಕ್ಕೆ ಆತನು ಈಗ ಹವಣಿಸಹತ್ತಿದನು. ಮೂವರು ಬಾದಶಹರು ಒಟ್ಟಾಗಿ ಬಂದರೂ ಅವರ ಮಗ್ಗಲು ಮುರಿಯುವಷ್ಟು ಸಾಮರ್ಥ್ಯವನ್ನು ತಾನು ಪಡೆದು, ಒಮ್ಮೆ ಮುಸಲ್ಮಾನ ಬಾದಶಹರಿಗೆ ಚೆನ್ನಾಗಿ ಕೈ ತೋರಿಸಿದರೆ, ತಾನು ಅಂಜಿಕ್ಯನಾಗಿ ನಿರ್ಭಯವಾಗಿ ಎಲ್ಲರ ಮೇಲೆ ವರ್ಚಸ್ಸು ಕೂಡಿಸಬಹುದೆಂದು ಆತನು ಎಣಿಕೆ ಹಾಕಿದ್ದನು. ಈ ಎಣಿಕೆಯು ಕೈಗೂಡಲಿಕ್ಕೆ ಮುಸಲ್ಮಾನ ಬಾದಶಹರ ಮರ್ಮಸ್ಥಾನಗಳೂ, ಮುಸಾಲ್ಮಾನ ಸೈನ್ಯದ ಯುದ್ಧಮಾಡುವ ರೀತಿಯೂ ಗೊತ್ತಿದ್ದ ಒಬ್ಬ ಮುಸಲ್ಮಾನ ಸರದಾರನು ತನ್ನ ಕಡೆಗೆ ಒಡೆದು ಬರುವ ಅವಶ್ಯವಿತ್ತು. ಈವರೆಗೆ ವಿಜಯನಗರದ ಅರಸರು ತಮ್ಮ ದಂಡಿನಲ್ಲಿ ಪಠಾಣ, ಅರಬ ಮೊದಲಾದಜಾತಿಯ ಮುಸಲ್ಮಾನ ದಂಡಾಳುಗಳನ್ನು ಚಾಕರಿಗೆ ಇಟ್ಟುಕೊಳ್ಳುತ್ತ ಬಂದಿದ್ದರು. ಆಗಿನ ಕಾಲದಲ್ಲಿ ಮುಸಲ್ಮಾನರು ಮುಸಲ್ಮಾನರ ಮೇಲೆ, ಹಿಂದುಗಳು ಹಿಂದೂಗಳ ಮೇಲೆ ಶಸ್ತ್ರಹಿಡಿದು ಕಾದಲಿಕ್ಕೆ ಹಿಂದು ಮುಂದು ನೋಡುತ್ತಿದ್ದಿಲ್ಲ. ಹೊಟ್ಟೆತುಂಬ ಅನ್ನಹಾಕಿದವರ ನೌಕರರಾಗಿ ಬೇಕಾದವರು ಬೇಕಾದವರ ಸಂಗಡ ಯುದ್ಧ ಮಾಡುತ್ತಿದ್ದರು. ಆದ್ದರಿಂದ ಮುಸಲ್ಮಾನ ಬಾದಶಹರು ದಂಡಿನಲ್ಲಿ ಹಿಂದೂಜನರೂ, ಹಿಂದೂ ಅರಸರ ದಂಡಿನಲ್ಲಿ ಮುಸಲ್ಮಾನರೂ ಚಾಕರಿಗೆ ನಿಂತುಕೊಂಡು ತಮ್ಮ ತಮ್ಮ ಒಡೆಯರ ಪಕ್ಷದಿಂದ ಯುದ್ಧ ಮಾಡುತ್ತಿದ್ದರು. ರಾಮರಾಜನಿಗೆ ತನ್ನ ಹಿಂದೂ ದಂಡಾಳುಗಳ ಸಂಬಂಧದಿಂದಂತು ಪೂರ್ಣ ಅಭಿಮಾನವಿದ್ದೇ ಇತ್ತು; ಆದರೆ ಇತ್ತಿತ್ತ ಹಿಂದೂ ದಂಡಾಳುಗಳು ಡೌಲಿಗೆ ಬಿದ್ದು ಸಾಹಸದ ಕಾರ್ಯಗಳಲ್ಲಿ ಸ್ವಲ್ಪ ಮುಗ್ಗರಿಸುತ್ತಿರುವರೆಂಬದು ಆತನ ಮನಸ್ಸಿನಲ್ಲಿ ಕಟಿಯುತ್ತಿತ್ತು. ಆದ್ದರಿಂದಲೆ ಆತನು ತನ್ನಲ್ಲಿದ್ದ ಅರಬ ಪಠಾಣ ಜನರ ದಂಡನ್ನು ಇನ್ನಿಷ್ಟು ಹೆಚ್ಚಿಸಿ ತನ್ನ ಸೈನ್ಯದ ಸಾಮರ್ಥ್ಯವನ್ನು ಒಳಿತಾಗಿ ಹೆಚ್ಚಿಸಬೇಕೆಂದು ಆತುರಪಡಹತ್ತಿದನು.

ಈ ಪಠಾಣರ ಹಾಗು ಅರಬರ ಪರಾಕ್ರಮವು ವಿಜಯನಗರದ ರಾಜ್ಯದ ಉತ್ಕರ್ಷಕ್ಕೆ ಬಹುಮಟ್ಟಿಗೆ ಕಾರಣವಾಗಿದ್ದರಿಂದ ಈವರೆಗೆ ವಿಜಯನಗರದ ಅರಸರು ಮುಸಲ್ಮಾನ ದಂಡಾಳುಗಳ ಅನುವರ್ತನ ಮಾಡುತ್ತ ಬಂದಿದ್ದರೆಂದು ಹೇಳಬಹುದು. ಇದರಿಂದ ಮುಸಲ್ಮಾನರು ಒಂದೊಂದು ಪ್ರಸಂಗದಲ್ಲಿ ವಿಜಯನಗರದ ಅರಸರಿಗೂ ತಲೆಭಾರ ವಾಗುತ್ತಿದ್ದರು. ಮುಸಲ್ಮಾನ ದಂಡಾಳುಗಳಿಗಾಗಿ ವಿಜಯನಗರದ ಅರಸರು ತಮ್ಮ ರಾಜ್ಯದಲ್ಲಿ ಮಸೀದೆಗಳನ್ನು ಕಟ್ಟಿಸಿಕೊಟ್ಟಿದ್ದರು. ಮುಸಲ್ಮಾನರು ಹಿಂದೂ ಅಸರರಿಗೂ, ಅವರ ಸಿಂಹಾಸನಕ್ಕೂ ಕುರ್ನಿಸಾತ (ವಿಶೇಷ ಪ್ರಕಾರದ ನಮಸ್ಕಾರ) ಮಾಡಲಿಕ್ಕಿಲ್ಲೆಂದು ಹಟ ಹಿಡಿಯಲು, ವಿಜಯನಗರದ ರಾಯರು ಅಷ್ಟಕ್ಕಾಗಿ ಮುಸಲ್ಮಾನ ದಂಡಾಳುಗಳನ್ನು ಹೊರಗೆ ಹಾಕಲಿಲ್ಲ. ದರ್ಬಾರದಲ್ಲಿ ಸಿಂಹಾಸನದ ಮೇಲೆ ಕುರಾಣವಿಡುವ ಪದ್ಧತಿಯನ್ನು ಪ್ರಚಾರದಲ್ಲಿ ತಂದಿದ್ದರು. ಯಾರಾದರೂ ಈ ಸಂಬಂಧದಿಂದ ಮುಸಾಲ್ಮಾನರನ್ನು ಸಿಟ್ಟಿಗೆ ಎಬ್ಬಿಸಿದರೆ, ಅವರು–ನಾವು ಹಿಂದೂ ಅರಸರಿಗೆ, ಅಥವಾ ಅವರ ಸಿಂಹಾಸನಕ್ಕೆ ಕುರ್ನಿಸಾತವನ್ನು ಮಾಡದೆ, ಕುರಾಣಕ್ಕೆ ಮಾಡುತ್ತೇವೆಂದು ಸ್ಪಷ್ಟವಾಗಿ ಹೇಳುತ್ತಿದ್ದರು. ತಾತ್ಪರ್ಯವೇನೆಂದರೆ ವಿಜಯನಗರದ ಅರಸರು ಮುಸಲ್ಮಾನ ದಂಡಾಳುಗಳ ಹಟವನ್ನು ನಡಿಸಿಯಾದರೂ ಅವರನ್ನು ಇಟ್ಟುಕೊಳ್ಳುತ್ತಿದ್ದರು. ರಾಮರಾಜನು ತನ್ನ ಆಳಿಕೆಯಲ್ಲಿ ಹಿಂದೂ ಸೈನ್ಯದೊಡನೆ ಮುಸಲ್ಮಾನ ಸೈನ್ಯವನ್ನೂ ಹೆಚ್ಚಿಸಿ, ತಾನು ಅತ್ಯಂತ ಬಲಾಢ್ಯನಾದ ಮುಸಲ್ಮಾನ ಬಾದಶಹರ ಮಗ್ಗಲು ಮುರಿಯಬೇಕೆಂದು ಹವಣಿಸುತ್ತಿದ್ದನು. ಇಂಥ ಪ್ರಸಂಗದಲ್ಲಿ ರಣಮಸ್ತಖಾನನಂಥ ತರುಣ ವೀರನು ತನ್ನ ಪಕ್ಷವನ್ನು ಸ್ವೀಕರಿಸಿದ್ದು ಆ ಮಹತ್ವಾಕಾಂಕ್ಷಿಯಾದ ಹಿಂದೂ ರಾಜನ ಪರಮಾನಂದಕ್ಕೆ ಕಾರಣವಾಯಿತು.

ಕರೀಮಬಕ್ಷನನ್ನು ಕುಂಜವನಕ್ಕೆ ಕಳಿಸಿದ ಬಳಿಕ ರಾಮರಾಜನೂ, ರಣಮಸ್ತಖಾನನೂ ಏಕಾಂತದಲ್ಲಿ ಬಹಳ ಹೊತ್ತು ಮಾತಾಡಿದರು. ಇನ್ನು ಎಲ್ಲ ಮಾತಿನ ನಿರ್ಣಯವಾದ ಮೇಲೆ ಬಾದಶಹನ ಮುಂದೆಯಾದರೂ ಮುಸುಕು ಯಾಕೆಯೆಂದು ರಣಮಸ್ತಖಾನನು ವಿಜಾಪುರದ ಬಾದಶಹನಿಗೊಂದು ಪತ್ರವನ್ನು ಬರೆದು ಅದನ್ನು ಬೇಕಾದ ಒಬ್ಬ ಸೇವಕನ ಸಂಗಡ ಕಳಿಸಿಕೊಡ ಬೇಕೆಂದು ರಾಮರಾಜನಿಗೆ ಹೇಳಿದನು. ಆ ಪತ್ರದಲ್ಲಿ ರಣಮಸ್ತಖಾನನು ಬಾದಶಹನಿಗೆ– ನಾನು ಈಗ ಹಿಂದೂ ರಾಜನ ನೌಕರನಾಗಿರುವೆನು. ನಾನು ಕುಂಜವನವನ್ನು ಬಿಟ್ಟು ವಿಜಯ ನಗರದಲ್ಲಿ ಈಗ ಇರಹತ್ತಿದ್ದೇನೆ. ಈ ಹೊತ್ತಿನಿಂದ ನಾನು ನಿಮ್ಮ ನೌಕರನಲ್ಲ, ತಮ್ಮ ಶತ್ರುವಿನ ನೌಕರನು, ಎಂದು ಸ್ಪಷ್ಟವಾಗಿ ಬರೆದಿದ್ದನು. ಇದನ್ನು ನೋಡಿಯಂತು ರಾಮರಾಜನಿಗೆ ಬಹಳ ಸಮಾಧಾನವಾಯಿತು. ನಾನು ಸಂಪೂರ್ಣವಾಗಿ ಗೆದ್ದೆನೆಂದು ಆತನು ಸಂತೋಷಪಡ ಹತ್ತಿದನು. ರಣಮಸ್ತಖಾನನು ಹೀಗೆ ಪ್ರಸಿದ್ಧ ರೀತಿಯಿಂದ ತನ್ನನ್ನ ಕೂಡುವದಕ್ಕಿಂತ, ಗುಪ್ತರೀತಿ ಯಿಂದ ತನಗೆ ಸಹಾಯಮಾಡವದು ನೆಟ್ಟಗಾಗಬಹುದೆಂದು ಒಮ್ಮೆ ರಾಮರಾಜನು ಯೋಚಿಸಿದನು; ಆದರೆ ಗೌಪ್ಯವು ಬಹುದಿವಸ ಉಳಿಯಲಾರದೆಂತಲು, ರಣಮಸ್ತಖಾನನ ಸಹಾಯದಿಂದ ತನ್ನ ಸೈನ್ಯವನ್ನು ತಿದ್ದಬೇಕಾಗಿದ್ದಾಗ ಗೌಪ್ಯವು ಕೆಲಸದ್ದಲ್ಲವೆಂತಲೂ ಆತನು ತಿಳಿದು, ರಣಮಸ್ತಖಾನನ

ಪತ್ರವನ್ನು ವಿಜಾಪುರದ ಬಾದಶಹನ ಕಡೆಗೆ ಕಳಿಸಿಬಿಟ್ಟನು. ಇನ್ನು ಮೇಲೆ ವಿಜಾಪುರ, ಗೋವಳಗೊಂಡ, ಅಹಮ್ಮದನಗರ ಈ ಮೂವರು ಬಾದಶಹರನ್ನು ಪೀಡಿಸಿ, ಅವರೆಲ್ಲ ಒಟ್ಟಾಗುವಂತೆ ಮಾಡಿ,ಒಟ್ಟಾಗಿ ತನ್ನ ಮೇಲೆ ಆಗಿಬಂದ ಅವರನ್ನು ಬಗ್ಗುಬಡಿಯ ಬೇಕೆಂದು ರಾಮರಾಜನು ನಿಶ್ಚಯಿಸಿದನು. ಹೀಗೆ ಮಾಡದಿದ್ದರೆ ಮುಸಲ್ಮಾನ ಬಾದಶಹರ ಸೊಕ್ಕು ಇಳಿಯದೆಂತಲೂ, ಅವರ ಸೊಕ್ಕು ಇಳಿಸುವ ಕಾರ್ಯದ ಅಸ್ತಿವಾರವನ್ನು ತಾನು ಬಹಳ ಚೆನ್ನಾಗಿ ಹಾಕಿದೆನೆಂತಲೂ ಆತನು ಆನಂದಪಡಹತ್ತಿದನು.

ಆದರೆ ಸಂಸಾರದಲ್ಲಿ ಪರಿಶುದ್ಧಾನಂದವು ಮನುಷ್ಯನಿಗೆ ದೊರೆಯುವದು ದುರ್ಲಭ ವೆಂತಲೇ ಹೇಳಬೇಕಾಗುವದು. ಆನಂದದ ಭರವು ಕುಗ್ಗಿದ ಮೇಲೆ ಆ ಆನಂದದಲ್ಲಿ ಚಿಂತೆ, ಶಂಕೆ ಮೊದಲಾದ ದುಃಖ ಬೀಜಗಳ ಮೊಳಕೆಯೊಡೆದದ್ದು ಅನುಭವಕ್ಕೆ ಬಾರದೆ ಹೋಗುವದಿಲ್ಲ. ರಾಮರಾಜನ ಸ್ಥಿತಿಯಾದರೂ ಹೀಗೆಯೇ ಆಯಿತು. ರಾಮರಾಜನ ಸ್ವಭಾವವು ಮಹತ್ವಾ ಕ್ಯಾಂಕ್ಷಿಯಾಗಿದ್ದಂತೆ ಶಂಕಾಮಯವೂ ಆಗಿತ್ತು. ಮೊದಮೊದಲಿಗೆ ಎಲ್ಲ ಕೆಲಸವು ಅತ್ಯುತ್ತಮ ರೀತಿಯಿಂದ ಸಾಧಿಸಿತೆಂದು ಆತನಿಗೆ ತೋರಿ ಪರಮಾನಂದವಾಯಿತು; ಆದರೆ ಮುಂದೆ ಒಂದೆರಡು ದಿನಗಳಲ್ಲಿ ಆತನನ್ನು ಎರಡು ಮೂರು ಶಂಕೆಗಳು ಬಾಧಿಸಹತ್ತಿದವು. ಈಗ ನಡೆದದ್ದರಲ್ಲಿ ಮೋಸವಿರಲಿಕ್ಕಿಲ್ಲವಷ್ಟೆ? ಈ ರಣಮಸ್ತಖಾನನು ತನಗೆ ಮುಂಕುಬೂದಿಯನ್ನು ಹಚ್ಚುತ್ತಿರಲಿಕ್ಕಿಲ್ಲವಷ್ಟೆ? ಎಂಬ ಶಂಕೆಯು ಒಂದನೆಯದು. ಈತನ ತಾಯಿಯು ಏನಾದರೂ ಬೋಧಿಸಿ ಈತನ ಮನಸ್ಸನ್ನು ತಿರುಗಿಸಲಿಕ್ಕಿಲ್ಲವಷ್ಟೆ? ಎಂಬ ಶಂಕೆಯು ಎರಡನೆಯದು. ತಾನು ತರ್ಕಿಸಿದಂತೆ ಈತನು ತನ್ನಿಂದ ಮೇಹರ್ಜಾನಳಲ್ಲಿ ಹುಟ್ಟಿದ್ದೇ ನಿಜವಾಗಿದ್ದ ಪಕ್ಷದಲ್ಲಿ ಈತನು ತನ್ನ ನಿಜವಾದ ಕುಲವೃತ್ತಾಂತವನ್ನರಿತ ಬಳಿಕ ನನ್ನನ್ನು ಘಾತಿಸಲಿಕ್ಕಿಲ್ಲವಷ್ಟೆ? ಎಂಬ ಶಂಕೆಯು ಮೂರನೆಯದು. ಈ ಮೂರು ಶಂಕೆಗಳ ನಿವಾರಣಕ್ಕಾಗಿ ಆತನು ಮೂರು ಉಪಾಯಗಳನ್ನು ಯೋಚಿಸಿದನು. ರಣಮಸ್ತಖಾನನ ನಡತೆಯನ್ನು ಶೋಧಿಸುವದಕ್ಕಾಗಿ ಗುಪ್ತಚಾರರನ್ನಿಡಬೇಕೆಂದು ಮಾಡಿದನು. ತಾಯಿ-ಮಕ್ಕಳ ದರ್ಶನವಾಗದಂತೆ ವ್ಯವಸ್ಥೆಯನ್ನಿಡಬೇಕೆಂದು ನಿಶ್ಚಯಿಸಿದನು. ಆತನ ಕುಲ ವೃತ್ತಾಂತವು ಆತನಿಗೆ ತಿಳಿಯದಂತೆ ಜಾಗರೂಕವಾಗಿರಬೇಕೆಂದು ಗೊತ್ತುಮಾಡಿ ಕೊಂಡನು. ಈ ಮೂರು ಉಪಾಯಗಳು ಚೆನ್ನಾಗಿ ಸಾಧಿಸಬೇಕಾದರೆ, ರಣಮಸ್ತಖಾನನ್ನು ತನ್ನ ಅಂಗರಕ್ಷನನ್ನಾಗಿ ನಿಯಮಿಸಿಕೊಳ್ಳಬೇಕೆಂದು ಯೋಚಿಸಿದನು. ಅಂಗರಕ್ಷಕನಾದ ಬಳಿಕ ಯಾವಾಗಲೂ ತನ್ನನ್ನನುಸರಿಸಿಯೇ ಇರಬೇಕಾದದ್ದರಿಂದ, ತಾನು ಒಂದು ಬಗೆಯಿಂದ ರಣಮಸ್ತಖಾನನ ಮೇಲೆ ಕಣ್ಣು ಇಟ್ಟ ಹಾಗಾಗುತ್ತದೆಂದು ರಾಮರಾಜನು ತಿಳಿದನು. ಇವೆಲ್ಲ ವಿಚಾರಗಳು ಮೊದಲನೆಯ ದಿವಸದ ರಾತ್ರಿಯಲ್ಲಿಯೇ ರಾಮರಾಜನ ಮನಸ್ಸಿನಲ್ಲಿ ಬಂದುಹೋದವು.

ಇವೆಲ್ಲ ವಿಚಾರಗಳು ಬಂದುಹೋದ ಮೇಲೆ ಆಕಸ್ಮಿಕವಾಗಿ ಒಂದು ವಿಚಾರವು ರಾಮರಾಜನ ಮನಸ್ಸಿನಲ್ಲಿ ಉತ್ಪನ್ನವಾಯಿತು. ತಾನುಕುಂಜವನಕ್ಕೆ ಹೋಗಿ ಮೇಹರ್ಜಾನಳನ್ನು ಕಾಣಬೇಕೆಂಬ ಇಚ್ಛೆಯು ಆತನಲ್ಲಿ ಉತ್ಪನ್ನವಾಯಿತು. ರಣಮಸ್ತಖಾನನ ರೂಪವು ತನ್ನ

ರೂಪವನ್ನು ಅಚ್ಚಳಿಯದೆ ಹೋಲುತ್ತಿರುವದನ್ನು ನೋಡಿ, ಈತನು ತನ್ನಮಗನಾಗಿರಬಹುದೆಂಬ ಸಂಶಯವು ರಾಮರಾಜನ ಮನಸ್ಸಿನಲ್ಲಿ ಉತ್ಪನ್ನವಾಗಿತ್ತು. ಈ ಸಂಶಯದಿಂದ ರಾಮರಾಜನು ಒಮ್ಮೆ ಕುಂಜನವನಕ್ಕೆ ಹೋಗಿರುವಾಗ ಪ್ರತ್ಯಕ್ಷ ಮೇಹರ್ಜಾನಳೇ ಸುಳಿದಾಡಿದ ಹಾಗಾದದ್ದನ್ನು ನೋಡಿದಾಗ ಆತನ ಆ ಸಂಶಯವು ಮತ್ತಿಷ್ಟು ದೃಢವಾಯಿತು. ಮುಂದೆ ತನ್ನ ಸೇವಕರ ಸಹಾಯದಿಂದ ಧನಮಲ್ಲನನ್ನು ಹಿಡತರಿಸಿ ವಿಚಾರಿಸಿದಾಗ ಆತನ ಸಂಶಯವು ನಿವಾರಣವಾಗಿ ಮುಸಾಹೇಬರೆನಿಸಿಕೊಳ್ಳುವವರು ತನ್ನ ಪ್ರಿಯ ಮೇಹರ್ಜಾನಳೇ ಎಂತಲೂ, ಲೈಲಿಯೆನಿಸಿಕೊಳ್ಳುವವಳು ಆಕೆಯ ದಾಸಿಯಾದ ಮಾರ್ಜೀನೆಯೆಂತಲೂ ಆತನು ನಿಶ್ಚಯಿಸಿದನು. ಆದರೆ ರಣಮಸ್ತಖಾನನು ಕುಂಜವನದಲ್ಲಿರುವವರೆಗೆ ಮೇಹರ್ಜಾನಳನ್ನು, ಕಾಣಲಿಕ್ಕೆ ರಾಮರಾಜನಿಗೆ ಧೈರ್ಯವಾಗಿದ್ದಿಲ್ಲ. ಈ ದಿನ ರಣಮಸ್ತಖಾನನು ತನ್ನ ಕೈಯಲ್ಲಿ ಪೂರ್ಣವಾಗಿ ಸಿಕ್ಕುಹೋಗಿರುವದ ರಿಂದ ಒಬ್ಬನೇ ಕುಂಜವನದಲ್ಲಿರುವ ಮೇಹರ್ಜಾನಳನ್ನು ಕಾಣುವದು ಸುಲಭವೆಂದು ಭಾವಿಸಿ, ಆತನು ಕುಂಜವನಕ್ಕೆ ಹೋಗಬೇಕೆಂದು ನಿಶ್ಚಯಿಸಿದನು. ಮೇಹರ್ಜಾನಳನ್ನು ತಾನು ಕಂಡರೆ, ಆಕೆಯು ತನ್ನನ್ನು ಪ್ರೀತಿಸಬಹುದೊ, ನಿರಾಕರಿಸಬಹುದೊ ಎಂಬದು ರಾಮರಾಜನಿಗೆ ತಿಳಿಯದಾಯಿತು. ಮೇಹರ್ಜಾನಳಿಗೆ ತನ್ನ ಮೇಲೆ ಪ್ರೀತಿಯೇ ಇಲ್ಲದಿದ್ದರೆ ಆಕೆಯು ಇಷ್ಟು ವರ್ಷಗಳ ಮೇಲೆ ಮಗನನ್ನು ಕಟ್ಟಿಕೊಂಡು ಬಂದು ತಾನು ಮೊದಲು ಇರುತ್ತಿದ್ದ ಕುಂಜವನದಲ್ಲಿಯೇ ಬಂದು ಇರುತಿದ್ದಿಲ್ಲೆಂದು ಭಾವಿಸಿ, ಮೇಹರ್ಜಾನಳ ಪ್ರೇಮವು ತನ್ನ ಮೇಲೆ ಇರುವದೆಂದು ಆತನು ಕಲ್ಪಿಸಿದನು. ಹಾಗೆ ಪ್ರೇಮವಿದ್ದ ಪಕ್ಷದಲ್ಲಿ ಆಕೆಯು ಇಷ್ಟು ದಿವಸ ಯಾವದೊಂದು ನೆವದಿಂದ ಯಾಕೆ ತನ್ನನ್ನು ಕಂಡಿರಲಿಕ್ಕಿಲ್ಲೆಂದು ಶಂಕಿಸಿ, ತನ್ನ ಮೇಲೆ ಆಕೆಯ ಪ್ರೇಮವಿರುವದೋ ಇಲ್ಲವೋ ಎಂದು ಆತನು ಆತಂಕಪಟ್ಟನು. ತನ್ನ ಮಗನ ಮುಂದೆ ತನ್ನ ಚರಿತ್ರವನ್ನು ಹೇಳಲಿಕ್ಕೆ ಹೆದರಿ ಹೀಗೆ ಸುಮ್ಮನಿರಬಹುದಾದ್ದರಿಂದ, ಹೀಗೆ ತಾನು ಆಕೆಯ ಮಗನಿಲ್ಲದಾಗ ಹೋಗಿ ಮಾತಾಡಿಸಿ ಹೇಳಿಕೊಂಡರೆ, ಆಕೆಯು ಪ್ರಸನ್ನಳಾದರೂ ಆಗಬಹು ದೆಂದು ಆತನು ಆಶೆಪಟ್ಟನು. ಹೀಗೆ ವಿಚಾರಮಾಡುತ್ತಿರುವಾಗ ರಾಮರಾಜನಿಗೆ ಅಂದಿನ ರಾತ್ರಿ ನಿದ್ರೆಯು ಹತ್ತಿತು. ಮರುದಿನ ಬೆಳಗಾಗಲು ಅದೇ ವಿಚಾರಗಳು ಆತನ ಮನಸ್ಸಿನಲ್ಲಿ ಹುಟ್ಟಿ ಬಾಧಿಸಹತ್ತಿದವು. ಅಂದಿನ ರಾತ್ರಿ ಆತನು ಕುಂಜವನಕ್ಕೆ ಹೋಗಬೇಕೆಂದು ನಿಶ್ಚಯಿಸಿದನು. ಸಂಗಡ ಯಾರನ್ನು ಕರಕೊಂಡು ಹೋಗಬೇಕೆಂದು ಆತನು ಆಲೋಚಿಸುತ್ತಿರಲು, ರಣಮಸ್ತಖಾನನು ಬಂದನೆಂದು ಸೇವಕನು ಅರಿಕೆ ಮಾಡಿಕೊಂಡನು. ಕೂಡಲೆ ರಾಮರಾಜನು ಆತನನ್ನು ಬರಮಾಡಿಕೊಳ್ಳಲು, ಅವರಿಬ್ಬರ ಹಿತಗೋಷ್ಠಿಗಳಿಗೆ ಆರಂಭವಾಯಿತು.

ಈ ಹೊತ್ತಿನವರೆಗೆ ಇವರಿಬ್ಬರ ಭೆಟ್ಟಿಯು ಹಲವು ಸಾರೆ ಆಗಿತ್ತು; ಆದರೆ ಇಂದಿನ ಭೆಟ್ಟಿಯಲ್ಲಿ ರಣಮಸ್ತಖಾನನನ್ನು ನೋಡಿ ರಾಮರಾಜನ ಅಂತಃಕರಣವು ವಾತ್ಸಲ್ಯ ಪೂರ್ಣವಾದಂತೆ, ಬೇರೆ ಯಾವ ಕಾಲದಲ್ಲಿಯೂ ಆಗಿದ್ದಿಲ್ಲ. ರಾಮರಾಜನು ರಣಮಸ್ತ ಖಾನನನ್ನು ಬಿಗಿಯಾಗಿ ಅಪ್ಪಿಕೊಳ್ಳಬೇಕೆಂದು ಮಾಡಿದನು. ಆತನು ವಾತ್ಸಲ್ಯಪೂರ್ಣ

ದೃಷ್ಟಿಗಳಿಂದ ರಣಮಸ್ತಖಾನನನ್ನು ಎವೆಯಿಕ್ಕದೆ ನೋಡಹತ್ತಿದನು. ಇದನ್ನು ನೋಡಿ ರಣಮಸ್ತಖಾನನ ಮನಸ್ಸಿಗೆ ಹ್ಯಾಗೆ ಹ್ಯಾಗೋ ಆಯಿತು. ನಾನು ತನ್ನನ್ನು ಬಂದು ಕೂಡಿದ್ದರಿಂದಲೇ ರಾಮರಾಜನಿಗೆ ಇಷ್ಟು ಸಂತೋಷವಾಗಿರುವದೆಂದು ರಣಮಸ್ತಖಾನನು ತರ್ಕಿಸಿದನು. ಅದರ ಹೊರತು ಬೇರೆ ಕಾರಣವು ರಣಮಸ್ತಖಾನನಿಗೆ ತೋಚಲಿಲ್ಲ. ರಾಮರಾಜನು ಈ ಪರಿ ತನ್ನನ್ನು ಪ್ರೀತಿಸುವದನ್ನು ನೋಡಿ ರಣಮಸ್ತಖಾನನು ಬಹಳ ಸಂತೋಷಪಟ್ಟನು. ರಾಮರಾಜನು ತನ್ನನ್ನು ಪ್ರೀತಿಸಿದಷ್ಟು ಹಿತವೆಂದು ತಿಳಿದು ಆತನು ರಾಮರಾಜನನ್ನು ಕುರಿತು–ತಾವು ಈ ಪರಿ ನನ್ನನ್ನು ಪ್ರೀತಿಸುವದನ್ನು ನೋಡಿ ನನಗೆ ಆಗಾಗ್ಗೆ ಬಹು ಚಮತ್ಕಾರವಾಗುತ್ತದೆ ನಿಜವಾಗಿ ನೋಡಿದರೆ ತನ್ನ ಒಡೆಯನ ಮೇಲೆ ತಿರುಗಿಬಿದ್ದು ಶತ್ರುಪಕ್ಷದ ಚಾಕರಿಗೆ ನಿಂತವನ ಸಂಗಡ ಬಹು ಎಚ್ಚರದಿಂದ ನಡೆಯಬೇಕಾಗುವದು; ಯಾಕಂದರೆ, ತನ್ನ ಒಡೆಯನ ಮೇಲೆ ತಿರುಗಿ ಬಿದ್ದವ ಪ್ರಸಂಗದಲ್ಲಿತನ್ನ ಮೇಲೆಯೂ ಯಾಕೆ ತಿರುಗಿಬೀಳಲಿಕ್ಕಿಲ್ಲೆಂಬದನ್ನು ಆಲೋಚಿಸ ಬೇಕಾಗುವದು; ಆದ್ದರಿಂದ ಅಂಥ ಫಿತೂರಿಯ ಮನುಷ್ಯನನ್ನು ಹೇಳಿಕೇಳಿ ನಾಲ್ಕುಮೊಳ ದೂರದಲ್ಲಿಯೇ ಇಡಬೇಕಾಗುತ್ತದೆ. ಹೀಗಿದ್ದು ನೀವು ನನ್ನನ್ನು...... ಎಂದು ನುಡಿಯುತ್ತಿರಲು, ರಾಮರಾಜನು ನಡುವೆ ಬಾಯಿಹಾಕಿ–ಛೀ, ಛೀ! ಖಾನಸಾಹೇಬ, ನೀವು ಇಂಥ ವಿಚಾರವನ್ನು ಮನಸ್ಸಿನಲ್ಲಿ ತರಕೂಡದು. ನಾನಂತು ನಿಮ್ಮನ್ನು ನನ್ನ ಅಂಗ ರಕ್ಷಕರನ್ನಾಗಿ ನಿಯಮಿಸಬೇಕೆಂದು ಮಾಡಿದ್ದೇನೆ. ಅದು ತಮ್ಮ ಮನಸ್ಸಿಗೆ ಬಂದರೆ ಬಹಳ ನೆಟ್ಟಗಾಗುವದು ತಾವು ಯಾವಾಗಲೂ ನನ್ನ ಬಳಿಯಲ್ಲಿರಬೇಕೆಂತಲೇ ನಾನು ಇಚ್ಛಿಸುವೆನು. ನೀವು ಒಪ್ಪಿಕೊಳ್ಳುವದೊಂದೇ ತಡ, ನಮ್ಮ ಅಂಗರಕ್ಷಕರಾದಿರೆಂದು ತಿಳಿಯಿರಿ; ಅನ್ನಲು, ರಣಮಸ್ತಖಾನನು—ಸರಿ ಸರಿ! ಇದೇನು ಕೇಳುವದು? ನಾನು ತಮ್ಮ ನೌಕರನಿರಲು, ತಮ್ಮ ಅಪ್ಪಣೆಗೆ ಹೊರಗಾಗುವೆನೆ? ತಾವು ಒಪ್ಪಿಸಿದ ಕೆಲಸವನ್ನು ಮಾಡಲಿಕ್ಕೆ ನಾನು ಸಿದ್ಧನಿದ್ದೇನೆ. ತಮ್ಮ ಅಪ್ಪಣೆಯಂತೆ ನಾನು ನಡಕೊಳ್ಳತಕ್ಕವನು. ನಾನು ತಮ್ಮವನು, ಅಂದಬಳಿಕ ಹೆಚ್ಚಿಗೆ ನಾನೇನು ಹೇಳಲಿ? ಎಂದು ಕೇಳಿದನು. ಅದಕ್ಕೆ ರಾಮರಾಜನು— ಛೀ, ಛೀ, ಛೀ! ನನ್ನ ನೌಕರನೆಂದು ಯಾಕೆ ಅನ್ನುತ್ತೀರಿ; ನೀವು ನನ್ನ ನೌಕರರಲ್ಲ, ತರುಣ ಮಿತ್ರರಿರುತ್ತೀರಿ. ಲೋಕೋಪ ಚಾರಾರ್ಥವಾಗಿ ನಿಮ್ಮ ಹೆಸರನ್ನು ಯಾವದಾದರೂ ಅಧಿಕಾರದಲ್ಲಿ ಯೋಜಿಸಬೇಕಾಗಿರುವದು; ಆದರೆ ನಿಮಗೆ ನನ್ನನ್ನು ಕೂಡಿದ ಬಗ್ಗೆ ಪಶ್ಚಾತ್ತಾಪವಾಗುತ್ತಿದ್ದರೆ, ಮತ್ತು ಈತನ ಸಂಗತಿಯಿಂದ ನಾನು ಕೆಟ್ಟೆನೆಂದು ನೀವು ಭಾವಿಸುತ್ತಿದ್ದರೆ, ನನಗೆ ನೀವು ಸ್ಪಷ್ಟವಾಗಿ ಹೇಳಿರಿ; ಸಂಕೋಚ ಪಡಬೇಡಿರಿ. ನಿಮಗೆ ನಾನು ಯಾವ ಬಗೆಯ ಉಪದ್ರವವನ್ನೂ ಕೊಡುವದಿಲ್ಲ, ನಿಮ್ಮ ಮನಸ್ಸಿನೊಳಗಿನ ಆ ವಿಚಾರಗಳು ನಷ್ಟವಾಗುವವರೆಗೆ ಸ್ವಸ್ಥವಾಗಿ ಇರಬೇಕೆಂದು ನಾನು ನಿಮಗೆ ಹೇಳತಕ್ಕವನು.

ಈ ಮೇರೆಗೆ ರಾಮರಾಜನ, ಹಾಗು ರಣಮಸ್ತಖಾನನ ಸಂಭಾಷಣಗಳಾದ ಬಳಿಕ ಕೆಲವು ಹೊತ್ತಿನ ಮೇಲೆ ರಣಮಸ್ತಖಾನನು ರಾಮರಾಜನ ಅಂಗರಕ್ಷಕನಾಗಲು ಒಪ್ಪಿಕೊಂಡನು. ಆತನು ರಾಮರಾಜನನ್ನು ಕುರಿತು— ಮಹಾರಾಜರೇ, ನೀವು ಈಗ

ನನಗೊಪ್ಪಿಸಿದ ಚಾಕರಿಯು ನನಗೆ ಬಹಳ ಸೇರುತ್ತದೆ; ಯಾಕಂದರೆ, ನಾನು ಅಂಗರಕ್ಷಕ ನಾಗಿರುವಾಗ ನಾನು ಮಾಡುವ ಕೆಲಸವು ಮಹಾರಾಜರ ಕಣ್ಣಿಗೆಬಿದ್ದಂತೆ, ಬೇರೆ ಯಾವ ಪ್ರಸಂಗದಲ್ಲಿಯೂ ನನ್ನ ಕೆಲಸವು ಮಹಾರಾಜರ ಕಣ್ಣಿಗೆ ಬೀಳಲಾರದು; ಆದರೆ ನಾನು ತಮ್ಮ ಕಡಗೆ ಬಂದಕೂಡಲೆ ನನ್ನನ್ನು ಹೀಗೆ ಅಂಗ ರಕ್ಷಕನಾಗಿ ನಿಯಮಿಸಿದರೆ, ನಿಮ್ಮ ಜನರು ಏನಂದಾರೆಂಬುದನ್ನು ತಾವು ವಿಚಾರಮಾಡತಕ್ಕದ್ದು. ನಾನು ಆರಂಭದಿಂದಲೇ ಅವರ ಕಣ್ಣಲ್ಲಿ ಒತ್ತುವದು ಸರಿಯಲ್ಲ ಎಷ್ಟಾದರೂ ನಾನು ಫಿತೂರಿಯಾಗಿ ಬಂದವನು; ಅಂದಬಳಿಕ ಒಮ್ಮೆಲೆ ಎಲ್ಲರು ನನ್ನ ಮೇಲೆ ಹ್ಯಾಗೆ ವಿಶ್ವಾಸ ವಿಟ್ಟಾರು? ಆದ್ದರಿಂದ ಕ್ರಮಕ್ರಮವಾಗಿ ನನ್ನನ್ನು ಈ ಕೆಲಸದಲ್ಲಿ ಯೋಜಿಸಬೇಕೆಂದು ನಾನು ಹೇಳಿಕೊಳ್ಳುವೆನು. ಸಧ್ಯಕ್ಕೆ ನಾನು ನಿಮ್ಮ ಸೈನ್ಯದೊಳಗಿನ ಪಠಾಣ ಜನರ ಗುರುತು ಪರಿಚಯ ಮಾಡಿಕೊಳ್ಳುವೆನು. ಸೈನ್ಯದಲ್ಲಿ ಪಠಾಣರ ಸಂಖ್ಯೆಯು ಎಷ್ಟು ಇರುವದು? ಅವರ ವ್ಯವಸ್ಥೆಯು ಹ್ಯಾಗಿರುವದು? ಅವರ ಗುಣಗುಟ್ಟುವಿಕೆಯೂ, ತಕರಾರುಗಳೂ ಏನಾದರೂ ಇರುವವೋ ಹ್ಯಾಗೆ? ಅವರು ಬಹುದಿವಸ ಕೆಲಸವಿಲ್ಲದೆ ಕುಳಿತುಕೊಂಡಿರುವದರಿಂದ ಅವರಲ್ಲಿ ಆಲಸ್ಯವೂ, ಕೂಳಬಾಕತನವೂ ಸೇರಿರುವವೋ ಹ್ಯಾಗೆ? ಇವನ್ನು ಮೊದಲು ನಾನು ಪರೀಕ್ಷಿಸುವೆನು. ಬೇರೆ ನೌಕರರಂತೆ ನಾನು ದಿನಾಲು ಮಾಡಿದ ಕೆಲಸವನ್ನು ಹೇಳಲಿಕ್ಕೆ ತಮ್ಮ ಬಳಿಗೆ ಬರುತ್ತಹೋಗುವೆನು. ಹೀಗೆ ನಾನು ಬರುತ್ತಿರುವಾಗ ಮೆಲ್ಲಮೆಲ್ಲನೆ ನನ್ನನ್ನು ಏರಿಸುತ್ತ ಕಡೆಗೆ ಈ ಕೆಲಸವನ್ನು ಕೊಟ್ಟರೆ ನೆಟ್ಟಗಾಗುವದು. ಇದರ ಮೇಲೆ ತಮ್ಮ ಅಪ್ಪಣೆಯಂತೆ ನಾನು ನಡೆದುಕೊಳ್ಳಲು ಸಿದ್ಧನಾಗಿರುವೆಂದು ನಾನು ಆಡಿತೋರಿಸುವ ಕಾರಣವಿಲ್ಲ, ಎಂದು ಹೇಳಿದನು. ರಾಮರಾಜನು ರಣಮಸ್ತಖಾನನ ಈ ಮಾತುಗಳನ್ನು ಕೇಳಿ ಕೌತುಕಪಟ್ಟನು. ಈತನು ತಾರುಣ್ಯದಲ್ಲಿಯಾದರೂ ಒಳ್ಳೆಯ ವಿಚಾರವಂತನಿರುವನೆಂದು ತಿಳಿದು ಸಮಾಧಾನಪಟ್ಟನು. ಆತನು ನಕ್ಕು ರಣಮಸ್ತಖಾನನ್ನು ಕುರಿತು— ಸರಿ ಸರಿ! ನೀವು ಹೇಳುವ ಉಪಾಯವೂ ಸರಿಯಾಗಿರುತ್ತದೆ. ಅದರಂತೆಯೇ ಈಗ ಮಾಡೋಣ. ನಮ್ಮ ಯಾವತ್ತು ಸೈನ್ಯ ಆಧಿಪತ್ಯವು ನಮ್ಮ ಬಂಧುವಿನ ಕಡೆಗಿರುವದೆಂಬದನ್ನು ನೀವು ಬಲ್ಲಿರಿ. ನೀವು ಈಗ ಹೋಗಿ ಅವರನ್ನು ಕಂಡು ಬರ್ರಿ. ಈವೊತ್ತಿನವರೆಗೆ ಆದ ನಮ್ಮ ನಿಮ್ಮ ವ್ಯವಹಾರವೆಲ್ಲ ಅವರಿಗೆ ಗೊತ್ತೇ ಇರುತ್ತದೆ. ಅವರ ಒಪ್ಪಿಗೆಯಿಂದಲೇ ನಾನು ನಿಮ್ಮೊಡನೆ ಆಲೋಚಿಸಿರುವೆನೆಂಬದು ಅವರ ಭೆಟ್ಟಿಗೆ ಹೋದಾಗ ನಿಮಗೆ ಗೊತ್ತಾಗಬಹುದು. ಸೈನ್ಯದ ಸ್ಥಿತಿಗತಿಗಳೆಲ್ಲ ಅವರಿಗೆ ಗೊತ್ತಿರುವದರಿಂದ ನೀವು ಅವಶ್ಯವಾಗಿ ಅವರನ್ನು ಕಾಣತಕ್ಕದ್ದು, ಇನ್ನು ನೀವು ನಡುವೆ ಎಂದಾದರೂ ಒಂದು ದಿನ ನನ್ನನ್ನು ಕಾಣಲಿಕ್ಕೆ ಬಾರದಿದ್ದರೂ ನಡೆಯಬಹುದು. ನಾವು ಬೇರೊಂದು ಕೆಲಸದಲ್ಲಿ ತೊಡಗುವವರಿದ್ದೇವೆ ಎಂದು ಹೇಳಿ ರಾಮರಾಜನು ಆತನಿಗೆ ಹೋಗಲಪ್ಪಣೆಕೊಟ್ಟನು.

# ಆತ್ಮಹತ್ಯೋಪಕ್ರಮ

ರಣಮಸ್ತಖಾನನು ತನ್ನನ್ನು ಬಂದುಕೂಡಿದ್ದರೂ ಆತನ ತಾಯಿಯು ಆತನ ಮನಸ್ಸನ್ನು ಎಲ್ಲಿ ತಿರಗಿಸುವಳೋ ಎಂಬ ಭಯವು ರಾಮರಾಜನ ಮನಸ್ಸಿನೊಳಗಿಂದ ಹೋಗಿದ್ದಿಲ್ಲ. ಮೇಹರ್ಜಾನಳು ತಾನು ಸ್ವತಃ ಆ ಕೆಲಸವನ್ನು ಮಾಡಲಿಕ್ಕೆ ಪ್ರವೃತ್ತಳಾಗದಿದ್ದರೂ, ತನ್ನ ವೃದ್ಧದಾಸಿಯಾದ ಮಾರ್ಜೀನೆಯು ಮುಖಾಂತರ ಆ ಕಾರ್ಯವನ್ನು ಆಕೆಯು ಮಾಡಿಸಬಹುದೆಂದು ಆತನು ತರ್ಕಿಸಿದ್ದನು. ಮೇಹರ್ಜಾನಳು ಈ ಕಾರ್ಯಕ್ಕೆ ಉಪಕ್ರಮಿಸುವ ಮೊದಲೇ ತಾನು ಒಮ್ಮೆ ಕುಂಜವನಕ್ಕೆ ಹೋಗಿ ಮೇಹರ್ಜಾನಳನ್ನು ಒಲಿಸಿಕೊಳ್ಳಬೇಕೆಂದು ಆತನು ನಿಶ್ಚಯಿಸಿದನು. ತಾನು ವೇಷಾಂತರದಿಂದ ಇಂದಿನ ರಾತ್ರಿಯೇ ಕುಂಜವನಕ್ಕೆ ಹೋಗಿ, ರಣಮಸ್ತಖಾನನು ನನ್ನನ್ನು ಮಾಸಾಹೇಬರ ಕಡೆಗೆ ಕಳಿಸಿರುವದರಿಂದ, ನನಗೆ ಅವರ ದರ್ಶನಮಾಡಿಸಿರೆಂದು ಕಾವಲುಗಾರರಿಗೆ ಹೇಳಿ ತನ್ನ ಕಾರ್ಯವನ್ನು ಸಾಧಿಸಬೇಕೆಂದು ಆ ರಾಯನು ಯೋಚಿಸಿದನು. ಮಗನು ಏನೋ ಹೇಳಿಕಳಿಸಿರುವನೆಂದು ತಿಳಿದು ಮೋಹದಿಂದ ಮೇಹರ್ಜಾನಳು ನನ್ನನ್ನು ಕಂಡೇಕಾಣುವಳು. ಈ ಹಂಚಿಕೆಯಿಂದ ಆಕೆಯ ಬಳಿಗೆ ಹೋಗಿ, ಬಹು ಗುಪ್ತಸುದ್ದಿಯೆಂಬ ನೆವದಿಂದ ಏಕಾಂತದ ಪ್ರಸಂಗವನ್ನು ಒದಗಿಸಿಕೊಂಡು, ಆಮೇಲೆ ಮೇಹರ್ಜಾನಳಿಗೆ ತನ್ನ ಗುರುತುಮಾಡಿಕೊಡಬೇಕೆಂದು ಎಣಿಕೆ ಹಾಕಿದನು. ಮೋಹಾಂಧನೂ, ವಿವೇಕಭ್ರಷ್ಟನೂ ಆದ ರಾಮರಾಜನು ಹೀಗೆ ಯೋಚಿಸಿ ತನ್ನ ನಿತ್ಯ ಕೃತ್ಯಗಳನ್ನು ಮಾಡುವದಕ್ಕಾಗಿ ಏಳುತ್ತಿರಲು, ದ್ವಾರರಕ್ಷಕನು ಬಂದು— ಒಬ್ಬ ಗುಪ್ತಚಾರನು ತಮ್ಮನ್ನು ಕಾಣಲಿಕ್ಕೆ ಬಂದಿದ್ದಾನೆ ಆತನು "ಕೃಪಾ" ಎಂಬದು ಗುರುತಿನ ಶಬ್ದವಿರುತ್ತದೆಂದು ಸೂಚಿಸಲು ಹೇಳಿರುವನು, ಎಂದು ನುಡಿದನು. "ಕೃಪಾ" ಎಂಬ ಶಬ್ದವು ಕಿವಿಗೆ ಬಿದ್ದಕೂಡಲೆ ರಾಮರಾಜನು ಕ್ಷಣವಾದರೂ ವಿಲಂಬಮಾಡದೆ ಆ ಚಾರನನ್ನು ಕರೆಸಿಕೊಂಡು, ಏಕಾಂತದಲ್ಲಿ ಆತನನ್ನು ಕುರಿತು— "ಏನು ಸುದ್ದಿಯನ್ನು ತಂದಿರುವೆ, ಬೇಗನೆ ಹೇಳು" ಎಂದು ಕೇಳಲು ಚಾರನು— "ರಣಮಸ್ತಖಾನನು ಎಲ್ಲಿ ಇರುವನೆಂಬದವರು ಶೋಧ ಮಾಡುತ್ತ ಒಬ್ಬ ಮುಸಲ್ಮಾನ ಮುದುಕಿಯು, ಆಕೆಯ ಸಂಗಡ ಒಬ್ಬ ಮುಸಲ್ಮಾನ ಸೇವಕನೂ ಬಂದಿದ್ದಾರೆ. ಸದ್ಯಕ್ಕೆ ಅವರು ಊರ ಹೊರಗಿನ ಧರ್ಮಶಾಲಿಯಲ್ಲಿ ಇರುವರು" ಎಂದು ಹೇಳಿದನು. ಅದನ್ನು ಕೇಳಿಕೂಡಲೆ ರಾಮರಾಜನು ಆ ಮುದುಕಿಯ ಲಕ್ಷಣವನ್ನು ಕೇಳಿಕೊಂಡು ಮಾರ್ಜೀನೆಯೇ ಬಂದಿರುವಳೆಂದು ತಿಳಿದು, ಆ ಚಾರನಿಗೆ— "ನೀನು ಇದೇ ಕಾಲಿನಲ್ಲಿ ತಿರುಗಿ ಹೋಗು. ಅವರಿಬ್ಬರನ್ನು ಇನ್ನು ಎರಡು ದಿನ ಧರ್ಮಶಾಲೆಯ ಹೊರಗೆ ಬಿಡಬೇಡೆಂದು ನಾನು ಹೇಳಿರುತ್ತೇನೆಂದು ಸುಬ್ರಹ್ಮಣ್ಯನಿಗೆ ತಿಳಿಸು; ಆತನು ಹಾಗ ಮಾಡಲಿಕ್ಕ ಒಂದು ಪಕ್ಷದಲ್ಲಿ ಹಿಂದುಮುಂದು ನೋಡಿದರೆ ಆತನಿಗೆ ಈ ಉಂಗುರವನ್ನು ತೋರಿಸು. ಉಂಗುರವನ್ನು ಆತನಿಗೆ ಕೊಡಬೇಡ, ತಿರುಗಿ ತಕ್ಕೊಂಡು ಬಾ. ಉಂಗುರವನ್ನು ನೋಡಿದ ಕೂಡಲೆ ಆತನು ಎಲ್ಲ ವ್ಯವಸ್ಥೆಯನ್ನು ಮಾಡುವನು, ನಿನಗೆ ಅದರ ಚಿಂತೆ ಬೇಡ. ನಡೆ ನಡೆ" ಎಂದು ಹೇಳಿ ಆತನನ್ನು ಕಳಿಸಿಕೊಟ್ಟನು. ಚಾರನು ಅತ್ತ ಹೋದ ಕೂಡಲೆ ರಾಮರಾಜನು

ತನ್ನ ಮನಸ್ಸಿನಲ್ಲಿ— "ಒಟ್ಟಿಗೆ ನನ್ನದೊಂದು ತರ್ಕವು ನಿಜವಾದಂತಾಯಿತು. ಆಕೆಯು ಮಾರ್ಜೀನೆಯೇ ನಿಶ್ಚಯವು. ರಣಮಸ್ತಖಾನನಿಗೆ ಎಲ್ಲ ಸುದ್ದಿಯನ್ನು ಹೇಳುವದಕ್ಕಾಗಿ ತನ್ನ ಒಡೆಯಳ ಕಡೆಯಿಂದ ಬಂದಿರುವಳು. ಆಕೆಗೂ ರಣಮಸ್ತಖಾನನಿಗೂ ಭೆಟ್ಟಿಯಾಗದಂತೆ ವ್ಯವಸ್ಥೆಯನ್ನು ಮಾಡಿರುವೆನು. ಇನ್ನು ಇಂದೇ ರಾತ್ರಿ ನಾನು ಕುಂಜವನಕ್ಕೆ ಹೋಗಲೇಬೇಕು" ಎಂದು ಯೋಚಿಸಿ, ರಾತ್ರಿಯು ಯಾವಾಗ ಆದೀತೆಂದು ಆತನು ಉತ್ಸುಕತೆಯಿಂದ ಹಾದಿಯು ನೋಡಹತ್ತಿದನು. ಮೂವತ್ತು ವರ್ಷಗಳ ಹಿಂದೆ ಕುಂಜವನಕ್ಕೆ ರಾತ್ರಿಯಲ್ಲಿ ಹೋಗುವಾಗಿನ ಉತ್ಸುಕತೆಯ ಸ್ಮರಣವು ಈಗ ಆತನಿಗೆ ಆಯಿತು; ಆದರೆ ಆಗಿನ ಔತ್ಸುಕ್ಯದ ಕಾರಣವೂ,ಈಗಿನ ಔತ್ಸುಕ್ಯದ ಕಾರಣವೂ ಭಿನ್ನವಾಗಿದ್ದವೆಂಬದು ಸ್ಪಷ್ಟವು. ಮೋಹರ್ಜಾನಳನ್ನು ಕಂಡು ತನ್ನ ಅಪರಾಧವನ್ನು ಕ್ಷಮಿಸು ವದಕ್ಕಾಗಿ ಆಕೆಯನ್ನು ಪ್ರಾರ್ಥಿಸಬೇಕೆಂದು ರಾಮರಾಜನು ನಿಶ್ಚಯಿಸಿದನು. ರಾತ್ರಿಯಾದ ಕೂಡಲೆ ಆತನು ಹಿಂದಿನಂತೆಯೇ ಸಂಗಡ ಯಾರನ್ನೂ ಕರಕೊಳ್ಳದೆ ಕುಂಜವನಕ್ಕೆ ಒಬ್ಬನೇ ಹೊರಟನು.

ಕುಂಜವನದ ಬಾಗಿಲು ಸನಿಸನಿಯಕ್ಕೆ ಬರಲು, ಇಷ್ಟು ರಾತ್ರಿಯಲ್ಲಿ ತನ್ನನ್ನು ಕುಂಜುವನ ದೊಳಗೆ ಬಿಡಲಿಕ್ಕಿಲ್ಲೆಂಬ ಶಂಕೆಯು ರಾಮರಾಜನಿಗೆ ಉತ್ಪನ್ನವಾಯಿತು. ಆದರೆ ಇಷ್ಟು ದೂರ ಬಂದು ಹಿಂದಿರುಗಿ ಹೋಗುವದು ನೆಟ್ಟಗಲ್ಲೆಂದು ತಿಳಿದು ವೇಷಾಂತರಿಸಿದ್ದ ಆತನು ಆದದ್ದಾಗ ಲೆಂದು ದ್ವಾರರಕ್ಷನನ್ನು ಕೂಗಿ ಕೂಗಿ ಎಬ್ಬಿಸಿದನು. ಕಾವಲುಗಾರನು ಅರನಿದ್ದೆಯಲ್ಲಿದ್ದದ್ದರಿಂದ, ಆತನು ಬಹಳ ಹೊತ್ತಿನವರೆಗೆ ರಾಮರಾಜನ ಕೂಗನ್ನು ಲೆಕ್ಕಿಸಲೇ ಇಲ್ಲ ಕಡೆಗೆ— "ಯಾವನವನು? ರಾತ್ರಿಯಲ್ಲಿ ಕಿಟಿಕಿಟಿ ಹಚ್ಚಿರುತ್ತಾನೆ" ಎಂದು ಒಟಗುಟ್ಟಿ ಬಾಗಲು ತೆರೆದನು. ಆಗ ರಾಮರಾಜನು ಆತನಿಗೆ— "ರಣಮಸ್ತಖಾನರು ನನ್ನನ್ನು ಮಾಸಾಹೇಬರ ಕಡೆಗೆ ಕಳಿಸಿರುತ್ತಾರೆ. ಬಹಳ ಅವಸರದ ಕೆಲಸವಿರುತ್ತದಂತೆ. ನೀನು ಹೋಗಿ ಮಾಸಾಹೇಬರಿಗೆ ಸುದ್ದಿಯನ್ನು ತಿಳಿಸಿ, ಅವರಿಗೆ ನನ್ನ ಭೆಟ್ಟಿಯನ್ನು ಮಾಡಿಸು. ಅವರು ನಿದ್ದೆ ಹತ್ತಿ ಮಲಗಿದ್ದರೂ ಎಬ್ಬಿಸು. ಕೆಲಸವು ಬಹಳ ನಾಜೂಕು ಇರುತ್ತದೆ" ಎಂದು ಹೇಳಿದನು; ಆದರೆ ಕಾವಲುಗಾರನು ರಾಮರಾಜನ ಮಾತಿಗೆ ಒಪ್ಪಿಕೊಳ್ಳದೆ, "ಅಪರಾತ್ರಿಯು, ಎಲ್ಲಿ ಎಬ್ಬಿಸಲೆ"ಂದು ಗುಣಗುಟ್ಟಹತ್ತಿದನು. ಆತನು ರಾಮರಾಜನಿಗೆ— ಈಗ ನಾನು ಕಾವಲಿಗೆ ಒಬ್ಬನೇ ಇದ್ದೇನೆ. ಬಂಗಲೆಯೊಳಗೂ ಸೇವಕರು ಯಾರೂ ಇಲ್ಲ. ಎಲ್ಲ ಜನರು ದೊಡ್ಡಖಾನಸಾಹೇಬರ ಕಡೆಗೆ ಹೋಗಿದ್ದಾರೆ. ಆ ಮುದುಕಿಯೂ ಇಂದು ಎಲ್ಲಿಯೋ ಹೋಗಿಬಿಟ್ಟಿದ್ದಾಳೆ. ಇನ್ನು ಮಾಸಾಹೇಬರನ್ನು ಎಬ್ಬಿಸಲಿಕ್ಕೆ ಹೋಗಬೇಕಾದರೆ ಅವರ ಕೋಣೆಯ ಬಾಗಿಲತನಕ ಹೋಗಬೇಕು. ಈಗ ಯಾರು ಹೋಗುವರು? ಈಗ ಆಗುವದಿಲ್ಲ, ಮುಂಜಾನೆ ನೋಡೋಣವಂತೆ ಈಗ ಸರಿ ರಾತ್ರಿಯಾಗಿರುವದು" ಎಂದು ಒದರಾಡಹತ್ತಿದನು. ಆಗ ರಾಮರಾಜನು— ಛೇ, ಛೇ, ಹೀಗೆ ಮಾಡಿದರೆ ಹ್ಯಾಗೆ? ಖಾನಸಾಹೇಬರು ನನ್ನನ್ನು ಬುದ್ಧಿಪೂರ್ವಕವಾಗಿ ಇದಕ್ಕೇ ಕಳಿಸಿರುವರೇನು? ಹ್ಯಾಗಾದರೂ ಮಾಡಿ ಈ ದಿನ ರಾತ್ರಿಯೇ ಮಾಸಾಹೇಬರಿಗೆ ಸುದ್ದಿಯನ್ನು ಮುಟ್ಟಿಸಬೇಕೆಂದು ಅವರು ಹೇಳಿರುವರು. ಹ್ಯಾಗಾದರೂ ಮಾಡು, ನಾನು ಬಂದ ಸುದ್ದಿಯನ್ನಷ್ಟು ಮಾಸಾಹೇಬರಿಗೆ ಹಚ್ಚಿ ನಮ್ಮಿಬ್ಬರ ಭೆಟ್ಟಿಯನ್ನು

ಮಾಡಿಸಬೇಕು. ನಿನ್ನ ಶ್ರಮವು ವ್ಯರ್ಥವಾಗಲಿಕ್ಕಿಲ್ಲ ಎಂದು ಹಲವು ವಿಧವಾಗಿ ಹೇಳಿಕೊಳ್ಳಲು, ಆ ಕಾವಲುಗಾರನು ನಿರ್ವಾಹವಿಲ್ಲದೆ ರಾಮರಾಜನಿಗೆ– ಇಲ್ಲಿಯೇ ನೀನು ಬಾಗಿಲು ಕಾಯುತ್ತ ಇರೆಂದು ಗಟ್ಟಿಮುಟ್ಟಿಯಾಗಿ ಹೇಳಿ, ಆ ಬಾಗಿಲವನ್ನು ಪುನಃ ಇಕ್ಕದೆ ಮಾಸಾಹೇಬರ ಬಂಗಲೆಯ ಕಡೆಗೆ ಹೊರಟುಹೋದನು. ಇತ್ತ ರಾಮರಾಜನು ಒಂದೆರಡು ಕ್ಷಣ ಅಲ್ಲಿ ನಿಂತಿರಬಹುದು. ಅಷ್ಟರಲ್ಲಿ ಆತನ ದೃಷ್ಟಿಯು ಪುಷ್ಕರಣಿಯ ಕಡೆಗೆ ಹೋಗಲು, ಅತ್ತ ಕಡೆಗೆ ಹೋಗುವ ಇಚ್ಛೆಯು ಆತನಿಗೆ ಉತ್ಪನ್ನವಾದದ್ದರಿಂದ, ಆತನು ಯಾವ ವಿಚಾರವನ್ನೂ ಮಾಡದೆ ಅತ್ತ ಕಡೆಗೆ ಹೋಗಿಬಿಟ್ಟನು.

ಕುಂಜವನಕ್ಕೆ ಬಂದಬಳಿಕ ರಾಮರಾಜನ ಮನಸ್ಸು ಪುಷ್ಕರಣಿಯ ಕಡೆಗೆ ಎಳೆಯತಕ್ಕದ್ದೇ ಎಂಬುದು ಗೊತ್ತಾಗಿಹೋಗಿತ್ತು ಆ ಪುಷ್ಕರಣಿಯ ದಂಡೆಯಲ್ಲಿ ಆತನು ತಾರುಣ್ಯದಲ್ಲಿ ಹಲವು ಸುಖಗಳನ್ನು ಭೋಗಿಸಿದ್ದರಿಂದಾಗಲಿ, ಪುಷ್ಕರಣೆಯಲ್ಲಿ ಅಂಥ ವಿಲಕ್ಷಣವಾದ ಆಕರ್ಷಣ ಶಕ್ತಿಯಿದ್ದದ್ದರಿಂದಾಗಲಿ ರಾಮರಾಜನು ಈವರೆಗೆ ಕುಂಜವನಕ್ಕೆ ಹೋದಾಗಲೆಲ್ಲ ಪುಷ್ಕರಣಿಗೆ ಹೋಗಿಯೇ ತೀರಿದ್ದನು. ಅದರಲ್ಲಿ ಈ ದಿನ ಹುಣ್ಣಿಮೆಯ ರಾತ್ರಿಯು. ಹಿಟ್ಟುಚೆಲ್ಲಿದಹಾಗೆ ಬೆಳದಿಂಗಳು ಬಿದ್ದಿತ್ತು ಹವೆಯು ಸ್ತಬ್ಧವಾಗಿತ್ತು ಗಿಡದ ಎಲೆಗಳು ಮಿಸುಕುತ್ತಿದ್ದಿಲ್ಲ ಪುಷ್ಕರಣಿಯ ಸ್ತಬ್ಧವಾದ ಶುಭ್ರಜಲದಲ್ಲಿ ಒಂದಾದರೂ ತರಂಗವು ಕಣ್ಣಿಗೆ ಬೀಳುತ್ತಿದ್ದಿಲ್ಲ ಆಕಾಶದಲ್ಲಿ ತಾರಗಳು ಚಂದ್ರಪ್ರಕಾಶದಲ್ಲಿ ಲುಪ್ತಪ್ರಾಯವಾಗಿ ಹೋಗಿದ್ದವು. ಇಂಥ ಶುಭ್ರ ಚಂದ್ರಪ್ರಕಾಶದ ಯೋಗದಿಂದ ರಾಮರಾಜನ ಮೋಹವು ಮತ್ತಿಷ್ಟು ಹೆಚ್ಚಿತು. ಈ ಹೆಚ್ಚಿದ ಮೋಹದಲ್ಲಿ ಮೇಹರ್ಜಾನಳ ಅಪ್ರಾಪ್ತಿಯ ಯೋಗದಿಂದ ಉಂಟಾಗಿದ್ದ ಅಸಮಾಧಾನವು ಬೆರೆತು ಆತನಿಗೆ ಏನೂ ತೋಚದೆ ಆತನು ಪರಾಧೀನನಂತೆ ಪುಷ್ಕರಣಿಯ ದಂಡೆಯಲ್ಲಿ ಸಂಚರಿಸುತ್ತಿದ್ದನು. ತನ್ನನ್ನು ಕುಂಜವನದ ಕಾವಲುಗಾರನು ಹುಡುಕಬಹುದೆಂಬ ಎಚ್ಚರವು ಆತನಿಗೆ ಉಳಿದಿದ್ದಿಲ್ಲ. ಮೇಹರ್ಜಾನಳು ಏನು ಅಂದಾಳೆಂಬದನ್ನು ತಿಳಕೊಳ್ಳುವದಕ್ಕಾಗಿ ಆತನು ಬಾಗಿಲು ಕಾಯುತ್ತ ಇರುವದನ್ನು ಬಿಟ್ಟು, ಪುಷ್ಕರಣಿಯ ಕಡೆಗೆ ಹೊರಟು ಬಂದುಬಿಟ್ಟಿದ್ದನು. ಪುಷ್ಕರಣಿಯ ದಂಡೆಯಲ್ಲಿರುವಾಗ ಮೇಹರ್ಜಾನಳಿಗೆ ಸಂಬಂಧಿಸಿದೆ ತನ್ನ ಹಿಂದಿನ ಇತಿಹಾಸವೆಲ್ಲ ಆತನಿಗೆ ನೆನಪಾಯಿತು. ಆತನು ತನ್ನ ಹಿಂದಿನ ಮನೋಹರವಾದ ಇತಿಹಾಸವನ್ನು ಸ್ಮರಿಸುತ್ತ ಸ್ಮರಿಸುತ್ತ ಒಂದು ವೃಕ್ಷದ ಬುಡಕ್ಕೆ ಬಂದನು. ಅಲ್ಲಿಗೆ ಬಂದಕೂಡಲೆ ಆತನಿಗೆ ಏನೋ ನೆನಪಾದಂತಾಗಿ ಆತನು ಸ್ತಬ್ಧವಾಗಿ ನಿಂತಕೊಂಡನು. ಹಿಂದಕ್ಕೆ ಮೂವತ್ತು ವರ್ಷಗಳ ಹಿಂದೆ ಆತನು ಅದೇ ಮರದ ಬುಡದಲ್ಲಿ ನಿಂತುಕೊಂಡು, ಮೇಹರ್ಜಾನಳು ಪುಷ್ಕರಣಿಯೊಳಗಿನ ನೌಕೆಯಲ್ಲಿ ಕುಳಿತು ಹಾಡುವ ಮನೋಹರ ಗಾಯನವನ್ನು ಕೇಳಿ, ತಾನು ಆ ಗಾಯನಕ್ಕೆ ಪ್ರತ್ಯುತ್ತರವಾಗಿ ಅದೇ ಮರದ ಬುಡದಲ್ಲಿ ನಿಂತು ಸಂಸ್ಕೃತ ಅಷ್ಟಪದಿಯನ್ನು ಅಂದಿದ್ದನು. ಆ ಸುಖಮಯ ಪ್ರಸಂಗದ ಚಿತ್ರವು ಈಗ ರಾಮರಾಜನ ಕಣ್ಣಿಗೆ ಕಟ್ಟಿತ್ತು ಹೀಗೆ ಚಿತ್ರವು ಕಣ್ಣಿಗೆ ಕಟ್ಟಿರುವಾಗ ತಾನು ಪ್ರತ್ಯಕ್ಷ ಆ ಸುಖವನ್ನು ಭೋಗಿಸುವಂತೆ ಆತನಿಗೆ ಭಾಸವಾಯಿತು. ಹೀಗೆ ಸುಖವನ್ನು ಅನುಭವಿಸುತ್ತಿರುವಾಗ ಆತನ ಕಣ್ಣುಗಳಲ್ಲಿ ಒಮ್ಮೆಲೆ ನೀರು ತುಂಬಿದವು. ಬರಬರುತ್ತ ಆತನ ಕಣ್ಣೊಳಗಿಂದ ನೀರು

ಧಾರಾಳವಾಗಿ ಸುರಿಯಹತ್ತಿದವು; ಮುಂದೆ ಆ ಕಣ್ಣೀರು ಸುರಿಯುವದು ನಿಂತು ಆತನ ಎದೆಯು ಧಸಕ್ಕೆಂದಿತು. ಮೋಹರ್ಜಾನಳೂ, ಆತನೂ ಪುಷ್ಕರಣಿಯ ಮಧ್ಯದಲ್ಲಿದ್ದ ಧ್ವಜಸ್ತಂಭದತ್ತ ಕಡೆಯಿಂದ ನೌಕೆಯಲ್ಲಿ ಕುಳಿತು ದಂಡೆಯ ಕಡೆಗೆ ಬರುವಾಗ ಮೋಹರ್ಜಾನಳು ನುಡಿದ ಶಬ್ದಗಳ ನೆನಪು ಈಗ ಆತನಿಗಾಗಿತ್ತು. ಹಾಗೆ ನೆನಪಾದದ್ದರಿಂದಲೇ ಆತನ ಆನಂದವು ನಷ್ಟವಾಗಿ ಆತನು ತನ್ನೊಳಗೆ— ''ಆಗ ಹಾಗೆ ನಾವು ಮುಣುಗಿಹೋಗಿದ್ದರೆ ಏನಾಗುತ್ತಿತ್ತು? ಈ ಮುಂದಿನ ಎಲ್ಲ ತೊಡಕುಗಳು ಉಂಟಾಗುತ್ತಿದ್ದಿಲ್ಲ. ಆಕೆಯೂ ನಾನೂ ಎಲ್ಲಿಯಾದರೂ ಒತ್ತಟ್ಟಿಗೆ ಸುಖದ ಶಿಖರವನ್ನೇರಿ, ಇಲ್ಲವೆ ಯಾರಿಗೆ ಗೊತ್ತು, ದುಃಖದ ಕೂಪದಲ್ಲಿ ಬಿದ್ದಿರುತ್ತಿದ್ದೆವು. ಏನೇ ಆಗಲಿ ನಾವಿಬ್ಬರು ಈ ಲೋಕದಿಂದ ಕೂಡಿಯೇ ಹೋಗಿದ್ದರೆ, ನಮ್ಮಿಬ್ಬರ ಅಕೃತ್ರಿಮ ಪ್ರೇಮವನ್ನು ನೋಡಿ ಪರಮೇಶ್ವರನು ನಿಶ್ಚಯವಾಗಿ ನಮ್ಮನ್ನು ಏಕತ್ರವಾಗಿ ಇಡುತ್ತಿದ್ದನು.

ಹೀಗೆ ಏನೇನೋ ಅಲ್ಲಿಯ ಇಲ್ಲಿಯ ವಿಚಾರಗಳು ರಾಮರಾಜನ ಮನಸ್ಸಿನಲ್ಲಿ ಎಡತಾಕುತ್ತಿರಲು, ಆತನಿಗೆ ತಾನು ಕಾವಲುಗಾರನನ್ನು ಮೋಹರ್ಜಾನಳ ಕಡೆಗೆ (ಮಾಸಾಹೇಬರ ಕಡೆಗೆ ) ಕಳಿಸಿಕೊಟ್ಟಿದ್ದು ನೆನಪಾಯಿತು. ಕೂಡಲೆ ಆತನ ಮನಸ್ಸು ಅತ್ತಕಡೆಗೆ ಹರಿಯಹತ್ತಿ ಆತನು ತನ್ನ ಮನಸ್ಸಿನಲ್ಲಿ— ''ಕಾವಲುಗಾರನು ಇಷ್ಟುಹೊತ್ತಿಗೆ ಮೋಹರ್ಜಾನಳನ್ನು ಕಂಡು ಅಲ್ಲಿಗೆ ಬಂದಿರಬಹುದಲ್ಲವೇ? ಆತನು ನನ್ನ ಕುದುರೆಯು ಅಲ್ಲಿಯೇ ಇರುವುದನ್ನು ನೋಡಿ ಅತ್ತಿತ್ತ ನನ್ನನ್ನು ಶೋಧಿಸುತ್ತಿರಬಹುದು. ಆದ್ದರಿಂದ ನಾನು ಅಲ್ಲಿಗೆ ಹೋಗತಕ್ಕದು, ಎಂದು ಯೋಚಿಸಿ. ನಾಲ್ಕು ಹೆಜ್ಜೆ ಮುಂದಕ್ಕೆ ಬಂದಿರಬಹುದು; ಅಷ್ಟರಲ್ಲಿ ಆತನಿಗೆ ಸ್ವಲ್ಪ ದೂರದಲ್ಲಿ ಯಾರೋ ಬರುತ್ತಿರುವಂತೆ ತೋರಿ, ಆತನು ಅಲ್ಲಿಯೇ ನಿಂತುಕೊಂಡನು. ಆತನು ದಿಟ್ಟಿಸಿ ನೋಡಲು, ಒಂದು ಶುಭ್ರ ವಸ್ತ್ರವೇಷ್ಟಿತ ಮೂರ್ತಿಯು ಆತನ ಕಣ್ಣಿಗೆ ಬಿದ್ದಿತ್ತು. ಈ ಮೂರ್ತಿಯು ಯಾರಿರಬಹುದೆಂಬ ಶಂಕೆಯು ಲೇಶವಾದರೂ ಆತನಿಗಿದ್ದಿಲ್ಲ. ಈ ಮೂರ್ತಿಯು ತನ್ನ ಪ್ರಿಯ ಮೋಹರ್ಜಾನಳು, ಅಥವಾ ಈಗಿನ ಹೆಸರಿನಂತೆ ಮಾಸಾಹೇಬರು, ಎಂದು ಆತನು ನಿಶ್ಚಯಿಸಿದನು. ಹಿಂದಕ್ಕೆ ರಣಮಸ್ತಖಾನನ ಸಂಗಡ ಪುಷ್ಕರಣಿಯಲ್ಲಿ ಸಂಚರಿಸುತ್ತಿರುವಾಗ ಒಮ್ಮೆ ಇದೇ ಶುಭ್ರಮೂರ್ತಿಯನ್ನು ನೋಡಿದ್ದು ಆತನ ಸ್ಮರಣಕ್ಕೆ ಬಂದಿತು. ಇಷ್ಟು ರಾತ್ರಿಯಲ್ಲಿ ಈಕೆಯು ಇಲ್ಲಿಗೆ ಯಾಕೆ ಬಂದಿರಬಹುದೆಂದು ಆತನು ಆಲೋಚಿಸ ತೊಡಗಿದನು. ಕಾವಲುಗಾರನು ಹೇಳಿದ್ದರಿಂದ ಆಕೆಯು ಇಲ್ಲಿಗೆ ಬಂದಿರಬಹುದೋ, ಛೇ ಛೇ ಹಾಗೆ ಬರುವ ಸಂಭವವಿಲ್ಲ, ಆಕೆಯು ಕಾವಲುಗಾರನ ಮುಖಾಂತರ ತಾನಿದ್ದಲ್ಲಿಗೆ ನನ್ನನ್ನು ಕರೆಸಿಕೊಳ್ಳುತ್ತಿದ್ದಳು. ಇಲ್ಲವೆ ಮಗನ ಮೇಲಿನ ಸಂತಾಪವು ಕಡಿಮೆಯಾಗದೆ ಇದ್ದ ಪಕ್ಷದಲ್ಲಿ ನನ್ನನ್ನು ಕಾಣಲಿಚ್ಛಿಸದೆ ''ಮಗನೂ ಬೇಡ, ಆತನ ಹೇಳಿಕಳಿಸಿದ ಸುದ್ದಿಯ ಬೇಡ'' ಎಂದು ಆಕೆಯು ನಿರಾಕರಿಸಬಹುದಾಗಿತ್ತು. ಅಂದಬಳಿಕ ಈಕೆಯು ಇಲ್ಲಿಗೆ ಈಗ ಯಾಕೆ ಬಂದಿರಬಹುದು? ಎಂಬ ವಿಚಾರದಲ್ಲಿ ರಾಮರಾಜನು ಮಗ್ನನಾಗಿದ್ದರೂ, ಆತನು ಆ ಶುಭ್ರಮೂರ್ತಿಯನ್ನು ಎವೆಯಿಕ್ಕದೆ ನೋಡುತ್ತಿದ್ದನು. ಇಷ್ಟು ರಾತ್ರಿಯಲ್ಲಿ ಈಕೆಯು ಇಲ್ಲಿಗೆ ಬಂದು ಏನು ಮಾಡುತ್ತಾಳೆಂಬದನ್ನು ನೋಡಿ, ಆಮೇಲೆ ಈಕೆಯ ಎದುರಿಗೆ ನಿಂತುಕೊಂಡು ತನ್ನ ಸಂಶಯವನ್ನು ದೂರ ಮಾಡಿಕೊಳ್ಳ

ತಕ್ಕದ್ದು ಎಂದು ಯೋಚಿಸಿದನು. ಇತ್ತ ಆ ಶ್ವೇತಮೂರ್ತಿಯು, ಅಥವಾ ಮಾಸಾಹೇಬರು ಪುಷ್ಕರಣಿಯ ತೀರದಲ್ಲಿ ನಿಂತು ತಟಸ್ಥವೃತ್ತಿಯಿಂದ ಜಲರಾಶಿಯನ್ನು ನೋಡತೊಡಗಿದರು. ಆ ಕಾಲದಲ್ಲಿ ಮಾಸಾಹೇಬರಿಗೆ ಅವರ ಆಯುಷ್ಯದೊಳಗಿನ ಇತಿಹಾಸವೆಲ್ಲ ನೆನಪಾಯಿತು. ತಾವು ಹಿಂದಕ್ಕೆ ರಾಮರಾಜನೊಡನೆ ನೌಕೆಯಲ್ಲಿ ಕುಳಿತು ದಂಡೆಯ ಕಡೆಗೆ ಬರುತ್ತಿರುವಾಗ ಆತನನ್ನು ಕುರಿತು— "ನಾನೂ ನೀವೂ ಒಮ್ಮೆಲೆ ಈ ಪುಷ್ಕರಣಿಯಲ್ಲಿ ಮುಳುಗಿಹೋದರೆ ಎಷ್ಟು ನೆಟ್ಟಗಾದೀತಲ್ಲ" ಎಂದು ನುಡಿದದ್ದು ಈಗ ಅವರಿಗೆ ನೆನಪಾಯಿತು. ಮೇಹರ್ಜಾನಳ ಆಯುಷ್ಯದಲ್ಲಿ ಸುಖದ ಪ್ರಸಂಗಗಳು ಮಿಂಚಿನಂತೆ ಹೊಳೆದುಹೋಗಿ, ದುಃಖದ ಪ್ರಸಂಗಗಳಲ್ಲಿ ಈಗ ಬಹು ದಿವಸಗಳಿಂದ ಆಕೆಯು ಮುಳುಗಿಹೋದಂತೆ ಆಗಿತ್ತು ಮಗನ ಕೈಯಿಂದ ರಾಮರಾಜನ ಸೇಡು ತೀರಿಸಿಕೊಳ್ಳಬೇಕೆಂದು ಆಕೆಯು ಹವಣಿಸುತ್ತಿರಲು, ಈಗ ಮಗನು ರಾಮರಾಜನನ್ನೇ ಕೂಡಿಬಿಟ್ಟದ್ದರಿಂದ ಆಕೆಗೆ ಜೀವನವು ಬೇಡಾಯಿತು. ಇನ್ನು ಹೋದಲ್ಲಿ ತನ್ನ ಅಪ್ರತಿಷ್ಠೆಯಾಗುವದೆಂದು ಆಕೆಯು ಭಾವಿಸಿದ್ದಳು. ಪುಷ್ಕರಣಿಯಲ್ಲಿ ಹಾರಿಕೊಂಡು ಪ್ರಾಣಕೊಡುವದೊಂದೇ ಉಪಾಯವು ಆಕೆಯ ಕೈಯೊಳಗಿದ್ದಂತೆಯಿತ್ತು ಆ ಉಪಾಯದಿಂದ ತನ್ನ ದುಃಖವಿಮೋಚನೆ ಮಾಡಿಕೊಳ್ಳಬೇಕೆಂದು ಆಕೆಯು ಪುಷ್ಕರಣಿಗೆ ಬಂದಿದ್ದಳು. ತನ್ನ ಈ ಘೋರ ಕಾರ್ಯಕ್ಕೆ ವಿಘ್ನ ಒದಗುವದೆಂದು ತಿಳಿದು, ಆಕೆಯು ತನ್ನ ದಾಸಿಯಾದ ಮಾರ್ಜೀನೆಯನ್ನು ರಣಮಸ್ತಖಾನನ ಕಡೆಗೆ ಕಳಿಸಿಕೊಟ್ಟಿದ್ದಳು. ಈಗ ಮೇಹರ್ಜಾನಳ ಪ್ರಾಣ ವಿಘಾತಕ ಕಾರ್ಯಕ್ಕೆ ವಿಘ್ನಮಾಡುವವರು ಯಾರೂ ಇದ್ದಿಲ್ಲ, ಆಕೆಯು ತನ್ನ ಅಂಗವಸ್ತ್ರವನ್ನು ಸಾವರಿಸಿಕೊಂಡು ಪರಮೇಶ್ವರನ ಜಪ ಮಾಡಹತ್ತಿದಳು. ಆಮೇಲೆ ಮುಸಲ್ಮಾನ ಧರ್ಮದ ಪದ್ಧತಿಯಂತೆ ನಮಾಜುಮಾಡಹತ್ತಿದಳು. ಇದನ್ನೆಲ್ಲ ನೋಡುತ್ತ ರಾಮರಾಜನು ಸ್ತಬ್ಧವಾಗಿ ಮರೆಗೆ ನಿಂತುಕೊಂಡಿದ್ದನು. ಈ ಪ್ರಸಂಗದಲ್ಲಿ ತಾನು ಒಮ್ಮೆಲೆ ಮುಂದಕ್ಕೆ ಹೋಗಿ "ಪ್ರಿಯ ಮೇಹರ್ಜಾನ" ಎಂದು ಸಂಭೋದಿಸಿ, ಆಕೆಯನ್ನು ಅಪ್ಪಿಕೊಳ್ಳಬೇಕೆಂದು ಆತನು ಎಷ್ಟೋ ಸಾರೆ ಯತ್ನಿಸಿದನು; ಆದರೆ ಆತನ ಕಾಲುಗಳೇ ಏಳಲಿಲ್ಲ! ಎಷ್ಟೋ ಸಾಹಸದ ಕಾರ್ಯಗಳನ್ನು ಮಾಡಿದ ರಾಮರಾಜನಿಗೆ, ಇಷ್ಟು ಕೆಲಸ ಮಾಡುವ ಧೈರ್ಯವು ಮಾತ್ರ ಆಗಲಿಲ್ಲ. ಈಗ ಅಪ್ಪಿಕೊಳ್ಳೋಣ. ಇನ್ನೊಂದು ಕ್ಷಣದ ಮೇಲೆ ಅಪ್ಪಿಕೊಳ್ಳೋಣ, ಈಕೆ ಏನೇನು ಮಾಡುತ್ತಾಳೋ ನೋಡಿ ಅಪ್ಪಿಕೊಳ್ಳೋಣ, ಎಂದು ಹಾದಿಯನ್ನು ನೋಡುತ್ತ ನಿಂತುಕೊಂಡಿದ್ದನು. ಈಕೆಯ ಈ ನಮಾಜು ಆತ್ಮಹತ್ಯೆಯ ಪೂರ್ವಚಿಹ್ನವೆಂಬುದು ರಾಮರಾಜನಿಗೆ ಗೊತ್ತಾಗಲಿಲ್ಲ, ಆಕೆಯ ಮುಖಚರ್ಯವೂ ಆತನಿಗೆ ಕಾಣುತ್ತಿದ್ದಿಲ್ಲ. ಕೇವಲ ಮನೋಮಯ ಸಾಕ್ಷಿಯಿಂದಲೇ ಈಕೆಯು ಮೇಹರ್ಜಾನಳೆಂದು ಆತನು ತಿಳಕೊಂಡಿದ್ದನು; ಮತ್ತು ಆಕೆಯ ಕಡೆಗೆ ನೋಡುತ್ತ ಆತನು ಈಗ ಮುಂದಕ್ಕೆ ಹೋಗಲೇನು, ಇನ್ನಿಷ್ಟು ನಿಂತು ಮುಂದಕ್ಕೆ ಹೋಗಲೇನು, ಎಂದು ವಿಚಾರಿಸುತ್ತಿದ್ದನು; ಆದರೆ ಒಂದು ಹೆಜ್ಜೆಯನ್ನಾದರೂ ಇಡುವದು ಆತನಿಂದಾಗಲಿಲ್ಲ.

ಇತ್ತ ಮಾಸಾಹೇಬರು ನಮಾಜು ಮಾಡಿದ ಮೇಲೆ ಒಮ್ಮೆಲೆ ಅವರ ಮನಸ್ಸಿಗೆ ಒಂದು ಪ್ರಕಾರದ ಕ್ರಾಂತಿಯು ಉತ್ಪನ್ನವಾಯಿತು. ಪುಷ್ಕರಣಿಯಲ್ಲಿ ಹಾರಿಕೊಂಡು ಪ್ರಾಣವನ್ನರ್ಪಿಸ ಬೇಕೆಂಬ ಅವರ ನಿಶ್ಚಯವೂ ಸ್ಥಿರವಾಯಿತು. ಅವರು ತಮ್ಮ ಮೈಮೇಲಿನ ಚಾದರವನ್ನು ತೆಗೆದು ಒಗೆದರು. ಬಳಿಕ ತಮ್ಮ ಉಟ್ಟ ಸೀರೆಯನ್ನು ನೆಟ್ಟಗೆ ಮಾಡಿಕೊಂಡು— "ಅಲ್ಲಾಹೋ ಅಕಬರ! ಮಹಮ್ಮದ ರಸಲುಲ್ಲಾ" ಎಂದು ಪರಮೇಶ್ವರನ ನಾಮಘೋಷವನ್ನು ಗಟ್ಟಿಯಾಗಿ ಮಾಡುತ್ತ ಒಮ್ಮೆಲೆ ಅವರು ಪುಷ್ಕರಣಿಯಲ್ಲಿ ಹಾರಿಕೊಂಡರು. ಕೂಡಲೆ ರಾಮರಾಜನು ಅವರ ಬೆನ್ನ ಹಿಂದೆಯೇ ಹಾರಿಕೊಂಡನೆಂದು ಹೇಳಲವಶ್ಯವಿಲ್ಲ.

## ಬಾದಶಹನ ಪತ್ರವು

ಮೇಲೆ ಹೇಳಿದ ಪ್ರಸಂಗವು ಒದಗಿ ಎಂಟು ದಿವಸವಾಗಿರಬಹುದು, ಆಗಿರಲಿಕ್ಕಿಲ್ಲ; ಅಷ್ಟರಲ್ಲಿ ವಿಜಾಪುರದ ಬಾದಶಹನು ತನ್ನ ಎರಡನೆಯ ವಕೀಲನ ಮುಖಾಂತರ ರಣಮಸ್ತಖಾನನ ಸಂಬಂಧದಿಂದ ರಾಮರಾಜನಿಗೆ ಸ್ಪಷ್ಟವಾಗಿ ಪತ್ರ ಬರೆದು ಕೇಳಿದನು. ಬಾದಶಹನು ತನ್ನ ಆ ಪತ್ರದಲ್ಲಿ ರಾಮರಾಜನಿಗೆ— ನಿಮ್ಮ ಕಡೆಗೆ ನಮ್ಮ ವಕೀಲನನ್ನಾಗಿ ಕಳಿಸಿದ್ದ ರಣಮಸ್ತಖಾನನನ್ನು, ನೀವು ನಮ್ಮನ್ನು ಕೇಳದೆ ನೌಕರಿಗೆ ಹ್ಯಾಗೆ ಇಟ್ಟುಕೊಂಡಿರಿ? ಆತನು ನಮ್ಮ ಮೇಲೆ ತಿರುಗಿಬಿದ್ದು ನಿಮ್ಮ ಕಡೆ ಬಂದಿರಬಹುದು; ಅಥವಾ ನೀವೇ ಆತನನ್ನು ಮೋಸಗೊಳಿಸಿ ನಿಮ್ಮ ಕಡೆಗೆ ಮಾಡಿಕೊಂಡಿರಬಹುದು, ಹ್ಯಾಗಿದ್ದರೂ ರಣಮಸ್ತಖಾನನಂಥ ದ್ರೋಹಿಗೆ ನೀವು ಆಶ್ರಯ ಕೊಡತಕ್ಕದ್ದಿದ್ದಿಲ್ಲ, ಇದರಿಂದ ನಮ್ಮ ನಿಮ್ಮ ಸ್ನೇಹಸಂಬಂಧಕ್ಕೆ ಕೊರತೆಯುಂಟಾಗಿರುತ್ತದೆ. ನಮ್ಮ ವಿಶ್ವಾಸದವನೆಂದು ರಣಮಸ್ತಖಾನನನ್ನು ನಿಮ್ಮ ಕಡೆಗೆ ವಕೀಲನನ್ನಾಗಿ ನಿಯಮಿಸಿ ಕಳುಹಿಸಿರಲು, ಆತನು ಈಗ ವಿಶ್ವಾಸಘಾತ ಮಾಡಿರುವದರಿಂದ ಸ್ವಾಮಿದ್ರೋಹವು ಆತನಿಂದ ಘಟಿಸಿರುವದು. ಆದ್ದರಿಂದ ನೀವು ಈ ಮಾತಿನ ಪೂರ್ಣ ವಿಚಾರಮಾಡಿ, ನಮ್ಮ ಮನುಷ್ಯನನ್ನು ನಮ್ಮ ಕಡೆಗೆ ತಿರುಗಿ ಕಳಿಸಬೇಕು. ನಾವು ಆತನ ಅಪರಾಧಕ್ಕಾಗಿ ಆತನಿಗೆ ದೇಹಾಂತ ಪ್ರಾಯಶ್ಚಿತ್ತವನ್ನು ಕೊಡುವವರಿದ್ದೇವೆ. ನೀವು ಆ ದ್ರೋಹಿಯನ್ನು ನಮ್ಮ ಕಡೆಗೆ ಕಳಿಸಿ ಕೊಡದಿದ್ದರೆ, ನಮ್ಮ ನಿಮ್ಮ ಸ್ನೇಹಸಂಬಂಧವನ್ನು ಮುರಿಯುವ ಉದ್ದೇಶದಿಂದ ನೀವು ಬುದ್ಧಿಪೂರ್ವಕವಾಗಿಯೇ ಈ ಕೆಲಸ ಮಾಡಿರುವಿರೆಂದು ನಾವು ತಿಳಿಯುತ್ತೇವೆ. ಇದ್ದದ್ದರಲ್ಲಿ ನೆಟ್ಟಗಾಯಿತು, ರಣಮಸ್ತನು ಹೀಗೆ ಪ್ರಸಿದ್ಧ ರೀತಿಯಿಂದ ನಿಮ್ಮ ನೌಕರಿಗೆ ನಿಲ್ಲದೆ, ಗುಪ್ತರೀತಿ ಯಿಂದ ನಮ್ಮ ದ್ರೋಹ ಬಗೆದಿದ್ದರೆ ನಮಗೆ ಬಹಳ ತ್ರಾಸವಾಗುತ್ತಿತ್ತು, ಆತನು ಹೋದದ್ದರಿಂದ, ಅಥವಾ ನಿಮ್ಮನ್ನು ಕೂಡಿಕೊಂಡಿದ್ದರಿಂದ ಅಂಥವೇನೂ ನಮ್ಮ ಹಾನಿಯಾಗುತ್ತದೆನ್ನುವ ಹಾಗಿಲ್ಲ; ಆದರೆ ಹೀಗಾದದ್ದು ನಮ್ಮ ನಿಮ್ಮ ಸ್ನೇಹಸಂಬಂಧದ ದೃಷ್ಟಿಯಿಂದ ನೆಟ್ಟಗಾಗಲಿಲ್ಲೆಂಬದಿಷ್ಟೇ ನಾವು ನಿಮಗೆ ತಿಳಿಸಿದೆವು, ರಣಮಸ್ತಖಾನನು ನಮ್ಮ ತಾಬೆದಾರನು, ನಮ್ಮ ಅಪರಾಧಿಯು;

ಆದ್ದರಿಂದ ಆತನನ್ನು ನಮ್ಮ ಎರಡನೆಯ ವಕೀಲನ ವಶಕ್ಕೆ ಒಪ್ಪಿಸಬೇಕು. ನಿಜವಾಗಿ ನೋಡಿದರೆ, ಆತನಿಂದ ನಿಮಗೇನೂ ಪ್ರಯೋಜನವಾಗಲಿಕ್ಕಿಲ್ಲ. ಆತನನ್ನು ನಂಬಿ ನೀವು ಕೆಡುವ ಸಂಭವವೇ ವಿಶೇಷವಾಗಿರುತ್ತದೆ; ಆದರೆ ನಮ್ಮ ನಿಮ್ಮ ಸ್ನೇಹಸಂಬಂಧಕ್ಕೆ ಸುಮ್ಮನೆ ಬಾಧೆಬರಬಾರದೆಂದು ನಾವು ನಿಮ್ಮನ್ನು ಹೀಗೆ ಕೇಳಿಕೊಂಡಿದ್ದೇವೆ. ನಮ್ಮ ಕೇಳಿಕೆಯಂತೆ ರಣಮಸ್ತನು ನಮ್ಮ ಅಪರಾಧಿಯೆಂದು ತಿಳಿದು, ಆತನನ್ನು ಕೂಡಲೆ ನಮ್ಮ ವಕೀಲನ ಸ್ವಾಧೀನಪಡಿಸಬೇಕು. ಸದ್ಯಕ್ಕೆ ನಿಮಗೆ ನಾವು ಇಷ್ಟೇ ಸೂಚಿಸುವೆವು. ಸುಜ್ಞರಿಗೆ ಹೆಚ್ಚಿಗೆ ಬರೆಯಲವಶ್ಯವಿಲ್ಲ.

ಬಾದಶಹನು ರಾಮರಾಜನಿಗೆ ಬರೆದ ಪತ್ರದ ಸಾರಾಂಶವು ಮೇಲೆ ಬರೆದಂತೆ ಇತ್ತು. ಬಾದಶಹನ ಮೂಲಪತ್ರವು ಆಗಿನ ಪದ್ಧತಿಯಂತೆ ಬಹು ವಿಸ್ತಾರವಾಗಿ ಬರೆಯಲ್ಪಟ್ಟಿತ್ತು. ಬಾದಶಹನ ವಕೀಲನು ನೆರೆದ ದರ್ಬಾರದಲ್ಲಿ ಆ ಪತ್ರವನ್ನು ರಾಮರಾಜನಿಗೆ ಕೊಟ್ಟನು. ರಾಮರಾಜನು ಅದನ್ನು ತಕ್ಕೊಂಡನು. ಆತನು ತಾನೇ ಕೈ ಮುಟ್ಟಿ ಅದನ್ನು ಒಡೆದು, ಮನಸ್ಸಿನಲ್ಲಿಯೇ ಓದಿ ಒಮ್ಮೆ ನಕ್ಕನು. ಉಳಿದವರಿಗೆ ಅದರೊಳಗಿನ ಸಂಗತಿಯೇನೂ ಗೊತ್ತಾಗಲಿಲ್ಲ. ಅವರು ಒಂದೇ ಸವನೆ ರಾಮರಾಜನ ಕಡೆಗೆ ನೋಡುತ್ತಲಿದ್ದರು. ಆಗ ರಾಮರಾಜನು ಆ ವಕೀಲನನ್ನು ಕುರಿತು— ತಾವು ಕೊಟ್ಟ ಈ ಪತ್ರವು ನಮಗೆ ಮುಟ್ಟಿತು. ಅದನ್ನು ಕುರಿತು ನಾವು ಪೂರ್ಣ ವಿಚಾರ ಮಾಡಿ ಆಮೇಲೆ ಉತ್ತರ ಬರೆಯುವೆವು. ಈಗಲೇ ಅದರ ಉತ್ತರವನ್ನು ಬರೆಯುತ್ತಿದ್ದೆವು; ಆದರೆ ಹಾಗೆ ಮಾಡಿದರೆ, ಏನೂ ವಿಚಾರಮಾಡದೆ ಉತ್ತರ ಬರೆದರೆಂದು ನಿಮ್ಮ ಒಡೆಯರು ಅನ್ನಬಹುದು; ಆದ್ದರಿಂದ ವಿಚಾರಕ್ಕಾಗಿ ನಾಲ್ಕು ದಿನ ತಡೆದು, ಆಮೇಲೆ ನಮ್ಮ ವಕೀಲನ ಕೈಯಿಂದ ನಿಮ್ಮ ಕಡೆಗೆ ಉತ್ತರವನ್ನು ಕೊಟ್ಟುಕಳಿಸುವೆವು. ಈಗ ತೊಂದರೆ ಕೊಟ್ಟ ಬಗ್ಗೆ ತಾವು ಕ್ಷಮಿಸಬೇಕು— ಎಂದು ಹೇಳಿದನು. ರಾಮರಾಜನ ಆ ನಗೆಯ ರೀತಿಯೂ, ಮಾತಿನ ಬಗೆಯೂ ಬಾದಶಹನ ವಕೀಲನನ್ನು ಸಿಟ್ಟಿಗೆಬ್ಬಿಸುವ ಹಾಗಿದ್ದವು. ಅದನ್ನು ನೋಡಿ ಆ ವಕೀಲನು ಅಲ್ಲಿ ಕುಳಿತುಕೊಳ್ಳಲಾರದೆ ಹೊರಟುಹೋಗುವದಕ್ಕಾಗಿ ಎದ್ದುನಿಂತುಕೊಂಡನು. ಅಷ್ಟರಲ್ಲಿ ಆತನಿಗೆ ಪ್ರತಿಕೂಲವಾದ ಮತ್ತೊಂದು ಪ್ರಸಂಗವು ಒದಗಿತು. ರಾಮರಾಜನು ತನ್ನ ಬಳಿಯಲ್ಲಿಯೇ ನಿಂತುಕೊಂಡಿದ್ದ ರಣಮಸ್ತಖಾನನನ್ನು ನೋಡಿ ನಕ್ಕು, ಬಾದಶಹನ ಆ ಪತ್ರವನ್ನು ಆತನ ಕೈಯಲ್ಲಿ ಕೊಟ್ಟನು. ಅದನ್ನು ನೋಡಿದ ಕೂಡಲೆ ಆ ವಕೀಲನು ಸಿಟ್ಟಿನಿಂದ ಹುಬ್ಬುಗಂಟಿಕ್ಕಿ, ಏನೋ ಒಟಗುಟ್ಟುತ್ತ ದರ್ಬಾರದ ರೀತಿಯಂತೆ ಕುರ್ನಿಸಾತ ಮೊದಲಾದದ್ದನ್ನೇನೂ ಮಾಡದೆ, ದರ್ಬಾರದಿಂದ ಹೊರಬಿದ್ದು ಹೋಗಿ, ಮೇಣೆಯಲ್ಲಿ ಕುಳಿತುಕೊಂಡು ತನ್ನ ಬಿಡಾರಕ್ಕೆ ನಡೆದನು. ವಕೀಲನು ಹೊರಟುಹೋದಕೂಡಲೆ, ರಾಮರಾಜನು ಬೇಗನೆ ದರ್ಬಾರು ಮುಗಿಸಿ, ರಣಮಸ್ತಖಾನನಿಗೆ— "ಈ ಪತ್ರವನ್ನು ಮನಸ್ಸುಗೊಟ್ಟು ಓದಿ, ಇನ್ನು ಒಂದು ಪ್ರಹರದ ಮೇಲೆ ತನ್ನ ಬಳಿಗೆ ಬರಬೇಕೆ"ಂದು ಹೇಳಿ ಆತನನ್ನು ಕಳಿಸಿದನು. ಬಾದಶಹನ ಪತ್ರವನ್ನು ಓದಿದಾಗಿನಿಂದ ರಾಮರಾಜನ ವೃತ್ತಿಯು ಒಂದು ವಿಧವಾಯಿತು. ಆ ವೃತ್ತಿಯಲ್ಲಿ ಆನಂದವು ವಿಶೇಷವಾಗಿತ್ತು. ಈ ಪತ್ರದ ಉಪಯೋಗವು ಬಹಳ ಚೆನ್ನಾಗಿ ಆಗುವದೆಂದು ರಾಮರಾಜನು ತಿಳಕೊಂಡನು. ನಿನ್ನನ್ನು ಬೆನ್ನಿಗೆ ಹಾಕಿಕೊಟ್ಟದ್ದರಿಂದ,

ತಾನು ಎಂಥ ವಿಪತ್ತಿಗೆ ಗುರಿಯಾಗಬೇಕಾಯಿತೆಂಬದನ್ನು ಆತನು ರಣಮಸ್ತಖಾನನ ಮನಸ್ಸಿನಲ್ಲಿ ತುಂಬಬೇಕಾಗಿತ್ತು. ಅದೇ ಉದ್ದೇಶದಿಂದಲೇ ಆತನು ರಣಮಸ್ತಖಾನನ ಕೈಯಲ್ಲಿ ಬಾದಶಹನ ಪತ್ರವನ್ನು ಕೊಟ್ಟಿದ್ದನು. ರಣಮಸ್ತಖಾನನು ಕೇವಲ ಕೃತಜ್ಞತೆಯಿಂದ ಬಾದಶಹನ ವಿರುದ್ಧವಾಗಿ ತನಗೆ ಸಹಾಯ ಮಾಡಬೇಕೆಂಬುದೇ ರಾಮರಾಜನ ಉದ್ದೇಶವಾಗಿತ್ತು.

ಇತ್ತ ರಣಮಸ್ತಖಾನನು ಆ ಪತ್ರವನ್ನು ಏಕಾಂತದಲ್ಲಿ ಸ್ವಸ್ಥವಾಗಿ ಕುಳಿತು ಲಕ್ಷ್ಯಪೂರ್ವಕವಾಗಿ ಓದಿ, ತನ್ನೊಳಗೆ ನಕ್ಕನು. ವಿಚಾರಮಾಡಿ ನೋಡಿದರೆ, ಅದರೊಳಗಿನ ಸಂಗತಿಯು ಅವನ ಎದೆಯೊಡಿಸುವ ಹಾಗೆ ಇದ್ದದ್ದರಿಂದ ಪತ್ರವನ್ನು ಆತನು ಭಯಗ್ರಸ್ತನಾಗಿ ಓದಬೇಕಾಗಿತ್ತು; ಆದರೆ ಭಯದ ಚಿಹ್ನವು ಲೇಶವಾದರೂ ಆತನ ಮುಖದಲ್ಲಿ ತೋರಲಿಲ್ಲ. ಇನ್ನು ರಾಮರಾಜರು ತನ್ನನ್ನು ಬಾದಶಹರ ಕಡೆಗೆ ಕಳಿಸದೆ, ತನ್ನ ಪಕ್ಷವಹಿಸಿ, ಬಾದಶಹನಿಗೆ ಏನಾದರೂ ಪತ್ರ ಬರೆಯುವರೆಂದು ಆತನು ನಿಶ್ಚಯವಾಗಿ ತಿಳಕೊಂಡಿದ್ದನು, ಆದರೂ ಅವನು ಆ ಪತ್ರವನ್ನು, ಪೆಟ್ಟಿನ ಮೇಲೆ ಪೆಟ್ಟು, ಎರಡು ಸಾರೆ ಓದಿ, ಅದರೊಳಗಿನ ಸಂಗತಿಯನ್ನೆಲ್ಲ ಅಕ್ಷರಶಃ ತನ್ನ ತಲೆಯಲ್ಲಿ ತುಂಬಿಕೊಂಡಂತೆ ಮಾಡಿದನು. ಆಮೇಲೆ ಸ್ವಸ್ಥ ಮನಸ್ಸಿನಿಂದ ಊಟಮಾಡಿ–ಉಪಚಾರಗಳಾದ ಮೇಲೆ, ಆತನು ರಾಮರಾಜನ ಬಳಿಗೆ ಹೋದನು. ಆತನು ಬರುತ್ತಲೇ ರಾಮರಾಜನು ತನ್ನ ಬಳಿಯಲ್ಲಿದ್ದ ಜನರನ್ನೆಲ್ಲ ಹೊರಗೆಕಳಿಸಿ, ರಣಮಸ್ತಖಾನನಿಗೆ— ಯಾಕೆ? ಓದಿದಿರೋ ಪತ್ರವನ್ನು? ಅದಕ್ಕೆ ಉತ್ತರವೇನು ಬರೆಯಬೇಕು? ಎಂದು ಕೇಳಿದನು. ಅದಕ್ಕೆ ರಣಮಸ್ತಖಾನನು—

ರಣಮಸ್ತಖಾನ— (ಅತ್ಯಂತ ನಮ್ರಭಾವದಿಂದ) ಸರಕಾರ, ತಾವು ಹೀಗೆಯೇ ಉತ್ತರ ಬರೆಯಿರೆಂದು ನಾನು ಹ್ಯಾಗೆ ಹೇಳಲಿ? ತಾವು ದೊಡ್ಡವರು, ವಿಚಾರವಂತರು, ಕರ್ತೃತ್ವಶಾಲಿಗಳು, ತಮ್ಮ ಮನಸ್ಸಿಗೆ ಬಂದಂತೆ ಉತ್ತರ ಬರೆಯಿರಿ. ತಾವು ಸಮರ್ಥರಿರುತ್ತೀರಿ. ನನ್ನ ಸಲುವಾಗಿ ನಿಮ್ಮ ಮೇಲೆಯೂ, ನಿಮ್ಮ ರಾಜ್ಯದ ಮೇಲೆಯೂ ಭಯಂಕರ ಪ್ರಸಂಗವನ್ನು ತಂದುಕೊಂಡು, ನನ್ನನ್ನು ಕಾಪಾಡಿರೆಂದು ನಾನು ತಮಗೆ ಹ್ಯಾಗೆ ಹೇಳಬೇಕು! ತಮ್ಮ ಸವಿಮಾತಿಗೆ ಮರುಳಾಗಿ ಹಿಂದುಮುಂದಿನ ವಿಚಾರವಿಲ್ಲದೆ ನಾನು ತಮ್ಮ ಆಶ್ರಯಕ್ಕೆ ಬರಬೇಕಾದರೆ, ಮುಂದೆ ಆದದ್ದು ಆಗಲೆಂಬ ನಿಶ್ಚಯದಿಂದ ಬಂದಿದ್ದೇನೆ. ಅತ್ತ ವಿಜಾಪುರದ ದರ್ಬಾರದಲ್ಲಿದ್ದು ಒಂದರಹಿಂದೊಂದು ಅಪಮಾನವನ್ನು ಸಹಿಸಲಿಕ್ಕೆ ನನ್ನ ಮನಸ್ಸು ಒಪ್ಪದಾಯಿತು. ನಾನು ಉತ್ತರ ಹಿಂದುಸ್ತಾನ, ಪಂಜಾಬ ಮೊದಲಾದವುಗಳ ಕಡೆಗೆ ಹೋಗಿ, ಯಾವ ಅರಸರ ಬಳಿಯಲ್ಲಾದರೂ ಇದ್ದು ಹೊಟ್ಟೆಯ ತುಂಬಿಕೊಳ್ಳಬೇಕೆಂದು ಮಾಡಿದ್ದೆನು; ಹಾಗೆ ಮಾಡಿದ್ದರೆ ಬಾದಶಹರಿಗೆ ನನ್ನ ನೆನಪು ಸಹ ಉಳಿಯುತ್ತಿದ್ದಿಲ್ಲ. ಆದರೆ ತಮ್ಮ ಸವಿಮಾತುಗಳು ನನ್ನನ್ನು ತಮ್ಮ ಕಡೆಗೆ ಎಳಕೊಂಡವು. ತಮ್ಮ ಕಡೆಗೆ ಬಂದದ್ದರಿಂದಲೇ ಬಾದಶಹರು ನನ್ನ ಮೇಲೆ ಇಷ್ಟು ಸಿಟ್ಟಾಗಿರುವರು. ಹಾಗೆ ಅವರು ಸಿಟ್ಟಾದದ್ದರಲ್ಲೇನೂ ಆಶ್ಚರ್ಯವಿಲ್ಲ, ಅವರ ಸ್ಥಿತಿಯಲ್ಲಿ ತಮಗಾದರೂ ಸಿಟ್ಟು ಬರುತ್ತಿತ್ತು. ಒಳ್ಳೇ ವಿಶ್ವಾಸದ ಸ್ಥಳದ ಮೇಲೆ ನಿಯಮಿಸಲಿಕ್ಕೆ ಯೋಗ್ಯನಾಗುವವರೆಗೆ ಬಾದಶಹರು ನನ್ನ ಯೋಗ್ಯತೆಯನ್ನು ಹೆಚ್ಚಿಸಿರಲು, ನಾನು ಒಮ್ಮೆಲೆ ಶತ್ರುಪಕ್ಷವನ್ನು ವಹಿಸಿದ ಬಳಿಕ,

ಅವರಿಗೆ ಸಿಟ್ಟು ಬಾರದೆ ಏನು ಮಾಡೀತು? ಆದ್ದರಿಂದ ಮಹಾರಾಜ, ನೀವು ವಿಚಾರ ಮಾಡಿ— ಪೂರ್ಣ ವಿಚಾರಮಾಡಿ, ನನಗೆ ಆಶ್ರಯವನ್ನು ಕೊಡಬೇಕು; ಇಲ್ಲವೆ ಬಾದಶಹರಿಗೆ ಒಪ್ಪಿಸಬೇಕು. ನೀವು ಹಾಗೆ ಮಾಡಿದರೂ ನನಗೆ ವ್ಯತ್ಯಾಸವಾಗುವ ಹಾಗಿಲ್ಲ. ನಾನು ಪೂರಾ ದಡ್ಡತನದಿಂದ ನಿಮ್ಮನ್ನು ಆಶ್ರಯಿಸಿ, ನಿಮ್ಮನ್ನು ಅವಲಂಬಿಸಿ ಕುಳಿತು ಕೊಂಡಿರುತ್ತೇನೆ.

ರಾಮರಾಜ— 'ನಾನು ಪೂರಾ ದಡ್ಡತನದಿಂದ ನಿಮ್ಮನ್ನು ಆಶ್ರಯಿಸಿದೆನೆ''ಂದು ಯಾಕೆ ಅನ್ನುತ್ತೀರಿ?

ರಣಮಸ್ತಖಾನ— ಹಾಗನ್ನದೆ ಮತ್ತೇನು ಮಾಡಲಿ? ಸರಕಾರ, ನನ್ನಿಂದ ಪೂರಾ ದಡ್ಡತನವಾಗಿದೆ. ನಾನು ಕೇವಲ ರಾಜದ್ರೋಹವನ್ನಷ್ಟೇ ಮಾಡಲಿಲ್ಲ, ನನ್ನಿಂದ ಮಾತೃದ್ರೋಹವೂ ಘಟಿಸಿರುತ್ತದೆ. ನನ್ನ ತಾಯಿಯು ಅತ್ಯಂತ ಧರ್ಮಿಷ್ಠಳು; ಅತ್ಯಂತ ದೃಢನಿಶ್ಚಯದವಳು. ಆಕೆಯು ನನ್ನ ಸಂರಕ್ಷಣ ಮಾಡುವಾಗ ಪಟ್ಟಶ್ರಮವನ್ನು ಮನಸ್ಸಿನಲ್ಲಿ ತಂದರೆ, ಆಕೆಯ ಕಾಲಿಗೆ ನನ್ನ ಮೈದೊಗಲ ಜೋಡುಮಾಡಿ ಹಾಕಿದರೂ ಆಕೆಯ ಉಪಕಾರವು ತೀರದು! ಹೀಗಿದ್ದು ಆಕೆಯ ಮನಸ್ಸಿಗೆ ಬಾರದ ಕೆಲಸವನ್ನು ನಾನು ಮಾಡಿದೆನು. ನಿಮ್ಮ ಶಬ್ದಜಾಲದಲ್ಲಿ ಸಿಕ್ಕು, ಆ ಮಾತೃದೈವತವನ್ನು ಕೂಡ ನಿರಾಕರಿಸಿ, ನಿಮ್ಮ ಬಳಿಗೆ ಬಂದುಬಿಟ್ಟೆನು. ಹೀಗೆ ನಾನು ಬಂದದ್ದನ್ನು ಕೇಳಿ ನನ್ನ ತಾಯಿಯು ಸಂತಾಪಗೊಂಡು ಪ್ರಾಣವನ್ನರ್ಪಿಸಿದಳೋ, ದೇಶತ್ಯಾಗ ಮಾಡಿದಳೋ ಯಾರಿಗೆ ಗೊತ್ತು? ಆಕೆಯು ಕುಂಜವನದಿಂದ ಹೊರಟು ಹೋಗಿ, ಈಗ ಎಂಟು ದಿನಗಳಾಗುತ್ತ ಬಂದವು. ತಾಯಿಯ ಈ ಸ್ಥಿತಿಯ ಸ್ಮರಣವಾದ ಕೂಡಲೆ ನನ್ನ ಕೈ ಖಡ್ಗದಿಂದ ನನ್ನ ಶಿರಚ್ಛೇದ ಮಾಡಿಕೊಳ್ಳಬೇಕೆನ್ನುವ ಹಾಗೆ ನನಗೆ ಆಗುತ್ತದೆ. ಈಗ ಅನಾಯಾಸವೇ ಬಾದಶಹರಿಂದ ದೇಹಾಂತ ಪ್ರಾಯಶ್ಚಿತ್ತವು ನನಗೆ ಒದಗುವದರಿಂದ, ನನ್ನನ್ನು ವಿಜಾಪುರಕ್ಕೆ ಕಳಿಸಿಬಿಡಿರಿ; ಅಂದರೆ ಎಲ್ಲ ಪಾಪಗಳಿಗಾಗಿ ನನಗೆ ಪ್ರಾಯಶ್ಚಿತ್ತವು ದೊರೆತಂತಾಗುವದು. ರಾಜದ್ರೋಹ– ಮಾತೃದ್ರೋಹಗಳಿಗಾಗಿ ದೇಹಾಂತ ಪ್ರಾಯಶ್ಚಿತ್ತದ ಹೊರತು, ಬೇರೆ ಪ್ರಾಯಶ್ಚಿತ್ತವು ಯೋಗ್ಯವಾಗಲಾರದು. ದೇಹಾಂತ ಪ್ರಾಯಶ್ಚಿತ್ತ ದಿಂದಲಾದರೂ ನನ್ನ ಪಾಪದ ಕ್ಷಾಲನವಾಗುವದೋ ಇಲ್ಲವೋ ಯಾರಿಗೆ ಗೊತ್ತು?

ರಾಮರಾಜ— ಎಲಲಾ! ನಿಮಗೆ ಬಹಳ ಪಶ್ಚಾತ್ತಾಪವಾದಂತೆ ತೋರುತ್ತದೆ. ಆದ್ದರಿಂದ ಈಗ ನಿಮ್ಮ ಸಂಗಡ ಮಾತಾಡುವದರಿಂದ ವಿಶೇಷ ಪ್ರಯೋಜನವಾಗಕ್ಕಿಲಿಲ್ಲ. ನಿಮ್ಮ ತಾಯಿಯು ಇಲ್ಲದ ಹಾಗಾದ್ದರಿಂದ, ನಿಮ್ಮ ಮನಸ್ಸು ಬಹಳ ನೊಂದಿರುವದು. ಇದರಲ್ಲಿ ಆಶ್ಚರ್ಯವೇನೂ ಇಲ್ಲ. ಮಾತೃವಿಷಯವೇ ಅಂಥಾದ್ದು; ಆದರೆ ನಾವು ನಿಮ್ಮ ಸಲುವಾಗಿ ನಿಮ್ಮ ತಾಯಿಯನ್ನು ಹುಡುಕಿಸಲಿಕ್ಕೆ ಎಷ್ಟು ಮಾತ್ರವೂ ಉದಾಸೀನ ಮಾಡಿರುವದಿಲ್ಲ. ನೀವು ಹೇಳುವ ಮಾರ್ಗದಿಂದ ಶೋಧಮಾಡುತ್ತಲೇ ಇರುವೆವು. ಅಂದಬಳಿಕ ನೀವು ಹೀಗೆ ಉದಾಸೀನರಾಗುವದೇಕೆ? ಉದಾಸೀನ ಮಾಡಿದರೆ, ನಿಮ್ಮ ಮಾಸಾಹೇಬರ ಶೋಧವಾದಂತಾಗುವದೋ?

ರಣಮಸ್ತಖಾನ— ಅವರ ಶೋಧವಾಗುವದರಿಂದಾದರೂ ನನಗೇನು ಪ್ರಯೋಜನ ವಾಗುವ ಹಾಗಿದೆ? ಅವರು ಇನ್ನು ನನ್ನ ಮುಖಾವಲೋಕನವನ್ನು ಸಹ ಮಾಡುವ ಹಾಗಿಲ್ಲ. ''ನಾನು ನಿಮ್ಮನ್ನು ಕಾಣಲಿಕ್ಕೆ ಬರುತ್ತೇನೆ''ಂದು ಅವರಿಗೆ ನಾನು ಹೇಳಿಕಳಿಸಿದರೆ, ಅವರು ಎಷ್ಟು

ನಿಷ್ಠುರವಾದ ಉತ್ತರ ಕೊಟ್ಟಾರೆಂಬದನ್ನು ಹೇಳಲಿಕ್ಕಾಗದು, ಅವರು ಬಹು ನಿರ್ಧಾರದ ಸ್ವಭಾವದವರು. ಹೀಗೆ ಮಾಡಬೇಕು, ಇಲ್ಲವೆ ಹೀಗೆ ಮಾಡಬಾರದು, ಎಂದು ಒಮ್ಮೆ ನಿರ್ಧಾರವಾದರೆ ತೀರಿತು. ಮುಂದೆ ಎಂಥ ಪ್ರಸಂಗಗಳು ಒದಗಿದರೂ ಅವರ ನಿಶ್ಚಯದಲ್ಲಿ ಅಂತರವಾಗಲಿಕ್ಕಿಲ್ಲ. ಅವರು ಸುರಕ್ಷಿತವಾಗಿರುವರೆಂಬ ಸುದ್ದಿಯಷ್ಟು ಈಗ ನನಗೆ ತಿಳಿದರೆ ಸಾಕು, ಅವರು ಆತ್ಮಹತ್ಯೆ ಮಾಡಿಕೊಂಡಿದ್ದರೂ, ಒಂದು ವಿಧದಿಂದ ನೆಟ್ಟಗಾಯಿತೆಂತಲೇ ನಾನು ತಿಳಿಯುವೆನು! ಯಾಕಂದರೆ, ನನ್ನ ಕೈಯಿಂದ ಇನ್ನು ಏನಾದರೂ ಅನನ್ವಿತ ಕೃತ್ಯಗಳು ಘಟಿಸಬೇಕಾಗಿದ್ದರೆ, ಅವನ್ನು ನೋಡುವ ಪ್ರಸಂಗವಾದರೂ ಅವರಿಗೆ ತಪ್ಪೀತು.

ರಾಮರಾಜ— (ಚಮತ್ಕಾರದ ಧ್ವನಿಯಿಂದ) ಅವರು ಇಷ್ಟು ದೃಢನಿಶ್ಚಯದ ಸ್ವಭಾವ ದವರಿರುತ್ತಾರೆಯೊ? ಅವರು ತಿರುಗಿ ಮುಖಾವಲೋಕನವನ್ನು ಸಹ ಮಾಡಲಿಕ್ಕಿಲ್ಲೆನ್ನುತ್ತೀರಾ?

ರಣಮಸ್ತಖಾನ— ಇಲ್ಲ, ಅವರು ತಿರುಗಿ ನನ್ನ ಮುಖಾವಲೋಕನವನ್ನು ಸಹ ಮಾಡಲಿಕ್ಕಿಲ್ಲ. ನಾನು ತಮ್ಮ ಪಾಲಿಗೆ ಸತ್ತಿರುವೆನೆಂತಲೇ ಅವರು ತಿಳಕೊಂಡಿರುವರು. ತಮಗೆ ಅವರ ಸ್ವಭಾವದ ಪರಿಚಯವಿಲ್ಲ, ಅವರು ಬಹಳ ಕ್ರಿಯಾವಂತರು; ಬಹು ನಿಸ್ಪೃಹಿಗಳು; ಅವರ ಸ್ವಭಾವವು ಪ್ರೇಮಲವಿದ್ದಷ್ಟೇ ಕಠೋರವೂ ಆಗಿರುವದು. ಪ್ರೇಮಮಾಡುವ ಪ್ರಸಂಗದಲ್ಲಿ ಅವರು ಅತ್ಯಂತ ಪ್ರೇಮ ಮಾಡುವರು; ಪ್ರೇಮದ ಭರದಲ್ಲಿ ಅವರು ತಮ್ಮ ಜೀವದ ಹಂಗು ಸಹ ತೊರೆಯುವರು; ಆದರೆ ಯಾವದೊಂದು ಕಾರಣದಿಂದ ಅವರು ಒಬ್ಬರನ್ನು ದ್ವೇಷಿಸ ಹತ್ತಿದರೆಂದರೆ, ತಿರುಗಿ ಅವರ ಮುಖಾವಲೋಕನವನ್ನು ಸಹ ಮಾಡಲಿಕ್ಕಿಲ್ಲ. ನನ್ನ ಮನಸ್ಸಿನೊಳಗಿನ ವಿಚಾರಗಳು ಅನ್ಯರಿಗೆ ಗೊತ್ತಾಗವು ಮಹಾರಾಜ, ನನ್ನ ತಾಯಿಯೆಂದರೆ ನನ್ನ ಸರ್ವಸ್ವವು; ನನ್ನ ತಾಯಿಯು ನನ್ನ ಪಂಚಪ್ರಾಣವು. ನನ್ನ ತಾಯಿಯ ನನ್ನನ್ನು ಸಂರಕ್ಷಿಸುವಾಗ ಮಣ್ಣಿಗೆ ಮಣ್ಣು ಕೂಡಿದಳು. ಅಂಥವಳ ದ್ರೋಹವನ್ನು ಬಗೆದು ನಾನು ನಿಮ್ಮನ್ನು ಕೂಡಿಕೊಂಡೆನು.

ಮುಂದೆ ಆತನಿಂದ ಮಾತಾಡುವದಾಗಲೊಲ್ಲದು. ಆತನು ಸುಮ್ಮನೆ ಕುಳಿತುಕೊಂಡನು. ಆಮೇಲೆ ಮತ್ತೆ ಅವನು ರಾಮರಾಜನನ್ನು ಕುರಿತು–ಸರಕಾರ, ಇನ್ನು ಹೇಳುವದೇನು! ನೀವು ವಿಚಾರ ಮಾಡಿರಿ. ನನ್ನನ್ನು ವಿಜಾಪುರಕ್ಕೆ ಕಳಿಸುವದಾದರೆ ಕಳಿಸಿಬಿಡಿರಿ. ನೀವು ನನಗೆ ಆಶ್ರಯಕೊಟ್ಟು ಇಡಿಯ ರಾಜ್ಯದ ಮೇಲೆ ಸಂಕಟವನ್ನಾದರೂ ಯಾಕೆ ತಂದುಕೊಳ್ಳುತ್ತೀರಿ! ಸರ್ವಥಾ ತಂದುಕೊಳ್ಳಬೇಡಿರಿ. ನನ್ನಿಂದ ನಿಮಗೆ ಅಷ್ಟು ಪ್ರಯೋಜನವಾಗದು. ಯಾರಿಗೆ ಗೊತ್ತು ಮುಂದೆ ಎಲ್ಲಿಯಾದರೂ ನನ್ನ ಪ್ರಾಮಾಣಿಕತನದ ಬಗ್ಗೆ ನಿಮಗೆ ಸಂಶಯ ಉತ್ಪನ್ನವಾದರೆ, ಕೆಲಸವೇ ಮುಗಿದು ಹೋದೀತು? ಆಮೇಲೆ ನಾನು ಇತ್ತ ಕಡೆಯಿಂದಲೂ ಅತಂತ್ರನು, ಅತ್ತಕಡೆಯಿಂದಲೂ ಅಂತತ್ರನು ಆಗುವೆನು. ಈವೊತ್ತೇ ನಿಮ್ಮ ಮನಸ್ಸಿಗೆ ಬಂದಂತೆ ಮಾಡಿಬಿಡಿರಿ. ನನಗೆ ದೇಹಾಂತ ಪ್ರಾಯಶ್ಚಿತ್ತವಾಗಿಬಿಟ್ಟರೆ, ಮುಂದೆ ನನ್ನ ವಿಷಯವಾಗಿ ಶಂಕಿಸಲಿಕ್ಕೆ ಯಾರಿಗೂ ಆಸ್ಪದವಾದರೂ ಉಳಿಯಲ್ಲಿಕ್ಕಿಲ್ಲ.... ಎಂದು ನುಡಿಯುತ್ತಿರಲು. ರಾಮರಾಜನು ನಡುವೇ ಬಾಯಿಹಾಕಿ— ಕ್ಷತ್ರಿಯರು ಒಮ್ಮೆ ಬೆನ್ನಿಗೆ ಹಾಕಿಕೊಂಡರೆ, ಬೆನ್ನು

ಬಿದ್ದವನು ವೈರಿಯಾಗಿದ್ದರೂ ಆತನ ಉಪೇಕ್ಷೆಯಾಗಲಾರದು. ಆತನು ಮೃತ್ಯುವಿನ ಮುಖಕ್ಕೆ ಎಂದೂ ಬೀಳನು; ಅಂದಬಳಿಕ ನೀವಂತು ನಾನು ಕರೆದದ್ದರಿಂದಲೇ ಅಲ್ಲ, ಆಗ್ರಹದಿಂದ ಕರೆದದ್ದರಿಂದ ನನ್ನ ಕಡೆಗೆ ಬಂದವರು. ಇಂಥವರನ್ನು ಇನ್ನು ನಾನು ಶತ್ರುವಿಗೆ ಒಪ್ಪಿಸಬಹುದೋ? ಇಂಥ ಸಂಶಯವಾದರೂ ನಿಮ್ಮ ಮನಸ್ಸಿನಲ್ಲಿ ಹ್ಯಾಗೆ ಉತ್ಪನ್ನವಾಯಿತು? ಛೀ, ಛೀ, ಇಂಥ ಅಂಜುಬುರುಕತನವು ನನ್ನಿಂದ ಎಂದೂ ಆಗಲಿಕ್ಕಿಲ್ಲ. ನಿಮ್ಮ ಮೇಲೆ ನನ್ನ ಸಂಪೂರ್ಣ ಪ್ರೇಮವಿರುತ್ತದೆ, ನೀವು ನನಗೆ ಹೊಟ್ಟೆಯ ಮಗನಂತೆ ಕಾಣುವದರಿಂದ, ನಾನು ಇಷ್ಟು ಆಗ್ರಹಮಾಡಿ ನಿಮ್ಮನ್ನು ನನ್ನ ಕಡೆಗೆ ಬರಮಾಡಿಕೊಂಡು ನೌಕರಿಗೆ ಇಟ್ಟುಕೊಂಡಿರುತ್ತೇನೆ. ಯಾವಾಗಲೂ ನೀವು ನನ್ನ ಬಳಿಯಲ್ಲಿಯೇ ಇರಬೇಕೆಂದು ನಿಮ್ಮನ್ನು ಅಂಗರಕ್ಷಕರನ್ನಾಗಿ ನಿಯಮಿಸಿಕೊಂಡಿರುವೆನು. ಇನ್ನು ನಾನು ನಿಮಗೆ ಹೆಚ್ಚಿಗೆಯೇನು ಹೇಳಲಿ? ಇಂಥ ನಿಮ್ಮನ್ನು ನಾನು ಬಾದಶಹನಿಗೆ ಒಪ್ಪಿಸುವೆನೆ? ಇದೆಂಥ ನಿಮ್ಮ ತಿಳುವಳಿಕೆಯು? ತಿರುಗಿ ನನ್ನ ಮುಂದೆ ಇಂಥ ಮಾತು ಆಡಬೇಡಿರಿ. ಎಂದೂ ಮಾತಾಡಬೇಡಿರಿ. ನನ್ನ ರಾಜ್ಯದ ಮೇಲೆ, ಅಥವಾ ನನ್ನ ಮೇಲೆ ಬೇಕಾದ ಪ್ರಸಂಗ ಬರಲಿ, ಅದನ್ನು ನೋಡಿಕೊಳ್ಳಲಿಕ್ಕೆ ನಾನು ಸಮರ್ಥನಿದ್ದೇನೆ. ಈ ಮುಸಲ್ಮಾನ ರಾಜ್ಯಗಳು ನಮ್ಮ ಸುತ್ತುಮುತ್ತು ಮುತ್ತಿಕೊಂಡಿರುವಾಗ, ಹಿಂದು ರಾಜ್ಯವನ್ನು ನಾವು ಈ ಮುಸಲ್ಮಾನ ಬಾದಶಹರ ಗದ್ದರಿಕೆಗೆ ಬೆದರಿ ಸಂರಕ್ಷಿಸಿಕೊಂಡಿರುವೆವೋ? ಛೀ ಛೀ! ಇಂಥ ವಿಚಾರವನ್ನು ಸಹ ಮನಸ್ಸಲ್ಲಿ ತಂದುಕೊಳ್ಳಬೇಡಿರಿ. ಇನ್ನು ಮೇಲೆ ನೀವು ಹಿಂದೂ ರಾಜರ ನೌಕರರಾಗಿರುತ್ತೀರಿ, ಹಿಂದುಗಳೇ ಆಗಿರುತ್ತೀರಿ, ನಾವು ಇನ್ನು ನಿಮ್ಮ ವಿಷಯವಾಗಿ ಅಭಿಮಾನಪಡುವಂತೆ ನೀವಾದರೂ ನಮ್ಮ ವಿಷಯವಾಗಿ ಅಭಿಮಾನಪಡಿರಿ; ಮತ್ತು ನಿಮ್ಮ ವಶಕ್ಕೆ ನಾನು ಈಗ ಕೊಡಬೇಕಾಗಿರುವ ಪಠಾಣ ಸೈನ್ಯವನ್ನು ಇನ್ನಿಷ್ಟು ಹೆಚ್ಚಿಸಿರಿ. ಬೇರೆ ಸೈನ್ಯಗಳನ್ನೂ ವ್ಯವಸ್ಥೆಗೊಳಿಸಿರಿ. ಇನ್ನು ಹಿಂದೂ ರಾಜ್ಯವನ್ನು ರಕ್ಷಿಸುವ ವಿಚಾರಗಳು ನಿಮ್ಮ ಮನಸ್ಸಿನಲ್ಲಿ ಸ್ಥಿರವಾಗಲಿ. ಬಾದಶಹರು ನಿಮ್ಮನ್ನು ಅವಮಾನ ಗೊಳಿಸಿದಂತೆ ಇಲ್ಲಿ ಯಾರೂ ನಿಮ್ಮನ್ನು ಅವಮಾನಗೊಳಿಸಲಾರರು—ಎಂದು ಹೇಳಿದನು. ಇದನ್ನೆಲ್ಲ ರಣಮಸ್ತಖಾನನು ಸುಮ್ಮನೆ ಕೇಳಿಕೊಂಡು, ಕೃತಜ್ಞತಾಪೂರ್ವಕವಾಗಿ ಸಮಾಧಾನವನ್ನು ಪ್ರಕಟಿಸಿ, ರಾಮರಾಜನ ಅಪ್ಪಣೆಯನ್ನು ಪಡೆದು ಹೊರಟುಹೋದನು.

## ನಿಗ್ಗರದ ಉತ್ತರ

ಗುರುತ್ವಾಕರ್ಷಣದ ವಿರುದ್ಧವಾಗಿ ಮೇಲಕ್ಕೇರಿದ ಕಲ್ಲು ಕೆಳಕ್ಕೆ ಬೀಳತಕ್ಕದ್ದೇ. ಅದರಂತೆ ಬಹುಜನರ ವಿರುದ್ಧವಾಗಿ ಏರಿದ ಮನುಷ್ಯನು ಎಂದಾದರೊಂದು ದಿನ ಕೆಳಗಿಳಿಯತಕ್ಕ ಸಂಬಂಧವು ವಿಶೇಷವಾಗಿರುವದು. ಈ ಮಾತು ರಣಮಸ್ತಖಾನನ ಸಂಬಂಧದಿಂದ ವಿಜಾಪುರದ ದರ್ಬಾರದಲ್ಲಿ ನಿಜವಾಯಿತು. ಒಬ್ಬ ಸರ್ವಸಾಧಾರಣ ಸೈನಿಕನಿಂದ ಪ್ರತ್ಯಕ್ಷ ಬಾದಶಹನವರೆಗೆ

ಎಲ್ಲರೂ ರಣಮಸ್ತಖಾನನ ಮೇಲೆ ಹಲ್ಲುಕಡಿಯಹತ್ತಿದರು. ಈಗ ಎಷ್ಟೋ ದಿವಸಗಳಿಂದ ನಮ್ಮ ಬಾದಶಹನು ವಿಜಯನಗರದ ರಾಜ್ಯವನ್ನು ಮಣ್ಣುಗೂಡಿಸುವದಕ್ಕಾಗಿ, ಅಹಮ್ಮದನಗರ ಗೋವಳ ಕೊಂಡಗಳ ಬಾದಶಹರ ಸಂಗಡ ನಡಿಸಿದ ಒಳಸಂಚು ಒತ್ತಟ್ಟಿಗುಳಿದು, ತಿರುಗಿ ರಾಮರಾಜನೇ ವಿಜಾಪುರದ ಮೇಲೆ ಸಾಗಿಬರುವ ಪ್ರಸಂಗವು ಒದಗಿತೆಂದು ಎಲ್ಲರೂ ಸಂತಾಪಗೊಂಡರು. ರಣಮಸ್ತಖಾನನಿಗೆ ನಮ್ಮ ರಾಜ್ಯದೊಳಗಿನ ಎಲ್ಲ ಹುಳಕುಗಳೂ, ನಮ್ಮ ಬಾದಶಹರು ಬೇರೆ ಬಾದಶಹರೊಡನೆ ನಡಿಸಿರುವ ಎಲ್ಲ ಒಳಸಂಚುಗಳೂ ಗೊತ್ತಿರುವದರಿಂದ, ರಾಮರಾಜನಿಗೆ ದೊಡ್ಡ ಸಹಾಯವಾಯಿತೆಂದು ಅವರು ಮಾತಾಡಿಕೊಳ್ಳಹತ್ತಿದರು; ಆದರೂ ಈ ಸಂಧಿಯಲ್ಲಿ ತಾವು ವಿಜಯನಗರದ ಮೇಲೆ ದಂಡೆತ್ತಿ ಹೋಗಿ ರಾಮರಾಜನ ಮಗ್ಗಲು ಮುರಿಯಬೇಕೆಂದು ವಿಜಾಪುರದ ದಂಡಾಳುಗಳು ಆಡಹತ್ತಿದರು. ಹೀಗಿರುವಾಗ, ಕುಂಜವನ ದಲ್ಲಿದ್ದ ರಣಮಸ್ತಖಾನನ ತಾಯಿಯು ಒಮ್ಮಿಂದೊಮ್ಮೆ ಇಲ್ಲದ ಹಾಗಾದಳೆಂಬ ಸುದ್ದಿಯು ವಿಜಾಪುರಕ್ಕೆ ಹೋಯಿತು. ಅದನ್ನು ಕೇಳಿ ಜನರ ತರ್ಕವಿತರ್ಕಗಳಿಗೆ ಆರಂಭವಾಯಿತು. ರಾಮರಾಜನೇ ತನ್ನ ಬಂಗಾರದವರಲ್ಲಿಯೊಬ್ಬಳನ್ನೂ, ಆಕೆಯ ಮಗನನ್ನೂ ಯುಕ್ತಿಯಿಂದ ವಿಜಾಪುರದ ರಾಜ್ಯದಲ್ಲಿ ಸೇರಿಸಿ, ಅಲ್ಲಿಯ ಗುಪ್ತಸಂಗತಿಯನ್ನು ತಿಳಕೊಳ್ಳಲಿಕ್ಕೆ ಇಷ್ಟೆಲ್ಲ ತಂತ್ರವನ್ನು ರಚಿಸಿರಬಹುದೆಂದು ಜನರು ತರ್ಕಿಸಹತ್ತಿದರು. ಇಂಥ ಹಲವು ತರ್ಕವಿತರ್ಕಗಳೂ ಸಂಭವಾಸಂಭವದ ಸುದ್ದಿಗಳೂ ಊರತುಂಬ ಹಬ್ಬಿ, ಬಾದಶಹನ ಕಿವಿಯ ವರೆಗೆ ಮುಟ್ಟಿದವು; ಈ ಪ್ರಸಂಗದಲ್ಲಿ ಕೈಗಾದರೆ ನಮ್ಮದಿಷ್ಟೇ ಅಲ್ಲ, ಎಲ್ಲ ಮುಸಲ್ಮಾನ ಬಾದಶಹರ ಗೌರವವೇ ನಷ್ಟವಾಗಿ, ಬಾದಶಾಹಿಗಳು ಮುಣುಗುವ ಪ್ರಸಂಗ ಒದಗಬಹುದೆಂದು ಬಹುಜನರು ಬಾದಶಹನ ಮುಂದೆ ಸ್ಪಷ್ಟವಾಗಿ ಪ್ರತಿಪಾದಿಸಹತ್ತಿದರು ಬಾದಶಹನಾದರೂ ತನ್ನ ಜನರ ಯುದ್ಧೋತ್ಸಾಹವನ್ನು ನೋಡಿ, ಮನಸ್ಸಿನಲ್ಲಿ ಸಂತೋಷ ಪಟ್ಟನು. ಆತನು ವಿಜಯನಗರದ ರಾಜ್ಯವನ್ನು ಮುಣುಗಿಸುವದಕ್ಕಾಗಿ ಬಹು ದಿವಸಗಳಿಂದ ಕಪಟೋಪಾಯವನ್ನು ಯೋಚಿಸಿದ್ದು ಆ ಉಪಾಯಗಳೆಲ್ಲ ಸಿದ್ಧಿಸುತ್ತ ಬಂದದ್ದರಿಂದ, ಈಗ ಆತನೊಬ್ಬನೇ ವಿಜಯನಗರದ ರಾಜ್ಯವನ್ನು ನಾಶಮಾಡಬಹುದಾಗಿತ್ತು; ಆದರೂ ಧೂರ್ತನಾದ ಬಾದಶಹನು ವಿಜಯನಗರದ ಪ್ರಚಂಡ ಸೈನ್ಯದ ಕಡೆಗೆ ನೋಡಿ, ಅಪ್ಪಿತಪ್ಪಿ ತನಗೆ ಅಪಜಯವಾದರೆ ತನ್ನ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲವೆಂದು ತಿಳಿದು, ಉಳಿದ ಇಬ್ಬರು ಬಾದಶಹರನ್ನು ತನ್ನ ಕಡೆಗೆ ಮಾಡಿಕೊಳ್ಳುವ ಎತ್ತುಗಡೆಯನ್ನು ಮಾಡತೊಡಗಿದ್ದನು. ಸುದೈವದಿಂದ ಆತನ ಯತ್ನವು ಸಫಲವಾಗುವ ಯೋಗವು ಸಮೀಪಿಸತೊಡಗಿತ್ತು. ಆತನು ಗೋವಳಕೊಂಡ, ಅಹಮ್ಮದನಗರಗಳ ಬಾದಶಹರಿಗೆ ತನ್ನ ವಕೀಲರ ಮುಖಾಂತರವಾಗಿ— ''ಈ ಪ್ರಸಂಗದಲ್ಲಿ ನೀವು ನನ್ನ ಮಾತನ್ನು ದುರ್ಲಕ್ಷಿಸ ಬಾರದೆಂದು ನಿಮಗೆ ನಾನು ಹೇಳಿಕೊಳ್ಳುವೆನು, ನಮ್ಮಲ್ಲಿ ಒಕ್ಕಟ್ಟು ಇಲ್ಲದ್ದರಿಂದಲೇ ವಿಜಯನಗರದ ಅರಸರು ನಮ್ಮ ಎದೆಯ ಮೇಲೆ ಕುಳಿತಂತಾಗಿರುತ್ತದೆ. ನಾವು ಒಕ್ಕಟ್ಟಿನಿಂದ ನಡೆದಿದ್ದರೆ ಕಾಫರರ ಆ ರಾಜ್ಯವು ಇಷ್ಟು ಹೊತ್ತಿಗೆ ನಾಮಶೇಷವಾಗುತ್ತಿತ್ತು. ರಾಮರಾಜನಿಂದ ಈವೊತ್ತಿನವರೆಗೆ ನಮಗಾದ ಅಪಮಾನವನ್ನೂ, ನಮ್ಮ ಪ್ರಜೆಗಳಿಗಾದ ಪೀಡೆಯನ್ನೂ ನೆನಪಿಗೆ

ತಂದುಕೊಳ್ಳೋಣ, ಅದೆಲ್ಲದರ ಸೇಡು ತೀರಿಸಿಕೊಂಡು ಇಸ್ಲಾಮಿಗೆ ತಕ್ಕೆಗಳ ಗೌರವ ಕಾಯ್ದುಕೊಳ್ಳುವ ಇಚ್ಛೆಯು ತಮ್ಮಲ್ಲಿದ್ದರೆ, ನಮ್ಮ ಒಡಕುಗಳನ್ನೆಲ್ಲ ಮರೆತು, ಈಗ ನಾವು ಒಕ್ಕಟ್ಟಿಂದ ನಡೆಯಲಿಕ್ಕೆಬೇಕು. ನಾವು ಮೂವರು ಒಕ್ಕಟ್ಟಾದರೆ, ಸಂಪತ್ತಿನಿಂದ ತುಂಬಿತುಳುಕವ ವಿಜಯ ನಗರವನ್ನು ಸುಲಿಯುವದೂ, ವಿಸ್ತಾರವಾಗಿ ಬೆಳೆದ ಆ ವಿಜಯನಗರದ ರಾಜ್ಯವನ್ನು ನಮ್ಮೊಳಗೆ ಬೇಕಾದಹಾಗೆ ಹಂಚಿಕೊಳ್ಳುವದೂ ಅಸಾಧ್ಯವಿಲ್ಲ. ಈ ಸಂಬಂಧದಿಂದ ನಾವು ಮೂವರು ಒತ್ತಟ್ಟಿಗೆ ಪ್ರತ್ಯಕ್ಷಕೂಡಿ ಆಲೋಚಿಸುವದು ನೆಟ್ಟಗೆ. ಆ ಯೋಗವನ್ನು ತಂದುಕೊಳ್ಳಲಿಕ್ಕೆ ನಾನು ಸಿದ್ಧನಿದ್ದೇನೆ. ನೀವು ಬರಹೇಳಿದರೆ ನಿಮ್ಮಲ್ಲಿಗೆ ನಾನು ಬರುವೆನು. ನೀವು ನಮ್ಮಲ್ಲಿಗೆ ಬಂದರೂ ಸರಿಯೇ. ಬೇರೆ ಯಾರ ರಾಜ್ಯದಲ್ಲಾದರೂ ನಾವು ಮೂವರು ಒತ್ತಟ್ಟಿಗೆ ಕೂಡೋಣವೆಂದರೆ, ಅದಕ್ಕೂ ನಾನು ಒಪ್ಪಿಕೊಳ್ಳುವೆನು. ಆದರೆ ಒಮ್ಮೆ ನಾವೆಲ್ಲರು ಒತ್ತಟ್ಟಿಗೆ ಕೂಡಬೇಕು'' ಎಂದು ಹೇಳಿಕಳುಹಿಸಿದನು. ಬಾದಶಹನ ಅಂತಃಕರಣಪೂರ್ವಕವಾದ ಈ ವಿನಯೋಕ್ತಿಗಳನ್ನು ಕೇಳಿ ಅಹಮ್ಮದನಗರ— ಗೋವಳ ಕೊಂಡಗಳ ಬಾದಶಹರು ಒಕ್ಕಟ್ಟು ಬೆಳೆಸಲಿಕ್ಕೆ ಸಿದ್ಧರಾದರು.

ಹೀಗೆ ಎಲ್ಲಕಡೆಯಿಂದಲೂ ಅನುಕೂಲತೆಯು ತೋರಿತು. ವಿಜಾಪುರದವರಂತು ಯುದ್ಧಕ್ಕೆ ಒಂದೇ ಸವನೆ ಆತರುಪಡುತ್ತಿದ್ದರು. ಅವರು ರಾಮರಾಜನು ಬಾದಶಹನ ಪತ್ರಕ್ಕೆ ಎದುರುತ್ತರವನ್ನು, ಕೊಟ್ಟು ಬಾದಶಹನನ್ನು ಸಿಟ್ಟಿಗೆಬ್ಬಿಸಬೇಕೆಂದು ಇಚ್ಛಿಸುತ್ತಿದ್ದರು. ಹೀಗಿರುವಾಗ ರಾಮರಾಜನು ರಣಮಸ್ತಖಾನನನ್ನು ನಿಮಗೆ ಒಪ್ಪಿಸಲಿಕ್ಕೆ ಬರುವದಿಲ್ಲೆಂದು ಸ್ಪಷ್ಟವಾಗಿ ಉತ್ತರವನ್ನು ಬರೆದನು. ಅದನ್ನು ನೋಡಿ ವಿಜಾಪುರದ ದಂಡಾಳುಗಳು ಹಿಗ್ಗಿದರು. ಬಾದಶಹನೂ ಸಂತಾಪಗೊಂಡನು. ಆತನು ಪುನಃ ಅಹಮ್ಮದನಗರ–ಗೋವಳಕೊಂಡಗಳ ಬಾದಶಹರ ಕಡೆಗೆ ವಕೀಲರನ್ನು ಕಳಿಸಿ, ಇನ್ನು ಯುದ್ಧಪ್ರಸಂಗ ಒದಗುವದು ನಿಶ್ಚಯವಾದ್ದರಿಂದ, ನಾವೆಲ್ಲರೂ ದೂರದೃಷ್ಟಿಯಿಂದ ನಡೆಕೊಳ್ಳುವದು ಅವಶ್ಯವೆಂದು ಹೇಳಿಕಳುಹಿಸಿದನು. ಅದಕ್ಕೆ ಅವರಿಬ್ಬರು ಬಾದಶಹರೂ ಒಪ್ಪಿಕೊಳ್ಳುವ ಸಂಭವ ತೋರಿದ್ದರಿಂದ ವಿಜಾಪುರದ ಬಾದಶಹನು ರಾಮರಾಜನಿಗೆ ಕಟ್ಟಕಡೆಯ ಪತ್ರವನ್ನು ಬರೆದನು. ಅದರಲ್ಲಿ ಆತನು—''ನಮ್ಮ ಪ್ರಜೆಗಳೊಳ ಗಿನವನಲ್ಲ, ನಮ್ಮ ನೌಕರನಲ್ಲಿಯೊಬ್ಬನು ನಮಗೆ ದ್ರೋಹವನ್ನು ಬಗೆದು ನಿಮ್ಮ ಕಡೆಗೆ ಬಂದಿರುತ್ತಾನೆ. ಇಂಥ ಮನುಷ್ಯನಿಗೆ ನೀವು ಆಶ್ರಯಕೊಡುವದೆಂದರೆ, ಬುದ್ಧಿಪೂರ್ವಕವಾಗಿ ನಮ್ಮೊಡನೆ ಇದ್ದ ನಿಮ್ಮ ಸ್ನೇಹಸಂಬಂಧವನ್ನು ಮುರಿಯೋಣವೆಂದು ನಾವು ತಿಳಕೊಳ್ಳುತ್ತೇವೆ. ಇಂಥ ವಿಚಾರಕ್ಕೆ ನೀವು ಹೋಗುವವರಲ್ಲೆಂಬದನ್ನು ನಾವು ಬಲ್ಲೆವು; ಆದರೂ ನಿಮ್ಮ ಕೃತಿಯಿಂದ ಹಾಗೆ ಭಾಸವಾಗುತ್ತದೆ. ಹಿಂದಕ್ಕೆ ಇದೇ ರಣಮಸ್ತನೇ ನಿಮ್ಮ ದರ್ಬಾರದಲ್ಲಿ ನಿಮ್ಮ ಅಪಮಾನಮಾಡಿದನೆಂದು ನೀವೇ ಬರೆದಿದ್ದಿರಿ, ನಮ್ಮ ಗೌರವವನ್ನು ಕಾಯ್ದುಕೊಳ್ಳುವ ದೃಷ್ಟಿಯಿಂದ ರಣಮಸ್ತಖಾನನ ಕೃತಿಯು ಯೋಗ್ಯವಿದ್ದರೂ, ನಿಮ್ಮ ಸ್ನೇಹಸಂಬಂಧವನ್ನು ಕಾಯ್ದುಕೊಳ್ಳುವದಕ್ಕಾಗಿ ನಾವು ಆಗ ನಮ್ಮ ದರ್ಬಾರದಲ್ಲಿ ರಣಮಸ್ತಖಾನನ ಅಪಮಾನಮಾಡಿ, ಆತನ ಅಧಿಕಾರವನ್ನು ಕಸಿದುಕೊಂಡೆವು. ಈ ಸಂಗತಿಯು ನೀವು ಅರಿಯದ್ದಲ್ಲ. ಹೀಗಿದ್ದು ನಿಮ್ಮ ಸಲುವಾಗಿ ನಮ್ಮಿಂದಾದ ಅಪಮಾನದಿಂದ ರಣಮಸ್ತನು ನಮ್ಮ ಮೇಲೆ ತಿರಗಿಬಿದ್ದು ನಿಮ್ಮ

ಕಡೆಗೆ ಬರಲು, ನೀವು ಆತನಿಗೆ ಆಶ್ರಯಕೊಡುವದು ವಿಚಿತ್ರವಲ್ಲವೆ? ನಾವು ಪ್ರತ್ಯಕ್ಷಪತ್ರ ಬರೆದು ರಣಮಸ್ತಖಾನನನ್ನು ಶಿಕ್ಷಿಸುವದು ಅವಶ್ಯವಿರುತ್ತದಾದ್ದರಿಂದ ಆತನನ್ನು ನಮಗೆ ಒಪ್ಪಿಸಿರೆಂದು ಕೇಳಿಕೊಳ್ಳಲು, ನೀವು ಹಾಗೆಮಾಡದೆ ರಣಮಸ್ತನಿಗೆ ಆಶ್ರಯಕೊಟ್ಟಿರಿ; ಇದರ ಇಂಗಿತವೇನಿರಬಹುದೆಂಬದನ್ನು ನೀವೇ ವಿಚಾರಮಾಡತಕ್ಕದ್ದು! ನಿಮ್ಮ ಉದ್ದೇಶವೇನೇ ಇರಲಿ, ನಮ್ಮ ನಿಮ್ಮ ಸ್ನೇಹ ಸಂಬಂಧಕ್ಕೆ ಲಕ್ಷಗೊಟ್ಟು ನಮ್ಮ ಇಸಮನ್ನು ನಮಗೆ ಒಪ್ಪಿಸತಕ್ಕದ್ದು. ನೀವು ಹೀಗೆ ಮಾಡದಿದ್ದರೆ, ನಮ್ಮ ನಿಮ್ಮೊಳಗಾದ ಕರಾರು ನಿಮ್ಮ ಕೃತಿಯಿಂದ ಮುರಿದಹಾಗಾದವೆಂದು ತಿಳಿದು, ನಾವೇ ವಿಜಯನಗರದ ತನಕ ಬಂದು, ನಮ್ಮ ಇಸಮನ್ನು ಹಿಡಕೊಂಡು ಹೋಗಬೇಕಾಗುವದು. ಆತನನ್ನು ನಿಮ್ಮ ಆಶ್ರಯದಲ್ಲಿರಗೊಟ್ಟರೆ, ನಮ್ಮ ಗೌರವಕ್ಕಷ್ಟೇ ಅಲ್ಲ ಬೇರೆ ಹಲವು ಸಂಗತಿಗಳ ಗೌರವಕ್ಕೆ ಬಾಧೆಬರುತ್ತದೆ. ಹಾಗೆ ಗೌರವಕ್ಕೆ ಬಾಧೆತರಲು ನಾವು ಇಚ್ಛಿಸುವದಿಲ್ಲ. ಆದ್ದರಿಂದ ಈ ಪತ್ರವು ಮುಟ್ಟಿದ ಒಂದು ದಿನದೊಳಗೆ ರಣಮಸ್ತನನ್ನು ನಮಗೆ ಒಪ್ಪಿಸಬೇಕು. ಒಪ್ಪಿಸದಿದ್ದರೆ ನಮ್ಮ ಮನಸ್ಸಿಗೆ ಬಂದಂತೆ ನಾವು ಮಾಡುವೆವು. ನಿಮ್ಮ ಇಷ್ಟವಿದ್ದಂತೆಯೂ ನೀವು ಮಾಡೇಮಾಡುವಿರಿ.

ಈ ಮೇರೆಗೆ ಸ್ಪಷ್ಟವಾಗಿ ಬರೆದ ಪತ್ರವು ರಾಮರಾಜನ ಕೈಸೇರಿತು. ಅದನ್ನು ಓದಿ ರಾಮರಾಜನು ಗಹಗಹಿಸಿ ನಕ್ಕು, ಕೂಡಲೆ ರಣಮಸ್ತಖಾನನನ್ನು ಕರೆಸಿ, ಅದನ್ನು ಆತನ ಕೈಯಲ್ಲಿ ಕೊಟ್ಟನು. ರಣಮಸ್ತನು ಅದನ್ನು ಓದಿ ಅತ್ಯಂತ ಖಿನ್ನವಾಗಿ, ರಾಮರಾಜನನ್ನು ಕುರಿತು—ಸರಕಾರ, ನನ್ನಂಥ ಯಃಕಶ್ಚಿತ ಮನುಷ್ಯನ ಸಲುವಾಗಿ ತಾವು ತಮ್ಮ ಮೇಲೆಯೂ, ತಮ್ಮ ರಾಜ್ಯದ ಮೇಲೆಯೂ ಸಂಕಟವನ್ನು ಯಾಕೆ ತಂದುಕೊಳ್ಳುವಿರಿ ! ನನ್ನ ಅಪರಾಧಕ್ಕಾಗಿ ಬಾದಶಹರು ನನಗೆ ದೇಹಾಂತ ಪ್ರಾಯಶ್ಚಿತ್ತ ಕೊಡುವದೇ ಯೋಗ್ಯವಾಗಿರುವದು. ನನ್ನ ಯೋಗದಿಂದ ನಿಮ್ಮರಾಜ್ಯದ ಮೇಲೆ ಇಂಥ ಕಠಿಣ ಪ್ರಸಂಗ ಒದಗುವದು ಇಷ್ಟವಾದದ್ದಲ್ಲ. ಬಾದಶಹನಿಗೆ ಏನಾದರೂ ನೆವವು ಬೇಕಾಗಿತ್ತು. ಆತನು ಈವೊತ್ತಿನವರೆಗೆ ಇಬ್ಬರು ಬಾದಶಹರೊಡನೆ ಗುಪ್ತಾಲೋಚನೆಗಳನ್ನು ನಡಿಸಿ ಎಲ್ಲ ಸಿದ್ಧತೆಯನ್ನು ಮಾಡಿಕೊಂಡಿರುವದರಿಂದ, ನಿಮ್ಮ ಮೇಲೆ ಯುದ್ಧಕ್ಕೆ ಬರಲು ಆತುರಪಡುತ್ತಿರುವನು. ಇಂಥ ಪ್ರಸಂಗದಲ್ಲಿ ಎಲ್ಲ ಗುಟ್ಟನ್ನು ಬಲ್ಲ ನಾನು ನಿಮ್ಮನ್ನು ಕೂಡಿಕೊಳ್ಳಲು, ಬಾದಶಹನು ಹ್ಯಾಗೆ ಸಹಿಸಿಯಾನು? ಆತನು ನನ್ನ ಮೇಲೆ ಸಿಟ್ಟಾಗದೆ ಯಾಕೆ ಬಿಟ್ಟಾನು? ಹ್ಯಾಗೂ ನನ್ನ ಯೋಗದಿಂದ ಯುದ್ಧಕ್ಕೆ ಆಸ್ಪದವು ದೊರೆಯುವ ಹಾಗಿದೆ. ಆದ್ದರಿಂದಲೇ ಬಾದಶಹನು ಇಷ್ಟು ನಿಷ್ಠುರತನದಿಂದ ಪತ್ರವನ್ನು ಬರೆದಿದ್ದಾನೆ. ಆದರೆ ನೀವು ಆ ಪತ್ರವನ್ನು ನಿರಾಕರಿಸುವದು ನನಗೆ ನೆಟ್ಟಗೆ ಕಾಣುವದಿಲ್ಲ. ನನ್ನೊಬ್ಬನ ಪ್ರಾಣಹಾನಿಯಿಂದ ಸಾವಿರಾರು ಜನರ ಪ್ರಾಣವನ್ನು ಉಳಿಸುವದು ನ್ಯಾಯವು. ಇನ್ನು ವಿಜಾಪುರದ ಬಾದಶಹನಿಗಾಗಲಿ, ಬೇರೆ ಇಬ್ಬರು ಬಾದಶಹರಿಗಾಗಲಿ, ಆ ಮೂವರು ಒಟ್ಟುಗೂಡಿದ್ದರಿಂದಾಗಿ ನೀವು ಅಂಜುವಿರೆಂದು ನಾನು ಹೇಳುವುದಿಲ್ಲ. ಇನ್ನಿಬ್ಬರು ಬಾದಶಹರು ಒಟ್ಟುಗೂಡಿ ಬಂದರೂ ಅವರೆಲ್ಲರನ್ನು ಮುರಿಯುವದಕ್ಕೆ ನೀವು ಸಮರ್ಥರಿರುತ್ತೀರಿ. ಆ ಐವರೂ ಬಾದಶಹರು ಒಟ್ಟುಗೂಡಿ ನಾಲ್ಕೂ ಕಡೆಯಿಂದ ನಿಮ್ಮ ಮೇಲೆ ಏರಿಬಂದರೂ ಅವರೆಲ್ಲರನ್ನು ಗೊತ್ತಿಗೆ

ಹೆಚ್ಚುವಷ್ಟು ಸೈನ್ಯದ ಸಿದ್ಧತೆಯು ನಿಮ್ಮಲ್ಲಿರುತ್ತದೆ. ನೀವು ಎಳ್ಳಷ್ಟು ಹೆದರುವ ಕಾರಣವಿಲ್ಲ. ನಿಮ್ಮ ಸೈನ್ಯವು ಸಂಪೂರ್ಣ ಸಿದ್ಧವಾಗಿರುವದೆಂಬದರಲ್ಲೇನೂ ಸಂಶಯವಿಲ್ಲ. ಇದಲ್ಲದೆ, ನಮ್ಮ ವಿಜಾಪುರದ ಸೈನ್ಯದಲ್ಲಿಯ ದೋಷಗಳು ನನಗೆ ಗೊತ್ತಿರುವದರಿಂದ, ಯಾವ ಕಾಲಕ್ಕೆ ಹ್ಯಾಗೆ ಅದನ್ನು ಎದುರಿಸಬೇಕು. ಯಾವ ಸ್ಥಳದಲ್ಲಿ ಹೇಗೆ ಅದನ್ನು ಹೊಡೆಯಬೇಕು. ಎಂಬದರ ಮರ್ಮವು ನನಗೆ ಗೊತ್ತಿರುತ್ತದೆ. ಹೀಗೆ ಮರ್ಮವರಿತು ಯುದ್ಧಮಾಡಿದರೆ, ಮೂವರು ಬಾದಶಹರೇ ಯಾಕೆ, ಐವರು, ಏಳುಮಂದಿ ಬಾದಶಹರು ಒಟ್ಟುಗೂಡಿ ಬಂದರೂ ಆಗುವದೇನು? ಆದರೆ ನನ್ನನ್ನು ಬಾದಶಹರಿಗೆ ಒಪ್ಪಿಸುವದರಿಂದ ಎಲ್ಲ ಸಂಕಟಗಳ ನಿವಾರಣವಾಗುತ್ತಿದ್ದರೆ, ನೀವಾದರೂ ಯಾಕೆ ಆಗ್ರಹ ಮಾಡಬೇಕು? ತಮ್ಮ ಸಲುವಾಗಿ ನಾನು ಮಾಡಬೇಕಾಗಿರುವ ಕೆಲಸಗಳನ್ನು ಮಾಡಿಬಿಟ್ಟಿರುವೆನು. ಇನ್ನು ನಾನು ಹೋದರೂ.........

ಈ ಮೇರೆಗೆ ರಣಮುಸ್ತಖಾನನು ನುಡಿಯುತ್ತಿರಲು,ರಾಮರಾಜನು ಆತನನ್ನು ಮುಂದಕ್ಕೆ ಮಾತಾನಾಡಗೊಡದೆ— "ನೀವು ಹೀಗೆ ಮಾತನಾಡಬೇಕೆಂದು ನಾನು ನಿಮ್ಮನ್ನು ಕರೆಸಿ ಪತ್ರವನ್ನು ಓದಗೊಟ್ಟಿರುವದಿಲ್ಲ. ಒಂದು ಮೋಜಿನ ಕಾಗದವೆಂದು ನಿಮ್ಮನ್ನು ಕರೆಸಿ ಪತ್ರವನ್ನು ತೋರಿಸಿದೆನು. ಏನಾದರೂ ಉತ್ತರವನ್ನು ಬರೆದುಕಳಿಸಬೇಕೆಂದು ತೋರಿದರೆ, ನಾನು ಉತ್ತರ ಬರೆದುಕಳಿಸೇನು. ಇಲ್ಲದಿದ್ದರೆ ಉತ್ತರವನ್ನೇ ಕಳಿಸಲಿಕ್ಕಿಲ್ಲ. ಪತ್ರ ತಂದವನನ್ನು ಪ್ರತಿಬಂಧದಲ್ಲಿರಿಸಿ ಬಿಟ್ಟೇನು. ನಿಮ್ಮಂಥವರನ್ನು ಬಾದಶಹನಿಗೆ ಒಪ್ಪಿಸುವದು ವಿಶ್ವಾಸಘಾತದ ಲಕ್ಷಣವಾಗಿರುತ್ತದೆ. ಬೆನ್ನುಬಿದ್ದವನನ್ನು ಹೊಟ್ಟೆಯ ಮಕ್ಕಳಂತೆ ನೋಡುವದು ನಮ್ಮ ಹಿಂದೂ ಜನರ ಶೀಲವಾಗಿರುವದು; ಇನ್ನು ಮೇಲೆ ಇಂಥ ಮಾತುಗಳನ್ನು ನೀವು ಆಡಲಾಗದು. ನಿಮ್ಮನ್ನು ನಾವು ನಮ್ಮವರೆಂದು ತಿಳಿದಿದ್ದೇವೆ" ಎಂದು ನುಡಿಯುತ್ತಿರಲು, ರಾಮರಾಜನಲ್ಲಿ ರಣಮುಸ್ತನ ವಿಷಯವಾಗಿ ಪುತ್ರಪ್ರೇಮವು ಉಕ್ಕಿಬರಲು, ಆತನು ರಣಮುಸ್ತಖಾನನ ಎರಡು ಭುಜಗಳ ಮೇಲೆ ತನ್ನ ಕೈಗಳನ್ನಿಟ್ಟು ಅತ್ಯಂತ ವಾತ್ಸಲ್ಯದಿಂದ— ರಣಮುಸ್ತ ಯಾವ ಕಾರಣದಿಂದಲೋ ಏನೋ, ನಿನ್ನನ್ನು ನೋಡಿದಕೂಡಲೆ ನನ್ನ ಪ್ರೇಮವು ಹೆಚ್ಚುತ್ತದೆ. ನಿನ್ನನ್ನು ನೋಡಿದಾಗಿನಿಂದ, ನೀನು ನನ್ನ ಬಳಿಯಲ್ಲಿರಬೇಕೆಂಬ ಇಚ್ಛೆಯು ನನ್ನಲ್ಲಿ ಉತ್ಪನ್ನವಾಗಿರುತ್ತದೆ. ನೀನು ನಮ್ಮ ದರ್ಬಾರದಲ್ಲಿ ಅಂದು ಆ ಹುಡುಗಿಯ ಮೇಲುಗಟ್ಟಿ ಸಿಟ್ಟಿನಿಂದ ಮಾತಾಡಿದಾಗಿನಿಂದಂತು, ನಿನ್ನ ಮೇಲಿನ ನನ್ನ ಪ್ರೇಮವು ಹತ್ತುಪಟ್ಟು ಹೆಚ್ಚಾಯಿತು. ನಿನಗೆ ಜನ್ಮಕೊಟ್ಟ ತಂದೆಯೂ, ನಿನ್ನನ್ನು ಹಡೆದ ತಾಯಿಯೂ ಪರಮಧನ್ಯರೆಂದು ನಾನು ತಿಳಿಯುವೆನು, ಎಂದು ನುಡಿದನು. ರಾಮರಾಜನು ಇಷ್ಟು ಪ್ರೇಮದಿಂದ ಮಾತಾಡುತ್ತಿರುವಾಗ ದರ್ಬಾರದ ನೆನಪು ಮಾಡಿಕೊಡಲು, ಕೂಡಲೆ ರಣಮುಸ್ತಖಾನನ ವೃತ್ತಿಯಲ್ಲಿ ಹೆಚ್ಚು ಕಡಿಮೆಯಾಯಿತು. ಆತನ ಹುಬ್ಬುಗಳು ಗಂಟಿಕ್ಕಿದವು. ಆತನು ತ್ರಸ್ತದೃಷ್ಟಿಯಿಂದ ನೆಲವನ್ನು ನೋಡಹತ್ತಿದನು. "ತಾನು ರಾಮರಾಜನ ಶಿರಸ್ಸನ್ನು ತಂದು ನಿನ್ನ ಲಗ್ನಮಾಡಿಕೊಳ್ಳುವೆನೆಂದು" ನೂರಜಹಾನಳ ಮುಂದೆ ಪ್ರತಿಜ್ಞೆ ಮಾಡಿದ್ದು ಆತನಿಗೆ ನೆನಪಾಯಿತು. ಇತ್ತ ರಾಮರಾಜನು ರಣಮುಸ್ತಖಾನನ ಮುಖಮುದ್ರೆಯಲ್ಲಿ ಅಂತರವಾದದ್ದನ್ನು ನೋಡಿ, ನೂರಜಹಾನಳ ಪ್ರಾಪ್ತಿಗೆ ಬಾದಶಹನು ಪ್ರತಿಬಂಧವಾದನೆಂಬ

ಸಿಟ್ಟಿನಿಂದ ಈತನ ಮುಖಮುದ್ರೆಯು ಹೀಗೆ ತ್ರಸ್ತವಾಗಿರುವದೆಂದು ಭಾವಿಸಿ, ನಕ್ಕು ರಣಮಸ್ತನನ್ನು ಕುರಿತು— ನೀವು ಇಷ್ಟು ಸಂತಾಪಗೊಳ್ಳುವ ಕಾರಣವಿಲ್ಲ. ವಿಜಾಪುರದವ ರೊಡನೆ ಯುದ್ಧಪ್ರಸಂಗವನ್ನು ತಂದುಕೊಳ್ಳಲಿಕ್ಕೆ, ಆ ನಿನ್ನ ಅರಗಿಳಿಯೊಡನೆ ನಿನ್ನ ಲಗ್ನಮಾಡಲು ಆಸ್ಪದ ದೊರೆಯಬೇಕೆಂಬುದೇ ಮುಖ್ಯ ಕಾರಣವೆಂದು ನೀನು ತಿಳಿದುಕೋ; ಆದ್ದರಿಂದ ವಿಜಾಪುರವನ್ನು ಪ್ರವೇಶಿಸಿದ ಕೂಡಲೆ ನಿನ್ನ ಅರಗಿಳಿಯನ್ನು ಹಿಡಕೊಂಡು ಬರುವದು ನನ್ನ ಮೊದಲನೆಯ ಕೆಲಸವು'' ಎಂದು ಹೇಳಿದನು.

ತನ್ನ ಅರಗಿಳಿಯನ್ನು (ನೂರಜಹಾನಳನ್ನು)ರಾಮರಾಜನು ಹಿಡಕೊಂಡು ಬರುವದು ಅಪಮಾನಾಸ್ಪದವೆಂದು ತಿಳಿದು, ರಣಮಸ್ತಖಾನನು ಸಂತಾಪಗೊಳ್ಳಲು, ಆತನ ಕೈಯು, ಆತನ ಟೊಂಕದಲ್ಲಿ ಅಲೆದಾಡುತ್ತಿದ್ದ ಖಡ್ಗದ ಕಡೆಗೆ ಹೋಯಿತು. ಇದನ್ನು ನೋಡಿ ರಾಮರಾಜನು– ನಾನು ಅರಗಿಳಿಯನ್ನು ಹಿಡಿಯಬೇಕೆಂದ ಕೂಡಲೆ ಈತನು ಇಷ್ಟು ಸ್ಫೂರ್ತಿಗೊಂಡನೆಂದು ತಿಳಿದು— ''ಬಹದ್ದರ, ಆ ಅರಗಿಳಿಯನ್ನು ಹಿಡಕೊಂಡುಬರುವ ವಿಷಯದಲ್ಲಿ ನೀನು ಇಷ್ಟು ಉತ್ಕಂಠನಾಗಿರುವೆಯೆಂದು ತಿಳಿದೇ ನಾನು ಮಾತಾಡಿದೆನು. ನಿನ್ನ ಈ ಉತ್ಕಂಠೆಯನ್ನು ನೋಡಿ ನನಗೆ ಬಹಳ ಸಂತೋಷವಾಗುತ್ತದೆ. ನಿನಗೆ ನಿನ್ನ ಅರಗಿಳಿಯ ಚಿಂತೆ ಬೇಡ. ನಾನು ಜೀವದಿಂದಿರುವದರೊಳಗೆ ಅರಗಿಳಿಯೊಡನೆ ನಿನ್ನ ಲಗ್ನಮಾಡಿ, ನೀನು ಆನಂದಪಡುವದನ್ನು ಕಣ್ಣುತುಂಬ ನೋಡುವೆನು. ಇದು ನನ್ನ ಪ್ರತಿಜ್ಞೆಯೆಂದು ತಿಳಿ'' ಅನ್ನಲು ಈ ಮಾತಿನಿಂದ ರಣಮಸ್ತಖಾನನ ಸಿಟ್ಟು ಹೆಚ್ಚಿದರೂ ಅದನ್ನು ಆತನು ನುಂಗಿಕೊಂಡು— ಹೌದು, ನಾನು ನಿಮ್ಮ ಮುಂದೆ ಇನ್ನು ಯಾಕೆ ಮುಚ್ಚಲಿ? ನೀವು ಅನ್ನುವಂತೆ ನನ್ನ ಮನಸ್ಸಿನ ಸ್ಥಿತಿಯಾಗಿರುತ್ತದೆಂಬುದು ನಿಜವು. ನನ್ನ ಅರಗಿಳಿಯ ಸಂಬಂಧದಿಂದ ನನ್ನ ಉಪಮರ್ದವಾಗಿದ್ದರೆ, ನಾನು ನಿಮ್ಮ ಪಕ್ಷವನ್ನೇ ಸ್ವೀಕರಿಸುತ್ತಿದ್ದಿಲ್ಲ, ಆ ಉಪಮರ್ದವು ನನ್ನನ್ನು ನಿಮ್ಮ ಕಡೆಗೆ ಎಳಕೊಂಡು ಬಂದಂತೆ ಆಗಿರುತ್ತದೆ. ಆ ಉಪಮರ್ದವನ್ನು ನಾನು ಮರೆಯಬೇಕಾದರೆ, ಸ್ವಪರಾಕ್ರಮದಿಂದ ಅರಗಿಳಿಯನ್ನು ಹಿಡತರಲೇಬೇಕು, ಎಂದು ನುಡಿಯುತ್ತಿರಲು, ರಾಮರಾಜನು ನಡುವೇ ಬಾಯಿಹಾಕಿ— ಅಲಬತ, ಅಲಬತ ಹಾಗೆ ಆಗಲೇಬೇಕು. ನಾನು ಆ ಕೆಲಸವನ್ನು ಅವಶ್ಯವಾಗಿ ಮಾಡುವೆನು. ಈಗ ನಾನು ಬಾದಶಹನಿಗೆ ಉತ್ತರವನ್ನು ಬರೆದು,ಅದರಲ್ಲಿ ನಿನ್ನ ಆ ಅರಗಿಳಿಯನ್ನು ನಮಗೆ ಒಪ್ಪಿಸಬೇಕೆಂತಲೂ, ಹಾಗೆ ಒಪ್ಪಿಸದಿದ್ದರೆ ಅದನ್ನು ಹಿಡಕೊಂಡು ಬರುವದಕ್ಕಾಗಿ ನಾವೇ ವಿಜಾಪುರದ ಮೇಲೆ ಸಾಗಿಬರುವೆನೆಂತಲೂ ಕಾಣಿಸುವೆನು. ನಿನ್ನನ್ನು ಹಿಡಕೊಂಡು ಹೋಗಲಿಕ್ಕೆ ವಿಜಯನಗರದ ಮೇಲೆ ಸಾಗಿಬರುವ ಬಾದಶಹನಿಗೆ, ಹೀಗೆ ಬರೆಯದಿದ್ದರೆ ಹ್ಯಾಗೆ?

ಈ ಮೇರೆಗೆ ನುಡಿದು ರಾಮರಾಜನು ಬಾದಶಹನಿಗೆ ಉತ್ತರವನ್ನು ಬರೆದನು. ಅದರಲ್ಲಿ ಆತನು ರಣಮಸ್ತಖಾನನನ್ನು ತಮಗೆ ಒಪ್ಪಿಸುವದು ನಮ್ಮ ಹಿಂದೂಜನರ ಶೀಲಕ್ಕೆ ವಿರುದ್ಧವಾಗಿರುತ್ತದೆ. ನಮ್ಮ ಆಶ್ರಯವನ್ನು ಪಡೆದವನು, ನಮ್ಮಲ್ಲಿ ಸಂರಕ್ಷಣ ಮಾಡುವ ಸಾಮರ್ಥ್ಯವಿರುವವರೆಗೆ ನಮ್ಮ ಬಳಿಯಲ್ಲಿಯೇ ಇರತಕ್ಕವನು. ನಮ್ಮ ಸಂಪೂರ್ಣ ಉಚ್ಛೇದವಾದಾಗ, ಆತನಿಗೆ ನಮ್ಮ ಆಶ್ರಯವು ತಪ್ಪೀತು; ನೀವು ಸುಮ್ಮನೆ ಇಲ್ಲದ ಆಗ್ರಹ

ತೊಟ್ಟು ನಮ್ಮ ಸಂಗಡ ಯುದ್ಧಕ್ಕೆ ಸಿದ್ಧವಾಗಬಾರದು. ರಣಮಸ್ತಖಾನನು ಹೇಳಿ ಕೇಳಿ ನಿಮ್ಮ ನೌಕರಿಯನ್ನು ಬಿಟ್ಟು ನಮ್ಮಲ್ಲಿ ನೌಕರನಾದರೆ, ವಿಶ್ವಾಸಘಾತವು ಹ್ಯಾಗಾಯಿತೋ ನಮಗೆ ತಿಳಿಯದು. ನಮಗೂ ನಿಮಗೂ ಸ್ನೇಹವಿರುತ್ತದೆ. ಆ ಸ್ನೇಹವನ್ನು ಕೆಡಿಸಿಕೊಳ್ಳಲಿಕ್ಕೆ ಏನೂ ಕಾರಣವಿಲ್ಲ. ಏನಾದರೂ ಇಲ್ಲದ ನೆವಮಾಡಿ ಸ್ನೇಹಸಂಬಂಧವನ್ನು ಕೆಡಿಸಿಕೊಳ್ಳಬೇಕೆಂದು ನೀವು ಮಾಡಿರುವಂತೆ ತೋರುತ್ತದೆ. ಹೀಗಿದ್ದರೆ, ನಿಮ್ಮ ಇಚ್ಛೆಯು, ನಿಮ್ಮ ಮನಸ್ಸಿಗೆ ಬಂದಂತೆ ಮಾಡಿರಿ, ನೀವು ನಮ್ಮ ಸಂಗಡ ಸ್ನೇಹದಿಂದಿರುವದೇ ನಿಜವಿದ್ದರೆ, ನಿಮ್ಮ ಒಬ್ಬ ನೌಕರನು ನಮ್ಮ ಕಡೆಗೆ ಬಂದಿರಲು, ನಮಗೆ ಇಷ್ಟು ವೈಷಮ್ಯವೇಕೆ? ನಮ್ಮ ನಿಮ್ಮ ಸ್ನೇಹ ಸಂಬಂಧವೇ ದೃಢವಾಗಿದ್ದ ಪಕ್ಷದಲ್ಲಿ ರಣಮಸ್ತಖಾನನು ನಿಮ್ಮ ವಿರುದ್ಧವಾಗಿ ನಮ್ಮ ಮುಂದೆ ಏನು ಹೇಳುವನು? ಆತನು ಹೇಳಿದ್ದರಿಂದ ಪ್ರಯೋಜನವಾದರೂ ಏನಾಗುವದು? ಆತನು ನಿಮ್ಮ ವಿಶ್ವಾಸಘಾತ ವನ್ನಾದರೂ ಹ್ಯಾಗೆ ಮಾಡುವನು? ನೀವು ಪತ್ರದಲ್ಲಿ ಬರೆದಂತೆ ರಣಮಸ್ತಖಾನನನ್ನಂತು ನಾವು ನಿಮ್ಮ ಕಡೆಗೆ ಕಳಿಸುವದೇಯಿಲ್ಲ. ತಿರುಗಿ ನಾವು ನಿಮ್ಮನ್ನೊಂದು ಮಾತು ಕೇಳಿಕೊಳ್ಳುವೆವು. ನಮ್ಮ ದರ್ಬಾರದಲ್ಲಿ ರಣಮಸ್ತಖಾನನು ಯಾವ ಹುಡುಗಿಯ ಪಕ್ಷವನ್ನು ಕಟ್ಟಿ ತನ್ನ ತೇಜಸ್ವಿತೆಯನ್ನು ತೋರಿಸಿದನೋ, ಆ ಹುಡುಗಿಯನ್ನು ಈ ಪತ್ರ ಮುಟ್ಟಿದ ಕೂಡಲೆ ನಮ್ಮ ಕಡೆಗೆ ಕಳಿಸಿಕೊಡಬೇಕು. ರಣಮಸ್ತಖಾನನೊಡನೆ ಆಕೆಯ ಲಗ್ನಮಾಡುವದನ್ನು ನಾವು ನಿಶ್ಚಯಿಸಿರುತ್ತೇವೆ. ರಣಮಸ್ತಖಾನನು ಆ ಹುಡುಗಿಯ ಲಗ್ನಮಾಡಿಕೊಳ್ಳಲಿಕ್ಕೆ ಕುಲ–ಶೀಲ–ಶೌರ್ಯಗಳಿಂದ ಯೋಗ್ಯನಿರುತ್ತಾನೆ. ಕುಲ–ಶೀಲ ಗಳಿಂದಂತು ಆತನು ಆ ಹುಡುಗಿಯ ಮನೆತನಕ್ಕಿಂತ ಎಷ್ಟೋ ಪಾಲು ಹೆಚ್ಚಿನವನಿರುತ್ತಾನೆ; ಆದ್ದರಿಂದ ತಾವು ಮನಸ್ಸಿನಲ್ಲಿ ಯಾವ ಪ್ರಕಾರದ ಶಂಕೆಗೂ ಆಸ್ಪದ ಕೊಡದೇ ರಣಮಸ್ತಖಾನನು ನಮ್ಮ ನೌಕರಿ ಬಿಟ್ಟು, ವಿಜಯನಗರದ ರಾಯರ ನೌಕರನಾದನೆಂಬ ವಿಕಲ್ಪದಿಂದ ಆತನ ಮೇಲೆ ಸಿಟ್ಟಾಗದೆ, ಆ ಹುಡುಗಿಯನ್ನು ನಮ್ಮ ಕಡೆಗೆ ಕಳಿಸತಕ್ಕದ್ದು. ಆ ಹುಡುಗಿಯ ತಂದೆ–ತಾಯಿಗಳನ್ನು ಹುಡುಗಿಯ ಸಂಗಡ ಲಗ್ನಸಮಾರಂಭಕ್ಕೆ ಕಳಿಸಿದರೆ ವಿಹಿತವೇ ಆಗುವದು. ಉಭಯತರ ಯೋಗ್ಯತೆಗೆ ಒಪ್ಪುವಂತೆ ನಾವು ರಣಮಸ್ತಖಾನನ ವಿವಾಹವನ್ನು ಮಾಡುವೆವು. ರಣಮಸ್ತಖಾನನು, ನಮ್ಮಲ್ಲಿ ಸಾಧಾರಣ ನೌಕರನಾಗಿರದೆ, ಪ್ರಮುಖ ಸರದಾರನಾಗಿ ನಿಯಮಿಸಿಲ್ಪಟ್ಟಿರುವನು, ಮುಂದಾದರೂ ಅವನ ಮಾನ–ಮರ್ಯಾದೆಗಳು ಹೆಚ್ಚುತ್ತ ಹೋಗುವವು. ಆತನು ತಮಗೆ ಯಾವ ತರದ ಕೇಡನ್ನೂ ಬಗೆದಿರುವದಿಲ್ಲ. ಅವನಿಗೆ ನಮ್ಮ ನೌಕರಿಯು ನಿಮ್ಮ ನೌಕರಿಗಿಂತ ನೆಟ್ಟಗೆ ಕಂಡದ್ದರಿಂದ, ಅವನು ಪ್ರಸಿದ್ಧರೀತಿಯಿಂದ ನಿಮ್ಮ ನೌಕರಿಯನ್ನು ಬಿಟ್ಟುಕೊಟ್ಟು ನಮ್ಮಲ್ಲಿ ಇರಹತ್ತಿದನು. ಈ ಅಲ್ಪಕಾರಣದ ಮೂಲಕ ಯುದ್ಧಕ್ಕೆ ಸನ್ನದ್ಧರಾಗುವದನ್ನು ನೋಡಿದರೆ, ನೀವು ಜಗಳಕ್ಕೆ ಯಾವದಾದರೊಂದು ಕಾರಣವನ್ನು ಹುಡುಕುತ್ತಿದ್ದಿರೆಂಬಂತೆ ನಮಗೆ ತೋರುತ್ತದೆ. ಎಷ್ಟೋ ದಿವಸಗಳಿಂದ ನೀವು ಅಹಮ್ಮದನಗರ– ಗೋವಳಕೊಂಡಗಳ ರಾಜರ ಸಂಗಡ ನಡೆಸಿರುವ ಒಳಸಂಚುಗಳು ನಮಗೆ ಗೊತ್ತಿಲ್ಲವೆಂತಿಲ್ಲ; ಆದರೆ ನೀವಾಗಿ ಮೊದಲು ನಿಮ್ಮ ಶಸ್ತ್ರವೆತ್ತುವವ ವರೆಗೆ ನಾವು ನಿಮ್ಮ ಗೊಡವೆಗೆ ಹೋಗಬಾರದೆಂದು ಮಾಡಿದ್ದೆವು. ಈಗ ನೀವೇ ಮೊದಲು

ಯುದ್ಧಕ್ಕೆ ಅಣಿಯಾದ್ದರಿಂದ ನಿರ್ವಾಹವಿಲ್ಲದೆ, ನಾವೂ ಯುದ್ಧಕ್ಕೆ ಹೊರಡುವ ಪ್ರಸಂಗ ಬಂದಿದೆ. ಆದರೆ ಈ ಸಾರೆಯ ಕಾಳಗವು ಯಾವ ಮನೆಗೆ ಬಂದೀತೆಂಬದನ್ನು ನಾವು ಹೇಳಲಾರೆವು. ನಾವು ಕ್ಷಮೆ, ದಯೆ ಮೊದಲಾದವುಗಳನ್ನು ಕಟ್ಟಿ ಇಟ್ಟು, ವಿಜಾಪುರವನ್ನು ಪ್ರವೇಶಿಸಿ, ಕುರಿಗಳಂತೆ ಅಲ್ಲಿಯ ಪ್ರಜೆಗಳನ್ನು ಸಂಹರಿಸಿ, ನಗರವನ್ನು ಸುಟ್ಟು ಸೂರೆಗೈದೆವು; ಇನ್ನು ಹಿಂದುಮುಂದು ನೋಡಲಿಕ್ಕಿಲ್ಲ. ಆದರೆ ಒಬ್ಬ ನೂರಜಾಹನಳನ್ನು ಕಳಿಸಿಕೊಡುವದರಿಂದ ಈ ಪ್ರಸಂಗವು ಹಿಂಗಬಹುದಾದ್ದರಿಂದ, ಆಕೆಯನ್ನು ಕೂಡಲೇ ಕಳಿಸಕೊಡ ಬೇಕು ''ಎಂಬ ಸಂಗತಿಯನ್ನು ಬರೆದು ಪತ್ರವನ್ನು ರಣಮಸ್ತಖಾನನಿಗೆ ತೋರಿಸಿ, ಆತನ ಸಮಕ್ಷಮ ರಾಮರಾಜನು ಅದನ್ನು ಒಬ್ಬ ದೂತನ ಕೈಯಲ್ಲಿಕೊಟ್ಟು ವಿಜಾಪುರಕ್ಕೆ ಕಳಿಸಿದನು.

## ರಾಮರಾಜನ ಸ್ವಚ್ಛಂದವೃತ್ತಿಯು

ರಣಮಸ್ತಖಾನನನ್ನು ತಮ್ಮ ಕಡೆಗೆ ಕಳಿಸಬೇಕೆಂದು ರಾಮರಾಜನಿಗೆ ಬರೆದ ಪತ್ರಕ್ಕೆ ಆತನು ಏನು ಉತ್ತರ ಬರೆಯುವನೆಂಬುವದು ವಿಜಾಪುರದ ಬಾದಶಹನಿಗೆ ಗೊತ್ತಾಗದ ಹಾಗೆ ಆಗಿತ್ತು, ಬಾದಶಹನು ರಾಮರಾಜನ ಉತ್ತರಕ್ಕೆ ಮಹತ್ವ ಕೊಡದೆ, ತನ್ನ ಸಮರಸನ್ನಾಹವನ್ನು ಮಾಡುವ ಹಾಗೆ ಮಾಡುತ್ತಲೇ ಇದ್ದನು. ಇಬ್ಬರು ಬಾದಶಹರೊಡನೆ ನಡೆಸಿದ ಆತನ ಒಳಸಂಚು ಪೂರ್ಣಸಿದ್ಧವಾದ ಹಾಗೆ ಆಗಿತ್ತು. ಬಾಮನೀ ಬಾದಶಹರಲ್ಲಿ ನಾಲ್ಕು ಶಾಖೆಗಳಿಗಾಗಿ ಅವರಲ್ಲಿ ಪರಸ್ಪರ ಮಾತ್ಸರ್ಯವು ಹೆಚ್ಚಿದ್ದರಿಂದ ಪರಸ್ಪರರು ಹೊಡೆದಾಡಿ ಎಲ್ಲರೂ ಬಲಹೀನರಾದಂತೆ ಆಗಿತ್ತು. ಈ ಬಾದಶಹರು ಒಬ್ಬರು ಮತ್ತೊಬ್ಬರನ್ನು ಮುರಿಯುವದಕ್ಕಾಗಿ ಪರಧರ್ಮದ ಅರಸರನ್ನು ಪ್ರಾರ್ಥಿಸಿ ತಮ್ಮ ಸಹಾಯಕ್ಕೆ ಕರಕೊಳ್ಳಲಿಕ್ಕೆ ಹೇಸುತ್ತಿದ್ದಿಲ್ಲ. ವಿಜಾಪುರದ ಅಲಿ ಆದಿಲಶಹನು ತನ್ನ ಶತ್ರುಗಳನ್ನು ಹಣ್ಣುಮಾಡುವದಕ್ಕಾಗಿ ಎರಡು ಸಾರೆ ರಾಮರಾಜನ ಸಹಾಯವನ್ನು ಕೇಳಿಕೊಂಡು, ಅವನ ಕಡೆಯಿಂದ ತನ್ನ ಶತ್ರುಗಳ ಮೇಲೆ ದಾಳೀ ಮಾಡಿಸಿದನು. ಈ ದಾಳಿಯಲ್ಲಿ ರಾಮರಾಜನು ಸಂಪೂರ್ಣ ಜಯಶಾಲಿಯಾದದ್ದನ್ನು ನೋಡಿ, ಮೊದಮೊದಲು ಅಲಿ ಆದಿಲಶನಿಗೆ ಬಹಳ ಸಂತೋಷವಾಯಿತು. ಆದರೆ ಈ ಸಮಾಧಾನವು ಬಹಳ ಹೊತ್ತು ನಿಲ್ಲಲಿಲ್ಲ. ರಾಮರಾಜನು ಈ ಜಯದಿಂದ ಬಹಳ ಉನ್ಮತ್ತನಾದನು. ತುಂಗಭದ್ರೆಯಿಂದ ರಾಮೇಶ್ವರದವರಗೆ ಈಗ ಆತನ ರಾಜ್ಯವು ವಿಸ್ತೃತವಾಗಿ, ಎಲ್ಲ ಮುಸಲ್ಮಾನ ಬಾದಶಹರು ಆತನಿಗೆ ಅಂಜಿ ನಡೆಯಹತ್ತಿದರು. ಈ ಸ್ಥಿತಿಯಲ್ಲಿ ರಾಮರಾಜನು ಜಾಗರೂಕನಾಗಿ ಕಣ್ಣುತೆರೆದು ನಡೆದಿದ್ದರೆ ಬಹಳ ನೆಟ್ಟಗಾಗುತ್ತಿತ್ತು! ಆದರೆ, ಮದಮೋಹಗಳೆಂಬ ಇಬ್ಬರು ಪ್ರಬಲ ವೈರಿಗಳ ಇರುಕಿನಲ್ಲಿ ಸಿಕ್ಕು ಆತನು ತೀರ ಅಂಧನಾಗಿದ್ದನು. ತಾನು ಬಾಯಿಂದ ಅಂದಂತೆ ಆಗುವದೆಂತಲೂ, ಕೈಯಿಂದ ಮಾಡತೊಡಗಿದ್ದು ಸಾಧಿಸುವದೆಂತಲೂ ಆತನು ನಂಬಿದ್ದನು. ಈ ನಂಬಿಗೆಯು ಆತನ ಉನ್ಮತ್ತತನಕ್ಕೆ ಕಾರಣವಾಗದಿದ್ದರೆ, ಆತನ, ಹಾಗು

ವಿಜಯನಗರದ ರಾಜ್ಯವು ವಿಜಯವೂ, ವಿಸ್ತಾರವೂ ಯಾವಾಗಲೂ ಆಗುತ್ತಲೇ ಹೋಗುತ್ತಿದ್ದವು; ಆದರೆ ದುರ್ದೈವದಿಂದ ಹಾಗಾಗಲಿಲ್ಲ. ಆತನನ್ನು ಉನ್ಮತ್ತತನವು ಸಂಪೂರ್ಣವಾಗಿ ಮುಸುಕಿಬಿಟ್ಟಿತು. ತನ್ನ ವಿರುದ್ಧವಾಗಿ ಮೂವರು ನಾಲ್ವರು ಬಾದಶಹರು ಒಟ್ಟಾಗುತ್ತಿರುವರೆಂಬ ಸುದ್ದಿಯು ಆತನಿಗೆ ಗೊತ್ತಾಗಿದ್ದರೂ, ಅದರ ಮಹತ್ವವು ಆತನಿಗೆ ತೋರುವಷ್ಟು ತೋರಲಿಲ್ಲ. ಹದಿನೆಂಟು ಮಂದಿ ಬಾದಶಹರು ಒಟ್ಟಾದರೇನಾಯಿತು? ಅವರೆಲ್ಲರ ಮಗ್ಗಲು ಮುರಿಯೋಣ ವೆಂದು ಆತನು ಭಾವಿಸಹತ್ತಿದನು. ಹೀಗೆ ಬರಿಯ ಭಾವಿಸುತ್ತಿದ್ದನೆಂಬದಿಷ್ಟೇ ಅಲ್ಲ, ಇಂಥ ಪ್ರಸಂಗವು ಒಮ್ಮೆ ಬಂದು ಹೋಗಲೆಂದು ಆತನು ಇಚ್ಛಿಸಹತ್ತಿದನು! ಹೀಗೆ ಈ ಎಲ್ಲ ಬಾದಶಹರ ಎಲವು ಒಮ್ಮೆ ದುಂಡಗೆ ಮಾಡಿದೆನೆಂದರೆ, ಮುಂದೆ ಉತ್ತರದ ಕಡೆಗೆ ಸಹ ತನ್ನ ರಾಜ್ಯವನ್ನು ಹಬ್ಬಿಸಲಿಕ್ಕೆ ಪ್ರತಿಬಂಧವಾಗದೆಂದು ಆತನು ತಿಳಿದಿದ್ದನು.

ರಾಮರಾಜನ ಈ ವಿಚಾರವು ಅಯೋಗ್ಯವಾದದ್ದೆಂದು ಹೇಳುವ ಹಾಗಿದ್ದಿಲ್ಲ. ಒಂದು ದೃಷ್ಟಿಯಿಂದ ಅದು ಯೋಗ್ಯವಾದದ್ದಾಗಿತ್ತು; ಆದರೆ ತನ್ನ ಸಾಮರ್ಥ್ಯದ ವಿಷಯವಾಗಿ ಇದ್ದ ಆತನ ವಿಶ್ವಾಸವು ಇರುವಷ್ಟಕ್ಕಿಂತ ಬಹಳ ಹೆಚ್ಚು ಇತ್ತು. ಆತನ ಸೈನ್ಯವು ಬಹು ಪ್ರಚಂಡ ವಾದದ್ದೆಂಬದೇನೋ ನಿಜ. ಆದರೆ ಆ ಸೈನ್ಯದಲ್ಲಿ ಈಗ ವ್ಯವಸ್ಥೆಯಿದ್ದಿಲ್ಲ. ಸೈನಿಕರು ಸೋಮಾರಿ ಗಳೂ, ಡಾಂಭಿಕರೂ, ಚಕ್ಕಂದಕ್ಕೆ ಮೆಚ್ಚಿದವರೂ ಆಗಿದ್ದರು. ಈ ಸ್ಥಿತಿಯ ಜ್ಞಾನವು ರಾಮ ರಾಜನಿಗೆ ಆಗಿದ್ದಿಲ್ಲ. ತಾರುಣ್ಯದಲ್ಲಿಯು ಸಾಮರ್ಥ್ಯದ ಯೋಗದಿಂದ ಬಹು ದಿವಸಗಳ ವರೆಗೆ ವಿಜಯ ವನ್ನು ಸಂಪಾದಿಸುತ್ತ ಬಂದಿದ್ದ ಒಬ್ಬಾನೊಬ್ಬ ವೃದ್ಧನು, ಮೊದಲಿನಂತೆ ಈಗಾದರೂ ತನ್ನ ಶರೀರ ಸಾಮರ್ಥ್ಯದ ಸಹಾಯದಿಂದ ಜಯವನ್ನು ಸಂಪಾದಿಸುವೆನೆಂದು ವಿಶ್ವಾಸಿಡುವಂತೆ ರಾಮರಾಜನ ಸ್ಥಿತಿಯು ಆಗಿತ್ತು. ವಿಜಯನಗರದ ರಾಜ್ಯವು ಸ್ಥಾಪಿಸಲ್ಪಟ್ಟು ಎರಡೂವರೇ ನೂರು ವರ್ಷಗಳು ಆಗುತ್ತ ಬಂದಿದ್ದವು. ಇಷ್ಟು ದಿವಸ ಅದು ಮುಸಲ್ಮಾನರ ಅಬ್ಬರಕ್ಕೆ ಸೊಪ್ಪುಹಾಕದೆ ತನ್ನ ಅಸ್ತಿತ್ವನ್ನು ಕಾಯ್ದುಕೊಂಡು ಭರದಿಂದ ಬೆಳೆಯುತ್ತ ಬಂದಿತ್ತು. ಆದರೆ ಸೃಷ್ಟಿಕ್ರಮವಿಡಿದು ಬಹುದಿವಸ ಅವಾಢವ್ಯವಾಗಿ ಬೆಳೆದ ವೃಕ್ಷವೂ ಒಳಗಿಂದೊಳಗೆ ಟೊಕಳಿಹಾಯುವಂತೆ ದಕ್ಷಿಣದಲ್ಲಿ ಇಷ್ಟು ವರ್ಷ ವಿಸ್ತರಿಸಿದ್ದ ವಿಜಯನಗರದ ರಾಜ್ಯವು ಒಳಗಿಂದೊಳಗೆ ಶಿಥಿಲ ವಾಗಿತ್ತೆಂದು ಹೇಳಬಹುದು. ದೊಡ್ಡ ವೃಕ್ಷದ ನೆರಳಿಂದು ಬಹುಜನರು ಆಶ್ರಯಿಸಿದ್ದರೂ, ಗಿಡವು ಬಿರುಗಾಳಿಯಿಂದ ಬೀಳುವಾಗ ಗಿಡದ ಬುಡದಲ್ಲಿರುವವರು ತಪ್ಪಿಸಿಕೊಂಡು ಹೋಗುವಂತೆ, ವಿಜಯನಗರದ ದಂಡಿನಲ್ಲಿ ಸೇರಿಕೊಂಡಿದ್ದ ಜನರಲ್ಲಿ ಪ್ರಸಂಗದೊಳಗೆ ಕಾಲುದೆಗೆಯುವವರೇ ಬಹಳ ಜನರಿದ್ದರಲ್ಲದೆ. ರಾಜ್ಯದ ಸಂರಕ್ಷಣಕ್ಕೆ ಹೆಣಗುವವರು ಬಹಳ ಜನರು ಇದ್ದಿಲ್ಲ. ಯಾವ ಮಾತಿನಲ್ಲಿಯೇ ಆಗಲಿ, ಅವಾಢವ್ಯ ವ್ಯವಹಾರದ ಲಕ್ಷಣ ಹೀಗೆಯೇ ಸರಿಯೆಂದು ಸಾಧಾರಣ ವಾಗಿ ಹೇಳಬಹುದು. ತನ್ನ ಸೈನ್ಯದ ಜನರಲ್ಲಿ ಮೊದಲಿನ ಸಾಮರ್ಥ್ಯವು ಉಳಿದಿದ್ದಿಲ್ಲೆಂಬ ಮಾತು ರಾಮರಾಜನಿಗೆ ಗೊತ್ತಿದ್ದಂತೆ ತೋರಲಿಲ್ಲ. ಮೂರು ನಾಲ್ಕು ಜನ ಬಾದಶಹರು ಒಟ್ಟುಗೂಡಿ ಬಂದರೆ, ತನ್ನ ಸೈನ್ಯವು ತಡೆಯಲಿಕ್ಕಿಲ್ಲೆಂಬ ಮಾತಾದರೂ ಆತನಿಗೆ ಗೊತ್ತಿರಬೇಕಾಗಿತ್ತು; ಆದರೆ ಅದೂ ಗೊತ್ತಿದ್ದಂತೆ ತೋರಲಿಲ್ಲ. ಈ ಮಾತು ಆತನಿಗೆ ಗೊತ್ತಿರುವದೊತ್ತಟ್ಟಿಗುಳಿದು,ತಾನು

ದಿಗ್ವಿಜಯ ಮಾಡಬೇಕೆಂತಲೂ, ಆಸೇತು ಹಿಮಾಚಲ ತನ್ನ ರಾಜ್ಯವನ್ನು ಹಬ್ಬಿಸಬೇಕೆಂತಲೂ, ತನ್ನ ಅಶ್ವಮೇಧದ ಕುದುರೆಯನ್ನು ಇಡಿಯ ಭರತಖಂಡದಲ್ಲಿ ತಿರುಗಿಸಿ, ತಾನು ಸಾರ್ವಭೌಮನಾಗಬೇಕೆಂತಲೂ ಆತನು ಭಾವಿಸುತ್ತಿದ್ದನು. ತಾನು ಜಯಶಾಲಿಯಾಗುವೆನೆಂಬದೊಂದೇ ಗುಂಗು ಆತನ ತಲೆಯಲ್ಲಿ ಹೊಕ್ಕುಬಿಟ್ಟಿದ್ದರಿಂದ, ತನ್ನ ಗುಂಗಿಗೆ ಪ್ರತಿಕೂಲ ಸಂಕಟಗಳೇನಿರುವವೆಂಬ ವಿಚಾರದ ಕಡೆಗೆ ಆತನ ಮನಸ್ಸು ತಿರುಗಲೇ ಇಲ್ಲ. ಆತನ ಅಣ್ಣನಾದ ತಿರುಮಲನಾದರೂ ಯೋಗ್ಯ ವಿಚಾರಗಳನ್ನು ರಾಮರಾಜನಿಗೆ ಸೂಚಿಸಬಹುದಾಗಿತ್ತು. ತಿರುಮಲನು ಯಾವತ್ತು ಸೈನ್ಯದ ಮುಖ್ಯಾಧಿಕಾರಿ ಯಾಗಿದ್ದನು; ಆದರೆ ಸೈನ್ಯದ ಅಂತಃಸ್ಥಿತಿಯು ಆತನಿಗೂ ಗೊತ್ತಿಲ್ಲೆಂದು ಹೇಳಬಹುದಾಗಿತ್ತು. ಇಷ್ಟು ದಿನ ಮುಸಲ್ಮಾನರಿಗೆ ಸೊಪ್ಪು ಹಾಕದೆಯಿದ್ದ ನಮ್ಮ ಸೈನ್ಯವು ಈಗ ಹ್ಯಾಗೆ ಅದಕ್ಕೆ ಬಗ್ಗುವದೆಂಬ ವಿಚಾರದಿಂದ ಆತನು ಸಂತುಷ್ಟನಾಗಿದ್ದನು. ಅದರಲ್ಲಿ ರಣಮಸ್ತಖಾನನು ತನ್ನ ಕಡೆಗಾದದ್ದರಿಂದ, ವಿಜಾಪುರದಿಂದ ರಾಜ್ಯದೊಳಗಿನ ಬಹುಮಹತ್ವದ ಒಬ್ಬ ಮನುಷ್ಯನನ್ನು ತಾವು ಒಡಕೊಂಡಿರುವದರಿಂದ, ತಮಗೆ ವಿಶೇಷತರದ ಅನುಕೂಲತೆಯಾದಂತಾಗಿದೆಯೆಂದು ಆತನು ಹಿಗ್ಗುತ್ತಲಿದ್ದನು; ಆದರೆ ಆ ರಣಮಸ್ತಖಾನನೇ ತಮಗೂ ತಮ್ಮ ರಾಜ್ಯಕ್ಕೂ ಮೃತ್ಯುಸ್ವರೂಪಿ ಯಾಗಿರುವನೆಂಬದು ಆತನಿಗೇನು ಗೊತ್ತು?

ಈ ಮೇರೆಗೆ ಮದ-ಮೋಹಗಳೆಂಬ ಎರಡು ವಿಕಾರಗಳಿಂದ ಪೀಡಿತನಾದ ರಾಮರಾಜನು ತಾನು ಅಶ್ವಮೇಧ ಮಾಡಬೇಕೆಂಬ ಗುಂಗಿನಲ್ಲಿರುವಾಗ ಆತನಿಗೆ ಶತೃಗಳ ಕಡೆಯ ಒಳಸಂಚುಗಳ ಸುದ್ದಿಗಳು ಸಹ ಗೊತ್ತಾಗದಂತಾದವು. ಒಂದು ಪಕ್ಷದಲ್ಲಿ ಆ ಸುದ್ದಿಗಳು ಗೊತ್ತಾದರೆ ಆತನು— ''ಮಾಡಲಿ, ಅವರು ಬೇಕಾದದ್ದು ಮಾಡಲಿ. ಈ ಬಾದಶಹನು ಆ ಬಾದಶಹನ ಮಗಳನ್ನು ಲಗ್ನಮಾಡಿಕೊಂಡರೆ, ಆ ಬಾದಶಹನು ಈ ಬಾದಶಹನ ಮಗನಿಗೆ ತನ್ನ ತಂಗಿಯನ್ನು ಕೊಟ್ಟರೆ, ಸೈನ್ಯದ ಸಾಮರ್ಥ್ಯ ಹೆಚ್ಚಿದಹಾಗಾಗುವದೊ? ಆ ಮಕ್ಕಳಿಗೆ ಮಾಡಬೇಕಾಗಿದ್ದ ಒಕ್ಕಟ್ಟನ್ನು ಗಟ್ಟಿಮುಟ್ಟಿಯಾಗಿ ಮಾಡಿಕೊಂಡು ಒಮ್ಮೆಲೆ ಚಿಟ್ಟಿಯ ಹಿಂಡಿನಂತೆ ನಮ್ಮ ಮೇಲೆ ಸಾಗಿಬರ ಬೇಕೆಂದು ಹೇಳಬೇಕು. ವಿಜಯನಗರದ ರಾಯರನ್ನು ಕೆಣಕುವದು ಅವರಿಗೆ ಸುಲಭವಾಗಿ ಕಂಡಿದೆ; ಆದರೆ ಕೆಣಕಿ ನೋಡಲಿ, ಚಿಟ್ಟಿಗಳ ಹಿಂದು ಬೆಂಕಿಯಲ್ಲಿ ಪಟಪಟ ಬಿದ್ದು ನಾಶವಾಗುವಂತೆ, ಅವರ ನಾಶವಾಗಬೇಕಾದೀತು'' ಎಂದು ದರ್ಬಾರದ ಜನರ ಸಮಕ್ಷಮ ನುಡಿದು, ಅವರಿಂದ— ''ಮಹಾಪ್ರಭೋ, ಹೌದು ಆ ಮುಸಲರ ಗತಿಯು ಹೀಗೆಯೇ ಆಗಬೇಕೆಂದು ಈಶ್ವರೀ ಸಂಕೇತವಿರುತ್ತದೆ. ಅಂತೇ ಅವರಿಗೆ ಅಂಥ ಬುದ್ಧಿಯು ಉತ್ಪನ್ನವಾಗಿರುವದು,ಆಗಲಿ, ಒಮ್ಮೆ ಈ ಎಲ್ಲ ಮಹಮದೀಯರ ಉಚ್ಛೇದವಾಗಿ ಹೋಗಲಿ. ಅಂದರೆ, ಭರತಖಂಡದಲ್ಲಿ ಸರ್ವತ್ರ ವೈದಿಕಧರ್ಮದ ಪ್ರಸಾರವಾಗುವದು'' ಎಂದು ಹೊಗಳಿಸಿಕೊಳ್ಳುವದರಲ್ಲಿಯೇ ಆ ರಾಯನ ಕಾಲಹರಣವಾಗಹತ್ತಿತು.

ಇದಕ್ಕೆ ವಿರುದ್ಧವಾದ ಸ್ಥಿತಿಯು ಮುಸಲ್ಮಾನ ಬಾದಶಹರದಿತ್ತು. ವಿಜಾಪುರದ ಅಲಿ ಆದಿಲಶಹನು ಈಗ ಬಹು ದಿವಸಗಳಿಂದ ನಡಿಸಿದ್ದ ಕಪಟೋಪಾಯಗಳಿಂದ ಆತನೊಬ್ಬನೇ ವಿಜಯನಗರದ ರಾಜ್ಯವನ್ನು ಗೊತ್ತಿಗೆ ಹಚ್ಚಬಹುದಾಗಿತ್ತು. ಆದರೂ ಆತನು ಧೂರ್ತತ್ವದಿಂದ

ಅಹಮ್ಮದನಗರ–ಗೋವಳಕೊಂಡಗಳ ಬಾದಶಹರ ಸಂಗಡ ಒಕ್ಕಟ್ಟು ಬೆಳೆಸಿದನು. ವಿಜಯನಗರದ ದಂಡಿನವರ ಹುಳುಕು ಬಾದಶಹನಿಗೆ ಗೊತ್ತಿದ್ದರೂ, ಆ ಪ್ರಚಂಡ ಸೈನ್ಯದಿಂದ ಎಲ್ಲಿಯಾದರೂ ತನಗೆ ಅಪಾಯ ಉಂಟಾದರೆ, ತನ್ನ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲೆಂದು ಆತನು ಜಾಗರೂಕನಾಗಿದ್ದನು. ತಾವು ಮೂವರೂ ಒಕ್ಕಟ್ಟಾಗಿಯೇ ಹಿಂದುಗಳ ಪ್ರಚಂಡ ರಾಜ್ಯವನ್ನು ನಾಶಮಾಡಬೇಕೆಂದು ಆತನು ನಿಶ್ಚಯಿಸಿದನು. ಪರಸ್ಪರರಲ್ಲಿ ವಿಶ್ವಾಸವು ಉತ್ಪನ್ನವಾಗುವದಕ್ಕಾಗಿ ಅಹಮ್ಮದನಗರದ ಹುಸೇನ ನಿಜಾಮಶಹನು, ತನ್ನ ಮಗಳಾದ ಚಾಂದಬೀಬಿ ಎಂಬವಳನ್ನು ವಿಜಾಪುರದ ಅಲಿ ಆದಿಲಶಹನಿಗೆ ಲಗ್ನಮಾಡಿಕೊಟ್ಟನು. ಅಲಿಆದಿಲಶಹನು ತನ್ನ ತಂಗಿಯನ್ನು ಹುಸೇನ ನಿಜಾಮಶಹನ ಮಗನಿಗೆ ಲಗ್ನಮಾಡಿಕೊಟ್ಟನು. ಈ ಎಲ್ಲ ಸಂಬಂಧಗಳು ಕೇವಲ ರಾಜಕಾರಣದ ಸಲುವಾಗಿಯೇ ಆದವು. ಈ ಲಗ್ನ ಸಮಾರಂಭದ ನೆವದಿಂದ ಇವರ ವಕೀಲರು ಅವರ ಕಡೆಗೆ, ಅವರ ವಕೀಲರು ಇವರ ಕಡೆಗೆ ಎಡತಾಕಹತ್ತಿದರು. ಅವರ ಆಲೋಚನೆಗಳು ಮುಗಿದವು. ಬೀದರದ ಬರೀದಶಹನೆಂಬ ನಾಲ್ಕನೆಯ ಬಾದಶಹನೂ ಅವರನ್ನು ಬಂದು ಕೂಡಿದನು. ಎಲ್ಲರೂ ತಮ್ಮ ತಮ್ಮ ಸೈನ್ಯಗಳನ್ನು ತಕ್ಕೊಂಡು ವಿಜಾಪುರಕ್ಕೆ ಬರಬೇಕೆಂತಲೂ ಇಂಥ ಇಂಥವರು ಇಂಥ ಇಂಥ ಕಡೆಯಿಂದ ಸಾಗಿಹೋಗಬೇಕೆಂತಲೂ ಆಲೋಚನೆಗಳು ಆಗಹತ್ತಿದವು. ಇತ್ತ ರಾಮರಾಜನನ್ನು ವಿಚಾರಮಗ್ನನನ್ನಾಗಿ ಮಾಡುವದಕ್ಕಾಗಿ ವಿಜಾಪುರದ ಬಾದಶಹನು ರಣಮಸ್ತಖಾನನನ್ನು ಕಳಿಸಿ ಕೊಡುವ ನೆವದಿಂದ ಪತ್ರಗಳನ್ನು ಓಡಾಡಿಸಹತ್ತಿದನು. ರಣಮಸ್ತಖಾನನನ್ನು ಕಳಿಸುವದಿಲ್ಲೆಂದು ರಾಮರಾಜನು ಉತ್ತರವನ್ನು ಕಳಿಸಿದ ಬಳಿಕ, ಬಾದಶಹನು ಮತ್ತೆ ತನ್ನ ವಕೀಲನನ್ನು ಕಳಿಸಿ ವಿಜಯನಗರದ ರಾಜ್ಯದ ಹದ್ದಿನಲ್ಲಿರುವ ಕೆಲವು ಕೋಟೆಗಳನ್ನು ಕೊಡಬೇಕೆಂದು ರಾಮರಾಜನನ್ನು ಕೇಳಿದನು. ತನ್ನ ವಕೀಲನನ್ನು ಅಪಮಾನಗೊಳಿಸಿ ಕಳಿಸಿಕೊಡ ಬೇಕೆಂತಲೇ ಬಾದಶಹನು ಹೀಗೆ ರಾಮರಾಜನ ಬಳಿಗೆ ವಕೀಲನನ್ನು ಕಳಿಸಿಕೊಟ್ಟಿದ್ದನು. ಯಾಕಂದರೆ, ಒಡಂಬಡಿಕೆಯ ಕರಾರುಗಳನ್ನು ಮುರಿಯಲಿಕ್ಕೆ ರಾಮರಾಜನಿಂದ ಕೆಲವು ಕಾರಣಗಳು ಒದಗಿದವೆಂದು ತೋರಿಸುವದು ಬಾದಶಹನ ಉದ್ದೇಶವಾಗಿತ್ತು

ಸಂಕಟಗಳು ಒದಗಬಹುದೆಂಬ ಸಂಶಯವಿರುವವರೆಗೆ ರಾಮರಾಜನು ಯಾವ ಲಕ್ಷ ವಿಲ್ಲದವನಂತೆ ವರ್ತಿಸಿದನು; ಆದರೆ ಶತ್ರುಗಳ ಸೈನ್ಯಗಳು ವಿಜಾಪುರದಲ್ಲಿ ಒಟ್ಟು ಗೂಡಿದ ವೆಂಬದನ್ನು ಕೇಳಿದ ಕೂಡಲೆ ಎಚ್ಚತ್ತು ತನ್ನ ಸೈನ್ಯವನ್ನು ವ್ಯವಸ್ಥೆಗೊಳಿಸಹತ್ತಿದನು. ಶತ್ರುಗಳ ಪ್ರಚಂಡ ಸೈನ್ಯದ ಮುಂದೆ ತನ್ನ ಸೈನ್ಯವು ತಡೆಯಲಿಕ್ಕಿಲ್ಲೆಂದು ಆತನಿಗೆ ತೋರಹತ್ತಿತು. ಅವನು ಈ ಪ್ರಸಂಗದಲ್ಲಿ ತಾನು ಕೈಕಾಲುಗೆಡುವದು ಯೋಗ್ಯವಲ್ಲವೆಂದು ತಿಳಿದು, ತುಂಗಭದ್ರೆಯ ಕಾಲ ಹೊಳೆಯಿರುವ ಕಡೆಯಿಂದ ಶತ್ರುಗಳು ಬಾರದಂತೆ ಮಾಡಿ, ಪ್ರಸಂಗ ನೋಡಿ ತಾನು ತುಂಗಭದ್ರೆಯನ್ನು ಆ ಮಾರ್ಗದಿಂದ ದಾಟಿಹೋಗಿ, ಶತ್ರುಗಳ ಮೇಲೆ ಬೀಳಬೇಕೆಂದು ಮಾಡಿದನು.ಈ ಕೆಲಸಕ್ಕಾಗಿ ತಿರುಮಲನನ್ನು ನಿಯಮಿಸಿದನು. ವೇಂಕಟಾದ್ರಿ, ಇಳೋತ್ತಮರಾಯರೆಂಬವರ ಕೈಯಲ್ಲಿ ದೊಡ್ಡ ದೊಡ್ಡ ಸೈನ್ಯಗಳನ್ನು ಕೊಟ್ಟು ಬೇರೆಬೇರೆ

ಕಡೆಯಲ್ಲಿ ಶತ್ರುಗಳನ್ನು ತರಬಲು ನಿಯಮಿಸಿದನು. ತಾನು ಸ್ವತಃ ಮಧ್ಯಭಾಗದಲ್ಲಿದ್ದು, ತನ್ನ ಸಂರಕ್ಷಣಕ್ಕಾಗಿ ರಣಮಸ್ತಖಾನನಿಂದ ನಡಿಸಲ್ಪಡುತ್ತಿರುವ ಪಠಾಣ ಸೈನ್ಯವನ್ನು ಇಟ್ಟುಕೊಳ್ಳ ಬೇಕೆಂದುಮಾಡಿದನು. ರಾಮರಾಜನು ರಣಮಸ್ತಖಾನನನ್ನು ಬೇರೆ ಕಡೆಗೆ ಕಳಿಸಲಿಲ್ಲ. ಪ್ರಸಂಗದಲ್ಲಿ ಈ ಸ್ವಾಮಿದ್ರೋಹಿಯಾದ ರಣಮಸ್ತನೇ ಬಾದಶಹನ ಮೇಲಿನ ಸಿಟ್ಟಿನಿಂದ ತನಗೆ ಮನಮುಟ್ಟಿ ಸಹಾಯ ಮಾಡಬಹುದೆಂದು ಆ ರಾಯನು ತಿಳಕೊಂಡನು. ಆತನು ರಣಮಸ್ತನಿಗೆ—''ನಿನ್ನನ್ನು ವಿಜಾಪುರಕ್ಕೆ ಕಳಿಸದೆ ಇದ್ದದ್ದರಿಂದ ಎಲ್ಲ ಬಾದಶಹರು ಒಟ್ಟುಗೂಡಿ ನಮ್ಮ ಮೇಲೆ ಯುದ್ಧಕ್ಕೆ ಬರಬೇಕಾಯಿತು. ಆದರೆ ಪೃಥ್ವಿಯೊಳಗಿನ ಎಲ್ಲ ಬಾದಶಹರು ಒಟ್ಟುಗೂಡಿ ಬಂದರೂ ನಾವು ಹೆದರುವಹಾಗಿಲ್ಲ. ನಾವು ಸ್ವಸ್ಥ ಕುಳಿತುಕೂಳ್ಳುವದರಿಂದ ಯುದ್ಧವು ನಡೆಯದೆಂದು ತಿಳಿದು, ನಾವು ಈಗ ಮುಂದಕ್ಕೆ ಸಾಗಿಹೋಗಬೇಕಾಗಿರುವದು. ಮುಂದಕ್ಕೆ ಸಾಗಿಹೋದ ಕೂಡಲೆ ತುಂಗಭದ್ರೆಯ ಕಾಲಹೊಳೆಯ ಕಡೆಯಲ್ಲಿಯೇ ಶತ್ರುಗಳ ದೂಳಹಾರಿಸಬೇಕು; ಅಂದರೆ ಅವರು ಮುಂದಕ್ಕೆ ಸಾಗಿಬರಲಾರರು'' ಅನ್ನಲು, ಅದಕ್ಕೆ ರಣಮಸ್ತಖಾನನು ತಲೆಯಲ್ಲಾಡಿಸಿ— ನನ್ನ ಮೇಲೆ ನಿಮ್ಮ ವಿಶ್ವಾಸವು ಕುಳಿತುಕೊಳ್ಳುವಂತೆ ನನ್ನ ಕೈಯಿಂದ ಏನಾದರೂ ಕೆಲಸವಾಗಬೇಕಾಗಿರುವದು; ಆದ್ದರಿಂದ ನನ್ನನ್ನು ಆ ತುಂಗಭದ್ರೆಯ ಕಾಲಹೊಳೆಯ ಕಡೆಗೆ ಕಳಿಸಿ ನನ್ನ ಪರಾಕ್ರಮವನ್ನು ನೋಡಿರಿ. ಶತ್ರುಗಳನ್ನು ಎಲ್ಲಿಯೋ ಒತ್ತಟ್ಟಿಗೆ ಒಯ್ದು, ಅವರಲ್ಲಿ ಒಬ್ಬನೂ ಉಳಿಯದಂತೆ ವ್ಯವಸ್ಥೆ ಮಾಡುವೆನು ಎಂದು ಹೇಳಿದನು. ಈ ಮಾತುಗಳನ್ನು ಕೇಳಿ ರಾಮರಾಜನಿಗೆ ಕೌತುಕವಾಯಿತು; ಆದರೆ ಆತನು ರಣಮಸ್ತಖಾನನನ್ನು ಕುರಿತು— ''ನೀನು ಇನ್ನೂ ಹುಡುಗನು. ನಿನ್ನನ್ನು ಇಂಥ ಮಹತ್ವದ ಸ್ಥಳಕ್ಕೆ ಕಳಿಸಿದರೆ, ನಮ್ಮ ಸೈನಿಕರು ಹ್ಯಾಗೆ ಒಡಂಬಟ್ಟಾರು? ಆ ಕೆಲಸವನ್ನು ನನ್ನ ಬಂಧುವಾದ ತಿರುಮಲನು ಮಾಡುವನು. ಆತನೇ ಆ ಕೆಲಸ ಮಾಡಲಿಕ್ಕೆ ಖಂಬೀರನು. ನೀನು ಮಧ್ಯಭಾಗದಲ್ಲಿಯೇ ಇರಬೇಕಾಗುವದು. ನಿಮ್ಮ ಪರಾಕ್ರಮವನ್ನು ನಾನು ಕಣ್ಣುಮುಟ್ಟ ನೋಡಬೇಕಾಗಿದೆ'' ಎಂದು ಹೇಳಿದನು. ಆಗ ರಣಮಸ್ತಖಾನನು ನಿರ್ವಾಹವಿಲ್ಲದೆ— ''ಹಾಗೇ ಆಗಲಿ, ನನ್ನ ಪರಾಕ್ರಮವನ್ನು ತಾವು ಕಣ್ಣಮುಟ್ಟಿ ನೋಡಬಹುದು, ಅದನ್ನು ತಮಗೆ ತೋರಿಸುವ ಇಚ್ಛೆಯು ನನಗೆ ವಿಶೇಷವಾಗಿರುತ್ತದೆ. ಶತ್ರುವು ಮೈಮೇಲೆ ಬಂದು ಬೀಳಲಂದರಾಯಿತು. ಆಗ ನನ್ನ ಹಾಗು ನನ್ನ ಸೈನ್ಯದ ಪರಾಕ್ರಮವು ಗೊತ್ತಾಗುವದು'' ಎಂದು ಹೇಳಿದನು. ರಣಮಸ್ತಖಾನನು ಹೀಗೆ ಸಮಾಧಾನದಿಂದ, ಆದರೆ ದಿಮಾಕಿನಿಂದ ಕೊಟ್ಟ ಉತ್ತರವನ್ನು ಕೇಳಿ, ರಾಮರಾಜನು ಬಹಳ ಸಂತೋಷಪಟ್ಟು— ''ನೀನು ನಿಜವಾದ ಶೂರನ ಹೊಟ್ಟೆಯಲ್ಲಿ ಹುಟ್ಟಿರುವೆ'' ಎಂದು ನುಡಿದನು. ಹೀಗೆ ನುಡಿಯುತ್ತಿರವಾಗ ರಣಮಸ್ತನನ್ನು ಆತನು ಅತ್ಯಂತ ವಾತ್ಸಲ್ಯದಿಂದ ಎವೆಯಿಕ್ಕದೆ ನೋಡಿದನು. ಈ ಸಂಭಾಷಣಗಳಾದ ಒಂದೆರಡು ದಿನಗಳ ಮೇಲೆ ಶತ್ರುಗಳ ಸೈನ್ಯಗಳು ವಿಜಾಪುರದಿಂದ ಹೊರಟು ಮುಂದಕ್ಕೆ ಸಾಗಿಬಂದವೆಂಬ ಸುದ್ದಿಯು ಬಂದಿತು. ವಿಜಯನಗರದಲ್ಲಿದ್ದ ವಿಜಾಪುರದ ವಕೀಲನು ಹೊರಟುಹೋದನು. ಇನ್ನುಮೇಲೆ ಯುದ್ಧವು ನಿಶ್ಚಯವಾಗಿ ಆರಂಭವಾಗುವದೆಂದು ಎಲ್ಲರಿಗೆ ಗೊತ್ತಾಯಿತು; ಆದರೆ ರಾಮರಾಜನು ತನ್ನ

ಮತದಿಂದ ಪರಮಾವಧಿಯಾಗಿ ಸೈನ್ಯವನ್ನು ಸಜ್ಜುಗೊಳಿಸಿದ್ದರಿಂದ, ಆತನಿಗೆ ಯಾತರ ಹೆದರಿಕೆಯೂ ಇದ್ದಿಲ್ಲ.

ರಾಮರಾಜನು ಸ್ವಚ್ಛಂದವೃತ್ತಿಯವನು. ಒಮ್ಮೆ ಏನಾದರೂ ಮಾಡಬೇಕೆಂದು ಅವನ ಮನಸ್ಸಿನಲ್ಲಿ ಹೊಕ್ಕರೆ, ಅದನ್ನು ಅವನು ಮಾಡಿಯೇ ತೀರುವನು. ರಣಮಸ್ತಖಾನನು ತನ್ನ ಮಗನೆಂತಲೂ, ಮಾಸಾಹೇಬರು ತನ್ನ ಪ್ರಿಯ ಮೇಹರ್ಜಾನಳೆಂತಲೂ, ಲೈಲಿಯು ಆಕೆಯ ದಾಸಿಯೆಂತಲೂ ಆತನು ನಿಶ್ಚಯಿಸಿದ್ದನು. ಧನಮಲ್ಲನು ಆತನ ನಿಶ್ಚಯವನ್ನು ಬಲಪಡಿಸಿದ್ದನು. ಆದ್ದರಿಂದ ತಾನು ಒಮ್ಮೆ ಪ್ರತ್ಯಕ್ಷ ಮೇಹರ್ಜಾನಳನ್ನು ಕಂಡು ಆಕೆಯ ಕ್ಷಮೆ ಬೇಡಬೇಕೆಂದು ಒಮ್ಮೆ ರಾತ್ರಿ ಆತನು ಕುಂಜವನಕ್ಕೆ ಹೋದದ್ದನ್ನು ವಾಚಕರು ಬಲ್ಲರು. ಆಗ ಮಾಸಾಹೇಬರು ಪುಷ್ಕರಣಿಯಲ್ಲಿ ಹಾರಿಕೊಂಡರೆಂತಲೂ, ಅವರ ಹಿಂದೆಯೇ ರಾಮರಾಜನು ಹಾರಿಕೊಂಡ ರೆಂತಲೂ, ವಾಚಕರು ನೆನಪಿನಲ್ಲಿಟ್ಟುಕೊಂಡಿರಬಹುದು. ಈ ಪ್ರಸಂಗ ಒದಗಿದ ಬಳಿಕ ಕುಂಜವನದಲ್ಲಿ ರಣಮಸ್ತಖಾನನ ಜನರು ಯಾರೂ ಉಳಿದಿದ್ದಿಲ್ಲ. ಒಂದು ರೀತಿಯಿಂದ ಈಗ ಕುಂಜವನವು ಹಾಳುಬಿದ್ದಂತ ಆಗಿತ್ತು; ಇತ್ತ ಮೂವರು ಬಾದಶಹರು ವಿಜಯನಗರದ ಮೇಲೆ ಸಾಗಿಬರುತ್ತಿರುವರೆಂಬ ಸುದ್ದಿಗಳು ಬರತೊಡಗಿದ್ದವು. ಈ ಸ್ಥಿತಿಯಲ್ಲಿ ರಾಮರಾಜನು ನಿಶ್ಚಿಂತ ಪುರುಷನಂತೆ ಕುಂಜವನಕ್ಕೆ ಹೋಗಿ, ಅಲ್ಲಿಯ ಕಾವಲುಗಾರರಿಗೆ''ನೀವು ಕುಂಜವನವನ್ನೂ, ಅಲ್ಲಿಯ ಬಂಗಲೆಯನ್ನೂ, ಪುಷ್ಕರಣಿಯನ್ನೂ ಮೊದಲಿನಂತೆ ಇನ್ನು ನಾಲ್ಕು ದಿನಗಳಲ್ಲಿ ಶೃಂಗರಿಸಲಿಕ್ಕೆ ಬೇಕೆಂದು'' ಆಜ್ಞಾಪಿಸಿದನು. ಸಾವಿರಾರು ಜನರನ್ನು ಬಿಟ್ಟಿಯ ಹಿಡಿದರೂ ಚಿಂತೆಯಿಲ್ಲ, ಕುಂಜವನವು ಮೊದಲಿನಂತೆ ಆಗಲಿಕ್ಕೆಬೇಕೆಂತಲೂ, ಹಾಗೆ ಆಗದಿದ್ದರೆ ನಿಮಗೆ ಶಾಸನವಾದೀತೆಂತಲೂ ನಿಷ್ಠುರವಾಗಿ ಹೇಳಿದನು. ಯುದ್ಧಪ್ರಸಂಗ ಒದಗಿರಲು ರಾಮರಾಜನು ಹೀಗೆ ತೋಟಪಟ್ಟಿಗಳ ವ್ಯವಸ್ಥೆ ಮಾಡುವದನ್ನು ನೋಡಿ, ಕಾವಲುಗಾರರಿಗೆ ಆಶ್ಚರ್ಯವಾಯಿತು; ಆದರೆ ರಾಮರಾಜನಿಗೆ ವಿರುದ್ಧವಾಗಿ ಯಾರು ಮಾತಾಡಬೇಕು? ಅವರು ಈ ಕುಂಜವನ ದಲ್ಲಿಯೇ ಯುದ್ಧದ ಒಳಸಂಚುಗಳೇನಾದರೂ ನಡೆಯಬೇಕಾಗಿರಬಹುದೆಂದು ತಿಳಿದರು. ಹ್ಯಾಗಿದ್ದರೂ ಅವರು ರಾಮರಾಜನ ಅಪ್ಪಣೆಯಂತೆ ನಡೆಯಲೇಬೇಕಾಗಿತ್ತು, ಅವರು ಹಗಲು ರಾತ್ರಿ ಶ್ರಮಪಟ್ಟು, ನಾಲ್ಕು ದಿನಗಳಲ್ಲಿ ಕುಂಜವನವನ್ನು ಶೃಂಗರಿಸಿದರು. ಮೂರನೆಯ ದಿವಸ ಸಂಜೆಗೆ ಮೇಹರ್ಜಾನಳೂ (ಮಾಸಾಹೇಬರೂ) ಮಾರ್ಜೀನೆಯೂ ಎಲ್ಲಿಂದಲೊ ಕುಂಜವನಕ್ಕೆ ಬಂದು ತಾವು ಹಿಂದಕ್ಕೆ ಇದ್ದ ಬಂಗಲೆಯಲ್ಲಿ ಇರತೊಡಗಿದರು. ಹೀಗೆ ಇವರಿಬ್ಬರು ಹೆಣ್ಣುಮಕ್ಕಳು ಎಲ್ಲಿಗೋ ಹೋದವರು, ಅಕಸ್ಮಾತ್ತಾಗಿ ಬಂದದ್ದನ್ನು ನೋಡಿ ಕಾವಲುಗಾರರಿಗೆ ಪರಮಾಶ್ಚರ್ಯ ವಾಯಿತು. ಅವರಿಗೆ ಮಾಸಾಹೇಬರು ಪುಷ್ಕರಣಿಯಲ್ಲಿ ಹಾರಿಕೊಂಡರೆಂಬದು ಗೊತ್ತಿದ್ದಿಲ್ಲ. ಮಾಸಾಹೇಬರು ತಮ್ಮ ದಾಸಿಯೊಡನೆ ಎಲ್ಲಿಯೋ ಹೋದರೆಂದು ಅವರು ತಿಳಕೊಂಡಿದ್ದರು.

ಪುಷ್ಕರಣಿಯಲ್ಲಿ ಹಾರಿಕೊಂಡ ಮಾಸಾಹೇಬರನ್ನು ರಾಮರಾಜನು ಹೊರಗೆ ತೆಗೆದು, ಕುಂಜವನದಿಂದ ಹೊರಡಿಸಿ, ಬೇರೆಕಡೆಯಲ್ಲಿಡಿಸಿದ್ದನು; ಆದರೆ ಅವರಿಗೆ ತನ್ನ ಗುರುತು ಹತ್ತುಗೊಟ್ಟಿದ್ದಿಲ್ಲ; ಅವರೊಡನೆ ತಾನು ಮಾತಾಡಿದ್ದಿಲ್ಲ, ತಮ್ಮನ್ನು ರಾಮರಾಜನೇ ತೆಗೆದನೆಂದು

ಮಾಸಾಹೇಬರಿಗೂ ಗೊತ್ತಾಗಿದ್ದಿಲ್ಲ. ಅವರು ಎಚ್ಚರದಪ್ಪಿ ಬಿದ್ದವರು ತಿರುಗಿ ಎಚ್ಚತ್ತು ನೋಡುವಾಗ ಯಾವ ಮನೆಯಲ್ಲಿಯೋ ಮಂಚದ ಮೇಲೆ ಮಲಗಿದ್ದರು. ತಾವು ಪುನಃ ಬದುಕಿ ಉಳಿದದ್ದಕ್ಕಾಗಿ ಅವರಿಗೆ ಪರಮಾವಧಿ ವ್ಯಸನವಾಗಿತ್ತು, ಅದರಲ್ಲಿ ಅವರು ಕುಂಜವನವನ್ನು ಸ್ಮರಿಸಲು ಕೂಡ ಇಚ್ಛಿಸದಿರುವಾಗ ಈಗ ಪುನಃ ಕುಂಜವನದ ವಾಸವು, ಅದರಲ್ಲಿ ತಾವು ಹಿಂದಕ್ಕೆ ತಾರುಣ್ಯದಲ್ಲಿ ಇದ್ದ ಬಂಗಲೆಯಲ್ಲಿಯೇ ಇರುವ ಪ್ರಸಂಗವು ಒದಗಿದ್ದರಿಂದ ಅವರಿಗೆ ಬಹಳ ವ್ಯಸನವಾಯಿತು. ಅವರಿಗೆ ಅನ್ನ-ನೀರುಗಳು ಬೇಡಾದವು. ಲೈಲಿಯ ಸಂಗಡ ಸಹ ಅವರು ಅಪರೂಪವಾಗಿ ಮಾತಾಡಹತ್ತಿದರು. ಹೀಗಿರುವಾಗ ಧನಮಲ್ಲನು ಅವರ ಕಣ್ಣಿಗೆ ಬಿದ್ದನು. ಅವನನ್ನು ಕಂಡಕೂಡಲೆ ಭಯದಿಂದ ಮಾಸಾಹೇಬರ (ಮೇಹರ್ಜಾನಳ) ಸರ್ವಾಂಗದಲ್ಲಿ ಕಂಪನವು ಉತ್ಪನ್ನವಾಯಿತು. ಈ ಕೃಷ್ಣಸರ್ಪವು ಹಿಂದಕ್ಕೆ ಒಂದುಸಾರೆ ಅಕಸ್ಮಾತ್ ಬಂದು, ನಡುವೆ ಕೆಲವು ದಿನ ಅಕಸ್ಮಾತ್ ಗುಪ್ತವಾಗಿ, ಈಗ ಮತ್ತೆ ಎಲ್ಲಿಂದ ಬಂದಿತೆಂದು ಅವರು ಚಿಂತಿಸಿದರು. ಪುನಃ ಈತನು ಮೊದಲಿನಂತೆ ರಾಮರಾಜನ ನೌಕರನಾಗಿ ನನ್ನನ್ನು ಕಾಯಲಿಕ್ಕೆ ಬಂದಿರುವನೆಂದು ಅವರು ತರ್ಕಿಸಿದರು. ಧನಮಲ್ಲನು ಮೊದಲಿನಂತೆ ಮೂಕನಾಗಿಯೇ ಇದ್ದನು. ಇದನ್ನೆಲ್ಲ ಮನಸ್ಸಿನಲ್ಲಿ ತಂದು ಮಾಸಾಹೇಬರು ತಮ್ಮ ಲೈಲಿಯನ್ನು ಕುರಿತು— "ಲೈಲಿ, ಈ ಅರಿಷ್ಟವು ಮತ್ತೆ ಎಲ್ಲಿಂದ ಬಂದೀತು? ಇದನ್ನು ನೋಡಿದ ಕೂಡಲೆ ನನ್ನ ಹೃದಯವು ತಲ್ಲಣಿಸುತ್ತದೆ. ಈ ದುರುಳನಿಂದ ನನ್ನ ಅಂತವಾಗುವದೆಂಬ ಭಾವನೆಯು ನನಗಾಗಹತ್ತಿದೆ. ಈತನನ್ನು ಹೊರಗೆ ಹಾಕುವದಂತು ನನ್ನ ಕೈಯೊಳಗಿಲ್ಲ; ಆದರೆ ನೀನು ಈತನು ನನ್ನ ಕಣ್ಣಿಗೆ ಬೀಳದಂತೆ ಮಾಡು, ಎಂದು ಹೇಳಿದರು. ಈಗ ಲೈಲಿಯ ಕೈಯಿಂದ ಏನೂ ಆಗುವಹಾಗಿದ್ದಿಲ್ಲ; ಆದರೆ ಕರ್ಮಧರ್ಮ ಸಂಯೋಗದಿಂದ ರಾಮರಾಜನೇ ಧನಮಲ್ಲನಿಗೆ ಬಂಗಲೆಯೊಳಗೆ ಹೋಗಲಾಗದೆಂದು ಆಜ್ಞಾಪಿಸಿದ್ದನು. ಮಾಸಾಹೇಬರು ಹೊರಗೆ ಬಾರದಂತೆಯೂ, ಹೊರಗೆ ಬಂದರೂ ಪುಷ್ಕರಣಿಯ ಕಡೆಗೆ ಅವರು ಕಾಲು ಇಡದಂತೆಯೂ, ಪುಷ್ಕರಣಿಯಲ್ಲಿ ಕಾಲು ಇಟ್ಟರೂ ಅವರು ಪುಷ್ಕರಣಿಯಲ್ಲಿ ಹಾರಿಕೊಳ್ಳದಂತೆಯೂ, ಅವರು ಪುಷ್ಕರಣಿಯಲ್ಲಿ ಹಾರಿಕೊಂಡರೂ ನೀನು ಕೂಡಲೇ ಅವರನ್ನು ಹೊರಗೆ ತೆಗೆದು ನನಗೆ ಸುದ್ದಿಯನ್ನು ಮುಟ್ಟಿಸುವಂತೆಯೂ ವ್ಯವಸ್ಥೆ ಮಾಡಬೇಕೆಂದು ರಾಮರಾಜನು ಧನಮಲ್ಲನಿಗೆ ಹೇಳಿದ್ದನು. ಆದ್ದರಿಂದ ಧನಮಲ್ಲನು ಬಂಗಲೆಯ ಹೊರಗೇ ಅದನ್ನು ಸುತ್ತುಮುತ್ತು ಕಾಯುತ್ತಲಿದ್ದನು.

ಹೀಗಿರುವಾಗ, ರಾಮರಾಜನು ಬಂದನೆಂಬ ಸುದ್ದಿಯನ್ನು ಒಬ್ಬ ಸೇವಕನು ಮಾಸಾಹೇಬರ ಬಳಿಗೆ ಬಂದು ಹೇಳಿದನು. ಅದನ್ನು ಕೇಳಿದ ಕೂಡಲೆ ಮಾಸಾಹೇಬರ ಹುಬ್ಬುಗಳು ಗಂಟಿಕ್ಕಿದವು. ಅವರ ಸರ್ವಾಂಗವು ಸಂತಪ್ತವಾಯಿತು. ಮುಖವು ಕೆಂಪಾಯಿತು. ತುಟಿಗಳು ಥರ ಥರ ನಡುಗಹತ್ತಿದವು. ಅವರು ಆ ಸೇವಕನಿಗೆ— "ಹೋಗು, ನೀನು ಹೋಗಿ ಅವರಿಗೆ ಸ್ಪಷ್ಟವಾಗಿ ಹೇಳು. ನಾನು ಪರಪುರುಷರ ಮುಖವನ್ನು ನೋಡುವದಿಲ್ಲ. ನಾನು ಪರಾಧೀನಳಿರುವೆನೆಂದು ತಿಳಿದು, ಬಲಾತ್ಕಾರದಿಂದ ಅವರು ಒಳಗೆ ಬಂದರೆ, ಅವರ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲ" ಎಂದು ನುಡಿದು, ಮಾಸಾಹೇಬರು ತಮ್ಮ ಬುರುಕಿಯನ್ನು

ಮೈತುಂಬ ಹೊದ್ದು ಕೊಂಡರು. ಈ ಪ್ರಸಂಗವನ್ನು ನೋಡಿ ಲೈಲಿಯು ಇನ್ನು ಪರಿಣಾಮವು ನೆಟ್ಟಗಾಗದೆಂದು ಭಾವಿಸಿ, ಒಮ್ಮೆ ಮಾಸಾಹೇಬರನ್ನೂ, ಒಮ್ಮೆ ಸೇವಕನನ್ನೂ ನೋಡುತ್ತ ನಿಂತುಕೊಂಡಳು. ಇತ್ತ ಸೇವಕನು ಇಂಥ ಉದ್ಧಟತನದ ಉತ್ತರವನ್ನು ಮಹಾರಾಜರ ಮುಂದೆ ಹ್ಯಾಗೆ ಹೇಳಬೇಕೆಂದು ಯೋಚಿಸುತ್ತ ಕೆಲವು ಹೊತ್ತು ಸುಮ್ಮನೆ ನಿಂತುಕೊಂಡನು. ರಾಮರಾಜನ ಬಳಿಗೆ ಹೋಗಲಿಕ್ಕೆ ಆತನ ಕಾಲುಗಳು ಏಳದಾದವು. ಕಡೆಗೆ ಆತನು ದಾಸಿಯ ಕಡೆಗೆ ಹೊರಳಿ, ಆಕೆಯನ್ನು ಕುರಿತು— "ಮಹಾರಾಜನಿಗೆ ಈ ಮಾತುಗಳನ್ನು ನಾನು ಹ್ಯಾಗೆ ಹೇಳಲಿ? ಮಹಾರಾಜರನ್ನು ಇಲ್ಲಿಂದ ಹೊರಗೆಹಾಕಲಿಕ್ಕೆ ಯಾರು ಸಮರ್ಥರು? ನಾನು ಹೋಗಿ ಹೀಗೆ ಇದ್ದಕ್ಕಿದ್ದ ಹಾಗೆ ಹೇಳಿದರೆ ಅವರು ನನ್ನ ತಲೆ ಹಾರಿಸುವದರಲ್ಲಿ ಸಂಶಯವಿಲ್ಲ. ನೀವು ಮೊದಲು ಮಹಾರಾಜರನ್ನು ಒಳಗೆ ಬರಗೊಡಿರಿ. ಆಮೇಲೆ ಏನು ಹೇಳುವದನ್ನು ಅವರ ಮುಂದೆ ಹೇಳಿಬಿಡಿರಿ; ಆದರೆ ಇಂಥ ಭಯಂಕರವಾದ ಉತ್ತರವನ್ನು ಹೇಳುವ ಪ್ರಸಂಗವನ್ನು ನನ್ನ ಪಾಲಿಗೆ ಮಾತ್ರ ತರಬೇಡಿರಿ" ಎಂದು ಹೇಳಿದನು. ಅದಕ್ಕೆ ಮಾಸಾಹೇಬರು ಏನೂ ಮಾತಾಡಲಿಲ್ಲ; ಆದರೆ ಅವರ ಒಲವನ್ನು ನೋಡಿ ಲೈಲಿಯು, ಆ ಸೇವಕನನ್ನು ಕುರಿತು— ಅಪ್ಪಾ, ನೀನೇನು, ಹೇಳಿಕೇಳಿ ನೌಕರನು. ಕೈಯೊಳಗಿನ ಕಲ್ಲು ಇದ್ದ ಹಾಗೆ. ಅವರ ಮಾತನ್ನು ಇಲ್ಲಿ ಹೇಳಿದಂತೆ, ಇವರ ಮಾತನ್ನು ಅಲ್ಲಿ ಹೇಳಿಬಿಡೆಂದರಾಯಿತು. ಸುಮ್ಮನೆ ನಿನ್ನ ತಲೆ ಯಾಕೆ ಹಾರಿಸುವರು? ಹೋಗು, ಈಗ ಹೇಳಿದಷ್ಟು ನಿಮ್ಮ ಮಹಾರಾಜರ ಮುಂದೆ ಹೇಳು ಹೋಗು, ಎಂದು ಹೇಳಿದಳು; ಆದರೂ ಆ ಸೇವಕನ ಕಾಲುಗಳ ಏಳುಲೊಲ್ಲವು. ಆತನು ಸ್ವಲ್ಪ ಹೊತ್ತು ಅಲ್ಲಿಯೇ ನಿಂತುಕೊಂಡು— ಮಾಸಾಹೇಬ, ನಿಮ್ಮ ಈ ಮಾತುಗಳ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲ ಎಂದನು. ಅದನ್ನು ಕೇಳಿ ಮಾಸಾಹೇಬರು ಸ್ವಲ್ಪ ಹೊತ್ತು ಸಂತಾಪದಿಂದ ಏನೂ ಮಾತನಾಡಲಿಲ್ಲ. ಆಮೇಲೆ ಅವರು ಆ ಸೇವಕನನ್ನು ಕುರಿತು ತಟ್ಟನೆ— "ನನ್ನನ್ನು ಛಲಿಸಬೇಕೆಂದು ನಿಮ್ಮ ಮಹಾರಾಜರು ನಿನ್ನನ್ನು ನನ್ನ ಬಳಿಗೆ ಕಳಿಸಿರುವರೋ ಏನು? ನಾನು ಕೊಟ್ಟ ಉತ್ತರವನ್ನು ನಿನ್ನ ಒಡೆಯನಿಗೆ ಹೇಳು. ಮತ್ತು ಸ್ಪಷ್ಟವಾಗಿ ಹೀಗೆಯೂ ತಿಳಿಸು— ವೈರಿಗಳ ಕಡೆಯ ಹೆಣ್ಣುಮಕ್ಕಳನ್ನು ಹೀಗೆ ಪ್ರತಿಬಂಧದಲ್ಲಿಟ್ಟು, ಈವರೆಗೆ ಯಾವ ಹಿಂದೂ ಅರಸನೂ ಪೀಡಿಸಿರುವದಿಲ್ಲ; ಅಂಥ ನೀಚ ಕೆಲಸವನ್ನು ಈಗ ನೀವು ಮಾಡಿ ಕೀರ್ತಿ ಯನ್ನು ಸಂಪಾದಿಸುವಿರಿ. ಇದರಿಂದ ನಿಮ್ಮ ವಂಶದ ಹಾಗೂ ಇಡಿಯ ಕ್ಷತ್ರಿಯ ಕುಲದ ಉದ್ಧಾರವು ಬಹಳ ಚೆನ್ನಾಗಿ ಆಗುವದು!"

ಮಾಸಾಹೇಬರ ಈ ಮಾತುಗಳನ್ನು ಕೇಳಿ, ಇನ್ನು ಈ ಹೆಣ್ಣುಮಗಳ ಮುಂದೆ ನಿಂತುಕೊಳ್ಳುವುದರಲ್ಲಿ ಅರ್ಥವಿಲ್ಲೆಂದು ತಿಳಿದು, ಆ ಸೇವಕನು ರಾಮರಾಜನ ಬಳಿಗೆ ಹೋಗಿ ತನ್ನಿಂದಾದಷ್ಟು ಸೌಮ್ಯ ರೀತಿಯಿಂದ, ಎಡಚಿಡಬಾಡುತ್ತ ಮಾಸಾಹೇಬರು ಕೊಟ್ಟ ಉತ್ತರವನ್ನು ಹೇಳಿದನು. ಅದರಿಂದ ರಾಮರಾಜನ ಸಮಾಧಾನವಾಗಲಿಲ್ಲ. ಸೇವಕನು ಏನೋ ಮುಚ್ಚುತ್ತಾನೆಂದು ತಿಳಿದು ರಾಮರಾಜನು ಅವನನ್ನು ಕುರಿತು— "ನೀನು ಯಥಾಸ್ಥಿತವಾಗಿ ಇದ್ದದ್ದನ್ನೆಲ್ಲ ಹೇಳು. ಒಂದು ಮಾತನ್ನು ಸಹ ಮುಚ್ಚಬೇಡ" ಎಂದು ಗದ್ದರಿಸಿದನು. ಆಗ ಸೇವಕನು

ನಿರುಪಾಯನಾಗಿ ಮಾಸಾಹೇಬರು ಆಡಿದ ಎಲ್ಲ ಮಾತುಗಳನ್ನು ಇದ್ದಕ್ಕಿದ್ದ ಹಾಗೆ ಹೇಳಿದನು. ಅದನ್ನು ಕೇಳಿ ರಾಮರಾಜನು ಅರ್ಧತಾಸು ಸುಮ್ಮನೆ ನಿಂತುಕೊಂಡನು. ಆಮೇಲೆ ಆತನು ಸೇವಕನಿಗೆ ಆಕೆಯ ವೃದ್ಧ ದಾಸಿಯಾದ ಲೈಲಿಯು ಇರುತ್ತಾಳಲ್ಲ, ಆಕೆಯನ್ನು ಇತ್ತ ಕಡೆಗೆ ಕರಕೊಂಡು ಬಾ ಎಂದು ಹೇಳಿದನು. ಅದರಂತೆ ಸೇವಕನು ಹೋಗಿ ಲೈಲಿಯನ್ನು ಕರೆದನು. ಲೈಲಿಯು ಮಾಸಾಹೇಬರ ಕಡೆಗೆ ನೋಡಿ ಏನೋ ಮಾತಾಡಬೇಕೆನ್ನುತ್ತಿರಲು, ಮಾಸಾಹೇಬರು– ಹೋಗು, ನೀನು ಹೋಗಲಿಕ್ಕೇನೂ ಪ್ರತಿಬಂಧವಿಲ್ಲ; ಆದರೆ ಆತನು ನನ್ನ ಬಳಿಗೆ ಬರಲಾಗದು. ಸರ್ವಥಾ ಇಲ್ಲಿಗೆ ಬರಲಾಗದೆಂದು ಆತನಿಗೆ ಸ್ಪಷ್ಟವಾಗಿ ಹೇಳು. ಬಂದರೆ ನಾನು ಮುಖಾವಲೋಕನವನ್ನು ಮಾಡಲಿಕ್ಕಿಲ್ಲವೆಂತಲೂ ತಿಳಿಸು ಎಂದು ಹೇಳಲು ಲೈಲಿಯು ದಿಟ್ಟತನದಿಂದ ರಾಮರಾಜನ ಎದುರಿಗೆ ಬಂದು ನಿಂತುಕೊಂಡಳು.

## ಆಶಾಭಂಗ

ಲೈಲಿಯು ಬಂದಾಗ ರಾಮರಾಜನು ಒಬ್ಬನೇ ಕುಳಿತಿದ್ದನು. ಲೈಲಿಯು ಬಂದಕೂಡಲೆ ರಾಮರಾಜನು ತನ್ನ ಸೇವಕರಿಗೆ ಹೊರಗೆ ತೋಟದಲ್ಲಿ ಹೋಗಿರೆಂದು ಹೇಳಿ, ಲೈಲಿಯನ್ನು ಕುರಿತು—ಮಾರ್ಜಿನೇ, ಮಾರ್ಜಿನೇ, ಹೇಳು ನನಗೆ ಎಲ್ಲ ನಿಜವಾದ ವೃತ್ತಾಂತವನ್ನು ಹೇಳು. ನಿನ್ನ ಗುರುತನ್ನು ನಾನು ಎಷ್ಟೋ ದಿನಗಳ ಹಿಂದೆ ಹಿಡಿದಿರುವೆನು, ಇನ್ನು ಮುಚ್ಚಿಕೊಳ್ಳುವದರಲ್ಲೇನೂ ಅರ್ಥವಿಲ್ಲ. ನೀವು ಇಲ್ಲಿಂದ ಹೋದಬಳಿಕ ಏನಾಯಿತೆಂಬದನ್ನೆಲ್ಲ ನನ್ನ ಮುಂದೆ ಹೇಳು. ಇಂದು ಆಕೆಯ ಮುಖದಿಂದಲೇ ಎಲ್ಲಾ ವೃತ್ತಾಂತವನ್ನು ಕೇಳಬೇಕೆಂದು ನಾನು ಬಹಳವಾಗಿ ಅಪೇಕ್ಷಿಸಿದ್ದೆನು; ಆದರೆ ಆಕೆಯು ಹಾಗೆ ಹೇಳಲಿಚ್ಛಿಸುವದಿಲ್ಲ; ಸದ್ಯಕ್ಕೆ ಆಕೆಯನ್ನು ನಾನು ಬಲಾತ್ಕರಿಸುವದಿಲ್ಲ, ನೀನಂತು ಎಲ್ಲ ವೃತ್ತಾಂತವನ್ನು ಹೇಳಲೇಬೇಕು. ಹೇಳು ಸ್ವಲ್ಪವಾದರೂ ಮುಚ್ಚಬೇಡ. ನೀವು ಇಲ್ಲಿಂದ ಹೋದಬಳಿಕ ಎಲ್ಲಿಗೆ ಹೋದಿರಿ? ಮುಂದೆ ಏನೇನಾಯಿತು? ನಾನು ನಿಮ್ಮನ್ನು ಇಲ್ಲಿ ಎಷ್ಟು ಹುಡುಕಿಸಿದೆನು. ನೀವು ಸಿಕ್ಕಿದ್ದರೆ, ನಿಮ್ಮ ಬೆನ್ನಹಿಂದೆಯೇ ಬಂದು ನಿಮ್ಮನ್ನು ಕರಕೊಂಡು ಬರುತ್ತಿದ್ದೆನು; ನಿಮ್ಮನ್ನು ಅಡ್ಡಹಾದಿಗೆ ಹೋಗಗೊಡುತ್ತಿದ್ದಿಲ್ಲ; ಆದರೆ ಏನು ಮಾಡಲಿ? ನಿಮ್ಮ ಗೊತ್ತೇಹತ್ತಲಿಲ್ಲ; ಆದ್ದರಿಂದ ನಾನು ಮಿಡುಕುತ್ತ ಸುಮ್ಮನೆ ಕುಳಿತುಕೊಳ್ಳಬೇಕಾಯಿತು. ನನಗೊಂದು ಮುಖ್ಯ ಮಾತು ಗೊತ್ತಾಗಬೇಕಾಗಿದೆ; ಅದು ನನಗೆ ಗೊತ್ತಾದಂತೆ ಆಗಿದ್ದರೂ, ನಿಮ್ಮ ಮುಖದಿಂದ ಕೇಳಿಕೊಳ್ಳಬೇಕಾಗಿರುವುದು. ನೀವು ನಿಜವಾದ ಸಂಗತಿಯನ್ನು ಹೇಳಿದರೆ, ನನಗೆ ಎಷ್ಟೊಂದು ಆನಂದವಾಗುವ ಹಾಗಿದೆ ಹೇಳು. ಮಾರ್ಜಿನೇ, ಸುಮ್ಮನೆ ನಿಂತುಕೊಳ್ಳಬೇಡ. ಬಾಯಿಬಿಚ್ಚಿ ಮಾತಾಡು ಎಂದನು. ರಾಮರಾಜನ ಮುಖದಿಂದ ''ಮಾರ್ಜಿನೆ'' ಎಂಬ ಶಬ್ದವು ಹೊರಬಿದ್ದದ್ದನ್ನು ಕೇಳಿ ಲೈಲಿಯು ಮೆಟ್ಟಿಬಿದ್ದಳು. ಆಕೆಗೆ ಏನೂ ತೋಚದ್ದರಿಂದ, ರಾಮರಾಜನ ಮೋರೆಯನ್ನು ನೋಡುತ್ತ ಸುಮ್ಮನೆ ನಿಂತುಕೊಂಡಳು.

ಆಗ ರಾಮರಾಜನು ಮತ್ತೆ ಲೈಲಿಗೆ— "ಹೂ, ಮಾತಾಡು ರಣಮಸ್ತಖಾನನು ಯಾರು? ಆತನ ವೃತ್ತಾಂತವನ್ನು ಕೇಳಿಕೊಳ್ಳಲಿಕ್ಕೆ ನಾನು ಅತ್ಯಂತ ಆತುರನಾಗಿದ್ದೇನೆ. ನಾನು ಆತನನ್ನೇ ಕೇಳಬೇಕೆಂದು ಮಾಡಿದ್ದೆನು. "ನೀನು ಎಲ್ಲಿಯವನು? ನಿನ್ನ ತಾಯಿ–ತಂದೆಗಳು ಯಾರು? ಅವರು ವಿಜಾಪುರ ದವರೋ? ಮತ್ತೆ ಎಲ್ಲಿಂದಾದರೂ ವಿಜಾಪುರಕ್ಕೆ ಬಂದವರೋ" ಎಂದು ಆತನನ್ನು ಕೇಳಿ, ಆತನಿಗೆ ತನ್ನ ಜನ್ಮವೃತ್ತಾಂತವು ಗೊತ್ತಿಲ್ಲದ ಪಕ್ಷದಲ್ಲಿ, ನಾನೇ ನಿಜವಾದ ಸಂಗತಿಯನ್ನು ಆತನಿಗೆ ಹೇಳಬೇಕೆಂದು ಮಾಡಿದ್ದೆನು; ಆದರೆ ಮೊದಲು ಮೇಹರ್ಜಾನಳನ್ನು ಕಂಡು ಆಕೆಯಿಂದ ಯಾವತ್ತು ಸಂಗತಿ ಕೇಳಿಕೊಂಡು, ಆಕೆಯ ಮನಸ್ಸಿಗೆ ಬಂದರೆ ಅವನ ಜನ್ಮವೃತ್ತಾಂತವನ್ನು ಆತನ ಮುಂದೆ ಹೇಳಬೇಕು. ಇಲ್ಲದಿದ್ದರೆ ಬಿಡಬೇಕು ಎಂಬ ವಿಚಾರವು ಉತ್ಪನ್ನವಾದದ್ದರಿಂದ ಅಷ್ಟಕ್ಕೆ ಬಿಟ್ಟೆನು. ಈಗ ಮೇಹರ್ಜಾನಳನ್ನು ಕೇಳುವದಕ್ಕಾಗಿಯೇ ನಾನು ಇಲ್ಲಿಗೆ ಬಂದಿದ್ದೇನೆ. ಅದೇ ಉದ್ದೇಶ ದಿಂದಲೇ ನಿಮ್ಮನ್ನು ವಿಜಯನಗರದಿಂದ ಇಲ್ಲಿಗೆ ನಿನ್ನೆ ಕಳಿಸಿದೆನು. ನೀವು ಮೊದಲು ಇದ್ದಾಗಿ ನಂತೆಯೇ ಕುಂಜವನದ ಸ್ಥಿತಿಯು ಈಗ ಆಗಿದೆಯೋ ಇಲ್ಲವೋ ನೋಡಿರಿ. ಇದನ್ನು ನೋಡಿ ನಿಮಗೆ ಹಿಂದಿನದೆಲ್ಲ ನೆನಪಾಗಿ ನನಗೆ ನೀವು ಅನುಕೂಲವಾದೀತೆಂದು ತಿಳಿದು, ಈಗ ನಾಲ್ಕು ದಿವಸಗಳಲ್ಲಿ ಕುಂಜವನವನ್ನು ಬಹು ಶ್ರಮಪಟ್ಟು ವ್ಯವಸ್ಥೆಗೊಳಿಸಿದ್ದೇನೆ. ನಿಮ್ಮ ಮೇಲೆ ನನ್ನ ಪ್ರೇಮವು ಮೊದಲು ಇದ್ದಂತೆ ಈಗಲೂ ಇರುತ್ತದೆ. ನಾನು ಮಹತ್ವಾಕಾಂಕ್ಷೆಯಿಂದ ಕೃಷ್ಣದೇವ ರಾಯರ ಮಗಳನ್ನು ಲಗ್ನವಾದದ್ದೇನೋ ನಿಜ. ಆದರೆ ರಾಜಕನ್ಯೆಯ ಮನಸ್ಸನ್ನು ಒಲಿಸಿಕೊಳ್ಳಲಿಕ್ಕೆ ನಾನು ಎಂದೂ ಯತ್ನಿಸಿರುವದಿಲ್ಲ. ನಿಜವಾದ ಪ್ರೇಮವು ಹುಟ್ಟಿದರೆ ಒಮ್ಮೆಯೇ ಹುಟ್ಟುವದು. ಹುಟ್ಟಿದ ಬಳಿಕ ಅದು ನಾಶಹೊಂದಲಾರದು, ರೂಪಾಂತರಿಸಲಾರದು. ಮಾರ್ಜಿನೇ, ಮಾರ್ಜಿನೇ, ಮೇಹರ್ಜಾನಳ ಮೇಲಿದ್ದ ನನ್ನ ಪ್ರೇಮದ ಪರಿವರ್ತನಗಳು (ನಕಲುಗಳು) ಬೇಕಾದಷ್ಟು ಆಗಬಹುದು; ಆದರೆ ಮೇಹರ್ಜಾನಳ ಮೇಲಿನ ನನ್ನ ನಿಜವಾದ ಪ್ರೇಮವು ಮೇಹರ್ಜಾನಳಲ್ಲಿಯೇ ಉಳಿದಿರುವದು. ಅದರ ಮರೆವು ನನಗೆ ಎಂದಿಗೂ ಆಗದು" ಎಂದನು.

ಈ ಮೇರೆಗೆ ನುಡಿಯುವಾಗ ರಾಮರಾಜನ ಕಣ್ಣುಗಳಲ್ಲಿ ನೀರು ಬಂದವು. ಆತನು ಮಾತಾಡಲಾರದೆ ಸುಮ್ಮನೆ ಕುಳಿತುಕೊಂಡಿದ್ದನು. ಇದನ್ನು ನೋಡಿ ಮಾರ್ಜಿನೆಯ ಮನಸ್ಸು ಕರಗಿತು. ಆಕೆಯು ರಾಮರಾಜನಿಗೆ ಎಲ್ಲ ನಿಜವಾದ ಸಂಗತಿಯನ್ನು ಹೇಳಿ, ಆತನನ್ನು ಸಮಾಧಾನಗೊಳಿಸಬೇಕೆಂದು ಮಾಡಿದಳು. ಇದನ್ನು ಆಕೆಯು ಮಾತಾಡತಕ್ಕವಳು, ಅಷ್ಟರಲ್ಲಿ ರಾಮರಾಜನು — "ಮಾರ್ಜೀನೇ, ನಿನ್ನ ಒಡೆಯಳು ಎಷ್ಟು ನಿಷ್ಠುರಳು! ಆಕೆಗೆ ನಿಜವಾದ ಪ್ರೇಮದ ಗುರುತೇ ಇದ್ದಂತೆ ತೋರುವದಿಲ್ಲ. ಒಂದು ಕಾರ್ಯದ ನಿಮಿತ್ತದಿಂದ ನಾನು ಮಾಡಿದ ಕಡ್ಡಿಯಷ್ಟು ತಪ್ಪನ್ನೇ ಗುಡ್ಡದಷ್ಟು ಮಾಡಿ ಆಕೆಯು ನಿರ್ದಯಳಾದಳು. ನನ್ನಿಂದಾದ ಉಪಕಾರವನ್ನೆಲ್ಲ ಮರೆತು, ನನಗೆ ಆಗದವಳಂತೆ ಆಕೆಯು ಒಮ್ಮೆಲೆ ಹೊರಟುಹೋಗಿಬಿಟ್ಟಳು, ಎಂದು ನುಡಿದನು. ಈ ಮಾತುಗಳು ಲೈಲಿಯ ಮನಸ್ಸನ್ನು ತಿರುಗಿಸಿದವು. ರಾಮರಾಜನು ತನ್ನ ಒಡೆಯಳಿಗೆ, ನಿಷ್ಠುರಳೂ, ಪ್ರೇಮರಹಿತಳೂ, ನಿರ್ದಯಳೂ ಎಂದು ಹೆಸರಿಟ್ಟಿದ್ದು ಮಾರ್ಜೀನೆಯ ಮನಸ್ಸಿಗೆ ಬರಲಿಲ್ಲ. ಅತ್ಯಂತ ಪ್ರೇಮಲ ಸ್ವಭಾವದ ತನ್ನ ಪ್ರಿಯ

ಮೋಹಜರ್ಾನಳು. ತನ್ನ ಕುಲಶೀಲಗಳನ್ನೂ, ಆಪ್ತೇಷ್ಟರನ್ನೂ ಲಕ್ಷಿಸದೆ, ಸರ್ವಸ್ವವನ್ನು ಈತನಿಗೆ ಒಪ್ಪಿಸಿ, ತನ್ನ ಕುತ್ತಿಗೆಯನ್ನು ಈತನ ಕೈಯಲ್ಲಿ ಕೊಟ್ಟಿರುವಾಗ, ಈತನೇ ನಿಷ್ಠುರತನದಿಂದ ಮೋಹಜರ್ಾನಳ ಕುತ್ತಿಗೆಯನ್ನು ಕೊಯ್ದಿರಲು, ತಿರುಗಿ ಮೋಹಜರ್ಾನಳನ್ನೇ ಈತನು ಹಳಿಯುತ್ತಾನಲ್ಲ, ಎಂದು ಆಕೆಯು ರಾಮರಾಜನ ಮೇಲೆ ಸಿಟ್ಟಾದಳು. ನಿಜವಾದ ವೃತ್ತಾಂತವನ್ನು ಈತನ ಮುಂದೆ ಹೇಳುವದಂತು ಇರಲಿ, ಈತನಿಗೆ ನಮ್ಮ ಗುರುತು ಕೂಡ ಹತ್ತಗೊಡಬಾರದೆಂದು ತಿಳಿದು, ಆಕೆಯು ಸುಮ್ಮನೆ ನಿಂತುಕೊಂಡು ಬಿಟ್ಟಳು. ತಾನು ಇಷ್ಟು ದೈನ್ಯದಿಂದ ಹೇಳಿಕೊಂಡರೂ, ಕಣ್ಣೀರು ಹಾಕಿದರೂ ಮಾರ್ಜೀನೆಗೆ ದಯಹುಟ್ಟಲಿಲ್ಲೆಂದು ತಿಳಿದು, ರಾಮರಾಜನು ಸ್ವಲ್ಪ ತ್ರಾಸಗೊಂಡು ಮಾರ್ಜೀನೆಗೆ— ಯಾಕೆ? ಸುಮ್ಮನೆ ನಿಂತೆ? ಮಾತಾಡುವದಿಲ್ಲವೇನು? ನಾನೇನು ಕಲ್ಲಿನ ಮುಂದೆ ಮಾತಾಡುತ್ತಿರುವೆನೋ? ಮಾತಾಡು, ಹೇಳು, ನಾನು ಕೇಳಿದ್ದನ್ನೆಲ್ಲ ಹೇಳು, ಎಂದು ಕೇಳಿದನು. ಅದಕ್ಕೆ ಮಾರ್ಜೀನೆಯು ತಟ್ಟನೆ ರಾಮರಾಜನನ್ನು ಕುರಿತು—

ಮಾರ್ಜಿನೆ— ಏನು ಹೇಳಲಿ? ನೀವು ಏನು ಕೇಳುತ್ತೀರೆಂಬುದೇ ನನಗೆ ತಿಳಿಯಲೊಲ್ಲದು, ಅಂದಬಳಿಕ ಅದರ ಉತ್ತರವನ್ನು ನಾನು ಹ್ಯಾಗೆ ಕೊಡಬೇಕು?

ರಾಮರಾಜ— ನಿನಗೆ ತಿಳಿಯಲೊಲ್ಲದೋ? ನಾನು ಏನು ಕೇಳುತ್ತೇನೆಂಬದು ನಿನಗೆ ತಿಳಿಯಲೊಲ್ಲದೋ? ಮಾರ್ಜೀನೇ, ನನಗೆ ಉಳಿದದ್ದನ್ನೇನೂ ಹೇಳಬೇಡ. ಒಂದೇ ಮಾತು ಹೇಳು. ಈ ರಣಮಸ್ತಖಾನನು ಅವನೇ ಏನು? ನೀವು ಇಲ್ಲಿಂದ ಹೋದಬಳಿಕ ಈತನು ಎಷ್ಟು ದಿನಗಳ ಮೇಲೆ, ಎಲ್ಲಿ ಹುಟ್ಟಿದನು? ಎಂದು ನುಡಿಯುತ್ತಿರಲು, ಮಾರ್ಜೀನೆಯು ನಡುವೇ ಬಾಯಿ ಹಾಕಿ—

ಮಾರ್ಜಿನೆ—ಸುಮ್ಮನೆ ಯಾಕೆ ನನ್ನನ್ನು ಕೇಳುತ್ತೀರಿ? ನನಗೆ ಏನೂ ಗೊತ್ತಿಲ್ಲ ಮತ್ತು ನೀವು ಏನೂ ಕೇಳುತ್ತೀರೆಂಬದೂ ನನಗೆ ತಿಳಿಯಲೊಲ್ಲದು.

ರಾಮರಾಜ— ಹೀಗೆ ಹೇಳುವದಕ್ಕಿಂತ "ನಾನೂ ಏನೂ ಹೇಳುವದಿಲ್ಲವೆಂದು" ಸ್ಪಷ್ಟ ಹೇಳಬಾರದೆ?

ಮಾರ್ಜಿನೆ— ನನಗೆ ಏನೂ ಗೊತ್ತಿಲ್ಲದ ಬಳಿಕ ನಾನು ಹೇಳಲಾದರೂ ಏನು? ನಾವು ನಿಮಗೆ ಯಾರ ಹಾಗೆ ಕಾಣುತ್ತೇವೆ? ನಮ್ಮನ್ನು ನೀವು ಯಾರೆಂದು ತಿಳಿದಿರುತ್ತೀರಿ? ನಮ್ಮ ಮಾಸಾಹೇಬರನ್ನು ನೀವು ಯಾರೆಂದು ಭಾವಿಸಿರುತ್ತೀರಿ? ನಮ್ಮ ಮಾಸಾಹೇಬರು ಒಬ್ಬ ಬಡ ವಿಧವೆಯು. ಪತಿಯು ಮರಣಹೊಂದಿದ ಬಳಿಕ, ಪಾಪ! ಅಲ್ಲಾನ ಧ್ಯಾನಮಾಡುತ್ತ ಅವರು ಕಾಲಹರಣ ಮಾಡುತ್ತಿರುವರು. ಉತ್ತರ ಹಿಂದುಸ್ತಾನದ ಕಡೆಗಿದ್ದವರು, ಈಗ ದಕ್ಷಿಣ ಹಿಂದುಸ್ತಾನದ ಕಡೆಗೆ ಬಂದಿರುತ್ತಾರೆ. ಅವರು ತಮ್ಮ ಮಗನ ಮೂರ್ಖತನದಿಂದ ಹೀಗೆ ಸಂಕಟಕ್ಕೆ ಗುರಿಯಾಗಿರುತ್ತಾರೆ.

ಇದನ್ನು ಕೇಳಿ ರಾಮರಾಜನಿಗೆ ಏನೂ ತೋಚದಾಯಿತು. ಆತನು ಲೈಲಿಗೆ— ನೀನು ನನಗೆ ನಮ್ಮ ಮೋಹಜರ್ಾನಳ ಭೆಟ್ಟಿಯನ್ನು ಮಾಡಿಸಿಬಿಡು. ನಾನು ಆಕೆಯನ್ನೇ ಕೇಳುವೆನು,

ಎಂದು ಹೇಳಿದನು. ಇದನ್ನು ಕೇಳಿ ಮಾರ್ಜೀನೆಯು ಏನೂ ತೋಚದೆ ಸುಮ್ಮನೆ ನಿಂತುಕೊಂಡಳು. ಆಮೇಲೆ ಆಕೆಯು ರಾಮರಾಜನಿಗೆ— ನಿಮ್ಮ ಮೇಹರ್ಜಾನಳು! ನಿಮ್ಮ ಮೇಹೇರಜಾನಳು ಯಾರೆಂಬುದೇ ನನಗೆ ಗೊತ್ತಾಗಲೊಲ್ಲದು; ಅಂದಬಳಿಕ ನಾನು ಆಕೆಯ ಬಳಿಗೆ ನಿಮ್ಮನ್ನು ಹ್ಯಾಗೆ ಕರಕೊಂಡು ಹೋಗಲಿ? ಅನ್ನಲು, ರಾಮರಾಜನು ಈಕೆಯು ಒಳ್ಳೆಯ ಮಾತಿನಿಂದ ಹಾದಿಗೆ ಬರುವಹಾಗೆ ಕಾಣುವದಿಲ್ಲ, ಸ್ವಲ್ಪ ಗುಡುಗು ಹಾಕಿ ನೋಡೋಣವೆಂದು—

ರಾಮರಾಜ— ನೀನು ಯಾರ ಸಂಗಡ ಈ ಹುಡುಗಾಟಿಕೆಯನ್ನು ಮಾಡುತ್ತೀ ಯೆಂಬುದು ನಿನಗೆ ಗೊತ್ತಿರುವದಷ್ಟೆ?

ಲೈಲಿ— ಇಲ್ಲ, ನನಗೆ ಯಾವದೂ ಗೊತ್ತಿಲ್ಲ. ನೀವು ಯಾರೆಂಬದನ್ನು ನಾನರಿಯೆ.

ರಾಮರಾಜ— ನಿನ್ನ ನೂರು ವರ್ಷಗಳು ತುಂಬಿದವೆಂದು ತಿಳಿದುಕೋ.

ಲೈಲಿ— ನಿಜವಾಗಿಯೇ ನನ್ನ ನೂರು ವರ್ಷಗಳು ತುಂಬಿದ್ದರೆ, ಪರವರದಿಗಾರ ಖುದಾನು ನನ್ನನ್ನು ಅನುಗ್ರಹಿಸಿದನೆಂದಲೇ ನಾನು ತಿಳಿಯುವೆನು. ನನಗಂತು ನನ್ನ ಜೀವವು ಬೇಡಾಗಿರುತ್ತದೆ.

ರಾಮರಾಜ— ಇನ್ನು ಮೇಲೆ ನಾನೇ ರಣಮಸ್ತಖಾನನಿಗೆ ಅವನ ಜನ್ಮವೃತ್ತಾಂತವನ್ನು ಹೇಳುವೆನು.

ಲೈಲಿ— ಏನೂ ಚಿಂತೆಯಿಲ್ಲ, ಅವಶ್ಯವಾಗಿ ಹೇಳಿರಿ. ಅದನ್ನು ಕೇಳಿ ಆತನಿಗೆ ಆನಂದ ವಾದರೆ ನೆಟ್ಟಗೇ ಆಯಿತು. ಮಾಸಾಹೇಬರಿಗೂ, ಆತನಿಗೂ ಇನ್ನು ಯಾವ ಸಂಬಂಧವೂ ಉಳಿದಿರುವದಿಲ್ಲ. ತಮ್ಮ ಮಗನು ಸ್ವಾಮಿದ್ರೋಹಿಯಾದದ್ದರಿಂದ, ಆತನು ತಮ್ಮ ಪಾಲಿಗೆ ಸತ್ತನೆಂದು ಮಾಸಾಹೇಬರು ತಿಳಕೊಂಡಿರುವರು.

ಮುದುಕಿಯು ಯಾವುದಕ್ಕೂ ಗುಟ್ಟುಕೊಡುವದಿಲ್ಲೆಂಬ ಮಾತು ರಾಮರಾಜನಿಗೆ ಗಟ್ಟಿಮುಟ್ಟಿ ಗೊತ್ತಾಯಿತು. ಇನ್ನು ಹೆಚ್ಚು ಅಲೆದಾಡುವದರಲ್ಲಿ ಅರ್ಥವಿಲ್ಲೆಂದು ತಿಳಿದು, ಅಲ್ಲಿಂದ ಹೊರಟುಹೋಗಬೇಕೆಂದು ಆತನು ನಿಶ್ಚಯಿಸಿದನು. ಇಷ್ಟು ಪ್ರಯತ್ನ ಮಾಡಿದೂ ತನ್ನ ಕೋರಿಕೆಯು ಕೈಗೂಡದ್ದರಿಂದ, ಆತನಿಗೆ ಬಹು ವಿಷಾದವಾಯಿತು. ಆತನಿಗೆ ಆ ಸ್ಥಾನವನ್ನು ಬೇಗನೇ ಬಿಡಲಿಕ್ಕೆ ಬೇರೆ ಕಾರಣಗಳು ಒದಗಿದವು. ಯುದ್ಧಪ್ರಸಂಗವಿರಲು, ವೈರಿಗಳ ಕಡೆಯ ಸುದ್ದಿಗಳನ್ನು ತಿಳಕೊಂಡು ಬರುವದಕ್ಕಾಗಿ ವಿಜಯನಗರದ ಗುಪ್ತಚಾರರು ಅಲ್ಲಲ್ಲಿ ತಿರುಗುತ್ತಿದ್ದರಷ್ಟೇ. ಅವರಲ್ಲಿ ಒಬ್ಬನು ವಿಜಾಪುರದ ಕಡೆಯಿಂದ ಅವಸರದಿಂದ ಬಂದು, ರಾಮರಾಜನಿಗೆ ಬೇಗನೆ ಸುದ್ದಿಯನ್ನು ಮುಟ್ಟಿಸಬೇಕೆಂದು ವಿಜಯನಗರಕ್ಕೆ ಹೋಗಿದ್ದನು. ಆದರೆ ರಾಮರಾಜನು ಕುಂಜವನದಲ್ಲಿರುವನೆಂಬದು ಗೊತ್ತಾದ್ದರಿಂದ ಆ ಸೇವಕನು ಕುಂಜವನಕ್ಕೆ ಬಂದು, ರಾಮರಾಜನಿಗೆ ತಾನು ಬಂದಿರುವ ಸುದ್ದಿಯನ್ನು ಹೇಳಿಕಳಿಸಿದನು. ಆಗ ರಾಮರಾಜನು ಆತನನ್ನು ಕರೆಸಿಕೊಂಡು, ಹೊಸ ಸುದ್ದಿಯೇನೆಂದು ಕೇಳಲು, ಸೇವಕನು— ಮಹಾರಾಜರೇ, ಶತ್ರುಗಳು ಮೂವರಿದ್ದವರು ನಾಲ್ವರಾದರು. ಹುಸೇನಶಹನು ಉಳಿದ

ಮೂವರು ಬಾದಶಹರನ್ನು ಕೂಡಿಕೊಳ್ಳುವನೋ, ಇಲ್ಲವೋ, ಎಂಬದು ಈವರೆಗೆ ಅನುಮಾನಪಕ್ಷವಾಗಿತ್ತು; ಆದರೆ ಆತನೂ ಈಗ ಕೂಡಿಕೊಂಡನು. ಆತನು ತನ್ನ ಸೈನ್ಯದೊಡನೆ ಹೊರಟಿರುವನು. ಇಷ್ಟು ಹೊತ್ತಿಗೆ ಆತನು ಅರ್ಧಹಾದಿಗೆ ಸಹ ಬಂದಿರಬಹುದು ಎಂದು ಹೇಳಿದನು. ಇದನ್ನು ಕೇಳಿದಕೂಡಲೆ ರಾಮರಾಜನು ಮನಸ್ಸಿನಲ್ಲಿ ಬೆದರಿದರೂ, ಹೊರಗೆ ಅದರ ಲಕ್ಷಣ ತೋರುಗೊಡದೆ— ಇದೇ ಏನು ನಿನ್ನ ಮಹತ್ವದ ಸುದ್ದಿಯು! ಯಾವ ಶಹನು ಕೂಡಿ ನಮ್ಮನ್ನೇನು ಮಾಡುವನು? ಎಲ್ಲಾ ಶಹರೂ ಒಟ್ಟುಗೂಡಿ ಒಮ್ಮೆಲೇ ನಮ್ಮ ಮೇಲೆ ಸಾಗಿ ಬಂದುಬಿಡಲಿ. ಅಂದರೆ ಅವರೆಲ್ಲರಿಗೆ ಒಮ್ಮೆ ಚೆನ್ನಾಗಿ ಕೈತೋರಿಸಿಬಿಡೋಣ. ಮುಸಲ್ಮಾನರ ನಾಶಕಾಲವೇ ಒದಗಿದಂತೆ ಕಾಣುತ್ತದೆ. ಹಿಂದಕ್ಕೆ ಪರಶುರಾಮನು ಇಪ್ಪತ್ತೊಂದು ಸಾರೆ ಕ್ಷತ್ರಿಯ ಸಂಹಾರಮಾಡಿ ಪೃಥ್ವಿಯನ್ನು ನಿಃಕ್ಷತ್ರಿಯ ವಾಗಿ ಮಾಡಿದಂತೆ ಈಗ ನಾವು ಪೃಥ್ವಿಯನ್ನು ನಿರ್ಮುಸಲ್ಮಾನವಾಗಿ ಮಾಡೋಣ! ಹೋಗು, ವೈರಿಗಳ ಸೈನ್ಯಗಳು ಎಲ್ಲಿಯವರೆಗೆ ಬಂದಿವೆಯೆಂಬದನ್ನು ನೋಡಿ ಬಂದು ಹೇಳು. ಅಂಥ ಮಹತ್ವದ ಸುದ್ದಿಗಳೇನಾದರೂ ಇದ್ದರೆ, ನನ್ನ ತನಕ ಹೇಳಲಿಕ್ಕೆ ಬಾ. ಹಾಗೆಮಾಡದೆ, ಇಂಥ ಕ್ಷುಲ್ಲಕ ಸುದ್ದಿಗಳನ್ನು ಹೇಳಲಿಕ್ಕೆ ಬಂದು ತೊಂದರೆಯನ್ನು ಕೊಡಬೇಡ, ಎಂದು ನುಡಿದನು. ಈ ಮಾತುಗಳನ್ನು ಕೇಳಿ ಸೇವಕನು ಆಶ್ಚರ್ಯಪಡುತ್ತ ಹೊರಟು ಹೋದನು. ರಾಮರಾಜನೂ ಅಸಮಾಧಾನದಿಂದ ಕುಂಜವನವನ್ನು ಬಿಟ್ಟು ವಿಜಯನಗರಕ್ಕೆ ಬಂದು ಮುಟ್ಟಿದನು.

ವಿಜಯನಗರಕ್ಕೆ ಬಂದಬಳಿಕ ಎಷ್ಟೋ ಮಹತ್ವದ ಸುದ್ದಿಗಳನ್ನು ರಾಮರಾಜನು ಕೇಳಿದನು. ಶತ್ರುಗಳ ಸೈನ್ಯಗಳು ಬೇಗನೆ ವಿಜಯನಗರದ ಗಡಿಯನ್ನು ಬಂದು ಮುಟ್ಟುವವೆಂಬದನ್ನೂ, ತುಂಗಭದ್ರೆಯ ಕಾಲಹೊಳೆಯ ಸ್ಥಳವನ್ನು ಹುಡುಕುವದಕ್ಕಾಗಿ ಶತ್ರುಗಳ ಗುಪ್ತಚಾರರು ತಿರುಗಾಡುತ್ತಿರುವರೆಂಬದನ್ನೂ, ಆ ಸ್ಥಳವು ಗೊತ್ತಾಗುವವರೆಗೆ ಶತ್ರುಗಳು ಪತ್ರಗಳನ್ನು ಕಳಿಸುತ್ತ ಉತ್ತರಗಳನ್ನು ಬರಮಾಡಿಕೊಳ್ಳುತ್ತ ಕಾಲಹರಣ ಮಾಡುವಂತೆ ತೋರುತ್ತದೆಂಬದನ್ನೂ, ರಾಮರಾಜನು ಕೇಳಿದನು. ತಾನಾದರೂ ಶತ್ರುಗಳ ಗುಪ್ತಚಾರರನ್ನು ಶೋಧಿಸುವದಕ್ಕಾಗಿಯೂ, ಶತ್ರುಗಳ ದಂಡಿನ ಚಲನವಲನಗಳನ್ನು ನೋಡಿಕೊಂಡು ಬರುವದಕ್ಕಾಗಿಯೂ, ಗುಪ್ತಚಾರರನ್ನು ನಿಯಮಿಸಿರುವನೆಂಬ ಬಗ್ಗೆ ರಾಮರಾಜನಿಗೆ ಸಮಾಧಾನವಾಯಿತು. ತಾನು ಶತ್ರುಗಳನ್ನು ತುಂಗಭದ್ರೆಯನ್ನು ದಾಟಗೊಡದೆ, ತುಂಗಭದ್ರೆ ಯಲ್ಲಿಯೇ ಅವರ ನಾಶಮಾಡಿದರಾಯಿತೆಂದು ಆತನು ತಿಳಕೊಂಡನು. ಮೊದಲ ಉಸಲಿಗೇ ಶತ್ರುಗಳಿಗೆ ಚನ್ನಾಗಿ ಕೈ ತೋರಿಸಿದರೆ, ಅವರು ಚಿವುಗುಟ್ಟುತ್ತ ಕುಳಿತುಕೊಳ್ಳುವರು. ಆಮೇಲೆ ತಾವು ಮುಂದಕ್ಕೆ ಸಾಗಿಹೋಗಬೇಕು. ಅಂದರೆ ಪೂರ್ಣವಾಗಿ ಶತ್ರುಗಳ ನಿಃಪಾತವಾಗುವದು. ಪರಮೇಶ್ವರನ ಮನಸ್ಸಿನಲ್ಲಿ ಭರತಖಂಡದ ತುಂಬೆಲ್ಲ ಹಿಂದೂ ರಾಜ್ಯವಾಗುವದು, ಇದ್ದದ್ದರಿಂದಲೇ ಈ ಎಲ್ಲ ಮುಸಲ್ಮಾನ ಬಾದಶಹರಿಗೆ ಈ ಬುದ್ಧಿಯು ಹುಟ್ಟಿರುತ್ತದೆ, ಇಲ್ಲದಿದ್ದರೆ ಎಂದೂ ಹುಟ್ಟುತ್ತಿದ್ದಿಲ್ಲ, ಎಂದು ಆತನು ನಂಬಿ ಬಿಟ್ಟಿದ್ದನು. ಈ ವಿಚಾರದ ಹೊರತು, ಸೋಲಿನ ವಿಚಾರವು ರಾಮರಾಜನ ಮನಸ್ಸಿನಲ್ಲಿ ಬರುತ್ತಿರಲಿಲ್ಲವೆಂತಲೇ ಹೇಳಬಹುದು. ತಾನು ಸ್ವತಃ ಸೈನ್ಯಾಧಿಪತ್ಯವನ್ನು ಕೈಕೊಂಡು, ತನ್ನ ಇಬ್ಬರು ಶೂರ

ಬಂಧುಗಳನ್ನು ಎಡಬಲಗಳಲ್ಲಿ ಸೈನ್ಯವಾಗಿ ಇರಿಸಿಕೊಂಡು, ತಾನು ಮಧ್ಯದಲ್ಲಿ ಸೈನ್ಯದೊಡನೆ ನಿಂತು, ವೈರಿಗಳಿಗೆ ಎದುರಾಗಬೇಕೆಂದು ನಿಶ್ಚಯಿಸಿದನು.

ಸೈನ್ಯದೊಳಗಿನ ವೀರರಲ್ಲಿ ತನಗೆ ಭೆಟ್ಟಿಯಾದವರಿಗೆಲ್ಲ ರಾಮರಾಜನು ಶ್ರೀ ವಿಜಯವಿಠ್ಠಲನು, ನಮಗೆ ಅತ್ಯುತ್ತಮ ಪ್ರಸಂಗವನ್ನು ಒದಗಿಸಿಕೊಟ್ಟಿರುತ್ತಾನೆ. ಈ ಪ್ರಸಂಗದಲ್ಲಿ ನಾವು ಭಾರತೀಯ ವೀರರಂತೆ ಯುದ್ಧಮಾಡಿದರೆ, ಭರತಖಂಡದ ತುಂಬ ನಮ್ಮ ಸಾಮ್ರಾಜ್ಯವಾಗಬಹುದು. ಈ ಪ್ರಸಂಗದಲ್ಲಿ ನಾವು ಮುಗ್ಗರಿಸಿದರೆ, ನಮ್ಮ ಇದ್ದ ರಾಜ್ಯವೂ ಹೋಗುವದು. ಮನುಷ್ಯನಿಗೇನು, ರಾಜ್ಯಕ್ಕೇನು, ಇಂಥ ಮಹತ್ವದ ಪ್ರಸಂಗವು ಒಂದೆಂದರೆ ಒಂದೇಸಾರೆ ಬರುವದು. ಆ ಪ್ರಸಂಗದಲ್ಲಿ ಮನುಷ್ಯನು ತನ್ನ ಪ್ರತಾಪದಿಂದ ತಲೆಯನ್ನಾದರೂ ಎತ್ತಬೇಕು, ಹೇಡಿತನದಿಂದ ರಸಾತಲಕ್ಕಾದರೂ ಇಳಿಯಬೇಕು. ಅಂಥ ಪ್ರಸಂಗವೇ ಈಗ ನಿಮಗೆ, ನಿಮ್ಮ ರಾಜ್ಯಕ್ಕೆ ಒದಗಿರುತ್ತದೆಂದು ತಿಳಿಯಿರಿ. ಈ ಪ್ರಸಂಗದಲ್ಲಿ ನೀವು ಎದೆಗೊಟ್ಟು ಕಾದಿ ಜಯಶೀಲರಾಗಿ ಎಲ್ಲರ ಎದೆಯಮೇಲೆ ಕೂಡುವಿರೋ, ಹೇಡಿತನದಿಂದ ಹಿಂದಕ್ಕೆ ಸರಿದು, ವೈರಿಗಳ ತುಳಿತದಿಂದ ಹುಡಿಯಾಗಿ ಹಾರಿಹೋಗುವಿರೋ? ನಿಮ್ಮ ಸಾಮ್ರಾಜ್ಯದ ಗೌರವವನ್ನು ಕಾಯ್ದುಕೊಳ್ಳಿರಿ. ಈ ಕಾಲಕ್ಕೆ ನೀವು ನಿಮ್ಮ ಗೌರವವನ್ನು ಕಾಯ್ದುಕೊಂಡರೆ, ನಿಮ್ಮ ಶತ್ರುಗಳು ಇನ್ನೂ ಐವತ್ತುವರ್ಷ ತಲೆ ಮೇಲಕ್ಕೆತ್ತದ ಹಾಗಾಗುತ್ತದೆ; ತಲೆ ಮೇಲಕ್ಕೆತ್ತುವದೇಕೆ, ಶತ್ರುಗಳೇ ಉಳಿಯುವದಿಲ್ಲೆಂದು ತಿಳಿಯಿರಿ. ಅದರಿಂದ ನಿಮ್ಮ ಸಾಮ್ರಾಜ್ಯವು ಬೆಳೆಯಬಹುದು; ಮತ್ತು ಆಸೇತು ಹಿಮಾಚಲ ಏಕಛತ್ರಾಧಿಪತ್ಯವಾಗಬಹುದು. ಈ ಮುಸಲ್ಮಾನರು ಈಗ ೩೦೦ ವರ್ಷಗಳಲ್ಲಿ ಉತ್ತರಹಿಂದೂಸ್ಥಾನದೊಳಗೆ ಮನಸ್ಸಿಗೆ ಬಂದಂತೆ ಕುಣಿಯುತ್ತ ಬಂದಿರುತ್ತಾರೆ. ಅವರನ್ನು ಮಾತಾಡಿಸುವವರು ಯಾರೂ ಇಲ್ಲದಾಗಿದೆ. ಇನ್ನು ನಾವು ಆ ಕೆಲಸವನ್ನು ಮಾಡಬೇಕೆಂದು ಶ್ರೀ ನರಸಿಂಹನ ಇಚ್ಛೆಯಿದ್ದಂತೆ ತೋರುತ್ತದೆ. ಆದ್ದರಿಂದ ನೀವು ಯುದ್ಧದಲ್ಲಿ ಹಿಂಜರಿಯದೆ, ವಿಜಯನಗರದ ಸಾಮ್ರಾಜ್ಯದ ಗೌರವವನ್ನು ಕಾಯಿರಿ, ಎಂದು ಹೇಳುತ್ತಿದ್ದನು.

ರಾಮರಾಜನು ಸ್ವಭಾವತಃ ಬಹು ಉದ್ಧಟನು. ಆತನ ಔದ್ಧತ್ಯದ ಮೂಲಕ ಬರಿಯ ಮುಸಲ್ಮಾನರೇ ಅಲ್ಲ ಸ್ವಜನರಲ್ಲಿ ಬಹುಜನರು ಆತನ ಶತ್ರುಗಳಾಗಿದ್ದರು; ಆದರೆ ರಾಮರಾಜನ ಮುಂದೆ ಅವರ ಆಟ ನಡೆಯುವಹಾಗಿಲ್ಲದ್ದರಿಂದ ಅವರು ಸುಮ್ಮನೆ ಕೈಮುಚ್ಚಿಕೊಂಡು ಕುಳಿತುಕೊಂಡಂತೆ ಆಗಿತ್ತು. ರಾಮರಾಜನು ಸದಾಶಿವರಾಜನನ್ನು ಸೆರೆಯಲ್ಲಿಟ್ಟು, ತಾನೇ ಅರಸನಾಗಿ ಕಾರಭಾರವನ್ನು ನಡಿಸುತ್ತಿದ್ದನಷ್ಟೆ? ಅವನು ವರ್ಷದಲ್ಲಿ ಒಂದು ದಿನ ಮಾತ್ರ ಸದಾಶಿವರಾಯನ ಪಾದವಂದನ ಮಾಡಿ ಆತನಿಗೆ ಅರಸುತನದ ಮರ್ಯಾದೆಯನ್ನು ನಡಿಸುತ್ತಿದ್ದನು. ಈ ಕಾರಣದಿಂದ ಸದಾಶಿವರಾಜನ ಪಕ್ಷದವರು ರಾಮರಾಜನ ವೈರಿಗಳಾಗಿದ್ದರು. ಕೆಲವರು ರಾಮರಾಜನ ಉದ್ಧಟತನಕ್ಕಾಗಿ ಆತನನ್ನೂ, ಆತನ ಇಬ್ಬರು ಬಂಧುಗಳನ್ನೂ ಅಂದರೆ ತಿರುಮಲ— ವೇಂಕಟಾದ್ರಿಗಳನ್ನೂ ದ್ವೇಷಿಸುತ್ತಿದ್ದರು. ಕೆಲವರು ರಣಮುಸ್ತಖಾನನನ್ನು ಹಿಂದು ಮುಂದಿನ ವಿಚಾರವಿಲ್ಲದೆ ರಾಮರಾಜನು ಪರಿಸುತ್ತ ನಡೆದದ್ದನ್ನು ನೋಡಿ, ಮಾತ್ಸರ್ಯ ತಾಳಿ ದ್ವೇಷಿಗಳಾಗಿದ್ದರು; ಆದರೆ ನಾಲ್ವರು ಮುಸಲ್ಮಾನ ಬಾದಶಹರು ಒಟ್ಟುಗೂಡಿ ತಮ್ಮ ಮೇಲೆ

ಸಾಗಿ ಬರುವದನ್ನು ನೋಡಿ ವಿಜಯನಗರದವರು ತಮ್ಮೊಳಗಿನ ಅಂತಃಕಲಹಗಳನ್ನು ಮರೆತರು. ಅವರು ಮುಸಲ್ಮಾನರ ಮೇಲೆ ಮುಗಿಬಿದ್ದು ಹೋಗಿ, ಅವರನ್ನು ದಿಕ್ಕಾಪಾಲಾಗಿ ಯಾವಾಗ ಓಡಿಸೇವೆಂದು ಸ್ಫೂರ್ತಿಗೊಳ್ಳಹತ್ತಿದರು. ಈ ಸಂಬಂಧದಿಂದ ರಣಮಸ್ತಖಾನನ ಉತ್ಕಂಠೆಯನ್ನೂ, ಈರ್ಷೆಯನ್ನೂ ವರ್ಣಿಸುವದಂತು ತೀರ ಅಸಾಧ್ಯವಾಗಿತ್ತು, ಆತನು ವಿಜಯನಗರದ ರಾಜ್ಯದ ಅಭಿಮಾನವನ್ನು ವಹಿಸುವಾಗ ತಾನು ಮುಸಲ್ಮಾನ ಜಾತಿಯವನೆಂಬದನ್ನು ಸಹ ಮರೆಯುವಂತೆ ತೋರುತ್ತಿತ್ತು, ಆತನು ಜನರಿಗೆ— ನಾನು ವಿಜಯನಗರದ ರಾಯರನ್ನು ಕೂಡಿದ್ದರಿಂದ, ಸ್ವಜನದ್ರೋಹಿಯೂ, ಸ್ವಾಮಿದ್ರೋಹಿಯೂ ಆದೆನೆಂದು ಜನರು ಅನ್ನಬಹುದು; ಆದರೆ ನಾನು ಅಂಥ ಸ್ವಾಮಿದ್ರೋಹವನ್ನೇನೂ ಮಾಡಿರುವದಿಲ್ಲೆಂದು ಸ್ಪಷ್ಟವಾಗಿ ಹೇಳುವೆನು. ವಿಜಾಪುರದ ಬಾದಶಹರ ಹಿತವನ್ನು ನಾನು ಮನಮುಟ್ಟಿ ಸಾಧಿಸುತ್ತಿರಲು, ಬಾದಶಹರು ನಿಷ್ಕಾರಣವಾಗಿ ನನ್ನನ್ನು ಅಪಮಾನಗೊಳಿಸಿದರು. ಅದರ ಸೇಡು ತೀರಿಸುವದಕ್ಕಾಗಿ, ನಾನು ಹೇಳಿಕೇಳಿ ರಾಯರನ್ನು ಕೂಡಿಕೊಂಡಿದ್ದೇನೆ. ಬಹುಜನ ಮುಸಲ್ಮಾನರು ಹಿಂದೂ ಜನರ ದಂಡಿನಲ್ಲಿರುವರಷ್ಟೇ? ಅವರಲ್ಲಿ ನಾನೊಬ್ಬನು. ಆದರೆ ಬಾದಶಹರಿಂದ ಅಪಮಾನದಿಂದಾದ ಬಾದಶಹರ ಮೇಲೆ ರೊಚ್ಚಿಗೆದ್ದು ನಾನು ಒಳಗಿಂದೊಳಗೆ ರಾಮರಾಜರಿಗೆ ಸಹಾಯ ಮಾಡಿದರೆ, ಸ್ವಾಮಿದ್ರೋಹವು ನನ್ನ ಪಾಲಿಗೆ ಬರುತ್ತಿತ್ತು, ಹಾಗೇನು ನಾನು ಮಾಡಿರುವುದಿಲ್ಲ, ನಾನು ಇತ್ತ ಬಂದದ್ದರಿಂದ ಮುಸಲ್ಮಾನ ಬಾದಶಹರ ಹಾನಿಯು ಎಷ್ಟರಮಟ್ಟಿಗೆ ಆಗಿರುತ್ತದೆಂಬದನ್ನು ಮಹಾರಾಜರು ಯುದ್ಧದಲ್ಲಿಯ ನನ್ನ ಪರಾಕ್ರಮವನ್ನು ನೋಡಿ ತರ್ಕಿಸಬಹುದು, ಎಂದು ನುಡಿಯುತ್ತಿದ್ದನು. ಅದನ್ನು ಕೇಳಿ ರಾಮರಾಜನು— "ರಕ್ತಸಂಬಂಧವಿದ್ದ ಕಡೆಗೆ ಮನಸ್ಸು ಒಲಿಯತಕ್ಕದ್ದು" ಎಂದು ತರ್ಕಿಸಿ, ಕೌತುಕಪಡುತ್ತಿದ್ದನು. ಕೌತುಕದ ಭರದಲ್ಲಿ ಆತನು ಏಕಾಂತದಲ್ಲಿ ರಣಮಸ್ತಖಾನನನ್ನು ಅಪ್ಪಿ ಕೊಂಡು "ತಮ್ಮಾ ನೀನು ನನ್ನ ಹೊಟ್ಟೆಯ ಮಗನು" ಎಂದು ಹೇಳಿ, ಎಲ್ಲ ವೃತ್ತಾಂತವನ್ನು ಆತನಿಗೆ ತಿಳಿಸಬೇಕೆಂದು ಮಾಡಿದ್ದನು. ಆದರೆ ಯಾರಿಗೆ ಗೊತ್ತು? ತನ್ನ ವೃತ್ತಾಂತವನ್ನು ಕೇಳಿ ಆತನಿಗೆ ಸಮಾಧಾನವಾಗುವದೊತ್ತಟ್ಟಿ ಗುಳಿದು, ಆತನು ಸಿಟ್ಟಿಗೆದ್ದರೆ ಮಾಡುವದೇನು? ಎಂದು ಶಂಕಿಸಿ, ರಾಮರಾಜನು ಅಷ್ಟಕ್ಕೆ ಸುಮ್ಮನಾಗುತ್ತಿದ್ದನು. ವಿಜಯನಗರದ ರಾಜ್ಯದಲ್ಲಿ ಅರಬ, ಹಾಗು ಪಠಾಣ ಜನರ ವರ್ಚಸ್ಸು ವಿಶೇಷವಾಗಿತ್ತು ಹಿಂದೂ ಜನರು ಬಹುದಿನ ಸಾಮ್ರಾಜ್ಯಸುಖವನ್ನು ಅನುಭವಿಸಿದ್ದರಿಂದ ಡೌಲಿಗೆ ಬಿದ್ದಿದ್ದರು. ಅವರಿಗೆ ಅಹಂಭಾವ ಬಹಳ. ಯುದ್ಧಪ್ರಸಂಗ ಒದಗಿದಾಗ ಅವರನ್ನು ಒಟ್ಟು ಗೂಡಿಸಬೇಕಾದರೆ ಸಾಕು ಬೇಕಾಗುತ್ತಿತ್ತು, ಅದರಿಂದ ಯುದ್ಧಾರಂಭಕ್ಕೆ ಮುಸಲ್ಮಾನ ಸೈನಿಕರೇ, ವೈರಿಗಳಿಗೆ ಎದುರಾಗಬೇಕಾಗುತ್ತಿತ್ತು, ಹಿಂದಿನಿಂದ ಹಿಂದೂ ಸೈನ್ಯದ ಯೋಜನೆಯಾಗುವ ಪ್ರಸಂಗ ಬರುತ್ತಿತ್ತು ಈವರೆಗಾದ ಅನೇಕ ಕಾಳಗಗಳಲ್ಲಿ ಕೇವಲ ಮುಸಲ್ಮಾನ ದಂಡಾಳುಗಳ ಸಹಾಯದಿಂದಲೇ ವಿಜಯನಗರದವರಿಗೆ ಜಯವು ದೊರೆತಿತ್ತು, ಇದರಿಂದ ಮುಸಲ್ಮಾನ ಸೈನಿಕರ ವರ್ಚಸ್ಸು ವಿಜಯನಗರದ ರಾಜ್ಯದಲ್ಲಿ ಹೆಚ್ಚಲಿಕ್ಕೆ ಕಾರಣವಾಗಿತ್ತು;

ಆದರಿಂದ ಮುಸಲ್ಮಾನ ಸೈನ್ಯದ ಮುಖ್ಯಸ್ಥನಾಗಿರುವ ರಣಮಸ್ತಖಾನನ ಮನಸ್ಸನ್ನು ನೋಯಿಸುವದು ಈ ಪ್ರಸಂಗದಲ್ಲಿ ಹಿತಕರವಲ್ಲೆಂದು ತಿಳಿದು, ರಣಮಸ್ತಖಾನನ ಜನ್ಮವೃತ್ತಾಂತ ವನ್ನು ಮತ್ತೆ ಯಾವಾಗಾದರೂ ಅವನಿಗೆ ಹೇಳೋಣವೆಂದು ರಾಮರಾಜನು ಸ್ಮರಿಸುತ್ತ ಬಂದಿದ್ದನು.

## ರಣಮಸ್ತಖಾನನ ಕಪಟನಾಟಕವು

ರಣಮಸ್ತಖಾನನು ತನ್ನ ಮಗನೆಂಬದು ರಾಮರಾಜನಿಗೆ ತೊಂಬತ್ತರೊಂಬತ್ತು ಪಾಲು ಗೊತ್ತಾದಂತಾಗಿತ್ತು. ಆದರಲ್ಲಿ ರಣಮಸ್ತನ ರೂಪ ತೇಜಸ್ವಿಗಳು ರಾಯನ ಮನಸ್ಸನ್ನು ಪೂರ್ಣವಾಗಿ ಆಕ್ರಮಿಸಿದ್ದರಿಂದ, ರಣಮಸ್ತನೆಂದರೆ ರಾಮರಾಜನು ಜೀವಕಳೆದುಕೊಳ್ಳುತ್ತಿದ್ದನು. ರಣಮಸ್ತನು ಒಂದುಕ್ಷಣ ಮರೆಯಾದರೆ ರಾಮರಾಜನಿಗೆ ಚಡಪಡಿಕೆಯಾಗುತ್ತಿತ್ತು. ರಾಯನು ಪ್ರೇಮಾಂಧ ನಾಗಿಹೋಗಿದ್ದನು; ಆದರೆ ರಣಮಸ್ತನ ಮನಸ್ಸು ಮಾತ್ರ ಶುದ್ಧವಾಗಿದ್ದಿಲ್ಲ. ಆ ದುಷ್ಟನು ನೂರಜಹಾನಳ ಮುಂದೆ ಮಾಡಿದ್ದ ತನ್ನ ಪ್ರತಿಜ್ಞೆಯನ್ನು ಕೊನೆಗಾಣಿಸಲು ಹೊಂಚುಹಾಕಿ ಕುಳಿತಿದ್ದನು. ಕಪಟನಾಟಕದ ಹೊರತು ರಾಮರಾಜನ ಶಿರಸ್ಸು ಹಾರಿಸುವದು ಆಗಬೇಕೆಂದು ಆತನು ತಿಳಿದಿದ್ದನು. ವಿಜಾಪುರಕ್ಕೆ ಹೋದಾಗ, ಆ ದುಷ್ಟ ರಣಮಸ್ತನ ಅಪಮಾನವಾದಂತೆ ಜನರಿಗೆಲ್ಲ ತೋರಿತು. ಆದರೆ ಬಾದಶಹನ, ಹಾಗು ರಣಮಸ್ತನ ಗುಪ್ತಾಲೋಚನೆಗಳು ನಡೆದು, ಕಪಟನಾಟಕವನ್ನು ರಚಿಸುವದಕ್ಕಾಗಿಯೇ ಆ ಪ್ರಸಂಗವು ಒದಗಿತ್ತು. ರಣಮಸ್ತನನ್ನು ಮುಖ್ಯವಾಗಿ ಒಂದು ಚಿಂತೆಯು ಯಾವಾಗಲೂ ಬಾಧಿಸುತ್ತಿತ್ತು. ತನ್ನ ಕುಲೀನತೆಯ ಸಂಬಂಧದಿಂದ ಶಂಕಿಸಿ, ನೂರಜಹಾನಳು ತನ್ನನ್ನು ಎಲ್ಲಿ ಲಗ್ನವಾಗದೆ ಬಿಡುವಳೋ ಎಂದು ಆತನು ಯಾವಾಗಲೂ ಆಲೋಚಿಸುತ್ತಿದ್ದನು. ಆ ಆಲೋಚನೆಯೊಂದೇ ಆತನ ಶರೀರದ ಕ್ಷೀಣತೆಗೆ ಕಾರಣವಾಗಿತ್ತು. ಆದರಲ್ಲಿ ಮಾಸಾಹೇಬರು ವಿಜಾಪುರಕ್ಕೆ ಹೋಗಿಬಂದು, ನೂರಜಹಾನಳ, ಪ್ರಾಪ್ತಿಯ ಸಂಬಂಧದಿಂದ ನಿರಾಶೆಯನ್ನು ಪ್ರಕಟಿಸಿದಾಗಿನಿಂದಂತು, ಆತನ ಚಿಂತೆಯು ಮತ್ತಿಷ್ಟು ಹೆಚ್ಚಿತು; ಆದರೂ ತಾನು ತನ್ನ ಪ್ರತಿಜ್ಞೆಯನ್ನು ನೆರವೇರಿಸಿ, ನೂರಜಹಾನಳ ಪಾಣಿಗ್ರಹಣದ ಪಾತ್ರತೆಯನ್ನು ಪಡೆಯುದನ್ನಂತು ಪಡೆಯಬೇಕೆಂದು ಆತನು ನಿಶ್ಚಯಿಸಿದ್ದನು. ಈತನ ನಿಶ್ಚಯಕ್ಕೆ ರಾಮರಾಜನ ಪುತ್ರವ್ಯಾಮೋಹವು ಅನಾಯಾಸವಾಗಿ ಅನುಕೂಲಿಸಿತು. ವಿನಾಶಕಾಲಕ್ಕನುಸರಿಸಿ ರಣಮಸ್ತನ ಹುಚ್ಚು ರಾಮರಾಜನ ತಲೆಗೇರಿದಂತೆ, ರಣಮಸ್ತನ ಇಷ್ಟಾರ್ಥಪೂರ್ತಿಯು ಸಮೀಪಿಸಹತ್ತಿತ್ತು. ಧೂರ್ತನಾದ ವಿಜಾಪುರದ ಬಾದಶಹನಂತು ಅಂತರಂಗದಲ್ಲಿ ರಣಮಸ್ತನಿಗೆ ಪೂರ್ಣ ಅನುಕೂಲವಾಗಿ, ಬಹಿರಂಗದಲ್ಲಿ ಆತನನ್ನು ಸಂಪೂರ್ಣ ನಿರಾಕರಿಸುತ್ತಿದ್ದನು. ರಣಮಸ್ತನ ಕೃತಿಗಳೆಲ್ಲ ಬಾದಶಹನ ಅತಿ ಗುಪ್ತವಾದ ಆಲೋಚನೆಯಿಂದಲೇ ನಡೆದಿದ್ದವು. ವಿಜಯನಗರದ ರಾಜಕಾರಣದ ಸುದ್ದಿಗಳೆಲ್ಲ

ರಣಮಸ್ತಖಾನನ ಮುಖಾಂತರ ಬಾದಶಹನ ಕಿವಿಗೆ ಮುಟ್ಟುತ್ತಿದ್ದವು; ಆದರೆ ಇದರ ಗಂಧವು ಕೂಡ ಯಾರಿಗೂ ಗೊತ್ತಾಗಿದ್ದಿಲ್ಲ. ರಣಮಸ್ತನ ಒಳಸಂಚುಗಳು ಬಾದಶಹನಿಗೂ, ಆತನ ಮುಖ್ಯಮಂತ್ರಿಗಳಿಗೂ ಮಾತ್ರ ಗೊತ್ತಿದ್ದವು. ಉಳಿದ ಮುಸಲ್ಮಾನರೆಲ್ಲ ರಣಮಸ್ತನನ್ನು ದ್ರೋಹಿಯೆಂತಲೇ ಭಾವಿಸಿದ್ದರು. ಸ್ವತಃ ಮಾಸಾಹೇಬರಿಗೂ ಈ ಗುಪ್ತಸಂಚಿನ ಸುದ್ದಿಯಿದ್ದಿಲ್ಲ.

ಹೀಗಿರುವಾಗ, ರಾಮರಾಜನು ರಣಮಸ್ತಖಾನನನ್ನು ಒಲಿಸಿಕೊಳ್ಳುವದಕ್ಕಾಗಿ ಶುದ್ಧಾಂತಃಕರಣದಿಂದ ಮನಃಪೂರ್ವಕವಾಗಿ ಪ್ರೀತಿಸುತ್ತಿರಲು, ದುಷ್ಟ ರಣಮಸ್ತನು ಆ ರಾಯನನ್ನು ಸಂಪೂರ್ಣವಾಗಿ ಮೋಸಗೊಳಿಸಿದನೆಂದು ಹೇಳಬಹುದು. ವಿಜಾಪುರದ ಎಲ್ಲ ಮುಸಲ್ಮಾನ ಬಾದಶಹರ ಸೈನ್ಯಗಳು ವಿಜಯನಗರದ ಮೇಲೆ ಸಾಗಿಬರುತ್ತಿರುವಾಗ, ಆ ಸೈನ್ಯಗಳಿಗೆ ಅನುಕೂಲವಾಗಿ ವಿಜಯನಗರದ ಸೈನ್ಯದಲ್ಲಿ ಕಪಟವ್ಯೂಹವನ್ನು ರಚಿಸಲಿಕ್ಕೆ ರಣಮಸ್ತನು ಆರಂಭಿಸಿದನು. ರಾಮರಾಜನು ತನ್ನನ್ನು ಅಂಗರಕ್ಷಕನಾಗಿ ನಿಯಮಿಸಿಕೊಂಡದ್ದರಿಂದ, ರಣಮಸ್ತನಿಗೆ ಅಂತರಂಗದಲ್ಲಿ ಸಂತೋಷವಾಗಿತ್ತು. ತಾನು ಹಲವು ಪಠಾಣರ ಹಾಗು ಅರಬರ ಗುಪ್ತಚಾರರನ್ನು ಕಳಿಸಿ ವೈರಿಗಳ ಕಡೆಯ ಗುಪ್ತಸಂಗತಿಗಳ ಗೊತ್ತು ಹಚ್ಚಿಸತೊಡಗಿರುವೆನೆಂದು ರಣಮಸ್ತನು ರಾಮರಾಜನ ಮುಂದೆ ಹೇಳುತ್ತಲಿದ್ದನು; ಆ ಹೇಳಿಕೆಯಂತೆ ಎರಡು ದಿನಕ್ಕೆ ಮೂರು ದಿನಕ್ಕೆ ಒಮ್ಮೆ ಹೊಸಹೊಸ ಸುದ್ದಿಗಳನ್ನು ಹುಟ್ಟಿಸಿ, ತನ್ನ ಚಾರರ ಮುಖಾಂತರ ರಾಮರಾಜನಿಗೆ ತಿಳಿಸಹತ್ತಿದನು. ಆ ಸುದ್ದಿಗಳಲ್ಲಿ ಎಷ್ಟೋ ಸುದ್ದಿಗಳು ಅಸಂಭವವಾದವುಗಳಿದ್ದರೂ, ಆ ರಣಮಸ್ತನ ಚಾರರ ಮುಖದಿಂದ ಹೊರಟವಾದ್ದರಿಂದ, ರಾಮರಾಜನಿಗೆ ಸಂಭವವಾಗಿ ತೋರುತ್ತಿದ್ದವು. ವಿಜಯನಗರದ ದೂರದರ್ಶಿಗಳಾದ ಮುತ್ಸದ್ದಿಗಳು, ಆ ಸುದ್ದಿಗಳ ಅಸಂಭವತೆಯನ್ನು ತೋರಿಸಲು ರಾಮರಾಜನು ರಣಮಸ್ತನ ಸಮಕ್ಷಮ ಅವರ ಮಾತನ್ನು ನಿರಾಕರಿಸಿ, ಉಪಹಾಸ ಮಾಡಹತ್ತಿದನು. ಆದ್ದರಿಂದ ಮುಂದೆ ರಾಮರಾಜನಿಗೆ ಹಿತವಚನಗಳನ್ನು ಹೇಳುವವರೇ ಇಲ್ಲದಾದರು. ಈ ಮೊದಲೆ ರಾಮರಾಜನು ಶತ್ರುಗಳ ಸೈನ್ಯವನ್ನು ತುಂಗಭದ್ರೆಯ ಕಾಲಹೊಳೆ ಯಲ್ಲಿ ತರುಬಬೇಕೆಂದು ಯೋಚಿಸಿದ್ದನಷ್ಟೇ; ಆದರೆ ಬಾದಶಹನು ಶತ್ರುವನ್ನು ಬೈಲಿಗೆಳೆಯ ಬೇಕೆಂದು ಯೋಚಿಸುತ್ತಿದ್ದನು.

ಬಾದಶಹನು ಈ ವಿಚಾರಕ್ಕನುಸರಿಸಿ ರಣಮಸ್ತನು ಕಪಟನಾಟಕವನ್ನು ರಚಿಸಬೇಕಾಗಿತ್ತು. ಹೀಗಿರುವಾಗ, ಒಂದು ದಿನ ರಣಮಸ್ತಖಾನನು ರಾಮರಾಜನ ಬಳಿಗೆ ತನ್ನ ಇಬ್ಬರು ಗುಪ್ತಚಾರರನ್ನು ಕರಕೊಂಡು ಬಂದನು. ಅವರಲ್ಲಿ ಒಬ್ಬನು ಅರಬನಿದ್ದನು; ಮತ್ತೊಬ್ಬನು ಪಠಾಣನಿದ್ದನು. ರಾಮರಾಜನ ಬಳಿಗೆ ಬೇಕಾದಾಗ ಹೋಗಲಿಕ್ಕೆ ರಣಮಸ್ತನಿಗೆ ಪ್ರತಿಬಂಧವಿದ್ದಿಲ್ಲ. ರಣಮಸ್ತನು ರಾತ್ರಿ ಆ ಗುಪ್ತಚಾರರೊಡನೆ ರಾಮರಾಜನ ಬಳಿಗೆ ಹೋಗಿ— "ಸರಕಾರ, ಇವರಿಬ್ಬರೂ ಇದೇ ಈಗ ಬೇರೆಬೇರೆ ಸ್ಥಾನಗಳಿಂದ ಶತ್ರುಗಳ ಕಡೆಯ ಸುದ್ದಿಗಳನ್ನು ತಂದಿದ್ದಾರೆ. ಸುದ್ದಿಗಳು ಬಹುಮಹತ್ವದ್ದಿರುತ್ತವೆ. ತಾವು ಅವನ್ನಷ್ಟು ಕೇಳಿಕೊಂಡು ಅವರನ್ನು ಕಳಿಸಿಕೊಡಬೇಕು; ಆಮೇಲೆ ಏನು, ಮಾಡಬೇಕೆಂಬದನ್ನು ಕುರಿತು ಆಲೋಚಿಸೋಣ" ಎಂದು ಹೇಳಿದನು. ಅದನ್ನು ಕೇಳಿ ರಾಮರಾಜನು ಸ್ವಾಭಾವಿಕವಾಗಿಯೇ

ಅತ್ಯುತ್ಕಂಠೆಯಿಂದ ಆ ಯವನದೂತರಿಗೆ, ಸುದ್ದಿಯೇನೆಂದು ಕೇಳಿದನು. ಅದಕ್ಕೆ ಅವರು— ಸರಕಾರ ಅಲ್ಲಿ ಆದಿಲಶಹನು ಈವರೆಗೆ ತುಂಗಭದ್ರೆಯ ಕಾಲಹೊಳೆಯ ಮಾರ್ಗವಾಗಿ ನಮ್ಮ ಮೇಲೆ ಸಾಗಿಬರಬೇಕೆಂದು ಮಾಡಿದ್ದನಷ್ಟೆ; ಆದರೆ ಅದು ಕೇವಲ ತೋರಿಕೆಗೆ ಮಾಡಿದ್ದು. ಆತನು ಉತ್ತರದಿಕ್ಕಿನಲ್ಲಿ ಬೇರೊಂದು ಕಡೆಯಲ್ಲಿ ತುಂಗಭದ್ರೆಯನ್ನು ದಾಟಿ, ನಮ್ಮ ರಾಜ್ಯದಲ್ಲಿ ಬರಬೇಕೆಂದು ಮಾಡಿದ್ದಾನೆ. ಈಗ ಆತನು ನಿಲ್ಲಿಸಿರುವ ಸ್ಥಳದಲ್ಲಿಯೇ ತನ್ನ ಸೈನ್ಯವನ್ನು ತೋರಿಕೆಗಾಗಿ ನಿಲ್ಲಿಸಿ, ಆರಿಸಿದ ಬೇರೆ ಕೆಲವು ದಂಡಾಳುಗಳನ್ನೂ, ತನ್ನ ಖಾಸ ಸೈನ್ಯವನ್ನೂ ತಕ್ಕೊಂಡು ಉತ್ತರಕಡೆಯ ಸ್ಥಳದಲ್ಲಿ ಹೊಳೆಯನ್ನು ದಾಟಿ, ನಮ್ಮ ರಾಜ್ಯವನ್ನು ಸೇರುವವನಿದ್ದಾನೆ. ಆತನು ಪ್ರವೇಶಿಸಬೇಕೆಂದು ಮಾಡಿರುವ ಸ್ಥಳದಲ್ಲಿ ನಮ್ಮ ಸೈನ್ಯವು ಇರುವದಿಲ್ಲ. ಆ ಸ್ಥಳವನ್ನು ನಾವು ತೋರಿಸುವೆವು. ಮುಂದೆ ಏನುಮಾಡ ಬೇಕೆಂಬದನ್ನು ತಾವು ಯೋಚಿಸಬೇಕು. ನಿಮ್ಮ ಶೂರ ಬಂಧುಗಳ ಸೈನ್ಯದೊಡನೆ ಈಗ ನಿಂತಿರುವ ಸ್ಥಳದಲ್ಲಿ ಶತ್ರುಗಳು ಹೊಳೆಯನ್ನು ದಾಟುವದಿಲ್ಲೆಂಬದು ನಿಶ್ಚಯವು. ನಿಮ್ಮ ಬಂಧುಗಳ ಭಯವು ಅವರಿಗೆ ವಿಶೇಷವಾಗಿರುತ್ತದೆ.

ಗುಪ್ತಚಾರರ ಈ ಮಾತುಗಳನ್ನು ಕೇಳಿ ರಾಮರಾಜನು ಅವರನ್ನು ಕುರಿತು ಏನೋ ವಿಚಾರಿಸಬೇಕೆನ್ನುತ್ತಿರಲು, ಧೂರ್ತನಾದ ರಣಮಸ್ತಖಾನನು ಅದಕ್ಕೆ ಆಸ್ಪದಕೊಡದೆ, ಕಣ್ಣಸನ್ನೆಯಿಂದ ಚಾರರಿಗೆ ಹೊರಗೆ ಹೋಗಿ ನಿಲ್ಲಲು ಆಜ್ಞಾಪಿಸಿದನು. ಅವರಾದರೂ ತಟ್ಟನೆ ಅಲ್ಲಿಂದ ಹೊರಟುಹೋದರು. ಅವರು ರಾಮರಾಜನಿಗೆ ಪ್ರಶ್ನೆಮಾಡಲಿಕ್ಕೆ ಆಸ್ಪದವನ್ನೇ ಕೊಡಲಿಲ್ಲ. ಅವರಿಬ್ಬರು ಚಾರರು ಹೋದಕೂಡಲೆ ರಣಮಸ್ತಖಾನನು ರಾಮರಾಜನನ್ನು ಕುರಿತು— ''ಹುಜೂರ, ........'' ಎಂದು ಮಾತಾಡುತ್ತಿರಲು, ರಾಮರಾಜನು ನಡುವೇ ಬಾಯಿಹಾಕಿ— ಎಲಾ, ನಾನು ನಿನ್ನನ್ನು ಮಗನೆಂದು ಭಾವಿಸಿರಲು ನೀನು ''ಹುಜೂರ'' ''ಸರಕಾರ'' ಎಂದು ಕರೆಯುತ್ತೀಯಲ್ಲ! ಇನ್ನುಮೇಲೆ ಹಾಗೆ ಕರೆಯಬೇಡ, ಎಂದು ಹೇಳಿದನು. ರಣಮಸ್ತನು ತಂದ ಸುದ್ದಿಯಿಂದ ರಾಮರಾಜನಿಗೆ ಪ್ರೇಮೋದ್ರೇಕವಾದಂತಾಗಿತ್ತು, ರಣಮಸ್ತನ ಕಪಟವು ಆತನಿಗೆ ಹೊಳೆಯಲಿಲ್ಲ. ರಾಮರಾಜನ ಪ್ರೇಮೋದ್ಗಾರಗಳನ್ನು ಕೇಳಿ ರಣಮಸ್ತಖಾನನು ನಕ್ಕು—ತಾವು ನನ್ನನ್ನು ಮಗನೆಂದು ಭಾವಿಸುತ್ತಿದ್ದರೂ, ನಾನು ನಿಮ್ಮ ನೌಕರನೆಂಬದನ್ನು ನಾನು ಹ್ಯಾಗೆ ಮರೆಯಬೇಕು? ಅದಿರಲಿ, ನಾನು ಹ್ಯಾಗೆ ಕರೆದರೇನು? ನನ್ನ ಮೇಲೆ ತಮ್ಮ ಪ್ರೇಮವಿರುವದೊಂದು ಮುಖ್ಯ ಮಾತು. ನನಗೆ ಈಗ ತೋರುವದೇನೆಂದರೆ, ಚಾರರು ಹೇಳಿರುವ ಸುದ್ದಿಯ ಉಪಯೋಗವನ್ನು ನಾವು ಬೇಗನೆ ಮಾಡಿಕೊಂಡರೇ ಪ್ರಯೋಜನವಾಗುವದು. ನೀವು ಈಗ ಸೈನ್ಯವನ್ನು ವಿಭಾಗಿಸಿದ್ದು ಶತ್ರುಗಳಿಗೆ ಅನಾಯಾಸವಾಗಿ ಅನುಕೂಲಿಸಿದಂತೆ ಕಾಣುತ್ತದೆ. ತಾವು ಆಜ್ಞಾಪಿಸಿದರೆ ನಾನು ನನ್ನ ಸೈನ್ಯದೊಡನೆ ಆ ಉತ್ತರದಿಕ್ಕಿನ ಕಾಲಹೊಳೆಯ ಕಡೆಗೆ ಹೋಗಿ ಶತ್ರುಗಳ ಸಮಾಚಾರವನ್ನು ತಕ್ಕೊಳ್ಳುವೆನು. ಆ ಸ್ಥಳದ ಗುರುತು ನನಗೆ ಚೆನ್ನಾಗಿರುತ್ತದೆ. ಅಲ್ಲಿ ಕಾಲಹೊಳೆಯು ಸುಲಭವಾದದ್ದಿದ್ದರೂ, ಹಾದಿಯು ಬಹು ಕಿರಿಯ ಇರುತ್ತದೆ. ಬಹಳವಾದರೆ ನಾಲ್ಕು ಜನರು ಮಾತ್ರ ಸಾಲಾಗಿ ಆ ಹಾದಿಯಲ್ಲಿ ಬರಬಹುದು. ಹಾದಿಯ ಎಡಬಲಗಳಲ್ಲಿ ಮಡುವುಗಳು ಇರುವವು. ಹಾದಿಯು ಸುಲಭವಾದದ್ದೆಂದು ತಿಳಿದು ದಂಡಾಳುಗಳು ಕುರಿಯ

ಹಾಗೆ ನುಗ್ಗಬಹುದು. ಆಗ ನಾವು ಅಲ್ಲಿ ಇರದಿದ್ದರೆ ಕಷ್ಟಪಟ್ಟಾದರು ಅವರು ಹೊಳೆಯನ್ನು ದಾಟಿ ಬರಬಹುದು; ಆದರೆ ನಾವು ಅಲ್ಲಿಗೆ ಹೊತ್ತಿಗೆ ಹೋಗಿ ಮುಗಿಬಿದ್ದರೆ, ಶತ್ರುಗಳಿಗೆ ಜಲಸಮಾಧಿಯು ದೊರೆಯುವದು. ಇದರ ಮೇಲೆ ತಮ್ಮ ಅಪ್ಪಣೆಯಂತೆ ನಡೆದು ಕೊಳ್ಳುವೆನು, ಎಂದು ಹೇಳಿದನು. ಅದಕ್ಕೆ ರಾಮರಾಜ ರಣಮಸ್ತನ ಬೆನ್ನಮೇಲೆ ಕೈಯಾಡಿಸಿ—

ರಾಮರಾಜ— ನೀನು ನನ್ನನ್ನು ಅಗಲಿ ದೂರ ಹೋಗಲಾಗದು. ನನ್ನ ಮೇಲೆ ಶತ್ರುಗಳು ಏರಿಬಂದ ಪಕ್ಷದಲ್ಲಿ ನೀನು ಹತ್ತರ ಇರಬೇಕು. ನನ್ನ ಎಡಬಲದಲ್ಲಿ ನನ್ನ ಇಬ್ಬರು ಬಂಧುಗಳೂ, ಮಧ್ಯದಲ್ಲಿ ನನ್ನ ಬಳಿಯಲ್ಲಿ ನೀನೂ ಇರಲೇಬೇಕು. ನನ್ನ ಸಂರಕ್ಷಣದ ವ್ಯವಸ್ಥೆಯನ್ನು ನಾನು ಮಾಡಿಕೊಳ್ಳುವದಕ್ಕಿಂತ, ನಿನ್ನ ಶೌರ್ಯವನ್ನು ಕಣ್ಣುಮುಟ್ಟಿ ನೋಡುವ ವ್ಯವಸ್ಥೆಯನ್ನು ನಾನು ಮೊದಲು ಮಾಡಿಕೊಳ್ಳಬೇಕಾಗಿರುತ್ತದೆ; ಯಾಕಂದರೆ ಪರಾಕ್ರಮದಲ್ಲಿ ನನ್ನ ಆದರಕ್ಕೆ ನೀನು ಪಾತ್ರನಿರುತ್ತೀಯೆಂದು ನಾನು ಈ ಮೊದಲೇ ತರ್ಕಿಸಿರುವದು ನಿಜವೆಂದು ನನ್ನ ಅನುಭವಕ್ಕೆ ಬರಬೇಕಾಗಿರುತ್ತದೆ.

ರಣಮಸ್ತಖಾನನ—ತಮ್ಮ ಸಂರಕ್ಷಣದ ವ್ಯವಸ್ಥೆಯನ್ನು ಎರಡನೆಯವರು ಯಾಕೆ ಮಾಡಬೇಕು? ನೂರಾರು ಜನರು ಒಮ್ಮೆಲೆ ನಿಮ್ಮ ಮೈಮೇಲೆ ಬಂದರೂ ನೀವು ಅವರಿಗೆ ಸೊಪ್ಪುಹಾಕುವಹಾಗಿಲ್ಲ. ತಮ್ಮ ಬಳಿಯಲ್ಲಿ ನಾನೂ ಇರುವದರಿಂದ ನನ್ನ ಶೌರ್ಯವು ತಮ್ಮ ಕಣ್ಣಿಗೆ ಬಿದ್ದು ನನ್ನ ಲಾಭವು ಮಾತ್ರ ಆಗುವದು.

ರಾಮರಾಜ— ನೀನು ಅಂಥ ಸಮರ ಪಾಂಡಿತ್ಯವನ್ನು ತೋರಿಸುವೆ ಎಂಬದನ್ನು ನಾನು ಬಲ್ಲೆನು. ನೀನು ನನ್ನ ಬಳಿಯಲ್ಲಿಯೇ ಇರು. ನಿನ್ನ ಚಾರರು ಹೇಳಿರುವ ಸುದ್ದಿಯ ಉಪಯೋಗ ವನ್ನು ಹ್ಯಾಗೆ ಮಾಡಿಕೊಳ್ಳಬೇಕೆಂಬದನ್ನು ನಾನು ಪೂರ್ಣವಾಗಿ ಆಲೋಚಿಸುತ್ತಿರುತ್ತೇನೆ. ಶತ್ರುಗಳು ತುಂಗಭದ್ರೆಯ ಹೊಳೆಯನ್ನು ದಾಟುವ ಹಾದಿಯನ್ನು ನಾನು ನೋಡುವದೇ ಇಲ್ಲ. ನಾವೇ ತುಂಗಭದ್ರೆಯನ್ನು ದಾಟಿಹೋಗಿ ತುಂಗೆ ಕೃಷ್ಣೆಗಳ ಮಧ್ಯದಲ್ಲಿ ಅವರೊಡನೆ ಕಾದಿ, ಅವರನ್ನು ಹಿಂದಕ್ಕಟ್ಟುವೆವು. ತುಂಗಭದ್ರೆಯ ತನಕ ಅವರನ್ನು ಬಾರದಂತೆ ಮಾಡಿಬಿಟ್ಟರೆ ಕಾಲಹೊಳೆಗಳ ವಾದವೇ ನಿಂತು ಹೋಗುವದು. ಶತ್ರುಗಳು ಹ್ಯಾಗೂ ಕೃಷ್ಣೆಯನ್ನು ದಾಟಿ ಬಂದೇ ಇರುವರು. ಇತ್ತ ಕಡೆಯಿಂದ ನಾವು ದೂಡುತ್ತ ಹೋಗುತ್ತೇವೆ. ನಾವು ಮುಗಿಬಿದ್ದು ಹೋದೆವೆಂದರೆ ಅವರಿಗೆ ಓಡಲಿಕ್ಕೆ ದಿಕ್ಕುಗಳು ಸಾಲಲಿಕ್ಕಿಲ್ಲ. ನಾವು ಅವರನ್ನು ನಮ್ಮ ಸೀಮೆಯಲ್ಲಿಯಾದರೂ ಯಾಕೆ ಬರಗೊಡಬೇಕು?

ಈ ಮೇರೆಗೆ ನುಡಿದು ರಾಮರಾಜನು ಕೂಡಲೆ ತಿರುಮಲ ವೇಂಕಟಾದ್ರಿಗಳ ಕಡೆಗೆ ಪತ್ರಗಳನ್ನು ಬರೆದು ಅವನ್ನು ರಾವುತರ ಕೂಡ ಕಳಿಸಿದನು. ಆ ಪತ್ರಗಳಲ್ಲಿ ಆತನು ಅವರಿಗೆ ಸ್ಪಷ್ಟವಾಗಿ— ''ನಾವು ನಮ್ಮ ಮೂರೂ ಸೈನ್ಯಗಳನ್ನು ತುಂಗಭದ್ರೆಯನ್ನು ದಾಟಿಸಿಕೊಂಡು ಹೋಗಿ ಶತ್ರುಗಳ ದೂಳಹಾರಿಸಿ ಬಿಡಬೇಕು. ತುಂಗಾ-ಕೃಷ್ಣೆಗಳ ಮಧ್ಯದಲ್ಲಿ ಯವನರನ್ನು ಹಿಡಿದುಬಿಟ್ಟರೆ, ಅವರಿಗೆ ಓಡಿಹೋಗಲಿಕ್ಕೆ ಭೂಮಿಯು ಸಾಲಲಿಕ್ಕಿಲ್ಲ. ಆಗ ಪುನಃ ತಲೆಯೆತ್ತದಂತೆ ಅವರನ್ನು ಚೆನ್ನಾಗಿ ಥಳಿಸೋಣ'' ಎಂದು ಬರೆದಿದ್ದನು. ಶತ್ರುಗಳ ಮೇಲೆ ಯಾರು

ಯಾವ ಕಡೆಯಿಂದ ದಾಳಿಯಾಡಬೇಕೆಂಬದನ್ನು ಆ ಪತ್ರದಲ್ಲಿ ರಾಯನು ಸ್ಪಷ್ಟವಾಗಿ ಕಾಣಿಸಿದ್ದನು. ರಾಮರಾಜನು ಪತ್ರಗಳನ್ನು ರಣಮಸ್ತಖಾನನಿಗೆ ಓದಿತೋರಿಸಿಯೇ ಕಳಿಸಿದ್ದನಲ್ಲದೆ, ಅದರೊಳಗಿನ ಯೋಜನೆಯನ್ನು ಸಕಾರಣ ಶ್ಲಾಘಿಸಿದ್ದನು. ರಾಮರಾಜನ ಪತ್ರಗಳು ಆತನ ಬಂಧುಗಳ ಕಡೆಗೆ ಹೋದ ಸ್ವಲ್ಪಹೊತ್ತಿನಲ್ಲಿಯೇ, ರಣಮಸ್ತಖಾನನು ಆ ಸುದ್ದಿಯನ್ನೆಲ್ಲ ಬರೆದಿದ್ದ ಪತ್ರವನ್ನು ತನ್ನ ಇಬ್ಬರು ಸೇವಕರ ಕೈಯಲ್ಲಿ ಕೊಡಲು, ಅವರು ತುಂಗಭದ್ರೆಯನ್ನು ದಾಟಿ ಬಾದಶಹನ ಠಾಣ್ಯದ ಕಡೆಗೆ ನಡೆದರು. ಹೀಗೆ ವಿಜಯನಗರದಲ್ಲಿ ನಡೆದ ಪ್ರತಿ ಒಂದು ಮಹತ್ವದ ಸುದ್ದಿಯನ್ನು ರಣಮಸ್ತಖಾನನು ಶತ್ರುಗಳಿಗೆ ಗುಪ್ತವಾಗಿ ತಿಳಿಸುತ್ತಿದ್ದನು; ಆದರೆ ಅತ್ಯಂತ ಚಾಣಾಕ್ಷನಾದ ರಾಮರಾಜನು ಸಹ ಪ್ರೇಮಾಂಧನಾದದ್ದರಿಂದ ರಣಮಸ್ತನ ಈ ಘಾತಕವನು ಅರಿಯದೆ ಹೋದನು. ಆತನು ಹಾಗೆ ಅಂಧನಾಗದೆ, ತನ್ನ ಸ್ವಾಭಾವಿಕವಾದ, ಧೂರ್ತತನದಿಂದ ನಡೆದಿದ್ದರೆ, ಕನ್ನಡಿಗರ ಈ ಕರ್ಮಕಥೆಯನ್ನು ಬರೆಯುವ ಪ್ರಸಂಗವು ಬರುತ್ತಿತ್ತೋ ಇಲ್ಲವೋ ಯಾರಿಗೆ ಗೊತ್ತು!

ರಾಮರಾಜನ ಪತ್ರಗಳು ತಿರುಮಲ–ವೇಂಕಟಾದ್ರಿಗಳಿಗೆ ಮುಟ್ಟಲು, ಅವನ್ನು ಓದಿ ಅವರಿಗೆ ಬಹಳ ಸಮಾಧಾನವಾಯಿತು. ಶತ್ರುಗಳು ಮೈಮೇಲೆ ಬರುವವರೆಗೆ ತಾವು ಕೈಮುಚ್ಚಿಕೊಂಡು ಹಾದಿಯನ್ನು ನೋಡುತ್ತ ಕುಳಿತುಕೊಳ್ಳುವದು ಹೇಡಿತನದ ಲಕ್ಷಣವೆಂದು ತಿಳಿದು ತಾವು ಮುಂದಕ್ಕೆ ಸಾಗಿಹೋಗುವ ಬಗ್ಗೆ ತಿರುಮಲನು ರಾಮರಾಜನಿಗೆ ಪತ್ರವನ್ನು ಬರೆಯತಕ್ಕವನಿದ್ದನು. ಅಷ್ಟರಲ್ಲಿ ರಾಮರಾಜನ ಈ ಪತ್ರವು ಆತನ ಕೈಸೇರಿತು. ಆದ್ದರಿಂದ ಆತನ ಆನಂದವು ಹೊಟ್ಟೆಯಲ್ಲಿ ಹಿಡಿಸದಾಯಿತು. ಆತನು ತನ್ನ ಸೈನ್ಯಕ್ಕೆ ಇಷ್ಟುಹೊತ್ತಿಗೆ ತುಂಗಭದ್ರೆಯನ್ನು ದಾಟಿಹೋಗಬೇಕೆಂದು ಆಜ್ಞಾಪಿಸಿ, ಆ ಸುದ್ದಿಯನ್ನು ವೇಂಕಟಾದ್ರಿಗೆ ತಿಳಿಸಿ ಅದೇ ಹೊತ್ತಿಗೇ ಆತನು ತುಂಗಭದ್ರೆಯನ್ನು ದಾಟಿಬರುವಂತೆ ಮಾಡಿದನು. ತಿರುಮಲನು ರಾಮರಾಜನಿಗೂ ತಾನು ಮಾಡಿದ ವ್ಯವಸ್ಥೆಯನ್ನು ತಿಳಿಸಿ, ಅದೇ ಕಾಲದಲ್ಲಿಯೇ ತಮ್ಮ ಸೈನ್ಯವನ್ನು ನಿರ್ಬಾಧವಾಗಿ ಮುಂದಕ್ಕೆ ನೂಕಬೇಕೆಂದು ರಾಮರಾಜನಿಗೆ ಹೇಳಿಕೊಂಡನು. ಇದರಿಂದ ರಾಯರ ಮೂರೂ ದಂಡುಗಳೂ ನಿಯಮಿತ ವೇಳೆಯಲ್ಲಿ ತುಂಗಭದ್ರೆಯನ್ನು ದಾಟಲನುವಾದವು. ಈ ಸುದ್ದಿಯೂ ರಣಮಸ್ತನ ಮುಖಾಂತರ ಶತ್ರುಗಳಿಗೆ ಮುಟ್ಟಿತು. ಈ ಮೂವರ ಸೈನ್ಯಗಳ ಸಂಖ್ಯೆಯು ಅಪಾರವಾಗಿತ್ತು ಸೈನಿಕರು— "ಜಯ ನರಹರಿ! ಜಯ ವಿಠ್ಠಲಸ್ವಾಮಿ! ಜಯ ವಿರೂಪಾಕ್ಷ! ಜಯ ನರಸಿಂಹ" ಎಂದು ಜಯಘೋಷ ಮಾಡುತ್ತ ತುಂಗಭದ್ರೆಯನ್ನು ಪ್ರವೇಶಿಸಿದರು. ಕಾಲ ಹೊಳೆಯೂ ಅವರ ಗೊತ್ತಿನದಾದ್ದರಿಂದ, ಅವರ ಸೈನ್ಯವು ಬೇಗನೆ ಆಚೆಯ ದಂಡೆಯನ್ನು ಕಂಡಿತು. ಸೈನಿಕರು ನಾವಿನ ಸೇತುವೆಯನ್ನೂ ಉಪಯೋಗಿಸಿದರು. ರಾಮರಾಜನ ಈ ಸೈನ್ಯದ ಚಲನವಲನವು ಈ ಮೊದಲೆ ವಿಜಾಪುರದ ಅಲಿ ಆದಿಲಶಹನಿಗೂ, ಅಹಮ್ಮದ ನಗರದ ಹುಸೇನ ನಿಜಾಮಶಹನಿಗೂ ಗೊತ್ತಾದದ್ದರಿಂದ, ಅವರೂ ತಮ್ಮ ಸೈನ್ಯವನ್ನು ಒಮ್ಮೆಲೆ ಒಟ್ಟುಗೂಡಿಸಿ ಮಾಡತಕ್ಕ ವ್ಯವಸ್ಥೆಯನ್ನು ಮಾಡಿದರು. ಈ ಪ್ರಚಂಡ ಸೈನ್ಯವು ತಮ್ಮ ಮೇಲೆ ಅಕಸ್ಮಾತ್ ಸಾಗಿಬರುವದನ್ನು ನೋಡಿ, ತಾವು ಅಂಜಿ ಹಿಂದಕ್ಕೆ ಸರಿಯುವಂತೆ ಹೂಲಿಯನ್ನೆಬ್ಬಿಸಬೇಕೆಂದು ಮುಸಲ್ಮಾನರು ಮೊದಲೇ ಯೋಚಿಸಿದ್ದರು. ಹಾಗೆ ವಿಜಯನಗರದ

ಸೈನಿಕರು ತುಂಗಭದ್ರೆಯನ್ನು ದಾಟಿದಕೂಡಲೆ, ಶತ್ರು ಸೈನ್ಯವು ಹಿಂದೆಗೆಯಹತ್ತಿತು. ''ತಾವು ಹಿಂದಕ್ಕೆ ಸರಿಯುತ್ತ ಹೋಗಿ, ಹೊಡತಕ್ಕೆ ಅನುಕೂಲವಾದ ಸ್ಥಳವನ್ನು ಮುಟ್ಟಿದಕೂಡಲೆ ಹಿಂದಿರುಗಿ ನಿಂತು ಶತ್ರುಗಳ ಮೇಲೆ ಬೀಳಬೇಕು, ಆಮೇಲೆ ಆಗುವದು ಆಗಲಿ'' ಎಂದು ಮುಸಲ್ಮಾನರು ನಿಶ್ಚಯಿಸಿದರು. ವಿಜಯನಗರದ ಸೈನ್ಯದ ವಿಷಯವಾಗಿ ಅವರು ನಿರ್ಭಯ ರಾಗಿದ್ದರೆನ್ನುವ ಹಾಗಿದ್ದಿಲ್ಲ; ಆದರೆ ಅವರು ರಚಿಸಿದ ಕಪಟನಾಟಕದ ಧೈರ್ಯವು ಅವರಿಗೆ ವಿಶೇಷವಾಗಿತ್ತು.

ತಾವು ತುಂಗಭದ್ರೆಯನ್ನು ದಾಟಿ ಮುಂದಕ್ಕೆ ಸಾಗಿ ಹೋದಕೂಡಲೆ ಶತ್ರುಗಳು ಓಡಿ ಹೋಗುತ್ತಿರುವದನ್ನು ನೋಡಿ ರಾಮರಾಜನೂ ಆತನ ಬಂಧುಗಳೂ ಬಹಳ ಹಿಗ್ಗಿದರು. ತಾವು ಮುಂದಕ್ಕೆ ಸಾಗಿಬಂದದ್ದು ಬಹಳ ನೆಟ್ಟಗಾಯಿತೆಂದು ಅವರು ಉತ್ಸಾಹಗೊಂಡರು. ಇನ್ನು ಶತ್ರು ಸೈನ್ಯವನ್ನು ಒಂದೇಸವನೆ ಬೆನ್ನಟ್ಟಿಹೋದರೆ ಕಾರ್ಯವು ಚೆನ್ನಾಗಿ ಸಾಧಿಸುವದೆಂದು ತಿಳಿದು, ಅವರು ತಮ್ಮ ಸೈನಿಕರನ್ನು ''ಎಲೇ, ಬೇಟೆಯನ್ನು ಹೊಡೆಯರಿ–ಬೇಟೆಯನ್ನು ಹೊಡೆಯಿರಿ, ಜಯ ನರಹರಿ? ಜಯ ವಿಠ್ಠಲಸ್ವಾಮಿ'' ಎಂದು ವಿಜಯಘೋಷ ಮಾಡುತ್ತ ಪ್ರೋತ್ಸಾಹ ಗೊಳಿಸಹತ್ತಿದರು. ಶತ್ರುಸೈನ್ಯದ ಮೇಲೆ ಬಾಣಗಳ ವೃಷ್ಟಿಯಾಗಹತ್ತಿತು; ಶತ್ರುಗಳಿಗೆ ಓಡಿಹೋಗಲಿಕ್ಕೆ ಭೂಮಿಯು ಸಾಲಲೊಲ್ಲದೆನ್ನುವಹಾಗೆ ತೋರಿತು. ಹೀಗೆ ಶತ್ರುಗಳು ಓಡಿಹೋಗುವ ಸೋಗು ಮಾಡಿದ ಹಾಗೆಲ್ಲ ವಿಜಯನಗರದ ದಂಡಾಳುಗಳ ಆನಂದವು ಹೊಟ್ಟೆಯಲ್ಲಿ ಹಿಡಿಸದಾಯಿತು. ಆಗ ರಾಮರಾಜನು ತನ್ನ ಬಳಿಯಲ್ಲಿದ್ದ ರಣಮಸ್ತಖಾನನನ್ನು ಕುರಿತು ಡೌಲಿನಿಂದ— ನಿನ್ನ ಮಾತು ಕೇಳಿ ನಾವು ಉತ್ತರದಿಕ್ಕಿನ ತುಂಗಭದ್ರೆಯ ಕಾಲಹೊಳೆಯನ್ನು ಕಾಯುತ್ತ ಕುಳಿತುಕೊಂಡಿದ್ದರೆ ಹೀಗಾಗುತ್ತಿತ್ತೋ? ಈಗ ನೋಡು, ಶತ್ರುಸೈನ್ಯವು ''ಕಚ್ಚೆಗೊಂದು ಕೈ ಮಚ್ಚೆಗೊಂದು ಕೈ'' ಅನ್ನುವಹಾಗೆ ಓಡಹತ್ತಿದೆ! ಇನ್ನು ಅವರು ಹೋಗುವದೆತ್ತ? ಅವರನ್ನು ರಸಾತಳಕ್ಕೆ ಇಳಿಸುವೆನು, ಕೃಷ್ಣೆಯನ್ನು ದಾಟಿಹೋದರೂ, ಅವರ ನಾಶವಾಗುವದು ದಾಟದೆಯಿದ್ದರೂ ಅವರನಾಶ ವಾಗುವದು. ಅನ್ನಲು, ರಣಮಸ್ತಖಾನನು ಏನೂ ಉತ್ತರಕೊಡದೆ ಸುಮ್ಮನೆ ರಾಮರಾಜನಿಗೆ ಮುಜುರೆಮಾಡಿ ನಕ್ಕನು. ಆ ನಗೆಯಿಂದ ಆತನು ರಾಮರಾಜನಿಗೆ— ''ಮಹಾರಾಜರೇ, ತಮ್ಮ ಅನುಭವ, ತಮ್ಮ ಶೌರ್ಯ, ತಮ್ಮ ರಾಜಕಾರಣಪಟುತ್ವ ಇವನ್ನು ಎಷ್ಟು ವರ್ಣಿಸಿದರೂ ಸ್ವಲ್ಪವೇ ಇರುವದು'' ಎಂಬರ್ಥವನ್ನು ಪ್ರಕಟಿಸಿದನು. ಮನಸ್ಸಿನಲ್ಲಿ ಮಾತ್ರ ರಾಮರಾಜನು ಮೋಸ ಹೋಗುತ್ತಿರುವ ಬಗ್ಗೆ ಖಾನನಿಗೆ ಬಹಳ ಸಮಾಧಾನವಾಗಿತ್ತು. ಹೀಗೆ ಆತನು ಸಮಾಧಾನ ಪಡುತ್ತಿರುವಾಗ ರಾಮರಾಜನು ರಣಮಸ್ತನಿಗೆ—

ರಾಮರಾಜ—ರಣಮಸ್ತಖಾನ, ನೀನು ವೀರಪುತ್ರನಿರುತ್ತೀ. ಈ ಯುದ್ಧದಲ್ಲಿ ನಾನು ನಿನಗೊಂದು ಮಹತ್ವದ ಕಾರ್ಯವನ್ನು ಹೇಳುವವನಿದ್ದೇನೆ. ಅದನ್ನು ನೀನು ಮಾಡಲೇಬೇಕು.

ರಣಮಸ್ತ—ನೀವು ನನ್ನನ್ನು ದೂರಹೋಗಗೊಟ್ಟರಷ್ಟೇ ನಾನು ಮಹತ್ಕಾರ್ಯವನ್ನು ಮಾಡುವದು? ನನ್ನ ಬಳಿಯಲ್ಲಿಯೇ ಇರಬೇಕೆಂದು ನೀವು ಆಗ್ರಹಪಡುತ್ತಿರುವಿರಿ. ನಿಮ್ಮ ಸುತ್ತುಮುತ್ತು ಅನೇಕ ವೀರರು ದಕ್ಷತೆಯಿಂದ ನಿಮ್ಮನ್ನು ರಕ್ಷಿಸುತ್ತಿರಲು, ಪರಾಕ್ರಮವನ್ನು

ತೋರಿಸುವ ಪ್ರಸಂಗವು ನನಗೆ ಹ್ಯಾಗೆ ಬರಬೇಕು? ನನ್ನನ್ನು ನೀವು ಹರಿಯಬಿಡುವದಿಲ್ಲ, ನನ್ನನ್ನು ಬಿಟ್ಟು ಹೋಗಲೇಬೇಡೆಂದು ನೀವು ಅನ್ನುತ್ತೀರಿ, ಅಂದಬಳಿಕ ನಾನೇನು ಮಾಡಲಿ?

ರಾಮರಾಜ—ಇಲ್ಲ, ನಿನಗೆ ನಾನು ಹೋಗಬೇಡೆನ್ನುವದಿಲ್ಲ. ಯೋಗ್ಯ ಪ್ರಸಂಗ ಒದಗಿದ ಕೂಡಲೆ ನಿನ್ನನ್ನು ಕಳಿಸುವೆನು. ಕಾರ್ಯವನ್ನು ಸಾಧಿಸಲಿಕ್ಕೆ ಮಾತ್ರನೀನು ಸಿದ್ಧವಾಗಿರಲಿಕ್ಕೆಬೇಕು.

ರಣಮಸ್ತ–ನಾನು ಸಿದ್ಧನೇ ಇರುತ್ತೇನೆ. ಅದರ ವಿಷಯವಾಗಿ ತಮಗೆ ಸಂಶಯವೇತಕ್ಕೆ? ನಾನು ಸಾಧಿಸಬೇಕಾಗಿರುವ ಕಾರ್ಯವು ಯಾವದೆಂಬದನ್ನು ಹೇಳಿಬಿಡಬೇಕು.

ರಾಮರಾಜ—ಅನ್ಯಾಯವಾಗಿ ನಿನಗೆ ದೇಹಾಂತ ಶಾಸನ ಮಾಡಬೇಕೆಂದು ಮಾಡಿರುವ ವಿಜಾಪುರದ ಬಾದಶಹನನ್ನು ನೀನು ಸೆರೆಹಿಡಿದು ತಂದುಕೊಡಬೇಕು. ಅದು ಸಾಧಿಸದಿದ್ದರೆ, ಆತನ ರುಂಡವನ್ನಾದರೂ ತಂದು ಕೊಡಬೇಕು.

ರಾಮರಾಜನ ಮುಖದಿಂದ ಹೊರಟ ಈ ಮಾತುಗಳನ್ನು ಕೇಳಿ ರಣಮಸ್ತಖಾನನು ಚಕಿತನಾದಂತೆ ತೋರಿತು. ಆತನು ಸಂತಾಪದಿಂದ ಅವಡುಗಚ್ಚಿ— "ಏನನ್ನುವಿರಿ? ನಾನು ಇಂಥ ಕೃತಘ್ನನಾಗಲಾ?" ಎಂದು ಕೇಳಿದನು. ಅದಕ್ಕೆ ರಾಮರಾಜನು— "ಇದರಲ್ಲಿ ಕೃತಘ್ನತನ ವೇನು? ನಿನ್ನನ್ನು ನಾನು ಬಾದಶಹನಗೆ ಒಪ್ಪಿಸಿದ್ದರೆ, ಆತನು ನಿನ್ನ ಶಿರಚ್ಛೇದ ಮಾಡಿಸದೆ ಬಿಡುತ್ತಿದ್ದನೋ? ಅಂದ ಬಳಿಕ ನನ್ನ ಪಕ್ಷವನ್ನು ವಹಿಸಿದ ನೀನು, ಯುದ್ಧದಲ್ಲಿ ನನ್ನ ಸಲುವಾಗಿ ಬಾದಶಹನ ಶಿರಚ್ಛೇದ ಮಾಡಿದರೆ ಕೃತಘ್ನತನವು ಹ್ಯಾಗಾಗುವದು? ಅದರಲ್ಲಿ ನಾನು ನಿನಗೆ ಒಮ್ಮೆಲೆ ಶಿರಚ್ಛೇದ ಮಾಡೆಂತಲೂ ಹೇಳುವದಿಲ್ಲ, ಸೆರೆ ಹಿಡಿಯುವದು ಸಾಧಿಸದಿದ್ದರೆ, ಶಿರಚ್ಛೇದ ಮಾಡೆಂದು ಹೇಳಿದೆನು. ನನ್ನ ಪಕ್ಷವಹಿಸಿ ನೀನು ಈ ಕಾರ್ಯ ಮಾಡಿದೆಯೆಂದರೆ, ನಿನ್ನ ಅಖಂಡ ಕಲ್ಯಾಣ ಮಾಡುವೆನು. ನೀನು ವಿಜಾಪುರದ ಬಾದಶಹನು ಸಹ ಆಗಬಹುದು. ಇದಲ್ಲದೆ ನಿನಗೊಂದು ಮಹತ್ವದ ಸುದ್ದಿಯನ್ನೂ ಹೇಳುವವನಿದ್ದೇನೆ.

ಈ ಮೇರೆಗೆ ಸಂಭಾಷಣವು ನಡೆದಿರಲು, ಶತ್ರುಗಳು ಕೃಷ್ಣೆಯ ದಂಡೆಯಲ್ಲಿ ತಳ ಊರಿದರೆಂಬ ಸುದ್ದಿಯನ್ನು ಚಾರರು ರಾಮರಾಜನ ಮುಂದೆ ಹೇಳಿದರು. ಅದನ್ನು ಕೇಳಿ ರಾಮರಾಜನು ಸಮಾಧಾನಪಟ್ಟು, ತಾನು ಇನ್ನು ಶತ್ರುಗಳ ಮೇಲೆ ಬೀಳುವ ಮೊದಲು ತನ್ನ ಸೈನ್ಯವನ್ನು ವಿಶ್ರಮಿಸಗೊಡಬೇಕೆಂದು ನಿಶ್ಚಯಿಸಿದನು. ಹಾಗೆ ತನ್ನ ಸೈನ್ಯದವರು ವಿಶ್ರಾಂತಿ ಗೊಳ್ಳದಿದ್ದರೆ, ಈಗ ಬೆನ್ನಟ್ಟುವಾಗ ದಣಿದಿರುವವರಿಗೆ ಶತ್ರುಗಳ ಮೇಲೆ ಬಿದ್ದಾಗ ಶೌರ್ಯದಿಂದ ಕಾದಲಿಕ್ಕೆ ನೆಟ್ಟಗಾಗಲಿಕ್ಕಿಲ್ಲೆಂಬ ವಿಚಾರವು ಆತನಲ್ಲಿ ಉತ್ಪನ್ನವಾಯಿತು. ಆಗ ರಾಮರಾಜನು ವಿಶ್ರಮಿಸುವದಕ್ಕಾಗಿ ತನ್ನ ಸೈನ್ಯಕ್ಕೆ ಅಪ್ಪಣೆಯನ್ನಿತ್ತು ಈವರೆಗೆ ತನ್ನ ಕೈ ಸೇರಿರುವ ವೈರಿಗಳ ದೇಶವನ್ನು ಸುಲಿಯಬಹುದೆಂದು ಅವರಿಗೆ ಹೇಳಿದನು!

# ಮಾಸಾಹೇಬರ ದುರವಸ್ಥೆ

ಇನ್ನು ಕುಂಜವನದಲ್ಲಿದ್ದ ಮಾಸಾಹೇಬರ ಸಮಾಚಾರವನ್ನಷ್ಟು ತಕ್ಕೊಳ್ಳೋಣ. ರಾಮರಾಯನು ಮಾಸಾಹೇಬರ, ಅಥವಾ ಲೈಲಿಯ ಮನಸ್ಸನ್ನು ಒಲಿಸಿಕೊಳ್ಳಲಾರದೆ ಹತಾಶನಾಗಿ ಹೋದನಂತರ, ಮಾಸಾಹೇಬರು ಬಹು ಕಷ್ಟದಿಂದ ಕಾಲಹರಣ ಮಾಡಹತ್ತಿದರು. ಕುಂಜವನದಲ್ಲಿ ತಮ್ಮನ್ನು ಸೆರೆಯಲ್ಲಿಟ್ಟಿದ್ದು ಅವರಿಗೆ ಅತ್ಯಂತ ದುಸ್ಸಹವಾಗಿತ್ತು, ತಾವು ಈ ಪ್ರತಿಬಂಧದಿಂದ ಪಾರಾಗಿಹೋಗುವದು ಅಶಕ್ಯವೆಂದು ತಿಳಿದು, ಅವರು ದಿನದಿನಕ್ಕೆ ಚಿಂತೆಯಿಂದ ಕ್ಷೀಣವಾಗಹತ್ತಿದರು. ಮೊದಲಿನಂತೆ ಧನಮಲ್ಲನು ಕೃಷ್ಣಸರ್ಪದ ಹಾಗೆ ಅವರನ್ನು ಕಾಯುತ್ತಲಿದ್ದನು. ಧನಮಲ್ಲನ ಮನಸ್ಸನ್ನೊಲಿಸಿಕೊಳ್ಳುವದು ಅವರಿಗೆ ತೀರ ಅಸಾಧ್ಯವಾಗಿ ತೋರಿತು. ಲೈಲಿಯೂ ಈ ಕೆಲಸದಲ್ಲಿ ಕೈ ಊರಿದಳು. ಹೀಗೆಯೇ ಅವರಿಬ್ಬರು ಕಾಲಹರಣಮಾಡುತ್ತಿರಲು, ಇತ್ತ ಯುದ್ಧಪ್ರಸಂಗವು ಒದಗಿದ್ದರಿಂದ ಸೈನ್ಯದೊಡನೆ ರಾಮರಾಜನು ದಂಡಯಾತ್ರೆಗೆ ಹೊರಟನು. ಈ ಯಾವ ಸುದ್ದಿಯೂ ಮಾಸಾಹೇಬರಿಗೆ, ಅಥವಾ ಲೈಲಿಗೆ ಗೊತ್ತಾಗಿದ್ದಿಲ್ಲ, ಹೀಗಿರುವಾಗ ಒಂದು ದಿನ ಮಾಸಾಹೇಬರು ಲೈಲಿಯನ್ನು ಕುರಿತು— ಮಾರ್ಜಿನೇ, ಏನಾನರೂ ಮಾಡು, ಧನಮಲ್ಲನ ಮನಸ್ಸನ್ನು ಒಲಿಸಿಕೊಂಡು ನನ್ನನ್ನಷ್ಟು ಬಂಧಮುಕ್ತ ಮಾಡು; ನಾವು ಎಲ್ಲಿಂದ ಬಂದೆವೋ ಅಲ್ಲಿಗೇ (ಉತ್ತರ ಹಿಂದುಸ್ತಾನಕ್ಕೆ) ಹೋಗೋಣ, ಇಲ್ಲವೆ ಇಬ್ಬರೂ ತೆಕ್ಕೆಬಿದ್ದು ಕೃಷ್ಣೆಯಲ್ಲಿ ಹಾರಿಕೊಂಡು ಜೀವಕೊಡೋಣ. ನೀನು ಮುದುಕಿಯಾಗಿರುತ್ತೀ; ನನಗೆ ಬದುಕುವ ಆಶೆಯಿಲ್ಲ, ಆದ್ದರಿಂದ ನೀನು ಇಷ್ಟು ಕೆಲಸ ಮಾಡು, ಎಂದು ಹೇಳಿದರು. ಮಾರ್ಜಿನೆಯು ಎಷ್ಟು ಸಮಾಧಾನ ಮಾಡಿದರೂ ಮೇಹರ್ಜಾನಳು (ಮಾಸಾಹೇಬರು) ಕೇಳಲಿಲ್ಲ, ಹೀಗೆಯೇ ಕೆಲವು ದಿನಗಳು ಹೋದವು. ಒಂದು ದಿನ ಮೇಹರ್ಜಾನಳಿಗೆ ಏನು ತಿಳಿಯಿತೋ ಏನೋ, ಆಕೆಯು ಒಮ್ಮೆಲೆ ಮಾರ್ಜಿನೆಯನ್ನು ಕರೆದು— "ಧನಮಲ್ಲನ ಮನಸ್ಸನ್ನು ಒಲಿಸಿಕೊಳ್ಳೆಂದು ನಾನು ನಿನಗೆ ಬಹುದಿವಸಗಳಿಂದ ಹೇಳುತ್ತ ಬಂದೆನು; ಆದರೆ ನಿನ್ನಿಂದ ಆ ಕೆಲಸವಾಗಲಿಲ್ಲ, ಆದ್ದರಿಂದ ಈಗ ನಾನೇ ಆ ಕೆಲಸಕ್ಕೆ ಕೈಹಾಕುತ್ತೇನೆ. ಯಾವತ್ತು ಅಂಜಿಕೆಯನ್ನು ಬಿಟ್ಟು ನಾನು ಆತನನ್ನು ಮಾತಾಡಿಸುವೆನು. ಹೋಗು, ಧನಮಲ್ಲನನ್ನು ಕರಕೊಂಡು ಬಾ, ಎಂದು ಹೇಳಿದಳು. ತನ್ನ ಒಡೆಯಳ ಈ ಮಾತುಗಳನ್ನು ಕೇಳಿ ಮಾರ್ಜಿನೆಯು ಚಕಿತಳಾಗಿ, ಮೇಹೇರಜಾನಳನ್ನು ಎವೆಯಿಕ್ಕದೆ ನೋಡಹತ್ತಿದಳು. ಆಗ ಮೇಹರ್ಜಾನಳು ಮತ್ತೆ ಮಾರ್ಜಿನೆಗೆ–ಯಾಕೆ? ಹೀಗೆ ನನ್ನ ಕಡೆಗೆ ನೋಡುತ್ತೀ? ಕರಕೊಂಡು ಬಾ ಅವನನ್ನು, ನನ್ನ ಮುಂದೆ ನಿಲ್ಲಿಸಿ, ನೀನು ಹೋಗು. ಆತನು ನಿಶ್ಚಯವಾಗಿ ನಮಗೆ ಅನಕೂಲವಾದನೆಂದು ನನಗೆ ತೋರುತ್ತದೆ.

ಮಾರ್ಜಿನೆ— (ವಾತ್ಸಲ್ಯದಿಂದ) ತಂಗೀ, ಮೇಹರ್ಜಾನ, ಆ ಧನಮಲ್ಲನ ಹೃದಯವು ವಜ್ರಕ್ಕಿಂತ ಕಠಿಣವು. ನೀನು ಎಷ್ಟು ಹೇಳಿಕೊಂಡರೂ ಅದು ದ್ರವಿಸಲಾರದು. ಆತನ ಮನಸ್ಸಿನಲ್ಲಿ ಏನಿರುವದು ಏನಿರುವದಿಲ್ಲೆಂಬದು ಈ ವರೆಗೆ ಯಾರಿಗಾದರೂ ಗೊತ್ತಾಗಿರುತ್ತದೆಯೋ?

ಮೇಹರ್ಜಾನ— ಮಾರ್ಜಿನೇ, ಅದನ್ನೆಲ್ಲ ನಾನು ಬಲ್ಲೆನು.ಅದರ ಅನುಭವವು ನನಗಿರುವದಿಲ್ಲವೋ? ಆದರೆ ಇದೊಂದು ಕಡೆಯ ಉಪಾಯವನ್ನಷ್ಟು ಮಾಡಬೇಕೆಂದು ನಾನು ನಿಶ್ಚಯಿಸಿರುತ್ತೇನೆ! ಸಾಧಿಸದಿದ್ದರೆ, ನಮಗೆ ಇದಕ್ಕೂ ಹೆಚ್ಚಿನ ಕಷ್ಟವೇನು ಒದಗಬೇಕಾಗಿದೆ? ಸಾಧಿಸಿದರೆ ಇಲ್ಲಿಂದ ಪಾರಾಗಿಯಾದರೂ ಹೋದೇವು. ಈಗ ನೀನು ಹೋಗು, ನನ್ನ ಸಂಗಡ ಚರ್ಚಿಸುತ್ತ ಕುಳಿತುಕೊಳ್ಳಬೇಡ. ಧನಮಲ್ಲನ ಹೆಸರು ಕೇಳಿದರೆ ನನ್ನ ಸರ್ವಾಂಗದಲ್ಲಿ ಕಂಪವು ಉತ್ಪನ್ನವಾಗುತ್ತಿರಲು, ಆತನನ್ನು ಈಗ ಏಕಾಂತದಲ್ಲಿ ಭೆಟ್ಟಿಯಾಗುತ್ತೇನೆಂದ ಬಳಿಕ, ನನ್ನ ಮನಸ್ಸು ಎಷ್ಟು ಕಲ್ಲಾಗಿರುತ್ತದೆಂಬುದನ್ನು ನೀನೇ ತರ್ಕಿಸು. ಹೋಗು–ಹೋಗು, ಜೀವದ ಹಂಗು ಬಿಟ್ಟವರಿಗೆ ಯಾವ ಕೆಲಸ ಮಾಡುವದು ತಾನೆ ಕಠಿಣವು! ಹೋಗು, ಆಲೋಚಿಸುತ್ತ ಕುಳಿತುಕೊಳ್ಳಬೇಡ. ಇಲ್ಲದಿದ್ದರೆ ನಾನೇ ಅವನ ಬಳಿಗೆ ಹೋಗುತ್ತೇನೆ.

ಹೀಗೆ ನುಡಿದು ಮೇಹರ್ಜಾನಳು ಮೇಲಕ್ಕೆ ಎದ್ದುಬಿಟ್ಟಳು. ಇದನ್ನು ನೋಡಿ ಮಾರ್ಜಿನೆಯು, ಇಂದಿನ ಪ್ರಸಂಗವು ವಿಲಕ್ಷಣವಾಗಿ ತೋರುತ್ತದೆ; ಆದ್ದರಿಂದ ನಾನು ಈ ಹಟ ಹಿಡಿಯುವದು ಯೋಗ್ಯವಲ್ಲೆಂದು ತಿಳಿದು ಆಕೆಯು ಮೇಲಕ್ಕೆದ್ದಳು. ಮಾರ್ಜಿನೆಯು ತಟ್ಟನೆ ಹೋಗಿ ಧನಮಲ್ಲನನ್ನು ಗಟ್ಟಿಯಾಗಿ ಕೂಗಿ ಕರೆದಳು. ಧನಮಲ್ಲನು ಹತ್ತರ ಬಂದಕೂಡಲೆ ಆಕೆಯು— "ಧನಮಲ್ಲಾ, ನಿಮಗೆ ಮಾತಾಡಲಿಕ್ಕೆ ಬರುತ್ತದೆಂಬದನ್ನೂ, ನಿನ್ನ ಕಿವಿಗಳು ಕೇಳುತ್ತವೆಂಬದನ್ನೂ ನಾವು ಬಹು ದಿವಸದಿಂದ ಬಲ್ಲೆವು. ಆದ್ದರಿಂದ ನೀನು ಈಗ ಈ ಗತ್ತನ್ನು ಬಿಟ್ಟುಬಿಡು. ಈಗ ಮಾಸಾಹೇಬರು ನಿನ್ನನ್ನು ಕರೆಯುತ್ತಾರೆ. ತಟ್ಟನೆ ಹೋಗು; ಅವರು ಏನು ಹೇಳುತ್ತಾರೆಂಬದನ್ನು ಕೇಳಿಕೋ. ಅವರ ಸಂಗಡ ಹುಚ್ಚು ಹುಚ್ಚು ಬಡಿಯಬೇಡ. ಎಬಡತನ ದಿಂದ ನಡೆಕೊಳ್ಳಬೇಡ. ಈವೊತ್ತಿನವರೆಗೆ ಅವರು ನಿನ್ನನ್ನು ಪ್ರತ್ಯಕ್ಷ ಕರಿಸಿ ಏನೂ ಹೇಳಿರುವದಿಲ್ಲ, ಈವೊತ್ತು ಏನೋ ಹೇಳುತ್ತಾರೆ, ಅವರ ಮನಸ್ಸನ್ನು ನೋಯಿಸಬೇಡ. ನನಗೆ ಸಹ ಅವರು— "ನೀನು ಆತನ ಸಂಗಡ ಬರಬೇಡ, ಆತನೊಬ್ಬನನ್ನೇ ಕಳಿಸಿಕೊಡು" ಎಂದು ಹೇಳಿದ್ದಾರೆ; ಆದ್ದರಿಂದ ಬೇಗನೆ ಹೋಗು ಎಂದು ಹೇಳಿದನು. ಅದನ್ನು ಕೇಳಿದ ಕೂಡಲೆ ಧನಮಲ್ಲನ ಮುಖಮುದ್ರೆಯು ಪ್ರಫುಲ್ಲಿತವಾಯಿತು. ಆ ಮುಖದಲ್ಲಿ ಮುಗಳುನಗೆಯು ಒಪ್ಪಿತು. ಆತನು ಆಶ್ಚರ್ಯಮಗ್ನನಾದ್ದರಿಂದ ಮಾರ್ಜಿನೆಯನ್ನು ಕೆಕ್ಕರಿಸಿ ನೋಡಹತ್ತಿದನು. ಆಗ ಮಾರ್ಜಿನೆಗೆ ಸ್ವಲ್ಪ ಧೈರ್ಯ ಬಂದಂತಾಗಿ, ಆಕೆಯು ಆತನಿಗೆ– ಹೋಗು– ಹೋಗು, ನನ್ನನ್ನು ಕೆಕ್ಕರಿಸಿ ನೋಡಬೇಡ. ಮಾಸಾಹೇಬರು ಒಳ್ಳೇ ಉತ್ಕಂಠೆಯಿಂದ ನಿನ್ನ ಹಾದಿಯನ್ನು ನೋಡುತ್ತಿರುವರು ಹೋಗು, ಎಂದು ಹೇಳಿದಳು. ಕೂಡಲೆ ಧನಮಲ್ಲನು ಮೇಹೇರಜಾನಳ ಬಳಿಗೆ ಹೋಗಿ ಆಕೆಯನ್ನು ಎವೆಯಿಕ್ಕದೆ ನೋಡುತ್ತ ನಿಂತುಕೊಂಡನು. ಮೇಹೇರಜಾನಳ ಸರ್ವಾಂಗವು ಬರುಕಿಯಿಂದ ಮುಚ್ಚಿಹೋಗಿತ್ತು ಆಕೆಯು ಧನಮಲ್ಲನು ಬಂದ ಸುಳುವನ್ನರಿತು. ತಟ್ಟನೆ ತನ್ನ ಮೋರೆಯ ಮೇಲಿನ ಬುರುಕಿಯನ್ನು ತೆಗೆದು ಒಮ್ಮೆಲೆ ಆತನನ್ನು ಕುರಿತು– ಧನಮಲ್ಲ, ಇಲ್ಲಿಯ ವರೆಗಿನ ಮೇಹರ್ಜಾನಳು, ಬೇರೆ ಇನ್ನು ಮೇಲಿನ ಮೇಹರ್ಜಾನಳು ಬೇರೆಯೆಂದು ತಿಳಿ. ಇಲ್ಲಿಯವರೆಗೆ ನಾನು ನಿನಗೆ ಹೆದರುತ್ತಿದ್ದೆನು. ಈಗ ನೀನು ನನಗೆ ಒಡಹುಟ್ಟಿದ ತಂಗಿಯೆಂತಲೇ ತಿಳಿದು ನನ್ನ ಮಾನವನ್ನು ಕಾಯಿ ನಿನಗೆ ನಾನು ಶರಣು.......

ಈ ಮೇರೆಗೆ ನುಡಿಯುವಾಗ ಮೇಹರ್ಜಾನಳ ಕಂಠವು ಬಿಗಿದು, ಮಾತುಗಳು ಹೊರಡದಾದವು. ಆಕೆಯ ಕಣ್ಣುಗಳಿಂದ ನೀರುಗಳು ಸುರಿಯಹತ್ತಿದವು. ಆಕೆಯು ಕೆಳಗೆ ನೋಡುತ್ತ ಸುಮ್ಮನೆ ಕುಳಿತುಕೊಂಡಳು. ಧನಮಲ್ಲನು ಆಕೆಯನ್ನು ಚಮತ್ಕಾರ ದೃಷ್ಟಿಯಿಂದ ನೋಡಹತ್ತಿದನಲ್ಲದೆ, ಬಾಯಿಂದ ಪಿಟ್ಟೆಂದು ಮಾತಾಡಲಿಲ್ಲ. ಆಗ ಮೇಹರ್ಜಾನಳು— ಧನಮಲ್ಲಾ, ನಿನಗೆ ಮಾತಾಡಲಿಕ್ಕೆ ಬರುತ್ತದೆಂಬುದು ನನಗೆ ಗೊತ್ತಿರುತ್ತದೆ; ಆದ್ದರಿಂದ ನನ್ನ ಮುಂದೆ ನಿನ್ನ ನಿಜವಾದ ಸ್ವರೂಪವನ್ನು ಮುಚ್ಚಬೇಡ. ಈವೊತ್ತಿನವರೆಗೆ ಆದದ್ದನ್ನೆಲ್ಲ ಮರೆತು ಬಿಡು. ನನ್ನನ್ನು ಒಡಹುಟ್ಟಿದ ತಂಗಿಯೆಂದು ತಿಳಿದು, ನನ್ನ ಮಾನವನ್ನು ಕಾಯಿ, ನನಗೆ ಈ ಕಾರಾಗೃಹವಾಸವು ಅತ್ಯಂತ ದುಸ್ಸಹವಾಗಿರುವದು. ನನ್ನನ್ನು ಬಂಧನದಿಂದ ಮುಕ್ತಳನ್ನಾಗಿ ಯಾದರೂ ಮಾಡು, ಇಲ್ಲವೆ ಇದೇ ಈ ನಿನ್ನ ಕೈಯಿಂದ ನನ್ನ ಕುತ್ತಿಗೆಯನ್ನು ಹಿಚಿಕಿ ನನ್ನ ಹೆಣವನ್ನು ಈ ಪುಷ್ಕರಣಿಯಲ್ಲಿ ಚಲ್ಲಿಯಾದರೂ ಬಿಡು. ನನಗೆ ಈ ಕಾರಾಗೃಹವಾಸವು ಸಾಕು. ಯಾಕೆ, ಮಾತಾಡು, ಏನು ಮಾಡುತ್ತೀಯೆಂಬದನ್ನು ಸ್ಪಷ್ಟವಾಗಿ ಹೇಳು,ಎಂದು ನುಡಿದು ಆಕೆಯು ತನ್ನ ಮೈಮೇಲಿನ ಬುರುಕಿಯನ್ನು ದೂರ ಚಲ್ಲಿಕೊಟ್ಟು ಆತನ ಎದುರಿಗೆ ಹೋಗಿ ನಿಂತುಕೊಂಡಳು. ಆಗ ಧನಮಲ್ಲನು ಸೌಮ್ಯಸ್ವರೂಪದಿಂದ— ಏನು? ಈ ಕೈಯಿಂದ ನಿನ್ನ ಕುತ್ತಿಗೆಯನ್ನು ಹಿಚಕಲಾ? ನೀವು ನನ್ನನ್ನು ಇಲ್ಲಿಯವರೆಗೆ ಕೃಷ್ಣಸರ್ಪವೆಂದು ತಿಳಿಯುತ್ತ ಬಂದಿರುವಿರಿ. ನಾನು ಕೃಷ್ಣಸರ್ಪದಂತೆ ನಡೆದದ್ದೂ ನಿಜವು; ಆದರೆ ನಿಮ್ಮನ್ನು ಕಡಿಯಲಿಕ್ಕೆಂದು ಹಾಗೆ ನಾನು ನಡೆಯಲಿಲ್ಲ. ನಿಮಗೆ ಸುತ್ತುಹಾಕಿ ಆ ಆನಂದದಲ್ಲಿ—

ಈ ಮಾತುಗಳನ್ನು ಕೇಳಿದಕೂಡಲೆ ಮೇಹರ್ಜಾನಳು ಮೆಟ್ಟಿಬಿದ್ದು, ದೂರಸರಿದು ನಿಂತುಕೊಂಡಳು. ಕೂಡಲೆ ಧನಮಲ್ಲನು ಮೇಹರ್ಜಾನಳಿಗೆ— ಯಾಕೆ, ಹೀಗೆ ಈಗ ಮೆಟ್ಟಿ ಬೀಳುವದೇಕೆ? ನಾನು ಕಚ್ಚಿ ಪ್ರಾಣಹರಣಮಾಡುವದು ನಿಮ್ಮನ್ನಲ್ಲ! ಬೇರೊಬ್ಬರನ್ನು! ಆದರೆ ನಿಮ್ಮನ್ನು ನಾನು ಸುತ್ತುಹಾಕಿ ಆನಂದಪಡತಕ್ಕವನು. ನಿಮ್ಮನ್ನು ಹುಡುಕಲಿಕ್ಕೆ ನಾನು ಎಷ್ಟು ಕಷ್ಟಪಟ್ಟೆನು? ಮೂವತ್ತು-ಮೂವತ್ತೈದು ವರ್ಷಗಳವರೆಗೆ ಹಿಂದುಸ್ತಾನವನ್ನೆಲ್ಲ ತಿರುಗಿದೆನು. ಸಾವಿರಾರು ಸ್ಥಳಗಳಲ್ಲಿ ನಿಮ್ಮನ್ನು ಹುಡಿಕಿದೆನು. ಕಡೆಗೆ ಹುಡುಕುತ್ತ ಹುಡುಕುತ್ತ ನೀವು ವಿಜಾಪುರಕ್ಕೆ ಹೋಗಿರುವಿರೆಂಬ ಸುದ್ದಿಯನ್ನು ಕೇಳಿ ಅಲ್ಲಿಗೆ ಹೋದೆನು. ಅಲ್ಲಿಗೆ ನಾನು ಹೋಗುವದ ರೊಳಗಾಗಿ ನೀವು ಇಲ್ಲಿಗೆ ಬಂದಿದ್ದಿರಿ. ಆಗನಾನು ಇಲ್ಲಿಗೆ ಬಂದೆನು. ನಿಮ್ಮ ಬಳಿಯಲ್ಲಿಯೇ ಇರಬೇಕೆನ್ನುವ ಹಾಗೆ ನನಗೆ ಆಗುತ್ತದೆ. ನಾನು ಕೃಷ್ಣಸರ್ಪವೇನೋ ನಿಜ,ಆದರೆ ಆ ಸರ್ಪವು ಕಡಿಯುವದು ಬೇರೊಬ್ಬನನ್ನು; ಸುತ್ತುಹಾಕಿಕೊಂಡು ಕುಳಿತುಕೊಳ್ಳುವದು ನಿಮ್ಮನ್ನು; ಹೊತ್ತು ಬಂದಾಗ ಆ ಸರ್ಪವು ತನ್ನ ವೈರಿಯಸಮಾಚಾರವನ್ನು ತಕ್ಕೊಳ್ಳುವದು. ನೀವು ಸರ್ಪಕ್ಕೆ ವೈರಿಯಲ್ಲ, ಚಂದನ ಗಿಡಿವಿದ್ದ ಹಾಗೆ. ಸರ್ಪವು ಚಂದನ ಗಿಡವನ್ನು ಸುತ್ತಿಕೊಳ್ಳುವದಲ್ಲದೆ, ಆ ಗಿಡವನ್ನು ನಾಶಮಾಡುವದೆ.

ಧನಮಲ್ಲನ ಈ ಮಾತುಗಳನ್ನು ಕೇಳಿ ಮೇಹರ್ಜಾನಳು ಆಶ್ಚರ್ಯಪಟ್ಟಳು. ಧನಮಲ್ಲನ ಪಾಪಬುದ್ಧಿಯು ಕೂಡಲೆ ಆ ಚಾಣಾಕ್ಷಸ್ತ್ರೀಯ ಲಕ್ಷದಲ್ಲಿ ಬಂದಿತು. ಈ ದುಷ್ಟನು ತನ್ನ ಯಾವ

ವೈರಿಯನ್ನು ಕಡಿದು ನಾಶಮಾಡುತ್ತಿರಬಹುದು? ಈ ದುಷ್ಟನನ್ನು ನಾನಾಗಿ ಕರಿಸಿಕೊಂಡು ಮೂಲಮಾಡಿಕೊಂಡ ಹಾಗಾಯಿತಲ್ಲ! ಇನ್ನು ಈ ಅರಿಷ್ಟನಿವಾರಣವನ್ನು ಹ್ಯಾಗೆ ಮಾಡಿಕೊಳ್ಳಬೇಕು? ಮಾರ್ಜಿನೆಯನ್ನಾದರೂ ಕೂಗಿ ಕರೆಯಲಾ? ಎಂಬ ವಿಚಾರಗಳು ಉತ್ಪನ್ನ ವಾಗುತ್ತಿರಲು, ಧನಮಲ್ಲನು— "ನಾನು ನಿಮ್ಮ ಬಿಡುಗಡೆಯನ್ನು ಮಾಡಲ್ಯಾ? ಮಾಡುವೆನು, ಮಾಡುವೆನು; ಆದರೆ ಮೊದಲು ನನ್ನ ವೈರಿಯ ಜೀವವನ್ನು ಹಿಂಡಿದಬಳಿಕ ನಿಮ್ಮ ಬಿಡುಗಡೆ ಮಾಡುವೆನು. ಸದ್ಯಕ್ಕೆ ನಿಮ್ಮನ್ನು ಬಿಟ್ಟುಕೊಡುವ ಹಾಗಿಲ್ಲ, ನಮ್ಮ ವೈರಿಯು ನಿಮ್ಮ ಬಳಿಗೆ ಒಬ್ಬನೇ ಬರಲಿ, ಅವನನ್ನು ನಿಮ್ಮ ಸಮಕ್ಷಮ ಕೊಂದು ನಿಮ್ಮನ್ನು ಇಲ್ಲಿಂದ ಬಿಡಿಸಿಕೊಂಡು ಹೋಗುವೆನು. ನನ್ನ ವೈರಿಯು ನಾಳೆ ನಾಡದು ಇಷ್ಟರಲ್ಲಿ ಬಂದಾನು. ನನ್ನ ಪಾಲನ್ನು ಆ ದುಷ್ಟ ವೈರಿಯು ಅಪಹರಿಸಿದ ಬಳಿಕ ನಾನು ಹ್ಯಾಗೆ ಸೈರಿಸಲಿ? ಧನಮಲ್ಲನು ನನ್ನನ್ನು ಅತಿನಿಷ್ಠುರವಾಗಿ ಕಾಯುವನೆಂದು ನೀವು ತಿಳಿದಿರಬಹುದು; ಆದರೆ ಧನಮಲ್ಲನು ನಿಮ್ಮ ಸಲುವಾಗಿ ನಿಷ್ಠುರನಾಗ ಬಹುದೆ? ನನ್ನ ವೈರಿಯಾದ ರಾಮರಾಜು ನಿಮ್ಮನ್ನು ಹುಡುಕಿಸುವದನ್ನು ಬಿಟ್ಟು, ನನಗೆ ಬಾಯಿಗೆ ಬಂದಹಾಗೆ ಮಾತಾಡಿ ಈಗ ಮೂವತ್ತು ಮೂವತ್ತೈದು ವರ್ಷಗಳ ಹಿಂದೆ ನನ್ನನ್ನು ಹೊರಗೆ ಹಾಕಿದನು. ನಾನು ನಿಮ್ಮ ಮೇಲಿನ ಆಶೆಯಿಂದ ಕಷ್ಟಪಟ್ಟು ಒಂದೇ ಸವನೆ ಹುಡುಕಿ ನಾಯಿಯಹಾಗೆ ನಿಮ್ಮ ಬಾಗಿಲ ಕಾಯುತ್ತ ಇಲ್ಲಿ ಬಿದ್ದಿರುತ್ತೇನೆ; ಅದೆ ನಾಯಿಯು ರಾಮರಾಜನ ಅನ್ನಕ್ಕೆ ಜೋತು ನಿಮ್ಮನ್ನು ಕಾಯುತ್ತಿರುತ್ತದೆಂದು ತಿಳಿಯಬೇಡಿರಿ. ಕೇವಲ ನಿಮ್ಮ ಆಶೆಯಿಂದಲೇ ನಾಯಿಯು ನಿಮ್ಮ ಬಾಗಿಲು ಕಾಯುತ್ತಿರುವದು. ಕೃಷ್ಣಸರ್ಪವು ರಾಮರಾಜನ ಪ್ರಾಣಹರಣ ಮಾಡಿ ಮೇಹರ್ಜಾನರೂಪವಾದ ಚಂದನ ವೃಕ್ಷವನ್ನು ಸುತ್ತುಹಾಕಿದರೆ ಅದರ ಕೆಲಸ ತೀರಿತು" ಎಂದು ನುಡಿದು ಆ ದುಷ್ಟ ಧನಮಲ್ಲನು ಮೇಹರ್ಜಾನಳನ್ನು ಎವೆಯಿಕ್ಕದೆ ನೋಡಹತ್ತಿದನು. ಇದನ್ನು ನೋಡಿ, ಧನಮಲ್ಲನ ಮಾತುಗಳನ್ನು ಕೇಳಿ, ಮೇಹರ್ಜಾನಳ ಸರ್ವಾಂಗವು ಕಂಪಿಸಹತ್ತಿತ್ತು, ಆ ಮಹಾ ಪತಿವ್ರತೆಯು ತನ್ನ ದುರ್ದೈವವನ್ನೂ, ದುರವಸ್ಥೆಯನ್ನೂ ಹಳಿದು ಕೊಳ್ಳಹತ್ತಿದಳು. ಇತ್ತ ಕಾಮುಕನಾದ ದುಷ್ಟ ಧನಮಲ್ಲನು ವಿವೇಕಭ್ರಷ್ಟನಾಗ ತೊಡಗಿದ್ದನು. ಅಷ್ಟರಲ್ಲಿ ಮಾರ್ಜಿನೆಯು ಅಲ್ಲಿಗೆ ಬಂದಳು. ಆಕೆಯಸಂಗಡ ಒಬ್ಬ ತರುಣಿಯು ಬಂದಿದ್ದಳು. ಆ ತರುಣಿಯ ಸರ್ವಾಂಗವು ಬುರುಕೆಯಿಂದ ಮುಚ್ಚಿಹೋಗಿತ್ತು, ಆ ತರುಣಿಯನ್ನು ಕಳಿಸ ಬಂದ ರಾಮರಾಜನ ಭೃತ್ಯನು ಆ ತರುಣಿಯನ್ನು ಮಾಸಾಹೇಬರಿಗೆ ಒಪ್ಪಿಸಹೇಳಿ ಮಾರ್ಜಿನೆಯ ಒಪ್ಪಿಗೆಯಿಂದ ಹೊರಟುಹೋದನು.

ಹೀಗೆ ಜನರು ಬಂದದ್ದರಿಂದ ಧನಮಲ್ಲನು ಸುಮ್ಮನೆ ಹೊರಟುಹೋದನು. ಆಗ ಮೇಹರ್ಜಾನಳಿಗೆ ದೊಡ್ಡಕುತ್ತಿನಿಂದ ಪಾರಾದಂತೆ ಸಮಾಧಾನವಾಯಿತು. ಆಕೆಯು ಮಾರ್ಜಿನೆಗೆ ಮಾರ್ಜಿನೇ, ದುರ್ದೈವಿಗಳಾದ ನಮ್ಮ ಬಳಿಗೆ ವಿಪತ್ತನ್ನನುಭವಿಸುವದಕ್ಕಾಗಿ ಮತ್ತೆ ಯಾವ ದುರ್ದೈವಿಯು ಬಂದಳು? ರಾಮರಾಜನು ನೋವಿನ ಮೇಲೆ ಬರೆಕೊಟ್ಟ ಹಾಗೆ ಮಾಡುವ ದಕ್ಕಾಗಿಯೇ ಒಬ್ಬೊಬ್ಬರಂತೆ ತರುಣ ಸ್ತ್ರೀಯರನ್ನು ಹಿಡಿದು ನನ್ನ ಬಳಿಗೆ ಕಳಿಸುವನೋ ಏನು? ಎಂದು ನುಡಿಯುತ್ತಿರಲು, ಹೊಸದಾಗಿ ಬಂದ ತರುಣಿಯು ತನ್ನ ಮೋರೆಯ ಮೇಲಿನ ಬುರುಕೆ

ಯನ್ನು ಚೆಲ್ಲಿಕೊಟ್ಟು ಮಾಸಾಹೇಬರ ಎದುರಿಗೆ ನಿಂತುಕೊಂಡಳು. ತನ್ನ ಮಗನ ಸರ್ವಸ್ವದ ನಾಶಕ್ಕೂ, ತನ್ನ ದುಃಖದ ಹೆಚ್ಚಳಕ್ಕೂ ಕಾರಣಳಾದ ನೂರಜಹಾನಳು ಅಕಸ್ಮಿಕವಾಗಿ ತನ್ನ ಎದುರಿಗೆ ನಿಂತದ್ದನ್ನು ನೋಡಿ ಮೇಹರ್ಜಾನಳಿಗೂ, ಮಾರ್ಜಿನೆಗೂ ಬಹಳ ಆಶ್ಚರ್ಯ ವಾಯಿತು. ಅತ್ತ ನೂರಜಹಾನಳಾದರೂ ತಾನು ಒಮ್ಮಿಂದೊಮ್ಮೆ ಮಾಸಾಹೇಬರ ಬಳಿಗೇ ಬಂದದ್ದಕ್ಕಾಗಿ ಆಶ್ಚರ್ಯಪಡುತ್ತಿದ್ದಳು. ಮಾಸಾಹೇಬರನ್ನು ನೋಡಿ ಆಕೆಯ ಮನಸ್ಸಿಗೆ ಬಹಳ ಸಮಾಧಾನವಾಯಿತು. ತನ್ನನ್ನು ಮದುವೆಯಾಗುವದಕ್ಕಾಗಿ ರಣಮಸ್ತಖಾನನು ಮಾಡಿದ ಭಯಂಕರ ಪ್ರತಿಜ್ಞೆಯನ್ನು ಆತನು ಹ್ಯಾಗೆ ನೆರವೇರಿಸುವನೆಂಬದರ ಆಲೋಚನೆಯೊಂದೇ ನೂರಜಾಹನಳ ಮನಸ್ಸಿನಲ್ಲಿ ಇತ್ತು. ರಣಮಸ್ತಖಾನನು ರಾಮರಾಜನನ್ನು ಕೂಡಿಕೊಂಡದ್ದು ತನ್ನ ಪ್ರತಿಜ್ಞೆಯನ್ನು ಪೂರ್ಣಮಾಡುವದಕ್ಕಾಗಿಯೇ ಎಂದು ಆಕೆಯು ತಿಳಿದಿದ್ದಳು; ಯಾಕೆಂದರೆ ರಣಮಸ್ತಖಾನನ ಸ್ವಾಭಿಮಾನ–ಸ್ವಜಾತ್ಯಾಭಿಮಾನಗಳ ಪರಿಚಯವೂ ತನ್ನ ಮೇಲಿದ್ದ ಆತನ ಅಕೃತ್ರಿಮ ಪ್ರೇಮದಪರಿಚಯವೂ ನೂರಜಹಾನಳಿಗೇಇದ್ದವು; ಆದ್ದರಿಂದ ಆಕೆಯು ರಣಮಸ್ತಖಾನನನ್ನು ಮನಮುಟ್ಟಿ ಪ್ರೀತಿಸುತ್ತಿದ್ದಳು. ರಣಮಸ್ತಖಾನನ ತಾಯಿಯಾದ್ದರಿಂದ ಮಾಸಾಹೇಬರ ಮೇಲಿನ ನೂರಜಹಾನಳ ವಿಶ್ವಾಸವು ಕಡಿಮೆಯಾಗಿದ್ದಿಲ್ಲ; ಆದರೆ ಮಾಸಾಹೇಬರು ಮಾತ್ರ ನೂರಜಹಾನಳನ್ನು ನೋಡಿ ಹುಬ್ಬುಗಂಟಿಕ್ಕಿದರು. ತನ್ನ, ಹಾಗು, ತನ್ನ ಮಗನ ಸರ್ವಸ್ವದ ನಾಶಕ್ಕೆ ಈಕೆಯೇ ಕಾರಣಳಾದಳೆಂಬ ಕಾರಣದಿಂದ ಮೇಹರ್ಜಾನಳ ಮನಸ್ಸಿನಲ್ಲಿ ನೂರಜಾಹನಳ ವಿಷಯವಾಗಿ ತಿರಸ್ಕಾರವು ಉತ್ಪನ್ನವಾಯಿತು. ಮೇಲಾಗಿ ಮತ್ತೊಂದು ಮಾತಿನ ಸಂಶಯವು ಮೇಹರ್ಜಾನಳ ಮನಸ್ಸಿನಲ್ಲಿ ಉತ್ಪನ್ನವಾಗಿ, ಆಕೆಯ ಮನಸ್ಸು ಮತ್ತಿಷ್ಟು ವ್ಯಗ್ರವಾಯಿತು. ರಾಮರಾಜನು ನೂರಹಜಾನಳನ್ನು ಸ್ವಾಧೀನಪಡಿಸಿಕೊಂಡು ತನ್ನನ್ನು ಛಲಿಸುವದಕ್ಕಾಗಿಯೇ ಬುದ್ಧಿಪೂರ್ವಕವಾಗಿ ಆಕೆಯನ್ನು ತನ್ನ ಬಳಿಗೆ ಕಳಿಸಿರುವನೆಂದು ಮೇಹರ್ಜಾನಳು ಕಲ್ಪಿಸಿದಳು; ಆದ್ದರಿಂದ ಆಕೆಯು ನೂರಜಾಹನಳ ಯೋಗಕ್ಷೇಮವನ್ನೇನೂ ವಿಚಾರಿಸದೆ ಮಾರ್ಜಿನೆಗೆ – ಲೈಲೀ, ನನ್ನನ್ನು ಛಲಿಸುವದರಲ್ಲಿ ಇದಿಷ್ಟು ಕಡಿಮೆಯಾಗಿತ್ತು; ಆದ್ದರಿಂದ ನನ್ನ ದುರ್ದೈವವು ಈಕೆಯನ್ನು ಇಲ್ಲಿಗೆ ಬರಮಾಡಿತು. ಬಹಳ ನೆಟ್ಟಗಾಯಿತು; ಇನ್ನು ನೀವಿಬ್ಬರೂ ಇಲ್ಲಿಂದ ಹೊರಟುಹೋಗಿರಿ. ಈಕೆಯನ್ನು ಎರಡನೆಯದೊಂದು ಕೋಣೆಯಲ್ಲಿ ಇಡು, ನನ್ನ ಬಳಿಯಲ್ಲಿ ಬೇಡ. ನನ್ನ ಜಪಕ್ಕೆ ಸುಮ್ಮನೆ ವಿಘ್ನಮಾಡಬೇಡ, ಎಂದು ಹೇಳಿ ನೂರಜಹಾನಳ ಕಡೆಗೆ ಬೆನ್ನುಮಾಡಿ ಕುಳಿತುಕೊಂಡಳು.

ತನ್ನ ಒಡೆಯಳ ಸ್ವಭಾವವನ್ನು ಮಾರ್ಜಿನೆಯು ಪೂರ್ಣ ಬಲ್ಲವಳಾಗಿದ್ದಳು; ಆದ್ದರಿಂದ ಆಕೆಯು ಎರಡನೆಯ ಮಾತಾಡದೆ ನೂರುಜ ಹಾನಳನ್ನು ಕರಕೊಂಡು ಬೇರೊಂದು ಕೋಣೆಗೆ ಹೋದಳು. ಹೀಗೆ ಮಾಡುವದು ಮಾರ್ಜಿನೆಗೆ ಯೋಗ್ಯವಾಗಿ ತೋರಲಿಲ್ಲ; ಆದರೆ ಮೇಹರ್ಜಾನಳ ದುರವಸ್ಥೆಯನ್ನು ಅರಿತ ಆ ಪ್ರೆಮಲಸ್ವಭಾವದ ವೃದ್ಧದಾಸಿಯು, ಆಕೆಯ ಮನಸ್ಸಿನ ವಿರುದ್ಧವಾಗಿ ನಡೆಯಲಾರದೆ ನೂರಜಹಾನಳನ್ನು ಬೇರೊಂದು ಕೋಣೆಗೆ ಕರಕೊಂಡು ಹೋದಳು. ನೂರಜಹಾನಳೂ ಅತ್ಯಂತ ಅಭಿಮಾನದ ಸ್ವಭಾವದವಳಿದ್ದಳು. ಆಕೆಗೆ

ಮಾಸಾಹೇಬರ ಈ ರೀತಿಯು ಸರಿಬೀಳಲಿಲ್ಲ. ಮಾಸಾಹೇಬರು ನೂರಜಹಾನಳ ಕಡೆಗೆ ಬೆನ್ನುಮಾಡಿ ಕುಳಿತುಕೊಳ್ಳುವದರೊಳಗೆ ನೂರಜಹಾನಳು ಹೊರಗೆ ಹೋಗುವದಕ್ಕಾಗಿ ಬಾಗಿಲಕಡೆಗೆ ತಿರುಗಿದ್ದಳು. ತಮ್ಮ ಸರ್ವಸ್ವದ ನಾಶಕ್ಕೆ ನೂರಜಹಾನಳೇ ಕಾರಣಳೆಂಬ ಸಿಟ್ಟು, ಮೇಹರ್ಜಾನಳಂತೆ ಮಾರ್ಜಿನೆಯ ಮನಸ್ಸಿನಲ್ಲಿಯೂ ಇತ್ತು; ಆದ್ದರಿಂದ ಆಕೆಯು ನೂರುಜಹಾನಳನ್ನು ಕುರಿತು— ಅವ್ವಾ, ಈವರೆಗೆ ನಮ್ಮ ಸರ್ವಸ್ವದ ನಾಶಮಾಡಿ, ಇಂಥ ವಿಪತ್ಕಾಲದಲ್ಲಿ ಮತ್ತೆ ನಮ್ಮ ಡಂಕು ತೀರಿಸಿಕೊಳ್ಳುವದಕ್ಕೆ ಯಾಕೆ ಬಂದೆಯೆಂದು ಕೇಳಲು, ನೂರುಜಹಾನಳು ಕ್ರುದ್ಧದೃಷ್ಟಿಯಿಂದ ಮಾರ್ಜಿನೆಯನ್ನು ನೋಡುತ್ತ ತಟ್ಟನೆ ಆಕೆಗೆ— ನೀವಿಬ್ಬರೂ ಇಲ್ಲಿ ಇರುತ್ತೀರೆಂಬದು ನನ್ನ ಪಾದರಕ್ಷೆಗೆ ಕೂಡಗೊತ್ತಿದ್ದಿಲ್ಲ. ಆ ದುಷ್ಟ ರಾಮರಾಜನು ಕಳಿಸಿಕೊಟ್ಟದ್ದರಿಂದ ನಾನು ಪರಾಧೀನಳಾಗಿ ಇಲ್ಲಿಗೆ ಬಂದೆನು, ಎಂದು ಎದುರುತ್ತರವನ್ನು ಕೊಟ್ಟಳು. ಇಂಥ ಎದುರುತ್ತರವನ್ನು ಕೊಡಲಿಕ್ಕೆ ನೂರಜಹಾನಳಿಗೆ ಅಂಥ ಕಾರಣವೇನೂ ಇದ್ದಿಲ್ಲ; ಆದರೆ ಮೇಹರ್ಜಾನಳ ನಡತೆಯನ್ನು ನೋಡಿದ್ದರಿಂದಲೂ, ಮಾರ್ಜಿನೆಯ ಮಾತುಗಳನ್ನು ಕೇಳಿದ್ದರಿಂದಲೂ ಸಂತಾಪಸ್ವಭಾವದ ಆ ತರುಣಿಯ ಮುಖದಿಂದ ಸಿಟ್ಟಿನ ಭರದಲ್ಲಿ ಅಂಥ ಎದುರುತ್ತರವು ತಾನೇ ಹೊರಟುಹೋಯಿತು. ಈ ಎದುರುತ್ತರವನ್ನು ಕೇಳಿದ ಕೂಡಲೇ ಮಾರ್ಜಿನೆಯಾದರೂ ಅಲ್ಲಿ ನಿಲ್ಲದೆ ಸಂತಾಪದಿಂದ ಹೊರಟುಹೋದಳು; ಆದರೆ ಮಾರ್ಜಿನೆಯ ಈ ಸಿಟ್ಟು ಬಹಳ ಹೊತ್ತು ನಿಲ್ಲಲಿಲ್ಲ. ಮಾಸಾಹೇಬರ ಮನಸ್ಸಿನ ಸ್ಥಿತಿಯಾದರೂ ಬೇಗನೆ ಬದಲಾಯಿತು. ನೂರಜಹಾನಳು ಹೋದಕೂಡಲೇ ಮಾಸಾಹೇಬರು ಮನಸ್ಸಿನಲ್ಲಿ— ಈ ಹುಡುಗಿಯು ಇಂಥ ಪ್ರಸಂಗದಲ್ಲಿ ರಾಮರಾಜನ ಕೈಯಲ್ಲಿ ಹ್ಯಾಗೆ ಸಿಕ್ಕಿರಬಹುದು? ಏನಾದರೂ ಪ್ರಸಂಗಬಡಗಿ ಆ ತರುಣಿಯು ಆತನ ಸೆರೆಯಾಳಾಗಿರ ಬಹುದೋ? ಪಾಪ! ಹೀಗಾಗಿದ್ದರೆ ಆಕೆಯೂ ನನ್ನಂತೆ ಪರಾಧೀನ ಳಾಗಿರುವಳು. ಇಂಥ ಪ್ರಸಂಗದಲ್ಲಿ ಎರಡು ಒಳ್ಳೆಯ ಮಾತುಗಳನ್ನಾದರೂ ಆಡಿ ಆಕೆಯನ್ನು ಸಮಾಧಾನಗೊಳಿಸುವದು ಯೋಗ್ಯವು. ನಾನು ಆಕೆಯ ಸಂಗಡ ಪ್ರತ್ಯಕ್ಷ ಮಾತಾಡದಿದ್ದರೂ, ಮಾರ್ಜಿನೆಯ ಮುಖಾಂತರ ಆಕೆಯ ಯೋಗಕ್ಷೇಮವನ್ನು ವಿಚಾರಿಸತಕ್ಕದ್ದು. ಎಂಬ ವಿಚಾರಗಳು ಉತ್ಪನ್ನವಾದವು. ಮಾರ್ಜಿನೆಯು ಬಂದಕೂಡಲೆ ಮಾಸಾಹೇಬರು ಆಕೆಗೆ ತಮ್ಮ ವಿಚಾರವನ್ನೆಲ್ಲ ತಿಳಿಸಿ, ನೂರಜಹಾನಳ ಯೋಗಕ್ಷೇಮವನ್ನು ವಿಚಾರಿಸಹೇಳಿದರು.

## ನೂರಜಹಾನಳ ಸಾಹಸ

ಮಾರ್ಜಿನೆಯು ದೊಡ್ಡಮನಸ್ಸಿನವಳಿದ್ದಳು. ತಾವಿಬ್ಬರು ನೂರಜಹಾನಳ ಮನಸ್ಸನ್ನು ನೋಯಿಸಿದ ಬಗ್ಗೆ ಆಕೆಗೆ ಅಸಮಾಧಾನವಾಗಿತ್ತು ಆದರೆ ತನ್ನ ಮೇಹರ್ಜಾನಳ ಮನಸ್ಸಿನ ವಿರುದ್ಧ ನಡೆಯಲಾರದೆ, ನೂರಜಹಾನಳ ಸಂಗಡ ಆಕೆಯ ನಿಷ್ಠುರತನದಿಂದ ನಡಕೊಂಡಿದ್ದಳು. ಆಕೆಯು ಅದನ್ನು ಮರೆತು ನೂರಜಹಾನಳ ಬಳಿಗೆ ಹೋದಳು. ಅತ್ತ ನೂರಜಹಾನಳಿಗೂ ತಾನು

ಎದುರುತ್ತರ ಕೊಟ್ಟ ಬಗ್ಗೆ ಪಶ್ಚಾತ್ತಾಪವಾಗಿತ್ತು, ಮಾರ್ಜಿನೆಯು ತನ್ನ ಬಳಿಗೆ ಪುನಃ ಬಂದ ಕೂಡಲೆ ನೂರಜಹಾನಳು ಸೌಮ್ಯದಿಂದ ಆಕೆಯನ್ನು ಬರಮಾಡಿಕೊಂಡು, ಅಮ್ಮಾ ಮಾರ್ಜಿನೇ, ನೀನು ಹಿರಿಯಮನುಷ್ಯಳು, ಮಾಸಾಹೇಬರು ನನಗೆ ತಾಯಿಯ ಸಮಾನವು. ಹೀಗಿದ್ದು ನಾನು ನಿಮಗೆ ಎದುರುತ್ತರ ಕೊಟ್ಟದ್ದು ತಪ್ಪಾಯಿತು. ರಾಮರಾಜನ ಕೈಯಲ್ಲಿ ನಾನು ಅಕಸ್ಮಾತ್ತಾಗಿ ಸಿಕ್ಕು ಸೆರೆಯಾದ್ದರಿಂದ ನನಗೆ ಬಹಳ ವ್ಯಸನವಾಗಿರಲು, ನಿಮ್ಮಿಬ್ಬರನ್ನು ನೋಡಿ ನನಗೆ ಒಂದು ಆಧಾರ ದೊರೆತಂತಾಯಿತೆಂದು ತಿಳಿದಿದ್ದೆನು; ಆದರೆ ನೀವು ನಿಷ್ಠುರತನದಿಂದ ನನ್ನನು ನಿಷ್ಕಾರಣವಾಗಿ ದೂಡಿಕೊಡಲು, ನಾನು ರೇಗಿಗೆದ್ದು ಹಾಗೆ ಮಾತಾಡಿದೆನು. ನನ್ನಿಂದ ದೊಡ್ಡ ತಪ್ಪಾಯಿತು. ನಾನು ದುರ್ದೈವಿಯು, ಸಂಕಟದಲ್ಲಿ ಸಿಕ್ಕಿದ್ದೇನೆ. ನಾನು ಒಂದು ಮಾಡಲಿಕ್ಕೆ ಹೋದರೆ ದೈವವು ಮತ್ತೊಂದು ಮಾಡಿತು. ನನ್ನ ದುರ್ದೈವವೆ ನನ್ನನ್ನು ಅತ್ತ ಕರೆಕೊಂಡು ಬಂದಿತು, ಎಂದು ನುಡಿಯುತ್ತಿರಲು, ನೂರಜಾಹನಳ ಕಣ್ಣಲ್ಲಿ ನೀರುಗಳು ಬಂದವು. ಅದನ್ನು ನೋಡಿ ಮಾರ್ಜಿನೆಯ ಹೃದಯವು ಕರಗಿತು. ಆಕೆಯು ನೂರಜಹಾನಳನ್ನು ಎದೆಗವಚಿ ಕೊಂಡು— ''ತಂಗೀ, ಹೆದರಬೇಡ. ನೀನು ಇಲ್ಲಿಗೆ ಹ್ಯಾಗೆ ಬಂದೆ ಎಂಬುದನ್ನು ನನ್ನ ಮುಂದೆ ಹೇಳು; ಅಂದರೆ ನಾನು ಅದನ್ನೆಲ್ಲ ಮಾಸಾಹೇಬರ ಮುಂದೆ ಹೇಳಿ ಅವರ ಸಿಟ್ಟು ಇಳಿಸುವೆನು'' ಎಂದು ಹೇಳಲು, ನೂರಜಾಹನಳು ತನ್ನ ಯಾವತ್ತು ವೃತ್ತಾಂತವನ್ನು ಹೇಳತೊಡಗಿದಳು. ಮಾರ್ಜಿನೇ, ನೀನು ಹಿರಿಯ ಮನುಷ್ಯಳು. ಈಗಿನ ಹುಡುಗರ ಚಾಳಿಯನ್ನು ನೋಡಿ ಸಿಟ್ಟಾಗಬೇಡ, ನಗಬೇಡ. ರಣಮಸ್ತಖಾನನು ನನ್ನನ್ನು ವಿಜಾಪುರಕ್ಕೆ ಕಳಿಸಿಹೋದ ಬಳಿಕ, ವಿಶೇಷವಾಗಿ ನೀನೂ ಮಾಸಾಹೇಬರೂ ನಮ್ಮ ಮನೆಗೆ ನನ್ನನ್ನು ರಣಮಸ್ತಖಾನನಿಗೆ ಕೊಡಬೇಕೆಂದು ಕೇಳಲಿಕ್ಕೆ ಬಂದು ಹೋದಬಳಿಕ, ರಣಮಸ್ತಖಾನನ ಆಶೆಯು ನನಗೆ ತಪ್ಪಿದಂತೆ ಆಯಿತು; ಯಾಕೆಂದರೆ, ಆತನ ಕುಲವೃತ್ತಾಂತವು ಯಾರಿಗೂ ಗೊತ್ತಿಲ್ಲ, ಆತನು ಕುಲೀನನೆಂಬದು ಗೊತ್ತಾದರೂ, ಆತನು ಮಾಡಿದ ಪ್ರತಿಜ್ಞೆಯು ನೆರವೇರುವದು ಅಸಂಭವವಾಗಿತ್ತು, ಮುಂದೆ ಬರಬರುತ್ತ ರಣಮಸ್ತಖಾನನ ನೆನವು ಸಹ ನನಗೆ ವಿಶೇಷವಾಗಿ ಆಗದಾಯಿತು; ಆದರೆ ರಾಮರಾಜನ ಸಂಗಡ ಮೂವರು ಬಾದಶಹರೂ ಯುದ್ಧವನ್ನು ಹೂಡಿ ಸೈನ್ಯದೊಡನೆ ವಿಜಯನಗರದ ಮೇಲೆ ಸಾಗಲು, ನನಗೆ ಪುನಃ ರಣಮಸ್ತಖಾನರ, ಅಥವಾ ನಮ್ಮ ನವಾಬಸಾಹೇಬರ ನೆನವು ಆಯಿತು. ನವಾಬಸಾಹೇಬರು ತಮ್ಮ ಪ್ರತಿಜ್ಞೆಯನ್ನು ಈಡೇರಿಸ ಬಹುದೆಂಬ ಆಶೆಯು ನನಗೆ ಉತ್ಪನ್ನವಾಯಿತು. ತಮ್ಮ ಪ್ರತಿಜ್ಞೆಯನ್ನು ಕೊನೆ ಗಾಣಿಸುವದಕ್ಕಾಗಿಯೇ ಅವರು ರಾಮರಾಜನಕಡೆಗಾಗಿರುವರೆಂದು ನನ್ನ ಭಾವನೆಯಾಯಿತು. ಹೊತ್ತು ನೋಡಿ ಅವರು ರಾಮರಾಜನ ಕುತ್ತಿಗೆಯನ್ನು ಕೊಯ್ಯದೆ ಬಿಡರೆಂದು ನಾನು ಈಗಲೂ ಪೂರ್ಣವಾಗಿ ನಂಬಿದ್ದೇನೆ ರಾಮರಾಜನ ಮೇಲೆ ನನ್ನ ಸಿಟ್ಟು ಇದ್ದಷ್ಟೇ ರಣಮಸ್ತಖಾನರ ಮೇಲೆ ನನ್ನ ಪ್ರೇಮವಿರುತ್ತದೆ. ಯುದ್ಧಪ್ರಸಂಗವು ಒದಗಿದ್ದರಿಂದ ಆ ಪ್ರೇಮವು ಮತ್ತಿಷ್ಟು ಜಾಗ್ರತವಾಯಿತು. ನಮ್ಮ ಮನೆಯೊಳಗಿನ ಗಂಡಸರೆಲ್ಲ ಯುದ್ಧಕ್ಕೆ ಹೋದದ್ದರಿಂದ ಬರಿಯ ಹೆಣ್ಣುಮಕ್ಕಳೇ ಮನೆಯಲ್ಲಿ ಉಳಿದೆವು. ನನಗೆ ಯುದ್ಧವಾರ್ತೆಗಳೇನೂ ತಿಳಿಯದಾದವು.

ರಾಮರಾಜನ ನಾಶವನ್ನು ಕಣ್ಣು ಮುಟ್ಟ ನೋಡುವ ಇಚ್ಛೆಯು ನನಗೆ ಉತ್ಪನ್ನವಾಯಿತು. ಮಾರ್ಜಿನೇ, ನನ್ನ ಸ್ವಭಾವವು ನಿನಗೆ ಅಲ್ಪಸ್ವಲ್ಪವಾದರೂ ಗೊತ್ತೇ ಇರುತ್ತದೆ. ನನ್ನ ಮನಸ್ಸಿನಲ್ಲಿ ಆ ಇಚ್ಛೆಯು ಉತ್ಪನ್ನವಾದ ಕೂಡಲೆ ಅದನ್ನು ಪೂರ್ಣಮಾಡಿಕೊಳ್ಳುವದನ್ನು ನಾನು ನಿಶ್ಚಯಿಸಿದೆನು; ಮನೆಯಲ್ಲಿ ಗಂಡಸರು ಇಲ್ಲದ್ದರಿಂದ ನನ್ನನ್ನು ಕೇಳುವವರೇ ಇಲ್ಲದಾಯಿತು. ಆಗ ನಾನು ಗಂಡಸರ ಯುದ್ಧದ ಉಡುಪು–ತೊಡವುಗಳನ್ನು, ಶಸ್ತ್ರಾಸ್ತ್ರಗಳನ್ನೂ ಸಜ್ಜುಮಾಡಿಕೊಂಡು, ಮನೆಯಲ್ಲಿ ಬಿಟ್ಟುಹೋಗಿದ್ದ ಒಂದು ಕುದುರೆಯನ್ನು ಸಿದ್ಧಗೊಳಿಸಿ, ಪುರುಷವೇಷದಿಂದ ನಾನು ಮನೆಯನ್ನು ಬಿಟ್ಟೆನು.

ಮಾರ್ಜಿನೇ, ನನ್ನ ಸಾಹಸಕ್ಕಾಗಿ ನೀನು ಮನಸ್ಸಿನಲ್ಲಿ ನನ್ನನ್ನು ಹಳಿಯುತ್ತಿರಬಹುದು; ನನಗೆ ಹೆಸರೂ ಇಡುತ್ತಿರಬಹುದು; ಆದರೆ ನಾನು ಅಂಥ ಸಾಹಸವನ್ನೇ ಮಾಡಿರುವದರಿಂದ ನೀನು ಎಷ್ಟು ಹೇಳಿದರೂ, ನನಗೆ ಎಷ್ಟು ಹೆಸರಿಟ್ಟರೂ ನಾನು ನಿನಗೆ ಬೇಡೆನ್ನುವದಿಲ್ಲ. ನಾನು ವಿಜಯನಗರದ ಹಾದಿಯನ್ನು ಹಿಡಿದು ಮುಂದಕ್ಕೆ ಸಾಗಿದೆನು. ನನ್ನನ್ನು ಮಾರ್ಗಸ್ಥರು ಕೌತುಕದಿಂದ ನೋಡುತ್ತಲಿದ್ದರು; ಆದರೆ ಸುದೈವದಿಂದಲೋ ದುರ್ದೈವದಿಂದಲೋ ಯಾರೂ ನನ್ನ ಗುರುತು ಹಿಡಿಯಲಿಲ್ಲ. ಕೆಲವು ಮಾರ್ಗವನ್ನು ಕ್ರಮಿಸಿ ಹೋದ ಬಳಿಕ ನನಗೆ ಹಾದಿಯಲ್ಲಿ ಮುಸಲ್ಮಾನ ಸೈನ್ಯಕ್ಕೆ ಸಾಮಗ್ರಿಗಳನ್ನು ಒಯ್ಯುವ ಕೆಲವು ಬಂಡಿಗಳು ಭೆಟ್ಟಿಯಾದವು. ಆ ಬಂಡಿಗಳನ್ನು ಮುಸಲ್ಮಾನ ಸೈನಿಕರು ರಕ್ಷಿಸುತ್ತಲಿದ್ದರು. ಪ್ರಾಯಸ್ಥರೆಲ್ಲ ಯುದ್ಧಕ್ಕೆ ಹೋದದ್ದರಿಂದ ಮುದುಕರು ಬಂಡಿಗಳ ಸಂರಕ್ಷಣದ ಕಾರ್ಯವನ್ನು ಮಾಡಬೇಕಾಗಿತ್ತು. ಮುದುಕರಾದ ಮುಸಲ್ಮಾನ ರಕ್ಷಕರಿಬ್ಬರು ನನ್ನನ್ನು ನೋಡಿ ಕೌತುಕಪಟ್ಟು— "ನೀನು ಯಾರು? ಇಷ್ಟು ಹುಡುಗತನದಲ್ಲಿ ನಿನಗೆ ಯುದ್ಧವು ಯಾಕೆ ಬೇಕಾಯಿತು? ನೀನು ಮನೆಯಲ್ಲಿ ಹೇಳಿಕೇಳಿ ಹೊರಟಿರುವೆಯೋ? ಕೇಳದೆ ಹೊರಟಿರುವೆಯೋ?" ಎಂದು ಪ್ರಶ್ನೆ ಮಾಡಿದರು. ಅದಕ್ಕೆ ನಾನು—"ನಮ್ಮ ಮನೆಯೊಳಗಿನವರೆಲ್ಲರು ಮೊದಲೇ ಯುದ್ಧಕ್ಕೆ ಹೋದರು. ನನಗೆ ಯುದ್ಧಕ್ಕೆ ಹೋಗುವ ಇಚ್ಛೆಯಾದ್ದರಿಂದ ನಾನೇ ಹೊರಟುಬಂದಿದ್ದೇನೆ. ನಾನು ವಿಜಾಪುರದೊಳಗಿ ನವನೊಬ್ಬ ಸರದಾರನ ಮಗನು" ಎಂದು ಹೇಳಿದೆನು. ಅದನ್ನು ಕೇಳಿ ಆ ವೃದ್ಧರಿಗೆ ಆಶ್ಚರ್ಯವಾದಂತೆ ತೋರಿತು. ನನ್ನ ದನಿಯಿಂದ ಅವರಿಗೆ ನಾನು ಹೆಂಗಸೆಂಬ ಸಂಶಯ ಬಂದಂತೆ ತೋರಿತು. ಅದನ್ನರಿತು ನಾನು ಅವರೊಡನೆ ಮಾತಾಡುವದನ್ನೇ ಕಡಿಮೆ ಮಾಡಿದೆನು. ಮುಂದೆ ಅವರೂ ಅಷ್ಟು ಲಕ್ಷಗೊಡಲಿಲ್ಲ. ಸಂಜೆಯವರೆಗೆ ಹಾದಿಯನ್ನು ನಡೆದು ಹೋದಬಳಿಕ ಆ ಕಾವಲು ಗಾರರು ನನ್ನನ್ನು ಕುರಿತು— "ಬಚ್ಚಾ, ನೀನು ಬಹಳ ದಣಿದಂತೆ ತೋರುತ್ತದೆ; ಆದ್ದರಿಂದ ಯಾವದದಾರೂ ಒಂದು ಬಂಡಿಯಲ್ಲಿ ಮಲಗಿಕೋ" ಎಂದು ಹೇಳಿದರು. ನನಗೂ ಅಷ್ಟೇ ಬೇಕಾಗಿತ್ತು. ಮುಂಜಾವಿನಿಂದ ಒಂದೇ ಸವನೆ ಕುದುರೆಯ ಮೇಲೆ ಕುಳಿತು ನನ್ನ ಟೊಂಕವು ನೋಯುತ್ತಿತ್ತು. ನಾನು ಸ್ವಲ್ಪ ಸಂಕೋಚಿಸಿದಂತೆ ತೋರಿಸಿ ಕಡೆಗೆ ಒಂದು ಬಂಡಿಯಲ್ಲಿ ಮಲಗಿಕೊಂಡೆನು. ಬಂಡಿಗಳು ಮಧ್ಯರಾತ್ರಿಯವರೆಗೆ ಹಾದಿಯನ್ನು ನಡೆದುಹೋದವು. ಬಂಡಿಯನ್ನು ಹೊಡೆಯುವವರು ತೂಕಡಿಸುತ್ತ ಸಾಗಿದರು. ಅವರು ಹಾದಿಯನ್ನು ಕ್ರಮಿಸುತ್ತಿರುವಾಗ ಹಾದಿಯು ತಪ್ಪಿದಂತೆ ಕಾಣುತ್ತದೆಂದು ಯಾರೋ ಒಬ್ಬರು

ಶಂಕಿಸಿದರು. ಅವರು ಅತ್ತಿತ್ತ ಹಾದಿಯನ್ನು ನೋಡುತ್ತಿರಲು, ಅಷ್ಟರಲ್ಲಿ ಯಾರೋ ಒಬ್ಬನು ಅವರಿಗೆ ಭೆಟ್ಟಿಯಾಗಿ, ನಿಮಗೆ ಹಾದಿಯನ್ನು ತೋರಿಸುತ್ತೇನೆಂದು ಹೇಳಿ, ಬಂಡಿಗಳನ್ನು ಸಾಗಿಸಿಕೊಂಡು ಹೋದನು.ಮುಂದೆ ತಾಸೆರಡುತಾಸು ಬಂಡಿಗಳು ಹೋಗಿರಬಹುದು, ಅಷ್ಟರಲ್ಲಿ ಬಂಡಿಗಳನ್ನು ಸಾಗಿಸಿಕೊಂಡು ಹೋಗುವವನು ಸಿಳ್ಳುಹೊಡೆದನು. ಮುಂದೆ ಸ್ವಲ್ಪಹೊತ್ತಿನಲ್ಲಿ ಇಪ್ಪತ್ತು ಇಪ್ಪತ್ತೈದು ಜನರು ಬಂಡಿಯನ್ನು ಸುತ್ತುಗಟ್ಟಿದರು. ಅವರ ಮಾತುಗಳು ನನಗೆ ತಿಳಿಯಲಿಲ್ಲ, ಅವೇನೋ ಕನ್ನಡ ಮಾತುಗಳಂತೆ ! ಮುಂದೆ ಸ್ವಲ್ಪಹೊತ್ತಿನಲ್ಲಿ ಮತ್ತೆ ಇಪ್ಪತ್ತು ಇಪ್ಪತ್ತೈದು ಜನರು ಬಂದು. ಅವರು,ವಿಜಯನಗರದ ದಂಡಾಳುಗಳೆಂದು ಗೊತ್ತಾಯಿತು. ಅವರಲ್ಲಿ ಇಪ್ಪತ್ತಿಪ್ಪತ್ತೈದು ಜನರು ನಮ್ಮ ಬಂಡಿಗಳನ್ನು ಕಾಯಲಿಕ್ಕೆ ನಿಂತು,ಉಳಿದವರು ಎತ್ತ ಕಡೆಗೋ ಹೋದರು. ನಮ್ಮವರು ಸ್ವಲ್ಪ ಜನರು, ಮೇಲೆ ಮುದುಕರು; ಆದ್ದರಿಂದ ವಿಜಯನಗರದ ದಂಡಾಳುಗಳ ಮುಂದೆ ಅವರ ಆಟ ನಡೆಯಲಿಲ್ಲ. ಜನರ ಈ ಗದ್ದಲವನ್ನು ನೋಡಿ ನಾನು ಬಂಡಿಯಲ್ಲಿ ಸುಮ್ಮನೆ ಮಲಗಿಬಿಟ್ಟೆನು. ಬಂಡಿಯ ಒಂದೊಂದು ಮಗ್ಗಲಿಗೆ ಒಬ್ಬೊಬ್ಬರಂತೆ ಅವರು ಕಾಯಲಿಕ್ಕೆ ನಿಂತಿದ್ದರಿಂದ ನನಗೆ ಮಿಸುಕಾಡಲಿಕ್ಕೆ ಸಹ ಆಸ್ಪದ ದೊರೆಯಲಿಲ್ಲ. ಹೀಗೆ ನಾನು ಬಗೆಹರಿಯದ ಚಿಂತೆಯಿಂದ ಮಲಗಿರಲು, ಬೆಳ್ಳಗೆ ಬೆಳಗಾಯಿತು.

ಬೆಳಗಾದ ಕೂಡಲೆ ವಿಜಯನಗರದ ದಂಡಿನವರು ಬಂಡಿಗಳನ್ನು ಶೋಧಿಸಲು ಪಕ್ರಮಿಸಿದರು. ಆಗನಾನು ಮೇಲಕ್ಕೆ ಎದ್ದು ನಿಂತುಕೊಳ್ಳಲು ಅವರೆಲ್ಲರ ದೃಷ್ಟಿಯು ನನ್ನ ಕಡೆಗೆ ತಿರುಗಿ, ಅವರು ನನ್ನ ಸುತ್ತುಮುತ್ತು ನೆರೆದು ಚೇಷ್ಟೆಮಾಡಹತ್ತಿದರು. ಅವರ ಕನ್ನಡ ಮಾತುಗಳು ನನಗೆ ಸರ್ವಥಾ ತಿಳಿಯುತ್ತಿದ್ದಿಲ್ಲ. ಅಂಥ ಮಾತುಗಳನ್ನು ನಾನು ಹಿಂದಕ್ಕೆ ವಿಜಯನಗರದ ದರ್ಬಾರದಲ್ಲಿ ರಾಮರಾಜನ ಮುಂದೆ ನಿಂತಾಗೂ, ನನ್ನನ್ನು ಆತನ ದಂಡಾಳುಗಳು ಹಿಡಕೊಂಡು ಹೋಗುತ್ತಿರುವಾಗ ಮಾತ್ರ,ಒಮ್ಮೆ ಕೇಳಿದ್ದೆನು. ನನ್ನನ್ನು ನೋಡಿ ಅವರು ''ಈತನು ಹೆಂಗಸಿರ ಬಹುದೆಂದು ಶಂಕಿಸುತ್ತಲಿದ್ದರು. ಅಷ್ಟರಲ್ಲಿ ನನ್ನ ತಲೆಯ ಮುಂಡಾಸವು ಕೆಳಗೆ ಬಿದ್ದು, ನನ್ನ ತಲೆಕೂದಲುಗಳು ಬೆನ್ನ ಮೇಲೆ ಹರವಲು, ಅವರು ನಿಶ್ಶಂಕರಾಗಿ ಮನಸ್ಸಿಗೆ ಬಂದಂತೆ ನನಗೆ ಚೇಷ್ಟೆಮಾಡಿ ನಗಹತ್ತಿದರು. ಮುಂದೆ ಅವರು ನನ್ನನ್ನು ರಾಮರಾಜನ ಮುಂದೆ ನಿಲ್ಲಿಸಲು, ರಾಮರಾಜನು ಕೂಡಲೆನನ್ನ ಗುರುತ ಹಿಡಿದನು. ಆಗ ಆ ದುಷ್ಟನು ನನ್ನನ್ನು ಎಷ್ಟು ಹಂಗಿಸಿ ಉಪಹಾಸಮಾಡಿ ಮಾತಾಡಿರಬಹುದೆಂಬುದನ್ನು ನೀನೇ ತರ್ಕಿಸು. ಅದನ್ನೆಲ್ಲ ನಾನು ಹೇಳಲಾರೆನು. ಕಡೆಗೆ ಆತನು ಯುದ್ಧಮುಗಿದ ಬಳಿಕ ನನ್ನನ್ನು ರಣಮಸ್ತಖಾನನಿಗೆ ಲಗ್ನ ಮಾಡಿಕೊಡಬೇಕಾಗಿದೆಯೆಂದು ಹೇಳಿ, ನನ್ನನ್ನು ಇಲ್ಲಿಗೆ ಕಳಿಸಿಕೊಟ್ಟ ನೆಂದಬಳಿಕ ಮಾರ್ಜಿನೇ, ನಿಮ್ಮ ಬಳಿಗೆ ನಾನು ಬಂದದ್ದರಲ್ಲಿ ನನ್ನ ಅಪರಾಧವೇನಿದೆ ನೀನೇ ಹೇಳು?

ಈ ಮೇರೆಗೆ ನೂರಜಹಾನಳು ತನ್ನ ವೃತ್ತಾಂತವನ್ನೇ ಹೇಳಿದ್ದನ್ನು ಕೇಳಿ ಮಾರ್ಜಿನೆಯು ಆಶ್ಚರ್ಯಪಟ್ಟು, ಇಂಥ ಸಾಹಸ ಮಾಡಿದ್ದಕ್ಕಾಗಿ ಆಕೆಯು ನೂರಜಹಾನಳಿಗೆ ಬಹಳ ಸಿಟ್ಟು ಮಾಡಿದಳು. ನೂರಜಹಾನಳು ಪಟ್ಟ ಕಷ್ಟವನ್ನು ನೆನಿಸಿ ಮಾರ್ಜೀನೆಯು ಬಹಳವಾಗಿ

ಮರುಗಿದಳು. ಆಕೆಯು ನೂರಜಹಾನಳಿಗೆ ನಾನು ಮಾಸಾಹೇಬರ ಬಳಿಗೆ ಹೋಗಿ ಅವರ ಸಿಟ್ಟನ್ನು ಇಳಿಸುವೆನು, ಚಿಂತೆಮಾಡಬೇಡ, ಎಂದು ಹೇಳಿ, ಮಾಸಾಹೇಬರ ಬಳಿಗೆ ಹೋಗಿ ಎಲ್ಲ ವೃತ್ತಾಂತವನ್ನು ಹೇಳಿದಳು. ಅದನ್ನು ಕೇಳಿ ಮಾಸಾಹೇಬರು ಬಹಳ ಆಶ್ಚರ್ಯಪಟ್ಟರು. ನೂರಜಹಾನಳ ದುರವಸ್ಥೆಯನ್ನು ಕೇಳಿ ಅವರು ಮರುಗಿದರು. ನೂರಜಹಾನಳು ಕಣ್ಣೀರು ಹಾಕಿದಳೆಂಬದನ್ನು ಕೇಳಿ ಅವರು ಮಾರ್ಜಿನೆಗೆ ಹೋಗು, ನೂರಜಾಹನಳನ್ನು ಕರಕೊಂಡು ಬಾ, ಎಂದು ಹೇಳಿದರು. ಮಾರ್ಜಿನೆಯು ಕೂಡಲೆ ಹೋಗಿ ನೂರಜಹಾನಳನ್ನು ಕರೆಕೊಂಡು ಮಾಸಾಹೇಬರ ಬಳಿಗೆ ಬಂದಳು. ಮಾಸಾಹೇಬರು ನೂರಜಹಾನಳನ್ನು ಕರೆದು ಆದರಿಸಿದರು. ಸಮ ದುಃಖಿಗಳಾದ ಅವರಲ್ಲಿ ಪರಸ್ಪರ ಸಖ್ಯವು ಹೆಚ್ಚುತ್ತಹೋಯಿತು. ತನ್ನ ಮಗನು ರಾಮರಾಜನನ್ನು ಕೂಡಿಕೊಂಡು ಬಾದಶಹರ ದ್ರೋಹವನ್ನು ಚಿಂತಿಸಿರುವನೆಂದು ಮಾಸಾಹೇಬರು ತಿಳಿಕೊಂಡಿದ್ದರು; ಆದರೆ ರಾಮರಾಜನ ಘಾತಮಾಡಿ ಬಾದಶಹನ ಹಿತ ಮಾಡುವದಕ್ಕಾಗಿಯೇ ರಣಮಸ್ತಖಾನನು ರಾಮರಾಜನನ್ನು ಕೂಡಿರುವನೆಂದು ನೂರಜಹಾನಳು ಹೇಳಹತ್ತಿದಳು. ಹಿಂದಕ್ಕೆ ನೂರಜಾಹನಳ ಮುಂದೆ ತಮ್ಮ ಮಗನು ಕುಂಜವನದ ಏಕಾಂತದಲ್ಲಿ ಮಾಡಿದ ಪ್ರತಿಜ್ಞೆಯನ್ನು ಮರೆಗೆ ನಿಂತು ಮಾಸಾಹೇಬರು ಕೇಳಿದ್ದರಿಂದ, ನೂರಜಹಾನಳ ಮಾತು ಅವರಿಗೆ ಅಷ್ಟು ಅಶಕ್ಯವಾಗಿ ತೋರಲಿಲ್ಲ. ಹಾಗೆ ಇದ್ದರೂ ಇರಬಹುದೆಂದು ಭಾವಿಸಿ ಅವರು ಸ್ವಲ್ಪ ಸಮಾಧಾನಪಟ್ಟು, ತಾವು ರಾಮರಾಜನ ಈ ಪ್ರತಿಬಂಧದಿಂದ ಪಾರಾಗಿ ಹೋಗಲಿಕ್ಕೆ ಹಂಚಿಕೆಯನ್ನು ಯೋಚಿಸಹತ್ತಿದರು. ಧನಮಲ್ಲನನ್ನು ಒಲಿಸಿಕೊಂಡ ಹೊರತು ಯಾವ ಹಂಚಿಕೆಗಳೂ ಕೈಗೂಡುವ ಹಾಗಿದ್ದಿಲ್ಲ. ಧನಮಲ್ಲನ ದುಷ್ಟಬುದ್ಧಿಯನ್ನು ಮಾಸಾಹೇಬರು ಅರಿತಿದ್ದರೂ,ಕಾರ್ಯವು ಸಾಧಿಸುವವರೆಗೆ ಆತನ ಅನುವರ್ತನೆ ಮಾಡಲೇಬೇಕೆಂದು ತಿಳಿದು, ಅವರು ತಮ್ಮ ಸಿಟ್ಟನ್ನೆಲ್ಲ ನುಂಗಿಕೊಂಡು ಧನಮಲ್ಲನ್ನು ರಮಿಸುತ್ತಲಿದ್ದರು. ನೂರಜಹಾನಳೂ ಧನಮಲ್ಲನನ್ನು ಸವಿಮಾತುಗಳಿಂದ ಮೋಹಗೊಳಿಸಹತ್ತಿದಳು. ಆಕೆಯು ಆ ದುಷ್ಟನಿಗೆ ದೊಡ್ಡ ದೊಡ್ಡ ಉಚಿತಗಳ ಆಶೆಯನ್ನು ತೋರಿಸಹತ್ತಿದಳು. ಇದರಿಂದ ಧನಮಲ್ಲನ ವೃತ್ತಿಯುತ ಹೆಚ್ಚುಕಡಿಮೆಯಾಯಿತು. ಆತನು ತನ್ನ ಮೌನವನ್ನು ಬಿಟ್ಟುಕೊಟ್ಟಿದ್ದನು. ಯುಕ್ತಿಯಿಂದ ಯುದ್ಧದ ವಾರ್ತೆಗಳನ್ನು ಕೇಳಿ ಅವನ್ನೆಲ್ಲ ಮೆಹರ್ಜಾನ–ನೂರಜಹಾನರಿಗೆ ಹೇಳುತ್ತಲಿದ್ದನು. ಆದರೆ ಆತನು ತನ್ನ ಅಜ್ಞಾವಲು ಮಾತ್ರ ಸಡಿಲಿಸಿದ್ದಿಲ್ಲ. ಇವರು ತನ್ನ ಕಣ್ಣುತಪ್ಪಿಸಿ ಓಡಿಹೋಗುವ ಹವಣಿಕೆಯಲ್ಲಿದ್ದಾರೆಂದು ಆತನು ತಿಳಿದುಕೊಂಡಿದ್ದನು. ನೂರಜಹಾನಳು ಹೋದರೂ ಚಿಂತೆಯಿಲ್ಲ, ಮಾಸಾಹೇಬರು (ಮೆಹರ್ಜಾನಳು) ಮಾತ್ರ ಹೋಗಲಾರರೆಂದು ಆತನು ಜಾಗರೂಕನಾಗಿದ್ದನು. ಆತನು ಆ ಸ್ತ್ರೀಯರಿಗೆ—''ನಾನು ನಿಮ್ಮ ಬಿಡುಗಡೆಯನ್ನು ನಿಶ್ಚಯವಾಗಿ ಮಾಡುತ್ತೇನೆ. ನನ್ನ ಕಾವಲು ಇರುವತನಕ ನಿಮ್ಮ ಕೂದಲು ಕೂಡ ಕೊಂಕಲಾರದು. ನಿಮ್ಮ ಬಿಡುಗಡೆ ಮಾಡಲಿಕ್ಕೆಯೋಗ್ಯ ಸಂಧಿಯು ಮಾತ್ರ ಒದಗಲಿಕ್ಕೆಬೇಕು. ಆ ಸಂಧಿಯು ಒದಗುವವರೆಗೆ ಸಮಾಧಾನ ತಾಳಿರಿ'' ಎಂದು ಹೇಳುತ್ತಲಿದ್ದನು. ನಿರುಪಾಯರಾಗಿ ಆ ದೈವಹೀನ ಪ್ರಾಣಿಗಳು ಕಷ್ಟದಿಂದ ಕಾಲಹರಣ ಮಾಡಹತ್ತಿದರು.

# ರಣಮಸ್ತನ ಐಂದ್ರಜಾಲವು !

ಈ ಮೇರಗೆ ಕುಂಜವನದಲ್ಲಿ ಆ ದೈವಹೀನ ಪ್ರಾಣಿಗಳು ಕಷ್ಟದಿಂದ ಕಾಲಹರಣ ಮಾಡುತ್ತಿರಲು, ಇತ್ತ ರಾಮರಾಜನ ವೈರಿಗಳ ಕಡೆಯ ಸುದ್ದಿಯನ್ನು ಹೇಳಿಬಂದ ರಣಮಸ್ತಖಾನನ ಮುಂದೆ, ನೂರಜಹಾನಳು ಅಕಸ್ಮಾತ್ತಾಗಿ ತನ್ನ ಕೈಗೆ ಸಿಕ್ಕ ಸುದ್ದಿಯನ್ನು ಹೇಳಿದನು. ನೂರಜಹಾನಳ ಹೆಸರು ಕೇಳಿದ ಕೂಡಲೆ ರಣಮಸ್ತನು ಕಕ್ಕಾಬಿಕ್ಕಿಯಾದನು. ಈ ಪ್ರಸಂಗದಲ್ಲಿ ನೂರಜಾಹನಳು ರಾಮರಾಜನ ಕೈಗೆ ಹ್ಯಾಗೆ ಸಿಕ್ಕಿರಬಹುದೆಂದು ಆತನು ಆಲೋಚಿಸಹತ್ತಿದನು. ಅಷ್ಟರಲ್ಲಿ ರಾಮರಾಜನು ರಣಮಸ್ತನನ್ನು ಕುರಿತು–ರಣಮಸ್ತ ನಿನ್ನ ಅರಗಿಳಿಯು ಸಿಕ್ಕಿತೆಂದು ಉಬ್ಬಬೇಡ. ಅದನ್ನು ನಾನು ಎಲ್ಲಿಟ್ಟಿರುವೆನೆಂಬದನ್ನು ಈ ಯುದ್ಧವು ಮುಗಿಯುವವರೆಗೆ ನಿನ್ನ ಮುಂದೆ ಹೇಳುವದಿಲ್ಲ, ಯುದ್ಧವು ಮುಗಿದಕೂಡಲೆ ನೂರಜಹಾನಳೊಡನೆ ನಿನ್ನ ಲಗ್ನವನ್ನು ಮಾಡುವೆನು. ಈಗಲೇ ನೀನು ನೂರಜಹಾನಳ ಮೋಹದಲ್ಲಿ ಸಿಕ್ಕರೆ, ನಿನ್ನ ಯುದ್ಧದ ಔತ್ಸುಕ್ಯವು ಕಡಿಮೆ ಯಾಗಬಹುದು ಅನ್ನಲು, ಅದನ್ನು ಕೇಳಿ ರಣಮಸ್ತನಿಗೆ ವಿಲಕ್ಷಣ ಸಂತಾಪವಾಯಿತು. ರಾಮ ರಾಜನು ನೂರಜಹಾನಳನ್ನು ತನ್ನ ರಾಣೀ ವಾಸದಲ್ಲಿ ಸೇರಿಸಿಕೊಂಡಿರಬಹುದೆಂದು ಕಲ್ಪಿಸಿ ಆತನು ಕ್ರೋಧಪರವಶನಾಗಿ ಕೆಂಪಡರಿದ ಕಣ್ಣುಗಳಿಂದ ರಾಮರಾಜನನ್ನು ನೋಡಹತ್ತಿದನು.

ರಣಮಸ್ತನ ಈ ಮನೋಭಾವವನ್ನರಿತ ರಾಮರಾಜನು ಕೂಡಲೆ ಆತನನ್ನು ಕುರಿತು— ರಣಮಸ್ತ ಶಾಂತನಾಗು. ನಿನ್ನ ಅರಗಿಳಿಯು ಪರಪುರುಷರ ಕಣ್ಣಿಗೆ ಸಹಬೀಳದಂತೆ ಯೋಗ್ಯ ವ್ಯವಸ್ಥೆ ಮಾಡಿರುವೆನು. ನೂರಜಹಾನಳು ಇನ್ನು ಸರ್ವಥಾ ನಿನ್ನವಳೇ ಇರುತ್ತಾಳೆಂದು ತಿಳಿದುಕೋ. ಆಯಿತು, ಇನ್ನು ನಾನು ಹೆಚ್ಚಿಗೆ ಮಾತಾಡುವದಿಲ್ಲ, ಈಗ ನೀನು ಯುದ್ಧದ ಯಾವ ಸುದ್ದಿಯನ್ನು ತಂದಿರುತ್ತೀಯೆಂಬುದನ್ನು ಹೇಳು. ಶತ್ರುಗಳ ಕಡೆಯ ಸುದ್ದಿಯೇನು? ಕೃಷ್ಣೆಯನ್ನು ದಾಟಿ ತಾಳೀಕೋಟೆಯ ಹತ್ತಿರ ಎಲ್ಲರೂ ಬಂದು ಕುಳಿತು ಒಬ್ಬರೊಬ್ಬರ ಆದರ ಸತ್ಕಾರ ಮಾಡುವಲ್ಲಿ ಮಗ್ನರಾಗಿರುತ್ತಾರೆಂದು ನಾನು ಕೇಳುತ್ತೇನೆ. ನಾವು ತುಂಗಭದ್ರೆಯನ್ನು ದಾಟಿ ಇಲ್ಲಿ ಬಂದು ಕುಳಿತಿದ್ದರೂ, ಅವರ ಆದರ ಸತ್ಕಾರಗಳೇ ಮುಗಿಯಲೊಲ್ಲವಲ್ಲ! ತಮ್ಮ ಅನ್ನ ಸಾಮಗ್ರಿಗಳ ಬಂಡಿಗಳು ಯಾವ ಕಡೆಗೆ ಹೋಗುತ್ತವೆಂಬುದರ ಅರಿವು ಸಹ ಅವರಿಗೆ ಇದ್ದಂತೆ ತೋರುವದಿಲ್ಲ, ಅವರು ಮಾಡುತ್ತಾರಾದರೂ ಏನು? ಮೂರು ನಾಲ್ಕು ಜನರು ಒಟ್ಟುಗೂಡಿ ಬಂದಿದ್ದರೂ ಮುಂದಕ್ಕೆ ಸಾಗಿಬರುವ ಧೈರ್ಯವು ಅವರಿಗಾಗಲೊಲ್ಲದಲ್ಲ, ಅವರು ಏನು ಆಲೋಚಿಸುತ್ತಿರುವರು? ಹಿಂದಿರುಗಿ ಹೋಗಬೇಕೆಂದು ಆಲೋಚಿಸುತ್ತಿರುವರೋ ಏನು? ನಮ್ಮನ್ನು ನೋಡಿದ ಕೂಡಲೆ ಅವರ ಎದೆಯೊಡೆದು ನೀರಾಯಿತೇನು? ನಾವು ಹಾದಿಯನ್ನು ನೋಡುವತನಕ ನೋಡಿ ಆಮೇಲೆ ಒಮ್ಮೆಲೆ ಅವರ ಮೈಮೇಲೆ ಬಿದ್ದು ದೂಳಹಾರಿಸುವೆವು. ಅವರಿಗೆ ನೀರು ಬೇಡಲಿಕ್ಕೆ ಸಹ ಆಸ್ಪದ ಕೊಡಲಿಕ್ಕಿಲ್ಲ, ಯಾಕೆ ರಣಮಸ್ತ ಮೂಢನ ಹಾಗೆ ಸುಮ್ಮನೆ ನಿಂತುಕೊಂಡೆಯಲ್ಲ, ಮಾತಾಡು.

ರಾಮರಾಜನ ಈ ಮಾತುಗಳನ್ನು ಕೇಳಿ ರಣಮಸ್ತನು ತೋರಿಕೆಗಾಗಿ ಮುಗುಳುನಗೆ ನಕ್ಕು ರಾಮರಾಜನ ಸಾಮರ್ಥ್ಯಾತಿಶಯವನ್ನು ಒಪ್ಪಿಕೊಂಡಂತೆ ತೋರಿಸಿದನು. ರಾಮರಾಜನು ತನ್ನ ಇಬ್ಬರು ಬಂಧುಗಳೊಡನೆ ಮಹಾ ಸೈನ್ಯವನ್ನು ಕಟ್ಟಿಕೊಂಡು ಮುಸಲ್ಮಾನರ ಮೇಲೆ ಬೀಳುವದರಿಂದ ಮುಸಲ್ಮಾನರ ಪರಿಣಾಮ ನೆಟ್ಟಗಾಗಲಿಕ್ಕಿಲ್ಲೆಂದು, ಆ ಘಾತಕ ಸ್ವಭಾವದ ರಣಮಸ್ತನು ತಿಳಕೊಂಡಿದ್ದನು. ಹ್ಯಾಗಾದರೂ ಮಾಡಿ ರಾಮರಾಜನ ಇಬ್ಬರು ಬಂಧುಗಳನ್ನು ಬೇರೆ ಕಡೆಗೆ ಕಳಿಸಿ ರಾಯನ ಸೈನ್ಯದ ಕಸುವು ಕಡಿಮೆ ಮಾಡಬೇಕೆಂದು ಆತನು ಯೋಚಿಸುತ್ತಿದ್ದನು. ತನ್ನ ಈ ಯೋಜನೆಯನ್ನು ಸಾಧಿಸುವದಕ್ಕಾಗಿ ಆ ದುಷ್ಟರಣಮಸ್ತನು ರಾಮರಾಜನನ್ನು ಕುರಿತು ವಿನಯದಿಂದ ಮಹಾರಾಜರೇ, ಮುಸಲ್ಮಾನರು ಮುಂದುವರಿದು ಬರುವ ಹಾದಿಯನ್ನು ನೋಡುತ್ತ ತಾವು ಸುಮ್ಮನೆ ಕುಳಿತುಕೊಳ್ಳಬಾರದು. ತುಂಗಭದ್ರೆಯ ಬೇರೆಯೊಂದು ಕಡೆಯ ಕಾಲಹೊಳೆಯು ವೈರಿಗಳಿಗೆ ಗೊತ್ತಾದ ಹಾಗೆ ತೋರುತ್ತದೆ. ನೀವು ಇಲ್ಲಿ ಸ್ವಸ್ಥವಾಗಿ ಕುಳಿತುಕೊಳ್ಳುವದನ್ನು ನೋಡಿ ಮುಸಲ್ಮಾನರು ತುಂಗಭದ್ರೆಯ ಕಾಲಹೊಳೆಯ ದಾರಿಯಿಂದ ನಮ್ಮ ರಾಜ್ಯವನ್ನು ಪ್ರವೇಶಿಸಿ ವಿಜಯನಗರದವರೆಗೆ ಸಾಗಿ ಹೋಗಬೇಕೆಂದು ಎಣಿಕೆ ಹಾಕಿರುತ್ತಾರೆ. ಅವರು ನಿಮ್ಮ ತೋರಿಕೆಗಾಗಿ ಸ್ವಲ್ಪ ಸೈನ್ಯವನ್ನು ಇಲ್ಲಿ ಇಟ್ಟು, ತಮ್ಮ ಸೈನ್ಯದ ಮುಖ್ಯಮುಖ್ಯ ಭಾಗವನ್ನು ಆ ಕಾಲಹೊಳೆಯಕಡೆಗೆ ಸಾಗಿಸಿರುವರು. ಆ ಕಾಲಹೊಳೆಯು ಇಲ್ಲಿಂದ ಮೂರು ದಿನಗಳ ಹಾದಿಯ ಮೇಲೆ ಇರುತ್ತದೆಂದು ನನಗೆ ಸುದ್ದಿಯು ಗೊತ್ತಾಗಿರುತ್ತದೆ; ಆದ್ದರಿಂದ ತಾವು ತಮ್ಮ ಸೈನ್ಯದ ಬಹು ದೊಡ್ಡ ಭಾಗವನ್ನು ಆ ಕಾಲ ಹೊಳೆಯ ಕಡೆಗೆ ಶತ್ರುಗಳಿಗೆ ಎದುರಾಗುವದಕ್ಕಾಗಿ ಕಳಿಸಿದರೆ ಬಹಳ ನೆಟ್ಟಗಾಗುವದು. ಶತ್ರುಗಳು ಹುಡುಕಿಕೊಂಡಿರುವ ಕಾಲಹೊಳೆಯನ್ನು ತೋರಿಸಲಿಕ್ಕೆ ನನ್ನ ಚಾರರು ಸಿದ್ಧರಿರುತ್ತಾರೆ. ಈ ಪ್ರಸಂಗದಲ್ಲಿ ತಾವು ಉದಾಸೀನ ಮಾಡಿದರೆ, ಏನು ಪರಿಣಾಮವಾದೀತೆಂಬದನ್ನು ಹೇಳಲಾಗದು. ಇದರ ಮೇಲೆ ತಮ್ಮ ಇಚ್ಛೆಯು, ಎಂದು ಹೇಳಿದನು. ಅದನ್ನು ಕೇಳಿ ರಾಮರಾಜನು ನಕ್ಕು ರಣಮಸ್ತಖಾನನನ್ನು ಕುರಿತು— "ರಣಮಸ್ತ ನೀನು ಹೇಳುವದೆಲ್ಲ ಸರಿ; ಆದರೆ ನಾನು ವೈರಿಗಳನ್ನು ಇಲ್ಲಿಂದ ಉಲುಕಗೊಟ್ಟರಷ್ಟೇ ಅವರು ಕಾಲಹೊಳೆಯ ಕಡೆಗೆ ಹೋಗುವದು? ನಾನು ಇಲ್ಲಿಯೇ ಅವರ ಮೇಲೆ ಬಿದ್ದು ಅವರ ನಾಶಮಾಡಿ ಬಿಡುವೆನು; ಅಂದ ಬಳಿಕ ವೈರಿಗಳು ವಿಜಯನಗರದ ಮೇಲೆ ಸಾಗಿ ಹೋಗುವ ಭಯವೇಕೆ? ಇಂದು ರಾತ್ರಿ ಅಥವಾ ನಾಳೆ ರಾತ್ರಿ ವೈರಿಗಳ ಮೇಲೆ ಬೀಳುವದಕ್ಕಾಗಿ ನಮ್ಮ ಸೈನ್ಯಕ್ಕೆ ಅಪ್ಪಣೆ ಕೊಡುವೆನು. ಅಷ್ಟರಲ್ಲಿ ಅವರು ಇಲ್ಲಿಂದ ಓಡಿಹೋದರೆ ಅವರ ಬೆನ್ನಟ್ಟಿ ಹೋಗತಕ್ಕದ್ದು. ರಣಮಸ್ತ ನೀನು ನಿಶ್ಚಿಂತನಾಗಿರು! ನೀನು ನಿನ್ನ ಸೈನ್ಯವನ್ನು ಹಿಂಬದಿಯಲ್ಲಿ ಇಟ್ಟಿರುವೆಯಷ್ಟೇ? ನೆಟ್ಟಗಾಯಿತು. ನಿನ್ನ ಸೈನ್ಯವನ್ನು ಆರಂಭಕ್ಕೆ ಶತ್ರುಗಳ ಬಾಯಿಗೆ ಕೊಡತಕ್ಕದ್ದಲ್ಲ, ಕಟ್ಟಕಡೆಯ ಪ್ರಸಂಗದಲ್ಲಿ ಸೈನ್ಯವನ್ನು ಉಪಯೋಗಿಸಿಕೊಳ್ಳತಕ್ಕದ್ದು, ಎಂದು ಹೇಳಿದನು. ಅದನ್ನು ಕೇಳಿ ರಣಮಸ್ತಖಾನನಿಗೆ ಅಂತರಂಗದಲ್ಲಿ ಅಸಮಾಧಾನವಾದರೂ ಅದನ್ನು ಬಹಿರಂಗದಲ್ಲಿ ತೋರಗೊಡದೆ, ರಾಮರಾಜನ ಅನುಮತಿಯನ್ನು ಪಡೆದು,ಆತನು ಅಲ್ಲಿಯೇ ಸಮೀಪದಲ್ಲಿದ್ದ ತನ್ನ ಬಿಡಾರಕ್ಕೆ ಹೋದನು.

ರಾಮರಾಜನ ಸೈನ್ಯದ ದೊಡ್ಡ ಭಾಗವನ್ನು ಬೇರೆಕಡೆಗೆ ಕಳಿಸಬೇಕೆಂದು ಮಾಡಿದ ತನ್ನ ಹಂಚಿಕೆಯು ವ್ಯರ್ಥವಾದದ್ದರಿಂದ ರಣಮಸ್ತಖಾನನಿಗೆ ಬಹಳ ಅಸಮಾಧಾನವಾಯಿತು. ಅದರಲ್ಲಿ ನೂರಜಹಾನಳನ್ನು ರಾಮರಾಜನು ಎಲ್ಲಿ ಇಟ್ಟಿರುವನೋ ಎಂಬದೊಂದು ಸಂಶಯವು ಅವನನ್ನು ವಿಶೇಷವಾಗಿ ಬಾಧಿಸಹತ್ತಿತ್ತು. ನೂರಜಹಾನಳು ಅನ್ನಸಾಮುಗ್ರಿಯ ಬಂಡಿಗಳೊಳಗೆ ಪುರುಷ ವೇಷದಿಂದ ಬಂದು ರಾಮರಾಜನ ಕೈಸೇರಿದ್ದನ್ನು ರಣಮಸ್ತನು ತನ್ನ ವಿಶ್ವಾಸದ ಸೇವಕನ ಮುಖದಿಂದ ಕೇಳಿಕೊಂಡಿದ್ದನು. ರಾಮರಾಜನು ಸ್ತ್ರೈಣನಾದ್ದರಿಂದ, ನೂರಜಹಾನಳನ್ನು ತನ್ನ ಅಂತಗೃಹದಲ್ಲಿ ಸೇರಿಸಿಕೊಂಡಿರುಬಹುದೆಂದು ಆತನು ಶಂಕಿಸಹತ್ತಿದನು. ಹೀಗೆ ಇತ್ತ ಈತನು ಶಂಕೆ ಪ್ರತಿಶಂಕೆಗಳಿಗೆ ಗುರಿಯಾಗಿ ತಳಮಳಿಸುತ್ತಿರಲು, ಅತ್ತ ರಾಮರಾಜನು ರಣಮಸ್ತನ ಮೇಲಿನ ಪುತ್ರವಾತ್ಸಲ್ಯದಿಂದ ಮೋಹಿತನಾಗಿ, ರಣಮಸ್ತನಿಗೆ "ನಾನು ನಿನ್ನ ತಂದೆ" ಎಂದು ಈಗ ಹೇಳಿಬಿಡುವದು ನೆಟ್ಟಗೆಂದು ಆಲೋಚಿಸತೊಡಿಗಿದನು. ನಾನು ತನ್ನ ತಂದೆಯೆಂಬುದು ರಣಮಸ್ತಖಾನನಿಗೆ ಗೊತ್ತಾದರೆ, ಆತನು ಯುದ್ಧದಲ್ಲಿ ಅಭಿಮಾನದಿಂದ ಕಾದಬಹುದೆಂದು ರಾಯನು ಭಾವಿಸಿದನು. ಕೂಡಲೆ ಆತನು ಮಧ್ಯರಾತ್ರಿಯಲ್ಲಿಯೇ ರಣಮಸ್ತಖಾನನನ್ನು ಕರೆಯ ಕಳುಹಿಸಿದನು. ರಣಮಸ್ತಖಾನನು ನಿದ್ದೆಹತ್ತಿ ಮಲಗಿದ್ದರೂ ಎಬ್ಬಿಸಿ ಕರಕೊಂಡು ಬರಬೇಕೆಂದು ರಾಮರಾಜನು ತನ್ನ ಸೇವಕನಿಗೆ ಹೇಳಿದನು. ಅದರಂತೆ ಸೇವಕನು ಹೋಗಿ ಕರೆಯಲು, ರಣಮಸ್ತನು ಕೂಡಲೆ ರಾಮರಾಜನ ಬಳಿಗೆ ಬಂದ— "ತಾವು ಇಷ್ಟು ಮಧ್ಯರಾತ್ರಿ ಯಲ್ಲಿ ಒಮ್ಮಿಂದೊಮ್ಮೆ ಕರೆಸಿದ ಕಾರಣವೇನೆಂದು ರಾಮರಾಜನನ್ನು ಕೇಳಹತ್ತಿದನು. ರಣಮಸ್ತನು ಪ್ರತ್ಯಕ್ಷನಾಗಿ ತನ್ನ ಎದುರಿಗೆ ಬಂದು ನಿಂತಿದ್ದನ್ನು ನೋಡಿ ರಾಮರಾಜನ ಮನಸ್ಸು ತಿರುಗಿತು. ಇವನ ಜನ್ಮವೃತ್ತಾಂತವನ್ನು ಈಗಲೇ ಹೇಳಿದರೆ ಎಲ್ಲಿ ಕ್ಷುಬ್ಧನಾಗುವನೋ ಎಂದು ರಾಯ ಶಂಕಿಸತೊಡಗಿದನು. ಈಗ ಬೇಡ, ಯುದ್ಧ ಮುಗಿದ ಬಳಿಕ ಹೇಳೋಣವೆಂದು ಆತನು ನಿಶ್ಚಯಿಸಿ, ಇನ್ನು ರಣಮಸ್ತನ ಸಂಗಡ ಯಾವ ಪ್ರಸಕ್ತಿಯನ್ನು ಕುರಿತು ಮಾತಾಡಬೇಕೆಂದು ರಾಯನು ಎಣಿಕೆಹಾಕಹತ್ತಿದನು. ಈ ಸ್ಥಿತಿಯಲ್ಲಿ ಆತನು ಸ್ತಬ್ಧವಾಗಿ ಬಹಳ ಹೊತ್ತು ಕುಳಿತು ಕೊಳ್ಳಬೇಕಾಯಿತು; ಆದರೂ ಯೋಗ್ಯ ಪ್ರಸಕ್ತಿಯು ಆತನ ಮನಸ್ಸಿಗೆ ಹೊಳೆಯಲೊಲ್ಲದು. ಆಗ ಆತನು ಏನಾದರೂ ಮಾತಾಡಬೇಕೆಂದು ತಿಳಿದು ರಣಮಸ್ತನನ್ನು ಕುರಿತು–ರಣಮಸ್ತ ಆಗಲೇ ನೀನು ಸೈನ್ಯವನ್ನು ಬೇರೆ ಕಡೆಗೆ ಕಳಿಸಬೇಕೆಂದು ಹೇಳಿದೆಯಲ್ಲ ಆ ಮಾತನ್ನು ಕುರಿತು ನಾನು ಬಹಳವಾಗಿ ಆಲೋಚಿಸಿದೆನು; ಆದರೆ ನಾವು ಈಗ ತಡಮಾಡದೆ ಶತ್ರುಗಳ ಮೇಲೆ ಬೀಳುವದರಲ್ಲಿಯೇ ಲಾಭವಿರುತ್ತದೆಂದು ನನಗೆ ತೋರುತ್ತದೆ. ಶತ್ರುಗಳು ತಮ್ಮ ಸ್ಥಳಬಿಟ್ಟು ಕದಲುವದರೊಳಗೆ ಈ ಕಾರ್ಯವಾಗಲಿಕ್ಕೆ ಬೇಕು, ಅನ್ನಲು ರಣಮಸ್ತನು ವಿಚಾರ ಮಾಡುವ ವನಂತೆ ಸುಮ್ಮನೆ ಕುಳಿತು, ಬಳಿಕ ಗಟ್ಟಿಯಾಗಿ ನಕ್ಕು, ರಾಮರಾಜನಿಗೆ–ಸರಕಾರ, ತಾವು ಈಗ ಶತ್ರುಗಳ ಮೇಲೆ ಬಿದ್ದರೆ ಅವರಿಗೇ ಅನುಕೂಲ ಮಾಡಿಕೊಟ್ಟಂತಾಗಬಹುದೆಂದು ನನಗೆ ತೋರುತ್ತದೆ; ಯಾಕಂದರೆ ಅದರಿಂದ ಅವರಿಗೆ ಅನಾಯಾಸವಾಗಿ ನೆವ ಸಿಕ್ಕಂತೆ ಆಗಿ, ಅವರು ಹಿಂದೆಗೆಯುತ್ತ ಅವರು ತಮ್ಮ ಸಂಕೇತದ ಕಾಲಹೊಳೆಯ ಸ್ಥಳದ ಕಡೆಗೆ ಹೋಗಿ ವಿಜಯನಗರದ ಮೇಲೆ ನುಗ್ಗ ಬಹುದು. ನೀವು ಮುಂದೆ ಸಾಗಿಬರಬಾರದೆಂದು ಕೆಲವು ಶತ್ರುಸೈನ್ಯವು ನಿಮ್ಮ

ಸಂಗಡ ಕಾದುತ್ತ ನಿಲ್ಲಬಹುದು. ನೀವು ಹೇಳುವ ವಿಚಾರವು ಯೋಗ್ಯವಿದ್ದರೂ ನಮ್ಮ ಸೈನ್ಯದಲ್ಲಿ ಎರಡು ಭಾಗಗಳನ್ನು ಮಾಡಿ, ಒಂದು ಭಾಗವನ್ನು ತುಂಗಭದ್ರೆಯನಿಟ್ಟಿನ ಕಡೆಗೆ ಕಳಿಸುವದು ನೆಟ್ಟಗೆ ಕಾಣುತ್ತದೆ. ಹಾಗಾದರೆ ವಿಜಯನಗರದ ಕಡೆಗೆ ಹೋದ ಶತ್ರುಸೈನ್ಯವು ನಮ್ಮ ಎರಡೂ ನಿಟ್ಟಿನ ಸೈನ್ಯಗಳ ನಡುವೆ ಸಿಕ್ಕು ಅದಕ್ಕೆ ತುಂಗಭದ್ರೆಯಲ್ಲಿ ಜಲಸಮಾಧಿಯು ದೊರೆಯುವದು. ಇಲ್ಲದಿದ್ದರೆ ನಮ್ಮ ಬಳಿಯಲ್ಲಿ ಇಷ್ಟು ಪ್ರಚಂಡ ಸೈನ್ಯವೂ ಇಂಥ ಅತ್ಯುತ್ತಮ ವ್ಯವಸ್ಥೆಯೂ ಇದ್ದು ವ್ಯರ್ಥವಾಗಬಹುದು. ನನಗೆ ಬಹು ಪ್ರಯತ್ನದಿಂದ ಸಂಪೂರ್ಣ ಗೊತ್ತಾಗಿದ್ದ ಶತ್ರುಗಳ ಕಡೆಯ ವಿಶ್ವಸನೀಯವಾದ ಮಹತ್ವದ ಸುದ್ದಿಯನ್ನು ತಮ್ಮ ಮುಂದೆ ಹೇಳಿಯೂ ಹೇಳದ ಹಾಗೆ ಆಗಿರುತ್ತದೆ. ನನ್ನ ಮೇಲೆ ತಮ್ಮ ವಿಶ್ವಾಸವಿಲ್ಲದ್ದರಿಂದ ಹೀಗಾಗುತ್ತದೆಯೋ, ಅಥವಾ ತಮಗೆ ವಿಚಾರಮಾಡುವ ಮನಸ್ಸು ಇಲ್ಲವೇ ಇಲ್ಲವೋ ಅಥವಾ ನಾನು ಹೇಳಿದಂತೆ ಮಾಡಲಿಕ್ಕೆ ನಿಮಗೆ ಧೈರ್ಯವಾಗಲೊಲ್ಲದೋ ಇದಾವದೂ ನನಗೆ ತಿಳಿಯದಾಗಿದೆ. ಬಾದಶಹನ ಮೇಲೆ ತಿರುಗಿಬಿದ್ದು ನಿಮ್ಮ ಕಡೆಗೆ ಬಂದಿರುವ ನಾನು, ನನ್ನ ಮೇಲೆಯೂ ಯಾಕೆ ತಿರುಗಿಬೀಳಲಿಕ್ಕಿಲ್ಲೆಂಬ ಸಂಶಯವು ನಿಮಗೆ ಬರಬಹುದೆಂಬದರಲ್ಲಿ ಆಶ್ಚರ್ಯವೇನೂ ಇಲ್ಲ. ನನ್ನ ಮಾತಿನಲ್ಲಿ ಅವಿಶ್ವಾಸವಿದ್ದರೆ, ತಾವು ನನ್ನ ಮಾತು ಕೇಳಬಾರದು.

ರಣಮಸ್ತನ ಈ ಮಾತುಗಳನ್ನು ಕೇಳಿದಕೂಡಲೆ ರಾಮರಾಜನು ಒಮ್ಮೆಲೆ ತಾನು ಕುಳಿತ ಸ್ಥಳದಿಂದ ಎದ್ದು ಖಾನನ ಬಳಿಗೆ ಹೋಗಿ, ಆತನ ಬೆನ್ನಮೇಲೆ ಕೈಯಾಡಿಸುತ್ತ— ''ತಮ್ಮಾ ಹೀಗೆ ಯಾಕೆ ಅನ್ನುತ್ತೀ? ನಿನ್ನಮೇಲೆ ನನ್ನ ವಿಶ್ವಾಸವಿದ್ದಷ್ಟು ಇಡಿಯ ನನ್ನ ರಾಜ್ಯದಲ್ಲಿ ಬೇರೆ ಯಾರ ಮೇಲೆಯೂ ಇರುವದಿಲ್ಲ. ಹೊಟ್ಟೆಯ ಮಗನ ಮೇಲೆ ಅದರಲ್ಲಿಯೂ ನಿನ್ನ ಹಾಗೆ ಇರುವ ಹೊಟ್ಟೆಯ ಮಗನ ಮೇಲೆ ಯಾವ ತಂದೆಯ ವಿಶ್ವಾಸವಿಡಲಿಕ್ಕಿಲ್ಲ?'' ಎಂದು ನುಡಿಯುತ್ತಿರುವಾಗ, ರಾಮರಾಜನು ಭಯಪಟ್ಟು ತಾನು ಹೀಗೆ ನುಡಿಯತಕ್ಕದಿದ್ದಿಲ್ಲವೆಂದು ನಾಲಿಗೆ ಕಚ್ಚಿಕೊಂಡನು'ಹೊಟ್ಟೆಯ ಮಗನ ಮೇಲೆ'' ಎಂಬ ಶಬ್ದವು ಕಿವಿಗೆ ಬಿದ್ದ ಕೂಡಲೆ ರಣಮಸ್ತಖಾನನು ಸಂತಪ್ತನಾಗಿ ರಾಮರಾಜನನ್ನು ನೋಡಹತ್ತಿದನು. ಆಗ ರಾಮರಾಜನು ರಣಮಸ್ತನಿಗೆ—ಹೌದು ನಾನು ನಿನ್ನ ಮೇಲೆ ಹೊಟ್ಟೆಯ ಮಗನಂತೆಯೇ ಪ್ರೇಮ ಮಾಡುತ್ತೇನೆಂಬದು ನಿನಗೆ ಗೊತ್ತಿಲ್ಲವೆ? ಹೊಟ್ಟೆಯ ಮಗನ ಮಾತನ್ನು ನಂಬುವಾಗ ಸಹ ಒಮ್ಮೊಮ್ಮೆ ವಿಚಾರಮಾಡಬೇಕಾಗುತ್ತದೆ; ಅದರಂತೆ ಈಗ ನಾನು ನಿನ್ನ ಮಾತಿನಂತೆ ನಡೆಯುವ ಮೊದಲು ವಿಚಾರಮಾಡಿದೆನು. ನೀನು ಇಷ್ಟು ನಂಬಿಗೆಯಿಂದ ಹೇಳಿದ ಬಳಿಕ ನಿನ್ನ ಮಾತಿನಂತೆ ನಮ್ಮ ಸೈನ್ಯದಲ್ಲಿ ಎರಡು ಭಾಗ ಮಾಡಿ, ನೀನು ಹೇಳಿದ ಕಡೆಗೆ ಒಂದು ಭಾಗವನ್ನು ಕಳಿಸುವೆನು, ಈಗಾದರೂ ಆಯಿತೆ? ಎಂದು ಕೇಳಿದನು. ತನ್ನ ಸಂಗಡ ರಾಮರಾಜನು ಇಷ್ಟು ಸಲಿಗೆಯಿಂದ ಯಾಕೆ ನಡೆಯುತ್ತಿರುವನೆಂಬ ಬಗ್ಗೆ ರಣಮಸ್ತಖಾನನು ಮೊದಲೇ ಶಂಕಿಸುತ್ತಿರಲು ಅದರಲ್ಲಿ ರಾಮರಾಜನು ''ಈ ದಿನ ನುಡಿದದ್ದನ್ನು ಕೇಳಿ, ಆ ಖಾನನು ಬಹಳ ಅಸಮಾಧಾನಪಟ್ಟನು ತನ್ನ ತಂದೆಯು ಯಾರು ಎಂಬದು ರಣಮಸ್ತನಿಗೆ ಮೊದಲೇ ಗೊತ್ತಿಲ್ಲದಿರುವಾಗ, ರಾಮರಾಜನು ಹೀಗೆ ನುಡಿಯುವದು ಖಾನನಿಗೆ ಬಹು ಅಪಮಾನಾಸ್ಪದವಾಗಿ ತೋರಿ, ಆತನು ಬಹು

ಕ್ರುದ್ಧನಾದನು; ಆದರೆ ಕ್ರೋಧಕ್ಕೆ ಇದು ಸಮಯವಲ್ಲವೆಂದು ತಿಳಿದು, ಆತನು ಅದನ್ನು ಬಹು ಕಷ್ಟದಿಂದ ನುಂಗಿಕೊಂಡನು; ಆದರೂ ರಾಮರಾಜನು ಆತನ ಮನಸ್ಸಿನ ಸ್ಥಿತಿಯನ್ನು ತಿಳಿದು ಆ ವಿಷಯವನ್ನು ಬದಲಿಸುವದಕ್ಕಾಗಿ ರಣಮಸ್ತಖಾನನಿಗೆ— ''ಒಳ್ಳೇದು, ಹಾಗಾದರೆ ಈಗಲೇ ನೀನು ಮಲಗಿಕೊಳ್ಳಹೋಗು. ಈಗೇ ನಾನು ತಿರುಮಲ–ವೇಂಕಟಾದ್ರಿಗಳನ್ನು ಕರೆಸಿ, ನೀನು ಹೇಳಿದ ಸ್ಥಳದಲ್ಲಿ ಸೈನ್ಯದೊಡನೆ ಹೋಗಿ ಕುಳಿತುಕೊಳ್ಳುವಂತೆ ಅವರನ್ನು ಆಜ್ಞಾಪಿಸುವೆನು. ನೀನು ಅವರ ಸಂಗಡ ಹೋಗಿ ಆ ಸ್ಥಳವನ್ನು ಮಾತ್ರ ಅವರಿಗೆ ತೋರಿಸಬೇಕಾಗುವದು. ಹೋಗು, ಅವರು ಬಂದ ಕೂಡಲೆ ನಿನ್ನನ್ನು ಕರಿಸುವೆನು'' ಎಂದು ಹೇಳಿದನು. ಅದನ್ನು ಕೇಳಿದ ಕೂಡಲೆ ರಣಮಸ್ತಖಾನನಿಗೆ ಬಹಳ ಸಮಾಧಾನವಾಯಿತು.

ಇತ್ತ ರಾಮರಾಜನು ತಾನು ಹೇಳಿದಂತೆ ತನ್ನ ಬಂಧುಗಳ ಕಡೆಗೆ ನಿಜವಾಗಿಯೇ ಸೇವಕರನ್ನು ಕಳಿಸಿದನು. ಸೇವಕರು ಹೋದಕೂಡಲೆ, ತಿರುಮಲ–ವೇಂಕಟಾದ್ರಿಗಳು ರಾಮರಾಜನ ಬಳಿಗೆ ಬಂದರು. ಅಷ್ಟು ಹೊತ್ತಿಗೆ ರಣಮಸ್ತನ ಮೋಸದ ತಂತ್ರದಿಂದ ಸೈನ್ಯವನ್ನು ವಿಭಾಗಿಸಲಿಕ್ಕೆ ಅನುಕೂಲವಾದ ಸುದ್ದಿಗಳು ರಾಮರಾಜನ ಕಿವಿಗೆ ಮುಟ್ಟಿದವು. ಶತ್ರುಗಳು ಯಾವ ಕಡೆಗೋ ಒತ್ತರದಿಂದ ಹೋಗುತ್ತಿರುವರೆಂದು ಚಾರರು ರಾಯನಿಗೆ ಸುದ್ದಿಯನ್ನು ಹೇಳಿದರು. ರಾಮರಾಜನು ರಣಮಸ್ತಖಾನನ ವಿಚಾರಗಳನ್ನೂ, ಸುದ್ದಿಗಳನ್ನು ತನ್ನ ಬಂಧುಗಳಿಗೆ ತಿಳಿಸಿದನು. ಇಷ್ಟರಲ್ಲಿ ರಾಮರಾಜನ ಚಾರರು ಬಂದು— ''ಮುಸಲ್ಮಾನ ಸೈನ್ಯವು ಹಿಂದಕ್ಕೆ ಕಾಲುದೆಗೆದು ಎಲ್ಲಿಗೋ ಹೋಗುತ್ತಿರುವದೆ''ಂಬ ಸುದ್ದಿಯನ್ನು ಹೇಳಿದರು. ಮುಸಲ್ಮಾನ ಸೈನಿಕರು ರಣಮಸ್ತನ ತಂತ್ರದಿಂದಲೇ ಓಡಿ ಹೋಗುವ ಸೋಗು ಹಾಕಿದ್ದರು. ಈ ಮೋಸವು ರಾಮರಾಜನಿಗೂ, ಆತನ ಬಂಧುಗಳಿಗೂ ತಿಳಿಯಲಿಲ್ಲ, ಅವರು ರಣಮಸ್ತನ ಮಾತನ್ನು ನಿಜವೆಂದು ಸಂಪೂರ್ಣವಾಗಿ ನಂಬಿ, ತಮಗೆ ಮುಂಗಡ ತಿಳಿದ ಈ ಮಹತ್ವದ ಸುದ್ದಿಯ ಉಪಯೋಗವನ್ನು ಮಾಡಿಕೊಳ್ಳ ಬೇಕೆಂದು ಆ ಮೂವರು ಬಂಧುಗಳು ನಿಶ್ಚಯಿಸಿದರು. ರಾಮರಾಜನು ಕೂಡಲೆ ರಣಮಸ್ತ ಖಾನನನ್ನು ಕರೆಸಿ, ನೀನು ಇವರಿಬ್ಬರ ಸೈನ್ಯದ ಸಂಗಡ ಹೋಗಿ ಇವರಿಗೆ ಆ ಕಾಲಹೊಳೆಯ ಸ್ಥಳವನ್ನು ತೋರಿಸು, ಎಂದು ಆಜ್ಞಾಪಿಸಿದನು. ಅದಕ್ಕೆ ರಣಮಸ್ತನು ಹಿಂದೆ–ಮುಂದೆ ನೋಡ ಹತ್ತಲು, ರಾಮರಾಜನು ಆತನನ್ನು ಕುರಿತು—ಯಾಕೆ, ಇಷ್ಟು ಅಸಂತೋಷವೇಕೆ? ನೀನು ಈ ಕೆಲಸವನ್ನು ಬಹಳ ಉತ್ಸುಕತೆಯಿಂದ ಮಾಡಲಿಕ್ಕೆ ಬೇಕು, ಅನ್ನಲು ರಣಮಸ್ತನು–ಸರಕಾರ, ನನ್ನ ಅಸಂತೋಷಕ್ಕೆ ಒಂದೇ ಕಾರಣವಿರುವುದು. ತಮ್ಮನ್ನು ಅಗಲಿ ದೂರ ಹೋಗಲಿಕ್ಕೆ ನನ್ನ ಮನಸ್ಸು ಮೆಚ್ಚುವುದಿಲ್ಲ, ನನ್ನನ್ನು ತಾವು ಅಂಗರಕ್ಷಕನನ್ನಾಗಿ ನಿಯಮಿಸಿಕೊಂಡಿದ್ದು, ನಮ್ಮನ್ನು ಅಗಲಿ ಎಲ್ಲಿಯೂ ಹೋಗಲಾರದೆಂದು ತಾವು ನನ್ನನ್ನು ಈ ಮೊದಲೆ ಆಜ್ಞಾಪಿಸಿರುವದರಿಂದ ಸ್ವಲ್ಪ ಅನುಮಾನಿಸಿದೆನು ಎಂದು ಹೇಳಿದನು.

ರಣಮಸ್ತನ ಈ ಮಾತುಗಳನ್ನು ಕೇಳಿ, ರಾಮರಾಜನಿಗೆ ಬಹಳ ಕೌತುಕವಾಯಿತು. ಆತನು ಕೂಡಲೆ ರಣಮಸ್ತನನ್ನು ಕುರಿತು—ಸರಿ ಸರಿ, ಒಳ್ಳೆಯ ಮಾತು ಸೂಚಿಸಿದೆ. ನನ್ನ ಇಚ್ಛೆಯಾದರೂ ನೀನು ನನ್ನನ್ನು ಅಗಲಿ ಹೋಗಬಾರದೆಂತಲೇ ಇರುವದು. ನಿನ್ನ ನಂಬಿಗೆಯ

ಇಬ್ಬರು ಚಾರರನ್ನು ಇವರ ಸಂಗಡ ಆ ಸ್ಥಳವನ್ನು ತೋರಿಸಲಿಕ್ಕೆ ಕಳಿಸಿಕೊಡೆಂದರಾಯಿತು, ಎಂದು ಹೇಳಿದನು. ಕೂಡಲೆ ರಣಮಸ್ತನು ತನ್ನ ನಂಬಿಗೆಯ ಇಬ್ಬರು ಸೇವಕನ್ನು ಕಳಿಸಲು, ತಿರುಮಲ– ವೇಂಕಟಾದ್ರಿಗಳು ತಮ್ಮ ತಮ್ಮ ಸೈನ್ಯಗಳನ್ನು ಕಟ್ಟಿಕೊಂಡು ಆ ಸೇವಕರೊಡನೆ ನಡೆದರು. ಇತ್ತ ಸ್ವತಃ ರಾಮರಾಜನ ಆಧಿಪತ್ಯಕ್ಕೆ ಒಳಪಟ್ಟಿದ್ದ ಸೈನ್ಯವೂ, ರಣಮಸ್ತಖಾನನ ಸೈನ್ಯವೂ ಮಾತ್ರ ಉಳಿದವು. ರಾಮರಾಜನು ತಾನು ಮಾಡಿದ ಈ ವ್ಯವಸ್ಥೆಯೆಲ್ಲ ತನಗೆ ಬಹು ಅನುಕೂಲವಾದದ್ದೆಂದು ತಿಳಿದು ಸಂತೋಷಪಟ್ಟನು. ರಾಮರಾಜನು ಶತ್ರುಗಳ ಸುಳಿದಾಟವನ್ನು ಕಣ್ಣುಮುಟ್ಟ ನೋಡುವನೋ ಅನ್ನುವಂತೆ ಆತನ ಚಾರರೂ, ರಣಮಸ್ತಖಾನನ ಚಾರರೂ ಆಗಾಗ್ಗೆ ಶತ್ರುಗಳ ಕಡೆಯ ಸುದ್ದಿಗಳನ್ನು ಹೇಳುತ್ತಲಿದ್ದರು. ಹೀಗೆ ಒಂದೆರಡು ದಿನ ರಾಮರಾಜನು ಸಮಾಧಾನದಿಂದ ಕಾಲಹರಣ ಮಾಡಿರಬಹುದು; ಆದರೆ ಅಷ್ಟರಲ್ಲಿ ಆತನ ಮನಸ್ಸು ವಿಕಲ್ಪಕ್ಕೆ ಒಳಗಾಯಿತು. ಆತನು ರಣಮಸ್ತಖಾನನನ್ನು ಕರೆಸಿ— ''ಶತ್ರುಗಳು ಹೀಗೆ ದೌಡು ಮಾಡಿದರೆ ಹ್ಯಾಗಾದೀತು? ನಾವು ಅವರ ಮೇಲೆ ಈ ಕಡೆಯಿಂದ ಸಾಗಿಹೋದರೆ ಹ್ಯಾಗಾದೀತು'' ಇತ್ಯಾದಿ ಹಲವು ಪ್ರಶ್ನೆಗಳನ್ನು ಕೇಳಿದ ಮೇಲೆ— ''ರಣಮಸ್ತ ನಮ್ಮನ್ನು ಮೋಸಗೊಳಿಸುವದಕ್ಕಾಗಿ ಶತ್ರುಗಳು ಹೀಗೆ ಹಿಂದೆಗೆಯುವ ಸೋಗು ಹಾಕಿರಬಹುದೇನು? ಒಟ್ಟುಗೂಡಿದ ನಮ್ಮ ಸೈನ್ಯದ ಕಸುವು ಕಡಿಮೆ ಮಾಡುವದಕ್ಕಾಗಿ ಅವರು ಈ ಹಂಚಿಕೆ ತೆಗೆದಿರಬಹುದೋ?'' ಎಂದು ಪ್ರಶ್ನೆ ಮಾಡಿದನು. ಅದನ್ನು ಕೇಳಿದಕೂಡಲೆ ರಣಮಸ್ತನ ಮೋರೆಯು ಹುಚ್ಚಿಟ್ಟಿತು; ಆದರೆ ಅಷ್ಟರಲ್ಲಿ ಆ ನೀಚನು ಗಟ್ಟಿಯಾಗಿ ನಕ್ಕು— ''ಸರಕಾರ, ಪ್ರತ್ಯಕ್ಷ ತಮಗೆ ಎದುರಾಗಿ ಬರುವ ಧೈರ್ಯವು ಮುಸಲ್ಮಾನ ಸೈನ್ಯಕ್ಕೆ ಸರ್ವಥಾ ಆಗಲಾರದು. ಮುಸಲ್ಮಾನರು ಬೇಕಾದವರ ಸಂಗಡ ಯುದ್ಧ ಮಾಡಬಹುದು; ಆದರೆ ಅವರು ತಮಗೆ ಎದುರಾಗಿ ಮಾತ್ರ ಯುದ್ಧ ಮಾಡುವದು ತೀರ ಅಸಂಭವವು. ಆದ್ದರಿಂದ ತಾವು ನಿಶ್ಚಿಂತರಾಗಿರಬೇಕು. ನಾವೇನು ಸುಮ್ಮನೆ ಕುಳಿತುಕೊಂಡಿರುವದಿಲ್ಲ. ಸರ್ವಸನ್ನಾಹದೊಡನೆ ಪೂರ್ಣ ಜಾಗರೂಕರಾಗಿದ್ದೇವೆ. ಶತ್ರುಗಳು ನಮ್ಮ ಮೇಲೆ ಸಾಗಿಯೊಂದು ಬರಲಿ, ಅವರ ಧೂಳಹಾರಿಸಿ ಬಿಡೋಣ, ಮುಸಲ್ಮಾನ ಬಾದಶಹರು ನಿಮಗೆ ಎಷ್ಟು ಹೆದರುವರೆಂಬದನ್ನು ನಾನು ಪೂರಾ ಬಲ್ಲೆನು. ರಾಮರಾಜರು ಇರುವವರೆಗೆ ನಾವು ನಾಲ್ವರು ಬಾದಶಹರು ಒಟ್ಟುಗೂಡಿ ಯಂತು ಇರಲಿ, ಉತ್ತರ ಹಿಂದುಸ್ತಾನದ ಮುಸಲ್ಮಾನರನ್ನು ಸಹಾಯಕ್ಕೆ ಕರಕೊಂಡರೂ ನಮ್ಮ ಆಟವೇನೂ ನಡೆಯದು, ಎಂದು ಅವರು ನಿಶ್ಚಯಿಸಿಕೊಂಡರು. ಅವರು ಹೀಗೆ ಅಂಜುವದು ಆಶ್ಚರ್ಯವಲ್ಲ, ತಮ್ಮ ಪ್ರತಾಪವೇ ಅಂಥಾದ್ದು ತಾವು ಯಾವತ್ತು ರಾಜ್ಯದ ಸಂರಕ್ಷಕರಾಗಿರಲು, ನಮ್ಮಂಥ ಪಾಮರರಾದ ಅಂಗರಕ್ಷಕರು ತಮ್ಮನ್ನು ರಕ್ಷಿಸುವೆವೆಂಬ ಮಾತು ವ್ಯರ್ಥವಾದದ್ದೆ; ಆದರೂ ತಮ್ಮ ಸಲುವಾಗಿ ರಣಾಂಗಣದಲ್ಲಿ ದೇಹವಿಡಲು ನಾವು ಹಿಂದೆ ಮುಂದೆ ನೋಡುವ ಹಾಗಿಲ್ಲ, ಈಗ ಬಹಳ ಮಾತುಗಳಿಂದ ಪ್ರಯೋಜನವೇನು? ಪ್ರಸಂಗ ಬಂದಾಗ ಪರೀಕ್ಷಿಸಬಹುದು.

ರಣಮಸ್ತನ ಈ ಮುಖಸ್ತುತಿಯಿಂದ ರಾಮರಾಜನಂಥ ಚಾಣಾಕ್ಷನು ಕೂಡ ಕಾಲಮಹಿಮೆಯಿಂದ ಉಬ್ಬಿದನು. ರಣಮಸ್ತನು ತನ್ನ ಸಲುವಾಗಿ ಪ್ರಾಣಕೊಡಲು

ಸಿದ್ಧನಾದದ್ದನ್ನು ನೋಡಿ ಆ ರಾಯನು ಬಹು ಸಮಾಧಾನಪಟ್ಟು, ರಣಮಸ್ತನನ್ನು ಮುಂದಕ್ಕೆ ಕರೆದು, ಆತನನ್ನು ಪುತ್ರವಾತ್ಸಲ್ಯದಿಂದ ಬಿಗಿಯಾಗಿ ಅಪ್ಪಿಕೊಂಡು, ನೆತ್ತಿಯನ್ನು ಮೂಸಿನೋಡಿ, ಆತನನ್ನು ಕುರಿತು ಏನೋ ಮಾತಾಡಬೇಕೆನ್ನುತ್ತಿರಲು, ಒಬ್ಬ ಚಾರನು ಅವಸರದಿಂದ ಬಂದು ರಾಯನನ್ನು ಕುರಿತು ಪ್ರಭುವೇ, ಈ ಮೊದಲೇ ಶತ್ರುಗಳು ಕಾಲುದೆಗೆದದ್ದರಲ್ಲಿ ಏನೋ ಮೋಸವಿದ್ದಂತೆ ತೋರುತ್ತದೆ. ಈಗ ಎರಡು ದಿನ ವಿಜಯನಗರದ ಕಡೆಗೆ ನುಗ್ಗಿದ್ದ ಶತ್ರುಸೈನ್ಯವು ಈಗ ಒಮ್ಮೆಲೆ ಇತ್ತಕಡೆಗೆ ಭರದಿಂದ ಸಾಗಿಬರಹತ್ತಿದೆ. ನಮ್ಮ ಸೈನ್ಯದ ಕಸುವು ಕಡಿಮೆ ಮಾಡುವದಕ್ಕಾಗಿ ಶತ್ರುಗಳು ಈ ಹಂಚಿಕೆ ಮಾಡಿ, ತಮ್ಮ ಹಂಚಿಕೆಯು ಸಾಧಿಸಿದ ಕೂಡಲೆ ಈಗ ಎಲ್ಲರೂ ಒಟ್ಟುಗೂಡಿ ನಮ್ಮ ಅಲ್ಪಸಂಖ್ಯಾತರವಾದ ಸೈನ್ಯದ ಮೇಲೆ ಬೀಳಬೇಕೆಂದು ಯೋಚಿಸಿದ ಹಾಗೆ ತೋರುತ್ತದೆ. ಇದ್ದ ಸಂಗತಿಯನ್ನು ಸನ್ನಿಧಿಗೆ ಅರಿಕೆಮಾಡಿಕೊಂಡಿದ್ದೇನೆ; ಎಂದು ನುಡಿಯುತ್ತಿರಲು, ರಣಮಸ್ತನು ನಡುವೆ ಬಾಯಿಹಾಕಿ–ಎಲಾ, ಇಷ್ಟೇಕೆ ಅಂಜಿಕೆಯೋ ನಿನಗೆ? ನಮ್ಮ ತಿರುಮಲ–ವೇಂಕಟಾದ್ರಿಗಳ ಸೈನ್ಯವು ಒಳಿತಾಗಿ ಥಳಿಸಿದ್ದರಿಂದ, ಶತ್ರು ಸೈನ್ಯವು ತೇಕುತ್ತ ತಿರುಗಿ ಓಡಿಬರಹತ್ತಿರಬಹುದು; ಇಲ್ಲದಿದ್ದರೆ ಇಷ್ಟು ಬೇಗನೆ ಶತ್ರು ಸೈನ್ಯವು ತಿರುಗುವದುಂಟೆ? ಹೋಗು, ಇನ್ನೊಮ್ಮೆ ನೆಟ್ಟಗೆ ನೋಡಿಬಂದು ಹೇಳು, ಎಂದು ನುಡಿಯಲು, ವಿನಾಶದಪಥವನ್ನು ಹಿಡಿದಿದ್ದ ರಾಮರಾಜನು ರಣಮಸ್ತನ ಮಾತಿಗೆ ಸೋ ಅಂದನು. ಆಗ ಚಾರನು ಅಸಮಾಧಾನದಿಂದ ಹೊರಟುಹೋಗಲು, ಮುಂದೆ ಸ್ವಲ್ಪಹೊತ್ತಿನಲ್ಲಿ ಮತ್ತೊಬ್ಬ ಚಾರನು ಬಹು ದೂರದಿಂದ ರಾಮರಾಜನ ಬಳಿಗೆ ಬಂದು— ''ಶತ್ರುಗಳು ಬಹು ಒತ್ತರದಿಂದ ನಮ್ಮ ಮೇಲೆ ಸಾಗಿಬರುತ್ತಿರುವರು'' ಎಂದು ಹೇಳಿದನು. ಆ ಮಾತನ್ನೂ ರಾಮರಾಜನು ಸಮಾಧಾನದಿಂದ ಕೇಳಿಕೊಂಡು— ಶಾಬಾಸ! ಇದಂತು ಬಹು ಆನಂದದಾಯಕ ಸುದ್ದಿಯು! ಆ ಯವನರು ನಮ್ಮ ಅಳವಿನತಯಂತು ಬರಲಿ ಅವರಿಗೆ ನಮ್ಮ ಕೈ ತೋರಿಸೋಣ. ರಣಮಸ್ತ ನಡೆ. ಸೈನ್ಯವನ್ನು ಸಜ್ಜುಗೊಳಿಸಿ, ವೈರಿಗಳಿಗೆ ಎದುರಾಗಲು ಸಿದ್ಧವಾಗುವದಕ್ಕಾಗಿ ಅದಕ್ಕೆ ಅಪ್ಪಣೆಯನ್ನು ಕೊಡು. ನಾನು ಅರ್ಧಗಳಿಗೆಯೊಳಗಾಗಿ ಪೋಷಾಕು ಹಾಕಿಕೊಂಡು ಸೈನ್ಯದ ಸಿದ್ಧತೆಯನ್ನು ಕಣ್ಣುಮುಟ್ಟ ನೋಡವದಕ್ಕಾಗಿ ಬರುತ್ತೇನೆ'' ಎಂದು ಹೇಳಿದನು.

## ಯುದ್ಧಪ್ರಸಂಗವು

ಬಳಿಕ ರಾಮರಾಜನು ತನ್ನ ಕುದುರೆಗೆ ಜೀನು ಹಾಕಿಕೊಂಡು ಬರುವಂತೆ ಸೇವಕನಿಗೆ ಆಜ್ಞಾಪಿಸಿ, ತನ್ನ ಉಡುಪು ತೊಡಪುಗಳನ್ನೂ, ಶಸ್ತ್ರಾಸ್ತ್ರಗಳನ್ನೂ ತರಹೇಳಿದನು. ಸ್ವಲ್ಪ ಹೊತ್ತಿನಲ್ಲಿಯೇ ಆತನ ಉಡುಪು–ತೊಡಪುಗಳೂ, ಶಸ್ತ್ರಾಸ್ತ್ರಗಳೂ ಬಂದವು. ರಾಮರಾಜನು ಮೊದಲು ರೇಶಿಮೆಯ ತಿಳುವಾದ ವಸ್ತ್ರದ ಚಣ್ಣವನ್ನು ಹಾಕಿಕೊಂಡು, ಮೊಳಕಾಲತನಕ ಬರುವ ಅಂಥಾದ್ದೇ ಒಂದು ಅಂಗಿಯನ್ನು ತೊಟ್ಟುಕೊಂಡನು. ಆಮೇಲೆ ಉಕ್ಕಿನ ತಂತಿಯ ಕುಂಡಿಯ ಚಣ್ಣವನ್ನೂ ಅಂಥಾದ್ದೇ ಒಂದು ಅಂಗಿಯನ್ನೂ ತೊಟ್ಟು, ಅದರ ಮೇಲೆ ಕಾಲತನಕ ಉದ್ದಾದ

ಒಂದು ಅಂಗಿಯನ್ನು ಹಾಕಿಕೊಂಡನು. ರೇಶಿಮೆಯ ಹೆಣಿಕೆಯ ಆ ಅಂಗಿಯು ಗಂಟುಗಂಟು ಹಾಕಿದ ಜಾಳಿಗೆಯಂಥಾ ಅರಿವೆಯದಿತ್ತು, ಈ ಅಂಗಿಯನ್ನು ಹಾಕಿಕೊಂಡ ಬಳಿಕ ಎಲ್ಲಕ್ಕೂ ಮೇಲೆ ತೀರ ಜಿನುಗಾದ ಮಲಮಲಿಯಂಥ ಅರಿವೆಯ ಕಾಲತನಕ ಬರುವ ಬಿಳಿಯ ಅಂಗಿಯನ್ನು ತೊಟ್ಟುಕೊಂಡನು. ಆಮೇಲ ಟೊಂಕಕ್ಕೆ ಒಂದು ರೇಶಿಮೆಯ ಪಟ್ಟವನ್ನು ಸುತ್ತಿಕೊಂಡು, ಅದರಲ್ಲಿ ಒಂದು ಕಠಾರಿಯನ್ನೂ, ತಮಂಚಾ ಎಂಬ ಶಸ್ತ್ರವನ್ನೂ ಸಿಗಿಸಿಕೊಂಡನು. ಆತನ ಬೆನ್ನಿಗೊಂದು ಬತ್ತಳಿಕೆಯೂ, ಹೆಗಲಿಗೊಂದು ಹೆದಯೇರಿಸಿದ ಧನುಷ್ಯವೂ ಒಪ್ಪುತ್ತಿದ್ದವು. ಈಗ ಇಪ್ಪತ್ತು ವರ್ಷಗಳ ಹಿಂದೆ ತನಗೆ ಒಬ್ಬ ಪೋರ್ತುಗೀಜ ವ್ಯಾಪಾರಿಯು ಕಾಣಿಕೆಯಾಗಿ ಕೊಟ್ಟಿದ್ದ ಒಂದು ಟುಲೇಡೋ ಪಟ್ಟಣದ ಖಡ್ಗವನ್ನು ರಾಮರಾಜನು ತನ್ನ ಎಡಗೈಯಲ್ಲಿ ಹಿಡಕೊಂಡನು. ಆಮೇಲೆ ಒಬ್ಬ ಸೇವಕನು ಆತನ ತಲೆಗೆ ಒಂದು ಜಿರಟೋಪು ಹಾಕಿ, ಅದರ ಮೇಲೆ ತುರಾಯಿ ಹಚ್ಚಿದ ಆತನ ಸಣ್ಣ ಮುಂಡಾಸನವನ್ನು ಹಾಕಿದನು. ಬಳಿಕ ಕೊರಳಿಗೆ ಬಹು ಬೆಲೆಯುಳ್ಳ ಒಂದು ರತ್ನಹಾರವು ಇಡಿಸಲ್ಪಟ್ಟಿತು. ಈ ಹಾರದ ಮಧ್ಯದಲ್ಲಿ ರತ್ನ ಖಚಿತ ವಾದದ್ದೊಂದು ಪದಕವಿತ್ತು, ಆ ಪದಕದ ನಟ್ಟ ನಡವೆಯಿದ್ದ ಬಹು ದೊಡ್ಡ ನೀಲರತ್ನವು ಅತ್ಯಂತ ಯಶಸ್ವಿಯಾದದ್ದೆಂದು ಭಾವಿಸಲ್ಪಟ್ಟಿತ್ತು, ಅದು ಕೊರಳಲ್ಲಿರುವ ತನಕ ಪ್ರತ್ಯಕ್ಷ ಯಮನ ಭಯವು ಕೂಡ ತನಗೆ ಇಲ್ಲವೆಂದು ರಾಮರಾಜನು ತಿಳಿದಿದ್ದನು. ಆ ತಿಳುವಿಕೆಯಂತೆ ಅವನು ಈಗ ಕೇವಲ ನಿರ್ಭೀತನಾಗಿದ್ದನು. ಈ ಪ್ರಕಾರದ ಯುದ್ಧದ ಉಡುಪು–ತೊಡಪುಗಳಿಂದ ರಾಮರಾಜನು ಸಿದ್ಧನಾಗಿ, ತನ್ನ ಡೇರೆಯ ಹೊರಗೆ ನಿಲ್ಲಿಸಿದ್ದ ಕುದುರೆಯನ್ನು ಹತ್ತಿದನು. ಆ ಕುದುರೆಯ ಮೈತುಂಬರೇಶಿಮೆಯ ಗಂಟುಗಂಟುಗಳುಳ್ಳ ಝೂಲವನ್ನು ಹಾಕಿದ್ದರಲ್ಲದೆ, ಅದರ ತಲೆಗೆ ಅಂಥಾದ್ದೇ ಒಂದು ಆವರಣವಿದ್ದು ಅದರ ತಲೆಯ ಮೇಲೊಂದು ಮುತ್ತಿನ ತುರಾಯಿಯೂ, ಹಣೆಯಲ್ಲೊಂದು ಬಹು ಬೆಲೆಯುಳ್ಳ ಪದಕವೂ ಒಪ್ಪುತ್ತಿದ್ದವು. ಕುದುರೆಯ ಜೂಲದ ಗಂಟುಗಳು ಬಹು ಸಮಿಸಮೀಪವಾಗಿದ್ದದ್ದರಿಂದ, ಕತ್ತಿಯ ಕಡತವು ಕುದುರೆಯ ಮೈಗೆ ಹತ್ತುವಂತೆ ಇದ್ದಿಲ್ಲ

ಹೀಗೆ ಅಶ್ವಾರೂಢನಾಗಿದ್ದ ರಾಮರಾಜನ ಸವಾರಿಯು ತನ್ನ ಸೈನ್ಯವನ್ನು ನಿರೀಕ್ಷಿಸು ವದಕ್ಕಾಗಿ ಹೊರಟಿತು. ಎಲ್ಲಕ್ಕೂ ಮುಂದುಗಡೆಯಲ್ಲಿ ಆನೆಗಳ ಮೇಲೆ ಕುಳಿತು ಯುದ್ಧಮಾಡುವ ಸೈನ್ಯವನ್ನು ಸಾಲಾಗಿ ನಿಲ್ಲಿಸಿದ್ದರು. ಅದರ ಹಿಂದೆ ಕುದುರೆಯ ಸವಾರರನ್ನೂ ಅವರ ಹಿಂದೆ ಕಾಲಾಳುಗಳನ್ನೂ ನಿಲ್ಲಿಸಿದ್ದರು. ಆನೆಗಳ ಮೈತುಂಬ ರೇಶಿಮೆಯ, ಅಥವಾ ತೊಗಲಿನ,ಆದರೆ ನಡನಡುವೆ ಧಾತುಗಳ ಚೂರುಗಳನ್ನು ಕೂಡ್ರಿಸಿದ ಝೂಲಗಳಿದ್ದವು. ಆನೆಗಳ ತಲೆಯಮೇಲೆ ಬಂಗಾರದ ಮುಲಾಮು ಮಾಡಿದ ಧಾತುಗಳ ತಗಡಿನ ಶಿರಸ್ತ್ರಾಣಗಳಿದ್ದವು. ಇದರಂತೆ ಕುದುರೆಯ ಮೈಗಳಾದರೂ ಇಂಥ ಝೂಲಗಳಿಂದ ಸಂಪೂರ್ಣವಾಗಿ ಮುಚ್ಚಿ ಹೋಗಿದ್ದವು. ಈ ಆನೆ–ಕುದುರೆಗಳ ಮೇಲೆ ಕುಳಿತು ಕೊಂಡಿದ್ದ ಯೋಧರು ಕವಚ ಶಿರಸ್ತ್ರಾಣಗಳಿಂದ ಒಪ್ಪುತ್ತಲಿದ್ದರು. ಅವರ ಟೊಂಕದಲ್ಲಿ ಒಂದು ಕಠಾರಿಯೂ ಒಂದು ಚಪ್ಪಕೊಡಲಿಯೂ, ಒಂದು ಖಡ್ಗವೂ, ಕೈಯಲ್ಲಿ ಬರ್ಚಿಯೂ ಇದ್ದು, ಕೆಲವರ ಬೆನ್ನಲ್ಲಿ ಬತ್ತಳಿಕೆಯೂ, ಹೆಗಲಲ್ಲಿ ಹೆದೆಯೇಲಿಸಿದ

ಧನುಷ್ಯವೂ ಒಪ್ಪುತ್ತಿದ್ದವು. ದಂಡಾಳುಗಳಲ್ಲಿ ಕನ್ನಡಿಗರು, ತೆಲುಗರು, ಮೈಸೂರಿನವರು, ಮಲಿಯಾಳದವರು, ತಮಿಳರು, ಮುಸಲ್ಮಾನರು ಮುಂತಾದವರು ಇದ್ದರು. ಪ್ರತಿ ಒಂದು ದಂಡಿನವರು ತಮ್ಮ ತಮ್ಮ ಪ್ರಾಂತದ ನಾಯಕನ ಕೂಡಬಂದಿದ್ದರು. ಒಂದೊಂದು ಆನೆಯ ಮೇಲೆ ಮೂರು–ನಾಲ್ಕು ಜನರು ಕುಳಿತು ಡಾಲು ಬರ್ಚಿಗಳನ್ನು ಧರಿಸಿದ್ದರು. ಕಾಲಾಳುಗಳಲ್ಲಿ ಕೆಲವರು ಬಿಲ್ಲು ಬಾಣಗಳನ್ನೂ, ಕೆಲವರು ತುಬಾಕಿಗಳನ್ನೂ ಹಿಡಿದಿದ್ದರು.ಇವರು ನಡುವಿನಲ್ಲಿ ಕಠಾರಿಯನ್ನೂ ಚಪ್ಪಕೊಡಲಿಯನ್ನೂ ಸಿಗಸಿದ್ದರು. ಹೀಗೆ ಶಸ್ತ್ರಾಸ್ತ್ರಗಳಿಂದ ಸಜ್ಜಾಗಿ ನಿಂತಿದ್ದ ಹಾಗು ಮಹಾಸಮುದ್ರದ ಹಾಗೆ ಬಹು ದೂರದವರೆಗೆ ಪಸರಿಸಿದ್ದ ತನ್ನ ಸೈನ್ಯವನ್ನು ನೋಡುತ್ತ ರಾಮರಾಜನು ಮನಸ್ಸಿನಲ್ಲಿ ಬಹಳವಾಗಿ ಹಿಗ್ಗಿದನು. ಇಂಥ ಪ್ರಚಂಡ ಸೈನ್ಯದ ಮುಂದೆ ಶತ್ರುಗಳ ಆಟವೇನು ನಡೆಯದಾದ್ದರಿಂದ ಅವರನ್ನು ಸಹಜವಾಗಿ ದಿಕ್ಕುಗೆಡಿಸಿ ಓಡಿಸಬಹುದೆಂದು ಆ ರಾಯನು ಭಾವಿಸಿ ಆನಂದಭರಿತನಾದನು. ಆತನು ಸೈನ್ಯದ ಪ್ರತಿ ಒಂದು ತುಂಡಿನ ಮುಖ್ಯಸ್ಥನೊಡನೆ ಸ್ವಲ್ಪ ಸ್ವಲ್ಪ ಮಾತಾಡುತ್ತ ಉತ್ತೇಜಕ ಭಾಷಣದಿಂದ ಅವರನ್ನು ಪ್ರೋತ್ಸಾಹಿಸುತ್ತ ಮುಂದಕ್ಕೆ ಸಾಗುತ್ತಲಿದ್ದನು. ರಾಮರಾಜನ ಸೈನ್ಯದವರಿಗೆಲ್ಲ ಅಲ್ಪಸ್ವಲ್ಪ ಧನುರ್ವಿದ್ಯೆಯ ಜ್ಞಾನವಿರುತ್ತಿದ್ದರೂ, ಕೇವಲ ಧನುರ್ವಿದ್ಯೆಯಲ್ಲಿ ಪ್ರವೀಣವಾದದ್ದೊಂದು ಸ್ವತಂತ್ರ ಸೈನ್ಯವನ್ನು ರಾಯನು ಸಿದ್ಧಮಾಡಿದ್ದನು. ಆ ಸೈನ್ಯದ ಯುದ್ಧ ಪ್ರಾವೀಣ್ಯವು ಶ್ಲಾಘನೀಯವಾಗಿತ್ತು. ಅದರಂತೆ ರಾಮರಾಜನ ಸೈನ್ಯದಲ್ಲಿ ತೋಫಖಾನೆಯೂ, ತುಬಾಕಿಗಳನ್ನು ಹಾರಿಸುವವರದ್ದೊಂದು ಸೈನ್ಯವೂ ಇದ್ದವು. ಹಿಂದೂ ಸೈನಿಕರಲ್ಲದೆ ಪಠಾಣ ಹಾಗು ಅರಬರ ಒಂದೊಂದು ಸೈನ್ಯಗಳು ರಾಮರಾಜನ ದಂಡಿನಲ್ಲಿ ಇದ್ದವು. ಇವೆರಡೂ ದಂಡುಗಳ ಅಧಿಪತಿಯು ರಣಮಸ್ತಖಾನನಾಗಿದ್ದನು. ಯಾವತ್ತು ಸೇನಾ ಸಮುದ್ರವನ್ನು ನೋಡುತ್ತ ನೋಡುತ್ತ ರಾಮರಾಜನ ಸವಾರಿಯು ರಣಮಸ್ತಖಾನನ ಸೈನ್ಯದ ಬಳಿಗೆ ಬಂದಿತು. ರಣಮಸ್ತಖಾನನ ಈಗಿನ ಉಡಪು–ತೊಡಪುಗಳು ಬೇರೆ ತರಹವಾಗಿದ್ದವು. ಯುದ್ಧವೇಷದಿಂದ ಆ ತರುಣ ಸರದಾರನ ಸೌಂದರ್ಯವು ತುಂಬಿ ಹೊರಸೂಸುತ್ತಲಿತ್ತು. ಆತನನ್ನು ನೋಡಿ ರಾಮರಾಜನು ಬಹು ಕೌತುಕಪಟ್ಟನು. ರಣಮಸ್ತಖಾನನ ಆ ಎರಡೂ ಪಲಟಣಗಳಲ್ಲಿ ಮುಸಲ್ಮಾನರ ಯಾವತ್ತು ಪ್ರಕಾರದ ಆಯುಧಗಳಿದ್ದವು. ಆ ಮುಸಲ್ಮಾನ ಸೈನ್ಯದಲ್ಲಿ ತುರ್ಕರು, ಸಿದ್ದಿಗಳು, ಅರಬರು, ಕಾಬೂಲದ ಪಠಾಣರು ಇದ್ದರು. ಅವರವರ ಬೇರೆಬೇರೆ ಪ್ರಕಾರದ ಪೋಷಾಕುಗಳನ್ನು ನೋಡುವಾಗ ಪ್ರೇಕ್ಷಕರ ಮನೋರಂಜನವಾಗುತ್ತಿತ್ತು. ಅವರಲ್ಲಿ ಪಠಾಣರ ಭವ್ಯದೇಹಗಳೂ, ಅರಬರ ಎತ್ತರವಾದ ಆದರೆ ತೆಳ್ಳಗಿನ ದೇಹಗಳೂ, ಸಿದ್ದಿಜನರ ಗಿಡ್ಡಾದ ಕಪ್ಪುದೇಹಗಳೂ ಬಹು ವಿಚಿತ್ರವಾಗಿ ತೋರುತ್ತಿದ್ದವು. ಯಾವತ್ತು ಮುಸಲ್ಮಾನ ಸೈನಿಕರು ಕೇವಲ ದುಡ್ಡಿನ ಸಲುವಾಗಿ ರಾಮರಾಜನ ಪಕ್ಷದಿಂದ ಕಾದುತ್ತ ಆತನ ಆಜ್ಞೆಯಂತೆ ನಡಕೊಳ್ಳುತ್ತಿದ್ದರು. ರಾಮರಾಜನು ಆ ಮುಸಲ್ಮಾನ ಸೈನ್ಯವನ್ನು ನೋಡಿ ರಣಮಸ್ತಖಾನನೊಡನೆ ನಾಲ್ಕು ಮಾತುಗಳನ್ನಾಡಿ, ಆ ದುಷ್ಮಖಾನನ ಮುಖಾಂತರ ಆತನ ಸೈನಿಕರನ್ನು ಕುರಿತು ನಾಲ್ಕು ಉತ್ತೇಜನಪರ ಮಾತುಗಳನ್ನಾಡಿಸಿ, ರಣಮಸ್ತಖಾನನೊಡನೆ ತನ್ನ ಶಿಬಿರದ ಕಡೆಗೆ ಸಾಗಿದನು.

ಯಾವತ್ತು ಸೈನ್ಯದ ಅವಲೋಕನದಿಂದ ರಾಮರಾಜನ ಉತ್ಸಾಹವು ಅಭಿವೃದ್ಧವಾಗಿತ್ತು ಶತ್ರುಗಳು ಈಗ ಮೈಮೇಲೆ ಏರಿಬಂದರೆ, ಯಾವ ಪಲಟಣದವರು ಯಾವ ಕಡೆಗೆ ನಿಂತುಕೊಳ್ಳಬೇಕು, ಯಾವಾಗ್ಗೆ ಏನು ಮಾಡಬೇಕು, ಎಂಬದನ್ನು ಕುರಿತು ಯಥಾಸ್ಥಿತವಾಗಿ ಅಪ್ಪಣೆಗಳನ್ನು ಕೊಡುತ್ತ ಆತನು ತನ್ನ ಶಿಬಿರವನ್ನು ಸೇರಿಸಿದನು. ಬಹುತರ ಯಾವತ್ತು ಸೈನ್ಯಭಾಗಗಳ ಮುಖ್ಯಸ್ಥರು ರಾಮರಾಜನ ಸಂಗಡ ಆತನನ್ನು ಶಿಬಿರಕ್ಕೆ ಕಳಿಸುವದಕ್ಕಾಗಿ ಆತನ ಸಂಗಡ ಬಂದಿದ್ದರು. ಅವರೆಲ್ಲರನ್ನು ರಾಮರಾಜನು ಪ್ರೋತ್ಸಾಹಿಸಿ ಅವರನ್ನು ಕುರಿತು— ವೀರರೇ, ಶತ್ರುಗಳು ಈಗ ಮೈಮೇಲೆ ಏರಿಬಂದರೆ ಅವರನ್ನು ಹಿಂದಕ್ಕೆದೂಡುತ್ತ ದೂಡುತ್ತ ವಿಜಾಪುರದವರೆಗೆ ಹೋಗಿ ಆ ಪಟ್ಟಣವನ್ನು ಕೈವಶಮಾಡಿಕೊಳ್ಳಬೇಕೆಂಬ ಮಾತನ್ನು ಲಕ್ಷದಲ್ಲಿಟ್ಟು, ನೀವು ಯುದ್ಧಮಾಡತಕ್ಕದ್ದು. ವಿಜಾಪುರವು ಕೈವಶವಾದ ಬಳಿಕ ಅದನ್ನು ಸುಲಿಯುವದಕ್ಕಾಗಿ ನಿಮಗೆ ಐದು ದಿವಸಗಳವರೆಗೆ ಪರವಾನಿಗೆಯನ್ನು ಕೊಡುವೆವು. ಆ ಸುಲಿಗೆಯಲ್ಲಿ ಅವರವರಿಗೆ ಸಿಕ್ಕ ಪದಾರ್ಥಗಳು ಅವರವರವೇ, ಎಂದು ತಿಳಿಯಲಾಗುವದು; ಎಂದು ನಿಮ್ಮ ನಿಮ್ಮ ಜನರೊಳಗೆ ತಿಳಿಸತಕ್ಕದ್ದು, ಎಂದು ಹೇಳಿದನು. ರಾಮರಾಜನಿಗೆ ಸ್ವಂತದ ಪರಾಕ್ರಮದ ವಿಷಯವಾಗಿಯೂ ತನ್ನ ಸೈನ್ಯದ ಸಾಮರ್ಥ್ಯದ ವಿಷಯವಾಗಿಯೂ ಒಳಿತಾಗಿ ಅನುಭವವಿತ್ತು. ಇಲ್ಲಿಯವರೆಗೆ ರಾಮರಾಜನ ಪೂರ್ವಜರು ಬಹಮನಿಯ ಬಾದಶಹರನ್ನು ಒಬ್ಬೊಬ್ಬರನ್ನಾಗಿ ಹಣಿದು ತಮ್ಮ ರಾಜ್ಯವನ್ನು ಸುರಕ್ಷಿತವಾಗಿ ಇಟ್ಟುಕೊಂಡಿದ್ದರಲ್ಲದೆ, ತಮ್ಮ ರಾಜ್ಯದ ವಿಸ್ತಾರವನ್ನು, ಮಹತ್ವವನ್ನೂ ಭರದಿಂದ ಹೆಚ್ಚಿಸಿ, ತಮ್ಮ ವರ್ಚಸ್ಸನ್ನು ಎಲ್ಲರ ಮೇಲೆ ಕೂಡ್ರಿಸಿದ್ದರು; ಆದರೆ ಈಗ ಆ ಬಹಮನಿ ಬಾದಶಹರೆಲ್ಲ ಒಟ್ಟುಗೂಡಿ ಯುದ್ಧಕ್ಕೆ ಬಂದಿರುವದರಿಂದ, ಬಹು ಎಚ್ಚರದಿಂದ ಅವರೊಡನೆ ಯುದ್ಧ ಮಾಡಬೇಕಾಗುವದೆಂಬ ವಿಚಾರವು ರಾಮರಾಜನ ಮನಸ್ಸಿನಲ್ಲಿ ಬರಲೊಲ್ಲದು. ನಾನು ಅವರನ್ನು ಒಂದೇ ಹೊಡೆತಕ್ಕೆ ಹೊಡೆದುಹಾಕೇನೆಂಬ ಮಬ್ಬಿನಲ್ಲಿಯೇ ಆತನು ತಲೆದೂಗುತ್ತಲಿದ್ದನು; ಅದ್ದರಿಂದ ತನ್ನ ಎಡಬಲ ಭಾಗಗಳ ರಕ್ಷಕರಾದ ತಿರುಮಲ–ವೇಂಕಟಾದ್ರಿಗಳು ಈಗ ಬೇರೆ ಕಡೆಗೆ ಹೋಗಿದ್ದರೂ, ತಾನೊಬ್ಬನೇ ಶತ್ರು ಸೈನ್ಯದಮೇಲೆ ಬೀಳಬೇಕೆಂದು ರಾಮರಾಜನು ನಿಶ್ಚಯಿಸಿದನು; ಆದರೂ ತನ್ನ ಬಂಧುಗಳನ್ನು ಕರೆಸಿಕೊಂಡರೆ ಯುವನರ ಪಾರುಪತ್ಯವು ಬೇಗನೆ ಆಗುವದೆಂದು ತಿಳಿದು, ತನ್ನ ಬಳಿಯಲ್ಲಿ ನಿಂತಿದ್ದ ರಣಮಸ್ತನಿಗೆ ತನ್ನ ಬಂಧುಗಳನ್ನು ಕರೆಯುವದಕ್ಕಾಗಿ ಸವಾರನ್ನು ಕಳಿಸಲು ಸೂಚಿಸಿದನು; ಆದರೆ ವಿಶ್ವಾಸಘಾತಕಿಯಾದ ರಣ ಮಸ್ತನು ರಾಮರಾಜನ ಮುಂದೆ ಹಾಗೆ ಮಾಡುವೆನೆಂದು ಒಪ್ಪಿಕೊಂಡರೂ, ತಿರುಮಲ– ವೇಂಕಟಾದ್ರಿಗಳ ಕಡೆಗೆ ಆತನು ಸವಾರರನ್ನು ಕಳಿಸಲಿಲ್ಲ.

ಈ ಮೇರೆಗೆ ರಾಮರಾಜನು ತನ್ನ ಸೈನ್ಯದ ಸಿದ್ಧತೆಯನ್ನು ಮಾಡಿಕೊಂಡು ಕುಳಿತುಕೊಂಡನು. ಆತನಿಗೆ ತನ್ನ ಸೈನ್ಯದಲ್ಲಿ ಯಾವ ಪ್ರಕಾರದದೋಷವೂ ಕಂಡುಬರಲಿಲ್ಲ. ತನ್ನ ಸೈನ್ಯದ ಸಿದ್ಧತೆಯ ಅಭಿಮಾನವು ತಲೆಗೇರಿದ್ದರಿಂದ ಶತ್ರುಬಲದ ಕಲ್ಪನೆಯು ಕೂಡ ಆತನ ಮನಸ್ಸಿಗೆ ಹೊಳೆಯಲಿಲ್ಲ. ಹ್ಯಾಗೂ ತಿರುಮಲ–ವೇಂಕಟಾದ್ರಿಗಳನ್ನು ಕರೆಕಳುಹಿಸಿರುವೆನೆಂದು ಆತನು

ಭಾವಿಸಿ, ನಿಶ್ಚಿಂತನಾಗಿದ್ದನು. ಅಷ್ಟರಲ್ಲಿ ಶತ್ರು ಸೈನ್ಯವು ತಾವು ಬೀಡುಬಿಟ್ಟುಕೊಂಡು ಕುಳಿತು ಸ್ಥಳದಿಂದ ಸುಮಾರು ಮೂರು ಹರದಾರಿ ಮುಂದಕ್ಕೆ ಸಾಗಿಬಂದಿತೆಂಬ ವರ್ತಮಾನವನ್ನು ಚಾರರು ರಾಯನಿಗೆ ಹೇಳಿದರು. ಅದನ್ನು ಕೇಳಿ ರಾಮರಾಯನ ಒಂದು ಭ್ರಾಂತಿಯು ದೂರವಾಗಿ, ಆತನು ಸ್ವಲ್ಪಕಣ್ಣು ತೆರೆದನು. ತಿರುಮಲ ವೇಂಕಟಾದ್ರಿಗಳಿಂದ ಪೆಟ್ಟುತಿಂದು ಮುಸಲ್ಮಾನ ಸೈನ್ಯವು ಓಡಿಬಂದಿಲ್ಲೆಂಬದು ಈಗ ಆತನಿಗೆ ಗೊತ್ತಾಯಿತು. ಈ ಪ್ರಸಂಗದಲ್ಲಿ ಶತ್ರುಗಳು ಮುಂದಕ್ಕೆ ಸಾಗಿಬರುವ ಹಾದಿಯನ್ನು ನೋಡುತ್ತ ಕುಳಿತುಕೊಳ್ಳದೆ, ತಾನು ಮುಂದಕ್ಕೆ ಸಾಗಿಹೋಗಬೇಕೆಂದು ರಾಮರಾಜನು ಯೋಚಿಸಿದನು. ಈಗ ರಾಮರಾಜನ ಸೈನ್ಯವು ಮುದ್ಗಲ್ಲಕೋಟೆಯ ಬಳಿಯಲ್ಲಿ ಇತ್ತು. ಶತ್ರುಸೈನ್ಯವು ತನ್ನ ಬಂಧುಗಳ ಕಣ್ಣುತಪ್ಪಿಸಿ ತಿರುಗಿ ಬಂದು ತನ್ನನ್ನು ಗಂಟುಬಿದ್ದಿತೆಂದು ಆತನು ತಿಳಿದನು, ಆದರೆ ಆತನು ಎದೆಗುಂದಲಿಲ್ಲ. ತನ್ನ ಸೈನ್ಯವು ಒಟ್ಟುಗೂಡಿದ ನಾಲ್ವರು ಬಾದಶಹರ ಸೈನ್ಯಕ್ಕೂ ಎದುರಾಗಲು ಸಮರ್ಥರಾಗಿ ರುತ್ತದೆಂಬ ನಂಬಿಗೆಯು ಆತನಿಗೆ ಸಂಪೂರ್ಣವಾಗಿ ಇತ್ತು! ಅಂದ ಬಳಿಕ ಕೇಳುವದೇನು? ಆತನು ಕೂಡಲೆ ತನ್ನ ಸೈನ್ಯಕ್ಕೆ ಮುಂದಕ್ಕೆ ಸಾಗಲು ಆಜ್ಞಾಪಿಸಿದನು. ಆಗ ಆತನ ನಿಜವಾದ ಹಿತಚಿಂತಕರು ಆತನಿಗೆ—''ಮಹಾರಾಜ, ತಮಗೆ ತಿರುಮಲ, ವೇಕಂಟಾದ್ರಿಗಳ ಬೆಂಬಲವಿಲ್ಲ. ಅವರನ್ನು ಕರೆಯಕಳುಹಿಸಿ ಅವರು ಬಂದಬಳಿಕ ತಾವು ಸಾಗಿ ಹೋಗತಕ್ಕದ್ದು. ಇಲ್ಲದಿದ್ದರೆ, ಶತ್ರುಗಳು ತಾವಾಗಿ ನಮ್ಮ ಮೈಮೇಲೆ ಸಾಗಿ ಬಂದ ಬಳಿಕ ನಿರ್ವಾಹವಿಲ್ಲದೆ ಏನು ಮಾಡುವದನ್ನು ಮಾಡಬೇಕು. ಈಗ ನಾವು ಮದ್ಗಲ್ಲಕೋಟೆಯ ಆಶ್ರಯದಲ್ಲಿರುವೆವು. ಆ ಆಸರವನ್ನು ಬಿಟ್ಟು ಮುಂದಕ್ಕೆ ಹೊಗುವ ಸಾಹಸವನ್ನು ಮಾಡಬಾರದು'' ಎಂದು ಹೇಳಿದರು. ಆದರೆ ರಾಮರಾಜನಿಗೆ ಅವರ ಮಾತುಗಳು ಎಷ್ಟು ಮಾತ್ರವೂ ಸೇರಲಿಲ್ಲ. ನಾನು ಈಗ ಯೋಚಿಸಿರುವದೇ ಯೋಗ್ಯವಾಗಿರುತ್ತದೆ. ನಾನು ಮುಂದಕ್ಕೆ ಸಾಗಿಹೋಗದಿದ್ದರೆ, ನನ್ನ ಅಂಜುಬುರುಕತನವು ವ್ಯಕ್ತವಾಗುವದು. ಈಗ ಅಂಜಲಿಕ್ಕೆ ಅಂಥ ಪ್ರಸಂಗವೇನು ಬಂದಿರುವದಿಲ್ಲ. ಸುಮ್ಮನೆ ಯಾಕೆ ಅಂಜಬೇಕು? ನಾವು ಮುಂದಕ್ಕೆ ಸಾಗಿಹೋಗಿ ಶತ್ರುಗಳು ಎದುರಾದ ಕೂಡಲೆ ಅವರನ್ನು ಸೋಲಿಸಿ, ಅವರನ್ನು ಓಡಿಸಿಕೊಂಡು ಹೋಗಿ ವಿಜಾಪುರವನ್ನು ಸೇರದಿದ್ದರೆ, ನಮ್ಮ ಪೌರುಷವೇನು? ಎಂಬ ಅಭಿಮಾನೋಕ್ತಿಗಳನ್ನು ಆಡುತ್ತ ತನ್ನ ಯಾವತ್ತೂ ಸೇನಾಪತಿಗಳಿಗೆ ತಳವನ್ನು ಕಿತ್ತಲು ಒತ್ತಾಯದಿಂದ ಆಜ್ಞಾಪಿಸಿದನು. ರಾಮರಾಜನ ಈ ಅಪ್ಪಣೆಗೆ ರಣಮಸ್ತನು ಒಳಿತಾಗಿ ಉತ್ತೇಜನ ಕೊಡುವನು, ಉಳಿದವರು ಪ್ರತಿಬಂಧ ಮಾಡುವರು. ರಾಮರಾಜನು ರಣಮಸ್ತನನ್ನು ಹೊಗಳುವನು; ಸ್ವಾಮಿಭಕ್ತರಾದ ತನ್ನ ಜನರನ್ನು ತಿರಸ್ಕರಿಸುವನು. ಇದರಿಂದ ರಾಮರಾಜನ ನಿಜವಾದ ಹಿತಚಿಂತಕರ ಮನಸ್ಸುಗಳು ನೊಂದವು. ಅವರು ತಿರುಮಲ– ವೇಂಕಟಾದ್ರಿಗಳು ಬರುವವರೆಗೆ ಮುದ್ಗಲ್ಲಕೋಟೆಯ ಆಶ್ರಯವನ್ನು ಬಿಟ್ಟು ಮುಂದಕ್ಕೆ ಹೋಗಲಾಗದೆಂದು ನಿಶ್ಚಯಿಸಿದರು; ಆದರೆ ರಾಮರಾಜನು ಮುಂದಕ್ಕೆ ಸಾಗಿ ಹೋಗಲೇಬೇಕೆಂದು ಒತ್ತಾಯ ಮಾಡಹತ್ತಿದನು. ಆತನ ಹಟಮಾರಿತನ ದುರಭಿಮಾನಗಳ ಮುಂದೆ ಯಾರ ಆಟವೂ ನಡೆಯಲೊಲ್ಲದು. ರಾಮರಾಜನು ತನ್ನ ಸೈನ್ಯದ ತಳವನ್ನೇ ಮೊದಲು

ಎಬ್ಬಿಸಿಬಿಟ್ಟದ್ದರಿಂದ, ಉಳಿದವರು ನಿರ್ವಾಹವಿಲ್ಲದೆ ಮುಂದಕ್ಕೆ ಸಾಗಬೇಕಾಯಿತು. ವಿನಾಶ ಕಾಲಕ್ಕೆ ವಿಪರೀತ ಬುದ್ಧಿಯೆಂಬ ಮಾತು ಇಲ್ಲಿ ಚೆನ್ನಾಗಿ ವ್ಯಕ್ತವಾಗುವದು.

ರಾಮರಾಜನ ಸೈನ್ಯವು ವಾಯುಪುರದ ಬಳಿಯಲ್ಲಿ ಬಂದಿತು. ಶತ್ರುಗಳ ಸೈನ್ಯವೂ ಎದುರಿನಿಂದ ಅಲ್ಲಿಗೆ ಬಂದಿತು. ಎರಡೂ ಸೈನ್ಯಗಳು ಒಂದಕ್ಕೊಂದು ತಾಕಲಾಡಿ ಘನಚಕ್ರದ ಕಾಳಗಕ್ಕೆ ಆರಂಭವಾಯಿತು. ಈ ಯುದ್ಧವಾರ್ತೆಯು ಕೇವಲ ಏಕಪಕ್ಷೀಯ ಯವನರ (ಮುಸಲ್ಮಾನ) ಇತಿಹಾಸಕಾರರಿಂದಲೇ ನಮಗೆ ತಿಳಿದಿರುವದು ದುರ್ದೈವದ ಸಂಗತಿಯು. ಮುಸಲ್ಮಾನ ಇತಿಹಾಸಕಾರರು ಜಯಶಾಲಿಗಳಾದ ಮುಸಲ್ಮಾನರ ಪಕ್ಷವನ್ನೇ ಕಟ್ಟಿ ಹಿಂದೂ ಜನರನ್ನು ನಿರಾಕರಿಸಿ ಬರೆಯುವ ಸಂಭವವು ವಿಶೇಷವಾಗಿರುತ್ತದೆ. ಫೇರಿಸ್ತನೆಂಬ ಮುಸಲ್ಮಾನ ಇತಿಹಾಸಕಾರನು ರಾಮರಾಜನ ಸೈನ್ಯದ ಸಂಖ್ಯೆಯನ್ನು ಬೇರೆ ಬೇರೆ ಪ್ರಸಂಗಗಳಲ್ಲಿ ಬೇರೆ ಬೇರೆ ವಿಧವಾಗಿ ಕೊಟ್ಟಿರುತ್ತಾನೆ. ಒಂದು ಸ್ಥಳದಲ್ಲಿ ಆತನು ರಾಮರಾಜನ ಸೈನ್ಯದಲ್ಲಿ ೯,೦೦,೦೦೦ ಕಾಲಾಳುಗಳೂ, ೪೫,೦೦೦ ಕುದುರೆ ಸವಾರರೂ, ೨,೯೦೦ ಆನೆಗಳೂ, ೧೫,೦೦೦ ಬೇರೆ ಸೈನಿಕರೂ ಇದ್ದರೆಂದು ಉಲ್ಲೇಖಿಸಿರುವನು. ಈ ಸೈನ್ಯಕ್ಕೆ ಸರಿಯಾಗಿಯೇ ಮುಸಲ್ಮಾನರ ಸೈನ್ಯವಾದರೂ ಇರಬಹುದು. ಮುಸಲ್ಮಾನರ ಸೈನ್ಯವು ಮೂರು ತುಂಡುಗಳಾಗಿ ವಿಭಾಗಿಸಲ್ಪಟ್ಟಿತ್ತು. ಹಿಂದೂ ಸೈನ್ಯದ ಬಲಗಡೆಯ ಮಗ್ಗಲ ಮೇಲೆ ಸಾಗಿಹೋಗುವದಕ್ಕಾಗಿ ವಿಜಾಪುರದ ಅಲ್ಲಿ–ಆದಿಲಶಹನ ಸೈನ್ಯವೂ, ಎಡಗಡೆಯ ಮಗ್ಗಲಿಗೆ ಸಾಗಿಹೋಗುವದಕ್ಕಾಗಿ ಬೀದರದ ಅಲ್ಲಿ ಬರಿದಶಹನ ಸೈನ್ಯವೂ, ಮಧ್ಯಕೇಂದ್ರದ ಮೇಲೆ ಸಾಗಿ ಬರುವದಕ್ಕಾಗಿ ಅಹಮ್ಮದನಗರದ ಹುಸೇನ ನಿಜಾಮಶಹನ ಸೈನ್ಯವೂ ಯೋಜಿಸಲ್ಪಟ್ಟಿದ್ದವು. ಈ ಮೂವರೂ ತಮ್ಮ ತಮ್ಮ ತೋಫಖಾನೆಗಳನ್ನು ಮಧ್ಯದಲ್ಲಿಟ್ಟು, ಅವು ಹಿಂದುಗಳಿಗೆ ಕಾಣದಹಾಗೆ ಅವುಗಳ ಮುಂದೆ ಧನುರ್ಧಾರಿಗಳ ಸೈನ್ಯವನ್ನು ನಿಲ್ಲಿಸಿದ್ದರು. ಪ್ರತಿ ಒಂದು ಪಥಕದವರು ತಮ್ಮ ಬಾರಾ ಇಮಾಮನ ನಿಶಾನೆಯನ್ನು ಸೈನ್ಯದ ಮುಂದೆ ಹಿಡಿದಿದ್ದರು ನಿಜಾಮಶಹನ ತೋಫಕಾನೆಯು ದೊಡ್ಡದಿತ್ತು, ಅವುಗಳಲ್ಲಿ ತೋಪುಗಳು ಸಣ್ಣವು–ದೊಡ್ಡವು ಕೂಡಿ ೬೦೦ ಇದ್ದವು. ಸಣ್ಣ ತೋಪುಗಳನ್ನು ಹಿಂದುಗಡೆಯಲ್ಲಿ ನಿಲ್ಲಿಸಿ, ದೊಡ್ಡ ತೋಪುಗಳನ್ನು ಮುಂದುಗಡೆಯಲ್ಲಿ ನಿಲ್ಲಿಸಿದ್ದರು. ಈ ಮೇರೆಗೆ ತೋಪುಗಳನ್ನು ನಿಲ್ಲಿಸಿರುವದು ಹಿಂದೂ ಜನರಿಗೆ ಗೊತ್ತಾಗಿದ್ದಿಲ್ಲ. ಅದು ಗೊತ್ತಾಗಬಾರದೆಂತಲೇ ಮುಸಲ್ಮಾನರು ಧನುರ್ಧಾರಿಗಳನ್ನು ತೋಪುಗಳ ಮುಂದೆ ನಿಲ್ಲಿಸಿ ಮರೆಮಾಡಿದ್ದರು. ಮುಸಲ್ಮಾನ ಧನುರ್ಧಾರಿಗಳು ಬಾಣಗಳನ್ನು ಬಿಡಹತ್ತಿದ ಕೂಡಲೆ ಹಿಂದೂ ಜನರು ಅವರ ಮೇಲೆ ಬಾಣಗಳನ್ನು ಸುರಿಸಹತ್ತಿದರು. ಹಿಂದೂ ಧನುರ್ಧಾರಿಗಳಿಗೆ ತಮ್ಮ ಧನುರ್ಧಾರಿಗಳು ಈಡಾಗಲಾರರೆಂಬುದು ಮುಸ್ಮಾನರಿಗೆ ಗೊತ್ತಿದ್ದರೂ, ಹಿಂದೂ ಸೈನಿಕರನ್ನು ತಮ್ಮ ಮೇಲೆ ಎಳ ಕೊಂಡು, ಕೂಡಲೆ ತಮ್ಮ ಬಿಲ್ಲಾಳುಗಳನ್ನು ಹಿಂದಕ್ಕೆಸರಿಸಿಕೊಂಡು ತೋಪುಗಳನ್ನು ಹಾರಿಸಿ, ಹಿಂದೂ ಸೈನ್ಯದ ಸಂಹಾರವನ್ನು ಮಾಡಿ ಜರ್ಜರಗೊಳಿಸಬೇಕೆಂದು ಮುಸಲ್ಮಾನರು ಯೋಚಿಸಿದ್ದರು. ಆ ಯೋಚನೆಯು ಚೆನ್ನಾಗಿ ಫಲಿಸಿತು. ಈ ಮುಸಲ್ಮಾನ ಧನುರ್ಧಾರಿಗಳ ಆಟವು ನಮ್ಮ ಮುಂದೆ ಏನೂ ನಡೆಯಲಾರದೆಂಬ ನಂಬಿಗೆಯಿಂದ ರಾಮರಾಜನು ತಮ್ಮ ಧನುರ್ಧಾರಿಗಳನ್ನು ಭರದಿಂದ ಮುಂದಕ್ಕೆ ನೂಕಿದನು. ಹಿಂದೂ ಜನರು

ತಮ್ಮ ಅಳವಿನೊಳಗೆ ಬಂದರೆಂಬದನ್ನು ನೋಡಿದ ಕೂಡಲೆ ಮುಸಲ್ಮಾನರು ತಮ್ಮ ಧನುರ್ಧಾರಿಗಳಿಗೆ ಕಾಲುದೆಗೆಯಲು ಸೂಚಿಸಿದರು. ಕೂಡಲೆ ಮುಸಲ್ಮಾನ ಧನುರ್ಧಾರಿಗಳು ಸೋತು ಹಿಂದಕ್ಕೆ ಓಡುವವರಂತೆ ವಿಜಾಪುರದ ಕಡೆಗೆ ಸರಿಯಹತ್ತಿದರು. ಅದನ್ನು ನೋಡಿ ಹಿಂದೂ ಜನರು ಉಬ್ಬಿಜಯಘೋಷ ಮಾಡುತ್ತ ಆವೇಶದಿಂದ ಮುಂದಕ್ಕೆ ಸಾಗಿಹೋದರು. ಕೂಡಲೆ ಮುಸಲ್ಮಾನರು ತಮ್ಮ ತೋಪುಗಳನ್ನು ಹಾರಿಸಿ, ಹಿಂದು ಜನರ ಸಂಹಾರವನ್ನು ಮಾಡಹತ್ತಿದರು.

ಹೀಗಾಗಿ ಶೂರರಾದ ಹಿಂದೂ ಧನುರ್ಧಾರಿಗಳು ಪಟಪಟ ಸಾಯಹತ್ತಿದರು. ಇಷ್ಟರಿಂದ ರಾಮರಾಜನ ಸೈನಿಕರೇನು ಹಿಂಜರಿಯಲಿಲ್ಲ. ಕೂಡಲೆ ಮುಸಲ್ಮಾನ ತೋಪುಗಳಿಗೆ ಎದುರಾಗಿ ಹಿಂದೂ ಜನರ ತೋಪುಗಳು ಮುಂದಕ್ಕೆ ಬಂದು ಹಾರಹತ್ತಿದವು. ಇದರಿಂದ ಎರಡೂ ಸೈನ್ಯಗಳಲ್ಲಿ ಭಯಂಕರವಾದ ಸಂಹಾರಕಾರ್ಯವು ನಡೆಯಿತು. ಅಷ್ಟರಲ್ಲಿ ಬೇರೆ ಚಾರರ ಮುಖಾಂತರವಾಗಿ ಶತ್ರುಗಳ ಮೋಸವು ಗೊತ್ತಾಗಿ ತಿರುಮಲ–ವೇಂಕಟಾದ್ರಿಗಳೂ ತಮ್ಮ ಸೈನ್ಯಗಳೊಡನೆ ವೇಗದಿಂದಬಂದು, ಮುಸಲ್ಮಾನ ಸೈನ್ಯದ ಎಡಬಲಗಳಲ್ಲಿ ಭಯಂಕರ ರೀತಿಯಿಂದ ಏರಿಹೋದರು. ಮಧ್ಯಭಾಗದಲ್ಲಿಯಂತೂ ರಾಮರಾಜನು ಸ್ವತಃ ಆನೆಯ ಮೇಲೆ ಕುಳಿತುಕೊಂಡು ಸಂಚರಿಸುತ್ತ ತನ್ನ ದಂಡಾಳುಗಳಿಗೆ ಧೈರ್ಯ ಹೇಳುತ್ತಲಿದ್ದನು. ಆತನ ಅಲೌಕಿಕ ಧೈರ್ಯದಿಂದ ಬಹಳ ಪ್ರಯೋಜನವಾಯಿತು. ಅವನ ಸೈನ್ಯದವರು ಒಳಿತಾಗಿ ಸ್ಫುರಣಗೊಂಡರು, ಶತ್ರುಗಳ ತೋಪುಗಳು ಸುಮ್ಮನಾದವು. ರಾಮರಾಜನು ಶತ್ರುಗಳನ್ನು ಹಿಂದಕ್ಕೆ ಸರಿಸುತ್ತ ನಡೆದನು. ಶತ್ರುಗಳು ಹಿಂದಕ್ಕೆ ಸರಿಯುತ್ತ ಹೋದಂತೆ ರಾಮರಾಜನು ವಿಲಕ್ಷಣ ರೀತಿಯಿಂದ ಆವೇಶಗೊಂಡನು. ವೃದ್ಧ ರಾಮರಾಜನ ಈಗಿನ ಮಹಾ ಶೌರ್ಯಕ್ಕೆ ಭಾರತೀಯ ವೀರಾಗ್ರಣಿ ಭೀಷ್ಮನ ಶೌರ್ಯವನ್ನು ಹೋಲಿಸಬಹುದು. ಈಗಿನ ಕಾಲದಲ್ಲಿ ರಾಮರಾಜನ ವಯಸ್ಸು ೯೦ ವರ್ಷದ್ದಿತ್ತೆಂದು ಕೆಲವರು ಹೇಳಿರುತ್ತಾರೆ; ಆದರೆ ಇದು ಅತಿಶಯೋಕ್ತಿಯೆಂದು ಭಾವಿಸಿದರೂ, ರಾಮರಾಜನು ಈ ಕಾಲದಲ್ಲಿ ವೃದ್ಧಾಪ್ಯದೆಶೆಯನ್ನು ಹೊಂದಿದ್ದನೆಂದು ಹೇಳಲಿಕ್ಕೆ ಬಾಧಕವಿಲ್ಲ. ಉಭಯ ಸೈನಿಕರು ಎದೆಗೆ ಎದೆಯಾನಿಸಿ ಕಾದುತ್ತಲಿದ್ದರು. ಇನ್ನು ಮೇಲೆ ತನಗೆ ಪೂರ್ಣ ಜಯಪ್ರಾಪ್ತಿಯಾಗುವದೆಂಬ ನಂಬಿಗೆಯು ರಾಮರಾಜನಲ್ಲಿ ಉತ್ಪನ್ನವಾಗತೊಡಗಿತ್ತು; ಮುಸಲ್ಮಾನರು ಇನ್ನು ಓಡಿ ಹೋಗತಕ್ಕವರು; ಅಷ್ಟರಲ್ಲಿ ದುರ್ದೈವದಿಂದ ರಾಮರಾಜನು ಹತ್ತಿಕೊಂಡಿದ್ದ ಆನೆಗೆ ಗಾಯವಾಗಿ ಅದು ದೊಪ್ಪನೆ ನೆಲಕ್ಕೆ ಕುಳಿತಿತು. ಆದರೆ ರಾಮರಾಜನು ಎದೆಗುಂದಲಿಲ್ಲ; ಆತನು ಅಂಬಾರಿಯಿಂದ ಕೆಳಗೆ ಇಳಿದು, ತನ್ನ ಸಲುವಾಗಿ ಒಂದು ಸಿಂಹಾಸನವನ್ನು ಸಿದ್ಧಮಾಡುವದಕ್ಕಾಗಿ ತನ್ನ ಸೈನಿಕರಿಗೆ ಆಜ್ಞಾಪಿಸಿದನು. ಮುಂದೆ ಸ್ವಲ್ಪ ವೇಳೆಯಲ್ಲಿ ಸಿಂಹಾಸನವು ಸಿದ್ಧವಾಗಲು, ರಾಮರಾಜನು ಅದರ ಮೇಲೆ ಕುಳಿತು ಸೈನ್ಯದಲ್ಲಿ ಮಹಾ ಪರಾಕ್ರಮವನ್ನು ಮಾಡಿದವರಿಗೆ ಕೈಗೆ ಬಂದಂತೆ ಉಚಿತಗಳನ್ನು ಕೊಡಹತ್ತಿದನು. ಶತ್ರುಗಳ ತೋಫಖಾನೆಯಲ್ಲಿ ಜೀವವೇನು ಉಳಿದಿರುವದಿಲ್ಲೆಂದು ಆತನು ಸಂಪೂರ್ಣವಾಗಿ ನಂಬಿಕೊಂಡಿದ್ದನು. ರಾಮರಾಜನ ಸೈನಿಕರಾದರೂ ಆವೇಶದಿಂದ ಕಾದುತ್ತಲಿದ್ದರು. ಅಷ್ಟರಲ್ಲಿ ಶತ್ರುಗಳ ಕಡೆಯ ಒಳ್ಳೇ ಜಾಣರಾದ ಗೋಲಂದಾಜಿಗಳು ತಮ್ಮ

ತೋಫುಗಳಲ್ಲಿ ತಾಮ್ರದ ದುಡ್ಡುಗಳನ್ನೂ ಚೂರುಗಳನ್ನೂ ತುಂಬಿ ಒಮ್ಮೆಲೆ ಹಾರಿಸಹತ್ತಿದರು. ಇದರಿಂದ ರಾಮರಾಜನ ಸೈನಿಕರು ಅಕಾಸ್ಮಾತ್ತಾಗಿ ಗಾಯಪಟ್ಟು ನೆಲಕ್ಕೆ ಉರುಳಹತ್ತಿದರು. ಈ ಸುದ್ದಿಯನ್ನು ರಾಮರಾಜನ ಕಡೆಯ ಜನರು ರಾಮರಾಜನಿಗೆ ಹೇಳಿ, ಇನ್ನು ನೀವು ಬೇಗನ ಕುದುರೆಯನ್ನು ಹತ್ತಿ ಹಿಂದಕ್ಕೆಸರಿಯಬೇಕೆಂದು ಸೂಚಿಸಿದರು; ಆದರೆ ಹೀಗೆ ಮಾಡುವದರಿಂದ ತನ್ನ ದಂಡಾಳುಗಳು ಎದೆಗೆಟ್ಟಾರೆಂದು ತಿಳಿದು ಸಾಯುವವರೆಗೆ ಶತ್ರುಗಳಿಗೆ ಬೆನ್ನು ತೋರಿಸ ಬಾರದೆಂದು ರಾಯನು ನಿಶ್ಚಯಿಸಿ, ತನ್ನ ಸಿಂಹಾಸನವನ್ನು ಬಿಟ್ಟು ಏಳದಾದನು.

ರಾಮರಾಜನ ಈ ನಿಶ್ಚಯವು ಕಡೆತನಕ ತಡೆಯಲಿಲ್ಲ. ತಾಮ್ರದ ದುಡ್ಡುಗಳ ಹಾಗು ಚೂರುಗಳ ಹೊಡೆತವನ್ನು ತಾಳಲಾರದೆ, ಹಿಂದೂ ಜನರು ಹಿಂದಕ್ಕೆ ಸರಿಯಹತ್ತಿದರು. ಅವರು ಹಿಂದೆಕ್ಕೆ ಸರಿಯುತ್ತ ಹೋದಂತೆ ಮುಸಲ್ಮಾನರು ಮುಂದಕ್ಕೆ ಬರಹತ್ತಿದರು. ಅಷ್ಟರಲ್ಲಿ ಹುಸೇನ ನಿಜಾಮಶಹನಿಗೆ, ರಾಮರಾಜನು ಸೈನ್ಯಮಧ್ಯದಲ್ಲಿ ಸಿಂಹಾಸನದ ಮೇಲೆ ಕುಳಿತಿರುವನೆಂಬ ಸುದ್ದಿಯು ಹತ್ತಿತು. ಕೂಡಲೆ ಆತನು ರಾಮರಾಜನ ತಲೆಯನ್ನು ತಂದುಕೊಟ್ಟವರಿಗೂ, ಆ ಕಾರ್ಯಕ್ಕಾಗಿ ಸಹಾಯ ಮಾಡಿದವರಿಗೂ ಬಹು ದೊಡ್ಡ ಇನಾಮು ಕೊಡುವೆನೆಂದು ಡಂಗುರ ಸಾರಿದನು. ಆಗ ನಿಜಾಮಶಹನ ದಂಡಿನವರು ಆವೇಶದಿಂದ ಹಿಂದುಗಳ ಸೈನ್ಯವನ್ನು ನುಗ್ಗಿದರು. ಅಷ್ಟರಲ್ಲಿ ನಿಜಾಮಶಹನ ಆನೆಯು ಬೆದರಿ ರಾಮರಾಜನಿದ್ದ ಕಡೆಗೆ ಓಡಿಬಂದಿತು. ಹಿಂದುಗಳು ನಿಜಾಮಶಹನನ್ನು ಕೊಲ್ಲಬೇಕೆಂದು ಆನೆಯನ್ನು ಮುತ್ತಲು, ಅದು ಮತ್ತಿಷ್ಟು ಬೆದರಿ ಕರ್ಮಧರ್ಮ ಸಂಯೋಗದಿಂದ ರಾಮರಾಜನು ಕುಳಿತಿರುವಲ್ಲಿಗೆ ಬಂದಿತು. ಕೂಡಲೆ ರಾಮರಾಜನ ಜನರು ರಾಮರಾಜನನ್ನು ಪಲ್ಲಕ್ಕಿಯಲ್ಲಿ ಹಾಕಿಕೊಂಡು ವೇಗದಿಂದ ಹಿಂದಕ್ಕೆ ಓಡಹತ್ತಿದರು. ಹುಸೇನಶಹನ ಆನೆಯು ಪಲ್ಲಕ್ಕಿಯ ಬೆನ್ನುಹತ್ತಿಯೇ ಸಾಗಿತ್ತು

## ದಂಪತಿಗಳ ಅಂತವು

ಈ ಮೇರೆಗೆ ನಿಜಾಮಶಹನ ಆನೆಯು ತಮ್ಮ ಒಡೆಯನ ಪಲ್ಲಕ್ಕಿಯನ್ನು ಬೆನ್ನಟ್ಟಿರಲು, ರಾಮರಾಜನ ಜನರು ರಾಮರಾಜನನ್ನು ಪಲ್ಲಕ್ಕಿಯಿಂದ ಇಳಿಸಿ ರಥದಲ್ಲಿ ಕುಳ್ಳಿರಿಸಿಕೊಂಡು ವೇಗದಿಂದ ಸಾಗಿದರು. ಹೀಗೆ ರಾಮರಾಜನು ಓಡಿಹೋಗುವದನ್ನು ನೋಡಿ ಆತನ ಸೈನಿಕರೂ ಓಡಿಹೋಗುವ ಮನಸ್ಸು ಮಾಡಿದರು. ಈ ದುರ್ಬುದ್ಧಿಯು ಸೈನಿಕರಿಗೆ ಉತ್ಪನ್ನವಾಗುವ ದೊಂದೇ ತಡ, ವಿಜಯನಗರದ ದಂಡಾಳುಗಳು ವಿಜಯನಗರದ ಕಡೆಗೆ ಓಡಹತ್ತಿದರು. ಅಂದ ಬಳಿಕ ಕೇಳುವದೇನು, ಮುಸಲ್ಮಾನ ಸೈನಿಕರು ಹಿಂದುಗಳನ್ನು ಬೆನ್ನಟ್ಟಿ ಸಂಹರಿಸಹತ್ತಿದರು. ಅಕಸ್ಮಾತ್ತಾಗಿ ಹೀಗೆ ಯಾಕಾಯಿತೆಂಬುದು ಯಾರಿಗೂ ತಿಳಿಯಲೊಲ್ಲದು. ವಿಜಯನಗರದ ಸೈನಿಕರು ಆಶ್ಚರ್ಯಚಕಿತರಾದರು; ಆದರೆ ಓಡಿಹೋಗುವದರ ಹೊರತು ಬೇರೆ ವಿಚಾರವೇ ಅವರಿಗೆ ಹೊಳೆಯಲಿಲ್ಲವು. ಹೀಗೆ ಒಂದು ಒಂದೂವರೆ ತಾಸಿನವರೆಗೆ ಓಡುವ ಕೆಲಸವು

ನಡೆಯಿತು. ಅಷ್ಟರಲ್ಲಿ ಹಿಂದೂ ದಂಡಾಳುಗಳಿಗೆ ಅಕಸ್ಮಾತ್ತಾಗಿ ಮತ್ತೊಂದು ಗಂಡಾಂತರವು ಒದಗಿತು. ವಿಶ್ವಾಸಘಾತಕಿಯಾದ ರಣಮಸ್ತಖಾನನು ತನ್ನ ಅರಬ–ಪಠಾಣ ಸೈನ್ಯವನ್ನು ಓಡಿಬರುವ ಹಿಂದುಗಳ ಸೈನ್ಯದ ಮೇಲೆ ನೂಕಿದನು. ಹಿಂದೆ ಮುಸಲ್ಮಾನ ಬಾದಶಹರ ಸೈನ್ಯ, ಮುಂದೆ ರಣಮಸ್ತಖಾನನ ಸೈನ್ಯ ಹೀಗೆ ಅಡಕೊತ್ತಿನಲ್ಲಿ ಸಿಕ್ಕ ಅಡಿಕೆಯಂತೆ ಹಿಂದೂ ಸೈನಿಕರು ಜಿಬ್ಬೆಯಾಗಹತ್ತಿದರು. ಅವರಿಗೆ ಹಿಂದಿರುಗಿ ಕಾದಲಿಕ್ಕೆ ಬರಲೊಲ್ಲದು; ಮುಂದಕ್ಕೆ ಓಡಿಹೋಗಲಿಕ್ಕೂ ಬರಲೊಲ್ಲದು. ಹೀಗಾಗಿ ಭಯಂಕರವಾದ ಕೊಲೆಗೆ ಆರಂಭವಾಯಿತು. ಹಿಂದೂ ಸೈನಿಕರ ಹೆಣಗಳ ರಾಶಿಗಳುಬಿದ್ದವು. ಸಾವಿರಾರು ಆನೆ–ಕುದುರೆಗಳು ದಿಂಡುರುಳಿದವು. ಇಂಥ ಪ್ರಂಸಗದಲ್ಲಿ ರಾಮರಾಜನ ಮುನ್ನೂರು ಜನ ಸ್ವಾಮಿ ಭಕ್ತ ದಂಡಾಳುಗಳು ತಮ್ಮ ಒಡೆಯನನ್ನಾದರೂ ಮುದ್ಗಲ್ಲಕೋಟೆಯವರೆಗೆ ಸುರಕ್ಷಿತವಾಗಿ ಕರಕೊಂಡು ಹೋಗಬೇಕೆಂದು ನಿಶ್ಚಯಿಸಿ, ರಾಮರಾಜನ ರಥವನ್ನು ದಕ್ಷತೆಯಿಂದ ರಕ್ಷಿಸುತ್ತ ಅದನ್ನು ಭರದಿಂದ ಸಾಗಿಸಿಕೊಂಡು ಹೋಗುತ್ತಲಿದ್ದರು;' ಆದರೆ ಭವಿತವ್ಯವನ್ನು ತಪ್ಪಿಸುವದು ಯಾರಿಂದಲೂ ಆಗದೆಂಬ ನ್ಯಾಯದಂತೆ, ರಾಮರಾಜನ ರಥವು ರಣಮಸ್ತಖಾನನ ಕಣ್ಣಿಗೆ ಬಿದ್ದಿತು. ಆಗ ದುಷ್ಟ ರಣಮಸ್ತನು ಬಹು ಸಮಾಧಾನ ಪಟ್ಟು ಇಂಥ ಪ್ರಸಂಗದಲ್ಲಿ ಸಾಧಿಸಿದರೇ ತನ್ನ ಪ್ರತಿಜ್ಞೆಯು ಸಾಧಿಸುವದೆಂದು ತಿಳಿದು ಆತನು ನೂರಾ ಐವತ್ತು ಜನರೊಡನೆ ರಾಮರಾಜನ ರಥವನ್ನು ಬೆನ್ನಟ್ಟಿ ನಡೆದನು. ರಾಮರಾಜನ ಜನರು ತಮ್ಮ ಒಡೆಯನನ್ನು ರಕ್ಷಿಸುವ ವಿಷಯವಾಗಿ ನಿಶ್ಚಯಮಾಡಿಕೊಂಡಿದ್ದರು. ತಮ್ಮಲ್ಲಿ ಒಬ್ಬನಾದರೂ ಜೀವದಿಂದಿರುವವರೆಗೆ ರಾಮರಾಜನ ಕೂದಲಿಗೆ ಧಕ್ಕೆ ಹತ್ತ ಗೊಡಲಿಕ್ಕಿಲ್ಲೆಂದು ಅವರು ನಿರ್ಧರಿಸಿಕೊಂಡಿದ್ದರು. ಇತ್ತ ರಣಮಸ್ತಖಾನನೂ ತನ್ನ ಪ್ರತಿಜ್ಞೆಯನ್ನು ನೆರವೇರಿಸಲು ಆತುರಪಡುತ್ತಲಿದ್ದನು. ಮುದ್ಗಲ್ಲಕೋಟೆಯೊಳಗೆ ರಾಮರಾಜನು ಹೋಗುವದ ರೊಳಗಾಗಿ ಎಲ್ಲಿಯಾದರೂ ಕಂದಕದ ಬಳಿಯಲ್ಲಿ ರಾಮರಾಜನಿಗೆ ಗಂಟುಬಿದ್ದು, ಆತನ ಕುತ್ತಿಗೆ ಕೊಯ್ಯಬೇಕೆಂದೇ ಆ ವಿಶ್ವಾಸಘಾತಕಿಯು ನಿಶ್ಚಯಿಸಿದ್ದನು. ರಣಮಸ್ತನು ತನ್ನ ಪರಿವಾರದೊಡನೆ ತೀರ ಸನಿಯಕ್ಕೆ ಬಂದದ್ದನ್ನು ನೋಡಿ, ರಾಮರಾಜನ ರಕ್ಷಕರಾದ ಮುನ್ನೂರು ಜನರಲ್ಲಿ ನೂರಾಐವತ್ತು ಜನರು ರಣಮಸ್ತನ ಸಂಗಡ ಕಾದುವದಕ್ಕಾಗಿ ನಿಂತು ಉಳಿದ ನೂರಾಐವತ್ತು ಜನರು ರಾಮರಾಜನ ರಥವನ್ನು ಸಾಗಿಸಿಕೊಂಡು ಹೋಗಹತ್ತಿದರು. ಇದನ್ನು ನೋಡಿ ರಣಮಸ್ತನು ತನ್ನ ಸೈನ್ಯವನ್ನು ದ್ವಿಭಾಗಿಸಿ, ಎಪ್ಪತ್ತೈದು ಜನರನ್ನು ಹಿಂದಕ್ಕೆ ಕಾದಲು ಬಿಟ್ಟು, ಉಳಿದ ಎಪ್ಪತ್ತೈದು ಜನರನ್ನು ತನ್ನ ಸಂಗಡ ಕರಕೊಂಡ ರಾಮರಾಜನ ರಥದ ಮೇಲೆ ಸಾಗಿ ಹೋದನು. ದೈವವು ರಾಮರಾಜನಿಗೆ ತೀರ ಪ್ರತಿಕೂಲವಾಗಿತ್ತು, ರಣಮಸ್ತನ ಜನರ ದಾಳಿಯಲ್ಲಿ ರಾಮರಾಜನ ರಥದ ಒಂದು ಕುದುರೆಯು ಕಾಲು ಕಡಿದುಬಿದ್ದು ರಥವು ನಿಂತುಬಿಟ್ಟಿತು. ರಾಮರಾಜನ ಜನರು ರಣಮಸ್ತನ ಜನರೊಡನೆ ಕಾದಹತ್ತಿದರು. ತಮ್ಮ ಒಡೆಯನ ದುರವಸ್ಥೆಯಿಂದ ರಾಮರಾಜನ ರಕ್ಷಕರು ಹತಾಶರಾಗಿ, ದಿಕ್ಕುಗೆಟ್ಟು ಓಡಹತ್ತಿದರು. ಆಗ ರಣಮಸ್ತನು ರಾಮರಾಜನ ಬಳಿಗೆ ಹೋದನು; ಆದರೆ ರಾಮರಾಜನು ಹೆದರದೆ ಕಾದುತ್ತಿರುವಾಗ ಆತನೊಂದು ಕೈಯು ಕತ್ತರಿಸಿಬಿದ್ದಿತು. ಆಗ ರಣಮಸ್ತನು ರಾಮರಾಜನನ್ನು ಹಿಡಿದು ನಿಲ್ಲಿಸಿ–

ರಣಮಸ್ತ–ನೂರಜಹಾನಳನ್ನು ಎಲ್ಲಿ ಇಟ್ಟಿರುವೆ, ಮೊದಲು ಹೇಳು.

ರಾಮರಾಜ–ತಮ್ಮಾ ರಣಮಸ್ತ ನೀನು ನನ್ನ ಮೇಲೆ ತಿರುಗಿಬೀಳುವೆಯಾ? ನೀನು ನನ್ನ......

ರಣಮಸ್ತ–ನನ್ನ ಮುಂದೆ ಬೇರೆ ಯಾವ ಮಾತೂ ಆಡಬೇಡ ನೂರಜಹಾನಳನ್ನು ಎಲ್ಲಿ ಇಟ್ಟಿರುತ್ತೀ ಮೊದಲು ಹೇಳು, ಇಲ್ಲದಿದ್ದರೆ ನಿನ್ನ ಶಿರಚ್ಛೇದ ಮಾಡುವೆನು.

ರಾಮರಾಜ–ನೀನೆ? ನೀನು ನನ್ನ ಶಿರಚ್ಛೇದ ಮಾಡುವೆಯಾ?

ರಣಮಸ್ತ–ಹೌದು, ಮಾಡುವೆನು, ಆದರೆ ಮೊದಲು ನೂರಜಹಾನಳು ಎಲ್ಲಿ ಇರುತ್ತಾಳೆ ಹೇಳು.

ರಾಮರಾಜ–ನೂರಜಹಾನಳೇ? ನೂರಜಹಾನಳು ಆ ಕುಂಜವನದಲ್ಲಿರುತ್ತಾಳೆ.

ರಣಮಸ್ತ–ಕುಂಜವನದಲ್ಲಿರುವಳೆ? ಶಾಬಾಸ! ಒಳ್ಳೇದಾಯಿತು.ಬಹಳ ಒಳ್ಳೇದಾಯಿತು ಬಹು ಯೋಗ್ಯವಾದ ಸ್ಥಳದಲ್ಲಿ ಆಕೆಯನ್ನು ಇಟ್ಟಿರುವೆ. ಇನ್ನು ಮೇಲೆ ನೀನು ಈ ಜಗತ್ತಿನಲ್ಲಿ ಇರಲವಶ್ಯವಿಲ್ಲ, ಇಲ್ಲಿ ನಿನ್ನ ಕೆಲಸವೇನೂ ಇಲ್ಲ, ನೂರಜಹಾನಳ ಪ್ರಾಪ್ತಿಗಾಗಿ ನಾನು ನಿನ್ನ ಶಿರಚ್ಛೇದ ಮಾಡಲೇಬೇಕಾಗಿರುವದು.

ಈ ಮೇರೆಗೆ ನುಡಿದು ರಣಮಸ್ತಖಾನನು ಒಮ್ಮೇಲೆ ರಾಮರಾಜನ ತಲೆಯ ಮೇಲಿನ ಮುಂಡಾಸವನ್ನು ಹಾರಿಸಿ, ಆತನ ಚಂಡಿಕೆ ಹಿಡಿದು, ತನ್ನ ಖಡ್ಗದಿಂದ ಅವನ ರುಂಡವನ್ನು ದಡದಿಂದ ಬೇರೆ ಮಾಡಿದನು. ಆಗ ಅವನ ರುಂಡುವು–ತಮ್ಮಾ ರಣಮಸ್ತ ನೀನು....... ಎಂದು ಏನೋ ನುಡಿಯುತ್ತಿತ್ತು, ತಮ್ಮ ಒಡೆಯನ ಈ ಕೃತಿಯನ್ನು ನೋಡಿ ರಣಮಸ್ತನ ಜನರು ಆತನನ್ನು ಬಹಳವಾಗಿ ಶ್ಲಾಘಿಸಿದರು. ರಣಮಸ್ತನು ರಕ್ತ ಸುರಿಯುತ್ತಿರುವ ರಾಮರಾಜನ ಶಿರಸ್ಸನ್ನು ಕುದುರೆಯ ರಿಕೀಬಿಗೆ ಕಟ್ಟಿ, ತನ್ನ ಜನರೊಡನೆ ಕುಂಜವನದ ಕಡೆಗೆ ಸಾಗಿದನು. ರಣಮಸ್ತನಿಗೆ ತುಂಗಭದ್ರೆಯ ಕಾಲಹೊಳೆಯು ಚೆನ್ನಾಗಿ ಗೊತ್ತಿದ್ದರಿಂದ, ಆತನು ಆ ಕಾಲಹೊಳೆಯಲ್ಲಿ ಕುದುರೆಯನ್ನು ನೂಕಿದನು. ಆಗ ತುಂಗಭದ್ರೆಯ ಪವಿತ್ರೋದಕದಲ್ಲಿ ರಾಮರಾಜನ ರುಂಡದ ರಕ್ತವು ತೊಳೆಯುತ್ತಲಿತ್ತು, ಬರಬರುತ್ತ ಆ ಕೊಲೆಗಡುಕನು ಕುಂಜವನದ ಸನಿಹಕ್ಕೆ ಬಂದನು. ರಣಮಸ್ತನ ಕುದುರೆಯು ಯುದ್ಧದಲ್ಲಿ ಬಹಳವಾಗಿ ದಣಿದಿತ್ತು, ತುಂಗಭದ್ರೆಯನ್ನು ದಾಟುವಾಗಂತು ಅದು ತೀರ ಹಣ್ಣಾಗಿತ್ತು, ಆದರೆ ನೂರಜಹಾನಳ ಧ್ಯಾನಮಗ್ನನಾದ ರಣಮಸ್ತನು, ಕುದುರೆಯ ಕಡೆಗೆ ನೋಡದೆ ಅದನ್ನು ವೇಗದಿಂದ ಸಾಗಿಸಿಕೊಂಡು ಹೋಗಿ ಕುಂಜವನವನ್ನು ಪ್ರವೇಶಿಸಿದನು.

ಆಗ ಇಳಿಹೊತ್ತಿನ ಸಮಯವಾಗಿತ್ತು, ಸೂರ್ಯಾಸ್ತಕ್ಕೆ ಇನ್ನು ತಾಸು–ಒಂದೂವರೆ ತಾಸಿನ ಅವಕಾಶವಿರಬಹುದು. ಮೇಹರ್ಜಾನ–ನೂರಜಹಾನರಲ್ಲಿ ಮೊದಲಿನಂತೆ ಸಖ್ಯವು ಉತ್ಪನ್ನ ವಾಗಿರಲು, ಅವರು ಆಗ ಪುಷ್ಕರಣಿಯ ದಂಡೆಯ ಮೇಲೆ ಒಬ್ಬರೊಬ್ಬರಿಗೆ ಸಮಾಧಾನದ ಮಾತುಗಳನ್ನು ಹೇಳುತ್ತ ಕುಳಿತುಕೊಂಡಿದ್ದರು. ರಣಮಸ್ತನು ಬಾದಶಹನ ಮೇಲೆ ತಿರುಗಿಬಿದ್ದು ರಾಮರಾಜನನ್ನು ಕೂಡಿಕೊಂಡದ್ದಕ್ಕಾಗಿ ಇಬ್ಬರೂ ವ್ಯಸನಪಡುತ್ತಲಿದ್ದರು. ನೂರಜಹಾನಳಿಗೆ

ಮಾತ್ರ ರಣಮಸ್ತನು ಫಿತೂರ ಆದದ್ದು ಅಷ್ಟು ವಿಶ್ವಸನೀಯವಾಗಿ ತೋರುತ್ತಿದ್ದಿಲ್ಲ. ಆಕೆಯು ಮೇಹರ್ಜಾನಳನ್ನು ಕುರಿತು—''ಮಾಸಾಹೇಬ, ನವಾಬಸಾಹೇಬರು ರಾಮರಾಜನನ್ನು ಕೂಡಿಕೊಂಡಿದ್ದು ಅವನ ನಾಶಕ್ಕಾಗಿಯೇ ಎಂಬಂತೆ ನನಗೆ ತೋರುತ್ತದೆ. ಕೂಡಿದ ದರ್ಬಾರದಲ್ಲಿ ನನ್ನ ಮಾನಖಂಡನ ಮಾಡಿದ್ದಕ್ಕಾಗಿ ರಣಮಸ್ತಖಾನರು ಘೋರ ಪ್ರತಿಜ್ಞೆಯನ್ನು ಮಾಡಿರಲು, ಅವರು ರಾಮರಾಜನ ನೌಕರರಾಗಿ ಇರಬಹುದೆ? ಎಂದು ಕೇಳಿದಳು. ಆಕೆಯ ಈ ಪ್ರಶ್ನೆಯು ಮೇಹರ್ಜಾನಳಿಗೆ (ಮಾಸಾಹೇಬರಿಗೆ) ವಿಶ್ವಸನೀಯವಾಗಿ ತೋರಲಿಲ್ಲ. ಈ ವಿಷಯವನ್ನು ಕುರಿತು, ಪುಷ್ಕರಣಿಯ ತೀರದಲ್ಲಿ ಅವರ ಸಂಭಾಷಣಗಳು ನಡೆದಿದ್ದವು. ಇತ್ತ ರಣಮಸ್ತನು ಕುಂಜವನವನ್ನು ಪ್ರವೇಶಿಸಿ ನೆಟ್ಟಗೆ ಬಂಗಲೆಗೆ ಬರಲು, ಅಲ್ಲಿ ಮಾರ್ಜೀನೆಯು ಆತನಿಗೆ ಭೆಟ್ಟಿಯಾದಳು. ಆಗ ರಣಮಸ್ತನು ಆಕೆಯನ್ನು ಕುರಿತು–

ರಣಮಸ್ತ–ಲೈಲೀ, ನೀನೊಬ್ಬಳೇ ಇಲ್ಲಿ ಯಾಕೆ? ಮಾಸಾಹೇಬರು ಎಲ್ಲಿ ಇರುತ್ತಾರೆ? ನೂರಜಹಾನಳು–ನನ್ನ ಅರಗಿಳಿಯು–ಎಲ್ಲಿ ಇರುತ್ತದೆ? ಇಷ್ಟು ದಿನ ಕಪಟನಾಟಕವನ್ನು ಹೂಡಿ ಸಂಪಾದಿಸಿದ ಯಶಸ್ಸನ್ನು ಕಾಣಿಕೆಯಾಗಿ ಅವರ ಮುಂದೆ ಇಡಲಿಕ್ಕೆ ನಾನು ತಂದಿರುತ್ತೇನೆ ಹೋಗು, ಒಂದು ಬೆಳ್ಳಿಯ ತಬಕವನ್ನು ತಕ್ಕೊಂಡು ಬಾ, ಕಾಣಿಕೆಯ ವಸ್ತುವನ್ನು ಅದರಲ್ಲಿಟ್ಟು ಅವರ ಮುಂದೆ ಇಡೋಣ.

ಲೈಲಿ–(ಆಶ್ಚರ್ಯದಿಂದ ಮುಂಗಾಣದೆ) ಒಡೆಯರೇ, ನಿಮ್ಮ ಮಾತುಗಳ ಅರ್ಥವು ನನಗೆ ತಿಳಿಯಲೊಲ್ಲದು; ಆದರೆ ನೀವು ಹೀಗೆ ರಕ್ತದಿಂದ ಸ್ನಾನಮಾಡಿ ಎಲ್ಲಿಂದ ಬಂದಿರಿ? ಅದರ ವೃತ್ತಾಂತವಾದರೂ ಏನು?

ರಣಮಸ್ತ–ಆ ವೃತ್ತಾಂತವನ್ನು ಬೇಗನೆ ಕೇಳಿಕೊಳ್ಳಬೇಕೆಂಬ ಇಚ್ಛೆಯು ನಿನಗೆ ಇದ್ದರೆ, ನನ್ನ ಅರಗಿಳಿಯು ಎಲ್ಲಿ ಇರುತ್ತದೆಂಬುದನ್ನು ಹೇಳು. ನನ್ನನ್ನು ಅತ್ತ ಕಡೆಗೆ ಕರಕೊಂಡು ಹೋಗು. ಆ ನೂರಜಹಾನಳು ಎಲ್ಲಿರುತ್ತಾಳೆ? ಮಾಸಾಹೇಬರು ಎಲ್ಲಿರುತ್ತಾರೆ?

ಲೈಲಿ–ಅವರಿಬ್ಬರೂ ಅತ್ತ ಆ ಪುಷ್ಕರಣಿಯ ತೀರದಲ್ಲಿ ಹೋಗಿ ಕುಳಿತುಕೊಂಡಿರುತ್ತಾರೆ.

ರಣಮಸ್ತ–ಹೀಗೋ! ಅವರಿಬ್ಬರೂ ಒತ್ತಟ್ಟಿಗೇ ಇರುವರೇನು? ಹಾಗಾದರೆ ಬಹಳ ನೆಟ್ಟಗಾಯಿತು. ನಾನು ಅತ್ತಕಡೆಗೇ ಹೋಗುತ್ತೇನೆ.

ಹೀಗೆಂದು ರಣಮಸ್ತನು ಕುದುರೆಯಿಂದ ಕೆಳಗೆ ದುಮುಕಿ, ರಾಮರಾಜನ ರುಂಡವನ್ನು ತನ್ನ ಕರವಸ್ತ್ರದಲ್ಲಿ ಸುತ್ತಿ ಹಿಡಿದುಕೊಂಡು, ನೆಟ್ಟಗೆ ಪುಷ್ಕರಣಿಯ ತೀರಕ್ಕೆ ಹೋದನು. ಅಲ್ಲಿ ಅವರಿಬ್ಬರು ಮೇಲೆ ಹೇಳಿದಂತೆ ರಣಮಸ್ತನ ಫಿತೂರಿಯನ್ನು ಕುರಿತು ಮಾತನಾಡುತ್ತ ಕುಳಿತುಕೊಂಡಿದ್ದರು. ಮೇಹರ್ಜಾನಳು ನೂರಜಹಾನಳಿಗೆ–ತಂಗೀ, ನಿನ್ನ ಮಾತು ನನಗೆ ನಂಬಿಗೆಯಾಗಿ ತೋರುವದಿಲ್ಲ. ಒಂದು ಪಕ್ಷದಲ್ಲಿ ರಣಮಸ್ತನು ರಾಮರಾಜನ ಮೇಲೆ ತಿರುಗಿಬಿದ್ದರೂ ಆತನು ರಾಮರಾಜನ ಶಿರಸ್ಸನ್ನು ತರುವ ಬಗೆ ಹ್ಯಾಗೆ? ಎಂದು ಪ್ರಶ್ನೆ ಮಾಡುತ್ತಿರಲು ಅದಕ್ಕೆ ನೂರಜಹಾನಳು ಉತ್ತರಕೊಡುವ ಮೊದಲೇ ರಣಮಸ್ತನು ರಾಮರಾಜನ ಶಿರಸ್ಸನ್ನು ಅವರಿಬ್ಬರು ನಡುವೆ ದೊಪ್ಪನೆ ಒಗೆದ ''ಇದೇ ಆ ರಾಮರಾಜನ

ಶಿರಸ್ಸು; ನನ್ನ ಪ್ರತಿಜ್ಞೆಯನ್ನು ಪೂರ್ಣ ಮಾಡಿದ ನಿಶಾನೆಯಿದು; ಇದನ್ನು ನಿಮ್ಮಿಬ್ಬರಿಗೂ ಕಾಣಿಯಾಗಿ ಅರ್ಪಿಸಿರುತ್ತೇನೆ! ಅರಗಿಳಿಯೇ, ಯಾವನು ನೆರೆದ ದರ್ಬಾರದಲ್ಲಿ ನಿನ್ನಮಾನ ಖಂಡನ ಮಾಡಿದ್ದನೋ, ಅವನ ತಲೆಯಿದು ನೋಡಿ! ಇದನ್ನು ಕೈ ಮುಟ್ಟಿ ನಾನು ಕೊಯ್ದು ತಂದಿರುತ್ತೇನೆ'' ಎಂದು ನುಡಿಯುತ್ತಿರಲು, ಮೇಹರ್ಜಾನಳು ಆ ರುಂಡದ ಗುರುತ ಹಿಡಿದು, ಅತ್ಯಂತ ದುಃಖದಿಂದ ತಟ್ಟನೆ ರಣಮಸ್ತನಿಗೆ–

ಮೇಹರ್ಜಾನ–ಮಗುವೇ, ನೀನು–ನೀನು ಈ ಶಿರಸ್ಸನ್ನು ಕೈ ಮುಟ್ಟಿ ತುಂಡರಿಸಿದೆಯಾ?

ರಣಮಸ್ತ–ಅಹುದಹುದು. ಮಾಸಾಹೇಬ, ಯಾವನ ದ್ವೇಷ ಮಾಡುವಂತೆ ನೀವು ಚಿಕ್ಕಂದಿನಿಂದಲೆ ನನಗೆ ಕಲಿಸಿದಿರೋ, ಆ ದುಷ್ಟ ರಾಮರಾಜನ ಶಿರಸ್ಸನ್ನು ನಾನು ಕೈಮುಟ್ಟಿ ತುಂಡರಿಸಿದೆನು. ಮೇಹರ್ಜಾನ–ತಮ್ಮಾ ಮಗುವೇ, ಅಲ್ಲೋ, ಅವನು ನಿಮ್ಮ ತಂದೆಯು ! ಆದರೆ ಇನ್ನು ಪ್ರಯೋಜನವೇನು? ಈಗಾಗುವ ಪ್ರಯೋಜನವು ಇಷ್ಟೇ.........

ಈ ಮೇರೆಗೆ ನುಡಿಯುವ ಮೇಹರ್ಜಾನಳ ಮಾತು ಕೇಳಿ ರಣಮಸ್ತನ ಮನಸ್ಸಿಗೆ ಹ್ಯಾಗಾದರೂ ಆಗಿರಲಿ; ಆದರೆ ಮೇಹರ್ಜಾನಳ ಆ ಶಿರಸ್ಸನ್ನು ಬಲಗೈಯಿಂದ ಎತ್ತಿ ಹಿಡಿದು, ಅದನ್ನು ಒಮ್ಮೆ ದಿಟ್ಟಿಸಿ ನೋಡಿದಳು. ಇನ್ನು ಮೇಲೆ ಈಕೆಯು ಏನು ಮಾಡುವಳೆಂಬದರ ತರ್ಕ ಮಾಡುವದರೊಳಗೆ ಆ ಪತಿಘಾತಕಳಾದ ಕರ್ಕಶ ಸ್ವಭಾವದ ಮೇಹರ್ಜಾನಳು, ತನ್ನ ಪತಿಯ ರುಂಡದೊಡನೆ ಆ ಪುಷ್ಕರಣಿಯ ಗಂಭೀರಜಲದಲ್ಲಿ ಹಾರಿಕೊಂಡಳು. ಹೀಗೆ ಆ ದಂಪತಿ ಗಳಿಬ್ಬರ ಅಂತವಾಯಿತು.

## ಸರ್ವಸ್ವದ ನಾಶ

ಇದನ್ನು ನೋಡಿ ರಣಮಸ್ತಖಾನನು ದಂಗುಬಡಿದು ಏನೂ ತೋಚದೆ ಒಂದು ಕಲ್ಲಿನ ಗೊಂಬೆಯಂತೆ ಉಲುಕಾಡದೆ ಸುಮ್ಮನೆ ನಿಂತುಬಿಟ್ಟನು. ಇಷ್ಟು ಹೊತ್ತಿನತನಕ ಆತನ ಮುಖದಲ್ಲಿ ತೋರುತ್ತಿದ್ದ ಆನಂದ, ವಿಜಯ, ಕೃತಕೃತ್ಯತೆ ಮೊದಲಾದ ವಿಕಾರಗಳ ಲಕ್ಷಣಗಳ ಮೇಹರ್ಜಾನಳ ಕಟ್ಟಕಡೆಯ ಮಾತಿನಿಂದಲೂ, ಕೃತಿಯಿಂದಲೂ ಲಯಹೊಂದಿದವು. ಉಳಿದ ಪ್ರಸಂಗದಲ್ಲಿ ಆತನ ತಾಯಿಯು ಬರಿಯ ಪುಷ್ಕರಣಿಯಲ್ಲಿಯೇ ಏಕೆ, ಒಂದು ದೊಡ್ಡ ಕೊಳ್ಳದಲ್ಲಿ ಹಾರಿ ಕೊಂಡಿದ್ದರೂ, ಆಕೆಯನ್ನು ಕಡೆಗೆ ತೆಗೆಯುವದಕ್ಕಾಗಿ ರಣಮಸ್ತಖಾನನು ಆಕೆಯ ಹಿಂದೆಯೇ ಹಾರಿಕೊಳ್ಳುತ್ತಿದ್ದನು; ಆದರೆ ಈ ಪ್ರಸಂಗದಲ್ಲಿ ಆತನು ಕೇವಲ ನಿರ್ಜೀವನೂ, ನಿಶ್ಚಲನೂ, ನಿರ್ವಿಕಾರನೂ, ನಿರ್ವಿಚಾರಿಯೂ ಆಗಿದ್ದನು. ಆತನು ಕಲ್ಲುಗೊಂಬೆಯಂತೆ ಎಷ್ಟೋಂದು ಹೊತ್ತು ನಿಂತುಬಿಟ್ಟಿದ್ದನು! ಇತ್ತ ನೂರಜಹಾನಳ ಸ್ಥಿತಿಯೂ ಹಾಗೆಯೆ ಆಗಿತ್ತು ರಾಮರಾಜನು ರಣಮಸ್ತಖಾನನ ತಂದೆಯೆಂಬ ಕಲ್ಪನೆಯು ಆಕೆಯ ಮನಸ್ಸಿನಲ್ಲಿ ಎಂದೂ ಹೊಳೆದಿದ್ದಿಲ್ಲ, ಈ ವೀರನು ತನ್ನ ಮುಂದೆ ಮಾಡಿದ ಪ್ರತಿಜ್ಞೆಯನ್ನು ನೆರವೇರಿಸಿದ್ದರಿಂದ, ಈತನನ್ನು

ಮದುವೆಯಾಗಬೇಕೆಂದು ಆಕೆಯು ನಿಶ್ಚಯಿಸಿದ್ದಳು; ಆದರೆ ರಣಮಸ್ತನು ಒಬ್ಬ ಹಿಂದೂರಾಜನ ವ್ಯಭಿಚಾರದಿಂದ ಹುಟ್ಟಿ, ಪಿತೃವಧದಂಥ ನೀಚಕಾರ್ಯ ಮಾಡಿದವನೆಂಬ ವಿಚಾರವು ಮನಸ್ಸಿನಲ್ಲಿ ಹೊಳೆದ ಕೂಡಲೆ, ಆಕೆಯು ರಣಮಸ್ತನ ನೆರಳಿಗೆ ನಿಲ್ಲಲಿಕ್ಕೆ ಸಹ ಹೇಸಿಕೊಳ್ಳ ಹತ್ತಿದಳು. ಆಕೆಯು ಯಾವ ಉಪಾಯದಿಂದ ರಣಮಸ್ತನ ಬಳಿಯಿಂದ ತಪ್ಪಿಸಿಕೊಂಡು ಹೋಗಬೇಕೆಂದು ಯೋಚಿಸುತ್ತಿದ್ದಳು. ಅಷ್ಟರಲ್ಲಿ ರಣಮಸ್ತನು ಎಚ್ಚತ್ತು ನೂರಜಹಾನಳ ಕಡೆಗೆ ನೋಡಿ–ನೂರ ಜಹಾನ, ನಿನ್ನ ಸಲುವಾಗಿ ನಾನು ಇಂಥ ಪರಾಕ್ರಮವನ್ನೂ, ಸಾಹಸವನ್ನೂ ಮಾಡಿದೆನು; ನಿನ್ನ ಮುಂದೆ ಮಾಡಿದ ಪ್ರತಿಜ್ಞೆಯನ್ನು ಪೂರ್ಣಮಾಡಿರುತ್ತೇನೆ, ಇನ್ನು ವಿಲಂಬವೇಕೆ? ನಮ್ಮಿಬ್ಬರ ಲಗ್ನವಾಗಲಿ, ಎಂದು ನುಡಿದು ನೂರಜಹಾನಳ ಕೈಹಿಡಿಯ ಹೋಗಲು, ಆಕೆಯು ತಟ್ಟನೆ ಹಿಂದಕ್ಕೆ ಸರಿದು, ಗಾಬರಿಯಾಗಿ ರಣಮಸ್ತನನ್ನು ಕುರಿತು— ಇದೇನು ನಿಮ್ಮ ತಂದೆಯ ಶಿರಚ್ಛೇದ ಮಾಡಿದ ಕೈಯಿಂದಲೇ ನೀವು ನನ್ನ ಕೈ ಹಿಡಿಯುವಿರೇನು? ನಿಮ್ಮ ಪ್ರೇಮಲಸ್ವಭಾವದ ಮಾತೃಶ್ರೀಯು ತನ್ನ ಪತಿಯ ಶಿರಸ್ಸಿನೊಡನೆ ಇದೇ ಈಗ ಜಲಸಮಾಧಿಯನ್ನು ಹೊಂದಿರಲು, ಅದನ್ನೆಲ್ಲ ಮರೆತು, ಇದೇ ಕ್ಷಣದಲ್ಲಿ ಇಂಥ ಮಾತುಗಳನ್ನು ಆಡುವಿರಾ? ನೋಡಿರಿ, ನಿಮ್ಮ ವೃದ್ಧ ದಾಸಿಯಾದ ಲೈಲಿಯು ಇತ್ತ ಕಡೆಗೆ ಬರುತ್ತಾಳೆ, ಅನ್ನಲು ರಣಮಸ್ತನು ಮಾರ್ಜೀನೆಯ ಕಡೆಗೆ ನೋಡಿ, ಆಕೆಯ ಕೈಯನ್ನು ಹಿಡಿದು ಆಕೆಯನ್ನು ದರದರ ಎಳೆಯುತ್ತ ತಂದು–ಲೈಲೀ, ಹಿಂದಕ್ಕೆ ನೀನು ನನ್ನ ಜನ್ಮವೃತ್ತಾಂತವನ್ನು ಗೂಢವಿಟ್ಟು ಹೇಳಿದೆಯಲ್ಲ, ಈಗ ಅದನ್ನು ಸ್ಪಷ್ಟವಾಗಿ ಹೇಳು, ಇಲ್ಲದಿದ್ದರೆ ಮಾಸಾಹೇಬರನ್ನು ಹಿಂಬಾಲಿಸಿ ಹೋಗುವಂತೆ ನಿನ್ನ ಕುತ್ತಿಗೆ ಹಿಚಕಿ ಈ ಪುಷ್ಕರಣಿಯಲ್ಲಿ ಹಾಕುವೆನು ಎಂದನು.

ಮಾಸಾಹೇಬರು ಪುಷ್ಕರಣಿಯಲ್ಲಿ ಹಾರಿಕೊಂಡದ್ದನ್ನು ಮಾರ್ಜೀನೆಯು ದೂರದಿಂದ ನೋಡಿದ್ದಳಾದ್ದರಿಂದ, ಆಕೆಗೆ ತನ್ನ ಜೀವವು ಬೇಡಾಗಿತ್ತು. ರಣಮಸ್ತನು ತನ್ನನ್ನು ನೋಡಿ ಕೈಹಿಡಿಯದಿದ್ದರೆ ಆಕೆಯು ಇಷ್ಟು ಹೊತ್ತಿಗೆ ಪುಷ್ಕರಣಿಯಲ್ಲಿ ಹಾರಿಕೊಂಡುಬಿಡುತ್ತಿದ್ದಳು. ನಿರಿಚ್ಛಳಾದ ಆಕೆಯು ಈಗ ರಣಮಸ್ತನ ಆಗ್ರಹದ ಪ್ರಶ್ನಕ್ಕೆ ಉತ್ತರವನ್ನು ಹೇಳಿಬಿಡಬೇಕೆಂದು ನಿಶ್ಚಯಿಸಿ, ರಣಮಸ್ತನ ಜನ್ಮವೃತ್ತಾಂತವನ್ನು ಸಾದ್ಯಂತವಾಗಿ ಅವನಿಗೆ ಹೇಳಿದಳು. ಇದನ್ನು ಕೇಳುತ್ತಿರುವಾಗ ರಣಮಸ್ತನ, ಹಾಗು ನೂರಜಹಾನಳ ಚಿತ್ತವೃತ್ತಿಗಳು ಹ್ಯಾಗಾಗಿರ ಬಹುದೆಂಬದನ್ನು ವರ್ಣಿಸುವದು ಸಾಧ್ಯವಿಲ್ಲ. ಪ್ರತ್ಯಕ್ಷ ತಂದೆಯೂ ನನ್ನನ್ನು ಅಕೃತ್ರಿಮ ರೀತಿಯಿಂದ ಪ್ರೀತಿಸುತ್ತಿರಲು, ನಾನು ಈ ಕೈಯಿಂದ ಆತನ ಶಿರಚ್ಛೇದ ಮಾಡಿ ಮಹಾಪಾತಕಕ್ಕೆ ಗುರಿಯಾದೆನಲ್ಲ! ಎಂದು ವಿಚಾರ ಮಾಡುತ್ತ ರಣಮಸ್ತನು ಸುಮ್ಮನೆ ಕುಳಿತುಬಿಟ್ಟನು. ಇತ್ತ ನೂರ ಜಹಾನಳು ರಣಮಸ್ತಖಾನನ ಕುಲವೃತ್ತಾಂತವನ್ನು ಕೇಳಿ, ಆತನನ್ನು ಬಹಳವಾಗಿ ತಿರಸ್ಕರಿಸಹತ್ತಿ ತಾನು ಇನ್ನು ಈತನ ಬಳಿಯಲ್ಲಿಂದ ಹ್ಯಾಗೆ ಪಾರಾಗಿಹೋಗಬೇಕೆಂದು ಯೋಚಿಸುತ್ತ ಸುಮ್ಮನೆ ಕುಳಿತುಕೊಂಡಳು. ಹೀಗೆ ಇವರಿಬ್ಬರು ವಿಚಾರಮಗ್ನರಾಗಿರಲು ಮಾರ್ಜೀನೆಯು ಈ ಸಂಧಿಯನ್ನು ಸಾಧಿಸಿ ಪುಷ್ಕರಣಿಯಲ್ಲಿ ಹಾರಿಕೊಂಡಳು. ಆಕೆಯು ಹಾರಿಕೊಂಡ ಸಪ್ಪಳಕ್ಕೆ ರಣಮಸ್ತನು ಎಚ್ಚತ್ತು ನೂರಜಹಾನಳ ಕೈಯನ್ನು ಕಸುವಿನಿಂದ ಹಿಡಿದನು. ಈ ಕಾಲದಲ್ಲಿ ರಣಮಸ್ತನು ಉನ್ಮತ್ತನಾಗಿದ್ದನು. ಆತನ ಮೈಮೇಲೆ ಪೂರಾ ಎಚ್ಚರವು ಇದ್ದಿಲ್ಲ. ಆತನು

ನೂರಜಹಾನಳನ್ನು ಕುರಿತು–ನಿನ್ನ ಸಲುವಾಗಿ ನಾನು ಇದನ್ನೆಲ್ಲ ಮಾಡಿದೆನು. ಇನ್ನು ಈ ಮಂಗಲಭೂಮಿಯಲ್ಲಿ ನಮ್ಮಿಬ್ಬರ ಲಗ್ನವಾಗಲಿ, ನೋಡು, ನಮ್ಮ ಲಗ್ನದ ಸಮಾರಂಭವನ್ನು ನೋಡಿ ಸಂತೋಷಪಟ್ಟು ನಮ್ಮನ್ನು ಆಶೀರ್ವದಿಸುವದಕ್ಕಾಗಿ ನನ್ನ ತಾಯಿ–ತಂದೆಗಳಿಬ್ಬರು ಪುಷ್ಕರಣಿಯ ಮೇಲೆ ಹ್ಯಾಗೆ ಬಂದು ಕುಳಿತುಕೊಂಡಿದ್ದಾರೆ! ಎಂದು ನುಡಿದವನೇ ಅರ್ಧ ಸತ್ತಂತೆ ಆಗಿದ್ದ ನೂರಜಹಾನಳನ್ನು ಎತ್ತಿಕೊಂಡು ಆ ರಾಕ್ಷಸ ಸದೃಶನಾದ ರಣಮಸ್ತನು ಪುಷ್ಕರಣಿಯಲ್ಲಿ ಹಾರಿಕೊಂಡನು. ಅಂದಿನ ಕಗ್ಗತ್ತಲೆಯ ರಾತ್ರಿಯಲ್ಲಿ ಆತನು ಹಾರಿಕೊಂಡ ಶಬ್ದವು ಪುಷ್ಕರಣಿಯಲ್ಲಿ ಪ್ರತಿಧ್ವನಿತವಾಯಿತು.

ಇತ್ತ ಹಿಂದೂ ದಂಡಾಳುಗಳು ರಾಮರಾಜನ ಶಿರಚ್ಛೇದವಾದದ್ದನ್ನು ಕೇಳಿ ದಿಕ್ಕುದಿಕ್ಕಿಗೆ ಓಡಹತ್ತಿದರು. ಆಗ ಮುಸಲ್ಮಾನರು ಮಾಡಿದ ಕೊಲೆಯನ್ನು ವರ್ಣಿಸಲಸಾಧ್ಯವು. ಇಷ್ಟು ಭಯಂಕರ ರೀತಿಯಿಂದ ಹಿಂದೂ ಸೈನ್ಯದ ನಾಶವಾಡುವ ಪ್ರಸಂಗ ಬಂದೀತೆಂದು ಮುಸಲ್ಮಾನರು ತಿಳಿದಿದ್ದಿಲ್ಲ. ಇಂಥ ಅನರ್ಥಕಾರಕವಾದ ಅಪಜಯಕ್ಕೆ ತಾವು ಗುರಿಯಾದೇವೆಂದು ಹಿಂದೂ ಸೈನಿಕರೂ ತಿಳಿದಿದ್ದಿಲ್ಲ. ಮುಸಲ್ಮಾನರ ಪರಾಭವವಾಗಿ ಬೇಗನೆ ಅವರು ತಮ್ಮ ಮಾಂಡಲೀಕರಾಗಿ ವಿಜಯನಗರದ ಸಾಮ್ರಾಜ್ಯವು ಕೃಷ್ಣೆಯ ಆಚೆಗಷ್ಟೇ ಅಲ್ಲ, ಉತ್ತರ ಹಿಂದೂಸ್ತಾನದಲ್ಲಿಯೂ ಪಸರಿಸಿ, ಮೊಗಲರು ಸಹ ತಮ್ಮ ಮಾಂಡಲಿಕರಾಗುವರೆಂಬ ಸುಖಕರ ಕಲ್ಪನೆಯಿಂದ ವಿಜಯಗರದ ಜನರ ಮಸ್ತಕಗಳು ತುಂಬಿಹೋಗಿದ್ದವು. ಆದರೆ ಒಂದು ದುರ್ದೈವವು ಆ ಕಲ್ಪನೆಗಳನ್ನೆಲ್ಲ ಮಣ್ಣುಗೂಡಿಸಿ ಸರ್ವಸ್ವದ ನಾಶವನ್ನುಂಟುಮಾಡಿತು. ಯುದ್ಧ ಭೂಮಿಯಿಂದ ಹತಾಶರಾಗಿ ರಾಜಧಾನಿಗೆ ಬಂದ ಸೈನಿಕರು ದೀನವಾಣಿಯಿಂದ ತಮ್ಮ ದುಃಸ್ಥಿತಿಯನ್ನು ವರ್ಣಿಸಲು, ನಾಲ್ಕೂಕಡೆಯಲ್ಲಿ ಹಾಹಾಕಾರವು ಉತ್ಪನ್ನವಾಯಿತು. ಅರಮನೆಯಲ್ಲಿದ್ದ ರಾಜನ ವಂಶಿಕರು ತಮ್ಮ ಕೈಗೆ ಸಿಕ್ಕ ಸಂಪತ್ತನ್ನು ತಕ್ಕೊಂಡು ರಾಜಧಾನಿಯನ್ನು ಬಿಡತೊಡಗಿದರು. ಇದನ್ನು ನೋಡಿ ನಾಗರಿಕರು ಹೌಹಾರಿದರು. ಅದರಲ್ಲಿ ರಣಾಂಗಣದಿಂದ ಪಾರಾಗಿ ಬಂದ ತಿರುಮಲರಾಯನು, ಅರಮನೆಗೆ ಬಂದಕೂಡಲೆ, ಮೊದಲು ಸೆರೆಮನೆಯಲ್ಲಿಟ್ಟಿದ್ದ ಸದಾಶಿವರಾಯನನ್ನು ಕರಕೊಂಡು ಅಗಣಿತ ಸಂಪತ್ತಿಯೊಡನೆ ರಾಜಧಾನಿಯಿಂದ ಹೊರಟುಹೋದನು. ಪ್ರತ್ಯಕ್ಷ ಸೇನಾಪತಿಯೇ ಹೀಗೆ ಓಡಿಹೋದ ಬಳಿಕ ಉಳಿದವರು ಏನು ಮಾಡಬೇಕು? ಯಾವನ ಕೈಗೆ ಏನು ಸಿಕ್ಕಿತೋ ಅದನ್ನು ತಕ್ಕೊಂಡು ಜನರು ರಾಜಧಾನಿಗೆ ಶರಣುಹೊಡೆದು ನಡೆಯಹತ್ತಿದರು. ಪಟ್ಟಣ ದೊಳಗಿನ ಶೆಟ್ಟರು–ಸಾಹುಕಾರರು ಮಾತ್ರ ಎಲ್ಲಿಗೂ ಹೋಗಲಿಕ್ಕೆ ಬಾರದಾಯಿತು. ಆನೆ–ಕುದುರೆ–ಒಂಟೆ–ಎತ್ತು– ಕತ್ತೆ ಮುಂತಾದ ವಾಹನಗಳು ಯುದ್ಧಕ್ಕೆ ಹೋದದ್ದರಿಂದ, ಅವರಿಗೆ ವಾಹನಗಳೇ ಸಿಗದಾದವು. ಅವರು ತಮ್ಮ ಸಂಪತ್ತನ್ನೆಲ್ಲ ಹೂಳಿಕೊಂಡು ಕುಳಿತರು. ಪಟ್ಟಣದೊಳಗಿನ ಸಶಸ್ತ್ರರಾದ ತರುಣರು ಆತ್ಮ ರಕ್ಷಣವನ್ನು ಮಾಡಿಕೊಳ್ಳಲು ಸಜ್ಜಾಗಿ ನಿಂತರು. ಈ ಅರಾಜಕ ಸ್ಥಿತಿಯಲ್ಲಿ ಲಮಾಣಿಗಳು, ಕೊರಚರು ಮುಂತಾದ ಕಾಡು ಜನರು ಹಗಲುಹಾಡೆ ಸಾವುಕಾರರ ಮನೆಗೆ ದಲವಡೆಗಳನ್ನಿಕ್ಕ ಹತ್ತಿದರು. ಹೀಗೆ ಒಂದು ದಿವಸದಲ್ಲಿ ವಿಜಯಗರದ ಅಂತಃಸ್ಥಿತಿಯು ಕೆಟ್ಟುಹೋಗಲು, ಮುಂದೆ

ಮೂರು ದಿವಸ ಒಂದೇ ಸವನೆ ಅಂತಃಶತ್ರುಗಳ ಸುಲಿಗೆಯ ಕೆಲಸವು ನಡೆಯಿತು. ಮುಂದೆ ನಾಲ್ಕನೆಯ ದಿವಸ ಶತ್ರುಗಳು ಪಟ್ಟಣವನ್ನು ಪ್ರವೇಶಿಸಿ ಘೋರ ಕೃತ್ಯಗಳನ್ನು ನಡಿಸಿದರು. ಬರಿಯ ಪಟ್ಟಣವನ್ನು ಸುಲಿದು ಸಂಪತ್ತು ಒಯ್ಯುವದರಿಂದಿಷ್ಟೇ ಅವರು ತೃಪ್ತರಾಗುವಂತೆ ಇದ್ದಿಲ್ಲ. ವಿದ್ಯಾನಗರವನ್ನು ಸಮೂಲ ನಾಶ ಮಾಡಲು, ಅವರು ಪ್ರತಿಜ್ಞೆ ಮಾಡಿರುವಂತೆ ತೋರಿತು. ಅವರು ಮೊದಲು ನಿರ್ದಯತನದಿಂದ ಕೈಗೆ ಸಿಕ್ಕವರನ್ನು ಕೊಂದು ಹಾಕಿದರು. ತೋಪುಗಳನ್ನು ಹೂಡಿ ಅರಮನೆಯನ್ನು ನಾಶಮಾಡಿದರು, ದೇವಸ್ಥಾನಗಳನ್ನು ಕೆಡವಿದರು. ನೂರಾರು ಮೂರ್ತಿಗಳನ್ನು ಒಡೆದರು. ನೃಸಿಂಹನ ಪ್ರಚಂಡ ಮೂರ್ತಿಯನ್ನು ಛಿನ್ನ ವಿಚ್ಛಿನ್ನವಾಗಿ ಮಾಡಿದರು. ದೊಡ ದೊಡ್ಡ ಸಭಾಮಂಟಪಗಳನ್ನು ನೆಲಸಮ ಮಾಡಿದರು. ಕೋಟಿ ಗಟ್ಟಲೆ ವೆಚ್ಚಮಾಡಿ ರಚಿಸಿದ ಕಲಾಕೌಶಲ್ಯಗಳ ನಾಶಮಾಡಲಿಕ್ಕೆ ಮುಸಲ್ಮಾನರಿಗೆ ಎಂಟು ದಿನಗಳು ಸಹ ಹತ್ತಲಿಲ್ಲ. ವಿಜಯನಗರವನ್ನು ರಕ್ಷಿಸುವವರು ಯಾರೂ ಉಳಿಯಲಿಲ್ಲ. ಈ ಐಶ್ವರ್ಯಯುಕ್ತ ನಗರದಲ್ಲಿ ಸಂಪತ್ತು ಎಷ್ಟು ತುಂಬಿರುವದೆಂಬದರ ಕಲ್ಪನೆಯು, ಈ ಸುಲಿಗೆಯ ಪ್ರಸಂಗವು ಒದಗುವವರೆಗೂ ಯಾರಿಗೂ ಆಗಿದ್ದಿಲ್ಲೆಂದು ಹೇಳಬಹುದು. ಕೋಟೋ ಎಂಬ ಹೆಸರಿನ ಇತಿಹಾಸಕಾರನು ಹೇಳುವದೇನೆಂದರೆ— "ಈ ಸುಲಿಗೆಯಲ್ಲಿ ಅಗಣಿತ ಸಂಪತ್ತು ಸುಲಿಯಲ್ಪಟ್ಟಿತು. ಅರದಲ್ಲಿ ಸಿಕ್ಕ ಒಂದು ರತ್ನವು ಕೋಳಿಯ ತತ್ತಿಯಷ್ಟು ಇತ್ತು. ಈ ರತ್ನವನ್ನು ರಾಮರಾಜನು ತನ್ನ ಕುದುರೆಯ ಶಿರೋಭೂಷಣದಲ್ಲಿ ಕೂಡ್ರಿಸಿದ್ದನು. ಈ ರತ್ನವು ಮುಂದೆ ಆದಿಲಶಹನ ವಶವಾಯಿತು" ಕುದುರೆಯ ಶಿರೋಭೂಷಣದಲ್ಲಿಯೇ ಇಷ್ಟು ದೊಡ್ಡ ರತ್ನವಿದ್ದಬಳಿಕ ರಾಜಗೃಹದಲ್ಲಿಯೂ, ಧನಿಕರ ಮನೆಗಳಲ್ಲಿಯೂ ಎಷ್ಟು ಸಂಪತ್ತು ಕೂಡಿಬಿದ್ದಿತ್ತೆಂಬದನ್ನು ನಮ್ಮಂಥ ದರಿದ್ರರು ಕಲ್ಪಿಸುವದು ಅಸಾಧ್ಯವೇ ಸರಿ! ಅರಸರೇನು, ದರಿದ್ರರೇನು, ಕರ್ಮಫಲವನ್ನು ಭೋಗಿಸಿಯೇ ತೀರಬೇಕು!

**ಸಂಪೂರ್ಣ**

# ಪ್ರಸ್ತಾವನೆ

ಚಂದ್ರಿಕೆಯ ದ್ವಾರದಿಂದ ಈ ಮೊದಲೇ ತಿಳಿಸಿರುವಂತೆ, ಈ ಐತಿಹಾಸಿಕ ಕಾದಂಬರಿಯು, ಶ್ರೀ ಗುರುಕೃಪೆಯಿಂದ ಒಮ್ಮೆ ಮುಗಿಯಿತೆಂದು ಬರೆಯಲಿಕ್ಕೆ ಬಹಳ ಸಂತೋಷವಾಗುತ್ತದೆ. ಕನ್ನಡದಲ್ಲಿ ಐತಿಹಾಸಿಕ ಸಾಧನಗಳು ಕಡಿಮೆ. ಲೇಖಕನಿಗೆ ಇಂಥ ಹೊಸ ಕಾದಂಬರಿಗಳನ್ನು ಬರೆದು ಅನುಭವವಿಲ್ಲ, ಮೇಲಾಗಿ ಮನೋರಂಜನಕ್ಕೆ ವಿಶೇಷವಾಗಿ ಮೆಚ್ಚಿದ್ದ ಕನ್ನಡ ಸಮಾಜಕ್ಕೆ ಕಾಲ್ಪನಿಕ ಕಾದಂಬರಿಗಳಷ್ಟು ಐತಿಹಾಸಿಕ ಕಾದಂಬರಿಗಳು ಸೇರವು. ಈ ಕೊರತೆಗಳನ್ನು ಮನಸ್ಸಿನಲ್ಲಿ ತಂದು, ಇವುಗಳಿಂದ ವಿಶೇಷ ಬಾಧೆಯು ತಟ್ಟಬಾರದೆಂದು ಪಡಿಕಟ್ಟಿಗಾಗಿ ಈ ಕಾದಂಬರಿಯನ್ನು ಮೊದಲು ಬರೆದು ನೋಡಿರುತ್ತದೆ. ಇದರಲ್ಲಿ ಕುಮುದಿನಿಯು ಮುಖ್ಯ ನಾಯಿಕೆಯಾದ್ದರಿಂದ ಇದಕ್ಕೆ ''ಕುಮುದಿನಿ''ಯೆಂಬ ಹೆಸರನ್ನೂ, ವಿಜಯಗರದ ರಾಯರು ತಮ್ಮ ಆನೆಯಂಥ ಸಾಮ್ರಾಜ್ಯವನ್ನು ಕಳಕೊಂಡು, ಬಾಲದಂಥ ಚಂದ್ರಗಿರಿಯ ಸಂಸ್ಥಾನಕ್ಕಾಗಿ ತಮ್ಮೊಳಗೆ ಬಡಿದಾಡಿದ್ದನ್ನು ವರ್ಣಿಸಿರುವುದರಿಂದ, ಇದಕ್ಕೆ ''ಬಾಲಕ್ಕೆ ಬಡಿದಾಟ''ವೆಂಬ ಮತ್ತೊಂದು ಹೆಸರನ್ನೂ ಇಟ್ಟಿರುತ್ತದೆ.

ಹಾಸ್ಯರಸವೊಂದನ್ನು ಬಿಟ್ಟು ಉಳಿದ ರಸಗಳೆಲ್ಲ ಬಹುತರ ಈ ಕಾದಂಬರಿಯಲ್ಲಿ ಇರುತ್ತವೆಂದು ಹೇಳಬಹುದು; ಅದರಿಂದ, ಲೋಕವು ಭಿನ್ನ ರುಚಿಯುಳ್ಳದ್ದೆಂಬ ಸಿದ್ಧಾಂತದಂತೆ, ಕೆಲವರಿಗೆ ಇದರೊಳಗಿನ ಕೆಲವು ರಸಗಳು ಸೇರಲಿಕ್ಕಿಲ್ಲ; ಆದರೂ ಬೇಕಾದದ್ದರ ಆಶೆಯಿಂದ ಬೇಡಾದದ್ದನ್ನು ಸಹಿಸಿಕೊಳ್ಳುವ ವಾಡಿಕೆಯ ನಡತೆಯಂತೆ, ವಾಚಕರು ಈ ಕಾದಂಬರಿಯನ್ನು ಒಮ್ಮೆಯಾದರೂ ಪೂರ್ಣವಾಗಿ ಓದಬೇಕು. ಕಾದಂಬರಿಯು ಒಬ್ಬ ಸುಂದರ ಸ್ತ್ರೀಯಂತೆ ಇರುವುದರಿಂದ, ಅದರೊಳಗಿನ ಅಲ್ಲಿಯೊಂದು ಪಾನು ಇಲ್ಲಿಯೊಂದು ಪಾನು ಓದಿನೋಡಿದರೆ, ಒಮ್ಮೆ ಸುಂದರಿಯ ಕಾಲ ಉಗುರನ್ನಷ್ಟು, ಮತ್ತೊಮ್ಮೆ ಸುಂದರಿಯ ಕೈಬೆರಳನ್ನಷ್ಟು, ಇನ್ನೊಮ್ಮೆ ಆಕೆಯ ಕಿವಿಯನ್ನಷ್ಟು ನೋಡಿದಂತಾಗಿ ನಿಜವಾದ ಸೌಂದರ್ಯ–ಸ್ವಾರಸ್ಯಗಳ ಅನುಭವವೇ ವಾಚಕರಿಗೆ ಬರಲಿಕ್ಕಿಲ್ಲ! ಪೂರ್ಣ ಕಾದಂಬರಿಯನ್ನು ಓದಲಿಕ್ಕೆ ಅನುಕೂಲವಿಲ್ಲದವರು, ಈ ಕಾದಂಬರಿಯ ಮುಖದಂತೆ ಇದ್ದ ಕಡೆಯ ಐದು ಪ್ರಕರಣಗಳನ್ನಾದರೂ ದಯವಿಟ್ಟು ಅವಲೋಕಿಸಬೇಕು.

''ಕಲಿಯುಗದಲ್ಲಿ ಕೂಡ ಗುಣರಹಿತ ವಸ್ತುವಿಲ್ಲೆಂ''ಬ ವೆಂಕಟಾಧ್ವರಿ ಕವಿಯ ಸಿದ್ಧಾಂತದಂತೆ, ಈ ಕಾದಂಬರಿಯು ಕೇವಲ ಗುಣರಹಿತವಾದದ್ದೆಂದು ಹೇಳಲಿಕ್ಕಾಗುವುದಿಲ್ಲ;

ಆದ್ದರಿಂದ ಇದರೊಳಗಿನ ಗುಣಕಣವನ್ನೇ ಪರ್ವತವೆಂದು ಭಾವಿಸಿ, ಕನ್ನಡಿಗರು ಅಭಿಮಾನಪಟ್ಟು, ಇದಕ್ಕೂ ಹೆಚ್ಚಿನ ಕನ್ನಡ ಐತಿಹಾಸಿಕ ಕಾದಂಬರಿಗಳು ಬೇಗನೆ ಬೈಲಿಗೆ ಬರುವಂತೆ ಪ್ರೋತ್ಸಾಹಿಸುವರೆಂದು ನಂಬಿದ್ದೇನೆ.

ನಮ್ಮ ಗುರುವರ್ಯರಾದ ರಾವಜಿರಾವ ಕರಂದೀಕರ, I. C. O. ಲೇಟ ಎಂ. ಇನಸ್ಪೆಕ್ಟರ ದ. ಭಾ. ಇವರ ಉತ್ತೇಜನಪರವಾದ ಸ್ಫೂರ್ತಿದಾಯಕ ಬೋಧದ ಯೋಗವು ಒದಗದಿದ್ದರೆ, ಈ ಕಾದಂಬರಿಯು ಈ ಸ್ಥಿತಿಯಲ್ಲಿ ಮುಗಿಯುತ್ತಿತ್ತೆಂದು ಹೇಳಲಿಕ್ಕಾಗುವುದಿಲ್ಲ. ಮಿದುಳಿನ ಕ್ಷೀಣತೆಯ ವಿಕಾರವುಳ್ಳ ನನ್ನನ್ನು, ಎರಡು ತಿಂಗಳು ಮನೆಯಲ್ಲಿಟ್ಟುಕೊಂಡು ನಮ್ಮ ಪೂಜ್ಯಗುರುಗಳು ಈ ಕಾದಂಬರಿಯನ್ನು ಬರೆಸಿರುತ್ತಾರೆ. ಅವರ ಮನೆಯಲ್ಲಿ ಬರೆದಿರುವ ಕಡೆಯ ಹತ್ತು ಪ್ರಕರಣಗಳನ್ನು ಮೊದಲಿನ ಆರು ಪ್ರಕರಣಗಳಿಗೆ ಹೊಂದಿಸಿ ನೋಡಿದರೆ, ನಮ್ಮ ಗುರುಗಳ ನಿಕಟಸಹವಾಸದ ಯೋಗ್ಯತೆಯು ವಾಚಕರಿಗೆ ಗೊತ್ತಾಗದೆ ಇರದು! ದೇಶಕಲ್ಯಾಣಕ್ಕಾಗಿ ಲಕ್ಷಾಂತರ ರೂಪಾಯಿಗಳನ್ನು ಕೃಷ್ಣಾರ್ಪಣಬುದ್ಧಿಯಿಂದ ಕೊಟ್ಟು, ಕರ್ನಾಟಕಕ್ಕೆ ಅಲಂಕಾರ ಪ್ರಾಯವಾಗಿರುವ ಈ ಧನವಂತರ ಉಪಕೃತೆಯನ್ನು ನನ್ನಂಥ ಕ್ಷುದ್ರನು ಏನೆಂದು ಸ್ಮರಿಸಲಿ! ಈ ಪುಣ್ಯಾತ್ಮರಿಗೂ, ಇವರ ಪುಣ್ಯಾರ್ಧಭಾಗಿಗಳಾದ ಶೀ. ಕುಂ. ಸೌ. ಮಾತೃಶ್ರೀ ರಾಧಾಬಾಯಿ ಸಾಹೇಬರವರಿಗೂ ಶ್ರೀ ಸದ್ಗುರುವು ದೀರ್ಘಾಯುವನ್ನೀಯಲೆಂದು ಪ್ರಾರ್ಥಿಸುವೆನು.

ಧಾರವಾಡ<br>
೨೪-೭-೧೯೧೩

ವಿಧೇಯ,<br>
ಗಳಗನಾಥ

# ಮಂಗಲಾಚರಣ

ಶ್ರೀ ಪಂಪಾಕ್ಷೇತ್ರವು ಅಮೃತ ಪ್ರವಾಹದಂತೆ ಮಂದಗಮನದಿಂದ ಸಾಗಿರುವ ತುಂಗಭದ್ರೆಯ ನಿರ್ಮಲೋದಕದ ಕಾವಲಿಗಳು ಅಲ್ಲಲ್ಲಿ ಸಳಸಳ ಹರಿಯುತ್ತಲಿವೆ. ನೋಡಿದತ್ತೆಲ್ಲ ಶಿಲಾಮಂಟಪಗಳು ಕರಿಬಂಡೆಗಳೊಡನೆ ಒಪ್ಪುತ್ತಲಿವೆ. ಮತಂಗ ಋಷ್ಯಮೂಕ ಮೊದಲಾದ ಪರ್ವತಗಳ ಶ್ರೇಣಿಗಳು ತಮ್ಮೊಳಗಿನ ದೊಡ್ಡ ದೊಡ್ಡ ಬಂಡೆಗಳ ರಾಶಿಗಳಿಂದ ರುಕ್ಷತೆಯನ್ನು ಪ್ರಕಟಿಸುತ್ತಲಿವೆ. ಜನರ ಸುಳಿದಾಟವಿಲ್ಲದ್ದರಿಂದ ಭಣಗುಟ್ಟುವ ಭವ್ಯವಾದ ಹಾಳುದೇಗುಲಗಳು ಮಾರ್ಗದ ಎಡಬಲಗಳಲ್ಲಿ ನಿಂತು ವೇದಧರ್ಮಿಗಳ ಹೃದಯಕ್ಕೆ ಬರೆಕೊಡುತ್ತಲಿವೆ. ವಿಜಯನಗರದ ಸಾರ್ವಭೌಮ ರಾಜರಿಂದ ಸ್ಥಾಪಿಸಲ್ಪಟ್ಟ ಉಗ್ರನರಸಿಂಹ, ಸಾಸಿವೆಯ ಗಣಪತಿ, ಕಡಲೆಯ ಗಣಪತಿ ಮೊದಲಾದ ದೇವರ ಪ್ರಚಂಡ ಮೂರ್ತಿಗಳು ತಮ್ಮ ವೈಭವಗಳನ್ನು ಅದೇ ಕಳಕೊಂಡು ಅನಾಥವಾದದ್ದರಿಂದ ಶೋಕಗ್ರಸ್ತವಾಗಿರುವಂತೆ ತೋರುತ್ತಲಿವೆ. "ಇಷ್ಟಾರ್ಥಪ್ರದನಾದ ಶ್ರೀ ವಿರೂಪಾಕ್ಷನು ಇಲ್ಲಿ ಇದ್ದಾನೆ"ಂದು ತಲೆಯೆತ್ತಿ ಭಾವಿಕರನ್ನು ಕರೆಯುವುದೋ ಅನ್ನುವಂತೆ ದೇವಾಲಯದ ಮುಂದಿನ ಉನ್ನತವಾದ ಗೋಪುರವು ಮುಗಿಲಿಗೆ ಮುಟ್ಟುತ್ತಲಿದೆ. ತಮ್ಮ ತಪಃಸಾಮರ್ಥ್ಯ-ಬುದ್ಧಿವೈಭವ-ಅದ್ವಿತೀಯ ಪಾಂಡಿತ್ಯಗಳ ಯೋಗದಿಂದ ವಿಜಯನಗರ ರಾಜ್ಯದ ಪ್ರಾಣಪ್ರತಿಷ್ಠಾಪನೆಯ ಆಚಾರ್ಯತ್ವವನ್ನು ಪಡೆದು, ಶೃಂಗೇರಿಯ ಜಗದ್ಗುರು ಪೀಠಕ್ಕೆ "ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯ" ಎಂಬ ಬಿರುದನ್ನು ಜೋಡಿಸಿ, ವಿಚಿತ್ರ ಗೌರವವನ್ನುಂಟುಮಾಡಿದ ಜಗದ್ವಿಖ್ಯಾತರಾದ ಶ್ರೀ ವಿದ್ಯಾರಣ್ಯರ ಅದೃಶ್ಯವಾದ ಕೀರ್ತಿಧ್ವಜವು ಆಕಾಶಮಂಡಲದಲ್ಲಿ ಸದ್ಯಕ್ಕೆ ನರ್ತಿಸುತ್ತಿರುವಂತೆ ಭಾಸವಾಗುತ್ತಲಿದೆ. ತನ್ನ ಚಂಡಕಿರಣಗಳಿಂದಲೂ ಪ್ರಕಾಶಿತವಾಗಿದೆ. ಅನಾಥತ್ವದಿಂದ ಕಾಂತಿ ಹೀನವಾಗಿಯೇ ತೋರುವ ಪಂಪಾಕ್ಷೇತ್ರವನ್ನು ನೋಡಲಾರದೆ ಖಿನ್ನನಾದಂತೆ ಸೂರ್ಯನು ಅಸ್ತಾಚಲಕ್ಕೆ ಇಳಿಯತೊಡಗಿದ್ದರಿಂದ ಬಿಸಿಲತಾಪವು ಕಡಿಮೆಯಾಗಹತ್ತಿದೆ. ವಿಜಯನಗರದ ವೈಭವಶಾಲಿಗಳಾದ ಸುಂದರಿಯರ ಮೈ ಗಂಧವನ್ನು ಸೆಳೆಯುವ ತನ್ನ ಅಧಿಕಾರವು ಹೋದದ್ದರಿಂದ ದುಃಖಪಟ್ಟು ಕರಿಬಂಡೆ ಬಂಡೆಗಳನ್ನು ಹಾದು ಕಸುವುಗೆಟ್ಟಿರುವುದೋ ಅನ್ನುವಂತೆ ಗಾಳಿಯು ಮೆಲ್ಲಮೆಲ್ಲನೆ ಸುಳಿಯಹತ್ತಿದೆ. ಬರಬರುತ್ತ ಹೂಬಿಸಿಲು ಅಳಿಯುತ್ತ ಹೋಗಿ ಪ್ರದೋಷಕಾಲವು ಪ್ರಾಪ್ತವಾಗಲು, ಶ್ರೀ ವಿರೂಪಾಕ್ಷನ ದೇವಾಲಯದಲ್ಲಿ ಪ್ರದೋಷಪೂಜೆಯ ವಾದ್ಯಗಳು ಗಂಭೀರವಾಗಿ ಮೊಳಗತೊಡಗಿವೆ. ಇಂಥ ಮುಚ್ಚಂಜೆಯ ಹೊತ್ತಿನಲ್ಲಿ ಅಶ್ವಾರೂಢನಾದ ನಮ್ಮ

ಎಚ್ಚಮನಾಯಕನು, ತನ್ನ ಟೊಂಕದಲ್ಲಿ ಅಲೆದಾಡುತ್ತಿರುವ ಖಡ್ಗವನ್ನು ಎತ್ತಿ ತೊಡೆಯ ಮೇಲೆ ಇಟ್ಟುಕೊಂಡು ಉಸುರ್ಗರೆಯುತ್ತಿರುವಾಗ, ಆತನ ಬೆಟ್ಟದಂಥ ಕುದುರೆಯು ತನ್ನ ಖುರಪುಟ ಧ್ವನಿಯಿಂದ ಜನರ ದೃಷ್ಟಿಗಳನ್ನು ತನ್ನ ಕಡೆಗೆ ಎಳೆದುಕೊಳ್ಳುತ್ತ ಶ್ರೀ ವಿರೂಪಾಕ್ಷನ ಗೋಪುರದ ಬಾಗಿಲಿಗೆ ಬಂದು ನಿಂತಿತು.

ಎಚ್ಚಮನಾಯಕನು ವಿಜಯನಗರದ ಅರಸು ಮನೆತನದ ಏಕನಿಷ್ಠ ಭಕ್ತನು. ಆತನು ಇಪ್ಪತ್ತೈದು ವರ್ಷದ ಪ್ರಾಯಸ್ಥನಾಗಿದ್ದನು. ಆತನ ನಿಲುವಿಕೆ ಎತ್ತರ, ಮೈಕಟ್ಟು ತಿಳುವಾದದ್ದು, ನೇತ್ರಗಳು ತೇಜಃಪುಂಜ, ಮುಖಮುದ್ರೆ ಪ್ರತಾಪಯುಕ್ತವಾದದ್ದು ತಿದ್ದಿ ಮಾಡಿದಂತೆ ಇದ್ದ ಆತನು ಸೌಂದರ್ಯಶಾಲಿಯಾಗಿ ಮನುಷ್ಯಾಕಾರವನ್ನು ಧರಿಸಿದ ಮನ್ಮಥನಂತೆ ಒಪ್ಪುತ್ತಿದ್ದನು. ಉದಾತ್ತಭಾವದ ಆ ಪ್ರತಾಪಿಗೆ ಭಯ–ಶೋಕಗಳ ಗುರುತು ಎಳ್ಳಷ್ಟು ಇಲ್ಲದ್ದರಿಂದ ಅವನು ಯಾವಾಗಲೂ ನಗೆಮೊಗದಿಂದ ಒಪ್ಪುತ್ತಿದ್ದನು. ಆದರೆ ಇಂಥ ಉಲ್ಲಾಸವೃತ್ತಿಯ ಆ ವೀರನ ಮುಖವೂ ಈ ದಿನ ಕಳೆಗುಂದಿರುವುದನ್ನು ನೋಡಿದರೆ ಯಾರಿಗಾದರೂ ಆಶ್ಚರ್ಯವಾಗ ಬಹುದು. ಆತನ ಕಳೆಗುಂದಿದ ಮುಖದಲ್ಲಿಯ ಕಳೆಗಳನ್ನು ಹೆಚ್ಚಿಸಲಿಕ್ಕೆ ಆತನ ಕಿರಮಂಜಿಯ ಬಣ್ಣದ ಶಿರೋಭೂಷಣದಲ್ಲಿ ಲಕಲಕನೆ ಹೊಳೆಯುತ್ತಿದ್ದ ನವರತ್ನಗಳ ವಿಚಿತ್ರ ಕಾಂತಿಗಳು ಸಮರ್ಥವಾಗಲಿಲ್ಲ. ಜರದ ಸುಂದರವಾದ ಕಲಾಕೌಶಲ್ಯದಿಂದ ಮನೋಹರವಾಗಿ ಒಪ್ಪುವ ನೀಲಿಯಬಣ್ಣದ ಆತನ ರೇಶಿಮೆಯ ನಿಲುವಂಗಿಯು, ಸೌಂದರ್ಯವನ್ನು ಮಾತ್ರ ಹೆಚ್ಚಿಸುತ್ತಿತ್ತಲ್ಲದೆ, ಆತನ ಮುಖದಲ್ಲಿಯ ಔದಾಸೀನ್ಯದ ಕಳೆಯನ್ನು ದೂರಮಾಡುತ್ತಿದ್ದಿಲ್ಲ. ಆತನು ಬಹು ಬೆಲೆಯುಳ್ಳ ಕೆಂಪು ಮಖಮಲಿಯ ಜರದ ಚಣ್ಣವನ್ನು ತೊಟ್ಟಿದ್ದನು. ಕಾಲಲ್ಲಿ ಸುಂದರವಾದ ಮಚ್ಚೆಗಳನ್ನು ಮೆಟ್ಟಿದ್ದನು. ಟೊಂಕಕ್ಕೆ ಸುತ್ತಿದ ಹಳದಿಯ ಬಣ್ಣದ ಬೆಲೆಯುಳ್ಳ ಜರದ ಶಾಲಿನ ಕೆಳಗಡೆಯಲ್ಲಿ, ಆತನ ವಜ್ರದ ಹಿಡಿಕೆಯ ಖಡ್ಗವು ಸುಂದರವಾದ ಒರೆಯಲ್ಲಿ ಅಡಗಿಕೊಂಡು ಒಪ್ಪುತ್ತಿತ್ತು. ಆತನ ಕೊರಳೊಳಗಿನ ದೊಡ್ಡ ಮುತ್ತುಗಳ ಕಂಠಿಯೂ, ಕಿವಿಗಳಲ್ಲಿ ಲಕಲಕಿಸುವ ವಜ್ರದ ಬಾವುಲಿಗಳೂ, ಖಡ್ಗದ ಹಿಡಿಕೆಯ ಕಾಂತಿಯೊಡನೆ ಮತ್ಸರಿಸುವ ತೇಜಃಪುಂಜ ರತ್ನಗಳಿಂದ ಅಲಂಕೃತವಾದ ಬಲಗೈಯೊಳಗಿನ ಮುಂಗೈಸರವೂ, ಬೆರಳುಗಳಲ್ಲಿ ಒಪ್ಪುವ ದುರ್ಮಿಳವಾದ ರತ್ನಗಳ ಉಂಗುರಗಳೂ ಆ ವೀರಾಗ್ರೇಸರನ ಐಶ್ವರ್ಯವನ್ನು ವ್ಯಕ್ತಗೊಳಿಸುತ್ತಿದ್ದವು; ಆದರೆ ಏನಿದ್ದು ಏನು ಮಾಡಬೇಕು? ಮನಸ್ಸೊಂದು ಸ್ವಸ್ಥವಿಲ್ಲದ್ದರಿಂದ ಖಿನ್ನವದನನಾಗಿದ್ದ ಆ ತರುಣ ನಾಯಕನು ಎಡಬಲಗಳನ್ನು ನೋಡದೆ, ಜನರ ಮುಜರೆಗಳನ್ನು ಕೂಡ ಸರಿಯಾಗಿ ತಕ್ಕೊಳ್ಳದೆ, ಉಸುರ್ಗರೆಯುತ್ತ ಕುದುರೆಯನ್ನು ಇಳಿದು, ಕಡಿವಾಣವನ್ನು ಸೇವಕನ ಕೈಯಲ್ಲಿ ಕೊಟ್ಟು, ಮಚ್ಚೆಗಳನ್ನು ಅಲ್ಲಿಯೇ ಬಿಟ್ಟು ಸುಮ್ಮನೆ ವಿರೂಪಾಕ್ಷನ ಮಂದಿರದ ಕಡೆಗೆ ಸಾಗಿದನು.

ಪ್ರಿಯವಾಚಕರೇ, ನಮ್ಮ ಈ ಏರಿಕೆಯ ರಕ್ತದ ಕನ್ನಡವೀರನ ಪರಿಚಯವನ್ನು ಇನ್ನಿಷ್ಟು ಮಾಡಿಕೊಳ್ಳುವುದು ನೆಟ್ಟಗೆ. ಈಗ ಸುಮಾರು ಮುನ್ನೂರಾಐವತ್ತು ವರ್ಷಗಳ ಹಿಂದೆ ನಾಲ್ಕು ಜನ ಮುಸಲ್ಮಾನ ಬಾದಶಹರು ಹೊಟ್ಟೆಯಕಿಚ್ಚಿನಿಂದ ಒಟ್ಟುಗೂಡಿ ವಿಜಯನಗರದ ರಾಯರ

ರಾಜ್ಯವನ್ನು ಮಣ್ಣುಗೂಡಿಸಿದ್ದನ್ನು ನೀವು ಬಲ್ಲಿರಷ್ಟೆ? ಆ ಮುರಿದು ಹೋದ ರಾಜ್ಯವನ್ನು ತಿರುಗಿ ಸ್ಥಾಪಿಸುವದಕ್ಕಾಗಿ ರಾಯರ ಅಭಿಮಾನಿಗಳಾಗಿ ಎಷ್ಟೋ ಜನ ಸರದಾರರು ವಂಶ ಪರಂಪರೆಯಾಗಿ ಮನಮುಟ್ಟಿ ಯತ್ನಿಸುತ್ತ ಬಂದರು. ಅವರ ಯತ್ನವು ತತ್ಕಾಲಕ್ಕೆ ಫಲದ್ರೂಪ ವಾಗದಿದ್ದರೂ, ಅದು ಕ್ರಮವಾಗಿ ಮುಸಲ್ಮಾನರ ರಾಜ್ಯಾಡಳಿತದ ಕೀಲಗಳನ್ನು ಸಡಿಲಿಸುತ್ತ ದೊಡ್ಡ ದೊಡ್ಡ ಹಿಂದೂ ಸರದಾರರನ್ನು ಬೆಳಕಿಗೆ ತರುತ್ತ ಹೋಯಿತು. ಮುಂದೆ ನೂರು ವರ್ಷಗಳ ಮೇಲೆ ಈ ದೀರ್ಘಪ್ರಯತ್ನವೇ ಶಿವಾಜಿಯಿಂದ ಮಹಾರಾಷ್ಟ್ರ ರಾಜ್ಯದ ಸಸಿಯನ್ನು ಊರಿಸಿ ಕಸುವಿನಿಂದ ಬೆಳಸಲಿಕ್ಕೆ ಬಹ್ವಂಶದಿಂದ ಕಾರಣವಾಯಿತೆಂದು ಕೆಲವರು ಹೇಳುವರು. ಇಂಥ ದೀರ್ಘಪ್ರಯತ್ನದ ಸರದಾರರ ಮಾಲಿಕೆಯಲ್ಲಿ ನಮ್ಮ ಎಚ್ಚಮನಾಯಕನ ತಂದೆಯು ಅಗ್ರೇಸರ ನಾಗಿದ್ದನು. ಆತನು ಸಾಯುವಾಗ, ತನ್ನ ವ್ರತವನ್ನು ಮುಂದಕ್ಕೆ ಸಾಗಿಸುವಂತೆ ತನ್ನ ಮಗನಿಂದ ವಚನವನ್ನು ತಕ್ಕೊಂಡಿದ್ದನು. ಎಚ್ಚಮ್ಮನಾಯಕನು ತಂದೆಯ ವಚನವನ್ನು ಪಾಲಿಸಲಿಕ್ಕೆ ತಕ್ಕವನಾಗಿದ್ದನಲ್ಲದೆ, ಆತನು ಕೇವಲ ಪಿತೃಭಕ್ತನಾದದ್ದರಿಂದ ತಂದೆಯ ವಿಯೋಗದುಃಖವನ್ನು ದೂರಮಾಡಿಕೊಳ್ಳಲಿಕ್ಕೆ ಆತನ ವ್ರತವನ್ನು ತಡಮಾಡದೆ ಪಾಲಿಸುವುದೇ ತಕ್ಕ ಉಪಾಯವೆಂದು ತಿಳಿದಿದ್ದನು. ಇದಕ್ಕಾಗಿಯೇ ಆತನು ವಿಜಯನಗರವನ್ನು ಕಣ್ಣು ಮುಟ್ಟಿ ನೋಡಿ, ವಿರೂಪಾಕ್ಷನ ದರ್ಶನವನ್ನು ತಕ್ಕೊಂಡು ವ್ರತವನ್ನು ಕೈಕೊಳ್ಳಬೇಕೆಂದು ನಿಯಮಿತ ಪರಿವಾರದೊಡನೆ ತನ್ನ ಪ್ರತಾಪದುರ್ಗ ರಾಜಧಾನಿ ಯಿಂದ ಹೊರಟು ಪಂಪಾಕ್ಷೇತ್ರಕ್ಕೆ ಬಂದಿದ್ದನು.

ವಿಜಯನಗರವು ಹಾಳಾಗಿ ಅಂದಿಗೆ ಸರಾಸರಿ ಐವತ್ತು ವರ್ಷಗಳಾಗಿದ್ದವು. ಅಲ್ಲಿಯ ಅರಮನೆಗಳು, ಸಭಾಸ್ಥಾನಗಳು, ಗಜಶಾಲೆಗಳು, ಹಯಶಾಲೆಗಳು, ಗೋಶಾಲೆಗಳು, ರಾಜಪುರುಷರ ಹಾಗು ಧನಿಕರ ಅಂತಸ್ತಿನ ಮನೆಗಳು, ಭವ್ಯವಾದ ದೇವಾಲಯಗಳು ನಾಶದ ಪಂಥವನ್ನು ಹಿಡಿದು, ಗಟ್ಟಿಯಾಗಿ ಅಳಲಿಕ್ಕೂ ತ್ರಾಣವಿಲ್ಲದ್ದರಿಂದ "ಹಾಯ್ ಹಾಯ್ ಕಠಿಣ ಕಾಲವೇ, ನಮ್ಮನ್ನು ಗೂಗೆಗಳ ವಾಸಸ್ಥಳಗಳಾಗಿ ಮಾಡಿಬಿಟ್ಟೆಯಲ್ಲ!" ಎಂದು ಕುದಿಯುತ್ತ ವಿದ್ರೂಪವಾಗಿ ತೋರುವುದನ್ನು ನೋಡಿ ನಮ್ಮ ತರುಣ ನಾಯಕನ ಎದೆಯೊಡೆದು ನೀರಾಯಿತು. ವಿದ್ಯಾರಣ್ಯರಂಥ ಅಲೌಕಿಕ ಪುರುಷರೂ, ಕೃಷ್ಣರಾಜನಂಥ ನರವೀರರೂ, ರಾಮರಾಜನಂಥ ಕಾರ್ಯದಕ್ಷರೂ ಮುಸಲ್ಮಾನರ ಅಬ್ಬರವನ್ನು ಅಡಗಿಸಿ, ಪೋರ್ಚುಗೀಜರನ್ನು ದಂಗುಬಡಿಸಿ, ವೇದ ವಿದ್ಯೆಗೆ ಆಧಾರಸ್ತಂಭವನ್ನುಂಟುಮಾಡಿ, ಕನ್ನಡನುಡಿಗೆ ರಾಜಭಾಷೆಯೆಂಬ ಗೌರವದ ಪದವಿಯನ್ನಿತ್ತು ಮುನ್ನೂರು ವರ್ಷ ರಾಜ್ಯಭಾರ ಮಾಡಿದ ಪಟ್ಟಣದ ಭವ್ಯವಾದ ರಾಜಬೀದಿಗಳು ನಿರ್ಮಾನುಷವಾಗಿರುವದನ್ನು ನೋಡಿ ಆತನ ಕರಗಿದ ಆ ಹೃದಯವು ಕಂಪನ ವನ್ನು ಹೊಂದಿತು. ಇದಲ್ಲದೆ ಅಲ್ಲಲ್ಲಿ ಮೆಲ್ಲನೆ ತಲೆಯಲ್ಲಾಡಿಸುತ್ತ ಔದಾಸೀನ್ಯದಿಂದ ನಿಂತು ಕೊಂಡಿದ್ದ ದೊಡ್ಡ ದೊಡ್ಡ ವೃಕ್ಷಗಳೂ, ಹಾಳಾಗಿದ್ದ ಉದ್ಯಾನಗಳೂ, ಮುರಕಲಿಗೆ ಬಂದಿದ್ದ ಕೃತ ಕಾದ್ರಿಗಳೂ, ಮುರಿದು ಹೋಗಿದ್ದ ಕಾರಂಜಿಗಳೂ, ಅಸ್ತವ್ಯಸ್ತವಾಗಿ ಬಿದ್ದಿದ್ದ ತೋಪುಗಳೂ, ಮಲೆತುಹೋಗಿದ್ದ ಮನೋಹರವಾದ ಜಲಾಶಯಗಳೂ, ಗೋಡೆಗಳು ಬಿದ್ದದ್ದರಿಂದ ಅಮಂಗಲವಾಗಿ ತೋರುವ ಮಂದಿರಗಳ ಅಂತರ್ರಚನೆಯೂ, ಅರ್ಚಕರಿಲ್ಲದ್ದರಿಂದ ಕಾಲುಗೆರೆ ಹಿಡಿದು ಎಳೆದಂತೆ, ಬಿದ್ದಲ್ಲಿ ಬಿದ್ದ ಹಾಗೆಯೇ ಬಿದ್ದುಕೊಂಡಿದ್ದ ದೇವರ ಪ್ರತಿಮೆಗಳೂ

ಒಟ್ಟುಗೂಡಿ ದುಃಖದಾಯಕವಾಗಿ ನಾಯಕನ ಮೈಯಲ್ಲಿ ನಡುಗನ್ನು ಹುಟ್ಟಿಸಲು, ಆತನ ಆ ಕಂಪಿತ ಹೃದಯಜಲವು ಉಕ್ಕೇರಿ ಅವನ ಕುತ್ತಿಗೆಯ ನರಗಳನ್ನು ಉಬ್ಬಿಸಿತು. ಈ ಸ್ಥಿತಿಯಲ್ಲಿ ಇನ್ನೊಂದು ಕ್ಷಣವು ಕ್ರಮಿಸಿದ್ದರೆ ನಾಯಕನ ನೇತ್ರಗಳ ದ್ವಾರದಿಂದ ದುಃಖಾಶ್ರುಗಳು ಪಟಪಟನೆ ಉದುರುತ್ತಿದ್ದವು; ಆದರೆ ಆ ಧೀರನು ಅಷ್ಟರಲ್ಲಿ ಸತ್ವಾತಿಶಯದಿಂದ ತನ್ನ ಮೀರಿದ ಆ ದುಃಖವನ್ನು ನುಂಗಿಕೊಂಡು, ಅಲ್ಲಿ ನಿಲ್ಲಲಾರದೆ ತನ್ನ ಕುದುರೆಯನ್ನು ಒತ್ತರದಿಂದ ನೂಕಿ ಮೇಲೆ ವರ್ಣಿಸಿದಂತೆ ವಿರೂಪಾಕ್ಷನ ದರ್ಶನಕ್ಕೆ ಹೊರಟಿದ್ದನು.

ನಾಯಕನು ನೆರೆಯ ತುಂಗಭದ್ರೆಯ ಕಾವಲಿಯಲ್ಲಿ ಕಾಲುತೊಳಕೊಂಡು ವಿರೂಪಾಕ್ಷನ ಮಂದಿರವನ್ನು ಹೊಕ್ಕಾಗ ಆ ಅಂಬಿಕಾಧವನಿಗೆ ಅರ್ಚಕರು ಸಹಸ್ರನಾಮಗಳಿಂದ ಬಿಲ್ವಗಳನ್ನು ಸಮರ್ಪಿಸುತ್ತಿದ್ದರು. ಆ ಪುರಾತನವಾದ ಉದ್ಭವಲಿಂಗ, ಅಲ್ಲಿ ಪ್ರಕಾಶಿಸುತ್ತಿರುವ ಅನಂತ ದೀಪಜ್ಯೋತಿಗಳು, ''ಅಭಿಷೇಕಪ್ರಿಯಃಶಿವಃ'' ಎಂಬ ಉಕ್ತಿಯ ಯಥಾರ್ಥತ್ವವನ್ನು ತೋರಿಸುವ ಆ ಜಲಮಯವಾದ ಗಂಭೀರ ಗರ್ಭಾಗಾರ, ಆ ಗರ್ಭಾಗಾರದ ಶಿಲಾತಲದಲ್ಲಿ ಪ್ರತಿಬಿಂಬಿತ ದೀಪಜ್ಯೋತಿಗಳೊಡನೆ ಅಲ್ಲಲ್ಲಿ ಒಪ್ಪುವ ಸೂರೆಯಾದ ಶುಭ್ರಾಕ್ಷತ–ಬಿಲ್ವಪತ್ರಗಳು, ಭಕ್ತಿರಸವನ್ನು ಉಕ್ಕೇರಿಸುವ ಅರ್ಚಕರ ಸ್ಪಷ್ಟವಾದ ಶಿವಸಹಸ್ರನಾಮೋಚ್ಚಾರ, ಶೈವರ ಸ್ಪಷ್ಟ ಲಾಂಛನಗಳಾದ ಭಸ್ಮರುದ್ರಾಕ್ಷಿಗಳಿಂದ ಭವ್ಯವಾಗಿ ತೋರುವ ಆ ಶಾಂತಸ್ವಭಾವದ ಅರ್ಚಕರು, ಗರ್ಭಾಗಾರದಲ್ಲೆಲ್ಲ ಇಡಿಗಿ ಘಮಘಮಿಸಿ ಅಲ್ಲಿ ನಿಂತವರ ಘ್ರಾಣೇಂದ್ರಿಯಕ್ಕೆ ಸುಖವನ್ನುಂಟು ಮಾಡುವ ದಶಾಂಗ ಗುಗ್ಗಳ ಮೊದಲಾದ ಧೂಪಗಳ ಸುವಾಸನೆ ಇವು ನಮ್ಮ ಭಾವಿಕನಾದ ಕನ್ನಡ ತರುಣ ನಾಯಕನ ಚಿತ್ತವನ್ನು ಒಮ್ಮೆಲೆ ಆಕರ್ಷಿಸಲು, ಆತನು ವಿಜಯನಗರದ ರಾಜ್ಯವಿದ್ದಾಗಿನ ಪ್ರದೋಷಕಾಲದ ಶಿವಪೂಜೆಯ ವೈಭವವನ್ನು ಕಲ್ಪಿಸುತ್ತ ಅತ್ಯಂತ ಲೀನನಾಗಿ ಕೈ ಜೋಡಿಸಿ ಕೊಂಡು ಭಕ್ತಿಯಿಂದ ಶಿವಪೂಜೆಯನ್ನು ನೋಡುತ್ತ ಸುಮ್ಮನೆ ನಿಂತುಕೊಂಡನು. ಅಷ್ಟರಲ್ಲಿ ಬಿಲ್ವ ಸಮರ್ಪಣವಾಯಿತು. ವಿರೂಪಕ್ಷಾನಿಗೆ ಧೂಪವನ್ನೆತ್ತಿದರು, ದೀಪವನ್ನು ಬೆಳಗಿದರು, ನೈವೇದ್ಯ ಸಮರ್ಪಣವಾಯಿತು. ಉತ್ತರ ನೀರಾಜನವಾದ ಬಳಿಕ, ಅರ್ಚಕರು ಉಚ್ಚಸ್ವರದಿಂದ ಮಂತ್ರ ಪುಷ್ಪವನ್ನು ಅನ್ನುವಾಗ ಕಿವಿಯಲ್ಲಿ ವೇದಮಂತ್ರಗಳು ಸೇರುತ್ತಿರಲು, ಭಕ್ತಿ ವಿಶೇಷದಿಂದ ನಾಯಕನ ಸರ್ವಾಂಗವು ರೋಮಾಂಚಿತವಾಯಿತು. ವಿಜಯನಗರದ ಹಾಳು ಪಟ್ಟಣವನ್ನು ನೋಡಿದ್ದರಿಂದ ಖಿನ್ನವಾಗಿದ್ದ ಅವನ ಮುಖಮಂಡಲವು ಭಕ್ತಿಯ ಯೋಗದಿಂದ ಕೂಡಲೆ ಕಳೆಯೇರಿ ಗಂಭೀರವಾಯಿತು. ಅರ್ಚಕರು ಶಿವಪೂಜೆಯನ್ನು ಮುಗಿಸಿ, ನಾಯಕನನ್ನು ಆದರಿಸುತ್ತಿರಲು, ಆತನು ಪೂಜ್ಯ ಬುದ್ಧಿಯಿಂದ ಬ್ರಾಹ್ಮಣರನ್ನು ನಮಸ್ಕರಿಸಿ ಅವರ ಆದರವನ್ನು ಕೈಕೊಂಡು ಭಕ್ತಿ ಪರವಶತೆಯಿಂದ ಕೈಲಾಸನಾಥನ ಎದುರಿಗೆ ಕೈಜೋಡಿಸಿ ನಿಂತುಕೊಂಡು ನುಡಿದನೇನಂದರೆ–

ದೇವಾಧಿದೇವನೇ, ಏನು ನಿನ್ನ ವಿಚಿತ್ರ ಚರಿತ್ರವಿದು! ನಿನ್ನ ತಂತ್ರದಿಂದ ಕ್ಷಣದಲ್ಲಿ ತಿಪ್ಪೆಯು ಉಪ್ಪರಿಗೆಯಾಗುವುದು, ಉಪ್ಪರಿಗೆಯು ತಿಪ್ಪೆಯಾಗುವುದು. ಈಗ ಐವತ್ತು ವರ್ಷಗಳ ಹಿಂದೆ ವೈಭವಶಿಖರವನ್ನು ಮುಟ್ಟಿದ್ದ ವಿಜಯ ನಗರದ ರಾಜ್ಯವು ಈಗ ಮಣ್ಣು ಗೂಡಿ

ಹೋಗಿರುವುದಲ್ಲ! ಅದನ್ನು ಸುಮಾರು ಮುನ್ನೂರು ವರ್ಷಗಳ ಹಿಂದೆ ಶ್ರೀ ವಿದ್ಯಾರಣ್ಯರು ನಿನ್ನ ಆಜ್ಞೆಯಿಂದಲೇ ಹುಕ್ಕರಾಜನ ಕೈಯಿಂದ ಸ್ಥಾಪಿಸಲಿಲ್ಲವೆ? ಆ ರಾಜ್ಯ ಸ್ಥಾಪನೆಗಾಗಿ ಆ ಮಹಾತ್ಮರು ತಮ್ಮ ತಪಃಪ್ರಭಾವದಿಂದ ತಾವಿರುವ ಪ್ರದೇಶದ ಮೇಲೆ ಮೂರೂ ಮುಕ್ಕಾಲು ಗಳಿಗೆ ಬಂಗಾರದ ಮಳೆಯನ್ನು ಸುರಿಸಿದರಂತೆ! ನಿನ್ನ ಕೃಪೆಯಿಂದ ದಿನದಿನಕ್ಕೆ ಹೆಚ್ಚುತ್ತಹೋದ ಆ ರಾಜ್ಯದ ಸಾಮರ್ಥ್ಯ–ವೈಭವಗಳನ್ನು ನೋಡಿ ನೆರೆಯ ಮುಸಲ್ಮಾನ ಬಾದಶಹರು ಕೂಡ ಬೆದರಿಬಿದ್ದರು. ವಿಜಯನಗರದ ರಾಯರನ್ನು ತಡವಲಿಕ್ಕೆ ಧೈರ್ಯಸಾಲದೆ ಆ ಬಾದಶಹರು ರಾಯರ ಬೇಡಿಕೆಗಳನ್ನು ಪೂರ್ಣಮಾಡಹತ್ತಿದರು. ಆರ್ಯರ ಆ ಘನತೆಯ ಕಾಲದಲ್ಲಿ ವೇದ ವಿದ್ಯೆಗೆ ಆಶ್ರಯವು ದೊರೆತು, ಉತ್ತಮೋತ್ತಮವಾದ ಹಲವು ಧಾರ್ಮಿಕ ಗ್ರಂಥಗಳು ಪ್ರಕಟವಾದವು. ಗುಡಿಗುಂಡಾರಗಳು ಹೆಚ್ಚಿದವು. ವೈದಿಕಾಚರಣೆಗಳು ಅವ್ಯಾಹತವಾಗಿ ಸಾಗಹತ್ತಿದವು. ಹೀಗಿದ್ದು ಆಕಸ್ಮಾತ್ ವಜ್ರಾಘಾತವಾದಂತೆ ತಾಳಿಯಕೋಟೆಯ ಕಾಳಗದಿಂದ ರಾಯರ ರಾಜ್ಯವು ನಾಶವಾಗಿ ಹೋಯಿತಲ್ಲ! ಕರುಣಾಕರನೇ, ನೀನು ಹೀಗೆ ಅವಕೃಪೆಯನ್ನು ಮಾಡುವದೆ? ವೇದವು ನಿನ್ನ ವಾಣಿಯು, ಬ್ರಾಹ್ಮಣರು ನಿನ್ನ ಮುಖವು, ಕ್ಷತ್ರಿಯರು ನಿನ್ನ ಬಾಹುಗಳು; ಅಂದಬಳಿಕ ಕರ್ನಾಟಕದಲ್ಲಿ ವೇದಘೋಷವು ಉಚ್ಚಸ್ವರದಿಂದ ಆಕಾಶ ಕಟಾಹವನ್ನು ಬೇಧಿಸುತ್ತಿರಲು, ಪೂಜ್ಯರಾದ ಬ್ರಾಹ್ಮಣರು ತೀರ್ಥಕ್ಷೇತ್ರಗಳಲ್ಲಿ ಸ್ವಕರ್ಮಾನು ಷ್ಠಾನಗಳನ್ನೂ ಈಶ್ವರಾರಾಧನೆ ಯನ್ನೂ ಅವ್ಯಾಹತವಾಗಿ ಸಾಗಿಸುತ್ತ ರಾಜ್ಯದ ಅಭೀಷ್ಟವನ್ನು ಚಿಂತಿಸುತ್ತಿರಲು, ಲಕ್ಷಾವಧಿ ಕ್ಷತ್ರಿಯ ವೀರರು ಯುದ್ಧ ಸನ್ನದ್ಧರಾಗಿ ತೋಳುಗಳನ್ನು ತಟ್ಟಿ ತಾಳಿಯಕೋಟೆಯ ರಣಭೂಮಿಯಲ್ಲಿ ತಮ್ಮ ಅಸದೃಶ ಪರಾಕ್ರಮದಿಂದ ಮುಸಲ್ಮಾನರ ಕೈಕಾಲು ಗೆಡಿಸುತ್ತಿರಲು, ತೊಂಬತ್ತು ವರ್ಷದ ಮುದುಕನಾದ ರಾಮರಾಜನು ತರುಣನಂತೆ ಯುದ್ಧೋತ್ಸಾಹ ದಿಂದ ಸೈನಿಕರನ್ನು ಉತ್ಸಾಹಗೊಳಿಸಿ ಕುರುಪಿತಾಮಹನಾದ ಭೀಷ್ಮನನ್ನು ನೆನಪು ಮಾಡಿ ಕೊಡುತ್ತಿರಲು, ಕಡೆಗೆ ಲಕ್ಷಾವಧಿ ಹಿಂದೂಜನರ ದಿಂಡಮುಂಡಗಳಿಂದ ಹೊರಟ ರಕ್ತಪ್ರವಾಹ ದಲ್ಲಿ ಕನ್ನಡಿಗರ ರಾಜ್ಯವು ಮುಳುಗಿಹೋಗಬಹುದೇ? ಬೇಲಿಯೇ ಎದ್ದು ಹೊಲವನ್ನು ಮೇಯಹತ್ತಿದ ಬಳಿಕ ಕಾಯುವರು ಮಾಡುವದೇನು? ನಿನ್ನ ತಂತ್ರದ ಹೊರತು ಜಗತ್ತಿನ ಕಡ್ಡಿಯು ಕೂಡ ಕದಲದಿರಲು, ನಮ್ಮ ಕನ್ನಡಿಗರ ಅರಸೊತ್ತಿಗೆಯ ನಾಶಕ್ಕೆ ನೀನಲ್ಲದೆ ಬೇರೆ ಯಾರು ಕಾರಣರೆಂದು ಹೇಳಬೇಕು? ಸದ್ಯಕ್ಕೆ ನಿನ್ನ ಕೃಪೆಯು ತಪ್ಪಿರುವುದರಿಂದ ನಮ್ಮಂಥ ಹತಭಾಗಿಗಳು ರಾಜ್ಯ ಸ್ಥಾಪನೆಗಾಗಿ ಹೆಣಗಿ ಮಾಡುವುದೇನು? ನೀನು ಭಕ್ತಾಭಿಮಾನಿಯಂತೆ, ಬ್ರಾಹ್ಮಣಪ್ರಿಯ ನಂತೆ, ದುಷ್ಟ ನಿಗ್ರಹ–ಶಿಷ್ಟ ಪರಿಪಾಲನಗಳು ನಿನ್ನ ಶೀಲವಂತೆ! ಆದರೆ ತ್ರಿಪುರಹರನೇ, ಇವುಗಳ ಲ್ಲೊಂದೂ ನನಗೆ ಸತ್ಯವಾಗಿ ತೋರುವುದಿಲ್ಲ. ಭಕ್ತಾಭಿಮಾನಿಯಾದ ನೀನು ನಿನ್ನ ಭಕ್ತರಾದ ವೇದಧರ್ಮಿಗಳನ್ನು ಮುಣುಗಿಸಿ ನಾಸ್ತಿಕರಾದ ಮುಸಲ್ಮಾನರನ್ನು ಉದ್ಧರಿಸಿರುತ್ತೀ. ಬ್ರಾಹ್ಮಣಪಕ್ಷ ಪಾತಿಯಾದ ನೀನು ಶಿಖಾನಷ್ಟರ ಮಸೀದೆಗಳನ್ನು ಹೆಚ್ಚಿಸಹತ್ತಿ ದೇವಸ್ಥಾನಗಳನ್ನು ನೆಲಸಮ ಮಾಡಿಸತೊಡಗಿರುತ್ತೀ. ಮುಸಲ್ಮಾನರ ನಮಾಜುಗಳು ಊರುಕೇರಿಗಳಲ್ಲಿ ಉಚ್ಚಸ್ವರದಿಂದ ಕೇಳಿಬರುತ್ತಿರಲು, ಬ್ರಾಹ್ಮಣರ ಸ್ನಾನ ಸಂಧ್ಯಾದಿ ನಿತ್ಯ ಕರ್ಮಗಳೂ ನಿರ್ವಿಘ್ನದಿಂದ

ಸಾಗಬಾರದೇ? ಇದೇ ಏನು ನಿನ್ನ ದುಷ್ಟನಿಗ್ರಹ-ಶಿಷ್ಟಪರಿಪಾಲನಗಳ ಪಡಿಕಟ್ಟು! ನೀನೇ ಹೀಗೆ ಕಣ್ಣು ಮುಚ್ಚಿಕೊಂಡು ನಡೆಯಹತ್ತಿದ ಬಳಿಕ ನಮ್ಮಂಥ ಕ್ಷುದ್ರರು ಮಾಡುವುದೇನು? ವಿಜಯನಗರದ ಹಾಳು ಬೀದಿಗಳಲ್ಲಿ ಉರುಳಾಡುತ್ತಿರುವ ದೇವರ ಅನಂತ ಮೂರ್ತಿಗಳನ್ನು ನೆನಿಸಿಕೊಂಡರೆ, ಆ ಕಲ್ಲಿನ ಮೂರ್ತಿಗಳು ಕಲ್ಲೇ ಅಲ್ಲದೆ ದೇವರಲ್ಲೆಂಬ ಮಾತು ಮನದಟ್ಟಾಗುತ್ತದೆ. ಹಾಯ್ ಹಾಯ್! ಹತಭಾಗಿಗಳಾದ ಕನ್ನಡಿಗರೇ, ನಿಮ್ಮ ಮೊರೆಯನ್ನು ಕೇಳುವವರು ಇಲ್ಲದಾಯಿತು. ಎಲೈ ಅನಾಥರಕ್ಷಕನೆಂದು ಹೊಗಳಿಸಿಕೊಳ್ಳುವ ಮೃತ್ಯುಂಜಯನೇ, ತಾಳಿಯ ಕೋಟೆಯ ಆ ಭಯಂಕರ ಯುದ್ಧವು ಮುಗಿದ ಬಳಿಕ ದುಷ್ಟರಾದ ಮುಸಲ್ಮಾನರು ಲಕ್ಷಾವಧಿ ಹಿಂದೂ ಪ್ರಜೆಗಳ ತಲೆಗಳನ್ನು ಕುರಿಗಳಂತೆ ಕರಕರ ಕೊಯ್ಯುವಾಗ ನಿನಗೆ ಸ್ವಲ್ಪವಾದರೂ ದಯವು ಬರಲಿಲ್ಲವಲ್ಲ! ಅಂದಬಳಿಕ ತಾವು ಭಕ್ತಶ್ರೇಷ್ಠನಾದ ರಾವಣನು ತನ್ನ ರುಂಡಗಳನ್ನು ಒಂದೊಂದಾಗಿ ನಿನಗೆ ಅರ್ಪಿಸುತ್ತಿರಲು, ನೀನು ದಯೆತೋರಿ, ಆ ರಾಕ್ಷಸೇಶ್ವರನಿಗೆ ಆತ್ಮಲಿಂಗವ ಕೊಟ್ಟೆಯೆಂಬುದನ್ನಾದರೂ ನಾವು ಯಾಕೆ ನಂಬಬೇಕು? ಅದರಂತೆ ಸಾತ್ವಿಕಭಕ್ತಶ್ರೇಷ್ಠನಾದ ಮಾರ್ಕಾಂಡೇಯನನ್ನು ಯಮನು ಹಿಡಿದೆಳೆಯುವಾಗ ಭಕ್ತನ ಮೊರೆ ಕೇಳಿ ನೀನು ಕರುಣಾಳು ವಾಗಿ ಯಮನನ್ನು ದಂಡಿಸಿ ಭಕ್ತಶ್ರೇಷ್ಠನಿಗೆ ಉದ್ದಂಡಾಯುಷ್ಯವನ್ನು ದಯಪಾಲಿಸಿದೆಯೆಂಬು ದನ್ನಾದರೂ ನಿಜವೆಂದು ಯಾಕೆ ತಿಳಿಯಬೇಕು? ದಯಾಘನನೇ, ಎಂಥ ಅನರ್ಥವಿದು!!

ಹೀಗೆ ನುಡಿಯುವಾಗ ಎಚ್ಚಮ್ಮನಾಯಕನ ಕಣ್ಣುಗಳೊಳಗಿಂದ ನೀರುಗಳು ಸುರಿದವು. ಆತನು ಶ್ರೀ ವಿರೂಪಾಕ್ಷನ ಬಳಿಯಲ್ಲಿ ಗಾಂಭೀರ್ಯದಿಂದ ತನ್ನನ್ನು ನೋಡುತ್ತ ಕುಳಿತಿದ್ದ ತೇಜಃ ಪುಂಜನಾದ ಅರ್ಚಕನನ್ನು ನಮಸ್ಕರಿಸಿ, ವಿನಯದಿಂದ—ಸ್ವಾಮೀ, ದೈವಬಲವು ತಪ್ಪಿದಬಳಿಕ ಯಾರು ಮಾಡುವುದೇನು? ನನ್ನಂಥ ಕ್ಷುದ್ರನ ಪ್ರತಿಜ್ಞೆಯಿಂದಾದರೂ ಆಗುವು ದೇನು? ರಾಮರಾಜನಂಥ ಸಾಹಸಿಯಿಂದ ಕಾಯ್ದುಕೊಳ್ಳಲಾರದ ರಾಜ್ಯವನ್ನು ನಾನು ತಿರುಗಿ ಸ್ಥಾಪಿಸಲು ಸಮರ್ಥನಾಗುವೆನೆ? ಇಲ್ಲಿಗೆ ನಮ್ಮ ಹಾಳು ಮನೋರಾಜ್ಯವು ಸಾಕು. ಭ್ರಷ್ಟಪ್ರತಿಜ್ಞನಾಗಿ ನಾನು ನರಕಕ್ಕೆ ಇಳಿದರೂ ಚಿಂತೆಯಿಲ್ಲ, ಇಗೋ, ಇದು ನನ್ನ ಪ್ರೀತಿಯ ಖಡ್ಗವು. ಇದನ್ನು ನಿಮ್ಮ ಸಮಕ್ಷ ವಿರೂಪಾಕ್ಷನ ಸನ್ನಿಧಿಯಲ್ಲಿ ಇಡುತ್ತೇನೆ. ಇನ್ನು ವಿರೂಪಾಕ್ಷನ ಅಪ್ಪಣೆಯ ಹೊರತು ಇದನ್ನು ಮುಟ್ಟಲಿಕ್ಕಿಲ್ಲ ಎಂದು ನುಡಿದು, ಒರೆಯೊಳಗಿಂದ ಖಡ್ಗವನ್ನು ಸರಕ್ಕನೆ ಹಿರಿದು ದೇವರ ಮುಂದಿಟ್ಟು, ಹಿಂದಕ್ಕೆ ಸರಿದನು. ಅದನ್ನು ನೋಡಿ ಬ್ರಾಹ್ಮಣನು ಗಂಭೀರಸ್ವರದಿಂದ-ತರುಣ ವೀರನೇ, ಶಾಂತನಾಗು, ಶಾಂತನಾಗು. ಸ್ವಜನಘಾತದ ಸ್ಮರಣ ದಿಂದ ಕ್ಷುಬ್ಧವಾಗಿರುವ ನಿನ್ನ ಕೋಮಲ ಚಿತ್ತವೃತ್ತಿಯು ಶಾಂತವಾಗುವುದಕ್ಕಾಗಿ ನೀನು ಸದಾಶಿವನ ಶುಭಪ್ರದವಾದ ಈ ದಿವ್ಯಲಿಂಗವನ್ನು ಎವೆಯಿಕ್ಕದೆ ನೋಡುತ್ತ ಸುಮ್ಮನೆ ಸ್ವಲ್ಪಕಾಲ ಕುಳಿತುಕೋ-ಕುಳಿತುಕೋ. ನೀನು ವೀರನಿರುತ್ತೀ, ಧೀರನಿರುತ್ತೀ; ಕೈಕೊಂಡ ಕೆಲಸವನ್ನು ಕೊನೆಗಾಣಿಸುವಷ್ಟು ಮನೋದಾರ್ಢ್ಯವನ್ನು ಪಡೆಯುವ ಯೋಗ್ಯತೆಯು ನಿನ್ನಲ್ಲಿ ನಿಶ್ಚಯ ವಾಗಿರುತ್ತದೆ. ಇದಕ್ಕಿಂದ ಹೆಚ್ಚಿನ ಅಭಿನಂದನವು ಸದ್ಯಕ್ಕೆ ಬೇಡ. ಇಗೋ, ಇಲ್ಲಿ ಮಣೆ ಹಾಕಿರುತ್ತದೆ, ವಿಶ್ರಮಿಸು, ಎಂದು ಹೇಳಿ, ತಾನು ಉಚ್ಚಸ್ವರದಿಂದ ಶಿವಮಹಿಮ್ನ ಸ್ತೋತ್ರವನ್ನು

ಅನ್ನತೊಡಗಿದನು. ಎದುರಿನಲ್ಲಿರುವ ಶ್ರೀ ವಿರೂಪಾಕ್ಷನ ಲಿಂಗವನ್ನು ನೋಡುತ್ತ ಮಹಿಮ್ನ ಸ್ತೋತ್ರವನ್ನು ಕೇಳುತ್ತ ಹೋದಂತೆ ನಮ್ಮ ತರುಣ ನಾಯಕನ ಚಿತ್ತವು ಶಾಂತವಾಗುತ್ತ ಹೋಯಿತು. ಬ್ರಾಹ್ಮಣನ ಮಹಿಮ್ನ ಸ್ತೋತ್ರವು ಮುಗಿದ ಮೇಲೆ ನಾಯಕನು ವಿನಯದಿಂದ ಎದ್ದುನಿಂತು ಬ್ರಾಹ್ಮಣನನ್ನು ನಮಸ್ಕರಿಸಿ–ವಿಪ್ರೋತ್ತಮನೇ, ಆವೇಶದ ಭರದಲ್ಲಿ ನನ್ನಿಂದಾದ ಪ್ರಮಾದಗಳನ್ನು ಕ್ಷಮಿಸಿ ನನಗೆ ಯೋಗ್ಯ ಮಾರ್ಗವನ್ನು ತೋರಿಸು, ನಾನು ಶರಣು ಬಂದಿದ್ದೇನೆ. ವಚನ ಕೊಟ್ಟಂತೆ ತಂದೆಯ ವ್ರತವನ್ನು ನಡೆಸುವುದು ಯೋಗ್ಯವೋ, ಅಸಾಧ್ಯ ಕೆಲಸಕ್ಕೆ ಕೈಹಾಕಿ ಜಗತ್ತಿನ ನಗೆಗೆ ಈಡಾಗುವುದಕ್ಕಿಂತ ವಿರೂಪಾಕ್ಷನ ಸನ್ನಿಧಿಯಲ್ಲಿಟ್ಟಿರುವ ಖಡ್ಗವನ್ನು ತಿರುಗಿ ಮುಟ್ಟದೆ ಮನಸ್ಸಿಗೆ ಬಂದಂತೆ ನಡೆಯುವುದು ನೆಟ್ಟಗೋ?

ನಾಯಕನ ಈ ಮಾತುಗಳನ್ನು ಕೇಳಿ ಬ್ರಾಹ್ಮಣನು—ತರುಣವೀರನೇ, ನಿನ್ನ ಮಾತುಗಳನ್ನು ಕೇಳಿ ನನಗೆ ಕೌತುಕವಾಗುವುದಲ್ಲದೆ, ಕನ್ನಡಿಗರ ಸಾಧಾರಣ ಸ್ವಭಾವಕ್ಕನುಸರಿಸಿ ಕ್ಷಣಕ್ಷಣಕ್ಕೆ ಬದಲಾಗುವ ನಿನ್ನ ಚಿತ್ತವೃತ್ತಿಯನ್ನು ನೋಡಿ ವಿಷಾದವೂ ಆಗುತ್ತದೆ. ಒಮ್ಮೆ ನೀನು ಮರಣೋನ್ಮುಖನಾದ ತಂದೆಗೆ ''ನಿನ್ನ ವ್ರತವನ್ನು ಸಾಗಿಸುತ್ತೇನೆ''ಂದು ತಟ್ಟನೆ ವಚನವನ್ನು ಕೊಟ್ಟಿರುತ್ತೀ; ಆದರೆ ಆ ವ್ರತವನ್ನು ಕೈಕೊಳ್ಳುವುದಕ್ಕಾಗಿ ಇಲ್ಲಿಗೆ ಬಂದ ನೀನು ವಿಜಯನಗರದ ಹಾಳು ಪಟ್ಟಣವನ್ನು ನೋಡಿ ವ್ಯಥಿತಾಂತಃಕರಣನಾಗಿ ಕೈಕಾಲು ಬಿಟ್ಟು, ಒಮ್ಮಿಂದೊಮ್ಮೆ ಒರೆಯೊಳಗಿನ ಖಡ್ಗವನ್ನು ಶ್ರೀ ವಿರೂಪಾಕ್ಷನ ಮುಂದಿಟ್ಟು ಭ್ರಷ್ಟಪ್ರತಿಜ್ಞನಾಗಲು ಸಿದ್ಧನಾಗಿರುತ್ತೀ. ನಿನ್ನ ಈ ಸಿದ್ಧತೆಯಾದರೂ ಸ್ಥಿರವಾಗಿ ಉಳಿಯಿತೋ? ಇಲ್ಲ. ಶ್ರೀ ಶಿವಮಹಿಮ್ನ ಸ್ತೋತ್ರವನ್ನು ಕೇಳಿ, ಶಿವಲಿಂಗವನ್ನು ನೋಡಿ ಚಿತ್ತಕ್ಕೆ ಶಾಂತಿಯು ಪ್ರಾಪ್ತವಾಗುತ್ತಿರುವಷ್ಟರಲ್ಲಿಯೇ ನನಗೆ ಶರಣುಬಂದು ''ಪ್ರತಿಜ್ಞೆಯನ್ನು ಪಾಲಿಸಲೋ ಬಿಡಲೋ'' ಎಂದು ಪ್ರಶ್ನೆಮಾಡುತ್ತೀ. ಇಂಥ ಚಂಚಲವೃತ್ತಿಯಿಂದ ಯಾವ ಕಾರ್ಯವಾದೀತೆಂಬುದನ್ನು ನೀನೇ ತಿಳಿದುನೋಡು. ನಿಮ್ಮಂಥ ತರುಣರ ಈ ಅವಿಚಾರದ ಚಾಂಚಲ್ಯದಿಂದ ಹಲವು ಅನರ್ಥಗಳು ಒದಗುವ ಸಂಭವವಿರುತ್ತದೆ. ನಿನ್ನ ಮಾತಿನೊಳಗಿನ ವಿಚಾರಗಳಾದರೂ ಅಪಕ್ವವಾಗಿಯೇ ಇರುವುವು. ನೀನು ಹಿಂದುಗಳನ್ನೂ, ಅವರ ಧರ್ಮವನ್ನೂ ಹೊಗಳಿ, ಮುಸಲ್ಮಾನರನ್ನೂ, ಅವರ ಧರ್ಮವನ್ನೂ ಹಳಿಯುತ್ತೀ; ಆದರೆ ''ಈಶ್ವರೀತಂತ್ರದ ಹೊರತು ಜಗತ್ತಿನ ಕಡ್ಡಿ ಕೂಡ ಕದಲುವುದಿಲ್ಲ''ಂದು ಅನ್ನುವ ನೀನು, ಜಗತ್ತಿನ ಧರ್ಮಗಳೆಲ್ಲ ಈಶ್ವರೀತಂತ್ರಕ್ಕೆ ಸಂಬಂಧಿಸಿಯೇ ಆಗಿರುವವೆಂಬ ಮಾತನ್ನು ಹ್ಯಾಗೆ ಮರೆಯುತ್ತೀಯೋ ತಿಳಿಯದು. ವಿಜಯನಗರದ ರಾಜ್ಯವು ಸ್ಥಾಪಿಸಲ್ಪಟ್ಟದ್ದೂ ಈಶ್ವರೀತಂತ್ರದಿಂದಲೇ—ನಾಶವಾದದ್ದೂ ಈಶ್ವರೀತಂತ್ರದಿಂದಲೇ. ಅಂದಬಳಿಕ ಈಶ್ವರೀತಂತ್ರದಿಂದಾದ ಆ ಕಾರ್ಯಗಳಿಗಾಗಿ ನೀನು ದೇವರನ್ನು ಹೊಗಳುವುದೇಕೆ– ಬೊಗಳುವುದೇಕೆ? ದೇವರ ನಿಜವಾದ ಮಹಿಮೆಯನ್ನರಿಯದ ಮೂಢರು ಲಾಭದಿಂದ ಉಬ್ಬಿದಾಗ ಕುಣಿಯುತ್ತ ದೇವರನ್ನು ಅಟ್ಟದ ಮೇಲೆ ಕೂಡ್ರಿಸುತ್ತಾರೆ; ಅದೇ ಅವರು ಹಾನಿಯಿಂದ ಕುಗ್ಗಿದಾಗ ಸಂತಾಪಗೊಂಡು ದೇವರನ್ನು ಪಾತಾಳಕ್ಕೆ ಹಾಕುತ್ತಾರೆ. ಅರ್ಥವಿಲ್ಲದ ಈ ಉದ್ದಾಮತನದ ಆವಾಹನ–ವಿಸರ್ಜನ ಗಳಿಂದಲೇ ಮನುಷ್ಯರು ಬಗೆಬಗೆಯ ತಾಪಗಳಿಗೆ

ಗುರಿಯಾಗುತ್ತಾರೆಂದು ಹೇಳಬಹುದು. ತರುಣವೀರಾ, ನನ್ನ ಸ್ಪಷ್ಟ ಮಾತುಗಳಿಗಾಗಿ ಸಿಟ್ಟಾಗಬೇಡ. ಉಪದೇಶಕ್ಕೆ ತಕ್ಕವನಾಗಿ ತೋರಿದ್ದರಿಂದ ಪ್ರಸಂಗಕ್ಕೆ ತಕ್ಕ ಎರಡು ಮಾತುಗಳನ್ನು ಆಡುತ್ತೇನೆ. ದೇವರು ಹಿಂದುಗಳ ಪಕ್ಷಪಾತಿಯೂ ಅಲ್ಲ, ಮುಸಲ್ಮಾನರ ಪಕ್ಷಪಾತಿಯೂ ಅಲ್ಲ. ಆತನು ನಮಗೆ ಸುಖವನ್ನೂ ಉಂಟುಮಾಡುವುದಿಲ್ಲ, ದುಃಖವನ್ನೂ ಉಂಟುಮಾಡುವುದಿಲ್ಲ. ಎಲ್ಲರ ಭೋಗಕ್ಕಾಗಿ ಸಮದೃಷ್ಟಿಯಿಂದ ಆತನು ಈ ಸೃಷ್ಟಿಯನ್ನು ಉಂಟು ಮಾಡಿರುವನು. ಈ ಸೃಷ್ಟಿರೂಪವಾದ ಅಂಗಡಿಯಲ್ಲಿ ನ್ಯಾಯದ ಸೂಕ್ಷ್ಮತಕ್ಕಡಿಯನ್ನು ಹಿಡಿದು ಈಶ್ವರೀತಂತ್ರವು ನಮ್ಮ ನಮ್ಮ ಕರ್ಮಕ್ಕನುಸರಿಸಿ ಪಕ್ಷಪಾತವಿಲ್ಲದೆ ನಮಗೆ ಸುಖ–ದುಃಖಗಳಿಗೆ ಕಾರಣಗಳಾದ ಭೋಗಗಳನ್ನು ಕೊಡುತ್ತ ಹೋಗುತ್ತದೆ. ಆಟಿಗೆಗಳ ಸೊಬಗಿಗೆ ಮರುಳಾಗಿ ಹುಡುಗರು ಆಟಕ್ಕೆ ಬಿದ್ದು ತಾಯಿ–ತಂದೆಗಳನ್ನು ಮರೆತು ಆಟದಲ್ಲಿ ಮುಣುಗಿಹೋಗುವಂತೆ, ವಿಷಯಭೋಗಗಳ ಸವಿಗೆ ಮರುಳಾಗಿ ನಾವು ಬಗೆಬಗೆಯ ಕರ್ಮಗಳನ್ನು ಮಾಡುತ್ತ ದೇವರನ್ನು ಮರೆತು ಸಂಸಾರಮಗ್ನ ರಾಗುತ್ತೇವೆ. ಇಂಥ ವಿವೇಕಭ್ರಷ್ಟರಿಗೆ ಸದ್ಗತಿಯು ಹ್ಯಾಗೆ ದೊರೆಯುವುದು ನೀನೇ ಹೇಳು. ಕೋಮಲ ಹೃದಯದ ತರುಣನೇ, ''ಅರ್ಚಕಸ್ಯ ತಪೋಬಲಂ'' ಎಂಬ ಉಕ್ತಿಯ ಅರ್ಥವನ್ನು ಮನಸ್ಸಿನಲ್ಲಿ ತಾರದೆ, ಅಂದರೆ ಪೂಜಿಸುವವನ ತಪೋಬಲದಿಂದ ಪ್ರತಿಮೆಗಳಲ್ಲಿ ದೇವತ್ವವು ಪ್ರಸ್ಥಾಪಿತವಾಗುತ್ತದೆಂಬುದನ್ನು ಅರಿಯದೆ ''ಕಲ್ಲಿನ ದೇವರು ಕಲ್ಲೇ ಅಲ್ಲದೆ ದೇವರಲ್ಲ'' ಎಂದು ಆವೇಶದ ಭರದಲ್ಲಿ ತಟ್ಟನೆ ಆಡಿಬಿಟ್ಟೆ. ಇಂಥ ಅನುಭವವಿಲ್ಲದ ನಿನ್ನ ಕೇಳಿಕೆಯ ಹಲವು ಬಡಬಡಿಕೆಗಳನ್ನು ಕೇಳಿ ನನಗೆ ಬಹಳ ವಿಷಾದವಾಗುತ್ತದೆ. ಆ ಎಲ್ಲ ಬಡಬಡಿಕೆಗಳ ನಿವಾರಣ ಮಾಡಿ ನಿನಗೆ ಸನ್ಮಾರ್ಗ ತೋರಿಸಲಿಕ್ಕೆ ಇದು ಸಮಯವಲ್ಲ. ಹಾಗೆ ಮಾಡಿದರೆ ನಿನಗೆ ಹಿತವೂ ಆಗಲಿಕ್ಕಿಲ್ಲ. ಹಸಿವೆಯಿಲ್ಲದೆ ಹೊಟ್ಟೆಯಲ್ಲಿ ತುಂಬಿಕೊಂಡ ಅನ್ನದಿಂದ ಅಜೀರ್ಣಬಾಧೆ ಯಾಗುವಂತೆ, ಪ್ರಸಂಗವಿಲ್ಲದೆ ತಲೆಯಲ್ಲಿ ತುಂಬಿದ ಅನಂತ ಬೋಧಗಳಿಂದ ಶಿರೋವೇದನೆ ಮಾತ್ರ ಉಂಟಾಗಬಹುದು! ತರುಣವೀರಾ, ನಿನಗೆ ಒಂದು ಹಿತದ ಮಾತನ್ನು ಹೇಳುತ್ತೇನೆ, ಮರೆಯಬೇಡ. ನೀನು ಸತ್ಸಂಗ ಮಾಡು; ಅದರಿಂದ ನಿನಗೆ ಸನ್ಮಾರ್ಗವು ಗೊತ್ತಾಗುವುದು. ನೀನು ಹೊಸ ರಾಜ್ಯವನ್ನು ಸ್ಥಾಪಿಸುವ ಅವಿಚಾರಕ್ಕೆ ಸರ್ವಥಾ ಹೋಗಬೇಡ ಕಂಡೆಯಾ! ನಿಮ್ಮ ವಿಜಯನಗರದ ರಾಯರ ವಂಶದವರಾದ ಚಂದ್ರಗಿರಿಯ ಅರಸರೊಡನೆ ರಾಜನಿಷ್ಠೆಯಿಂದ ನಡೆದು ಸತ್ವವನ್ನು ಕಾಯ್ದುಕೋ. ರಾಜನಿಷ್ಠನೂ, ಆಸ್ತಿಕನೂ ಆದವನಿಗೆ ಪ್ರತಿಫಲವು ತಪ್ಪದೆಂಬ ಮಾತನ್ನು ಚೆನ್ನಾಗಿ ನೆನಪಿನಲ್ಲಿಡು. ರಾಜನಿಷ್ಠನಾಗುವುದು ಪ್ರತಿ ಒಬ್ಬನ ಕರ್ತವ್ಯವಲ್ಲದೆ, ಹೊಸ ರಾಜ್ಯವನ್ನು ಸ್ಥಾಪಿಸುವುದು ಕರ್ತವ್ಯವಲ್ಲ. ಅದು ದೇವರ ಕೆಲಸವು. ಸಾಕು, ಇದಕ್ಕಿಂತ ನಾನು ಹೆಚ್ಚಿಗೆ ಬೋಧಿಸುವದಿಲ್ಲ. ಇಗೋ, ಹಿಡಿ ಫಲ–ಮಂತ್ರಾಕ್ಷತೆಗಳನ್ನು; ಶ್ರೀ ವಿರೂಪಾಕ್ಷನ ಕೃಪೆಯಿಂದ ನಿನಗೆ ಬೇಗನೆ ಸತ್ಸಂಗವಾಗಿ ಸ್ವಾಮಿಭಕ್ತನೆಂಬ ಖ್ಯಾತಿಯನ್ನು ಪಡೆದು ನೀನು ಉತ್ಕರ್ಷವನ್ನು ಹೊಂದುವೆ; ಇದು ನನ್ನ ಪೂರ್ಣಾಶೀರ್ವಾದವು, ಎಂದು ಹೇಳಿ, ಬೊಗಸಿ ಕುಸುಮಾಕ್ಷತೆಗಳೂ, ಒಣಗಿದ ತೆಂಗಿನ ಕಾಯಿಯೂ, ಉತ್ತತ್ತಿಗಳೂ, ಬಿಲ್ವಪತ್ರಗಳೂ ಒಪ್ಪುತ್ತಿರುವ ತಬಕವನ್ನು ಮುಂದೆ ಮಾಡಿದನು. ಆಗ ಎಚ್ಚಮ್ಮನಾಯಕನು ಟೊಂಕಕ್ಕೆ ಸುತ್ತಿದ

ಸೆಲ್ಲೆಯನ್ನು ಬಿಚ್ಚಿ, ಅದರಲ್ಲಿ ವಿನಯದಿಂದ ಫಲಮಂತ್ರಾಕ್ಷತೆಗಳನ್ನು ಸ್ವೀಕರಿಸಿ, ಶ್ರೀ ವಿರೂಪಾಕ್ಷನಿಗೂ ಬ್ರಾಹ್ಮಣನಿಗೂ ಭಕ್ತಿಯಿಂದ ನಮಸ್ಕರಿಸಿದನು. ಆಮೇಲೆ ಆತನು ಖಡ್ಗವನ್ನು ಒರೆಗಾಣಿಸುತ್ತ ಈ ಫಲಮಂತ್ರಾಕ್ಷತೆಯು ತನ್ನ ಉತ್ಕರ್ಷದ ಮಂಗಲಾಚರಣವೆಂದು ನಂಬಿ ಮೋದಪಟ್ಟು ಗುಡಿಯಿಂದ ಹೊರಹೊರಟನು.

## ಭೂತಗಳ ಲೀಲೆ

ನಾಯಕನು ಫಲಮಂತ್ರಾಕ್ಷತೆಗಳನ್ನು ಸ್ವೀಕರಿಸಿ ದೇವಾಲಯದಿಂದ ಹೊರಬಿದ್ದಾಗ ತಾಸು ರಾತ್ರಿಯಾಗಿತ್ತು. ಅಂದು ಮಾಘಶುದ್ಧ ಚತುರ್ದಶಿಯು; ಹಿಟ್ಟು ಚೆಲ್ಲಿದಹಾಗೆ ಬೆಳುದಿಂಗಳು ಬಿದ್ದಿದೆ; ಗರ್ಭಗುಡಿಯೊಳಗಿನ ಕಲುಷಿತ ಹವೆಯೊಳಗಿಂದ ಹೊರಬಿದ್ದು ಬೈಲೊಳಗಿನ ಸ್ವಚ್ಛ ಹವೆಯಲ್ಲಿ ಬಂದದ್ದರಿಂದ ನಾಯಕನಿಗೆ ವಿಶ್ರಾಂತಿಯು ದೊರೆಯಹತ್ತಿದೆ; ಸೇವಕನು ಗೋಪುರದ ಬಾಗಿಲಲ್ಲಿ ಕುದುರೆಯನ್ನು ಹಿಡಕೊಂಡು ತನ್ನ ಒಡೆಯನ ಪಾದರಕ್ಷೆಗಳನ್ನು ಬೆನ್ನಿಗೆ ಕಟ್ಟಿಕೊಂಡು ಅವನ ಹಾದಿಯನ್ನು ನೋಡುತ್ತ ನಿಂತುಕೊಂಡಿದ್ದಾನೆ; ಕುದುರೆಯು ನಿಂತುನಿಂತು ಬೇಸತ್ತು ಕಾಲುಗಳನ್ನು ಎತ್ತಿ ಎತ್ತಿ ಇತ್ತ ಬಾಲವನ್ನು ಜಾಡಿಸುತ್ತ ಕಡಿವಾಣವನ್ನು ಕಡಿಯುತ್ತ ಆಗಾಗ್ಗೆ ಗೋಣು ಕೊಡವತೊಡಗಿದೆ; ನಾಯಕನ ರೀತಿಯನ್ನು ನೋಡಿ ಬೆರಗಾಗಿದ್ದ ಜನರು ಇನ್ನೊಮ್ಮೆ ಆತನನ್ನು ಯಾವಾಗ ನೋಡೇವೆಂಬ ಲವಲವಿಕೆಯಿಂದ ಕುದುರೆಯ ಸುತ್ತುಮುತ್ತು ನೆರೆದು ಗುಡಿಯ ಕಡೆಗೆ ನೋಡಿನೋಡಿ ಬೇಸರಿಯಹತ್ತಿದ್ದಾರೆ; ನಾಯಕನ ವೃತ್ತಾಂತವನ್ನು ಆತನ ಸೇವಕನು ಉಪ್ಪು-ಕಾರ ಹಚ್ಚಿ ಹೇಳುತ್ತಿದ್ದದ್ದರಿಂದ ಜನರ ದರ್ಶನಾಪೇಕ್ಷೆಯು ಮತ್ತಿಷ್ಟು ಹೆಚ್ಚಾಗುತ್ತಲಿದೆ; ಹೀಗಿರಲು, ಮರ್ಯಾದಾರ್ಥವಾಗಿ ಹಿಂಬಾಲಿಸಿರುವ ಬ್ರಾಹ್ಮಣ ಪರಿವಾರ ದೊಡನೆ ನಾಯಕನು ಕುದುರೆಯ ಬಳಿಗೆ ಬಂದನು. ಆತನು ಬ್ರಾಹ್ಮಣರನ್ನು ವಿನಯದಿಂದ ನಮಸ್ಕರಿಸಿ, ಸೇವಕನು ಬಿದರುತ್ತ ಇಟ್ಟ ಪಾದರಕ್ಷೆಗಳನ್ನು ಮೆಟ್ಟಿ, ಕುದುರೆಯನ್ನು ಚಪ್ಪರಿಸಿ ಗಾಂಭೀರ್ಯದಿಂದ ಹತ್ತಿ ಕುಳಿತುಕೊಂಡನು. ನಾಯಕನ ಔದಾರ್ಯದಿಂದ ಸಂತುಷ್ಟವಾಗಿದ್ದ ಬ್ರಾಹ್ಮಣ ವೃಂದವು ಆಶೀರ್ವದಿಸುತ್ತಿರಲು, ಸುತ್ತುಗಟ್ಟಿದ ಜನರು ಎವೆಯಿಕ್ಕದೆ ನೋಡುತ್ತಿರಲು, ನಾಯಕನು ವಿನಯದಿಂದ ತಲೆಬಾಗಿ ಬ್ರಾಹ್ಮಣರ ಅನುಜ್ಞೆಯನ್ನು ಪಡೆದು, ನಿಂತವರನ್ನು ಆದರದಿಂದ ನೋಡುತ್ತ ಕುದುರೆಯನ್ನು ತಿರುಗಿಸಿದನು. ನಿಂತುನಿಂತು ಬೇಸತ್ತಿದ್ದ ಕುದುರೆಯು ಒತ್ತರದಿಂದ ನಡೆಯಹತ್ತಿತು. ಸೇವಕನು ಕುದುರೆಯ ಮುಂದೆ ಓಡಹತ್ತಿದನು. ನೋಡನೋಡುತ್ತ ನಾಯಕನು ಕಾಣದಹಾಗಾಗಲು, ಕ್ಷೇತ್ರಸ್ಥ ಜನರು ಆತನನ್ನು ಬಗೆಬಗೆಯಾಗಿ ಬಣ್ಣಿಸುತ್ತ ತಮ್ಮ ತಮ್ಮ ಮನೆಗಳಿಗೆ ತೆರಳಿದರು. ಇತ್ತ ನಾಯಕನ ಕುದುರೆಯು ಮೊದಲೇಗೊತ್ತಾಗಿದ್ದಂತೆ ಸೇವಕನನ್ನು ಹಿಂಬಾಲಿಸಿ ತುಂಗಭದ್ರೆಯನ್ನು ದಾಟಿ ಆದಿ ಪಂಪಾಕ್ಷೇತ್ರಕ್ಕೆ ತಲುಪಿತು.

ನಾಯಕನು ಭಾವಿಕನು. ಆತನು ಶ್ರೀಮದ್ರಾಮಾಯಣದಲ್ಲಿ ವರ್ಣಿಸಲ್ಪಟ್ಟಿರುವ ಪಂಪಾಸರೋವರದ ವೃತ್ತಾಂತವನ್ನು ಕೇಳಿದವನಾದ್ದರಿಂದ ಅದನ್ನು ಪ್ರತ್ಯಕ್ಷ ನೋಡಲು ಆತುರಪಡುತ್ತಿದ್ದನು; ಆದರೆ ಶ್ರೀ ವಿರೂಪಾಕ್ಷನ ದೇವಾಲಯದಲ್ಲಿ ಬ್ರಾಹ್ಮಣರು ತನ್ನನ್ನು ಚಂಚಲವೃತ್ತಿಯವನೆಂದು ಸ್ಪಷ್ಟವಾಗಿ ತಿರಸ್ಕರಿಸಿದ್ದು ಮನಸ್ಸಿನಲ್ಲಿ ಕಟಿಯುತ್ತಿದ್ದದ್ದರಿಂದ ಆತನು ಬಗೆಬಗೆಯ ಆಲೋಚನೆಗಳಿಗೆ ಒಳಗಾಗಿ ಕುದುರೆಯ ಮೇಲೆ ಸುಮ್ಮನೆ ಕುಳಿತಿದ್ದನು. ಆತನು ಎಡಕ್ಕೆ ನೋಡಲಿಲ್ಲ–ಬಲಕ್ಕೆ ನೋಡಲಿಲ್ಲ; ಕುದುರೆಯ ಕಡಿವಾಣವನ್ನು ಬಿಗಿದು ಹಿಡಿಯಲಿಲ್ಲ–ಸಡಿಲು ಬಿಡಲಿಲ್ಲ; ಕೇವಲ ಪರಾಧೀನನಂತೆ ಸಾಗಿದ್ದನು. ಕುದುರೆಯು ಸರೋವರದ ತೀರವನ್ನು ಹೊಂದಲು, ಸೇವಕನು ಕಡಿವಾಣವನ್ನು ಹಿಡಿದು ಅದನ್ನು ನಿಲ್ಲಿಸಿದನು. ಆಗ ನಾಯಕನು ಎಚ್ಚತ್ತು ನಾಲ್ಕೂ ಕಡೆಗೆ ತನ್ನ ವಿಶಾಲವಾದ ನೇತ್ರಗಳನ್ನು ಹೊರಳಿಸಿ ನೋಡಹತ್ತಿದನು. ಸರೋವರಕ್ಕೆ ಸಮೀಪವಾಗಿ ವಾಲಿಯ ರಾಜಧಾನಿಯಾದ ಕಿಷ್ಕಿಂಧೆಯು ಇದ್ದ ಬೆಟ್ಟದ ಸಾಲು ಒಪ್ಪುತಿತ್ತು, ಇತ್ತ ಸರೋವರದ ತೀರದಲ್ಲಿ ಒಂದು ಚಿಕ್ಕ ದೇವಾಲಯವು ಇತ್ತು. ಪಂಪಾಸರೋವರವೂ, ಅದರ ನೆರೆಯಲ್ಲಿರುವ ಮಾನಸಸರೋವರವೂ ಅಷ್ಟು ದೊಡ್ಡವಲ್ಲದಿದ್ದರೂ ಅವುಗಳ ಪುರಾತನತ್ವವನ್ನೂ, ಅವುಗಳ ತೀರದಲ್ಲಿ ವರ್ತಿಸಿದ ಮನೋಹರ ಸಂಗತಿಗಳನ್ನೂ ನೆನಿಸಿ ನಾಯಕನ ಅಂತಃಕರುಣವು ಭಕ್ತಿರಸಪೂರ್ಣವಾಯಿತು. ಆತನು ಕುದುರೆಯನ್ನು ಸೇವಕನ ಕೈಯಲ್ಲಿ ಕೊಟ್ಟು, ಸರೋವರದ ಪಾವಟಿಗೆಗಳನ್ನು ಇಳಿದನು. ಫಲಮಂತ್ರಾಕ್ಷತೆ ಕಟ್ಟಿದ ಶಾಲನ್ನು ನೆಲದಮೇಲೆ ಇಡಲಾರದೆ ಆತನು ಅವನ್ನು ಕರವಸ್ತ್ರದಲ್ಲಿ ಕಟ್ಟಿ, ಗಂಟನ್ನು ಬಳಿಯಲ್ಲಿಯ ಗಿಡದ ಕೊಂಬೆಗೆ ತೂಗುಹಾಕಿ ಸರೋವರದಲ್ಲಿ ಕೈಕಾಲುಗಳನ್ನು ತೊಳಕೊಂಡನು. ಸರೋವರದ ಪಾವಟಿಗೆಗಳು ವಿಶಾಲ, ನೀರು ಸ್ವಚ್ಛ, ನೀರಲ್ಲಿ ಪ್ರತಿಬಿಂಬಿಸಿದ ನಕ್ಷತ್ರಗಳೂ–ಚಂದ್ರಮಂಡಲವೂ ಮಂದವಾದ ತೆರೆಗಳ ಯೋಗದಿಂದ ಸಾವಕಾಶವಾಗಿ ಅಲ್ಲಾಡುತ್ತಿದ್ದವು. ಸರೋವರದ ನೆರೆಯ ಪ್ರದೇಶದಲ್ಲಿಯೂ, ದಂಡೆಯ ಮೇಲಿನ ದೇವಾಲಯ ದಲ್ಲಿಯೂ ಸಂಪೂರ್ಣ ಶಾಂತತೆಯು ಒಪ್ಪುತ್ತಿತ್ತು, ಜನರ ಸುಳವು ಇಲ್ಲದ್ದರಿಂದ ಎಂಥ ಉಲ್ಲಾಸವೃತ್ತಿಯ ಮನುಷ್ಯನಿಗಾದರೂ ಔದಾಸೀನ್ಯಭಾವವು ಉತ್ಪನ್ನವಾಗದೆ ಇರುತ್ತಿದ್ದಿಲ್ಲ. ಧೈರ್ಯವಿಲ್ಲದವರಂತೂ ರಾತ್ರಿ ಆ ಸ್ಥಳಕ್ಕೆ ಹೋಗುವುದು ಅಶಕ್ಯವಾಗಿತ್ತು, ಆ ಸ್ಥಳವನ್ನು ನೋಡಿ ನಾಯಕನ ಮನಸ್ಸಾದರೂ ಅಷ್ಟು ರಮಿಸಲಿಲ್ಲ. ಆತನು ಕೈಕಾಲುಗಳನ್ನು ತೊಳಕೊಂಡು ದೇವಾಲಯವನ್ನು ಹೊಕ್ಕನು. ಅಲ್ಲಿ ಒಂದು ದೀಪವು ಮಿಣುಗುಟ್ಟುತ್ತಿತ್ತು, ನಿರ್ಮಾನುಷವಾದ ಅರಣ್ಯದೊಳಗಿನ ಆ ಕತ್ತಲೆಯ ಗುಡಿಯಲ್ಲಿ ಮಿಣುಗುಟ್ಟುವ ದೀಪವು ಭಯಪ್ರದವಾಗುವು ದೆಂಬುದು ಅನುಭವವಿದ್ದವರಿಗೆ ಗೊತ್ತಾಗದೆಯಿರಲಿಕ್ಕಿಲ್ಲ. ದಿಟ್ಟನಾದ ನಾಯಕನು ದೇವರ ದರ್ಶನವನ್ನು ತಕ್ಕೊಂಡು ಭಕ್ತಿಯಿಂದ ನಮಸ್ಕರಿಸಿ ಹಾಗೇ ಹೊರಗೆ ಬಂದು ಲಗುಬಗೆಯಿಂದ ಕುದುರೆಯನ್ನು ಹತ್ತಿ ತನ್ನ ಬಿಡಾರದ ಕಡೆಗೆ ಸಾಗಿದನು. ಬಿಡಾರವು ಆನೆಗುಂದಿಯ ನೆರೆಯಲ್ಲಿ ತುಂಗಭದ್ರೆಯ ದಂಡೆಯಲ್ಲಿತ್ತು, ನಾಯಕನು ಗುಡಿಯಲ್ಲಿದ್ದಾಗ ಜನರ ಕಾಲಸಪ್ಪಳ ವಾದಂತೆಯೂ, ವಿಚಿತ್ರ ಧ್ವನಿಯಿಂದ ಯಾರೋ ಗುಣುಗುಟ್ಟುತ್ತಿರುವಂತೆಯೂ ಭಾಸ ವಾಯಿತು; ಆದರೆ ಭಾವಿಕನಾದ ನಾಯಕನು ಯಾವ ಕಾರಣದಿಂದಲೋ, ಹೆಚ್ಚಿನ ಶೋಧದ

ಗೊಡವೆಗೆ ಹೋಗಲಿಲ್ಲ. ಪಂಪಾಸರೋವರದ ನೆರೆಯ ಪ್ರದೇಶದಲ್ಲಿ ಸಿದ್ಧರು ವಾಸಿಸುವರಲ್ಲದೆ, ಆ ನಿರ್ಮಾನುಷ ಪ್ರದೇಶವು ಪಿಶಾಚಿಗಳ ವಾಸಸ್ಥಳವಾದ್ದರಿಂದ ಅದು ರಾತ್ರಿಯ ಸಂಚಾರಕ್ಕೆ ಅಯೋಗ್ಯವಾದದ್ದೆಂಬ ಜನವಾರ್ತೆಯನ್ನು ಆತನು ಕೇಳಿದ್ದನು.

ನಾಯಕನು ಬಿಡಾರವನ್ನು ಹೊಕ್ಕಾಗ ಮೂರು ತಾಸು ರಾತ್ರಿಯಾಗಿತ್ತು. ಆತನು ನಿಯಮಿತ ಪರಿವಾರದೊಡನೆ ಬಂದಿದ್ದನೆಂದು ಮೇಲೆ ಹೇಳಿದೆಯಷ್ಟೇ? ಆತನ ಸಂಗಡ ಶೂರರಾದ ಇಪ್ಪತ್ತು ಜನ ಕುದುರೆಯ ಸವಾರರೂ, ಐದು ಆನೆಗಳೂ, ನೂರಾರು ಜನ ಕಾಲಾಳುಗಳೂ ಈ ಎಲ್ಲ ಪರಿವಾರಕ್ಕೆ ತಕ್ಕಷ್ಟು ಆಳುಹೋಳುಗಳೂ ಇದ್ದವು. ನಾಲ್ಕು ತಾಸು ರಾತ್ರಿಗೆ ನಾಯಕನ ಊಟ– ಉಪಚಾರಗಳಾಗಿ ಆತನು ತನ್ನ ರಾಹುಟಿಯಲ್ಲಿ ಮಲಗಿಕೊಂಡನು. ಚಿತ್ತಕ್ಷಾದ ಅಸ್ವಸ್ಥ್ಯದಿಂದ ಗಾಢವಾದ ನಿದ್ರೆಯು ಹತ್ತಲಿಲ್ಲ. ಆತನಿಗೆ ಒಂದರಹಿಂದೊಂದು ಕನಸುಗಳು ಬೀಳಹತ್ತಿದವು. ಐದು ತಾಸು ರಾತ್ರಿಯ ಸುಮಾರಕ್ಕೆ ಕನಸಿನಲ್ಲಿ ಆತನು ವಿರೂಪಾಕ್ಷನ ದೇವಾಲಯಕ್ಕೆ ಹೋದಂತಾಗಿ, ಅಲ್ಲಿ ಬ್ರಾಹ್ಮಣನು ಕೊಟ್ಟಿದ್ದ ಫಲಮಂತ್ರಾಕ್ಷತೆಗಳನ್ನು ಹಾದಿಯಲ್ಲಿ ಯಾರೋ ಕಸಿದು ಕೊಂಡಂತಾಯಿತು. ಕೂಡಲೆ ಭಾವಿಕನಾದ ನಾಯಕನು ಗಾಬರಿಯಾಗಿ ಹಾಸಿಗೆಯ ಮೇಲೆ ಎದ್ದು ಕುಳಿತುಕೊಂಡನು. ಆತನು ತನಗೆ ಬಿದ್ದಿದ್ದ ಸ್ವಪ್ನಗಳನ್ನು ನೆನಪು ಮಾಡಿಕೊಳ್ಳುತ್ತಿರುವಾಗ ತಾನು ಪಂಪಾ ಸರೋವರದ ದಂಡೆಯಮೇಲಿನ ಗಿಡದ ಟೊಂಗೆಗೆ ಫಲಮಂತ್ರಾಕ್ಷತೆಗಳ ಗಂಟು ತೂಗುಹಾಕಿ ಮರೆತು ಬಂದದ್ದು ನೆನಪಾಯಿತು. ಆಗ ನಾಯಕನ ಮನಸ್ಸಿನಲ್ಲುಂಟಾದ ಅಸಮಾಧಾನವನ್ನು, ಅವನಷ್ಟು ಭಾವಿಕರಾದವರು ಮಾತ್ರ ತರ್ಕಿಸಬಹುದು. ಫಲಮಂತ್ರಾಕ್ಷತೆಗಳು ಹೋದದ್ದು ಅಶುಭವೆಂದು ನಾಯಕನು ಭಾವಿಸಿದನು. ನಿದ್ರೆಯು ಹಾರಿ ಅವನ ಕಣ್ಣುಗಳು ನಿಚ್ಚಳವಾದವು. ಅಪಶಕುನದ ದುಷ್ಪರಿಣಾಮದ ಕಲ್ಪನೆಗಳು ಮನಸ್ಸಿನಲ್ಲಿ ಒಂದೊಂದಾಗಿ ಹೊಳೆದು ಅದು ತಲ್ಲಣಿಸಹತ್ತಿತು ತಂದೆಯ ವ್ರತವನ್ನು ಕೈಕೊಳ್ಳುವುದಕ್ಕಾಗಿ ಬಂದಿದ್ದ ತರುಣ ನಾಯಕನಿಗೆ, ಫಲಮಂತ್ರಾಕ್ಷತೆಗಳು ಹೋದದ್ದು ಮೊದಲ ತುತ್ತಿಗೇ ನೊಣ ತಿಂದಂತಾಯಿತು. ಮನೋ ರಾಜ್ಯಕ್ಕಿಂತ ಕಾರ್ಯದಲ್ಲಿ ಪ್ರತ್ಯಕ್ಷ ಪ್ರವೇಶಿಸುವುದು ಕಠಿಣವೆಂಬ ಮಾತಿನ ಅನುಭವವು ಆತನಿಗೆ ಮೆಲ್ಲಮೆಲ್ಲನೆ ಬರತೊಡಗಿತು. ನಾಯಕನು ತಟ್ಟನೆ ಹಾಸಿಗೆ ಯಿಂದೆದ್ದು, ಸೇವಕನನ್ನು ಎಬ್ಬಿಸಿ ಕುದುರೆಗೆ ಜೀನು ಹಾಕೆಂದು ಹೇಳಿ ತಾನು ಕವಚ ಶಿರಸ್ತ್ರಾಣಗಳನ್ನು ಹಾಕಿಕೊಳ್ಳಹತ್ತಿದನು.

ಗಾಢವಾದ ನಿದ್ರೆಯಿಂದ ಎಚ್ಚರಿಸಲ್ಪಟ್ಟವನಾದ ಸೇವಕನು ಒಡ್ಡು ಮುರಿದು ಆಕಳಿಸುತ್ತ ಕಣ್ಣುಗಳನ್ನು ತಿಕ್ಕಿಕೊಳ್ಳುತ್ತ ತತ್ತರಿಸುತ್ತ ಕುದುರೆಗೆ ಜೀನುಹಾಕಿ ರಾಹುಟಿಯ ಬಾಗಿಲಿಗೆ ತಂದು ನಿಲ್ಲಿಸಿದನು. ಅಷ್ಟರಲ್ಲಿ ಎಚ್ಚಮನಾಯಕನು ಯುದ್ಧದ ಉಡಿಗೆ–ತೊಡಿಗೆಗಳನ್ನು ಧರಿಸಿ, ಶಸ್ತ್ರಾಸ್ತ್ರಗಳಿಂದ ಸಜ್ಜಾಗಿ ಬಂದು ಕುದುರೆಯನ್ನು ಹತ್ತಿದನು. ಸೇವಕನು ನೆಲಮುಟ್ಟಿ ನಮಿಸಿ ''ದೊರೆಗಳ ಪಯಣವೆತ್ತ'' ಎಂದು ಕೇಳಿಕೊಳ್ಳಲು, ''ಆದಿಪಂಪಾಕ್ಷೇತ್ರಕ್ಕೆ'' ಎಂದು ನಾಯಕನು ಉತ್ತರಕೊಟ್ಟನು. ಕೂಡಲೆ ಸೇವಕನು ಹಾದಿಯ ಹಿಡಿದು ಓಡಹತ್ತಲು, ಕುದುರೆಯೂ ಅವನನ್ನು ಹಿಂಬಾಲಿಸಿ ಒತ್ತರದಿಂದ ಸಾಗಿತು. ಯಾವಾಗ ಪಂಪಾಸರೋವರಕ್ಕೆ

ತಲುಪಿ ಫಲಮಂತ್ರಾಕ್ಷೆಯ ಗಂಟನ್ನು ನೋಡೇನೆಂಬ ಲವಲವಿಕೆಯಲ್ಲಿ ಸಾಗಿರಲು, ಬೆಳುದಿಂಗಳಲ್ಲಿ ಪಂಪಾಸರೋವರವು ಕಾಣಿಸಹತ್ತಿತು. ನಾಯಕನು ಸರೋವರದ ಸಮೀಪಕ್ಕೆ ಹೋದಹೋದಂತೆ ಅವನ ಚಿತ್ತವು ಹೆಚ್ಚು ಹೆಚ್ಚು ಅಸ್ವಸ್ಥವಾಗುತ್ತ ಹೋಯಿತು. ತಾನು ತೂಗುಹಾಕಿದಲ್ಲಿ ಗಂಟು ಇರುವುದೋ, ಅದನ್ನು ಯಾರಾದರೂ ಒಯ್ದಿರುವರೋ, ಜಾರಿ ಗಂಟು ಸರೋವರದಲ್ಲಿ ಬಿದ್ದಿರುವುದೋ? ಹಾಯ್ ಹಾಯ್ ಪಂಪಾಪತಿಯೇ, ಎಂಥ ಪ್ರಮಾದವಾಯಿತಲ್ಲ, ಎಂದು ಚಿಂತಿಸಹತ್ತಿದನು. ಕುದುರೆಯು ಸರೋವರದ ದಂಡೆಯನ್ನು ತಲುಪಿದ ಕೂಡಲೆ ನಾಯಕನು ಚಟ್ಟನೆ ಹಾರಿ, ಆತುರದಿಂದ ಗಿಡದ ಕೊಂಬೆಗೆ ಕೈನೀಡಿದನು; ಆದರೆ ಅಲ್ಲಿ ಫಲಮಂತ್ರಾಕ್ಷತೆಯ ಗಂಟು ಇದ್ದಿಲ್ಲ, ಕೂಡಲೆ ನಾಯಕನ ಎದೆಯು ದಸ್ಸೆಂದಿತು; ಮೋರೆಯು ಬಾಡಿತು; ಕಣ್ಣಿಗೆ ಕತ್ತಲೆಯು ಮುಸುಕಿದಂತಾಯಿತು. ನಾಯಕನು ಆ ಕೊಂಬೆಯನ್ನು –ಈ ಕೊಂಬೆಯನ್ನು, ಆ ಗಿಡವನ್ನು– ಈ ಗಿಡವನ್ನು ನೋಡಿ ನೋಡಿ ಬೇಸತ್ತು ಉಸುರ್ಗರೆದು ಸರೋವರದ ಪಾವಟಿಗೆಯ ಮೇಲೆ ಯೋಚಿಸುತ್ತ ಕುಳಿತು ಕೊಂಡನು. ತಾನು ಗಂಟನ್ನು ಮರೆತುಹೋದದ್ದು ನಿಶ್ಚಯವೆಂದು ಮನಸ್ಸಿಗೆ ಹೊಳೆಯುತ್ತಿದ್ದರೂ, ಅದನ್ನು ತನ್ನ ರಾಹುಟಿಗೆ ಒಯ್ದು ಇಟ್ಟಿರಬಹುದೋ, ಎಂದು ಆತನು ಶಂಕಿಸಹತ್ತಿದನು. ಬರಬರುತ್ತ ಅವನ ಸಂಶಯವು ಸಂಭವನೀಯವಾಗಿ ತೋರಹತ್ತಿತ್ತು, ಬರುವಾಗ ರಾಹುಟಿಯಲ್ಲಿ ಹುಡುಕದೆ ಬಂದದ್ದಕ್ಕಾಗಿ ಆತನು ತನ್ನನ್ನು ಹಳಿದುಕೊಂಡನು. ಗಂಟು ಸರೋವರದಲ್ಲಿ ಬಿದ್ದಿರ ಬಹುದೆಂದು ಭಾವಿಸಿ ಒಂದೆರಡು ಪಾವಟಿಗೆಗಳನ್ನು ನೀರಲ್ಲಿ ಇಳಿದು ಕೈಯಾಡಿಸಿ ನೋಡಿದನು; ಆದರೆ ಗಂಟು ಕೈಗೆ ಹತ್ತಲಿಲ್ಲ, ಮತ್ತೆ ಅವನ ಮನಸ್ಸು ರಾಹುಟಿಯ ಕಡೆಗೆ ತಿರುಗಿತು ತಾನು ರಾಹುಟಿಯಲ್ಲಿಯೇ ಮರೆತು ಬಂದಿರಬಹುದೆಂದು ನಿಶ್ಚಯಿಸಿ ನೋಡಿಬರಲಿಕ್ಕೆ ಸೇವಕನನ್ನು ರಾಹುಟಿಗೆ ಕಳಿಸಬೇಕೆಂದು ಮಾಡಿದನು. ರಾಹುಟಿಯಲ್ಲಿ ಇಲ್ಲದಿದ್ದರೆ ವಿಶ್ವಪ್ರಯತ್ನ ಮಾಡಿ ಗಂಟನ್ನು ಹುಡುಕಿಕೊಂಡೇ ಹೋಗಬೇಕೆಂದು ಆತನು ನಿಶ್ಚಯಿಸಿ ಸೇವಕನನ್ನು ಕರೆದು—''ತಿರುವೇಂಕಟಾ, ಹೋಗು, ರಾಹುಟಿಗೆ ಹೋಗಿ ಫಲ ಮಂತ್ರಾಕ್ಷತೆಯ ಗಂಟನ್ನು ಹುಡುಕಿ ಬಾ, ನೀನು ಬರುವ ತನಕ ನಾನು ಇಲ್ಲಿಯೇ ಇರುತ್ತೇನೆ; ಏಳು ಕುದುರೆಯನ್ನು ಹತ್ತು'' ಎಂದು ಹೇಳಿದನು. ಕಟ್ಟಡವಿಯಲ್ಲಿ ಒಡೆಯನೊಬ್ಬನನ್ನೇ ಬಿಟ್ಟು ಹೋಗಲಿಕ್ಕೆ ಸ್ವಾಮಿಭಕ್ತನಾದ ತಿರುವೆಂಕಟನು ಆತಂಕಪಡಹತ್ತಿದನು. ಫಲಮಂತ್ರಾಕ್ಷತೆಯ ಗಂಟನ್ನು ರಾಹುಟಿಗೆ ಒಯ್ದಿಲ್ಲೆಂಬುದನ್ನೂ ಆತನು ಅರಿತಿದ್ದನು; ಆದರೆ ಮಾಡುವುದೇನು? ತರುಣನಾಯಕನ ತೇಜಸ್ವಿತೆಯ ಜಾಜ್ವಲ್ಯ ಸ್ವಭಾವದ ಮುಂದೆ ಆ ಸೇವಕನ ಹಿತವಾದದ ಪ್ರಯೋಜನವಾಗುವಂತೆಯಿದ್ದಿಲ್ಲ, ಸೇವಕರ ಮಾತಿಗೆ ಕಿವಿಗೊಡುವುದು ಅಗೌರವವೆಂಬ ದುರಭಿಮಾನದ ಭಾವನೆಯಿಂದ ನಾಯಕನು ಯಾವಾಗಲೂ ನಡೆಯುತ್ತಿದ್ದದ್ದನ್ನು ತಿರುವೆಂಕಟನು ಅರಿತಿದ್ದನು; ಆದ್ದರಿಂದ ಆತನು ಯಾವ ಮಾತನ್ನೂ ಆಡದೆ, ಕೂಡಲೆ ಕೈಜೋಡಿಸಿ ''ಬುದ್ಧೀ, ಅಪ್ಪಣೆ'' ಎಂದು ಕುದುರೆ ಯನ್ನು ಹತ್ತಿ ಓಡಿಸುತ್ತ ಬಿಡಾರದ ಕಡೆಗೆ ಸಾಗಿದನು.

ತಿರುವೆಂಕಟನು ಹೋದರೂ ನಾಯಕನ ಚಿತ್ತವು ಸ್ವಸ್ಥವಾಗಲಿಲ್ಲ, ಅದು ಚಂಚಲವಾಗಿ ಶಿವಾಲಯದ ಕಡೆಗೆ ಹರಿಯಹತ್ತಿತು. ದೇವರ ದರ್ಶನಕ್ಕೆ ಹೋಗುವಾಗ ಗಂಟನ್ನು ಸಂಗಡ

ಒಯ್ದು ಅಲ್ಲಿಯೇ ಬಿಟ್ಟೆನೋ ನೋಡಬೇಕೆಂದು ಆತನು ಮೇಲಕ್ಕೆದ್ದನು. ಈ ಮೊದಲು ಆತನು ಶಿವಾಲಯಕ್ಕೆ ಹೋಗಿ ದೇವರ ದರ್ಶನ ತಕ್ಕೊಂಡು ಹೊರಬಿದ್ದು ಬರುವಾಗ ಮನುಷ್ಯರ ಕಾಲಸಪ್ಪಳವಾದದ್ದನ್ನೂ, ವಿಚಿತ್ರ ಧ್ವನಿಯಿಂದ ಯಾರೋ ಗುಣುಗುಟ್ಟಿದ್ದನ್ನೂ ಕೇಳಿದ್ದನಷ್ಟೇ? ಇದೇ ಪ್ರಸಂಗವು ಮತ್ತೊಬ್ಬ ಅಂಜುಬುರುಕನ ಅನುಭವಕ್ಕೆ ಬಂದಿದ್ದರೆ, ಆತನು ಅಂಜಿ ಪ್ರಾಣಹೋದರೂ ಒಬ್ಬನೇ ಗುಡಿಯಲ್ಲಿ ಕಾಲು ಇಡುತ್ತಿದ್ದಿಲ್ಲ; ಭಯಂಕರವಾದ ಕಟ್ಟಡವಿಯಲ್ಲಿಯ ಆ ಸರೋವರದ ದಂಡೆಯಲ್ಲಿ ಒಬ್ಬನೇ ಕುಳಿತುಕೊಳ್ಳುವ ಸಾಹಸಕ್ಕೂ ಅವನು ಹೋಗುತ್ತಿದ್ದಿಲ್ಲ; ಆದರೆ ನಮ್ಮ ತರುಣನಾಯಕನು ಕೆಚ್ಚುಗಟ್ಟಿದ ಎದೆಯವನಾದ್ದರಿಂದ ಯಾವ ತರದ ಭಯಕ್ಕೂ ಸೊಪ್ಪು ಹಾಕಲಿಲ್ಲ. ಆತನು ತಟ್ಟನೆ ಶಿವಾಲಯಕ್ಕೆ ಹೋದನು. ಗುಡಿಯಲ್ಲಿ ಕಾಲಿಟ್ಟಕೂಡಲೆ ''ಹರಹರ ಮಹಾದೇವ''ಎಂಬ ಶಬ್ದಗಳು ಮಂಜುಲಸ್ವರದಿಂದ ಒಬ್ಬ ಸುಂದರಿಯ ಮುಖದಿಂದ ಹೊರಟಂತೆ ನಾಯಕನ ಕಿವಿಗೆ ಕೇಳಿದವು. ಆ ಮಂಜುಲಸ್ವರದಲ್ಲಿ ಆ ಪ್ರಮದೆಯ ಅಲೌಕಿಕ ಸೌಂದರ್ಯವೂ, ಮುಗ್ಧತೆಯೂ ನರ್ತಿಸುತ್ತಿರುವಂತೆ ನಾಯಕನಿಗೆ ಭಾಸವಾಯಿತು. ಇದರಿಂದ ನಮ್ಮ ತರುಣ ನಾಯಕನ ಕಿವಿಗಳು ನೆಟ್ಟಗಾಗಿ ಆತನು ಒಳಗೆ ಹೋಗಲಿಕ್ಕೆ ಆತಂಕಪಟ್ಟು, ಹಿಂದಕ್ಕೆ ಸರಿದು ಹೊರಗಿನಿಂದಲೇ ಗುಡಿಯೊಳಗೆ ನೋಡಹತ್ತಿದನು. ಗರ್ಭಾಗಾರದಲ್ಲಿ ದೀಪಜ್ಯೋತಿಗಳು ಥಾಳಾಗಿ ಉರಿಯುತ್ತಿದ್ದು ಗುಡಿಯಲ್ಲೆಲ್ಲ ಅವುಗಳ ಸ್ವಚ್ಛ ಪ್ರಕಾಶವು ಬಿದ್ದಿತ್ತು, ಅದೇ ಬೆಳಗಿ ಇಟ್ಟಿದ್ದ ಕರ್ಪುರವು ಶಿವಲಿಂಗದ ಮುಂದೆ ಸಾವಕಾಶವಾಗಿ ತಲೆಯಲ್ಲಾಡಿಸುತ್ತ ಥಾಳಾಗಿ ಉರಿಯುತ್ತಿತ್ತು. ಧೂಪದ ಸುವಾಸನೆಯು ಗುಡಿಯನ್ನು ತುಂಬಿ ಒಡಿಸದೆ ಹೊರಗೆ ನುಗ್ಗಿ ಬರುತ್ತಿತ್ತು. ಶಿವಲಿಂಗಕ್ಕೆ ಹಚ್ಚಿದ ಮೂರುಗೀರಿನ ಅರ್ಧಚಂದ್ರಾಕೃತಿಯ ಥಾಳಾದ ಬಿಳಿಯ ಗಂಧವೂ, ಆ ಗಂಧದ ಎರಡೂ ಕೋಡುಗಳಲ್ಲಿಯೂ–ಮಧ್ಯದಲ್ಲಿಯೂ ಒತ್ತಿ ಕೂಡ್ರಿಸಿದ ಶುಭ್ರಾಕ್ಷತೆಗಳೂ ಶಿವಲಿಂಗದ ತಲೆಯಮೇಲೆ ಏರಿಸಿದ ಕೋಮಲವಾದ ಬಿಲ್ವ ಪತ್ರಗಳೂ, ನಡುನಡುವೆ ಬೆಳ್ಳಗೆ ನಕ್ಷತ್ರಗಳಂತೆ ಒಪ್ಪುವ ತುಂಬಿಯ ಹೂಗಳೂ ಹೊರಗಿನಿಂದಲೇ ಮನೋಹರವಾಗಿ ಒಪ್ಪುತ್ತಿದ್ದವು. ನಾಯಕನು ಲಿಂಗಕ್ಕೆ ಭಕ್ತಿಯಿಂದ ನಮಸ್ಕರಿಸಿ ನಿರ್ಭಯದಿಂದ ಒಳಗೆ ಹೊಕ್ಕು ನಾಲ್ಕೂ ಕಡೆಗೆ ನೋಡಿದನು, ಆದರೆ ಮನುಷ್ಯರ ಸುಳುವು ಕೂಡ ಇಲ್ಲ, ಯಾರೋ ಇದೇ ಈಗ ಶಿವಲಿಂಗವನ್ನು ಪೂಜಿಸಿ ಹೋಗಿರುವಂತೆ ಎಲ್ಲ ಲಕ್ಷಣಗಳಿದ್ದವು; ಆದರೆ ಅವರು ಹೋಗುವುದೆತ್ತ? ಇದೇ ಈಗ ಒಬ್ಬ ಸ್ತ್ರೀಯು ಮಂಜುಲಸ್ವರದಿಂದ ಶಿವನಾಮ ಘೋಷ ಮಾಡಿದ್ದನ್ನು ಕೇಳಿದ ನಾಯಕನು, ಕ್ಷಣಮಾತ್ರದಲ್ಲಿ ಗುಡಿಯು ನಿರ್ಮಾನುಷವಾದದ್ದನ್ನು ನೋಡಿ ಬೆರಗಾದನು. ಇದೇನು ಭೂತಚೇಷ್ಟೆಯೋ! ಸಿದ್ಧರ ಮಹಿಮೆಯೋ! ಯಕ್ಷಗಂಧರ್ವಾದಿಗಳ ಲೀಲೆಯೋ ಎಂದು ಆತನು ಚಿಂತಿಸಿದನು. ಗುಡಿಯೇನು ಅಷ್ಟು ದೊಡ್ಡದಿದ್ದಿಲ್ಲ ಅದಕ್ಕೆ ಬಾಗಿಲು–ಬಂಕಗಳಿದ್ದಿಲ್ಲ; ಕಿಡಿಕೆ–ಕೊನ್ನಾರಗಳಿದ್ದಿಲ್ಲ ಬಾಗಿಲೆಂದರೆ ನಾಯಕನು ಒಳಗೆ ಬಂದಿದ್ದ ಬಾಗಿಲೊಂದೇ ಬಾಗಿಲು. ಈ ವಿಚಿತ್ರವನ್ನು ನೋಡಿ ನಾಯಕನು ಕುಂಠಿತನಾದನು. ಈ ಅದ್ಭುತ ಚಮತ್ಕಾರದಲ್ಲಿ ನಾಯಕನ ಫಲಮಂತ್ರಾಕ್ಷತೆಯ ವಿಷಯವು ಕ್ಷಣ ಹೊತ್ತು ಮರೆತು ಹೋಯಿತು. ಆಶ್ಚರ್ಯದ ಭರವು ಕುಗ್ಗಿದಮೇಲೆ ಮತ್ತೆ

ಅದು ನೆನಪಾಗಲು, ನಾಯಕನು ಬಿಟ್ಟದ್ದು ಬಿಟ್ಟು ಗುಡಿಯತುಂಬ ಅದನ್ನು ಹುಡುಕಿ ನಿರಾಶೆಪಟ್ಟನು. ಇನ್ನೊಮ್ಮೆ ಸರೋವರದ ತೀರದಲ್ಲಿಯೇ ನೆಟ್ಟಗೆ ಹುಡುಕಬೇಕೆಂದು ಆತನು ಸರೋವರದ ಪಾವಟಿಗೆಗಳಲ್ಲೆಲ್ಲ ಸೂಕ್ಷ್ಮದೃಷ್ಟಿಯಿಂದ ಹುಡುಕುತ್ತ ಒಂದೊಂದೇ ಪಾವಟಿಗೆಯನ್ನು ಇಳಿಯಹತ್ತಿದನು. ಗಂಟು ಎಲ್ಲಿಯೂ ಕಾಣದಾಗಲು, ಆತನು ಸರೋವರದಲ್ಲಿ ಇಳಿದು ಕಾಲು ಹತ್ತುವವರೆಗೆ ಮುಂದಕ್ಕೆ ಹೋಗಿ ಗರಬಾಡಿದನು. ನಿರಾಶೆಯ ಹೊರತು ಹೆಚ್ಚಿನ ಫಲವೇನೂ ದೊರೆಯಲಿಲ್ಲ. ಆಗ ನಾಯಕನು ಒತ್ತರದಿಂದ ಪಾವಟಿಗೆಗಳನ್ನು ಹತ್ತಿ ತಿರುವೆಂಕಟನ ಹಾದಿಯನ್ನು ನೋಡುತ್ತ, ಎಲ್ಲಿಯಾದರೂ ಹಾದಿಯಲ್ಲಿ ಗಂಟು ಬಿದ್ದಿರಬಹುದೋ ಎಂದು ಹುಡುಕುತ್ತ ಕೆಲವು ಅಂತರದವರೆಗೆ ಹೋದನು; ಆದರೆ ಗಂಟಿನ ಸುದ್ದಿಯಿಲ್ಲ. ತಾನು ಶಿವಾಲಯದ ಒಂದು ಮಾಡದಲ್ಲಿ ಗಂಟು ಇಟ್ಟು ದೇವರನ್ನು ನಮಸ್ಕರಿಸಿದಂತೆ ಅವನಿಗೆ ನೆನಪಾದದ್ದರಿಂದ ಅವನು ಸರಕ್ಕನೆ ಹಿಂದಿರುಗಿ ಮತ್ತೆ ಗುಡಿಯನ್ನು ಹೊಕ್ಕನು; ಆದರೆ ಶಿವಾಲಯದೊಳಗಿನ ಮೊದಲಿನ ಶೋಭೆಯಲ್ಲ ಮಾಯವಾಗಿ ಮೊದಲಿನಂತೆ ಮಿಣಿಗುಟ್ಟುವ ದೀಪದ ಮಂದಪ್ರಕಾಶದಲ್ಲಿ ಶಿವಲಿಂಗವು ಔದಾಸೀನ್ಯವನ್ನು ವ್ಯಕ್ತಮಾಡುತ್ತ ಮುಸಮುಸಕಾಗಿ ತೋರುತ್ತಿತ್ತು. ಧೂಪದ ಸುವಾಸನೆಯ ಹೊರತು, ಶಿವಪೂಜೆಯ ಒಂದೂ ಕುರುಹು ಕಣ್ಣಿಗೆ ಬೀಳಲಿಲ್ಲ. ನಾಯಕನು ಬೆರಗಾಗಿ ಅವಸರದಿಂದ ಗುಡಿಯ ಮಾಡಗಳನ್ನೆಲ್ಲ ಹುಡುಕಿ, ಗುಡಿಯಲ್ಲಿ ಬಹಳಹೊತ್ತು ನಿಲ್ಲಲಾರದೆ ಹೊರಗೆ ಬಂದು ಸರೋವರ ದಂಡೆಯ ಮೇಲೆ ಕುಳಿತುಕೊಂಡನು. ಬಂದ ಕೆಲಸ ವಾಗದ್ದರಿಂದ ತಳಮಳಗೊಂಡ ಆ ತರುಣನು ತಿರುವೆಂಕಟನ ಹಾದಿಯನ್ನು ನೋಡಿ ನೋಡಿ ಬೇಸತ್ತು ಒಮ್ಮೆ ವಾಲಿಯ ಗುಡ್ಡದ ಸಾಲನ್ನೂ, ಮತ್ತೊಮ್ಮೆ ಸರೋವರದ ಸುತ್ತು ಮುತ್ತಲಿನ ಪ್ರದೇಶವನ್ನೂ, ಇನ್ನೊಮ್ಮೆ ಸ್ವಚ್ಛವಾದ ಬೆಳುದಿಂಗಳಿಂದೊಪ್ಪುವ ಶಾಂತವಾದ ಆಕಾಶ ಮಂಡಲವನ್ನೂ ನಿರುತ್ಸಾಹದಿಂದ ನೋಡುತ್ತ ಕಾಲಹರಣ ಮಾಡಹತ್ತಿದನು.

ತನ್ನ ಬಿಡಾರವು ಬಹಳವಾದರೆ ಅರ್ಧತಾಸಿನ ಹಾದಿಯದಿದ್ದು, ಎರಡು ತಾಸಾದರೂ ತಿರುವೆಂಕಟನು ಬಾರದ್ದನ್ನು ನೋಡಿ ಎಚ್ಚಮ್ಮನಾಯಕನು ಚಿಂತೆಗೊಳಗಾದನು. ಇಲ್ಲದ ದುಷ್ಟ ಕಲ್ಪನೆಗಳು ಅವನ ಮನಸ್ಸಿನಲ್ಲಿ ಬರಹತ್ತಿದವು. ವಿಜಯನಗರದ ರಾಜ್ಯವು ಹಾಳಾದಂದಿನಿಂದ ಕರ್ನಾಟಕದಲ್ಲಿ ಅರಾಜಕತ್ವವು ಉಂಟಾಗಿ ಬಲಿಷ್ಠರು ದುರ್ಬಲರ ಸೊತ್ತನ್ನು ಗುದ್ದಿ ಕಸಕೊಳ್ಳುವ ಕಾಯಕವು ಎಲ್ಲ ಕಡೆಯಲ್ಲಿ ನಡೆದಿತ್ತು; ಮರೆಮೋಸಗಳಿಗೂ, ವಿಶ್ವಾಸಘಾತದ ಕೊಲೆಗಳಿಗೂ ನೆಲೆಯಿದ್ದಿಲ್ಲ. ಮುಸಲ್ಮಾನ ಬಾದಶಹರು ವಿಜಯನಗರದ ಅರಸರ ವಂಶವನ್ನು ಸಮೂಲವಾಗಿ ಕಿತ್ತು ಒಗೆಯಲಿಕ್ಕೆ ಯತ್ನಿಸುತ್ತಿದ್ದರು. ಆ ಬಾದಶಹರ ಯತ್ನ-ಪ್ರಯತ್ನಗಳಿಗೆ ಸ್ವಾರ್ಥಪರರಾದ ಎಷ್ಟೋ ಹಿಂದೂ ಅರಸರೂ, ದೊಡ್ಡ ದೊಡ್ಡ ಸರದಾರರೂ ಅನುಕೂಲರಾಗಿದ್ದರು. ಅವರ ಅನುಕೂಲ್ಯದಿಂದ ಮುಸಲ್ಮಾನರ ಬಯಕೆಗಳು ದಿನದಿನಕ್ಕೆ ಹೆಚ್ಚು ಹೆಚ್ಚು ಪ್ರಮಾಣದಿಂದ ಕೈಗೂಡಹತ್ತಿದವು. ಇದನ್ನೆಲ್ಲ ಅರಿತಿದ್ದ ನಾಯಕನು, ಈ ದಿನ ಯಾವನೊಬ್ಬ ಮುಸಲ್ಮಾನ ಸರದಾರನ, ಇಲ್ಲವೆ ಹಿಂದೂ ಮಾಂಡಲಿಕನ ವಿಶ್ವಾಸಘಾತದಿಂದ ತನ್ನ ಪರಿವಾರಕ್ಕೆ ಏನಾದರೂ

ಅಪಾಯ ಒದಗಿರಬಹುದೆಂದು ಚಿಂತಿಸಿದ್ದು ಆಶ್ಚರ್ಯವಲ್ಲ. ಇನ್ನು ಮೇಲೆ ಒದಗಬೇಕಾಗಿರುವ ಅನರ್ಥ ಪರಂಪರೆಗಳ ಪ್ರಥಮ ಸೂಚನೆಗಾಗಿ ಫಲಮಂತ್ರಾಕ್ಷತೆಗಳು ಕೈಬಿಟ್ಟದ್ದನ್ನು ಸ್ಮರಿಸಿ, ಆ ಭಾವಿಕನು ಬಹಳವಾಗಿ ನೊಂದುಕೊಂಡನು. ಆತನಿಗೆ ಪಂಪಾಸರೋವರದ ದಂಡೆಯಲ್ಲಿ ಕುಳಿತುಕೊಳ್ಳಲಿಕ್ಕೂ ಮನಸ್ಸಾಗಲೊಲ್ಲದು, ತನ್ನ ಬಿಡಾರಕ್ಕೆ ಹೋಗಲಿಕ್ಕೂ ಮನಸ್ಸಾಗಲೊಲ್ಲದು. ಆತನು ಭ್ರಮಿಷ್ಟನಂತೆ ನಿಂತಲ್ಲಿ ನಿಂತುಬಿಟ್ಟನು. ನಮಾಜು ಮಾಡುವಲ್ಲಿ ಮಸೂತಿ ಕೊರಳಿಗೆ ಬಿತ್ತೆನ್ನುವಂತೆ, ತಂದೆಯ ವ್ರತವನ್ನು ಕೈಕೊಳ್ಳುವುದಕ್ಕಾಗಿ ಬಂದ ತಾನು, ಸ್ವಜನಘಾತನ ದೋಷಕ್ಕೆ ಪಾತ್ರನಾಗುವ ಪ್ರಸಂಗ ಬಂತೆಂದು ಅಸಮಾಧಾನಪಟ್ಟನು. ನಾಯಕನು ಹೀಗೆ ಅಸಮಾಧಾನ ದಿಂದ ಎದುರಿನ ಪರ್ವತದ ಸಾಲಿನ ಕಡೆಗೆ ನೋಡುತ್ತಿರಲು, ಯಾರೋ ಇಬ್ಬರು ಪರ್ವತದ ಕಡೆಗೆ ಹೋಗುತ್ತಿರುವಂತೆ ಬೆಳುದಿಂಗಳಲ್ಲಿ ಸ್ಪಷ್ಟವಾಗಿ ಕಾಣಹತ್ತಿತು. ನೋಡನೋಡುತ್ತ ಆ ಇಬ್ಬರು ಗುಪ್ತರಾಗಿ ದೊಡ್ಡ ಉರಿಯು ಎದ್ದಂತೆ ತೋರಿತು. ಸ್ವಲ್ಪ ಹೊತ್ತಿನಲ್ಲಿ ಆ ಉರಿಯೂ ಕಾಣದಂತಾಗಿ ಶುಭ್ರವಸ್ತ್ರವನ್ನುಟ್ಟುಕೊಂಡ ಒಬ್ಬ ಸ್ತ್ರೀಯು ಹೋಗುತ್ತಿರುವಂತೆ ಕಂಡಿತು. ಮುಂದೆ ಸ್ವಲ್ಪಹೊತ್ತಿನಲ್ಲಿ ಆ ಸ್ತ್ರೀಯೂ ಕಾಣದಾದಳು. ಕೆಲಹೊತ್ತಿನಲ್ಲಿ ಮತ್ತೆ ಇಬ್ಬರು ಹೋಗುತ್ತಿರುವಂತೆ ತೋರಿ, ಅವರು ಪರ್ವತದ ಅಡಿಯಲ್ಲಿ ಒಮ್ಮಿಂದೊಮ್ಮೆ ಗುಪ್ತರಾದವರು ತಿರುಗಿ ಕಾಣಲೇ ಇಲ್ಲ!

ನಾಯಕನು ಕೆಚ್ಚೆದೆಯವನೆಂದು ಮೇಲೆ ಹೇಳಿದೆಯಷ್ಟೇ. ಎಷ್ಟಾದರೂ ಆತನು ಹಿಂದುವಾದ್ದರಿಂದ ಭೂತ–ಪಿಶಾಚಿಗಳ ಭಯವು ಸ್ವಲ್ಪಮಟ್ಟಿಗೆ ಆಗಲೊಲ್ಲದೇಕೆ, ಆತನನ್ನು ಬಾಧಿಸದೆ ಬಿಡಲಿಲ್ಲ. ತನ್ನ ಕಣ್ಣೆದುರಿಗೆ ಆದ ಈ ಚಮತ್ಕಾರವು ಪಿಶಾಚಗಳದೇ ಎಂದು ಆತನು ಭಾವಿಸಿದನು; ಆದರೆ ಅಳ್ಳೆದೆಯವರಂತೆ ಆತನು ಅಂಜಿ ಕೈಕಾಲು ಬಿಡಲಿಲ್ಲ. ಕ್ಷಣಮಾತ್ರದಲ್ಲಿ ಅವನ ಭಯದ ಭಾವನೆಯು ದೂರವಾಗಿ, ಈ ಪಿಶಾಚಗಳಿಂದ ತನಗೆ ಆಗುವುದೇನೆಂಬ ಧೈರ್ಯದಿಂದ ಆ ವೀರನು ಖಡ್ಗಪಾಣಿಯಾಗಿ ಪರ್ವತದ ಕಡೆಗೆ ಸಾಗಿದನು. ಅಷ್ಟರಲ್ಲಿ ತಿರುವೆಂಕಟನ ಸ್ಮರಣವಾಗಲು, ತನ್ನ ಪರಿವಾರದ ಯೋಗಕ್ಷೇಮದ ಕಡೆಗೆ ಅವನ ಮನಸ್ಸು ಹರಿಯಹತ್ತಿತು. ಪಿಶಾಚಿಗಳ ವಿಚಾರದಿಂದ ವ್ಯರ್ಥ ಪೇಚಾಡುವುದಕ್ಕಿಂತ ಸ್ವಜನರ ಸಮಾಚಾರ ವನ್ನು ತಕ್ಕೊಳ್ಳುವುದು ತಕ್ಕದೆಂದು ನಿರ್ಧರಿಸಿ ಆತನು ತನ್ನ ಬಿಡಾರದ ಕಡೆಗೆ ತಿರುಗಿದನು. ಒಂದರ ಹಿಂದೊಂದು ಭಯಪ್ರದ ಸಂಗತಿಗಳೇ ಒದಗಿದ್ದರಿಂದ ಕ್ಷಣಮಾತ್ರ ಕಂಪಿಸಿದ ಆ ತರುಣವೀರನ ಹೃದಯವು ಅನನ್ಯಗತಿಕತೆಯಿಂದ ಕೂಡಲೆ ನಿರ್ಭಯವಾಯಿತು. ಆತನು ತನ್ನ ಅಮೋಘವಾದ ಬಾಹುಬಲವನ್ನೂ, ಟೊಂಕದಲ್ಲಿ ಅಲೆದಾಡುತ್ತಿರುವ ತೀಕ್ಷ್ಣಧಾರೆಯ ಖಡ್ಗವನ್ನೂ ಅಭಿಮಾನಾಸ್ಪದವಾದ ತನ್ನ ಯುದ್ಧಕೌಶಲ್ಯವನ್ನೂ ಸ್ಮರಿಸಿ ಆವೇಶಗೊಂಡು ಒತ್ತರದಿಂದ ಬಿಡಾರದ ಕಡೆಗೆ ಸಾಗಿದನು. ಅರ್ಧತಾಸಿನೊಳಗೆ ಆ ವೀರನು ತನ್ನ ಬಿಡಾರವಿದ್ದ ಸ್ಥಳಕ್ಕೆ ಹೋಗಿ ನೋಡುತ್ತಾನೆ, ಅಲ್ಲಿಯೇನಿದೆ? ಎಷ್ಟೋಜನರ ಚಂಡುಗಳು ತುಂಡರಿಸಿಹೋಗಿವೆ; ಎಷ್ಟೋ ಜನರ ಕೈಕಾಲುಗಳು ಕತ್ತರಿಸಿ ಅಸ್ತವ್ಯಸ್ತವಾಗಿ ಬಿದ್ದಿವೆ; ಎಷ್ಟೋ ಜನರು ಗಾಯಗಳ ವ್ಯಥೆಯನ್ನು ತಾಳಲಾರದೆ ಕೆಟ್ಟ ದನಿಯಿಂದ ಕೂಗುತ್ತಲಿದ್ದಾರೆ; ರಕ್ತದಿಂದ

ಕೆಂಪಾಗಿದ್ದ ನೆಲವು ಸ್ವಚ್ಛವಾದ ಬೆಳುದಿಂಗಳಲ್ಲಿ ಮನಸ್ಸಿಗೆ ಅಸಹ್ಯವಾದ ವ್ಯಥೆಯನ್ನುಂಟು ಮಾಡುತ್ತಲಿದೆ; ತನ್ನ ಕುದುರೆಗಳಲ್ಲಿ ಕೆಲವು ಸತ್ತು ಬಿದ್ದಿವೆ; ಕೆಲವು ಗಾಯಗಳಿಂದ ಒದ್ದಾಡುತ್ತಲಿವೆ; ಕೆಲವು ಬೆದರಿ ದೂರ ಓಡುತ್ತಲಿವೆ. ತನ್ನ ಚಿಕ್ಕ ಪರಿವಾರದ ಗತಿಯು ತಾನಿಲ್ಲದಾಗ ಆಕಸ್ಮಿಕ ಹೀಗಾದದ್ದನ್ನು ನೋಡಿ, ನಾಯಕನು ಬಹಳ ವ್ಯಥೆಪಟ್ಟನು. ಅವನಿಗೆ ಏನೂ ತೋಚದಾಯಿತು. ಆತನು ಮುಂದಕ್ಕೆ ಹೋಗಿ ನೋಡುತ್ತಾನೆ, ತನ್ನ ಸೈನಿಕರ ಹೆಣಗಳೊಡನೆ ಕೆಲವು ಮುಸಲ್ಮಾನರ ಹೆಣಗಳೂ ಅಲ್ಲಲ್ಲಿ ಬಿದ್ದಿವೆ. ಇದನ್ನು ನೋಡಿ ನಾಯಕನು ತನ್ನ ಚಿಕ್ಕ ಪರಿವಾರದ ನಾಶಕ್ಕೆ ಮುಸಲ್ಮಾನರು ಕಾರಣರಾಗಿರುತ್ತಾರೆಂದು ತರ್ಕಿಸಿದನು; ಆದರೆ ತನಗೆ ಕೇಡು ಬಗೆಯುವ ಮುಸಲ್ಮಾನರು ಯಾರು? ಆ ಮುಸಲ್ಮಾನರನ್ನು ಯಾವನೊಬ್ಬ ಹಿಂದೂ ಮಾಂಡಲಿಕನು ಕೂಡಿರಬಹುದೋ, ಎಂಬಿವೇ ಮೊದಲಾದ ವಿಚಾರಗಳಲ್ಲಿ ಮಗ್ನನಾಗಿರಲು, ಕುದುರೆಯ ಕೊಳಗಗಳ ಅಸ್ಪಷ್ಟ ಶಬ್ದವು ಆತನಿಗೆ ಕೇಳಿಸತೊಡಗಿತು. ಕೂಡಲೆ ನಾಯಕನು ಜಾಗರೂಕನಾಗಿ ತನ್ನ ಶಸ್ತ್ರಾಸ್ತ್ರಗಳನ್ನು ಸಜ್ಜುಮಾಡಿಕೊಂಡು ಸಪ್ಪಳವು ಕೇಳಿಬರುವ ದಿಕ್ಕಿನ ಕಡೆಗೆ ಮೋರೆಮಾಡಿಕೊಂಡು ನಿಂತನು.

ಬರಬರುತ್ತ ಕೊಳಗಗಳ ಸಪ್ಪಳವು ಸ್ಪಷ್ಟವಾಗಿ ಕೇಳಿಸತೊಡಗಿತು. ನಾಯಕನು ಉತ್ಸುಕತೆಯಿಂದ ಅತ್ತಕಡೆಗೆ ನೋಡುತ್ತಿರಲು, ಮೂವತ್ತು–ಮೂವತ್ತೈದು ವರ್ಷದ ಒಬ್ಬ ಮುಸಲ್ಮಾನ ವೀರನು ತನ್ನ ಬೆಟ್ಟದಂಥ ಕುದುರೆಯನ್ನು ಓಡಿಸುತ್ತ ನಾಯಕನು ಸಮೀಪಕ್ಕೆ ಬಂದನು. ಆತನನ್ನು ನೋಡಿ ನಾಯಕನ ಸರ್ವಾಂಗವು ತಪ್ತವಾಗುತ್ತಿರಲು, ಆ ಯವನವೀರನು ಅಟ್ಟಹಾಸದಿಂದ ನಗುತ್ತ ನಾಯಕನನ್ನು ಕುರಿತು–ಎಚ್ಚಮ್ಮನಾಯಕಾ, ನನ್ನ ತರ್ಕವು ಸುಳ್ಳಾಗಲಿಲ್ಲ. ನೀನು ಜೀವದಿಂದ ಉಳಿದಿರುವುದರಿಂದ ನಾವು ಈಗೆರಡು ತಾಸುಗಳ ಹಿಂದೆ ಮಾಡಿದ ಮನುಷ್ಯ ವಧೆಯು ವ್ಯರ್ಥವಾದಂತಾಯಿತು; ಆದರು ಚಿಂತೆಯಿಲ್ಲ ಇಗೋ ನನ್ನ ಈ ಖಡ್ಗಕ್ಕೆ ನಿನ್ನ ಪ್ರಾಣವು ಆಹುತಿಯಾಗಲಿ; ನಿನ್ನ ಪ್ರಾಣವನ್ನು ಹೀರುವುದರಿಂದ ನಮ್ಮ ವಿಜಾಪುರದ ಬಾದಶಹನು ಸುಪ್ರಸನ್ನನಾಗಬಹುದು, ಎಂದು ನುಡಿದು ಆ ಮುಸಲ್ಮಾನ ವೀರನು ನಾಯಕನ ಮೇಲೆ ಖಡ್ಗವನ್ನು ಪ್ರಯೋಗಿಸಿದನು; ಆದರೆ ಚಪಲನಾದ ನಾಯಕನು ಚಾತುರ್ಯದಿಂದ ಖಡ್ಗಕ್ಕೆ ತನ್ನ ಢಾಲನ್ನೊಡ್ಡಿ ಹೊಡೆತವನ್ನು ತಪ್ಪಿಸಿಕೊಂಡನು. ತನ್ನ ಹೊಡೆತವು ವ್ಯರ್ಥವಾದದ್ದನ್ನು ನೋಡಿ ಮುಸಲ್ಮಾನ ಸರದಾರನು ಕಸುವಿನಿಂತ ಮತ್ತೊಮ್ಮೆ ಖಡ್ಗವನ್ನು ಪ್ರಯೋಗಿಸಲು, ನಾಯಕನು ತನ್ನ ಮೇಲೆ ಬೀಳುವ ಆ ಖಡ್ಗಕ್ಕೆ ಗುರಿನೋಡಿ ತನ್ನ ಖಡ್ಗದಿಂದ ಹೊಡೆದನು. ಕೂಡಲೆ ಮುಸಲ್ಮಾನ ಸರದಾರನ ಖಡ್ಗವು ಕೈಯಿಂದ ಕೊಸರಿ ಝಣಗುಟ್ಟುತ್ತ ಆಕಾಶ ಮಂಡಲದಲ್ಲಿ ಲಕಲಕನೆ ಹೊಳೆದು ಬಹುದೂರ ಬಿದ್ದಿತು. ಇದನ್ನು ನೋಡಿ ಮುಸಲ್ಮಾನ ವೀರನು ಖತಿಗೊಂಡು ನಾಯಕನನ್ನು ಇರಿಯುವುದಕ್ಕಾಗಿ ತನ್ನ ಭಾಲೆಯನ್ನು ಕಿತ್ತುಕೊಳ್ಳುತ್ತಿರಲು, ಬಹು ಚಪಲನಾದ ನಾಯಕನು ಕುದುರೆಯನ್ನು ಏರಿಹೋಗಿ ಭಾಲೆಯನ್ನು ಕಸಿದು ದೂರ ಚೆಲ್ಲಿಕೊಟ್ಟನು. ಇದರಿಂದ ಮುಸಲ್ಮಾನ ವೀರನು ನಿಶ್ಶಸ್ತ್ರನಾಗಿ ನಾಚಿಕೆಯಿಂದ ತಲೆ ಬಗ್ಗಿಸಿ ಕೊಂಡು ಸುಮ್ಮನೆ ಕುದುರೆಯ ಮೇಲೆ ಕುಳಿತನು. ಈ ಸಂಧಿಯಲ್ಲಿ ನಾಯಕನು

ಕುದುರೆಯ ಮೇಲೆ ಧುಮುಕಿ ತನ್ನ ಕೈ ಖಡ್ಗದಿಂದ ಮುಸಲ್ಮಾನ ಸರದಾರನನ್ನು ತುಂಡರಿಸಬಹುದಾಗಿತ್ತು; ಆದರೆ ಉದಾರ ಮನಸ್ಸಿನ ನಾಯಕನು ವೀರರಿಗೆ ಸಮ್ಮತವಲ್ಲದ ನೀಚಕಾರ್ಯವನ್ನು ಮಾಡಲಿಕ್ಕೆ ಇಚ್ಛಿಸಲಿಲ್ಲ. ನಿಶ್ಶಸ್ತ್ರನಾದವನನ್ನು ಸಂಹರಿಸುವುದು ಅಧರ್ಮವೆಂದು ತಿಳಿದು ಆತನು ತನ್ನ ಖಡ್ಗವನ್ನು ಒರೆಗಾಣಿಸಿ ಮುಸಲ್ಮಾನ ವೀರರನ್ನು ನೋಡುತ್ತ ನಿಂತುಕೊಂಡನು. ನಾಯಕನ ಈ ದೊಡ್ಡಿಸ್ತನಕ್ಕೆ ಮೆಚ್ಚಿ ಮುಸಲ್ಮಾನ ವೀರನು ವಿನಯದಿಂದ–ಎಲೈ ಕನ್ನಡವೀರನೇ, ನಿನ್ನ ಔದಾರ್ಯವನ್ನು ಹೊಗಳುವ ಯೋಗ್ಯತೆಯು ನನಗಿಲ್ಲ. ಓಡಿಹೋಗಲಿಕ್ಕೆ ಕುದುರೆಯೊಂದಿಲ್ಲದಿದ್ದರೆ ನಾನು ಪೂರ್ಣವಾಗಿ ನಿನ್ನ ಕೈಯಲ್ಲಿ ಸಿಕ್ಕುಹೋಗುತ್ತಿದ್ದೆನು! ಕುದುರೆಯಿದ್ದರೂ, ನಿನ್ನಂಥ ವೀರನಿಗೆ ಬೆನ್ನು ತೋರಿಸಿ, ಪೈಗಂಬರನ ಅನುಯಾಯಿಗಳ ಶೌರ್ಯಕ್ಕೆ ಕಲಂಕವನ್ನುಂಟು ಮಾಡಲು ನಾನು ಇಚ್ಛಿಸುವುದಿಲ್ಲ, ಇಗೋ, ಕುದುರೆಯಿಂದಿಳಿದು ನಿಶ್ಶಸ್ತ್ರನಾಗಿ ನಿನ್ನೆದುರಿಗೆ ನಿಂತಿರುತ್ತೇನೆ ನೋಡು. ನಿನ್ನ ಚಾಪಲ್ಯಕ್ಕೂ, ಶೌರ್ಯಕ್ಕೂ ಮೆಚ್ಚಿದ್ದ ನಾನು, ನಿನ್ನ ಶರೀರ ಸಾಮರ್ಥ್ಯವನ್ನೂ, ಮಲ್ಲಯುದ್ಧದ ಚಾತುರ್ಯವನ್ನೂ ನೋಡಲು ಇಚ್ಛಿಸುತ್ತೇನೆ. ನಿನ್ನ ಇಷ್ಟವಿದ್ದರೆ ಬಾ, ಇಲ್ಲದಿದ್ದರೆ ನನಗೆ ಅಪ್ಪಣೆಯನ್ನು ಕೊಡು, ತಿರುಗಿ ನಿನ್ನ ಮೇಲೆ ಶಸ್ತ್ರವನ್ನು ಎತ್ತದೆ ಬಂದ ದಾರಿಯಿಂದ ಹಿಂದಿರುಗಿ ಹೋಗುವೆನು. ನನ್ನನ್ನು ಸಂಹರಿಸುವ ಇಚ್ಛೆ ನಿನಗಿದ್ದರೆ, ನಿರಾತಂಕವಾಗಿ ಸಂಹರಿಸು. ವೀರರಿಗೆ ಒಂದಿಲ್ಲೊಂದು ದಿನ ಸಮರಾಂಗಣದಲ್ಲಿ ದೇಹ ಬಿಡುವುದು ಸಿದ್ಧವಾಗಿರುವುದು!

ಮುಸಲ್ಮಾನ ವೀರನ ಈ ಮಾತುಗಳನ್ನು ಕೇಳಿ ಎಚ್ಚಮ್ಮನಾಯಕನು ಏನೂ ಉತ್ತರಕೊಡದೆ ಮಲ್ಲಯುದ್ಧಕ್ಕೆ ಸಿದ್ಧನಾಗಿ ನಿಂತನು. ಇದನ್ನು ನೋಡಿ ಮುಸಲ್ಮಾನ ವೀರನಿಗೆ ಪರಮಾನಂದವಾಯಿತು. ವೀರರು ಯುದ್ಧೋತ್ಸಾಹಿಗಳಿರುತ್ತಾರೆಂಬ ಮಾತು ಸುಳ್ಳಲ್ಲ. ಇಬ್ಬರೂ ಕೈಗೆ ಕೈಕೊಟ್ಟು ಕಾದಹತ್ತಿದರು. ಮುಸಲ್ಮಾನ ವೀರನು ದೇಹದಾರ್ಢ್ಯದಿಂದ ಎಚ್ಚಮ್ಮನಾಯಕನನ್ನು ಮೀರಿದ್ದನಲ್ಲದೆ, ವಯಸ್ಸಿನಿಂದಲೂ ಹಿರಿಯನಾಗಿದ್ದನು. ಆತನ ಮೈಬಣ್ಣ ಕೆಂಪು, ನಿಲುವಿಕೆ ಎತ್ತರ, ಮೂಗು ಸರಳ, ನೇತ್ರಗಳು ತೇಜಃಪುಂಜವಾದವುಗಳು. ವಿಶಾಲವಾದ ವಕ್ಷಸ್ಥಲದಿಂದಲೂ, ಪುಷ್ಟವಾದ ತೋಳು ಗಳಿಂದಲೂ ಆತನು ಭವ್ಯನಾಗಿ ತೋರುತ್ತಿದ್ದನು. ಆ ಇಬ್ಬರು ಚೆಲುವರಾದ ತರುಣರ ಮಲ್ಲಯುದ್ಧವು ನೋಡತಕ್ಕದ್ದಾಗಿತ್ತು; ಆದರೆ ನಿರ್ಮಾನುಷವಾದ ಆ ರಣಭೂಮಿಯಲ್ಲಿ ಬೆಳಗುಮುಂಜಾನೆ ಯಾರ ನೇತ್ರಗಳು ಅದನ್ನು ನೋಡಿ ಸಫಲವಾಗಬೇಕು? ಆ ಇಬ್ಬರು ತರುಣರೂ ಕಾದುತ್ತ ಕಾದುತ್ತ ಆವೇಶಗೊಂಡರು. ಒಬ್ಬರಮೇಲೊಬ್ಬರು ಏರಿಹೋಗಿ ಒಬ್ಬರನ್ನೊಬ್ಬರು ನೆಲಕ್ಕೆ ಕೆಡವಹತ್ತಿದರು. ಮುಸಲ್ಮಾನ ವೀರನ ಅಸದೃಶವಾದ ಸಾಮರ್ಥ್ಯಕ್ಕೂ ಅಚುಂಬಿತವಾದ ಚಾಪಲ್ಯಕ್ಕೂ ನಾಯಕನು ಮೆಚ್ಚಿ—''ಶಾಬಾಸ, ಯವನವೀರಾ, ಶಾಬಾಸ!'' ಎಂದು ಆಗಾಗ್ಗೆ ಹೊಗಳುತ್ತಿದ್ದನು. ತನಗಿಂತ ಚಿಕ್ಕವನಾದ ನಾಯಕನು ತನ್ನೊಡನೆ ಸಮಾನಬಲದಿಂದ ಕಾದುವುದನ್ನು ನೋಡಿ ಯವನವೀರನು ಬೆರಗಾಗಿದ್ದನು; ಆತನು ನಾಯಕನಂತೆ ಬಾಯಿಬಿಟ್ಟು ಹೊಗಳದಿದ್ದರೂ ಮನಸ್ಸಿನಲ್ಲಿ ನಾಯಕನ ಸತ್ವಾತಿಶಯಕ್ಕೂ, ಹಿಡಿತಗಳಿಗೂ ಅಚ್ಚಮೆಚ್ಚಿದ್ದನು. ಅವರಿಬ್ಬರು ಈರ್ಷೆಯಿಂದ ಕಾದುತ್ತಿರಲು,

ಏನಾಯಿತೋ ಅವರದು ಅವರಿಗೇ ಗೊತ್ತು, ಕ್ಷಣದಲ್ಲಿ ಎಚ್ಚಮ್ಮನಾಯಕನು ಮುಸಲ್ಮಾನ ವೀರನನ್ನು ಅಂಗಾತ ಕೆಡವಿ, ತಾನು ಎದೆಯಮೇಲೆ ಕುಳಿತು, ಕೂಡಲೆ ಎದ್ದು ವಿನಯದಿಂದ ಸಲಾಮುಮಾಡಿ ಹಿಂದಕ್ಕೆ ಸರಿದುಕೊಂಡನು. ಮುಸಲ್ಮಾನವೀರನು ನಾಯಕನ ಈ ಸತ್ವಾತಿಶಯವನ್ನೂ, ಸೌಜನ್ಯವನ್ನೂ, ವಿನಯವನ್ನೂ ನೋಡಿ ಬೆರಗಾಗಿ ವಿನಯದಿಂದ ಆತನಿಗೆ ಸಲಾಮುಮಾಡಿ ಪ್ರೀತಿಯಿಂದ ಕೈಹಿಡಿದು ನುಡಿದನೇನಂದರೆ–ವೀರನಾದ ಮಿತ್ರನೇ, ನೀನು ಧನ್ಯನು ಧನ್ಯನು! ನಿಮ್ಮಂಥ ಕನ್ನಡವೀರರು ವಿಜಯನಗರದ ರಾಜ್ಯದಲ್ಲಿ ಇನ್ನೂ ಮೂಡುತ್ತಿರುವುದರಿಂದ ಆ ರಾಜ್ಯದ ಬೇರುಗಳನ್ನು ಕಿತ್ತು ಒಗೆಯಲಿಕ್ಕೆ ನಮ್ಮ ಬಾದಶಹರು 50 ವರ್ಷ ಯತ್ನಿಸಿದರೂ ಆ ಕಾರ್ಯವು ದುಸ್ಸಾಧ್ಯವಾಗಿದೆ. ನಿಮ್ಮಂಥ ಸಹಸ್ರಾವಧಿ ಸತ್ವಶಾಲಿಗಳು ಭುಜಕ್ಕೆ ಭುಜವನ್ನು ಅನಿಸಿ ಸಾಲುಗೊಂಡು ರಣಭೂಮಿಯಲ್ಲಿ ನಿಲ್ಲುತ್ತಿರುವಾಗ ವಿಜಯನಗರದ ಯಶೋದುಂದುಭಿಯ ಗಂಭೀರ ಧ್ವನಿಯು ದಿಕ್ಕುದಿಕ್ಕುಗಳಲ್ಲಿ ಹಬ್ಬಿದ್ದು ಆಶ್ಚರ್ಯವೇನು! ನೀನು ಜಯಶಾಲಿಯಾಗಿದ್ದರೂ ನನ್ನೊಡನೆ ವಿನಯದಿಂದ ನಡಕೊಳ್ಳುವುದನ್ನು ನೆನಿಸಿದರೆ, ಕನ್ನಡಿಗರ ಸಹೃದಯತೆಯು ಆಕಾರಗೊಂಡು ನನ್ನೆದುರಿಗೆ ನಿಂತಂತೆ ತೋರುತ್ತದೆ. ಶಾಬಾಸ, ಕನ್ನಡವೀರಾ ಶಾಬಾಸ! ನಿನ್ನಂಥ ಉದಾರಾಂತಃಕರಣದ ವೀರನಿಗೆ ಆಪತ್ಕಾಲದಲ್ಲಿ ಸಹಾಯಮಾಡುವುದು ನನ್ನ ಪವಿತ್ರ ಕರ್ತವ್ಯವಾಗಿರುವುದು. ನಿನ್ನಿಂದ ಎರಡು ಸಾರೆ ಗೆಲ್ಲಲ್ಪಟ್ಟ ಈ ದೇಹವು ನಿನ್ನದಾದ್ದರಿಂದ ನಿನ್ನ ಹಿತಚಿಂತನಲ್ಲಿಯೇ ಅದು ಸವೆದು ಹಿಟ್ಟಾದೀತು. ಸಾಕು, ಇದಕ್ಕೂ ಹೆಚ್ಚಿಗೆ ಹರಟಿ, ನಿನ್ನ ಅನಾದರಕ್ಕೆ ಪಾತ್ರನಾಗುವುದು ಸರಿಯಲ್ಲ, ನನ್ನ ಹೆಸರು ಚಾಂದಖಾನನು. ವಿಪತ್ತಿನಲ್ಲಿ ಎಚ್ಚಮ್ಮ ನಾಯಕನಿಗೆ ಸಹಾಯ ಮಾಡಿದ ಹೊರತು ಚಾಂದಖಾನನ ಜನ್ಮವು ಸಫಲವಾಗಲಾರದು. ಹೋಗಿಬರುತ್ತೇನೆ, ಅಪ್ಪಣೆಕೊಡು, ಎಂದು ಹೇಳಿ, ಆ ಮುಸಲ್ಮಾನ ವೀರನು ನಾಯಕನಿಗೆ ವಿನಯದಿಂದ ಸಲಾಮು ಮಾಡಿ ಕುದುರೆಯನ್ನು ಹತ್ತಿ ಬಂದ ದಾರಿಯಿಂದ ತಿರುಗಿಹೋದನು. ಇತ್ತ ಸರಳ ಹೃದಯದ ನಾಯಕನು, ಈಶ್ವರಕೃಪೆಯಿಂದ ತನಗೊದಗಿದ ಆಕಸ್ಮಿಕ ಜಯಕ್ಕಾಗಿ ಕೆಲಮಟ್ಟಿಗೆ ಸಮಾಧಾನಪಟ್ಟು, ಸ್ವಜನಘಾತವನ್ನು ಸ್ಮರಿಸಿ ಉಸುರ್ಗರೆಯುತ್ತ ಫಲ ಮಂತ್ರಾಕ್ಷತೆಗಳ ಸಲುವಾಗಿ ಮತ್ತೆ ಪಂಪಾಸರೋವರದ ಕಡೆ ಸಾಗಿದನು; ಕೂಡಲೆ ಅಲ್ಲಿಯ ಭೂತಗಳ ಲೀಲೆಗಳು ಅವನ ಕಣ್ಣಿಗೆ ಕಟ್ಟಿದವು.

## ಪವಿತ್ರ ಕರ್ತವ್ಯ

ಎಚ್ಚಮ್ಮನಾಯಕನು ಹೊರಟಾಗ ಅರುಣೋದಯವಾಗಿತ್ತು, ಮೂಡಲು ಕೆಂಪೇರಿದಂತೆ ನಕ್ಷತ್ರಗಳು ಕಾಂತಿಹೀನವಾಗ ತೊಡಗಿದವು. ಪಕ್ಷಿಗಳು ಕಿಲಿಕಿಲಿ ಧ್ವನಿಮಾಡುತ್ತ ಕೆಲವು ಗೂಡಿನಿಂದ ಹೊರಬಿದ್ದಿದ್ದವು; ಕೆಲವು ಹೊರಬೀಳುತ್ತಿದ್ದವು. ಸಮೀಪದ ಹಳ್ಳಿಗಳಲ್ಲಿಯ ಕೋಳಿಗಳ ಕೂಗುಗಳು ಅಸ್ಪಷ್ಟವಾಗಿ ಕೇಳಿಸುತ್ತಿದ್ದವು. ತಂಗಾಳಿಯು ಸುಳ್ಳನೆ ಸುಳಿದು ಎಡಬಲದ

ಗಿಡಬಳ್ಳಿಗಳನ್ನು ಅಲ್ಲಾಡಿಸಿ ಮನಸ್ಸನ್ನು ರಮಿಸುತ್ತಿತ್ತು. ಚಿಗುರುಗಳು ಇಬ್ಬನಿಯ ಹನಿಗಳಿಂದ ಒಪ್ಪುತ್ತಿದ್ದವು. ಅಡವಿಯ ಹೂಗಳು ಅರಳತೊಡಗಿ ತಮ್ಮ ವರ್ಣವೈಚಿತ್ರ್ಯದಿಂದಲೂ, ಗಂಧವಿಶೇಷದಿಂದಲೂ, ಜನರ ಉಲ್ಲಾಸವನ್ನು ಹೆಚ್ಚಿಸುತ್ತಿದ್ದವು. ರಾತ್ರಿಯಲ್ಲಿ ಸಂಚರಿಸುತ್ತಿದ್ದ ತೊಗಲಬಾವುಲಿ–ಗೂಗೆ ಮೊದಲಾದ ಪಕ್ಷಿಗಳೂ, ನರಿ ತೋಳ ಮೊದಲಾದ ಮೃಗಗಳೂ, ಹಾವು ಚೇಳು ಮೊದಲಾದ ಹುಳಹುಪ್ಪಡಿಗಳೂ ಅಲ್ಲಲ್ಲಿ ಅಡಗತೊಡಗಿದ್ದವು. ಸುತ್ತುಮುತ್ತಲಿನ ಗುಡ್ಡಗಳ ತುದಿಗಳು ಬಿಳಿಯ ಟೊಪ್ಪಿಗೆಗಳನ್ನು ಹಾಕಿಕೊಂಡಂತೆ ಮಂಜಿನಿಂದ ಆಚ್ಛಾದಿಸಲ್ಪಟ್ಟಿದ್ದವು. ಮೂಡಲು ಕೆಂಪುಹರಿದು ಬೆಳ್ಳಗೆ ಬೆಳಗಾಗಿ ಸೂರ್ಯನು ಕ್ಷಿತಿಜದಿಂದ ಹೊರಬೀಳುವ ಸಂಧಿಯಲ್ಲಿ ನಾಯಕನಿಗೆ ಪಂಪಾಸರೋವರವು ಕಾಣಿಸತೊಡಗಿತು. ಆಕಸ್ಮಿಕವಾಗಿ ದೈವದ ತಿರುಗಣಿಯ ಮಡುವಿನಲ್ಲಿ ಸಿಕ್ಕು ಗಾಸಿಯಾಗತೊಡಗಿದ್ದ ನಾಯಕನಿಗೆ, ಈ ಉಷಃಕಾಲದ ಮನೋಹರ ಸಂಗತಿಗಳು ಇದ್ದೂ ಇಲ್ಲದಂತಾಗಿದ್ದವು. ನಮ್ಮ ತರುಣ ನಾಯಕನ ಮನಸ್ಸನ್ನು ಫಲಮಂತ್ರಾಕ್ಷತೆ, ಭೂತಗಳ ಲೀಲೆ, ಸ್ವಜನರ ನಾಶ, ದೈವಯೋಗದಿಂದ ದೊರೆತ ಜಯ ಇವು ಮುತ್ತಿಬಿಟ್ಟಿದ್ದರಿಂದ ಅನ್ಯ ವಿಚಾರಗಳಿಗೆ ಅಸ್ಪದವೇ ಉಳಿದಿದ್ದಿಲ್ಲ. ನಾಯಕನು ಹಾದಿಯಲ್ಲಿ ಫಲ ಮಂತ್ರಾಕ್ಷತೆಯ ಗಂಟನ್ನು ಹುಡುಕುತ್ತ, ಬೆಳಕಿನೊಳಗೆ ಸರೋವರದಲ್ಲಿಯೂ ನಾಲ್ಕೂ ಕಡೆಗೆ ನೋಡಿ ನಿರಾಶೆಪಟ್ಟನು. ಆತನು ಅಸಮಾಧಾನದಿಂದ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಗುಡಿಯನ್ನು ಹೊಕ್ಕು ಅಲ್ಲಿಯೂ ನೋಡಿದನು. ರಾತ್ರಿಯ ಭವ್ಯವಾದ ಶಿವಪೂಜೆಯು ಅವನಿಗೆ ಸ್ವಪ್ನೋಪಮಾನವಾಗಿ ಈಗ ಭಾಸವಾಗುತ್ತಿತ್ತು. ತರುವಾಯ ನಾಯಕನು ಗುಡಿಯಿಂದ ಹೊರಬಿದ್ದು ರಾತ್ರಿ ಮನುಷ್ಯಾಕೃತಿಗಳು ಗುಪ್ತವಾದ ಪರ್ವತದ ನಿಟ್ಟನ್ನು ನೋಡಿದನು. ಅಷ್ಟರಲ್ಲಿ ಸೂರ್ಯನು ಮೇಲಕ್ಕೇರಿ ಹೂಬಿಸಿಲನ್ನು ನಾಲ್ಕೂ ಕಡೆಗೆ ಪಸರಿಸತೊಡಗಿದ್ದನು. ಜನರ, ಹಾಗು ದನಕರುಗಳ ಸುಳಿದಾಟಕ್ಕೆ ಆರಂಭವಾಗತೊಡಗಿತು. ನೆರೆಯ ಹಳ್ಳಿಯಿಂದ ಪೂಜಾರಿಗಳು ಬಂದರು. ಮುಖ್ಯ ಪೂಜಾರಿಯು ದೇವತಾರ್ಚನೆಯ ಸಿದ್ಧತೆಯಲ್ಲಿ ತೊಡಗಿದನು. ಪಂಚಮ ಪೂಜಾರಿಯು ದೇವರ ಮುಂದಿನ ದೀಪವನ್ನು ನೆಟ್ಟಗೆಮಾಡಿ ಗುಡಿಯ ಕಸ ತೆಗೆಯಹತ್ತಿದನು. ನೆರೆಯ ಹಳ್ಳಿಯಿಂದ ಬಂದ ಯಾತ್ರಿಕರು ತಮ್ಮ ಗಂಟು ಗದಡಿಗಳನ್ನು ಗುಡಿಯ ಬಳಿ ಧರ್ಮಶಾಲೆಯಲ್ಲಿಟ್ಟು ತಮ್ಮತಮ್ಮ ಕೆಲಸಗಳಲ್ಲಿ ತೊಡಗಿದರು. ಇದನ್ನೆಲ್ಲ ನೋಡಿ ನಾಯಕನ ಮನಸ್ಸು ಸ್ವಲ್ಪ ರಮಿಸಲು, ಆತನು ಪೂಜಾರಿಯ, ಹಾಗು ಯಾತ್ರಿಕರ ಬಳಿಗೆ ಹೋಗಿ ಆ ಪುರಾತನ ಕ್ಷೇತ್ರದ ವಿಷಯದ ಭಯಂಕರವಾದ ಸುದ್ದಿಗಳನ್ನು ಕೇಳಿಕೊಳ್ಳಹತ್ತಿದನು.

ಮಧ್ಯಾಹ್ನವಾಯಿತು. ಯಾತ್ರಿಕರು ಸರೋವರದಲ್ಲಿ ಸ್ನಾನಮಾಡಿ ಪಂಪಾಪತಿಯನ್ನು ಪೂಜಿಸಿ ಭೋಜನಾದಿಗಳ ಸಿದ್ಧತೆಯಲ್ಲಿ ತೊಡಗಿದರು. ಅಷ್ಟರಲ್ಲಿ ನಮ್ಮ ನಾಯಕನು ರಾತ್ರಿ ಮನುಷ್ಯಾಕೃತಿಗಳು ಗುಪ್ತವಾದ ಸ್ಥಳಕ್ಕೆ ಹೋಗಿ ಕಣ್ಣಲ್ಲಿ ಕಣ್ಣು ಇಟ್ಟು ನೋಡಿ ಬಂದನು. ಅದರಿಂದ ಪ್ರಯೋಜನವೇನೂ ಆಗಲಿಲ್ಲ. ಆತನು ಮತ್ತೆ ಸರೋವರಕ್ಕೆ ಬಂದು ಸ್ನಾನಮಾಡಿ ದೇವರದರ್ಶನ ತಕ್ಕೊಂಡು ವಿಚಾರಮಗ್ನನಾಗಿ ಗುಡಿಯ ಹಾಸುಗಲ್ಲ ಮೇಲೆ ಸ್ವಸ್ಥವಾಗಿ

ಮಲಗಿಕೊಂಡನು. ನಾಯಕನ ರೂಪವೂ, ಅವನ ಶಸ್ತ್ರಾಸ್ತ್ರಗಳೂ ಜನರ ಚಿತ್ತವನ್ನು ಆಕರ್ಷಿಸಿದ್ದ ರಿಂದ ಅವರು ಕೌತುಕದಿಂದ ನಾಯಕನನ್ನು ನೋಡುತ್ತಿದ್ದರು. ಕೆಲವರು ನಾಯಕನನ್ನು ಊಟಕ್ಕೆ ಕರೆಯಲು, ''ತನಗೆ ಹಸಿವೆಯಿಲ್ಲೆ''ಂದು ಆತನು ವಿಯನದಿಂದ ಅವರಿಗೆ ಹೇಳುತ್ತಿದ್ದನು. ಎಲ್ಲರ ಊಟ ವಾಯಿತು. ಸೂರ್ಯನು ಪಡವಲಕ್ಕೆ ಇಳಿಯಹತ್ತಿದ್ದರಿಂದ ಬಿಸಿಲ ತಾವು ಕಡಿಮೆಯಾಗ ಹತ್ತಿತು. ರಾತ್ರಿ ಕ್ಷೇತ್ರದಲ್ಲಿ ಇರಲಸಾಧ್ಯವಾದದ್ದರಿಂದ ಕಣ್ಣ ಬೆಳಕಿನಲ್ಲಿ ಊರು ಸೇರಬೇಕೆಂದು ಜನರು ತಮ್ಮ ಗಂಟು-ಗದಡಿಗಳನ್ನು ಕಟ್ಟಿಕೊಂಡು ಪ್ರಯಾಣಗಳನ್ನು ಬೆಳೆಸಹತ್ತಿದರು. ಬರಬರುತ್ತ ಹೂಬಿಸಿಲು ಬಿದ್ದು ತಂಗಾಳಿಯು ಸುಳಿಯಹತ್ತಿತು. ಪಂಚಮ ಪೂಜಾರಿಯು ದೇವರ ದೀಪವನ್ನು ನೆಟ್ಟಗೆ ಮಾಡಿ, ಸಮೃದ್ಧವಾಗಿ ಎಣ್ಣೆಯನ್ನು ಹಾಕಿ ಯಾತ್ರಾಸ್ಥರಿಂದ ದೊರೆತ ಹಣ್ಣು-ಕಾಯಿ-ದಕ್ಷಿಣೆ- ದಾನಗಳನ್ನು ಕಟ್ಟಿಕೊಂಡು ಮುಖ್ಯ ಪೂಜಾರಿಯ ಹಾದಿಯನ್ನು ನೋಡುತ್ತ ನಿಂತುಕೊಂಡನು. ಮುಖ್ಯ ಪೂಜಾರಿಯೂ ಮನೆಗೆ ಹೊರಡಲು ಸಿದ್ಧನಾದನು. ಆದರೂ ಹಾಸುಗಲ್ಲ ಮೇಲೆ ವಿಚಾರಮಾಡುತ್ತ ಮಲಗಿದ್ದ ನಮ್ಮ ನಾಯಕನು ಸ್ಥಳ ಬಿಟ್ಟು ಕದಲಲಿಲ್ಲ, ಇಲ್ಲಿ ರಾತ್ರಿ ಇರಕೂಡ ದೆಂದು ಮುಖ್ಯ ಪೂಜಾರಿಯು ಪರಿಪರಿಯಾಗಿ ಹೇಳಿದನು. ಆತನು ಹಲವು ಭಯಂಕರ ಸುದ್ದಿಗಳನ್ನು ಹೇಳಿ ನಾಯಕನ ಮನಸ್ಸನ್ನು ತಿರುಗಿಸಲು ಯತ್ನಿಸಿದನು; ಆದರೆ ನಾಯಕನು ಮಿಟ್ಟಿಮಿಸುಕಲಿಲ್ಲ, ಆತನು ಎದ್ದುನಿಂತು ಪೂಜಾರಿಯನ್ನು ನಮಸ್ಕರಿಸಿ — ಬ್ರಾಹ್ಮಣಶ್ರೇಷ್ಠರೇ, ನೀವು ಹೇಳುವುದು ನಿಜವು; ಆದರೆ ಈ ದಿನ ರಾತ್ರಿ ಈ ಕ್ಷೇತ್ರದಲ್ಲಿಯೇ ಇರಬೇಕೆಂದು ನನ್ನ ಎಟ್ಟಿಮನಸ್ಸು ಹಟ ಹಿಡಿದಿದೆ, ಅನುಗ್ರಹಿಸಿರಿ; ಯಾವ ತೊಂದರೆಗಳೂ ತಟ್ಟದೆ ನನ್ನ ಇಚ್ಛಿತವು ಪೂರ್ಣವಾಗುವಂತೆ ಆಶೀರ್ವದಿಸಿರಿ. ನನ್ನ ಸಂಪೂರ್ಣ ಸುದ್ದಿಯನ್ನು ಕೇಳಿದರೆ, ನನ್ನ ಹಟವು ನಿಮಗೆ ಅಯೋಗ್ಯವಾಗಿ ತೋರಲಿಕ್ಕಿಲ್ಲ. ಸದ್ಯಕ್ಕೆ ನಾನು ಬೇಡಿಕೊಳ್ಳುವು ದಿಷ್ಟೆ, ಈ ದಿನ ಈ ದೇವಾಲಯದಲ್ಲಿಯೇ ಇರಲಿಕ್ಕೆ ನನಗೆ ಅಪ್ಪಣೆ ದೊರೆಯಬೇಕು, ಅನ್ನಲು ಬ್ರಾಹ್ಮಣನು ಆತಂಕಪಡುತ್ತ, ನಾಯಕನ ಮನೋದಾರ್ಢ್ಯಕ್ಕೆ ಬೆರಗಾಗಿ ತನ್ನ ಬಳಿಯಲ್ಲಿರುವ ಬಾಳೆಯ ಹಣ್ಣುಗಳನ್ನು ಪ್ರಸಾದವೆಂದು ನಾಯಕನ ಉಡಿಯಲ್ಲಿ ಹಾಕಿದನು. ನಾಯಕನು ಪೂಜಾರಿಯನ್ನು ಭಕ್ತಿಯಿಂದ ನಮಸ್ಕರಿಸಲು, ಆತನು—''ಯಶಸ್ವಿಯಾಗು'' ಎಂದು ನಾಯಕನನ್ನು ಅಂತಃಕರಣಪೂರ್ವಕವಾಗಿ ಆಶೀರ್ವದಿಸಿ ತನ್ನ ಸಂಗಡಿಗರೊಡನೆ ಹೊರಟು ಹೋದನು.

ಸಂಜೆಯಾಯಿತು. ಹುಣ್ಣಿಮೆಯ ಚಂದ್ರನು ಪೂರ್ಣ ಕಲೆಗಳಿಂದ ಉದಯ ಹೊಂದಿದನು. ನಾಯಕನು ಸರೋವರಕ್ಕೆ ಹೋಗಿ ಕೈಕಾಲು ತೊಳಕೊಂಡು ಫಲಗಳನ್ನು ಭಕ್ಷಿಸಿ ತೃಪ್ತನಾಗಿ ಗುಡಿಯ ಮರೆಗೆ ಒತ್ತಟ್ಟಿಗೆ ಕುಳಿತುಕೊಂಡನು. ನಾಯಕನೇ ನಾಯಕನು-ಗುಡಿಯೇ ಗುಡಿಯು, ಮತ್ತೊಬ್ಬರಿಲ್ಲ, ನಾಯಕನು ಕವಚ-ಶಿರಸ್ತ್ರಾಣಗಳನ್ನು ಹಾಕಿಕೊಂಡು ಶಸ್ತ್ರಾಸ್ತ್ರಗಳನ್ನು ಸಜ್ಜುಗೊಳಿಸಿ ಪ್ರತ್ಯಕ್ಷ ಯಮನನ್ನೂ ಎದುರಿಸಲಿಕ್ಕೆ ಹಿಂದೆಮುಂದೆ ನೋಡದಷ್ಟು ಧೈರ್ಯ ದಿಂದ ಕುಳಿತುಕೊಂಡಿದ್ದನು. ಬಗೆಬಗೆಯ ವಿಚಾರಗಳ ಗಲಿಬಿಲಿಯಿಂದ ಅವನ ಮನಸ್ಸು ವ್ಯಗ್ರವಾಯಿತು. ಈ ಸ್ಥಿತಿಯಲ್ಲಿ ಎರಡು ತಾಸು ರಾತ್ರಿಯಾಗಲು, ಗುಡಿಯಲ್ಲಿ ಮನುಷ್ಯರ

ಸುಳುವು ಕೇಳತೊಡಗಿತು. ಬರಬರುತ್ತ ಗುಡಿಯಲ್ಲಿ ಸ್ಪಷ್ಟ ಮಂತ್ರೋಚ್ಚಾರವಾಗತೊಡಗಿ, ಪಂಪಾಪತಿಯ ಪೂಜೆ ಆರಂಭವಾಯಿತು; ಆಗ ನಾಯಕನು ಕುಳಿತ ಸ್ಥಳದಿಂದ ಎದ್ದು ಸಪ್ಪಳಿಲ್ಲದೆ ಹೋಗಿ ಗುಡಿಯ ಹೊರಗೆ ಒತ್ತಟ್ಟಿಗೆ ಮರೆಗೆ ಕುಳಿತುಕೊಂಡನು. ಆತನು ಸ್ವಲ್ಪ ಹೊತ್ತು ಮನಸ್ಸನ್ನು ಬಿಗಿಹಿಡಿದು ಕುಳಿತ ಸ್ಥಳದಿಂದ ಉಲುಕಲಿಲ್ಲ. ಪೂಜೆಯು ಭರಕ್ಕೆ ಬರಲು ನಾಯಕನು ಮೆಲ್ಲಗೆ ಮುಂದಕ್ಕೆ ಸರಿಯುತ್ತ ಬಹು ಜಾಗರೂಕತೆಯಿಂದ ಗುಡಿಯಲ್ಲಿ ಹಣಿಕಿಹಾಕಿದನು. ಗುಡಿಯೊಳಗಿನ ಆಗಿನ ವಿಚಿತ್ರ ಶೋಭೆಯಿಂದ ನಾಯಕನ ಚಿತ್ತವೃತ್ತಿಯು ಶಾಂತವಾಯಿತು. ಪಂಪಾಪತಿಯನ್ನು ಪೂಜಿಸುತ್ತಿದ್ದ ಬ್ರಾಹ್ಮಣನ ವಯಸ್ಸು ಎಪ್ಪತ್ತಕ್ಕಿಂತ ಕಡಿಮೆಯಿರಲಿಕ್ಕಿಲ್ಲ. ಆತನನ್ನು ಬರಿಯ ಬ್ರಾಹ್ಮಣನೆಂದು ಕರೆಯುವುದಕ್ಕಿಂತ ಋಷಿಯೆಂದು ಕರೆಯುವುದು ಯೋಗ್ಯವಾಗಿರುವುದು. ಆ ವೃದ್ಧ ಋಷಿಯು ಪ್ರತ್ಯಕ್ಷ ಸೂರ್ಯನಂತೆ ತೇಜಸ್ವಿಯಾಗಿದ್ದನು. ಬಿಳಿಯ ಕೂದಲುಗಳ ಹೊರತು ವೃದ್ಧಾಪ್ಯದ ಬೇರೆ ಲಕ್ಷಣಗಳೇನೂ ಆತನಲ್ಲಿ ತೋರುತ್ತಿದ್ದಿಲ್ಲ. ಆತನ ನಿಲುವಿಕೆ ಎತ್ತರ, ಮೈಕಟ್ಟು ತಿಳುವಾದದ್ದು, ಮುಖಮುದ್ರೆಯು ಸುಪ್ರಸನ್ನ; ಕ್ಷಮಾಶಾಂತಿಗಳು ಆ ಮಹಾತ್ಮನಲ್ಲಿ ತುಂಬಿತುಳುಕುತ್ತಿದ್ದವು. ಆತನು ದಯಾಪೂರ್ಣನೆಂಬುದು ತಟ್ಟನೆ ಒಡೆದು ಕಾಣುತ್ತಿತ್ತು ಕೃಷ್ಣಾಜಿನದ ಆಸನದಿಂದಲೂ, ಶುಭ್ರವಸ್ತ್ರ ಪರಿಧಾನದಿಂದಲೂ, ಭಸ್ಮೋದ್ಧೂಲಿತ ಗಾತ್ರದಿಂದಲೂ, ಸ್ಥಾನವರಿತು ಧರಿಸಿದ ರುದ್ರಾಕ್ಷಿಗಳಿಂದಲೂ, ಶುಭ್ರ ಜಟಾಮಂಡಲದಿಂದಲೂ, ಭವ್ಯವಾದ ಬಿಳಿಯ ಗಡ್ಡಗಳಿಂದಲೂ ಆ ತಪಸ್ವಿದ್ದನು ಪ್ರತ್ಯಕ್ಷ ಶಂಕರನಂತೆ ಒಪ್ಪುತ್ತಿದ್ದನು. ಆತನ ಧ್ವನಿಯು ಮೇಘದಂತೆ ಗಂಭೀರವಾಗಿತ್ತು ಪ್ರತ್ಯಕ್ಷ ದೇವರನ್ನು ಹೃದಯದಲ್ಲಿಟ್ಟುಕೊಂಡ ಮಹಾತ್ಮರು ಮಾತ್ರ ಪ್ರಹ್ಲಾದನಂತೆ ಬೇಕಾದಲ್ಲಿ ದೇವರನ್ನು ಬರಮಾಡಲು ಸಮರ್ಥರಾಗುವರೆಂಬುದನ್ನು ಈ ಋಷಿವರ್ಯನ ಪ್ರತ್ಯಕ್ಷದರ್ಶನದಿಂದ ಕಂಡುಕೊಳ್ಳಬಹುದಾಗಿತ್ತು ದೇವರನ್ನು ಕಂಡ ಆ ಮಹಾತ್ಮನು ಅನನ್ಯಭಾವದಿಂದ ಪಂಪಾಪತಿಯ ಪೂಜೆ ಮಾಡುವುದನ್ನು ನೋಡಿದವರ ಐಹಿಕ ತಾಪಗಳು ಶಾಂತವಾಗದೆಯಿರಲಿಕ್ಕಿಲ್ಲ. ಇಂಥ ಮಹಾತ್ಮರೇ ಸುಗುಣೋಪಾಸನೆಯನ್ನಾಗಲಿ, ನಿರ್ಗುಣೋಪಾಸನೆಯನ್ನಾಗಲಿ ಮಾಡಲು ಸಮರ್ಥರಾಗುವ ರೆಂದು ಜ್ಞಾನಿಗಳು ಹೇಳುವರು ಇಂಥವರ ದರ್ಶನಮಾತ್ರದಿಂದ ಪ್ರಾಣಿಗಳ ಪಾಪ-ತಾಪ- ದೈನ್ಯಗಳು ನಾಶವಾಗುವವೆಂದ ಬಳಿಕ ಅವರ ಮಹಾಮಹಿಮೆಯನ್ನೇನು ವರ್ಣಿಸುವುದದೆ? ನಮ್ಮ ತರುಣ ನಾಯಕನು ತನ್ನ ಹಲವು ತಾಪಗಳನ್ನು ಮರೆತು ಶಾಂತಚಿತ್ತನಾಗಿ ಅತ್ಯಂತ ಲೀನತೆಯಿಂದ ಋಷಿವರ್ಯನಲ್ಲಿಯೇ ದೃಷ್ಟಿಯನ್ನಿಟ್ಟು ಕುಳಿತುಕೊಂಡಿದ್ದನು.

ಮನುಷ್ಯನ ಮನಸ್ಸನ್ನು ವಿಷಯಸುಖದ ಕಡೆಗೆ ಜಗ್ಗಿಕೊಳ್ಳುವ ಪ್ರಬಲ ಸಾಧನವು ಸ್ತ್ರೀಯೆಂಬುದನ್ನು ಬಹುತರ ಎಲ್ಲರೂ ಬಲ್ಲರು. ಹೊನ್ನು-ಹೆಣ್ಣು-ಹಣ್ಣುಗಳನ್ನು ಕಣ್ಣಾರೆ ಕಂಡು ಬಯಸದ ಅಣ್ಣಗಳು ಈ ಜಗತ್ತಿನಲ್ಲಿ ಇಲ್ಲವೆಂದು ದೊಡ್ಡವರು ಹೇಳುವರು. ಮೇಲೆ ಹೇಳಿದಂತೆ ನಮ್ಮ ಎಚ್ಚಮನಾಯಕನು ಋಷಿವರ್ಯನಲ್ಲಿ ಚಿತ್ತವನ್ನಿಟ್ಟು ಸ್ವಸ್ಥಮನಸ್ಸಿನಿಂದ ಕುಳಿತುಕೊಂಡಿರಲು, ಒಬ್ಬ ಸುಂದರ ತರುಣಿಯು ಕೈಯಲ್ಲಿ ಹೂಮಾಲೆಯನ್ನು ಹಿಡಕೊಂಡು

ಅಕಸ್ಮಾತ್ತಾಗಿ ಬಂದು ಋಷಿಯ ಎದುರಿಗೆ ವಿನಯದಿಂದ ನಿಂತುಕೊಂಡಳು. ಅಷ್ಟರಲ್ಲಿ ಋಷಿಯು ಪಂಪಾಪತಿಗೆ ಗಂಧಾದ್ಯುಪಚಾರಗಳನ್ನು ಸಮರ್ಪಿಸಿ ಹೂಗಳನ್ನು ಏರಿಸುವವನಿದ್ದನು. ಆತನು ಆ ಸ್ತ್ರೀಯನ್ನು ಕುರಿತು ಪ್ರಸನ್ನವದನನಾಗಿ ತಂಗೀ, ಚಂಪಾ, ಈ ತಬಕದಲ್ಲಿ ಹೂಮಾಲೆಯನ್ನಿಟ್ಟು ಕುಳಿತುಕೊಳ್ಳಮ್ಮಾ ಈಗ ಎರಡು ವರ್ಷಗಳಿಂದ ನೀನು ಪಂಪಾಪತಿಗೆ ದ್ವಾದಶಪುಷ್ಪಗಳ ಮಾಲೆಯನ್ನು ಹೊತ್ತಿಗೆ ಸರಿಯಾಗಿ ತಪ್ಪದೆ ಭಕ್ತಿಯಿಂದ ಅರ್ಪಿಸುತ್ತ ಬಂದಿರುತ್ತಿ ಅದರ ಫಲವು ಬೇಗನೆ ನಿನಗೆ ದೊರೆಯುವುದು. ಭಾಗ್ಯಶಾಲಿಯಾದ ತರುಣ ವೀರನು ನಿನ್ನ ಪಾಣಿಗ್ರಹಣ ಮಾಡುವನು. ನೀನು ವೀರಪತ್ನಿಯೂ, ವೀರಮಾತೆಯೂ ಆಗಿ ಸಕಲ ವೈಭವ ದೊಡನೆ ಪಂಪಾಪತಿಯ ದರ್ಶನಕ್ಕೆ ಬರುವೆ. ಅಮ್ಮಾ ನಾನು ಅಭಿಮಾನದಿಂದ ವ್ಯರ್ಥವಾದ ಮಾತುಗಳನ್ನು ಆಡುವುದಿಲ್ಲ ಕಂಡೆಯಾ! ಪೂಜೆಯ ಕಾಲದಲ್ಲಿ ನಡುವೆ ಎಂದೂ ಮಾತಾಡದ ನನ್ನ ಮುಖದಿಂದ ಪಂಪಾಪತಿಯೇ ಈ ಮಾತುಗಳನ್ನು ಆಡಿಸುತ್ತಾನೆಂದು ನಂಬು. ನಿನ್ನೆ ರಾತ್ರಿ ಪಂಪಾಸರೋವರದ ತೀರದ ಗಿಡದ ಕೊಂಬೆಗೆ ತೂಗುಹಾಕಿದ್ದ ಫಲಮಂತ್ರಾಕ್ಷತೆಗಳ ಗಂಟು ನಿನ್ನ ಕೈಗೆ ಸಿಕ್ಕಿರುವುದಷ್ಟೇ? ಅದು ನಿನ್ನ ಕಲ್ಯಾಣವನ್ನು ಸೂಚಿಸುತ್ತದೆಂದು ಭಾವಿಸಿ ಅದನ್ನು ಪ್ರಾಣಕ್ಕಿಂತಲೂ ಹೆಚ್ಚೆಂದು ತಿಳಿದು ಜತನಮಾಡು. ನಿನಗೆ ಯೋಗ್ಯ ಪತಿಯು ದೊರೆತ ದಿವಸ ನನಗೆ ಕಣ್ಣು ತುಂಬ ನಿದ್ದೆ ಬರುವುದು. ಅಂದೇ ನಾನು ಕೃತಕೃತ್ಯನಾದಂತಾಗುವುದು, ಎಂದು ನುಡಿದು ಆ ಋಷೀಶ್ವರನು ಪಂಪಾಪತಿಗೆ ಹೂಗಳನ್ನು ಏರಿಸತೊಡಗಿದನು. ಇತ್ತ ಚಂಪೆಯು ಉಲ್ಲಾಸಪಡುತ್ತ ಪಂಪಾಪತಿಗೂ, ಋಷೀಶ್ವರನಿಗೂ ವಿನಯದಿಂದ ನಮಿಸಿ ದೂರ ಸರಿದು ಭಕ್ತಿಯಿಂದ ಕೈಜೋಡಿಸಿಕೊಂಡು ಶಿವಪೂಜೆಯನ್ನು ನೋಡುತ್ತ ಕುಳಿತುಕೊಂಡಳು.

ಚಂಪೆಯು ಹದಿನಾರು ವರ್ಷದ ಮುಗ್ಧೆಯಾಗಿದ್ದಳು. ಆ ಸ್ವಭಾವಸುಂದರಿಯ ಉಡಿಗೆ–ತೊಡಿಗೆಗಳು ಋಷಿಗಳ ಆಶ್ರಮಕ್ಕೆ ಒಪ್ಪುವಂಥವಿದ್ದರೂ ಅವು ಆಕೆಯ ಸೌಂದರ್ಯದಲ್ಲಿ ಕೊರತೆಯನ್ನುಂಟುಮಾಡುವಂಥವಿದ್ದಿಲ್ಲ. ಅವುಗಳಿಂದ ಚಂಪೆಯ ಆಗರ್ಭ ಶ್ರೀಮಂತತನವು ಚೆನ್ನಾಗಿ ವ್ಯಕ್ತವಾಗುತ್ತಿತ್ತು. ಆಕೆಯು ರೇಶಿಮೆಯ ಹಳದಿಯ ಬಣ್ಣದ ಸೂಕ್ಷ್ಮ ಪೀತಾಂಬರ ವನ್ನುಟ್ಟುಕೊಂಡು, ಹಸರು ರೇಶಿಮೆಯ ಕುಪ್ಪಸವನ್ನು ತೊಟ್ಟುಕೊಂಡಿದ್ದಳು. ಆಕೆಯ ಕಾಲೊಳಗಿನ ಸರಪಳಿಗಳೂ, ಟೊಂಕದೊಳಗಿನ ಪಟ್ಟಿಯೂ, ಕೈಯೊಳಗಿನ ಕಂಕಣಗಳೂ, ಕೊರಳೊಳಗಿನ ಅಲಂಕಾರಗಳೂ ಆಯಾ ಅವಯವಗಳ ಸೌಂದರ್ಯವನ್ನು ನೋಡುವವರ ಕಣ್ಣುಮುಂದೆ ತಟ್ಟನೆ ಇಡುವಷ್ಟು ಸ್ಪಷ್ಟವಾಗಿ ಒಪ್ಪುತ್ತಿದ್ದವು. ಆಕೆಯ ಮೂಗಿನೊಳಗಿನ ಮೂಗುಬಟ್ಟು–ಬುಲಾಕುಗಳೂ, ಕಿವಿಗಳೊಳಗಿನ ವಜ್ರದ ಬೆಂಡವೋಲೆ–ಬುಗಡಿಗಳೂ ಮುಖದ ಸೌಂದರ್ಯವನ್ನು ಹೆಚ್ಚಿಸುತ್ತಿದ್ದವು. ಚಂಪೆಯ ಮುಖಭಾವವೇ ಅಂಥ ಮೋಹಕ ವಾದದ್ದು. ಆಕೆಯ ಮಾವಿನಕಾಯಿಯ ಹೋಳಿನಂಥ ದೊಡ್ಡ ಕಣ್ಣುಗಳ ಹೊಳಪನ್ನು ಬಣ್ಣಿಸಲಳವಲ್ಲ. ಚಂಪೆಯ ಉದ್ದವಾದ ಕೂದಲುಗಳಿಗೆ ಹೆರಳು ಹಾಕದೆ ಹಾಗೇ ತುರುಬುಕಟ್ಟಿ ಅದರಲ್ಲಿ ಅರಳು ಮಲ್ಲಿಗೆಯ ಮಾಲೆಯನ್ನು ಪ್ರಶಸ್ತವಾಗಿ ಮುಡಿಸಿದ್ದರಿಂದ ಸೌಂದರ್ಯವನ್ನು ಸೌಕುಮಾರ್ಯದಿಂದ ಅಲಂಕರಿಸಿದಂತಾಗಿತ್ತು. ಉಂಗುರಗೂದಲುಗಳ ಅಲೆದಾಟದಿಂದ

ಚಂಪೆಯ ಲಲಾಟ ಪ್ರದೇಶವು ಮನೋಹರವಾಗಿ ಒಪ್ಪುತ್ತಿತ್ತು. ಇಷ್ಟರವಟ್ಟಿಗಿನ ವಸ್ತ್ರಾಲಂಕಾರಗಳ ಶೋಭೆಗೂ ಚಂಪೆಯು ಮನಸ್ಸು ಮಾಡುವವಳಲ್ಲ. ಆದರೆ ವಾತ್ಸಲ್ಯದ ಋಷೀಶ್ವರರ ಆಶ್ರಮದಲ್ಲಿದ್ದ ಸುಮಂಗಲೆಯರು ಅಕ್ಕರೆಯಿಂದ ಆಕೆಯನ್ನು ಶೃಂಗರಿಸಿ ನೇತ್ರಗಳ ಸಾಫಲ್ಯವನ್ನು ಮಾಡಿಕೊಳ್ಳಲಿಕ್ಕೆ ಆತುರಪಡುತ್ತಿದ್ದದ್ದರಿಂದ ಅವರ ಮನಸ್ಸನ್ನು ಮುರಿಯುವುದು ಚಂಪೆಯಿಂದಾಗುತ್ತಿದ್ದಿಲ್ಲ. ಕೂಸಿದ್ದಾಗಿನಿಂದ ಕಣ್ವಋಷಿಗಳ ಆಶ್ರಮದಲ್ಲಿ ಬೆಳೆದಿದ್ದ ಶಕುಂತಲೆಗಿಂತ ಚಂಪೆಯು ಹೆಚ್ಚು ವ್ಯವಹಾರಚತುರಳಾಗಿದ್ದರೂ, ಶಾಂತರಾದ ಋಷಿಗಳ ಆಶ್ರಮದ ಎರಡು ವರ್ಷದ ಸಹವಾಸದಿಂದ ಆಕೆಯಲ್ಲಿ ಶ್ಲಾಘನೀಯವಾದ ಸರಳತನವು ತೋರುತ್ತಿತ್ತು. ವಾಡಿಕೆಯಾಗಿ ಹೆಂಗಸರಲ್ಲಿ ತಕ್ಕ ಹೊಯ್ಯಾಲಿತನದ ಗಂಧವು ಕೂಡ ಆಕೆಯಲ್ಲಿ ಇದ್ದಿಲ್ಲ. ಆಕೆಯ ಲಗ್ನದ ಕಾಲವು ಮೀರುತ್ತ ಬಂದಿದ್ದರೂ, ತನ್ನ ಸುಖದುಃಖದ ಭಾರವೆಲ್ಲ ತನ್ನ ಪೋಷಕರಾದ ಋಷಿಗಳ ಮೇಲೆ ಇದ್ದದ್ದರಿಂದ, ಆ ಚದುರೆಯು ಋಷಿವರ್ಯರ ಮಹಾಮಹಿಮೆಯಲ್ಲಿ ನಂಬಿಗೆಯನ್ನಿಟ್ಟು ನಿಶ್ಚಿಂತೆಯಿಂದ ಇರುತ್ತಿದ್ದಳು. ಆಕೆಯ ಮುಖಮುದ್ರೆಯು ಯಾವಾಗಲೂ ನಿಷ್ಕಲಂಕವೂ, ಸುಪ್ರಸನ್ನವೂ, ಸುಹಾಸ್ಯಯುಕ್ತವೂ ಆಗಿರುತ್ತಿತ್ತು. ಆಕೆಯು ಭಕ್ತಿಪುರಸ್ಸರ ಒಮ್ಮೆ ಋಷಿ ವರ್ಯನನ್ನೂ, ಮತ್ತೊಮ್ಮೆ ಪಂಪಾಪತಿಯನ್ನೂ ನೋಡುತ್ತ ಅತ್ತಿತ್ತ ಉಲುಕದೆ ಸ್ವಸ್ಥವಾಗಿ ಕುಳಿತುಕೊಂಡಿದ್ದಳು.

ಈ ಸ್ಥಿತಿಯಲ್ಲಿ ಋಷಿಯ ದರ್ಶನದಿಂದ ಶಾಂತವಾಗಿದ್ದ ನಮ್ಮ ತರುಣ ನಾಯಕನ ಮನಸ್ಸನ್ನು ಚಂಪೆಯು ವ್ಯಗ್ರಗೊಳಿಸಿದ್ದು ಆಶ್ಚರ್ಯವಲ್ಲ. ಹರಿಹರ ಬ್ರಹ್ಮಾದಿಗಳೂ ಸ್ತ್ರೀಯರಿಗೆ ಮರುಳಾಗಿ ದಾಸವೃತ್ತಿಯನ್ನು ಕೈಕೊಂಡಿರಲು, ನಾಯಕನಂಥ ಪೋರನ ಪಾಡೇನು? ಪಾಪ, ಚಂಪೆಯು ನಾಯಕನನ್ನು ಮಾತಾಡಿಸಿದ್ದಿಲ್ಲ. ನೋಡಿದ್ದಿಲ್ಲ ಸಹ! ಆದರೆ ಆಕೆಯ ಅಪ್ರತಿಮ ಸೌಂದರ್ಯವು ಆಕೆಗೆ ಗೊತ್ತಾಗದಂತೆ ನಾಯಕನ ಮನಸ್ಸನ್ನು ಎಳಕೊಂಡಿತು. ಅದರಲ್ಲಿ ಋಷೀಶ್ವರನು ಚಂಪೆಯ ಏಕನಿಷ್ಠ ಭಕ್ತಿಯನ್ನು ಹೊಗಳಿ, ನೀನು ವೀರಪತ್ನಿಯೂ ವೀರ ಮಾತೆಯೂ ಆಗುವೆಯೆಂದು ಆಶೀರ್ವದಿಸಿದ್ದನ್ನು ಕೇಳಿದ ನಾಯಕನಿಗೆ ಚಂಪೆಯು ಹೆಚ್ಚು ಮೋಹಕಳಾಗಿ ತೋರಿದಳು. ಆತನು ಚಂಪೆಯ ಸುಂದರ ಮೂರ್ತಿಯನ್ನೂ ಸಾಭಿಲಾಷೆಯಿಂದ ನೋಡಹತ್ತಿದನು. ಫಲಮಂತ್ರಾಕ್ಷತೆಗಳ ಮಾತು ಹೊರಟಿದ್ದರಿಂದಂತು ನಾಯಕನು ಚಂಪೆಯಲ್ಲಿ ಆಪ್ತತ್ವವನ್ನೇ ಬಳಿಸಿದನು! ಪರಸ್ತ್ರೀಯನ್ನು ಹೀಗೆ ಅಭಿಲಾಷೆಯಿಂದ ನೋಡುವುದೂ, ಫಲಮಂತ್ರಾಕ್ಷತೆಯ ಸಂಬಂಧದ ನೆವದಿಂದ ಚಂಪೆಯನ್ನು ಆಪ್ತಳೆಂದೇ ಭಾವಿಸುವುದೂ ನೀತಿಗೆ ಸಮ್ಮತವಲ್ಲೆಂಬ ಮಾತು ನಾಯಕನ ಮನಸ್ಸಿನಲ್ಲಿ ಕಟಿಯುತ್ತಿತ್ತು. ಮೇಲಾಗಿ ನಾಯಕನು ಸಿಕ್ಕ ಸಿಕ್ಕ ಹೆಂಗಸರ ಹಾಳು ರೂಪ-ಲಾವಣ್ಯಗಳಿಗೆ ಮರುಳಾಗತಕ್ಕಂಥ ಹೇಸಿ ಮನಸ್ಸಿನವನಿದ್ದಿಲ್ಲ. ಆತನು ಇಲ್ಲಿಯವರೆಗೆ ಪರಸ್ತ್ರೀಯರನ್ನು ಕಣ್ಣೆತ್ತಿ ನೋಡುವುದಂತು ಇರಲಿ, ಎಷ್ಟೋ ಲೋಕಸುಂದರಿ ಯರಾದ ಪ್ರೌಢವಧುಗಳೊಡನೆ ವಿವಾಹ ಬೆಳೆಸಲಿಕ್ಕೂ ಮನಸ್ಸು ಮಾಡಿದ್ದಿಲ್ಲ. ವಿವಾಹವು, ತೆಗೆಯಲಿಕ್ಕೂ-ಕಡಿಯಲಿಕ್ಕೂ ಬಾರದ ತಾಪದಾಯಕ ಬೇಡಿಯಾದದ್ದರಿಂದ ಅದರ ಗೊಡವಿಗೆ ಹೋಗದಿರುವುದೇ ತರುಣವೀರರಿಗೆ ಭೂಷಣವೆಂದು ಆತನು ಅನ್ನುತ್ತಿದ್ದನು. ಗರಡಿಯ ಸಾಧಕ

ಮಾಡುವುದು, ಕುಸ್ತಿಯನ್ನು ಹಿಡಿಯುವದು ಯುದ್ಧ ಕೌಶಲ್ಯವನ್ನು ಸಂಪಾದಿಸುವುದು, ಬೇಟೆಯಾಡುವುದು, ತನಗೆ ಎದುರಾದವರನ್ನು ಕ್ಷಣದಲ್ಲಿ ಸೋಲಿಸಿ ಬ್ರಹ್ಮಾನಂದವನ್ನು ಪಡೆಯುವುದು ಇವುಗಳಲ್ಲಿಯೇ ನಾಯಕನ ತಾರುಣ್ಯದ ಆರಂಭದ ಮಹತ್ವದ ಕಾಲವು ಕ್ರಮಿಸತೊಡಗಿತ್ತು, ತಂದೆಯ ವ್ರತವನ್ನು ಪಾಲಿಸುವುದಾದರೆ, ಬ್ರಹ್ಮಚರ್ಯದಿಂದಲೇ ಇರಬೇಕಲ್ಲದೆ, ವಿವಾಹದ ಬಂಧನಕ್ಕೆ ಒಳಗಾಗುವುದು ತಕ್ಕದ್ದಲ್ಲವೆಂದು ಆತನು ನಿಶ್ಚಯಿಸಿದ್ದನು; ಆದರೆ ಮನಸ್ಸಿನ ಧರ್ಮವು ವಿಚಿತ್ರವಾದದ್ದು. ಅದು ಯಾವದೊಂದನ್ನು ಅಂಟಿಕೊಂಡರೆ, ಕಿತ್ತು ಕೊಳ್ಳಲಿಕ್ಕೆ ಬಾರದಷ್ಟು ಗಟ್ಟಿಯಾಗಿ ಅಂಟಿಕೊಳ್ಳುತ್ತದೆ; ಅಂಟಿಕೊಳ್ಳದಿದ್ದರೆ ಆ ನಿಟ್ಟಿಗೆ ಹಣಿಕಿ ನೋಡುವುದಿಲ್ಲ! ನಾಯಕನ ಮನಸ್ಸಿನ ಸ್ಥಿತಿಯು ಹೀಗೆಯೇ ಆಯಿತು. ಸ್ತ್ರೀಯರ ಕಡೆಗೆ ಹಣಿಕಿನೋಡದ ಆತನ ಮನಸ್ಸು ಚಂಪೆಯನ್ನು ಬಿಟ್ಟು ಬಾರದಾಯಿತು. ಚಂಪೆಯ ಅಲೌಕಿಕ ಸೌಂದರ್ಯವನ್ನೂ, ನಾಯಕನ ತಾರುಣ್ಯವನ್ನೂ ಮನಸ್ಸಿನಲ್ಲಿ ತಂದರೆ, ಆಶ್ಚರ್ಯಕ್ಕೆ ಸ್ಥಳವು ಉಳಿಯುವುದಿಲ್ಲ. ತೊಟ್ಟಿಲಕ್ಕೆ ಬಾಸಿಂಗಕಟ್ಟುವ ಈಗಿನ ಕಾಲದಲ್ಲಿ ನಾಯಕನಷ್ಟು ಐಶ್ವರ್ಯಾಧಿಕಾರವುಳ್ಳವರು, ಆತನ ವಯಸ್ಸಿಗೆ ಎರಡು ಲಗ್ನ ಮಾಡಿಕೊಂಡು ಬೇಕಾದರೆ ಪರಸ್ತ್ರೀ ಲಂಪಟತ್ವದಿಂದ ಕ್ಷೀಣಾಂಗರೂ–ಕ್ಷೀಣಾಯುಷ್ಯವುಳ್ಳವರೂ ಆಗಿ ಇಹಲೋಕದಲ್ಲಿಯೇ ನರಕಭೋಗವನ್ನು ಅನುಭವಿಸಬಹುದಾಗಿತ್ತು, ಇರಲಿ, ಸದ್ಯಕ್ಕೆ ನಾಯಕನ ಮನಸ್ಸು ತಟ್ಟನೆ ಚಂಪೆಯನ್ನು ಅಂಟಿಕೊಂಡದ್ದರಿಂದ ಆತನ ನಿಶ್ಚಯವು ಹಾಳಾಗಿಹೋಯಿತು, ಉತ್ಸಾಹವು ಕುಗ್ಗಿತು, ಸ್ವಾತಂತ್ರ್ಯವು ನಷ್ಟವಾಯಿತು, ಶರೀರದಿಂದಲ್ಲದಿದ್ದರೂ ಮನಸ್ಸಿನಿಂದ ಆತನು ಚಂಪೆಯ ದಾಸಾನುದಾಸನಾದಂತಾದನು ಸ್ತ್ರೀಯ ದರ್ಶನಮಾತ್ರದಿಂದಾದ ಈ ದುರ್ದಸೆಯ ಎಚ್ಚರವು ನಮ್ಮ ತರುಣ ನಾಯಕನಿಗೆ ಇದ್ದಿಲ್ಲವೆಂತಲ್ಲ; ಆತನು ಪೂರ್ಣಜಾಗರೂಕ ನಾಗಿದ್ದು, ಪಶ್ಚಾತ್ತಾಪ ಪಡುತ್ತ ಚಂಪೆಯಲ್ಲಿ ನೆಟ್ಟಿದ್ದ ತನ್ನ ಮನಸ್ಸನ್ನು ಕಿತ್ತುಕೊಳ್ಳಲಿಕ್ಕೆ ಪ್ರಯತ್ನಪಡುತ್ತಿದ್ದನು; ಆದರೆ ಆ ಖೋಡಿ ಮನಸ್ಸು ಅವನ ಮಾತು ಕೇಳಿದರಷ್ಟೇ! ನಾಯಕನು ಕಿತ್ತುಕೊಳ್ಳಲಿಕ್ಕೆ ಪ್ರಯತ್ನ ಮಾಡಿದಷ್ಟು ಅದು ಹೆಚ್ಚು ದೃಢವಾಗಿ ಚಂಪೆಯನ್ನು ಅಂಟಿಕೊಳ್ಳ ತೊಡಗಿತು. ಧರ್ಮವನ್ನರಿತ ದುಷ್ಯಂತನು, ಬ್ರಾಹ್ಮಣಕುವರಿಯಾದ ಶಕುಂತಲೆಯ ಮೇಲೆ ಕ್ಷತ್ರಿಯನಾದ ತನ್ನ ಮನಸ್ಸು ಹರಿಯುವುದು ಪಾಪವೆಂದು ಭಾವಿಸಿದ್ದು ನಾಯಕನಿಗೆ ನೆನಪಾಯಿತು. ನಾಯಕನು ಒಳ್ಳೆಯ ರಸಿಕನಿದ್ದನು, ಬಹುಶ್ರುತನಿದ್ದನು, ಪುರಾಣ ಪುಣ್ಯಕಥೆಗಳನ್ನು ಕೇಳಿದ್ದನು; ಆದರೆ ಮನಸ್ಸಿನ ವೇಗವನ್ನು ತಡೆಯಲು ಯಾರಿಗೆ ಶಕ್ಯವು? ಚಂಪೆಯು ಋಷಿಯ ಆಶ್ರಮಕ್ಕೆ ಬಂದು ಎರಡೇ ವರ್ಷಗಳಾಗಿರುವುವೆಂದು ಋಷಿಯ ಮುಖದಿಂದ ಕೇಳಿದ್ದನ್ನಷ್ಟೇ ನೆವಮಾಡಿಕೊಂಡು ನಾಯಕನ ಮನಸ್ಸು ಚಂಪೆಯನ್ನು ಬಿಟ್ಟು ತಿರುಗಿಸ ಬಾರದಾಯಿತು. ಬ್ರಾಹ್ಮಣಕುವರಿಯಿದ್ದರೆ ತನ್ನ ಮನಸ್ಸು ಎಂದೂ ಹರಿಯುತ್ತಿದ್ದಿಲ್ಲೆಂದು ದುಷ್ಯಂತರಾಜನಂತೆ ನಮ್ಮ ಎಚ್ಚಮನಾಯಕನೂ ಭಾವಿಸಿದನು. ಚಂಪೆಯು ಸ್ವಾಭಾವಿಕವಾಗಿ ಬಾಗಿಲಕಡೆಗೆ ಒಂದೆರಡು ಸಾರೆತಿರುಗಿ ನೋಡಿದಾಗ, ನಾಯಕನು ಪ್ರೀತಿಯಿಂದ ಆಕೆಯು ತನ್ನನ್ನೇ ನೋಡಿದಳೆಂದು ತಿಳಿದು ಸಮಾಧಾನಪಟ್ಟದ್ದು ಆಶ್ಚರ್ಯವಲ್ಲ, ಹೀಗೆ ಕಾಮುಕರು

ಕುಹಕ ಬುದ್ಧಿಯಿಂದ ಸ್ತ್ರೀಯರ ಸ್ವಾಭಾವಿಕ ವ್ಯಾಪಾರಗಳನ್ನು ಕೂಡ ತಮ್ಮ ಸಲುವಾಗಿಯೇ ಆದಂಥವೆಂದು ಭ್ರಾಂತಿಪಡುವುದು ವಾಡಿಕೆಯಾಗಿರುವುದು. ಪಂಪಾಪತಿಯ ಪೂಜೆಯು ಮುಗಿಯುತ್ತ ಬಂದಂತೆ ನಾಯಕನ ಮನಸ್ಸು ಅಸ್ವಸ್ಥವಾಗುತ್ತ ಹೋಯಿತು. ಆತನು ತಟ್ಟನೆ ಗುಡಿಯೊಳಗೆ ಹೋಗಿ ಪಂಪಾಪತಿಗೂ, ಋಷೀಶ್ವರನಿಗೂ ವಂದಿಸಿ, ಆ ವಂದನದ ಸದ್ಯಃಫಲವೆಂದು ಚಂಪೆಯನ್ನು ಕಣ್ಣುತುಂಬ ನೋಡಿ, ಪುಣ್ಯವಿದ್ದರೆ ಆಕೆಯ ಮಂಜುಲವಾಣಿಯನ್ನು ಕಿವಿಯಿಂದ ಕೇಳಿ ಧನ್ಯನಾಗಬೇಕೆಂದು ಕುಳಿತ ಸ್ಥಳದಿಂದ ಎದ್ದು ನಿಂತನು. ನಿನ್ನೆ ತಾನು ಎರಡನೆಯ ಸಾರೆ ಗುಡಿಯಲ್ಲಿ ಹೋಗುವಾಗ "ಹರಹರ ಮಹಾದೇವ" ಎಂಬ ಶಬ್ದಗಳು ಮಂಜುಲಸ್ವರದಿಂದ ಕಿವಿಗೆ ಬಿದ್ದದ್ದನ್ನು ನಾಯಕನು ಮರೆತಿದ್ದಿಲ್ಲ. ಆ ಸ್ವರಗಳು ಚಂಪೆಯ ಮುಖದಿಂದಲೇ ಹೊರಟಿರಬಹುದೆಂದು ಆತನು ನೆನಿಸಿದನು. ನಾಯಕನು ಇನ್ನು ಗುಡಿಯಲ್ಲಿ ಕಾಲಿಡತಕ್ಕವನು, ಅಷ್ಟರಲ್ಲಿ ಕುದುರೆಗಳ ಕೊಳಗಗಳ ಸಪ್ಪಳವು ಸ್ಪಷ್ಟವಾಗಿ ಕೇಳಿದ್ದರಿಂದ, ಕುದುರೆಗಳೆಲ್ಲಿಯವೆಂದು ನೋಡಿಬರುವುದಕ್ಕಾಗಿ ಆತನು ಬೈಲಿಗೆ ಬಂದನು. ಅಷ್ಟರಲ್ಲಿ ನಾಲ್ಕು ಜನ ಸವಾರರು ಕುದುರೆಯನ್ನೋಡಿಸುತ್ತ ನಾಯಕನು ನಿಂತಲ್ಲಿಗೆ ಬಂದರು.

ಹೀಗೆ ಆಕಸ್ಮಿಕವಾಗಿ ಬಂದ ನಾಲ್ವರು ಸರದಾರರೂ ಕುದುರೆಗಳನ್ನಿಳಿದು ಎಚ್ಚಮ ನಾಯಕನಿಗೆ ಸಾಷ್ಟಾಂಗವಾಗಿ ವಂದಿಸಿದರು. ಅವರಲ್ಲಿ ಒಬ್ಬನು ರಾಜಮುದ್ರೆಯುಳ್ಳ ಒಂದು ಚೀಲವನ್ನು ನಾಯಕನ ಕೈಗೆ ವಿನಯದಿಂದಿತ್ತು ನಮಿಸಿ ಹಿಂದಕ್ಕೆ ಸರಿದು ನಿಂತನು. ಕೂಡಲೆ ನಾಯಕನು ಚೀಲವನ್ನು ತಲೆಯಮೇಲಿಟ್ಟುಕೊಂಡು ಭಕ್ತಿಯಿಂದ ವಂದಿಸಿ, ಮುದ್ರೆಯನ್ನೊಡೆದು ಒಳಗಿನ ಪತ್ರದ ಚೀಲವನ್ನು ತೆಗೆದು ಒಡೆದು ಓದಿದನು. ಆಗ ನಾಯಕನ ಮುಖವು ಕಳೆಗುಂದಿತು. ಕಣ್ಣುಗಳು ಅಶ್ರುಗಳಿಂದ ತುಂಬಿದವು. ಆತನು ತನ್ನ ಸಮೀಪದಲ್ಲಿ ನಿಂತಿರುವ ಸೇವಕನನ್ನು ಕುರಿತು–ತಿರುವೆಂಕಟಾ, ನಾವು ಈಗಲೇ ಚಂದ್ರಗಿರಿಗೆ ಹೊರಡತಕ್ಕದ್ದು, ಕುದುರೆಗಳು ಸ್ವಲ್ಪ ವಿಶ್ರಮಿಸಲಿ. ನಾನು ಈಗ ಪಂಪಾಪತಿಯ ದರ್ಶನಮಾಡಿಕೊಂಡು ಬರುತ್ತೇನೆ ಎಂದು ಹೇಳಿ ಲಗುಬಗೆಯಿಂದ ಗುಡಿಯನ್ನು ಹೊಕ್ಕನು; ಆದರೆ ಅಲ್ಲಿ ಋಷೀಶ್ವರನೂ ಇದ್ದಿಲ್ಲ ಚಂಪೆಯೂ ಇದ್ದಿಲ್ಲ. ತನ್ನ ಮನೋಹಾರಿಣಿಯು ಋಷಿಶ್ವರನೊಡನೆ ಕ್ಷಣಮಾತ್ರದಲ್ಲಿ ಅಂತರ್ಧಾನಹೊಂದಿದ್ದರಿಂದ ತರುಣ ನಾಯಕನ ಮನೋರಾಜ್ಯಗಳೆಲ್ಲ ನಷ್ಟವಾದಂತಾದವು. ತಾನು ಋಷೀಶ್ವರನನ್ನು ಕಾಣಲಿಕ್ಕೆ ವಿಲಂಬಮಾಡಿ ಮೋಸಹೋದೆನೆಂದು ನಾಯಕನು ಮಿಡುಕಿದನು. ಋಷೀಶ್ವರನ ದರ್ಶನದ ನೆವದಿಂದ ಚಂಪೆಯನ್ನು ಕಂಡು, ಆಕೆಯ ಸಮಕ್ಷ ಫಲಮಂತ್ರಾಕ್ಷತೆಗಳು ತನ್ನವೇ ಎಂದು ಹೇಳಿ, ಪ್ರಸಂಗವು ಎಲ್ಲಿಗೆ ಬರುತ್ತದೆ. ನೋಡಬೇಕೆಂದು ಆತನು ಆತುರಪಡುತ್ತಿದ್ದನು; ಆದರೆ ಗುಡಿಯಲ್ಲಿ ಯಾರೂ ಇಲ್ಲದ್ದರಿಂದ ನಾಯಕನು ನಿರಾಶೆಪಡಬೇಕಾಯಿತು. ಇತ್ತ ಚಂಪೆಯನ್ನು ಕಾಣದೆ ಹೋಗುವುದೂ ಕಷ್ಟ, ಅತ್ತ ಸ್ವಾಮಿಯ ಆಜ್ಞೆಯನ್ನು ಮೀರಿ ಸ್ವಾಮಿದ್ರೋಹದ ಪಾಪಕ್ಕೆ ಗುರಿಯಾಗುವುದೂ ಕಷ್ಟ. ಹೀಗಾಗಿ ಆ ತರುಣನು ಬಹಳ ಅಸಮಾಧಾನಪಟ್ಟನು. ಕಡೆಗೆ ಆತನು ಸ್ವಾಮಿಯ ಆಜ್ಞೆಯನ್ನು ಪಾಲಿಸುವುದೇ ತನ್ನ ಪವಿತ್ರ ಕರ್ತವ್ಯವೆಂದು ತಿಳಿದು, ಮತ್ತೊಮ್ಮೆ ಚಂಪೆಯನ್ನು ಕಾಣುವ ವಿಚಾರದಿಂದ ನಿರ್ವಾಹವಿಲ್ಲದೆ ಕುದುರೆಯನ್ನೇರಿ ಸಂಗಡಿಗರೊಡನೆ ಚಂದ್ರಗಿರಿಗೆ ಸಾಗಿದನು.

# ನರಕಸಾಧನ

ಪ್ರಾತಃಕಾಲದ ಸಮಯವು. ಚಂದ್ರಗಿರಿಯ ಅರಮನೆಯಲ್ಲಿ ದರ್ಬಾರದ ವ್ಯವಸ್ಥೆಯು ಒತ್ತರದಿಂದ ಸಾಗಿದೆ. ವಿಜಯನಗರದ ಸಿಂಹಾಸನದಲ್ಲಿ ನಿಷ್ಠೆಯುಳ್ಳ ಎಷ್ಟೋ ಮಾಂಡಲಿಕ ರಾಜರೂ, ನಾಯಕರೂ ದರ್ಬಾರಕ್ಕೆ ಹೋಗುವ ಸಿದ್ಧತೆಯಲ್ಲಿ ತೊಡಗಿದ್ದಾರೆ. ದರ್ಬಾರವನ್ನು ಕುರಿತು ಪುರಜನರಲ್ಲಿ ತರ್ಕವಿತರ್ಕಗಳು ನಡೆದಿವೆ. ತಾಸು ಹೊತ್ತು ಏರಲು, ದರ್ಬಾರಕ್ಕೆ ಹೋಗುವ ಪ್ರಮುಖ ಜನರು, ರಾಜಬೀದಿಯನ್ನು ಹಿಡಿದು ಸಾಗಹತ್ತಿದ್ದಾರೆ. ಪುರಜನವು ಅಲ್ಲಲ್ಲಿ ಗುಂಪುಗೂಡಿ ಹೋಗುವವರನ್ನು ಕುರಿತು ಗುಜುಗುಟ್ಟುತ್ತಲಿದೆ. ಮುಖ್ಯ ರಾಜಕಾರಣಕ್ಕೆ ಸಂಬಂಧಿಸಿದ ಪುರುಷರಲ್ಲದೆ, ಉಳಿದವರು ದರ್ಬಾರಕ್ಕೆ ಹೋಗುವ ಹಾಗಿಲ್ಲದ್ದರಿಂದಲೂ, ದರ್ಬಾರದಲ್ಲಿ ಜರುಗತಕ್ಕ ವಿಷಯವನ್ನು ಪ್ರಸಿದ್ಧಗೊಳಿಸದ್ದರಿಂದಲೂ ಜನರ ಕಲ್ಪನಾಶಕ್ತಿಗೆ ಕಳೆಯೇರುತ್ತಲಿದೆ. ಮಂಗಳವಾದ್ಯಾದಿಗಳ ಆಡಂಬರವಿಲ್ಲದೆ, ಕೇವಲ ಔದಾಸೀನ್ಯದಿಂದ ದರ್ಬಾರದ ಕಾರ್ಯವು ಸಾಗಲಿಕ್ಕೆ, ಮಹಾರಾಜರಾದ ಮೊದಲನೇ ವೆಂಕಟದೊರೆಗಳ ಅಸಾಧ್ಯ ಬೇನೆಯೇ ಕಾರಣವೆಂಬುದನ್ನು ಕೇಳಿ ಜನರು ಚಿಂತಾಕ್ರಾಂತರಾಗಿದ್ದಾರೆ. ಜನರ ಮೋರೆಗಳು ನಿಸ್ತೇಜವಾಗಿದ್ದು, ನೋಡಿದತ್ತೆಲ್ಲ ಔದಾಸೀನ್ಯದ ಕಳೆಯು ಉಕ್ಕುತ್ತಲಿದೆ. ಈ ಸ್ಥಿತಿಯಲ್ಲಿ ಎರಡು ತಾಸು ಹೊತ್ತು ಏರಲು, ಬೇನೆಯಿಂದ ಜರ್ಜರನಾದ ವೆಂಕಟದೊರೆಯು, ಬಹು ಕಷ್ಟದಿಂದ ದರ್ಬಾರಕ್ಕೆ ಬಂದನು. ಆಗ ಎಲ್ಲರು ಎದ್ದು ನಿಂತು ದರ್ಬಾರದ ಬಹುಮಾನದಂತೆ ಅರಸನನ್ನು ನಮಿಸಿ, ರಾಜಾಜ್ಞೆಯಂತೆ ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತುಕೊಂಡರು. ಅರಸನಿಗೆ ಕುಳಿತುಕೊಳ್ಳುವ ತ್ರಾಣವಿಲ್ಲದ್ದರಿಂದ ಹಾಸಿಗೆಯ ಮೇಲೆ ಮಲಗಿಕೊಂಡನು. ಆತನ ಈ ಶೋಚನೀಯ ಸ್ಥಿತಿಯನ್ನು ನೋಡಿ, ದರ್ಬಾರದೊಳಗಿನ ಸ್ವಾಮಿನಿಷ್ಠ ಜನರ ಕಣ್ಣುಗಳೊಳಗಿಂದ ನೀರುಗಳು ತಾವೇ ಸುರಿಯಹತ್ತಿದವು. ತಮ್ಮ ಅಂತ್ಯಕಾಲದಲ್ಲಿ ಇಷ್ಟು ಜನರು ಸ್ವಾಮಿನಿಷ್ಠೆಯಿಂದ ಕಣ್ಣೀರು ಸುರಿಸುತ್ತ ಕುಳಿತುಕೊಂಡಿರುವುದನ್ನು ನೋಡಿ, ಆ ವೃದ್ಧರಾಜನ ಕಣ್ಣುಗಳೊಳಗಿಂದ ಆನಂದಬಾಷ್ಪಗಳು ಸುರಿಯಹತ್ತಿ ಕಂಠವು ಬಿಗಿದು, ಮಾತುಗಳು ಹೊರಡದಾದವು. ಮೊದಲೇ ಬೇನೆಯಿಂದ ಕ್ಷೀಣವಾಗಿದ್ದ ಆ ದೊರೆಗೆ ಆನಂದದ ಇಷ್ಟೇ ವೇಗದಿಂದ ಮೂರ್ಛೆಯು ಬಂದು ಆತನು ಕಣ್ಣುಗಳನ್ನು ಮುಚ್ಚಿದನು. ಇದನ್ನು ನೋಡಿ ದರ್ಬಾರದಲ್ಲಿ ಹಾಹಾಕಾರವು ಉತ್ಪನ್ನವಾಯಿತು; ಆದರೆ ರಾಜವೈದ್ಯರ ಅತ್ಯುತ್ತಮವಾದ ಉಪಚಾರದಿಂದ ಸ್ವಲ್ಪ ಹೊತ್ತಿನಲ್ಲಿಯೇ ಅರಸನು ಮೂರ್ಛೆ ಇಳಿದು ಸಮಾಧಾನದಿಂದ ಮಾತುಕಥೆಗಳನ್ನಾಡಹತ್ತಿದನು.

ವೆಂಕಟರಾಜನ ವಂಶವು ಸಾಮಾನ್ಯವಾದದ್ದಲ್ಲ, ಆತನ ಪೂರ್ವಜರು ದಕ್ಷಿಣದೇಶವನ್ನು ಉದ್ಧರಿಸಿದ ವಿಜಯನಗರದ ಸುಪ್ರಸಿದ್ಧ ರಾಯರಾಗಿದ್ದರು ವಿಜಯನಗರದ ರಾಯರಲ್ಲಿ ಮೂರು ವಂಶಗಳಾದವು. ಮೊದಲನೆಯದು ಹುಕ್ಕನ ವಂಶ, ಎರಡನೆಯದು ನರಸಿಂಗನ ವಂಶ, ಮೂರನೆಯದು ತಿರುಮಲನವಂಶ. ಇವುಗಳಲ್ಲಿ ಮೊದಲನೆಯ ವಂಶದ ಮೊದಲನೆಯ ರಾಜನಾದ ಹುಕ್ಕನೆಂಬವನು ಶ್ರೀ ವಿದ್ಯಾರಣ್ಯರ ಸಹಾಯದಿಂದ ವಿಜಯನಗರದ ರಾಜ್ಯವನ್ನು

ಸ್ಥಾಪಿಸಿದ ತರುವಾಯ, ಅವನ ವಂಶದವರು ಮುಸಲ್ಮಾನರೊಡನೆ ಹೋರಾಡುತ್ತ ೧೫೦ ವರ್ಷ ಆಳಿ ತಮ್ಮ ರಾಜ್ಯವನ್ನು ಕಾಯ್ದುಕೊಂಡರು., ಇವರ ತರುವಾಯ ನರಸಿಂಗನ ವಂಶದವರು ರಾಜ್ಯವನ್ನು ಘನತೆಗೇರಿಸಿ, ಸಾಮರ್ಥ್ಯದಿಂದ ಸರಾಸರಿ ೭೭ ವರ್ಷ ರಾಜ್ಯವಾಳಿದರು. ಪ್ರಸಿದ್ಧ ತೆನಾಲಿ ರಾಮಕೃಷ್ಣನೆಂಬ ರಸಿಕನು, ಈ ವಂಶದ ಸುಪ್ರಸಿದ್ಧ ಕೃಷ್ಣರಾಜನ ಕಾಲದಲ್ಲಿ ಆಗಿ ಹೋದನು. ಇನ್ನು ಮೊದಲನೆಯ ವಂಶದ ಪ್ರಸಿದ್ಧ ಪುರುಷನಾದ ರಾಮರಾಜನು ತಾಳೀಕೋಟೆಯ ಕಾಳಗದಲ್ಲಿ ತಲೆ ಕೊಯಿಸಿಕೊಂಡು ಮರಣ ಹೊಂದಿದಮೇಲೆ ವಿಜಯ ನಗರವು ಹಾಳಾಗಲು, ಅವನ ವಂಶದವರು ಚಂದ್ರಗಿರಿಗೆ ಹೋಗಿ ರಾಜ್ಯವಾಳಹತ್ತಿದರು. ಮೇಲೆ ಹೇಳಿದ ೧ನೇ ವೆಂಕಟರಾಜನು ರಾಮರಾಜನಿಂದ ನಾಲ್ಕನೆಯ ತಲೆಯವನಾಗಿದ್ದನು. ಗಾವುದಗಟ್ಟಲೆ ಉದ್ದಗಲವಾಗಿ ಹಬ್ಬಿ ಖ್ಯಾತಿಯನ್ನು ಪಡೆದಿದ್ದ ಲಕ್ಷಾವಧಿ ಜನರ ವಸತಿಯಿಂದ ಗಿಜಿಗುಟ್ಟುತ್ತಿದ್ದ, ಮುಗಿಲನ್ನು ಮುಟ್ಟುವ ಮೇಲಂತಸ್ತಿನ ಮನೆಗಳ ಸಾಲುಗಳಿಂದ ಗಂಭೀರ ವಾಗಿದ್ದ, ತುಂಬಿತುಳುಕುತ್ತಿರುವ ಸಂಪತ್ತಿನಿಂದ ಜಗತ್ತಿನಲ್ಲಿ ಮಿಗಿಲಾಗಿದ್ದ ವಿಜಯನಗರದಂಥ ಅಪೂರ್ವ ಪಟ್ಟಣವು ಹಾಳಾದಬಳಿಕ ರಾಯರ ವಂಶದವರು, ಚಂದ್ರಗಿರಿಯಂಥ ಸಮುದ್ರತೀರದ ಸಣ್ಣ ಪಟ್ಟಣದಲ್ಲಿ ಆಳಹತ್ತಿದ್ದರೂ ಅವರ ಗೌರವಕ್ಕೆ ಇನ್ನೂ ಅಷ್ಟು ಕುಂದು ಬಂದಿದ್ದಿಲ್ಲ. ಅವರ ಬಲ–ವೈಭವಗಳಾದರೂ ಪೂರಾ ನಷ್ಟವಾಗಿದ್ದವೆಂದು ಹೇಳುವಹಾಗಿದ್ದಿಲ್ಲ. ಪ್ರಸಂಗ ಬಂದರೆ ಚಂದ್ರಗಿರಿಯ ರಾಯರು ೬೦ ಸಾವಿರದವರೆಗೆ ಸೈನ್ಯವನ್ನು ಕೂಡಿಸಲು ಸಮರ್ಥರಾಗಿದ್ದರು. ಅವರ ಭಾಂಡಾರದಲ್ಲಿ ಮುತ್ತು ರತ್ನಗಳಿಗೂ, ಬೆಳ್ಳಿಬಂಗಾರಗಳಿಗೂ, ವರಹಪುತ್ತಳಿಗಳಿಗೂ ಕೊರತೆಯಿದ್ದಿಲ್ಲ. ಆಗರ್ಭ ಶ್ರೀಮಂತನಾದ ೧ನೇ ವೆಂಕಟರಾಜನು ೨೮ ವರ್ಷ ರಾಜ್ಯವಾಳಿ ವೃದ್ಧನಾಗಿದ್ದನು. ಕಾಲಕ್ಕನುಸರಿಸಿ ಆತನನ್ನು ಬೇನೆಯು ಅಂಟಿಕೊಳ್ಳಲು, ತಾನು ಇನ್ನು ಈ ಬೇನೆಯಿಂದ ಪಾರಾಗುವುದು ಅಸಾಧ್ಯವೆಂದು ತಿಳಿದು, ರಾಜ್ಯದ ಸುರಕ್ಷತೆಯ ಸಂಬಂಧದಿಂದ ನಾಲ್ಕು ಮಾತುಗಳನ್ನು ಹೇಳಿ, ಅಂತ್ಯಕಾಲದ ಭೆಟ್ಟಿಯನ್ನು ಕೊಟ್ಟು, ದೇಹಬಿಡಬೇಕೆಂದು ಆತನು ತನ್ನ ಮಾಂಡಲಿಕರನ್ನು ಕರೆಸಿಕೊಂಡಿದ್ದನು. ಮೇಲೆ ಹೇಳಿದಂತೆ ಮಾಂಡಲಿಕರು ಅವನ ಎಡಬಲಗಳಲ್ಲಿ ಕುಳಿತಿದ್ದರು, ಹೊಟ್ಟೆಯ ಮಗನೆಂದು ಕರೆಸಿಕೊಳ್ಳುವ ಚಿಕ್ಕರಾಯನೂ, ಅರಸನ ಮಾವನಾದ ಜಗರಾಯನೂ, ತಂಗಿಯ ಗಂಡನಾದ ಓಬಲ ರಾಯನೂ ಅರಸನ ಬಳಿಯಲ್ಲಿ ಕುಳಿತುಕೊಂಡಿದ್ದರು. ರಾಣಿಯರು ಪರದೆಯ ಮರೆಯಲ್ಲಿ ಕಣ್ಣೀರು ಸುರಿಸುತ್ತ, ಅರಸನನ್ನು ದೈನ್ಯದಿಂದ ನೋಡುತ್ತಿದ್ದರು. ದರ್ಬಾರವು ಸ್ತಬ್ಧವಾಗಿತ್ತು ಎಲ್ಲರ ದೃಷ್ಟಿಗಳು ಅರಸನಲ್ಲಿ ನಟ್ಟಿದ್ದವು.

ಹೀಗೆ ಸ್ತಬ್ಧವಾಗಿ ಕುಳಿತಿದ್ದ ದರ್ಬಾರದ ಜನರನ್ನು ಕುರಿತು ವೆಂಕಟರಾಜನು ಉಚ್ಚಸ್ವರದಿಂದ ನುಡಿದನೇನೆಂದರೆ–ಎಲೈ ಪ್ರತಾಪಿಗಳಾದ ನನ್ನ ಪ್ರಿಯ ಮಿತ್ರರೇ, ವಿಜಯ ನಗರದ ರಾಯರ ಸಿಂಹಾಸನದ ವಿಷಯವಾಗಿರುವ ನಿಮ್ಮ ನಿಷ್ಠೆಯನ್ನು ನೋಡಿ ನನಗೆ ಪರಮಾನಂದವಾಗುತ್ತದೆ ನಿಮ್ಮ ಪೂರ್ವಜರಲ್ಲಿ ಬಹು ಜನರು ಈ ಸಿಂಹಾಸನದ ಹಿತದ ಸಲುವಾಗಿ, ರಣಭೂಮಿಯಲ್ಲಿ ಪತನಹೊಂದಿ ವೀರಸ್ವರ್ಗವನ್ನು ಪಡೆದಿದ್ದಾರೆ. ಈ ಪವಿತ್ರ ಸಿಂಹಾಸನವು ಆ

ನಿಮ್ಮ ಸ್ವಾಮಿನಿಷ್ಠ-ರಣಶೂರರಾದ ಪೂರ್ವಜರ ಕೀರ್ತಿಯ ಚಿಹ್ನವೆಂದು ನಾನು ತಿಳಿಯುತ್ತೇನೆ. ಈ ಜಗತ್ತಿನಲ್ಲಿ ಕೀರ್ತಿಯ ಹೊರತು ಯಾವುದೂ ಸ್ಥಿರವಿಲ್ಲೆಂಬುದನ್ನು ನೀವು ಬಲ್ಲಿರಷ್ಟೇ? ಅಂದಬಳಿಕ ನಿಮ್ಮ ಪೂರ್ವಜರಂತೆ ನೀವಾದರೂ ಸಿಂಹಾಸನದ ಮರ್ಯಾದೆಯನ್ನು ಕಾದು ಕೀರ್ತಿಶಾಲಿಗಳಾಗಬೇಕೆಂದು ಪ್ರಾರ್ಥಿಸುತ್ತೇನೆ. ನಿಮ್ಮ ರಾಜನಿಷ್ಠೆಯಿಂದ ಸ್ಥಿರಗೊಂಡ ಸಿಂಹಾಸನವನ್ನೇರಲಿಕ್ಕೆ ನನ್ನಂಥ ಹಲವು ಅರಸರು ಸಿದ್ಧರಾಗಿರಬಹುದು; ಆದರೆ ನಮ್ಮ ಸದ್ವಂಶ ಪರಂಪರೆಯನ್ನು ಕಾಯುವ ಭಾರವು ನಿಮ್ಮಮೇಲೆ ಕೂಡಿರುತ್ತದೆ ನಾನು ದೇವರ ಕೃಪೆಯಿಂದಲೂ, ನಿಮ್ಮ ಸಹಾಯದಿಂದಲೂ ಈಗ ೨೮ ವರ್ಷ ರಾಜ್ಯವಾಳಿ, ಮುಪ್ಪಾಗಿರುವ ಈ ದೇಹವನ್ನು ಒಂದೆರಡು ದಿನಗಳಲ್ಲಿ ಬಿಡಲು ಸಿದ್ಧನಾಗಿದ್ದೇನೆ. ಮರಣದ ವಿಷಯವಾಗಿ ನನಗೆ ಎಳ್ಳಷ್ಟು ಭಯವಿಲ್ಲ, ರಾಜ್ಯ ಸುಖವನ್ನು ಹ್ಯಾಗೆ ಬಿಟ್ಟು ಹೋಗಲೆಂಬ ದುರಾಶೆಯ ಬಾಧೆಗೆ ನಾನು ರವಷ್ಟಾದರೂ ಇಂಬಗೊಡುವುದಿಲ್ಲ, ಪ್ರಿಯಮಿತ್ರರೇ, ನಮ್ಮನ್ನು ಅನಂತ ಯಾತನೆಗಳಿಂದ ಮುಕ್ತವಾಗಮಾಡಿ, ಸಂಪಾದಿತ ಸ್ವಕರ್ಮ-ಫಲಭೋಗಗಳ ಭೋಗಕ್ಕಾಗಲಿ, ಮೋಕ್ಷದ ದ್ವಾರವನ್ನು ಪ್ರವೇಶಿಸುವುದಕ್ಕಾಗಲಿ ಆತ್ಮವನ್ನು ದೇಹದ ಬಂಧನದಿಂದ ಬಿಡಿಸುವ ಮರಣರೂಪ ವಾದ ಸನ್ಮಿತ್ರನಿಗೆ ನಾವು ಯಾಕೆ ಹೆದರಬೇಕು? ಸ್ವಂತ ಪೌರುಷದಿಂದ ಸ್ವರ್ಗಾದಿ ಉಚ್ಚತರ ಭೋಗಗಳನ್ನು ಪಡೆಯುವ ಯೋಗ್ಯತೆಯು ಆತ್ಮನಿಗೆ ಇರುತ್ತಿರಲು, ಈ ಕ್ಷುದ್ರವಾದ ರಾಜ್ಯ ಭೋಗದ ಆಶೆಯನ್ನಾದರೂ ಯಾಕೆ ಹಿಡಿಯಬೇಕು? ನನಗಿಂತ ಯೋಗ್ಯನಾದ ಭೂಪತಿಯು ಕೂಡ್ರುವುದಕ್ಕಾಗಿ ಇಂದಿನಿಂದ ನಾನು ಈ ಸಿಂಹಾಸನದ ಹಕ್ಕನ್ನು ಬಿಡುವವನಿದ್ದೇನೆ; ಆದರೆ ಆ ಹಕ್ಕನ್ನು ಬಿಡುವ ಮೊದಲು ಅದನ್ನು ಸ್ವೀಕರಿಸಲಿಕ್ಕೆ ಯೋಗ್ಯ ಹಕ್ಕುದಾರನಾದವನೊಬ್ಬ ಪುರುಷನು ಇಲ್ಲಿ ಇರಬೇಕಾಗುವುದಷ್ಟೇ? ಆತನು ಇಲ್ಲಿ ಇದ್ದಂತೆ ತೋರುವುದಿಲ್ಲ, ನಮ್ಮ ಅಣ್ಣನ ಮಗನಾದ ಚಿಕ್ಕರಾಯನನ್ನು ಬೇಗನೆ ಕರೆಸಿರಿ. ಆತನೇ ನನ್ನ ತರುವಾಯ ಈ ಪಟ್ಟಕ್ಕೆ ಬಾಧ್ಯಸ್ಥನು. ರೋಗಪೀಡಿತನಾದ ನಿಮ್ಮ ಈ ವೃದ್ಧರಾಜನ ಮಾತಿನ ವಿಷಯವಾಗಿ ಇಲ್ಲದ ಕಲ್ಪನೆಗಳನ್ನು ಮಾಡದೆ, ಚಿಕ್ಕ ರಾಯನನ್ನು ಬೇಗನೆ ಕರೆಸಕತಕ್ಕದ್ದು! ನನ್ನ ಮರಣಕ್ಕಾಗಿ ಯಾರೂ ದುಃಖಿಸಲಾಗದು. ನಮ್ಮ ಸದ್ವಂಶಪರಂಪರೆಯನ್ನು ಕಾಯುವ ವಿಷಯವಾಗಿ ನೀವೆಲ್ಲರು ಬದ್ಧರಾದರೆ, ನಾನು ಸಮಾಧಾನದಿಂದ ಪ್ರಾಣಬಿಡುವೆನು!

ಬೇನೆಯಿಂದ ಕ್ಷೀಣನಾಗಿದ್ದ ಅರಸನು ಇಷ್ಟು ಆವೇಶದಿಂದ ಉಚ್ಚ ಸ್ವರದಲ್ಲಿ ಮಾತಾಡಲು, ಆತನಿಗೆ ಗ್ಲಾನಿಯು ಬಂದಂತಾಗಿ ಆತನ ಕಣ್ಣುಗಳು ಮುಚ್ಚಿದವು. ಅದನ್ನು ನೋಡಿ ದರ್ಬಾರದ ಜನರು ಮತ್ತೆ ಗಾಬರಿಯಾದರು. ಆಸನ್ನಮರಣನಾದ ಆ ಅರಸನು, ಆತನ ಆವೇಶದ ಚಿಕ್ಕ ಭಾಷಣ, ದರ್ಬಾರದ ಜನರಲ್ಲಿ ಸ್ವಾಭಾವಿಕವಾಗಿ ಜಾಗ್ರತವಾಗಿದ್ದ ಸ್ವಾಮಿನಿಷ್ಠೆ ಇವುಗಳ ಯೋಗದಿಂದ ಸರದಾರರ ಅಂತಃಕರಣಗಳೆಲ್ಲ ಉಕ್ಕಿಬಂದು, ರಾಜಾಜ್ಞೆಯನ್ನು ಪಾಲಿಸುವ ವಿಷಯವಾಗಿ ಅವರು ಆತುರರಾಗಿದ್ದರು. ಸ್ವಲ್ಪ ಹೊತ್ತಿನಲ್ಲಿ ರಾಜವೈದ್ಯರ ಉಪಚಾರದಿಂದ ಅರಸನು ಮತ್ತೆ ಜಾಗರೂಕನಾಗಿ ಕಣ್ಣುಗಳನ್ನು ತೆರೆದು ಸುತ್ತು ಮುತ್ತು ನೋಡಹತ್ತಿದನು. ಆಗ ಸರದಾರರ ಚಿತ್ತವೃತ್ತಿಗಳು ಶಾಂತವಾಗಿ, ಅವರ ಕಲ್ಪನೆಯ ತರಂಗಗಳು

ಅಡಗಿದವು. ಪ್ರತ್ಯಕ್ಷ ಹೊಟ್ಟೆಯ ಮಗನು ಹಾಸಿಗೆಯ ಬಳಿಯಲ್ಲಿ ಕುಳಿತಿದ್ದು ಪಟಕ್ಕೆ ಯೋಗ್ಯ ಹಕ್ಕುದಾರನು ಬಳಿಯಲ್ಲಿಲ್ಲೆಂದು ದೊರೆಯು ಅಂದದ್ದನ್ನು ಕೇಳಿ ಪ್ರತಿಯೊಬ್ಬ ಸರದಾರನು ಆಶ್ಚರ್ಯಪಟ್ಟನು; ಹೊಟ್ಟೆಯ ಮಗನೂ, ಆತನ ಅಪ್ತೇಷ್ಟರೂ ಚಿಂತೆಗೊಳಗಾದರು; ರಾಣಿಯು ಬೆದರಿದಳು; ಸಭೆಯು ಸ್ತಬ್ಧವಾಯಿತು. ಅತ್ತ ಮಂತ್ರಿಯ ಆಜ್ಞೆಯಂತೆ ಚಿಕ್ಕರಾಯನನ್ನು ಕರೆಯಲಿಕ್ಕೆ ಪ್ರತಿಷ್ಠಿತ ಜನರು ಹೋದರು. ಸಾತ್ವಿಕನಾದ ರಾಜಕುಮಾರನು ರಾಜಾಜ್ಞೆಯನ್ನು ಶಿರಸಾವಹಿಸಿ, ಕೂಡಲೆ ಸಭೆಗೆ ಬಂದು ಭಯಭಕ್ತಿಯಿಂದ ಅರಸನನ್ನು ನಮಿಸಿ ಸನ್ಮಾನಿಸಲ್ಪಟ್ಟನು. ಆ ಬಡ ರಾಜಕುಮಾರನು ತಾನು ಅರಸನಾಗುವೆನೆಂದು ಕನಸುಮನುಸುಗಳಲ್ಲಿ ಎಣಿಸಿದ್ದಿಲ್ಲ; ತನಗೆ ರಾಜಮುದ್ರೆಗಳನ್ನು ಒಪ್ಪಿಸುವುದಕ್ಕಾಗಿ ಅರಸನು ತನ್ನನ್ನು ಕರೆಸಿರುವನೆಂತಲೂ ಆತನು ಭಾವಿಸಿದ್ದಿಲ್ಲ; ರಾಜಾಜ್ಞೆಯನ್ನು ಪಾಲಿಸುವುದು ಕರ್ತವ್ಯವೆಂದು ತಿಳಿದು ಆತನು ವಿಶ್ವಾಸ ಪೂರ್ವಕವಾಗಿ ಸಭೆಗೆ ಬಂದಿದ್ದನು.

ಅರಸನ ಹೊಟ್ಟೆಯ ಮಗನ ಹೆಸರೂ ಚಿಕ್ಕರಾಯನೆಂತಲೇ ಇತ್ತು, ಆತನು ಹಕ್ಕಿನಿಂದಲೂ, ಅರಸನ ಪ್ರೇಮವಿಶೇಷದಿಂದಲೂ ತಾನೇ ಪಟ್ಟಕ್ಕೆ ಬಾಧ್ಯಸ್ಥನೆಂದು ನಂಬಿದ್ದನು; ಆದರೆ ತನ್ನ ಗಂಟಲಿಗೆ ಗಾಣಾಗಿ ಮತ್ತೊಬ್ಬ ಚಿಕ್ಕರಾಯನು ಬಂದದ್ದನ್ನು ನೋಡಿ ಆತನ, ವಿಶೇಷವಾಗಿ ಆತನ ಆಪ್ತೇಷ್ಟರ ಮಾತ್ಸರ್ಯಾಗ್ನಿಯು ಭರದಿಂದ ಹೊತ್ತಹತ್ತಿತು. ಜಗರಾಯನ ಮಗಳಾದ ಬಾಯಮ್ಮನೆಂಬ ಹೆಸರಿನ ಚಿಕ್ಕವಯಸ್ಸಿನ ಸುಂದರಿಯು ವೃದ್ಧ ವೆಂಕಟ ದೊರೆಯ ಪ್ರೀತಿಯ ರಾಣಿಯಾಗಿದ್ದಳು. ಆಕೆಯ ಮಗನೇ ಚಿಕ್ಕರಾಯನು. ಆತನಿಗೆ ವೆಂಕಟರಾಯನ ಸೋದರ ಸೊಸೆಯನ್ನು ಅಂದರೆ ಓಬಲರಾಯನ ಮಗಳನ್ನು ಕೊಟ್ಟಿತ್ತು, ದೊರೆಯ ಪ್ರೀತಿಯ ಒಬ್ಬನೇ ಒಬ್ಬ ಮಗನು, ಮೇಲೆ ಸೊದರಸೊಸೆಯ ಗಂಡ ಹೀಗೆ ಬಾಯಮ್ಮನ ಮಗನಾದ ಚಿಕ್ಕರಾಯನು ಹಲವು ಸಂಗತಿಗಳಿಂದ ಸ್ವಾಭಾವಿಕವಾಗಿ ಪಟ್ಟಕ್ಕೆ ಬಾಧ್ಯಸ್ಥನಿರಲು, ದೊರೆಯು ತನ್ನ ಅಣ್ಣನ ಮಗನಾದ ಚಿಕ್ಕರಾಯನನ್ನು ಪಟ್ಟಕ್ಕೆ ಕೂಡ್ರಿಸಬೇಕೆಂದು ಮಾಡಿದ್ದನ್ನು ನೋಡಿ, ಸರದಾರ ಮಂಡಲದಂತೆ ನಮ್ಮ ವಾಚಕ ವರ್ಗವಾದರೂ ಚಕಿತರಾಗಿರಬಹುದು; ಆದರೆ ವಾಚಕರನ್ನು ಸುಮ್ಮನೆ ಬಹಳ ಹೊತ್ತು ಚಕಿತಗೊಳಿಸವುದಕ್ಕಿಂತ, ಯೋಗ್ಯ ಕಾರಣವನ್ನು ಹೇಳಿ ಅವರನ್ನು ಸಮಾಧಾನಗೊಳಿಸುವುದು ತಕ್ಕದ್ದು.

ವಿಜಯನಗರದ ರಾಯರ ಪದ್ಧತಿಯಂತೆ ವೆಂಕಟದೊರೆಗೆ ಬಹಜನ ಹೆಂಡರಿದ್ದರೂ, ಬಾಯಮ್ಮನ ಮೇಲೆ ಆತನ ಪ್ರೇಮ ಬಹಳ. ಬಹು ದಿವಸಗಳಾದರೂ ಬಾಯಮ್ಮನ ಹೊಟ್ಟೆಯಲ್ಲಿಯೂ ಮಕ್ಕಳಾಗಲಿಲ್ಲ, ಬಾಯಮ್ಮನು ಚಿಂತೆಗೊಳಗಾದಳು. ಆಕೆಗೆ ಮಕ್ಕಳ ಹುಚ್ಚು ಹಿಡಿದಂತಾಯಿತು. ತಾನು ಪುತ್ರವತಿಯಾಗಿ ಎಲ್ಲ ರಾಣಿಯರಲ್ಲಿ ಆಢ್ಯತೆಯನ್ನು ಮೆರೆಸಬೇಕೆಂದು ಆಕೆಯು ಬಯಸುತ್ತಿದ್ದಳು. ಹೆಂಗಸರಿಗೆ ಮಕ್ಕಳ ಹುಚ್ಚು ಎಷ್ಟಿರುತ್ತದೆಂಬದನ್ನು ಬರೆದು ತಿಳಿಸುವ ಕಾರಣವಿಲ್ಲ, ಅದು ಸಾಂಸಾರಿಕರಾದವರೆಲ್ಲರ ಅನುಭವಕ್ಕೆ ಬರುವ ಮಾತಾಗಿರುವುದು. ಬಾಯಮ್ಮನು, ಮಕ್ಕಳು–ಮಕ್ಕಳೆಂದು ಹಲುಬುತ್ತಿರುವಾಗ ಆಕೆಯ ತವರುಮನೆಯ ಒಬ್ಬ ಬ್ರಾಹ್ಮಣ ಪರಿಚಾರಿಕೆಯು ಬಾಯಮ್ಮನನ್ನು ಕುರಿತು–ದೊರೆಸಾನಿಯೇ, ನಿನ್ನ ಸ್ಥಿತಿಯನ್ನು

ನೋಡಿ ನನಗೆ ಬಹಳ ದುಃಖವಾಗುತ್ತದೆ. ಮಕ್ಕಳ ಹೊಟ್ಟೆ–ನೆತ್ತಿಗಳನ್ನು ನೋಡಲಾರದ ನಮ್ಮಂಥ ಬಡವರಿಗೆ, ದೇವರು ಬೇಡಬೇಡವೆಂದರೂ ಮಕ್ಕಳನ್ನು ಕೊಡುವನು; ಆದರೆ ದೊರೆಯ ಅಕ್ಕರೆಯ ರಾಣಿಯಾದ ನೀನು ಮಕ್ಕಳಾಗಬೇಕೆಂದು ಹನ್ನೆರಡು ದೇವರಿಗೆ ಹರಕೆಹೊತ್ತರೂ ಒಂದು ದೇವರಿಗೂ ದಯವು ಬರಲೊಲ್ಲದು. ನಾನು ನಿನಗೊಂದು ಹಂಚಿಕೆಯನ್ನು ಹೇಳುತ್ತೇನೆ. ಅದರಂತೆ ನೀನು ಮಾಡಿದರೆ ಪುತ್ರವತಿಯೆಂದು ಕೀರ್ತಿಪಡೆದು ಅರಸನ ಪ್ರೀತಿಗೆ ಇನ್ನಿಷ್ಟು ಪಾತ್ರಳಾಗುತ್ತೀ. ನಿನ್ನ ಮಗನೇ ಮುಂದೆ ಅರಸನಾಗುವನಾದ್ದರಿಂದ ರಾಜಮಾತೆಯೆಂಬ ಬಹುಮಾನವನ್ನೂ ಪಡೆಯುತ್ತೀ. ಹೆಚ್ಚಿನದೇನು ಮಾಡಬೇಡ; ನಾನು ಈಗ ಒಂದು ತಿಂಗಳು ಬಸಿರಿದ್ದೇನೆ; ನೀನೂ ಒಂದು ತಿಂಗಳು ಬಸಿರಿದ್ದೇನೆಂದು ಸುದ್ದಿಯನ್ನು ಹುಟ್ಟಿಸು. ದಿನದಿನಕ್ಕೆ ಗರ್ಭವು ಬೆಳೆಯುತ್ತಹೋದಹಾಗೆ ಜನರಿಗೆ ತೋರಿಸು. ನಾನು ದಿನತುಂಬಿ ಹಡೆದಕೂಡಲೆ ನನ್ನ ಕೂಸನ್ನು ನಿನ್ನ ಬಳಿಗೆ ಕಳಿಸುವೆನು. ದಾಯಿಗಳನ್ನಿಟ್ಟು ಅದನ್ನು ರಕ್ಷಿಸು. ನಮ್ಮ ಈ ಗುಟ್ಟಿನ ಮಾತು ಯಾರಿಗೂ ಗೊತ್ತಾಗದಂತೆ ನಾನು ನೋಡಿಕೊಳ್ಳುತ್ತೇನೆ, ನೀನೂ ನೋಡಿಕೋ. ಹೀಗೆ ಮಾಡಿದ ಹೊರತು ನಿನ್ನ ಮಕ್ಕಳ ಬಯಕೆಯು ಈ ಜನ್ಮದಲ್ಲಿಯಂತು ಪೂರ್ಣವಾಗುವ ಆಶೆಯು ತೋರುವುದಿಲ್ಲ. ನಿನ್ನ ದುಃಖವನ್ನು ನೋಡಲಾರದೆ ಹೊಟ್ಟೆಯ ಮಗನನ್ನು ಕೊಡಲು ಒಪ್ಪಿಕೊಂಡಿರುತ್ತೇನೆ. ಮುಂದೆ ಅರಸೊತ್ತಿಗೆಯು ದೊರೆತರೆ ನಿನ್ನ ಕೃಪೆಯಿಂದ ನನ್ನ ಕೂಸಿನ ಕಲ್ಯಾಣವೂ ಆದಂತಾಗುವುದು!

ಪರಿಚಾರಿಕೆಯ ಈ ಹಂಚಿಕೆಯು ದೊರೆಸಾನಿಯ ಮನಸ್ಸಿಗೆ ಬಂದಿತು. ಆಕೆಯು ತಾನು ಬಸಿರಿದ್ದೇನೆಂದು ಸುದ್ದಿಯನ್ನು ಹುಟ್ಟಿಸಿದಳು. ಅರಸನಿಗೆ ಈ ಹುಚ್ಚಾಟವು ಗೊತ್ತಾದರೂ ಹೆಂಡತಿಯ ಮೇಲಿನ ಪ್ರೇಮದಿಂದ ಆತನು ಅದನ್ನು ನಿಷೇಧಿಸಲಿಲ್ಲ. ಬಾಯಮ್ಮನಿಗೆ ಬಯಕೆಗಳು ಆಗಹತ್ತಿದವು, ಬಯಕೆಯ ಊಟಗಳು ನಡೆದವು. ಬಸಿರು ಹೆಂಗಸರಿಗೆ ಕಾಲಕಾಲಕ್ಕೆ ಆಗತಕ್ಕ ಸಮಾರಂಭಗಳು ಜರುಗಹತ್ತಿದವು. ಅರಸನು ಯಾವ ಉತ್ಸವದಲ್ಲಿಯೂ ಕೊರತೆಯನ್ನುಂಟು ಮಾಡಲಿಲ್ಲ. ಕಡೆಗೆ ಬ್ರಾಹ್ಮಣ ಪರಿಚಾರಿಕೆಗೆ ದಿನ ತುಂಬಿ, ಆಕೆಯು ಗಂಡು ಮಗನನ್ನು ಹಡೆಯಲು, ಇತ್ತ ಬಾಯಮ್ಮನೂ ಹಡೆದಳು. ಪರಿಚಾರಿಕೆಯ ಪುತ್ರನು ಬಾಯಮ್ಮನ ಹೊರಸಿನ ಮೇಲೆ ಬಂದದ್ದರಿಂದ ರಾಜಪುತ್ರನಾದನು! ಇತ್ತ ಪುತ್ರೋತ್ಸವದ ಸಮಾರಂಭವು ಏನೊಂದೂ ಕೊರತೆಯಿಲ್ಲದೆ ಸಾಗಿತು. ಕೂಸಿಗೆ ಚಿಕ್ಕರಾಯನೆಂದು ಹೆಸರಿಟ್ಟರು. ಚಿಕ್ಕರಾಯನು ಹದಿನಾಲ್ಕು ವರ್ಷದವನಾಗಲು, ಮೇಲೆ ಹೇಳಿದಂತೆ ಅರಸನು ತನ್ನ ಸೋದರಸೊಸೆಯೊಡನೆ ಆತನ ಲಗ್ನ ಮಾಡಿದನು; ಆದರೆ ಮಗನ ಸಂಗಡ ನಡಕೊಂಡಂತೆ ದೊರೆಯು ಚಿಕ್ಕರಾಯನ ಸಂಗಡ ಎಂದೂ ನಡಕೊಳ್ಳಲಿಲ್ಲ. ಆತನನ್ನು ಅರಮನೆಯ ಹೊರಗೆ ಸಹ ಹೋಗಗೊಡುತ್ತಿದ್ದಿಲ್ಲ. ಅಂದಬಳಿಕ ಬಾಯಮ್ಮನ ಮಗನು ಪಟ್ಟಕ್ಕೆ ಹ್ಯಾಗೆ ಬಾಧ್ಯಸ್ಥನಾಗುವನು?

ತನ್ನ ಸದ್ವಂಶದ ವಿಷಯವಾಗಿ ಸಂಪೂರ್ಣಾಭಿಮಾನವುಳ್ಳ ವೆಂಕಟದೊರೆಯು, ತನ್ನ ಮರಣವು ಸಮೀಪಿಸಿದ್ದನ್ನು ತಿಳಿದು ಹೆಂಡತಿಯ ಮೋಹಕ್ಕೆ ಒಳಗಾಗದೆ ಮೇಲೆ ಹೇಳಿದಂತೆ ದರ್ಬಾರ ನೆರೆಸಿ, ತನ್ನ ಅಣ್ಣನ ಮಗನಾದ ಚಿಕ್ಕ ರಾಯನನ್ನು ಕರೆಸಿಕೊಂಡಿದ್ದನು. ದರ್ಬಾರದ

ಜನರು ಕೌತುಕದಿಂದ ನೋಡುತ್ತಿರಲು. ದೊರೆಯು ವಿನಯಶೀಲನಾದ ಚಿಕ್ಕರಾಯನನ್ನು ಎಲ್ಲ ಸರದಾರರ ಸಮಕ್ಷ ಮುಂದಕ್ಕೆ ಕರೆದು–ತಮ್ಮಾ, ನನ್ನ ತರುವಾಯ ಸದಾಶಿವನ ವಂಶದ ಈ ಸಿಂಹಾಸನಕ್ಕೆ ನೀನೇ ಬಾಧ್ಯನು ಎಂದು ಹೇಳಿ, ಸಿಕ್ಕೆಯುಂಗುರವನ್ನು ಕೊಡುವುದಕ್ಕಾಗಿ ಕೈಯನ್ನು ಮುಂದಕ್ಕೆ ಚಾಚಿದನು. ಅನಾಯಾಸವಾಗಿ ಅರಸೊತ್ತಿಗೆಯು ಕೈಸೇರುವುದನ್ನು ನೋಡಿ ಅದಾವನು ಅಸಮಾಧಾನ ಪಟ್ಟಾನು? ಆದರೆ ಆ ಕುಮಾರನು ಕಣ್ಣು ತುಂಬ ನೀರುತಂದು ದೊರೆಯನ್ನು ಕುರಿತು–ಪ್ರಭುವೇ, ಅರಸೊತ್ತಿಗೆಯನ್ನು ನಾನೊಲ್ಲೆನು; ಈ ಉಂಗುರವನ್ನು ಬೇರೆ ಯಾರಿಗಾದರೂ ಕೊಡಬಹುದು, ಎಂದು ಆ ವೃದ್ಧರಾಯನ ಪಾದಗಳ ಮೇಲೆ ತಲೆಯನ್ನಿಟ್ಟನು! ಸಮೀಪದಲ್ಲಿದ್ದ ಸರದಾರರು ಆತನನ್ನು ಎಬ್ಬಿಸಿ ಕೂಡ್ರಿಸಲು, ವೆಂಕಟರಾಜನು ಉಂಗುರವನ್ನು ಕೊಡುವುದಕ್ಕಾಗಿ ಮತ್ತೆ ಕೈಚಾಚಿದನು. ಆಗ ಚಿಕ್ಕರಾಯನು ಅರಸನನ್ನು ನಮಿಸಿ ವಿನಯದಿಂದ–ಪ್ರಭುಗಳೇ, ತಮ್ಮ ಚರಣಕೃಪೆಯಿಂದ ಅನಾಯಾಸವಾಗಿ ಪ್ರಾಪ್ತವಾಗಿರುವ ದುರ್ಲಭವಾದ ರಾಜಪದವನ್ನು ನಿರಾಕರಿಸುವುದು ಮೂರ್ಖತನವೇ ಸರಿ! ಅದರಂತೆ ರಾಜಾಜ್ಞೆಯನ್ನು ಮೀರುವುದು ಮಹಾಪರಾಧವೆಂಬುದನ್ನಾದರೂ ನಾನು ಬಲ್ಲೆನು; ಆದರೆ ದೊರೆಗಳು ನನ್ನನ್ನು ಮಹಾಮೂರ್ಖನೆಂದು ತಿರಸ್ಕರಿಸಿದರೂ ಚಿಂತೆಯಿಲ್ಲ, ರಾಜಾಜ್ಞೆಯನ್ನು ಮೀರುವ ಅಪರಾಧವನ್ನು ಕ್ಷಮಿಸಿ ಅರಸುತನವನ್ನು ಬೇರೆ ಯಾರಿಗಾದರೂ ಕೊಡಬೇಕೆಂದು ಬೇಡಿಕೊಳ್ಳುವೆನು. ಅರಸು ತನವನ್ನು ನಾನು ಸರ್ವಥಾ ಒಲ್ಲೆನು. ಅರಸನಾಗುವುದಕ್ಕಿಂತ ಏಕ ನಿಷ್ಠ ಪ್ರಜೆಯಾಗುವುದರಲ್ಲಿ ನನಗೆ ಸುಖವು ತೋರುತ್ತದೆ. ಅರಸುತನಕ್ಕೆ ನಾನು ಯೋಗ್ಯನಲ್ಲ. ಅನಾಯಾಸವಾಗಿ ಆದ ಉತ್ಕರ್ಷದಿಂದ ಅನರ್ಥವಾಗದೆಯಿರದು. ಅರಸುಮನೆತನವು ನೋಡಲಿಕ್ಕೆ ಚೆಂದವಲ್ಲದೆ, ಅದರ ಉಪಭೋಗದಲ್ಲಿ ಸುಖವಿಲ್ಲ, ಎಂದು ನುಡಿದು ಉಂಗುರವನ್ನು ತಕ್ಕೊಳ್ಳದೆ, ದೊರೆಯ ಚರಣಕ್ಕೆರಗಿ ತಲೆಬಾಗಿ ನಿಂತುಕೊಂಡನು. ಇಷ್ಟಾದರೂ ಆ ವೃದ್ಧರಾಜನು ಕೇಳಲಿಲ್ಲ, ಉಂಗುರವನ್ನು ನೀನೇ ಸ್ವೀಕರಿಸಬೇಕೆಂದು ಚಿಕ್ಕ ರಾಯನಿಗೆ ಆಗ್ರಹದಿಂದ ಹೇಳಹತ್ತಿದನು.

ಈ ವಿಚಿತ್ರ ಸ್ಥಿತಿಯನ್ನು ನೋಡಿ ದರ್ಬಾರದ ಜನರು ಬೆರಗಾದರು. ಅವರು, ಮರಣೋನ್ಮುಖನಾಗಿ ಮಲಗಿರುವ ವೃದ್ಧರಾಜನನ್ನೂ, ಪಟ್ಟವನ್ನು ನಿರಾಕರಿಸಿ ಕಣ್ಣೀರು ಸುರಿಸುತ್ತ ನಿಂತಿದ್ದ ರಾಜಕುಮಾರನನ್ನೂ ನೋಡುತ್ತ ಗೊಂಬೆಗಳಂತೆ ಕುಳಿತುಬಿಟ್ಟಿದ್ದರು. ಮುಂದೆ ಏನಾಗುವುದೋ ನೋಡಬೇಕೆಂದು ಎಲ್ಲರೂ ಆತುರಪಡುತ್ತಿದ್ದರು. ಅಷ್ಟರಲ್ಲಿ ವೃದ್ಧರಾಜನು ಕಂಪಿತ ಸ್ವರದಿಂದ–ರಾಜಕುಮಾರಾ, ನಮ್ಮ ಸದ್ವಂಶ ಪರಂಪರೆಯಲ್ಲಿ ಪಟ್ಟಕ್ಕೆ ನೀನೇ ಬಾಧ್ಯ ನಾಗಿರುವುದರಿಂದ ನನ್ನ ಅಪ್ಪಣೆಯಂತೆ ನೀನು ರಾಜಚಿಹ್ನೆಗಳನ್ನು ಸ್ವೀಕರಿಸಲೇಬೇಕು; ಸ್ವೀಕರಿಸದಿದ್ದರೆ ನನ್ನ ಪ್ರಾಣವು ಸುಖದಿಂದ ಹೋಗದು. ಮತ್ತೆ ನಾಲ್ಕು ಮಾತುಗಳನ್ನಾಡಲಿಕ್ಕೂ ನನಗೆ ತ್ರಾಣವಿರುವುದಿಲ್ಲ, ನಮ್ಮ ಸದ್ವಂಶ ಪರಂಪರೆಯು ಮುಂದಕ್ಕೆ ಸಾಗಬೇಕೆಂಬ ವಾಸನೆಯು ಹೊರತು ಬೇರೆ ಯಾವ ವಾಸನೆಯೂ ನನ್ನಲ್ಲಿರುವುದಿಲ್ಲ; ಆದ್ದರಿಂದ ನೀನು ಪಟ್ಟವನ್ನು ಸ್ವೀಕರಿಸಿ ನನ್ನನ್ನು ವಾಸನಾರಹಿತನನ್ನಾಗಿ ಮಾಡಿ ಸದ್ಗತಿಗೆ ಮುಟ್ಟಿಸು. ನನ್ನ ಅಪ್ಪಣೆಯನ್ನು

ಪಾಲಿಸುವುದರಿಂದ ಸುಖವಾಗಲಿ, ದುಃಖವಾಗಲಿ ಅದನ್ನು ಪಾಲಿಸುವುದು ನಿನ್ನ ಕರ್ತವ್ಯವಾಗಿರುವುದು. ಹೀಗೆ ಕಣ್ಣೀರು ಸುರಿಸುವುದು ವಿಜಯನಗರದ ರಾಯರ ವಂಶಜರಿಗೆ ಒಪ್ಪುವುದಿಲ್ಲ. ಈ ಸರದಾರ ಮಂಡಲವು ರಾಯರ ವಂಶವನ್ನು ಕಾಪಾಡಲು ಬದ್ಧವಾಗಿರುವುದು; ನಿನಗೆ ಅದರ ಚಿಂತೆ ಬೇಡ, ಎಂದು ನುಡಿದು ದೊರೆಯು ಒಬ್ಬ ತರುಣ ಸರದಾರನ ಕಡೆಗೆ ಉತ್ಸುಕತೆಯಿಂದ ನೋಡಿದನು. ಆಗ ಉಳಿದ ಸರದಾರರಲ್ಲಿ ಬಹು ಜನರು ತಟ್ಟನೆ ಎದ್ದು ನಿಂತರು ಅವರಲ್ಲಿ ಒಬ್ಬನು ಆ ತರುಣ ವೀರರನ್ನು ಕುರಿತು–ಎಚ್ಚಮನಾಯಕರೇ, ಏಳಿರಿ, ದೊರೆಗಳ ಇಚ್ಛೆಯಂತೆ ರಾಜಕುಮಾರನನ್ನು ಪ್ರೋತ್ಸಾಹಿಸಿರಿ. ರಾಯರ ಸದ್ವಂಶವನ್ನು ಕಾಯುವ ಸಂಬಂಧದಿಂದ ನಿಮ್ಮ ತಂತ್ರದಂತೆ ನಾವು ನಡಕೊಳ್ಳುವೆವು. ಪ್ರತ್ಯಕ್ಷ ದೊರೆಗಳೇ ತಮ್ಮ ಅವಸಾನಕಾಲದಲ್ಲಿ ನಿಮ್ಮನ್ನು ಮುಂದುಮಾಡುತ್ತಿರಲು, ಅದಾವ ಕನ್ನಡವೀರನು ನಿಮ್ಮ ತಂತ್ರವನ್ನು ಮೀರಿ ರಾಜದ್ರೋಹದ ಮಹಾಪಾತಕಕ್ಕೆ ಗುರಿಯಾಗುವನು?

ಹಿಂದಕ್ಕೊಂದು ಹುಣ್ಣಿಮೆಯ ರಾತ್ರಿ ಆದಿಪಂಪಾಕ್ಷೇತ್ರದಲ್ಲಿ ಸೇವಕನು ತಂದುಕೊಟ್ಟ ಪತ್ರವನ್ನೋದಿ ಎಚ್ಚಮನಾಯಕನು ಕೂಡಲೆ ಚಂದ್ರಗಿರಿಗೆ ಹೊರಟದ್ದನ್ನು ವಾಚಕರು ಮರೆತಿರಲಿಕ್ಕಿಲ್ಲ. ವೆಂಕಟದೊರೆಗಳು ಬೇನೆಯಿಂದ ಜರ್ಜರರಾಗಿರುವ ಕಾರಣ ತೀವ್ರ ಬರಬೇಕೆಂದು ಪತ್ರದಲ್ಲಿ ಬರೆದಿದ್ದರಿಂದ ನಾಯಕನು ನಡುವೆ ಎಲ್ಲಿಯೂ ನಿಲ್ಲದೆ ಪಯಣದ ಮೇಲೆ ಪಯಣವನ್ನು ಬೆಳಿಸಿ ಅತಿ ವೇಗದಿಂದ ಚಂದ್ರಗಿರಿಗೆ ಬಂದು ದರ್ಬಾರದ ಹೊತ್ತಿಗೆ ಒದಗಿದ್ದನು. ವೆಂಕಟದೊರೆಯು ದರ್ಬಾರದೊಳಗಿನ ಎಲ್ಲ ಸರದಾರರನ್ನು ಬಿಟ್ಟು ತನ್ನನ್ನೇ ಬಹುಮಾನದಿಂದ ನೋಡಿದ್ದನ್ನೂ, ಸರದಾರರಲ್ಲಿ ಬಹು ಜನರು ತನ್ನ ಮನ್ನಣೆ ಮಾಡಿದ್ದನ್ನೂ ನೋಡಿ ನಮ್ಮ ತರುಣನಾಯಕನು ಉತ್ಸಾಹಗೊಂಡನು. ಉತ್ಸಾಹಕ್ಕೆ ಒಪ್ಪುವ ಶೌರ್ಯಾದಿ ಗುಣಗಳೂ, ಜವಾಬುದಾರಿಯನ್ನು ಹೊರುವಂಥ ಗಟ್ಟಿಗತನವೂ ಆತನಲ್ಲಿ ಇದ್ದದ್ದರಿಂದ ಆಗಿನ ಸರದಾರ ಮಂಡಲದಲ್ಲಿಯೂ, ಮಾಂಡಲಿಕರ ತಂಡದಲ್ಲಿಯೂ ಅಗ್ರೇಸರತ್ವವನ್ನು ಪಡೆಯಲಿಕ್ಕೆ ಆತನು ತಕ್ಕವನಾಗಿದ್ದನು. ಆ ನಾಯಕನ ವಂಶಕ್ಕೆ ವಂಶವೇ ಜೀವದ ಹಂಗುದೊರೆದು ಇಲ್ಲಿಯವರೆಗೆ ರಾಜಸೇವೆಯನ್ನು ಮಾಡುತ್ತ ಬಂದಿತ್ತು, ಅಂದಬಳಿಕ ವೆಂಕಟದೊರೆಯು ಆ ಸ್ವಾಮಿನಿಷ್ಠ ವಂಶದ ಪ್ರತಾಪಿಯಾದ ತರುಣನನ್ನು ಇಂಥ ನಿಗ್ಗರದ ವೇಳೆಯಲ್ಲಿ ಬಹುಮಾನದಿಂದ ನೋಡಿದ್ದು ಆಶ್ಚರ್ಯವೇನು? ತನಗೆ ಶ್ರೀ ವಿರೂಪಾಕ್ಷನ ಅರ್ಚಕರು ಚಂದ್ರಗಿರಿಯ ರಾಯರ ವಂಶದ ಸೇವೆಯನ್ನು ಏಕನಿಷ್ಠೆಯಿಂದ ಮಾಡೆಂದು ಬೋಧಿಸಿ, ಫಲಮಂತ್ರಾಕ್ಷತೆ ಕೊಟ್ಟದ್ದು ನೆನಪಾಗಲು, ಎಚ್ಚಮನಾಯಕನು ಸ್ಫೂರ್ತಿಗೊಂಡು ಕೂಡಲೆ ದೊರೆಯನ್ನು ಸಾಷ್ಟಾಂಗವಾಗಿ ವಂದಿಸಿದನು. ಬಳಿಕ ಆತನು ರಾಜಕುಮಾರನನ್ನು ನಮಿಸಿ ಎದ್ದುನಿಂತು, ಸರದಾರ ಮಂಡಲಕ್ಕೆ ವಿನಯದಿಂದ ತಲೆಬಾಗಿ, ರಾಜಪುತ್ರನನ್ನುದ್ದೇಶಿಸಿ ಗಾಂಭೀರ್ಯದಿಂದ ನುಡಿದನೇನಂದರೆ–ಚಿಕ್ಕರಾಯರೇ, ಈ ಸೇವಕನ ನುಡಿಗಳಿಗೆ ಚಿತ್ತಯಿಸುವ ಕೃಪೆಮಾಡಬೇಕು; ದೊರೆಗಳ ಕಕ್ಕಂದಿರೂ, ಸದಾಶಿವರಾಜರ ವಂಶದವರೂ, ಈ ಸ್ವಾಮಿನಿಷ್ಠ ಸರದಾರ ಮಂಡಲಕ್ಕೆ ಅತ್ಯಂತ ಪೂಜ್ಯರೂ ಆದ ವೆಂಕಟದೊರೆಗಳು ಮರಣೋನ್ಮುಖರಾಗಿ ನಮ್ಮೆಲ್ಲರ ಸಮಕ್ಷ ದೊರೆಗಳಿಗೆ

ಅರಸುತನವನ್ನೊಪ್ಪಿಸಿ ಸಮಾಧಾನದಿಂದ ದೇಹವನ್ನು ತ್ಯಜಿಸಬೇಕೆಂದು ಬಯಸುತ್ತಿರಲು. ದೊರೆಗಳು ಹೀಗೆ ಉದಾಸೀನರಾಗಿ ಅರಸುತನವನ್ನು ನಿರಾಕರಿಸುವರೇ? ರಾಜಾಜ್ಞೆಯನ್ನಷ್ಟೇ ಅಲ್ಲ ಪಿತ್ರಾಜ್ಞೆಯನ್ನು ಪಾಲಿಸುವುದೂ ದೊರೆಗಳ ಕರ್ತವ್ಯವಾಗಿರುವುದು. ಹಿಂದಕ್ಕೆ ದ್ರೋಣ–ಕರ್ಣರಂಥ ವೀರಾಧಿವೀರರು, ದುರ್ಯೋಧನ ರಾಜನ ಅಪ್ಪಣೆಯನ್ನು ಪಾಲಿಸಿ ಯಾವ ಸುಖವನ್ನು ಕಟ್ಟಿಕೊಂಡರು? ಶ್ರೀ ರಾಮ–ಭೀಷ್ಮರಂಥ ಮಹಾತ್ಮರು ಯಾವ ಸುಖವನ್ನು ಸುರಕೊಳ್ಳುವುದಕ್ಕೆ ತಂದೆಯ ಅಪ್ಪಣೆಯನ್ನು ಪಾಲಿಸಿದರು? ಸ್ವಾಮಿನಿಷ್ಠರೂ–ಪಿತೃಭಕ್ತರೂ ಕೀರ್ತಿಯನ್ನಲ್ಲದೆ ಸುಖವನ್ನು ಬಯಸಬಹುದೇ? ಈ ಸರದಾರ ಮಂಡಲವು ವಿಜಯನಗರದ ರಾಯರ ವಂಶದಹಿತಕ್ಕಾಗಿ ದೇಹವನ್ನು ಅರ್ಪಿಸುವುದಕ್ಕೆ ಸಿದ್ಧವಾಗಿರಲು, ತಾವು ರಾಜಾಜ್ಞೆಯನ್ನು ಪಾಲಿಸಲು ಹಿಂಜರಿಯುವದೇಕೆ? ದಯವಾಡಿಸಬೇಕು, ದೊರೆಗಳು ವಿಲಂಬಮಾಡದೆ ನಿರ್ಭಯದಿಂದ ರಾಜಮುದ್ರೆಯನ್ನು ಸ್ವೀಕರಿಸಬೇಕು!

ಈ ಮೇರೆಗೆ ನುಡಿದು ನಾಯಕನು ಚಿಕ್ಕರಾಯನನ್ನು ವಿನಯದಿಂದ ಮುಂದಕ್ಕೆ ಕರೆದೊಯ್ದನು. ಆಗ ವೆಂಕಟದೊರೆಯು ಸಿಕ್ಕೆಯುಂಗರವನ್ನು ಕೊಡಲು, ಚಿಕ್ಕರಾಯನು ವಿನಯದಿಂದ ಸ್ವೀಕರಿಸಿ, ಅದನ್ನು ಮೊದಲು ತಲೆಯಮೇಲಿಟ್ಟುಕೊಂಡು ನಮಿಸಿ, ಆಮೇಲೆ ಬೆರಳಿನಲ್ಲಿಟ್ಟುಕೊಂಡು ಅರಸನಿಗೆ ವಂದಿಸಿದನು. ಕೂಡಲೆ ಉಳಿದ ರಾಜ ಚಿಹ್ನಗಳೂ, ಉಡಿಗೆ–ತೊಡಿಗೆಗಳೂ ಚಿಕ್ಕರಾಯನಿಗೆ ಒಪ್ಪಿಸಲ್ಪಟ್ಟವು. ಇದನ್ನು ನೋಡಿ ಅರಸನ ಹೊಟ್ಟೆಯ ಮಗನೆನಿಸಿಕೊಳ್ಳುವ ಚಿಕ್ಕರಾಯನಿಗೆ ವ್ಯಸನವಾದದ್ದು ಆಶ್ಚರ್ಯವಲ್ಲ, ತನ್ನ ಗತಿಯು ಹೀಗಾದೀತೆಂದು ಆ ಬ್ರಾಹ್ಮಣಪುತ್ರನು ಕನಸುಮನಸುಗಳಲ್ಲಿ ಎಣಿಸಿದ್ದಿಲ್ಲ. ಜಗರಾಯನೂ, ಓಬಲರಾಯನೂ ಸಂತಾಪಗೊಂಡು ಎಚ್ಚಮನಾಯಕನನ್ನೂ, ಹೊಸ ದೊರೆಯನ್ನೂ ಹೊಟ್ಟೆಯಕಿಚ್ಚಿನಿಂದ ನೋಡಹತ್ತಿದರು. ಕಲಹದ ಚಿಹ್ನಗಳು ಆಗಲೆ ಸ್ಪಷ್ಟವಾಗಿ ತೋರಹತ್ತಿದವು. ಬಹುತರ ಯಾವತ್ತು ಸರದಾರರೂ, ಮಾಂಡಲಿಕ ರಾಜರೂ ನೂತನ ದೊರೆಯ ಅಧಿಕಾರವನ್ನು ಒಪ್ಪಿಕೊಂಡು ಆತನನ್ನು ಓಲಯಿಸಿದರು. ಜಗರಾಯ, ತಿಮ್ಮನಾಯಕ, ಮಕರನಾಯಕ ಎಂಬ ಮೂವರು ಸರದಾರರು ನೂತನ ದೊರೆಗೆ ನಮಿಸದೆ, ತಮ್ಮ ಪಕ್ಷದವನಾದ ಚಿಕ್ಕರಾಯನೊಡನೆ ದರ್ಬಾರದಿಂದ ಹೊರಟುಹೋದರು. ಈ ಉದ್ಧಟತನಕ್ಕಾಗಿ ದರ್ಬಾರದ ಉಳಿದ ಜನರು ಜಗರಾಯನನ್ನೂ, ಆತನ ಪಕ್ಷದವರನ್ನೂ ರಾಜದ್ರೋಹಿಯೆಂದು ನಿರ್ಣಯಿಸಿ ನೂತನ ರಾಜನ ಪಕ್ಷವನ್ನು ದೃಢವಾಗಿ ಸ್ವೀಕರಿಸಿದರು. ಸರ್ವಾನುಮತಿಯಿಂದ ಎಚ್ಚಮನಾಯಕನು ರಾಜಪಕ್ಷದ ಮುಖ್ಯನಾಗಿ ನಿಯಮಿಸಲ್ಪಟ್ಟನು. ಒಟ್ಟಿಗೆ, ಚಂದ್ರಗಿರಿಯ ಪಟ್ಟದ ಸಲುವಾಗಿ ಜಗರಾಯನದೊಂದು, ಎಚ್ಚಮನಾಯಕನದೊಂದು ಹೀಗೆ ಎರಡು ಪಕ್ಷಗಳಾಗಿ ಗೃಹಕಲಹವು ಉತ್ಪನ್ನವಾದಂತಾಯಿತು. ದರ್ಬಾರವು ಮುಗಿಯಲು, ಎಲ್ಲರೂ ತಮ್ಮ ತಮ್ಮ ಬಿಡಾರಗಳಿಗೆ ಹೋದರು. ದರ್ಬಾರದ ಸಂಗತಿಯು ಕಾಡುಬೇಗೆಯಂತೆ ನಾಲ್ಕೂ ಕಡೆಗೆ ಹಬ್ಬಿ, ಕೆಲವರು ಜಗರಾಯನ ಪಕ್ಷವನ್ನೂ, ಕೆಲವರು ಎಚ್ಚಮನಾಯಕನ ಪಕ್ಷವನ್ನೂ ಸಮರ್ಥಿಸಹತ್ತಿದರು. ರಾಜಧಾನಿಯಲ್ಲಿ ಶಾಂತತೆಯ ಭಂಗವಾಯಿತು. ಮುಂದೆ ಮೂರು ದಿನಗಳ ಮೇಲೆ

ವೆಂಕಟದೊರೆಯು ೬೭ ವರ್ಷದವನಾಗಿ ಮರಣಹೊಂದಿದನು. ಅವನ ಮೂವರು ರಾಣಿಯರು ಸಹಗಮನ ಮಾಡಿದರು. ಇತ್ತ ಎಚ್ಚಮನಾಯಕನು ತನ್ನ ಪಕ್ಷದವನಾದ ಚಿಕ್ಕರಾಯನನ್ನು ಪಟ್ಟಕ್ಕೆ ಕುಳ್ಳಿರಿಸಿ, ರಾಜ್ಯದ ಸುವ್ಯವಸ್ಥೆಯಲ್ಲಿ ತೊಡಗಿದನು.

ಎಚ್ಚಮನಾಯಕನ ದಕ್ಷತೆಯಿಂದಲೂ, ಸಾಮರ್ಥ್ಯದಿಂದಲೂ ರಾಜ್ಯದಲ್ಲಿ ಶಾಂತತೆಯುಂಟಾಗಿ ಚಿಕ್ಕರಾಯನು ರಾಜ್ಯವಾಳಹತ್ತಿದನು. ಅರಸನ ಅಧಿಕಾರವು ಸ್ಥಿರಗೊಳ್ಳುವವರೆಗೆ ನಾಯಕನು ಸಸೈನ್ಯವಾಗಿ ಚಂದ್ರಗಿರಿಯಲ್ಲಿದ್ದನು. ಬರಬರುತ್ತ ಅರಸನಿಗೆ ಮಂತ್ರಿಗಳೂ, ಸೇನಾನಾಯಕರೂ, ಉಳಿದ ರಾಜ್ಯಾಧಿಕಾರಿಗಳೂ ಅನುಕೂಲರಾಗಿ ನಡೆಯಹತ್ತಿದರು. ಪ್ರಜಾನುರಾಗವು ಹೆಚ್ಚುತ್ತಲಿತ್ತು, ಅರಸನ ವಿರುದ್ಧವಾಗಿ ಸಂಚುಗಾರರ ಸಂಚುಗಳು ಎಲ್ಲಿಯೂ ಕಂಡುಬಾರದಾದವು. ಆಗ ನಾಯಕನು ಅರಸನ ಅಪ್ಪಣೆಯನ್ನು ಪಡೆದು, ತನ್ನ ಪ್ರತಾಪದುರ್ಗಕ್ಕೆ ಹೊರಡಲು ಸಿದ್ಧನಾದನು. ನಾಯಕನು ಇನ್ನೂ ಕೆಲವು ದಿನ ಇರಬೇಕೆಂದು ಚಿಕ್ಕರಾಯನ ಮನಸ್ಸಿನಲ್ಲಿತ್ತು; ಆದರೂ ಆತನು ಹಾಗೆ ಬಾಯಿಬಿಚ್ಚಿ ಹೇಳಲಾರದೆ, ನಾಯಕನಿಗೆ ಹೋಗಲಪ್ಪಣೆ ಕೊಟ್ಟನು. ಅರಸನ ಈ ಭಾವವು ನಾಯಕನಿಗೆ ತಿಳಿಯಲಿಲ್ಲೆಂತಲ್ಲ, ಜಗರಾಯನೇ ಮೊದಲಾದ ಅರಸನ ವಿರುದ್ಧ ಪಕ್ಷದವರು ಬಲಾಢ್ಯರಾದದ್ದರಿಂದ ಅವರು ಅರಸನಿಗೆ ಕೇಡು ಬಗೆಯದೆ ಬಿಡರೆಂಬುದನ್ನಾದರೂ ನಾಯಕನು ಮರೆತಿದ್ದಿಲ್ಲ; ಆದರೆ ಸ್ವೀಕೃತಕಾರ್ಯವು ಕೈಗೂಡಿದಂತಾದಕೂಡಲೆ, ಆ ತರುಣನ ಚಂಚಲಮನಸ್ಸು ಬೇರೊಂದು ಕಡೆಗೆ ಎಳೆಯಹತ್ತಿತು. ಆದಿಪಂಪಾಕ್ಷೇತ್ರ, ಫಲ ಮಂತ್ರಾಕ್ಷತೆ ಚಂಪೆಯ ಸುಂದರರೂಪ, ಋಷೀಶ್ವರನ ತೇಜಃಪುಂಜ ಮೂರ್ತಿ ಭೂತಗಳ ಲೀಲೆ ಮೊದಲಾದ ಮನೋಹರ ವಿಷಯಗಳಿಂದ ಮೊದಲೇ ಮೂಢನಾಗಿದ್ದ ಆ ತರುಣನು, ಒಂದು ಕಾರ್ಯದ ಭಾರವು ಇಳಿದಂತಾದ ಕೂಡಲೆ ಚಂಚಲನಾದನು. ಈ ಚಾಂಚಲ್ಯವು ಪಾಪ! ಆ ಬಡ ಚಿಕ್ಕರಾಯನ ನಾಶಕ್ಕೆ ಕಾರಣವಾದೀತೆಂಬುದನ್ನು ಆ ಸ್ವಚ್ಛಂದವೃತ್ತಿಯ ನಾಯಕನು ಏನು ಬಲ್ಲನು? ಆತನು ಆದಿಪಂಪಾಕ್ಷೇತ್ರಕ್ಕೆ ಹೋಗಿ ಚಂಪೆಯ ಹಸ್ತಸ್ಪರ್ಶದಿಂದ ಗೌರವವನ್ನು ಪಡೆದಿದ್ದ ಫಲಮಂತ್ರಾಕ್ಷತೆಗಳನ್ನು ಯಾವಾಗ ಸ್ವೀಕರಿಸೇನೆಂಬ ನಿಧಿ ಧ್ಯಾಸದಲ್ಲಿ ಮಗ್ನನಾಗಹತ್ತಿದನು.ತನ್ನ ಅರಸನ ಸೈನ್ಯದ ವ್ಯವಸ್ಥೆಯು ಚೆನ್ನಾಗಿರಲು, ರಾಜ್ಯಾಧಿಕಾರಿಗಳು ಅರಸನಿಗೆ ಅನುಕೂಲರಾಗಿರಲು, ತನ್ನ ಸಹಾಯಕನ ಸೈನ್ಯವು ಜಾಗರೂಕವಾಗಿರುವ, ನ್ಯಾಯದ ರಾಜಪಕ್ಷವು ಸ್ವಾಭಾವಿಕವಾಗಿಯೇ ಬಲಿಷ್ಠವಾಗಿರಲು ಈಗ ಅಂಥ ಪ್ರಸಂಗವೇನು ಬಂದಿದೆ, ಎಂದು ಮನಸ್ಸಿಗೆ ಸಮಾಧಾನ ಮಾಡಿಕೊಂಡು, ಆ ತರುಣನು ಆರಿಸಿದ ಇನ್ನೂರು ಜನ ಕುದುರೆಯ ಸವಾರರೊಡನೆ ತನ್ನ ರಾಜಧಾನಿಯಾದ ಪ್ರತಾಪದುರ್ಗಕ್ಕೆ ಸಾಗಿದನು. ಇತ್ತ ಹೊಂಚುಹಾಕಿಕೊಂಡು ಕುಳಿತಿದ್ದ ಮಹಾ ನೀಚನಾದ ಜಗರಾಯನು, ನಿರಪರಾಧಿಯೂ, ಪಾಪಬೀರುವೂ, ಅಲ್ಪ ಸಂತುಷ್ಟನೂ ಆದ ಬಡ ಚಿಕ್ಕರಾಯನ ವಂಶಕ್ಕೆ ವಂಶವನ್ನು ಅನ್ಯಾಯದಿಂದ ಮಣ್ಣುಗೂಡಿಸಿ, ಅಧಮರ ದುಶ್ಚರಿತ್ರವು ನರಕಸಾಧನವೆಂಬ ಮಾತನ್ನು ಜಗತ್ಪ್ರಸಿದ್ಧ ಮಾಡಲು ಟೊಂಕಕಟ್ಟಿದನು!

# ಮಹಾಮಂತ್ರ

ಮಾರ್ಗಸ್ಥನಾದ ಎಚ್ಚಮನಾಯಕನು ಒಂದು ಸರೋವರದ ತೀರದಲ್ಲಿ ಪಾಳಯವನ್ನು ಬಿಟ್ಟುಕೊಂಡು ತನ್ನ ಡೇರೆಯಲ್ಲಿ ಒಬ್ಬನೇ ವಿಚಾರಮಾಡುತ್ತ ಕುಳಿತಿದ್ದನು. ಆಗ ಎರಡು ತಾಸು ರಾತ್ರಿಯಾಗಿತ್ತು. ಕೃಷ್ಣಪಕ್ಷವಾದ್ದರಿಂದ ಕಗ್ಗತ್ತಲೆಯು ಮುಸುಕಿತ್ತು. ಸೈನಿಕರು ಊಟದ ಸಿದ್ಧತೆಯಲ್ಲಿ ತೊಡಗಿದ್ದರು. ಡೇರೆಯ ಬಾಗಿಲಲ್ಲಿ ಒಬ್ಬ ಸೇವಕನು ಮಾತ್ರ ಕುಳಿತಿದ್ದನು. ಡೇರೆಯಲ್ಲಿ ಯಾರೂ ಇದ್ದಿಲ್ಲ. ತನ್ನ ಅಪ್ಪಣೆಯ ಹೊರತು ಒಳಗೆ ಯಾರನ್ನೂ ಬಿಡಬಾರದೆಂದು ನಾಯಕನು ನಿರ್ಬಂಧಿಸಿದ್ದನು. ತಾನು ಚಂಪೆಯ ದರ್ಶನಾಪೇಕ್ಷೆಯಿಂದ ತನ್ನ ಸ್ವಾಮಿಯಾದ ಚಿಕ್ಕರಾಯನನ್ನು ಇಷ್ಟು ಬೇಗನೆ ಬಿಟ್ಟು ಬಂದದ್ದು ನೆಟ್ಟಗಾಗಲಿಲ್ಲೆಂದು ಅವನ ಮನಸ್ಸಿನಲ್ಲಿ ಕಟಿಯ ಹತ್ತಿತು; ಜಗರಾಯನು ತನ್ನ ಮೊಮ್ಮಗನಾದ ಚಿಕ್ಕರಾಯನನ್ನು ಪಟ್ಟಕ್ಕೆ ಕುಳ್ಳಿರಿಸುವದಕ್ಕಾಗಿ ತನ್ನ ಸ್ವಾಮಿಗೆ ಕೇಡು ಬಗೆಯದೆ ಇರನೆಂತಲೂ, ಸರಳ ಸ್ವಭಾವದ ಹಾಗು ಪಾಪಭೀರುವಾದ ತನ್ನ ಸ್ವಾಮಿಯು, ವೈರಿಗಳ ಒಳಸಂಚುಗಳನ್ನು ಬೈಲಿಗೆಳೆದು, ಅವನ್ನು ನಿವಾರಣ ಮಾಡಲು ಸಮರ್ಥನಲ್ಲೆಂತಲೂ ಆತನು ಚಿಂತಿಸಿದನು. ಇಂಥ ಪ್ರಸಂಗದಲ್ಲಿ ತಾನು ಸ್ವಾಮಿಯನ್ನಗಲಿ ಹೋಗುವದು ಅನರ್ಥಕ್ಕೆ ಕಾರಣವಾಗಬಹುದಾದ್ದರಿಂದ ಬಂದ ಕಾಲಲ್ಲಿಯೇ ಹಿಂದಕ್ಕೆ ಚಂದ್ರಗಿರಿಗೆ ಹೋಗಬೇಕೆಂದು ಆತನು ನಿಶ್ಚಯಿಸಿದನು. ಅಷ್ಟರಲ್ಲಿ ಚಂಪೆಯ ಸುಂದರರೂಪವು ಕಣ್ಣಿಗೆ ಕಟ್ಟಿ ಅವನ ಮನಸ್ಸು ಮತ್ತೆ ಚಂಚಲವಾಯಿತು. ನಾಯಕನು ಶೂರನಿದ್ದನು, ಧೀರನಿದ್ದನು, ಸುವಿಚಾರಿಯಿದ್ದನು, ಸುಶೀಲನಿದ್ದನು; ಆದರೆ ಒಮ್ಮೊಮ್ಮೆ ಆತನು ಮನಸ್ಸಿನ ಚಾಂಚಲ್ಯದ ದೋಷದಿಂದ ಪಶ್ಚಾತ್ತಾಪಕ್ಕೆ ಗುರಿಯಾಗಬೇಕಾಗುತ್ತಿತ್ತು. ಅದರಂತೆ ತನ್ನ ವಿಚಾರಗಳನ್ನು ನಂಬುವ ಭರದಲ್ಲಿ ಪರರ ಸುವಿಚಾರಗಳನ್ನು ಕೂಡ ಧಿಕ್ಕರಿಸುವ ಕೆಟ್ಟ ಚಟವಿದ್ದದ್ದರಿಂದಲೂ ಆತನು ಹಲವು ಸಾರೆ ಪಶ್ಚಾತ್ತಾಪಕ್ಕೆ ಗುರಿಯಾಗುತ್ತಿದ್ದನು. ಈ ಚಾಂಚಲ್ಯ-ದುರಭಿಮಾನಗಳೇ ನಾಯಕನ ಈಗಿನ ಪಶ್ಚಾತ್ತಾಪಕ್ಕೆ ಕಾರಣವಾಗಿದ್ದವೆಂದು ಹೇಳಬಹುದು. ತನ್ನ ಸ್ವಾಮಿಯ ರಾಜ್ಯವು ನಿಷ್ಕಂಟಕ ವಾಗುವವರೆಗೆ ತಾನು ಚಂದ್ರಗಿರಿಯಲ್ಲಿ ಸ್ಥಿರಮನಸ್ಸಿನಿಂದಿರುವುದನ್ನು ಬಿಟ್ಟು, ತನ್ನ ಸ್ವಾಮಿಯ ಇಚ್ಛೆಯನ್ನು ಕೂಡ ಧಿಕ್ಕರಿಸಿ ಆತನು ಚಂಪೆಯ ಬಳಿಗೆ ಹೋಗುವ ಮನಸ್ಸು ಮಾಡಿದ್ದು ಅಪರಾಧವಲ್ಲದೆ ಮತ್ತೇನು? ಒಮ್ಮೆನಾಯಕನು ಚಿಕ್ಕರಾಯನನ್ನು ನೆನಿಸಿ ಚಂದ್ರಗಿರಿಗೆ ಹೋಗಬೇಕೆನ್ನುವನು. ಮತ್ತೊಮ್ಮೆ ಚಂಪೆಯನ್ನು ನೆನಿಸಿ ಪಂಪಾಕ್ಷೇತ್ರಕ್ಕೆ ಹೋಗಬೇಕೆನ್ನುವನು ಹೀಗಾಗಿ ಆತನ ಮನಸ್ಸಿನ ನಿಶ್ಚಯವೇ ಆಗಲೊಲ್ಲದು. ಲೋಡಿಗೆ ಆತು ಕುಳಿತಿದ್ದ ಆತನು, ಈ ಮಗ್ಗುಲಿನಿಂದ ಆ ಮಗ್ಗುಲಿಗೆ, ಆ ಮಗ್ಗುಲಿನಿಂದ ಈ ಮಗ್ಗುಲಿಗೆ ಆಗುತ್ತ ಉಸುರ್ಗರೆಯುತ್ತ ತಳಮಳಿಸಹತ್ತಿದನು.

ಅಷ್ಟರಲ್ಲಿ ಒಬ್ಬ ಬ್ರಾಹ್ಮಣನು ಒಬ್ಬ ಸ್ತ್ರೀಯನ್ನು ಸಂಗಡ ಕರಕೊಂಡು ದರ್ಶನಾ ಪೇಕ್ಷಿಯಾಗಿ ನಾಯಕನ ಡೇರೆಯ ಬಾಗಿಲಿಗೆ ಬಂದನು. ಸ್ತ್ರೀಯು ವಸ್ತ್ರದಿಂದ ಸರ್ವಾಂಗವನ್ನು ಮುಚ್ಚಿಕೊಂಡದ್ದರಿಂದ ಆಕೆಯ ರೂಪಲಾವಣ್ಯಾದಿಗಳೇನೂ ಕಾಣುತ್ತಿದ್ದಿಲ್ಲ. ಸೇವಕನು ಈ

ಸಂಗತಿಯನ್ನು ನಾಯಕನಿಗೆ ತಿಳಿಸಲು, ಆತನು ಕೂಡಲೆ ಅವರನ್ನು ಒಳಗೆ ಬಿಡಲು ಅಪ್ಪಣೆ ಮಾಡಿದನು. ಬ್ರಾಹ್ಮಣರಲ್ಲಿ ನಾಯಕನ ವಿಶ್ವಾಸ ಬಹಳ. ಬ್ರಾಹ್ಮಣ ಕ್ಷೋಭವು ವಂಶಕ್ಷಯಕ್ಕೆ ಕಾರಣವೆಂಬುದನ್ನು ತಿಳಿದು ಆತನು ನಯಭಯಗಳಿಂದ ಬ್ರಾಹ್ಮಣರೊಡನೆ ನಡಕೊಳ್ಳುತ್ತಿದ್ದನು. ಬ್ರಾಹ್ಮಣನು ಸ್ತ್ರೀಯೊಡನೆ ಡೇರೆಯನ್ನು ಪ್ರವೇಶಿಸಲು, ಕೂಡಲೆ ನಾಯಕನು ಆಯಾಸದಿಂದ ಎದ್ದುಬಂದು ಬ್ರಾಹ್ಮಣನ ಚರಣಕ್ಕೆರಗಿ ಕೈಜೋಡಿಸಿ ಆಸನದಲ್ಲಿ ಕುಳಿತುಕೊಳ್ಳ ಬೇಕೆಂದು ವಿನಯದಿಂದ ಪ್ರಾರ್ಥಿಸಿದನು. ನಾಯಕನ ಈ ವಿನಯದ ಆದರದಿಂದ ಸಂತುಷ್ಟ ನಾದ ಬ್ರಾಹ್ಮಣನು ಆಸನದಲ್ಲಿ ಕುಳಿತುಕೊಳ್ಳುತ್ತ–''ಅಮ್ಮಾ ಚಂಪಾ, ಇತ್ತ ಕುಳಿತುಕೊಳ್ಳಮ್ಮಾ'' ಎಂದು ತನ್ನ ಸಂಗಡ ಬಂದ ಸ್ತ್ರೀಗೆ ಹೇಳಿದನು. ಇದನ್ನು ಕೇಳಿ ನಾಯಕನಿಗೆ ಪರಮಾಶ್ಚರ್ಯ ವಾಯಿತು. **ತಾನು ಹಿಂದಕ್ಕೊಂದು ಹುಣ್ಣಿಮೆಯ ರಾತ್ರಿ ಪಂಪಾವತಿಯ ಗುಡಿಗೆ ಹೋದಾಗ, ಪ್ರತಿ ಸೂರ್ಯನಂತೆ ತೇಜೋವಿಶೇಷದಿಂದ ಬೆಳಗುತ್ತ ಪಂಪಾಪತಿಯನ್ನು ಪೂಜಿಸುತ್ತಿದ್ದ ಬ್ರಾಹ್ಮಣನೇ,** ತಾನಾಗಿ ಚಂಪೆಯನ್ನು ತನ್ನ ಬಳಿಗೆ ಕರಕೊಂಡು ಬಂದನೆಂದು ತಿಳಿದು ನಾಯಕನಿಗೆ ಪರಮಾನಂದವಾಯಿತು. ಚಂಪೆಯು ಬ್ರಾಹ್ಮಣನ ಅಪ್ಪಣೆಯಂತೆ ಮೈಮೇಲಿನ ವಸ್ತ್ರವನ್ನು ತೆಗೆಯಲು, ಆಕೆಯ ಸುಂದರಮೂರ್ತಿಯು ಡೇರೆಯನ್ನಲಂಕರಿಸಿತು. ಬಡವನು ನಡೆಯುವಾಗ ಎಡವಿ ಭಾಗ್ಯವನ್ನು ಕಾಣುವಂತೆ, ಚಂಪೆಯ ಧ್ಯಾನಮಗ್ನನಾದ ನಾಯಕನು ಅಕಸ್ಮಾತ್ತಾಗಿ ಬ್ರಾಹ್ಮಣನ ಯೋಗದಿಂದ ಚಂಪೆಯನ್ನು ಕಂಡನು. ಚಂಪೆಯು ತನ್ನ ಸುಂದರವಾದ ಕಟಾಕ್ಷ ಗಳಿಂದ ಒಮ್ಮೆ ನಾಯಕನನ್ನು ನೋಡಿದಕೂಡಲೆ ಆತನ ಗುರುತು ಹಿಡಿದಳು. ಚಿಕ್ಕಂದಿನಲ್ಲಿಯೇ ತನ್ನ ಮನಸ್ಸನ್ನಪಹರಿಸಿದ ನಾಯಕನು ಎದುರಿಗೆ ನಿಂತಿದ್ದರಿಂದ ಚಂಪೆಯ ಮುಖವು ಪ್ರಫುಲ್ಲಿತ ವಾಯಿತು ಆಕೆಯು ಕೇವಲ ಪರಿಚಿತಳಂತೆ ನಾಯಕನನ್ನು ಗೌರವದಿಂದ ನೋಡಹತ್ತಿದ್ದಳು. ಇದನ್ನರಿತು ನಾಯಕನು ಆಲೋಚಿಸುತ್ತಿರಲು, ಬ್ರಾಹ್ಮಣನು ಅಧಿಕಾರ ಯುಕ್ತವಾದ ಗಂಭೀರ ಸ್ವರದಿಂದ ನಾಯಕನನ್ನು ಕುರಿತು ನುಡಿದನೇನಂದರೆ–ಎಲೈ ತರುಣವೀರನೇ, ಇದು ನಿನ್ನ ವಸ್ತುವು, ಇದನ್ನು ಸ್ವೀಕರಿಸಿ ನನ್ನನ್ನು ಮುಕ್ತನಾಗಿಮಾಡು.

ಬ್ರಾಹ್ಮಣನ ಈ ಮಾತುಗಳನ್ನು ಕೇಳಿ ನಾಯಕನಿಗೆ ಏನೂ ತೋಚದಾಯಿತು. ಆತನು ಕೌತುಕದಿಂದ ಚಂಪೆಯನ್ನು ನೋಡಲು, ಆಕೆಯು ನಾಚಿಕೆಯಿಂದ ತಲೆಬಾಗಿಸಿ ಕಾಲ ಹೆಬ್ಬೆರಳಿನಿಂದ ನೆಲವನ್ನು ಗೀರುತ್ತ ಎರಡೂ ಕೈಗಳಿಂದ ಸೆರಗಿನ ತುದಿಯನ್ನು ತಿಕ್ಕುತ್ತ ಹೊರಗೆ ಕಾಣದಂತೆ ಹಲ್ಲುಗಳಿಂದ ಕೆಳದುಟಿಯನ್ನು ಮೆಲ್ಲಮೆಲ್ಲನೆ ಕಚ್ಚುತ್ತ ನಿಂತುಕೊಂಡಿದ್ದಳು. ಚಿಕ್ಕಂದಿನಲ್ಲಿ ಚಂಪೆಯೂ, ಎಚ್ಚಮನಾಯಕನೂ ಕೂಡಿ ಆಡಿದವರಾಗಿದ್ದರೂ, ಋಷಿಸದೃಶನಾದ ಬ್ರಾಹ್ಮಣನ ಮುಖದಿಂದ ಮೇಲಿನವೆರಡು ವಾಕ್ಯಗಳು ಹೊರಡುವ ಮೊದಲು ಆಕೆಯು ನಾಯಕನನ್ನು ನೋಡಿ ಎಂದೂ ಹೀಗೆ ನಾಚಿದ್ದಿಲ್ಲ. ಇಷ್ಟಾದರೂ ನಾಯಕನಿಗೆ ಚಂಪೆಯ ಗುರುತು ಸ್ಪಷ್ಟವಾಗಿ ಹತ್ತಲೊಲ್ಲದು. ಇದನ್ನರಿತು ಬ್ರಾಹ್ಮಣನು–ವೀರಶಿಖಾಮಣಿಯೇ, ನಿನ್ನನು ಸಂಶಯಗ್ರಸ್ತನಾಗಿ ಮಾಡಿ ನಾನು ನೋಯಿಸುವುದಿಲ್ಲ, ಈ ಚಂಪೆಯು ಕಾಂಚನಗಡದ ಅಧಿಪತಿಯಾದ ನರಸಿಂಗನಾಯಕನ ಮಗಳು. ಈಕೆಯ ನಿಜವಾದ ಹೆಸರು ಮೋಹಿನಿಯು.

ನರಸಿಂಗನಾಯಕನು ವಿಜಯನಗರದ ರಾಯರ ಪಕ್ಷದಿಂದ ವಿಜಾಪುರದ ಬಾದಶಹನ ದಂಡಿನೊಡನೆ ಹೋರಾಡುತ್ತಿರುವಾಗ ಯುದ್ಧದಲ್ಲಿ ಮರಣಹೊಂದಿದನು. ಆಗ ಆತನನ್ನು ಹಿಂಬಾಲಿಸಿ ಹೋಗಿದ್ದ ಈ ಮೋಹಿನಿಯೂ, ಈಕೆಯ ತಾಯಿಯೂ ವಿಜಾಪುರದ ದಂಡಿನ ಕೈಸೇರಿದರು. ಆ ದಂಡಿನ ಮುಖ್ಯಸ್ಥನು ಪ್ರತ್ಯಕ್ಷ ಬಾದಶಹನ ಮಗನೇ ಇದ್ದು ಆತನು ಈಕೆಯ ರೂಪಾತಿಶಯಕ್ಕೆ ಮರುಳಾಗಿ ಈಕೆಯನ್ನು ಮದುವೆಯಾಗಲು ಹವಣಿಸಿದನು. ನಿನ್ನನ್ನು ತುಂಬಾ ಪ್ರೀತಿಸುತ್ತಿದ್ದ ಮೋಹಿನಿಗ ಈ ಹವಣಿಕೆಯು ಮರಣಪ್ರಾಯವಾಗಿ ಪರಿಣಮಿಸಿದ್ದು ಆಶ್ಚರ್ಯವಲ್ಲ. ಮೋಹಿನಿಯ ದಾಸಿಯು, ಸ್ವಾಮಿಭಕ್ತಿಯಿಂದ ತನ್ನ ಪ್ರಾಣವನ್ನು ಕೊಟ್ಟು, ಮೋಹಿನಿಯನ್ನು ಯವನರ ಪ್ರತಿಬಂಧದಿಂದ ಮುಕ್ತಳಾಗಿಮಾಡಿದಳು. ಮೋಹಿನಿಯು ತೊಳಲುತ್ತ ಬಳಲುತ್ತ ಸಮೀಪದಲ್ಲಿ ಕಾಣುವ ಪಂಪಾಕ್ಷೇತ್ರಕ್ಕೆ ಬಂದು, ಕ್ಷೇತ್ರಸ್ಥರಾದ ನಮ್ಮನ್ನು ಮೊರೆಹೊಕ್ಕಳು. ಮೊರೆಹೊಕ್ಕವರ ರಕ್ಷಣ ಮಾಡುವುದು ಯೋಗ್ಯವೆಂದು ತಿಳಿದು ಈಕೆಗೆ ಯವನರ ಬಾಧೆಯು ತಟ್ಟದಂತೆ, ಈಗೆರಡು ವರ್ಷಗಳಿಂದ ಆದಿಪಂಪಾಕ್ಷೇತ್ರದ ಗುಪ್ತಸ್ಥಾನದಲ್ಲಿ ಬಹು ಕಷ್ಟದಿಂದ ಈಕೆಯ ರಕ್ಷಣ ಮಾಡಿದ್ದೇವೆ 'ಚಂಪೆ' ಎಂಬುದು ನಾವು ಇಟ್ಟ ಹೆಸರು. ಈ ಮೋಹಿನಿಯು ನಿನ್ನನ್ನೇ ಮದುವೆಯಾಗಬೇಕೆಂದು ಇಚ್ಛಿಸುತ್ತಿರುವಳಲ್ಲದೆ, ಮೋಹಿನಿಯ ತಾಯಿ-ತಂದೆಗಳಾದರೂ ಮೋಹಿನಿಯನ್ನು ನಿನಗೇ ಕೊಡಲು ನಿಶ್ಚಯಿಸಿದ್ದರೆಂದು ಮೋಹಿನಿಯ ಸ್ವಾಮಿನಿಷ್ಠ ದಾಸಿಯು ನಮಗೆ ಆಗ್ರಹದಿಂದ ತಿಳಿಸಿದ್ದಾಳೆ. ಎಚ್ಚಮನಾಯಕಾ, ನಿನ್ನವಂಶವು ಬಹು ಪ್ರಸಿದ್ಧವಾದದ್ದು, ನಿನ್ನ ವಂಶಜರು ಗೋಬ್ರಾಹ್ಮಣ ಪ್ರತಿ ಪಾಲನೆಗಾಗಿ ಅನಂತ ಸಾಹಸಗಳನ್ನು ಮಾಡುತ್ತ ಬಂದಿರುತ್ತಾರೆ. ನೀನಾದರೂ ಆ ಸದ್ವಂಶಾಬ್ಧಿಗೆ ಚಂದ್ರನಂತೆ ಇರುತ್ತೀ, ಮೋಹಿನಿಯು ಸಾಮಾನ್ಯಳಲ್ಲ. ಮೊದಲೇ ಸತ್ಕುಲ ಪ್ರಸೂತಳು. ಸದ್ಗುಣಗಳ ಮಂಡನವು ಸ್ವಭಾವಸಿದ್ಧವಾಗಿಯೇ ಈಕೆಯಲ್ಲಿ ಆಗಿರುತ್ತದೆ. ಮೇಲೆ ಈಗೆರಡು ವರ್ಷಗಳಿಂದ ಸತ್ಸಂಗವನ್ನು ಪಡೆದು ಈಕೆಯು ಸುರಕ್ಷಿತಳಾಗಿರುತ್ತಾಳೆ ಈಕೆಯ ಸೌಂದರ್ಯದ ಲೌಕಿಕವು ದಕ್ಷಿಣ ಹಿಂದುಸ್ಥಾನದಲ್ಲೆಲ್ಲ ಇದ್ದದ್ದರಿಂದ ದೊಡ್ಡ ದೊಡ್ಡ ಹಿಂದೂ ಅರಸರೂ ಮುಸಲ್ಮಾನ ಅರಸರೂ ಈಕೆಯನ್ನು ಮದುವೆಯಾಗಲು ಆತುರಪಡುತ್ತಿದ್ದರು. ತರುಣವೀರಾ, ಹೆಚ್ಚಿಗೆ ಹೇಳುವುದೇನು? ನೀನು ಈ ತರುಣಿಯ ಪಾಣಿಗ್ರಹಣ ಮಾಡಿ ಸುಖವನ್ನೂ, ಕೀರ್ತಿಯನ್ನೂ ಸಂಪಾದಿಸು!

ಬ್ರಾಹ್ಮಣನ ಈ ಅಮೃತವಾಣಿಗಳನ್ನು ಕೇಳಿ ಎಚ್ಚಮನಾಯಕನು ಭಕ್ತಿಯಿಂದ ನನ್ನ ದೇಹವನ್ನು ಬ್ರಾಹ್ಮಣನ ಚರಣಕ್ಕೆ ಈಡಾಡಿ ಎದ್ದುನಿಂತು ಕೈಜೋಡಿಸಿಕೊಂಡು ವಿನಯದಿಂದ-ಸ್ವಾಮೀ, ವಿಪ್ರೋತ್ತಮರೇ, ಮಹಾಮಹಿಮರಾದ ತಾವು ನಮ್ಮಂಥ ಪಾಮರರ ಉದ್ಧಾರಕ್ಕಾಗಿ ಹಗಲಿರುಳು ಯತ್ನಿಸುತ್ತಿರಲು, ತಮ್ಮ ಅಪ್ಪಣೆಯನ್ನು ಮೀರಲು ಅದಾವನು ಸಮರ್ಥನಾಗುವನು? ''ಮೋಹಿನಿ-ಮೋಹಿನಿ''ಯೆಂದು ಹಲವು ವರ್ಷ ತಪಶ್ಚರ್ಯ ಮಾಡಿದರೂ ಮೋಹಿನಿಯ ಪ್ರಾಪ್ತಿಯು ದುರ್ಲಭವಾಗಿರುವುದು. ದೊಡ್ಡವರ ಅನುಗ್ರಹದಿಂದ ದುಸ್ಸಾಧ್ಯ ಸಂಗತಿಗಳೂ ಸುಸಾಧ್ಯವಾಗುತ್ತವೆಂಬ ಸಿದ್ಧಾಂತದ ಪ್ರತ್ಯಕ್ಷಾನುಭವವು ಮೋಹಿನಿಯ

ಪ್ರಾಪ್ತಿಯಿಂದ ಈಗ ನನಗಾಗಿರಲು, ನನ್ನನ್ನು ಹೋಲುವ ಧನ್ಯನು ಈ ಜಗತ್ತಿನಲ್ಲಿ ಯಾವನಿರುವನು? ಅನಂತ ಜನ್ಮಗಳನ್ನೆತ್ತಿ ಈ ಚರಣಗಳ ಸೇವೆ ಮಾಡಿದರೂ ಉಪಕಾರವು ತೀರಲಾರದು. ಮೋಹಿನಿಯು ಮುಸಲ್ಮಾನರ ಕೈಯಲ್ಲಿ ಸಿಕ್ಕು ಆತ್ಮಘಾತ ಮಾಡಿಕೊಂಡಳೆಂದು ಕೇಳಿ, ನಾನು ಲಗ್ನದ ವಿಷಯವಾಗಿ ನಿರಾಶೆಪಟ್ಟಿದ್ದೆನು; ಆದರೆ ಪಂಪಾಪತಿಯ ಗುಡಿಯಲ್ಲಿ ತಮ್ಮ ಸಮಕ್ಷ ಚಂಪೆಯ ದರ್ಶನವಾದಕೂಡಲೆ ನನ್ನ ಮನಸ್ಸು ಚಂಚಲವಾಯಿತು. ಪರಸ್ತ್ರೀಯ ದರ್ಶನದಿಂದ ಮನಸ್ಸು ಚಂಚಲಾಗುವದು ದೋಷವಲ್ಲವೆ? ಚಂಪೆಯೇ ಮೋಹಿನಿಯೆಂದು ಈಗ ಗೊತ್ತಾದ್ದರಿಂದ ನಾನು ದೋಷಮುಕ್ತನಾದಂತಾಯಿತು. ಅಂದು ರಾತ್ರಿ ಪಂಪಾಪತಿಯ ಗುಡಿಯಲ್ಲಿಯೇ ಸ್ವಾಮಿಗಳ ಚರಣದರ್ಶನ ಮಾಡಿಕೊಂಡಿದ್ದರೆ, ಶ್ರಮಪಟ್ಟು ಇಲ್ಲಿಯವರೆಗೆ ಬಂದು ಈ ಸೇವಕನಿಗೆ ಮೋಹಿನಿಯನ್ನು ಒಪ್ಪಿಸುವ ಪ್ರಸಂಗವು ತಮಗೆ ಬರುತ್ತಿದ್ದಿಲ್ಲ. ಆಕಸ್ಮಿಕವಾಗಿ ಕುದುರೆಗಳ ಕೊಳಗಗಳ ಸಪ್ಪಳ ಕೇಳಿದ್ದರಿಂದ ನಾನು ಅತ್ತಕಡೆಗೆ ಹೋಗಲು, ದರ್ಶನದ ಯೋಗವು ಕೂಡಿ ಬರಲಿಲ್ಲ. ನಮ್ಮಂಥ ಪಾಮರರ ಸಲುವಾಗಿ ಸ್ವಾಮಿಗಳು ಶ್ರಮಪಟ್ಟಿರುವುದನ್ನು ನೋಡಿದರೆ, ಪರೋಪಕಾರದ ಸ್ವರೂಪವು ಚೆನ್ನಾಗಿ ಗೊತ್ತಾಗುತ್ತದೆ. ಇರಲಿ, ಈಗ ಸ್ವಾಮಿಗಳು ದಯವಿಟ್ಟು ಪ್ರತಾಪದುರ್ಗಕ್ಕೆ ದಯಮಾಡಿಸಿ ಶಿಷ್ಯನ ಅಲ್ಪ ಸೇವೆಯನ್ನು ಸ್ವೀಕರಿಸುವ ಕೃಪೆ ಮಾಡಬೇಕು. ಚಂದ್ರಗಿರಿಯಲ್ಲಿ ಗೃಹಕಲಹವು ಉತ್ಪನ್ನವಾಗಿ ರುವುದರಿಂದ ಸದ್ಯದ ಪ್ರಭುಗಳಾದ ಚಿಕ್ಕರಾಯನ ಸೇವೆಯನ್ನು ಎಚ್ಚರದಿಂದ ಮಾಡ ಬೇಕಾಗಿದೆ. ಚಂದ್ರಗಿರಿಗೆ ಬೇಗನೆ ಹೋಗದಿದ್ದರೆ ಅನರ್ಥವು ಒದಗುವ ಸಂಭವವಿರುವುದು. ನಮ್ಮ ಪ್ರಭುವು ಜಯಶೀಲನಾಗಿ ಬಹುದಿವಸ ಬಾಳುವಂತೆಯೂ. ಅವಿಚ್ಛಿನ್ನವಾದ ಸ್ವಾಮಿನಿಷ್ಠೆಯು ನನ್ನಲ್ಲಿ ನೆಲಸಿರುವಂತೆಯೂ ಅನುಗ್ರಹಿಸಬೇಕು.

ನಾಯಕನ ಈ ನುಡಿಗಳನ್ನು ಕೇಳಿ ಬ್ರಾಹ್ಮಣನು–ಪ್ರತಾಪಿಯೇ, ನೀನು ಪಂಪಾಕ್ಷೇತ್ರಕ್ಕೆ ಬಂದು ಫಲಮಂತ್ರಾಕ್ಷತೆಗಳನ್ನು ಕೈಕೊಂಡದ್ದನ್ನು ನಾನು ಬಲ್ಲೆನು ನಿನಗೆ ಫಲಮಂತ್ರಾ ಕ್ಷತೆಗಳನ್ನು ಕೊಟ್ಟ ತೇಜೋಮೂರ್ತಿಯು ನನ್ನ ತಮ್ಮನೆಂದು ತಿಳಿ. ನಿತ್ಯಕ್ರಮದಂತೆ ನಾನು ಈ ಮೋಹಿನಿಯೊಡದೆ ಶಿವಾಲಯಕ್ಕೆ ಬಂದಾಗ ಸರೋವರದ ತೀರದ ಗಿಡದ ಟೊಂಗೆಗೆ ಫಲಮಂತ್ರಾಕ್ಷತೆಯ ಗಂಟು ತೂಗಾಡುತ್ತಿದ್ದದ್ದು ಈಕೆಯ ಕಣ್ಣಿಗೆ ಬಿದ್ದಿತು. ಈಕೆಯು ನನ್ನ ಅಪ್ಪಣೆಯಿಂದ ಅದನ್ನು ತಕ್ಕೊಂಡು ತೆಗೆದಿಟ್ಟಳು. ಅದೇದಿನ ರಾತ್ರಿ ನಿನ್ನ ಕಣ್ಣಿಗೆ ಬಿದ್ದ ಭೂತಗಳ ಲೀಲೆಯು ನಿರರ್ಥಕವಾದದ್ದು. ಅಪ್ಪಿ ತಪ್ಪಿ ರಾತ್ರಿ ಯಾರಾದರೂ ಗುಡಿಯಲ್ಲಿ ಉಳಿದರೆ, ಅವರು ಅಂಜಿ ಮತ್ತೊಮ್ಮೆ ಗುಡಿಯಲ್ಲಿ ಉಳಿಯಬಾರದೆಂತಲೂ, ಒಂದಕ್ಕೆ ಎರಡು ಸುದ್ದಿಗಳನ್ನು ಹುಟ್ಟಿಸಿ ಅವರು ಜನರನ್ನು ಅಂಜಿಸಿ ಯಾರೂ ರಾತ್ರಿ ಗುಡಿಯಲ್ಲಿ ಉಳಿದುಕೊಳ್ಳದಂತೆ ಮಾಡಬೇ ಕೆಂತಲೂ ನಾವೇ ಅನಂತ ಭೂತಚೇಷ್ಟೆಗಳನ್ನು ಹೊತ್ತುಬಿದ್ದಾಗ ತೋರಿಸುತ್ತಿದ್ದೆವು. ಆಕಸ್ಮಾತ್ ಉರಿಯನ್ನು ಹೊತ್ತಿಸುವುದು, ಮನುಷ್ಯಾಕೃತಿಗಳು ತೋರಿ, ಕೂಡಲೆ ಅಡಗುವಂತೆ ಮಾಡುವುದು, ಪಂಪಾಪತಿಯ ಭವ್ಯವಾದ ಪೂಜೆಯನ್ನು ಕ್ಷಣದಲ್ಲಿಯೇ ಅಳಿಸಿಬಿಡುವುದು, ವಿಚಿತ್ರಧ್ವನಿಯಿಂದ ಗುಣುಗುಟ್ಟುವುದು ಇವೇ ಮೊದಲಾದವು ಭೂತಚೇಷ್ಟೆಯ ಪ್ರಕಾರಗಳಾಗಿರುವುವು. ನೀನು

ಬಂದಿರುವ ಸುದ್ದಿಯು ಮುಂದೆ ಎರಡು ದಿನಗಳ ಮೇಲೆ ಹತ್ತದೆ, ಬಂದದಿನವೇ ಹತ್ತಿದ್ದರೆ, ನಾನು ಕೂಡಲೆ ನಿನ್ನನ್ನು ಕಂಡು ಮೋಹಿನಿಯನ್ನು ನಿನಗೆ ಒಪ್ಪಿಸಿ ನಿಶ್ಚಿಂತನಾಗುತ್ತಿದ್ದೆನು; ಆದರೆ ಮಾಡುವುದೇನು? ನೀನು ಚಂದ್ರಗಿರಿಗೆ ಹೋದಬಳಿಕ ನೀನು ಬಂದ ಸುದ್ದಿಯು ನನಗೆ ಗೊತ್ತಾಯಿತು. ಸದ್ಯಕ್ಕೆ ಮುಸಲ್ಮಾನರ ಹಾವಳಿಯು ವಿಶೇಷವಾಗಿರುವುದರಿಂದ ಹಿಂದೂ ಜನರ ಧರ್ಮ–ಮಾನ–ಧನಗಳು ಉಳಿಯುವುದು ಕಷ್ಟವಾಗಿದೆ. ವಿಜಾಪುರದ ಬಾದಶಹನ ಮಗನ ಕಣ್ಣು ಮೋಹಿನಿಯ ಮೇಲೆ ವಿಶೇಷವಾಗಿದ್ದದ್ದರಿಂದ ಆಕೆಯ ಸಂರಕ್ಷಣಕ್ಕಾಗಿ ಬಹಳ ಎಚ್ಚರಪಡಬೇಕಾಯಿತು. ಶ್ರೇಷ್ಠವರ್ಣದವರೆನಿಸುವ ಈಗಿನ ಬ್ರಾಹ್ಮಣರೇ ಅಡ್ಡಹಾದಿಯನ್ನು ಹಿಡಿಯುಹತ್ತಿದ್ದಾರೆ. ಅವರು ಸ್ವಾರ್ಥಾಭಿಲಾಷೆಯಿಂದ ಯಾವಕಾಲಕ್ಕೆ ಏನು ಮಾಡ್ಯಾರೆಂಬುದನ್ನು ಹೇಳಲಿಕ್ಕಾಗುವುದಿಲ್ಲ. ಮೊನ್ನೆ ನಮ್ಮ ಪಂಪಾಕ್ಷೇತ್ರಸ್ಥನಾದ ಒಬ್ಬ ಬ್ರಾಹ್ಮಣನು ಮುಸಲ್ಮಾನರ ಲಂಚಕ್ಕೆ ಮರುಳಾಗಿ ನಾವಿರುವ ಗುಪ್ತ ಸ್ಥಾನವನ್ನು ಅವರಿಗೆ ತೋರಿಸಿಬಿಟ್ಟನು. ಆ ಗುಪ್ತಸ್ಥಾನಕ್ಕೆ ಹೋಗುವ ಮಾರ್ಗವು ಬಹು ಗೂಢವಾದ್ದರಿಂದ ತೋರಿಸದಿದ್ದರೆ ಯಾರಿಗೂ ಗೊತ್ತಾಗುವಂತೆ ಇದ್ದಿಲ್ಲ; ಆದರೆ ಆ ಬ್ರಾಹ್ಮಣನ ನೀಚತನದಿಂದ ಕೆಲಸವು ಕೆಟ್ಟುಹೋಗಿ ಮೋಹಿನಿಯು ಮುಸಲ್ಮಾನರ ಕೈಸೇರಿದಳು. ನಾನು ಆಕೆಯನ್ನು ಬಿಟ್ಟುಹೋಗುವುದಿಲ್ಲೆಂದು ಹಟ ಹಿಡಿದದ್ದರಿಂದ ಇಬ್ಬರೂ ಮುಸಲ್ಮಾನರ ಕೈಸೇರಬೇಕಾಯಿತು. ಆಕಸ್ಮಾತ್ ನಿನ್ನ ಹೆಸರನ್ನು ತಕ್ಕೊಂಡು ನಾನು ಮೋಹಿನಿಯ ಸಂಗಡ ಮಾತಾಡುವುದು ಚಾಂದಖಾನನೆಂಬ ಸರದಾರನ ಕಿವಿಗೆ ಬಿದ್ದಿತು. ಚಾಂದಖಾನನು ನಿನ್ನ ಮಿತ್ರನಂತೆ. ಆತನು ಯುಕ್ತಿಯಿಂದ ನಮ್ಮನ್ನು ಬಂಧ ಮುಕ್ತರನ್ನಾಗಿ ಮಾಡಿ ಇಂದು ನಿನ್ನ ಬಿಡಾರಕ್ಕೆ ಸುರಕ್ಷಿತ ಮುಟ್ಟಿಸದಿದ್ದರೆ, ನಾವು ಯಾವ ಅನರ್ಥಕ್ಕೆ ಗುರಿಯಾಗುತ್ತಿದ್ದೆವೆಂಬುದನ್ನು ಹೇಳಲಿಕ್ಕಾಗುವುದಿಲ್ಲ. ''ಬ್ರಾಹ್ಮಣರಿಗೆ ಬ್ರಾಹ್ಮಣರೇ ಗತಿ''ಯೆಂಬ ಮಾತು ಸುಳ್ಳಾಗಹತ್ತಿದೆ. ಬ್ರಾಹ್ಮಣರ ನಡತೆಯು ದಿನದಿನಕ್ಕೆ ಕೆಡಹತ್ತಿದೆ. ಅವರಲ್ಲಿ ದೇವಲಂಡತನ–ಪಿತೃಲಂಡತನಗಳು ಹೆಚ್ಚುತ್ತಲಿವೆ. ಅವರ ಢಾಂಬಿಕತನಕ್ಕೆ ಕಳೆಯೇರತೊಡಗಿದೆ; ಮರೆಮೋಸಗಳಿಗೆ ಅವರು ಹೆಸರಾಗಿದ್ದಾರೆ; ತಮ್ಮ ಲಾಭವೊಂದು ಸಾಧಿಸಿದರೆ ತೀರಿತು, ಬೇಕಾದ ಕೆಲಸ ಮಾಡಲಿಕ್ಕೆ ಅವರು ಹಿಂಜರಿಯುವುದಿಲ್ಲ. ಮಹಾರಾಯಾ, ಮರೆಬಿದ್ದ ಈ ಸುಂದರಿಯನ್ನು ಆಕೆಯ ಪ್ರೀತಿಪಾತ್ರನಾದ ನಿನಗೆ ಈಶ್ವರ ಕೃಪೆಯಿಂದ ಒಪ್ಪಿಸಿ, ಇಂದು ನಾನು ಕೃತಕೃತ್ಯನಾಗಿದ್ದೇನೆ. ಈಗಿನ ಕಠಿಣ ಕಾಲದಲ್ಲಿ ದೇವರಂತು ಗುಪ್ತವಾಗಿ ಹೋಗಿದ್ದಾನೆ, ಸಜ್ಜನರೂ ಗುಪ್ತವಾಗುವ ಪ್ರಸಂಗವು ಬಂದಿತು. ಅಂದಬಳಿಕ ದಿನದಿನಕ್ಕೆ ಜನರ ದುಃಖಗಳು ಹೆಚ್ಚುತ್ತ ಹೋಗುವುದರಲ್ಲಿ ಆಶ್ಚರ್ಯವೇನು? ನಾನು ಈಗ ಪ್ರತಾಪದುರ್ಗಕ್ಕೆ ಬರುವುದಿಲ್ಲ. ನೀನೂ ಆಗ್ರಹ ಮಾಡಬೇಡ. ಪ್ರಸಂಗವಿಶೇಷದಲ್ಲಿ ಯಾವದಾದರೂ ರೂಪದಿಂದ ನಿನಗೂ ಮೋಹಿನಿಗೂ ನನ್ನಿಂದ ಸಹಾಯವಾಗದೆ ಇರಲಿಕ್ಕಿಲ್ಲ. ಇಂದಿನಿಂದ ಹತ್ತನೆಯ ದಿನ ನಿನ್ನ ಮನಸ್ಸು ಸ್ವಸ್ಥವಿದ್ದರೆ, ಮೋಹನಿಯನ್ನು ಮದುವೆಯಾಗು. ರಾಜವಂಶವು ನಿನ್ನಿಂದ ರಕ್ಷಿಸಲ್ಪಟ್ಟರೂ, ಪ್ರಕೃತದ ರಾಜನಿಗೂ–ಆತನ ಪರಿವಾರಕ್ಕೂ ಕ್ಷೇಮವಾಗುವ ಲಕ್ಷ ತೋರುವುದಿಲ್ಲ. ನೀನಾದರೂ ಮೋಹಿನಿಯೊಡನೆ ಬಹಳ ಸಂಕಟಗಳನ್ನು ಅನುಭವಿಸಬೇಕಾಗುವುದು. ''ವಿಪದಿಧೈರ್ಯಂ'' ಎಂಬ ಉಕ್ತಿಯಂತೆ ಎಂಥ ಸಂಕಟದಲ್ಲಿ

ಯಾದರೂ ಧೈರ್ಯವನ್ನು ಬಿಡಬೇಡ. ಕಡೆಗೆ ಶ್ರೀ ಪಂಪಾಪತಿಯ ಕೃಪೆಯಿಂದ ನೀನು ಜಯವನ್ನು ಪಡೆದು ಕೀರ್ತಿಶಾಲಿಯಾಗುತ್ತೀ.

ಈ ಮೇರೆಗೆ ನುಡಿದು ಆ ಋಷಿಸದೃಶನಾದ ಬ್ರಾಹ್ಮಣನು ಡೇರೆಯಿಂದ ಹೊರಬಿದ್ದನು. ಕೂಡಲೆ ಮೋಹಿನಿಯೂ, ಎಚ್ಚಮನಾಯಕನೂ ಆತನನ್ನು ಹಿಂಬಾಲಿಸಿ ಹೋದರು. ಬ್ರಾಹ್ಮಣನು ಅವರನ್ನು ಆಗ್ರಹದಿಂದ ನಿಲ್ಲಿಸಿ, ವಿನಯದಿಂದ ನಮಿಸುವ ಆ ತರುಣರ ತಲೆಯಮೇಲೆ ವರದ ಹಸ್ತವನ್ನಿಟ್ಟನು. ದುಃಖದಿಂದ ಕುತ್ತಿಗೆಯ ನರಗಳು ಬಿಗಿದಿರಲು, ನೀರು ತುಂಬಿದ ಕಣ್ಣುಗಳಿಂದ ತನ್ನನ್ನು ಅಂತಃಕರಣಪೂರ್ವಕವಾಗಿ ನೋಡುತ್ತ, ಚರಣಕ್ಕೆ ತನ್ನ ಕೈಯೊಳಗಿನ ಕುಮುದ ಪುಷ್ಪವನ್ನು ಭಕ್ತಿಯಿಂದ ಅರ್ಪಿಸುವ ಮೋಹಿನಿಯನ್ನು ಋಷಿಯು ತಬ್ಬಿಕೊಂಡು ತಂಗೀ, ಚಂಪಾ, ಕಣ್ಣೀರು ಸುರಿಸಬೇಡಮ್ಮಾ. ನಿನ್ನ ನಿರ್ಮಲಾಂತಃಕರಣಕ್ಕೂ, ಭಕ್ತಿ ವಿಶ್ವಾಸಗಳಿಗೂ ನಾನು ಪ್ರಸನ್ನನಾಗಿದ್ದೇನೆ. ನನ್ನ ಮನಸ್ಸಿನ ಪ್ರಸನ್ನತೆಗೆ ನೀನು ಭಕ್ತಿಯಿಂದ ಅರ್ಪಿಸಿದ ಕುಮುದ ಪುಷ್ಪವು ಕಾರಣವಾದ್ದರಿಂದ ನಿನ್ನನ್ನು ನಾನು ಇಂದಿನಿಂದ ಕುಮುದಿನಿ ಯೆಂತಲೇ ಕರೆಯುವೆನು. ಕುಮುದಿನೀಕಾಂತನಂತೆ ಮನೋಹರಕಾರನಾದ ನಾಯಕನ ಹೆಂಡತಿಗೆ ಕುಮುದಿನಿಯೆಂಬ ಹೆಸರು ಒಪ್ಪುವುದಿಲ್ಲವೇ? ಮೋಹಿನಿಯೆಂಬ ಹೆಸರಿನಿಂದ ನಿನ್ನ ಸದ್ಗುಣಗಳ ಗೌರವವು ಕಡಿಮೆಯಾಗುವುದರಿಂದಲೂ, ಚಂಪೆಯೆಂಬ ಹೆಸರು ಕಳ್ಳತನದಿಂದ ಇಟ್ಟಿದ್ದಾದ್ದರಿಂದಲೂ ನಿನಗೆ ನಾನು ಕುಮುದಿನಿಯೆಂಬ ಹೆಸರನ್ನು ಅಂತಃಕರಣಪೂರ್ವಕವಾಗಿ ಈಗ ಇಡುತ್ತೇನೆ. ಹೆಸರು ಬೇರೆಯಾದಂತೆ ನನ್ನ ಅನುಗ್ರಹದಿಂದ ನಿನ್ನ ಸ್ಥಿತಿಯೂ ಬೇರೆಯಾಗುವುದು. ರೋಹಿಣಿಯು ಚಂದ್ರನನ್ನು ಅನುಸರಿಸುವಂತೆ, ನೀನು ಯಾವಾಗಲೂ ಪತಿಯನ್ನನುಸರಿಸಲಿಕ್ಕೆ ಸಮರ್ಥಳಾಗಿ, ಪತಿಯು ಕೈಕೊಂಡ ಕಠಿಣ ಕಾರ್ಯದಲ್ಲಿ ಧುರಂಧರ ಸಹಾಯಕಳೆಂಬ ಕೀರ್ತಿಯನ್ನು ಪಡೆಯುವೆ. ಇದು ನನ್ನ ಪೂರ್ಣಾಶೀರ್ವಾದವು. ಅಂಥ ನೀಗಲಾರದ ಸಂಕಟವು ಒದಗಿದರೆ, ನನ್ನನ್ನು ಸ್ಮರಿಸು. ಎಲೈ ತರುಣವೀರಾ, ಎಚ್ಚಮನಾಯಕಾ, ಹಿಡಿ ನಿನ್ನ ಫಲಮಂತ್ರಾಕ್ಷತೆಯ ಗಂಟನ್ನು. ಕಳೆದುಹೋಗಿದ್ದ ಈ ನಿನ್ನ ಫಲಮಂತ್ರಾಕ್ಷತೆಯ ಗಂಟಿನ ಸಂಗಡ, ಕಳೆದುಹೋಗಿದ್ದ ಈ ಸುಂದರಿಯನ್ನೂ ನಿನಗೆ ಅರ್ಪಿಸುತ್ತೇನೆ. ಈಕೆಯನ್ನು ಜಾಗ್ರತೆಯಿಂದ ರಕ್ಷಿಸಿ ವಿವೇಕದಿಂದ ನಡೆಸಿಕೋ, ಎಂದು ನುಡಿದು ಫಲಮಂತ್ರಾಕ್ಷತೆಯನ್ನು ಕೊಟ್ಟು ಮೋಹಿನಿಯನ್ನು ಒಪ್ಪಿಸಿ ಬ್ರಾಹ್ಮಣನು ಮುಂದಕ್ಕೆ ಸಾಗಿದವನು ಸಾಗಿಬಿಟ್ಟನು. ತಿರುಗಿ ಯಾರ ಕಣ್ಣಿಗೂ ಬೀಳಲಿಲ್ಲ.

ಎಚ್ಚಮನಾಯಕನ ತಂದೆಯಂತೆ ನರಸಿಂಗನಾಯಕನಾದರೂ ವಿಜಯನಗರದ ರಾಯರವಂಶದ ಏಕನಿಷ್ಠ ಭಕ್ತನಾಗಿದ್ದನು. ಅವರಿಬ್ಬರಲ್ಲಿ ಅಕೃತ್ರಿಮ ಪ್ರೇಮವು ವಾಸಿಸುತ್ತಿತ್ತು. ಅವರಿಬ್ಬರು ಬಂಧುಗಳಂತೆ ನಡಕೊಳ್ಳುತ್ತಿದ್ದರು. ನರಸಿಂಗನಾಯಕನಿಗೆ ಮೋಹಿನಿಯೊಬ್ಬಳೇ ಮಗಳಾದ್ದರಿಂದ ಗಂಡು ಮಗನೆಂದರೂ ಆಕೆಯೇ, ಹೆಣ್ಣು ಮಗಳೆಂದರೂ ಆಕೆಯೇ ಎಂದು ತಿಳಿದು ಆತನು ಮಗಳನ್ನು ಬಹಳ ಪ್ರೀತಿಯಿಂದ ಸಲಹುತ್ತಿದ್ದನು. ತನ್ನ ಮೋಹಿನಿಗೆ ಎಚ್ಚಮನಾಯಕನೇ ತಕ್ಕವರನೆಂದು ನರಸಿಂಗನಾಯಕನು ಮೊದಲಿನಿಂದ ಭಾವಿಸಿದ್ದನು.

ಚಿಕ್ಕಂದಿನಿಂದಲೇ ಪರಸ್ಪರರಲ್ಲಿ ಪ್ರೇಮವು ಹೆಚ್ಚಲೆಂದು ತಿಳಿದು ನರಸಿಂಗನಾಯಕನು ಎಚ್ಚಮನಾಯಕನನ್ನು ಮೇಲಿಂದ ಮೇಲೆ ಕಾಂಚನಗಡಕ್ಕೆ ಕರೆಸಿಕೊಳ್ಳುತ್ತಿದ್ದನು. ಮೋಹಿನಿಯಾದರೂ ವಿಶೇಷ ಪ್ರಸಂಗದಲ್ಲಿ ಪ್ರತಾಪಗಡಕ್ಕೆ ಬಂದು ತಿಂಗಳೊಪ್ಪತ್ತು ಇರುತ್ತಿದ್ದಳು. ಹೀಗಾಗಿ ಮೋಹಿನಿಯೂ, ಎಚ್ಚಮನಾಯಕನೂ ಪರಸ್ಪರರಲ್ಲಿ ಅಕೃತ್ರಿಮ ಪ್ರೇಮವುಳ್ಳವರಾಗಿ ಒಬ್ಬ ಸಂಗಡರೊಬ್ಬರು ಸಲಿಗೆಯಿಂದ ನಡೆಯುತ್ತಿದ್ದರು. ಕಳೆದ ನಾಲ್ಕು ವರ್ಷಗಳಿಂದ ಅವರ ಭೆಟ್ಟಿಯಾಗಿದ್ದಿಲ್ಲೆಂದು ಹೇಳಬಹುದು. ಮೋಹಿನಿಯು ಮುಸಲ್ಮಾನರ ಕೈಸೇರಿ ಆತ್ಮಘಾತ ಮಾಡಿಕೊಂಡಳೆಂಬ ಸುದ್ದಿಯನ್ನು ಕೇಳಿ ಎಚ್ಚಮನಾಯಕನು ಆಕೆಯನ್ನು ಮರೆತುಬಿಟ್ಟಂತಾಗಿತ್ತು. ತನ್ನ ಪ್ರೀತಿಪಾತ್ರನಾದ ಎಚ್ಚಮನಾಯಕನು ತನ್ನ ಪಾಣಿಗ್ರಹಣ ಮಾಡುವನೋ ಇಲ್ಲವೋ ಎಂಬ ಅಪನಂಬಿಗೆಯಿಂದ ಮೋಹಿನಿಯು ಯಾವಾಗಲೂ ಚಿಂತಿಸುತ್ತಿದ್ದಳು. ಈ ಸ್ಥಿತಿಯಲ್ಲಿ ಅತ್ಯಂತ ನಿಸ್ಪೃಹನಾದ ಒಬ್ಬ ತಪಸ್ವಿದ್ದ ಬ್ರಾಹ್ಮಣನು, ಪ್ರಾಯಸ್ಥಳಾದ ಮೋಹಿನಿಯನ್ನು ತರುಣನಾದ ಎಚ್ಚಮನಾಯಕನ ಬಳಿಯಲ್ಲಿ ತಟ್ಟನೆ ಬಿಟ್ಟುಹೋದದ್ದರಿಂದ, ಆ ಇಬ್ಬರು ತರುಣರ ಮನಸ್ಸಿನ ಸ್ಥಿತಿಗಳು ವಿಚಿತ್ರವಾದವು. ಅಗಲಿಹೋಗಿದ್ದ ಪ್ರಿಯಜನರ ಸಮಾಗಮವು ಆಕಸ್ಮಿಕವಾಗಿ ಆದದ್ದರಿಂದುಂಟಾಗುವ ಆನಂದ, ತುಂಬಿದ ತಾರುಣ್ಯದಲ್ಲಿ ಪತಿಪತ್ನೀಭಾವದ ಸ್ತ್ರೀಪುರುಷರು ಏಕಾಂತದಲ್ಲಿ ಕೂಡಿದಾಗ ಹುಟ್ಟುವ ಸಂಕೋಚಭಾವ, ಮುಂದೊದಗ ಬಹುದಾಗಿದ್ದ ಕಷ್ಟದ ಶ್ರವಣದಿಂದುಂಟಾಗುವ ಅಸಮಾಧಾನ ಇವು ಮೂರು ಆ ತರುಣರಲ್ಲಿ ಒಮ್ಮೆಲೆ ಉತ್ಪನ್ನವಾಗಿ, ಅವರು ಏನೇನೋ ಯೋಚಿಸುತ್ತ ಸುಮ್ಮನೆ ನಿಂತಲ್ಲಿ ನಿಂತುಬಿಟ್ಟರು. ಒಬ್ಬರ ಮುಖದಿಂದಲೂ ಮಾತುಗಳು ಹೊರಡದಾದವು. ಒಬ್ಬರೂ ತಾವು ನಿಂತ ಸ್ಥಳಬಿಟ್ಟು ಕದಲದಾದರು. ಇದನ್ನೆಲ್ಲ ನೋಡಿ ದ್ವಾರಪಾಲಕನು ಬೆರಗಾಗಿ ಒತ್ತಟ್ಟಿಗೆ ನಿಂತುಕೊಂಡಿದ್ದನು. ಊಟದ ಸಮಯವಾಯಿತೆಂದು ಸೂಚಿಸುವದಕ್ಕಾಗಿ ಬಂದಿದ್ದ ಮತ್ತೊಬ್ಬ ಸೇವಕನು ಬೇರೊತ್ತಟ್ಟಿಗೆ ನಿಂತುಕೊಂಡಿದ್ದನು. ಉಳಿದ ದಂಡಾಳುಗಳು ಊಟವಾದದ್ದರಿಂದ ಅವರು ಹಾಡು ಬಾರಿಸುವುದರಲ್ಲಿಯೂ ಹರಟೆ ಕೊಚ್ಚುವುದರಲ್ಲಿಯೂ ಮಗ್ನರಾಗಿದ್ದರು. ಸ್ವಲ್ಪ ಹೊತ್ತು ನಿಂತಮೇಲೆ ಎಚ್ಚಮನಾಯಕನೇ ಮೋಹಿನಿಯನ್ನು ಕುರಿತು–ಮೋಹಿನೀ, ಒಳಗೆ ನಡೆ; ಪ್ರೇಮದಿಂದ ಉಪಚರಿಸಿ ನಮ್ಮ ಯೋಗಕ್ಷೇಮವನ್ನು ಮೇಲೆ ಬಿದ್ದು ನೋಡುವ ಹಿರಿಯರು ದುರ್ದೈವದಿಂದ ಇಲ್ಲದಂತಾಗಲು, ನಮ್ಮ ಯೋಗಕ್ಷೇಮವನ್ನು ನಾವೇ ನೋಡಿಕೊಳ್ಳ ಬೇಕಾಗುವುದು; ನಮ್ಮ ಉಪಚಾರವನ್ನು ನಾವೇ ಮಾಡಿಕೊಳ್ಳಬೇಕಾಗುವುದು! ಮೋಹಿನಿ, ಹಿರಿಯರು ಹೋದದ್ದರಿಂದ ಆಯುಷ್ಯದ ಸವಿಯು ಹೋದಂತಾಯಿತು. ನಮ್ಮ ಚಿಕ್ಕಂದದ ಬಾಲ್ಯವು ಕ್ರಮಿಸಿಹೋಗಿ, ಆಘಾತಮಯವಾದ ಪ್ರಾಯವು ಬಂದೊದಗಿದೆ. ಇರಲಿ, ಹೆಚ್ಚಿನ ಮಾತುಗಳಿಗೆ ಇದು ಸಮಯವಲ್ಲ, ಮೊದಲು ಊಟಮಾಡೋಣ, ಎಂದು ನುಡಿದು, ಆತನು ಸುಮ್ಮನೆ ತಲೆಬಾಗಿ ನಿಂತುಕೊಂಡಿದ್ದ ಮೋಹಿನಿಯೊಡನೆ ಊಟಕ್ಕೆ ನಡೆದನು.

ನಾಯಕನ ಪರಿವಾರದಲ್ಲಿ ಹೆಂಗಸರ ಸುಳಿದಾಟವಿಲ್ಲದ್ದರಿಂದ ಮೋಹಿನಿಗೆ ಹಿಡಿದುಬಿಟ್ಟ ಹಾಗೆ ಆಯಿತು. ನರಸಿಂಗನಾಯಕನ ಮಗಳಾದ ಮೋಹಿನಿಯು ಆಕಸ್ಮಿಕ ಬಂದಳೆಂಬ ಸುದ್ದಿಯು ದ್ವಾರಪಾಲಕನ ಮುಖಾಂತರ ನಾಲ್ಕೂ ಕಡೆಗೆ ಹಬ್ಬಲು, ನಾಯಕನ ಮಿತ್ರರಾದ ಕೆಲವು

ನಂಬಿಗೆಯ ಸರದಾರರು ಕೌತುಕದಿಂದ ನಾಯಕನ ಡೇರೆಗೆ ಬಂದರು ನಾಯಕನು ಚಿಕ್ಕವನಾಗಿದ್ದರೂ ಸೈನಿಕರಲ್ಲಿ ಆತನ ದರ್ಪ ಬಹಳ. ಆ ಪ್ರತಾಪಿಯ ಎದುರಿಗೆ ಅಪ್ಪಣೆಯ ಹೊರತು ಒಂದು ತುಟಿ ಎರಡು ಮಾಡುವ ತ್ರಾಣವು ಸೈನಿಕರಿಗೆ ಇದ್ದಿಲ್ಲ. ಸಲಿಗೆಯ ಮಿತ್ರರು ಮಾತ್ರ ನಾಯಕನೊಡನೆ ರೀತಿಗೆ ಸರಿಯಾಗಿ ಮನಬಿಚ್ಚಿ ಮಾತಾಡಬಹುದಾಗಿತ್ತು. ಮಿತ್ರರು ಡೇರೆಗೆ ಬಂದಾಗ ನಾಯಕನು ಇನ್ನೂ ಊಟಮಾಡಿ ಬಂದಿದ್ದಿಲ್ಲ. ಅಲ್ಲಿ ಕೂಡಿದ ಮಿತ್ರಮಂಡಳಿ ಯಲ್ಲಿ ಎಷ್ಟೋ ಜನರು ಮೋಹಿನಿಯ ಪರಿಚಯದವರಿದ್ದರು. ಸ್ವಲ್ಪ ಹೊತ್ತಿನ ಮೇಲೆ ನಾಯಕನು ಊಟಮಾಡಿ ಡೇರೆಗೆ ಬಂದನು. ಮೋಹಿನಿಯೂ ಹಿಂದಿನಿಂದ ಬಂದಳು. ತನ್ನ ತರ್ಕದಂತೆ ಮಿತ್ರರು ಬಂದದ್ದನ್ನು ನೋಡಿ ನಾಯಕನು ಬಹು ಸಮಾಧಾನಪಟ್ಟನು. ಒಬ್ಬ ಮೋಹಿನಿಯ ದರ್ಶನದಿಂದ ಅಲ್ಲಿ ನೆರೆದಿದ್ದ ತರುಣಮಂಡಲಿಗೆ ಹಿಂದಿನ ಸಂಗತಿಗಳೆಲ್ಲ ಕಣ್ಣಿಗೆ ಕಟ್ಟಿದಂತಾದವು. ಮೋಹಿನಿಯ ಅನಾಥತ್ವಕ್ಕಾಗಿ ಎಲ್ಲರೂ ಮರುಗಿದರು. ಗುರುತಿನವರ ಭೆಟ್ಟಿಯಾಗಲು, ಮೋಹಿನಿಯ ಕಣ್ಣುಗಳೊಳಗಿಂದ ದುಃಖಾಶ್ರುಗಳ ಬಿಂದುಗಳು ಪಟಪಟನೆ ಉದುರಿದವು. ಎಚ್ಚಮನಾಯಕನು ಮಿತ್ರಮಂಡಲಿಯನ್ನು ಕುರಿತು–ಪ್ರಿಯಮಿತ್ರರೇ, ಸನ್ಮಾನನೀಯರಾದ ನರಸಿಂಗನಾಯಕನು ಮರಣಹೊಂದಿದ್ದರಿಂದ ವಿಜಯನಗರದ ರಾಯರ ಪಕ್ಷವು ಬಹು ಮಟ್ಟಿಗೆ ದುರ್ಬಲವಾದಂತಾಗಿದೆ. ಆ ನಮ್ಮ ನಾಯಕರ ಮಗಳಾದ ಮೋಹಿನಿಯನ್ನು ಒಬ್ಬ ಋಷಿಶ್ರೇಷ್ಠನು ಇದೇ ಈಗ ನನಗೆ ಒಪ್ಪಿಸಿ ಹೋದನು. ನಾಯಕರ ಮರಣದಿಂದ ಈವೊತ್ತಿನ ವರೆಗೆ ಎರಡು ವರ್ಷ ಮೋಹಿನಿಯ ಸಂರಕ್ಷಣವನ್ನು ಆ ಋಷೀಶ್ವರನೇ ಬಹು ಕಷ್ಟದಿಂದ ಮಾಡಿದನಂತೆ. ಮೋಹಿನಿಯು ನನಗೆ ಅಪರಿಚಿತಳಲ್ಲ, ನಿಮ್ಮಲ್ಲಿಯೂ ಬಹುಜನರಿಗೆ ಆಕೆಯ ಪರಿಚಯವುಂಟು. ಈ ಲೋಕಸುಂದರಿಯನ್ನು ನನಗೇ ಕೊಡಬೇಕೆಂದು ಆಕೆಯ ತಂದೆಯು ನಿಶ್ಚಯಿಸಿದ್ದನು. ನೀವೂ ಬಲ್ಲಿರಿ. ಇಂದಿನಿಂದ ಹತ್ತನೆಯ ದಿವಸ ನನ್ನ ಮನಸ್ಸು ಸಮಾಧಾನ ದಿಂದಿದ್ದರೆ, ಮೋಹಿನಿಯನ್ನು ಮದುವೆಯಾಗೆಂದು ಋಷಿವರ್ಯನು ಆಜ್ಞಾಪಿಸಿದ್ದಾನೆ. ನಾವು ಬೇಗನೆ ಚಂದ್ರಗಿರಿಗೆ ಹೋಗದಿದ್ದರೆ, ವೈರಿಗಳು ಒಳಸಂಚು ಮಾಡಿ ನಮ್ಮ ದೊರೆಗೆ ಕೇಡು ಬಗೆಯದೆ ಇರರೆಂಬ ವಿಚಾರವು ನನ್ನನ್ನು ಬಾಧಿಸಹತ್ತಿದೆ. ನಮ್ಮ ಸ್ವಾಮಿಯ ವಂಶವನ್ನು ರಕ್ಷಿಸುವಾಗ ನಾವು ಹಲವು ಕಷ್ಟಗಳನ್ನು ಭೋಗಿಸಬೇಕಾಗುವದೆಂದು ಋಷೀಶ್ವರರು ಭವಿಷ್ಯವನ್ನು ಹೇಳಿರುವರು. ಪ್ರಕೃತದ ಸ್ವಾಮಿಗೂ, ಆತನ ವಂಶಕ್ಕೂ ಕ್ಷೇಮವಾಗದೆಂತಲೂ ಆ ಮಹಾತ್ಮರು ಸೂಚಿಸಿರುವರು. ಬ್ರಹ್ಮಜ್ಞಾನಿಗಳ ಮಾತಿನಲ್ಲಿ ಅಸತ್ಯವನ್ನು ಕಲ್ಪಿಸಲಾಗುವುದಿಲ್ಲ, ಪ್ರಿಯಮಿತ್ರರೇ, ಮುಂದೆ ಯಾವ ಯಾವ ಸಂಕಟಗಳು ಬರುವವೋ ಯಾರಿಗೆ ಗೊತ್ತು! ನನ್ನ ವಿಜ್ಞಾಪನೆಯಂತೆ ಋಷಿವರ್ಯರು ಪ್ರತಾಪದುರ್ಗಕ್ಕೆ ಬಾರದೆ, ನಿಂತಕಾಲಲ್ಲಿ ಹಾಗೇ ಹೋದದ್ದು ಒಳ್ಳೆಯ ಲಕ್ಷಣವಲ್ಲ! ಆಗಲಿ, ನಿಮ್ಮಂಥ ನರವೀರರ ಸಹಾಯವಿರಲು, ಹೆದರುವುದೇಕೆ? ಸ್ವಾಮಿಕಾರ್ಯಕ್ಕಾಗಿ ದೇಹವನ್ನು ಅರ್ಪಿಸಿದವರಿಗೆ, ಆ ಕಾರ್ಯ ನಿರ್ವಾಹದಲ್ಲಿ ದೇಹವು ಅಳಿದರೇನು, ಉಳಿದರೇನು? ''ನಮ್ಮಿಂದ ಸ್ವಾಮಿಯ ವಂಶವು ರಕ್ಷಿಸಲ್ಪಡುವದೆ''ಂದು ಆ ಮಹಾತ್ಮರು ನುಡಿದ ವಾಕ್ಯವನ್ನೇ ಮಹಾ ಮಂತ್ರವಾಗಿಟ್ಟುಕೊಂಡು, ನಾವೆಲ್ಲರು ಸ್ವಾಮಿಕಾರ್ಯಕ್ಕಾಗಿ ಇನ್ನು ಟೊಂಕ ಕಟ್ಟೋಣ!

# ಆಪ್ತಾಲೋಚನೆ

ಎಚ್ಚಮನಾಯಕನು ಪ್ರತಾಪದುರ್ಗಕ್ಕೆ ಬಂದು ಹತ್ತು ದಿವಸಗಳಾದವು. ಋಷಿಯ ಅಪ್ಪಣೆಯಂತೆ ಆ ದಿನ ಆತನ ವಿವಾಹವು ಮೋಹಿನಿಯೊಡನೆ ವಿಜೃಂಭಣೆಯಿಂದ ಆಯಿತು. ನಾಯಕನ ಚಿತ್ತವೆಲ್ಲ ಚಂದ್ರಗಿರಿಯಲ್ಲಿದ್ದರೂ, ವಿವಾಹ ಸಮಾರಂಭದಲ್ಲಿ ಯಾವ ಕೊರತೆಯೂ ಆಗಲಿಲ್ಲ. ಋಷಿಯ ಮುಖದಿಂದ ಹೊರಟಂತೆ ನಾಯಕನು ಮೋಹಿನಿಗೆ ಕುಮುದಿನಿಯೆಂಬ ಹೆಸರನ್ನಿಟ್ಟನು. ವಿವಾಹಿತರಾದ ನವದಂಪತಿಗಳು ರತಿ–ಮನ್ಮಥರಂತೆ ಜನಮನೋಹರರಾಗಿ ಒಪ್ಪಿದರು. ಚಂದ್ರಗಿರಿಗೆ ಹೋಗುವ ಅವಸರವಿದ್ದದ್ದರಿಂದ ವಿವಾಹಸಮಾರಂಭವು ಒಂದೇ ದಿವಸದಲ್ಲಿ ಮುಗಿಯಬೇಕಾಗಿತ್ತು ಸಮಾರಂಭಗಳ ಗಲಿಬಿಲಿಯಲ್ಲಿ ಹೊತ್ತು ಹೋದದ್ದು ಜನರಿಗೆ ಗೊತ್ತಾಗಲಿಲ್ಲ. ಆ ದಿನ ಚೈತ್ರವದ್ಯ ಪ್ರತಿಪದೆಯಾಗಿತ್ತು ಸೂರ್ಯನು ಮುಳುಗಿದ ಸ್ವಲ್ಪ ವೇಳೆಯಲ್ಲಿಯೇ ಚಂದ್ರೋದಯವಾಯಿತು. ಮೃಷ್ಟಾನ್ನಭೋಜನದಿಂದ ಜನರು ಸಂತುಷ್ಟರಾಗಿ ಕೆಲವರು ಬೆಳುದಿಂಗಳಲ್ಲಿ ಆನಂದದಿಂದ ಹರಟುತ್ತ ಕುಳಿತಿದ್ದರು; ಕೆಲವರು ನಾಟು–ರಂಗು ನೋಡುವುದರಲ್ಲಿ ಮಗ್ನರಾಗಿದ್ದರು, ಕೆಲವರು ಮದ್ದು ಹಾರಿಸುವಲ್ಲಿಗೆ ಹೋಗಿದ್ದರು ಅಂತರ್ಗೃಹದೊಳಗಿನ ಜನರು, ನೂತನ ದಂಪತಿಗಳ ಶಯನಗೃಹಪ್ರವೇಶದ ಸಿದ್ಧತೆಯಲ್ಲಿ ತೊಡಗಿದ್ದರು. ಅಷ್ಟರಲ್ಲಿ ಇಬ್ಬರು ಕುದುರೆಯ ಸವಾರರು ಕುದುರೆಗಳನ್ನೋಡಿಸುತ್ತ ದುರ್ಗವನ್ನು ಪ್ರವೇಶಿಸಿದರು. ಅವರು ವಿಶ್ರಾಂತಿಯಿಲ್ಲದೆ ಬಂದದ್ದರಿಂದ ದಣಿದು ಹೆಣವಾಗಿದ್ದರು. ಕುದುರೆಗಳ ಮೈಯೊಳಗಿಂದ ಬೆವರುಹನಿಗಳು ತಟಗಿಕ್ಕುತ್ತಿದ್ದವು. ಜನರಿಂದ ತುಂಬಿತುಳುಕುವ ಬೀದಿಗಳಲ್ಲಿ ಜನರಿಗೆ ಅಪಾಯವಾದೀತೆಂಬ ಲಕ್ಷವಿಲ್ಲದೆ ಕುದುರೆಗಳನ್ನೋಡಿಸುತ್ತ ಈ ಸವಾರರು ಎಲ್ಲಿಗೆ ಹೋಗುತ್ತಾರೆಂದು ಜನರು ಕೌತುಕದಿಂದ ನೋಡುತ್ತಿದ್ದರು. ಕುದುರೆಗಳು ನೆಟ್ಟಗೆ ಅರಮನೆಯ ಬಾಗಿಲಿಗೆ ಹೋದವು. ಚಂದ್ರಗಿರಿಯಿಂದ ಸವಾರರು ಧಾವಿಸುತ್ತ ಬಂದಿರುತ್ತಾರೆಂಬ ಸುದ್ದಿಯು ಅರಮನೆಯಲ್ಲಿ ಹೋಗುವದರೊಳಗಾಗಿ ಪಟ್ಟಣದಲ್ಲೆಲ್ಲ ಹಬ್ಬಿತು. ಸವಾರರು ಕುದುರೆಯನ್ನಿಳಿದು ಅರಮನೆಯನ್ನು ಪ್ರವೇಶಿಸಿ ವಿವಾಹ ಸಮಾರಂಭವು ನಡೆದಲ್ಲಿಗೆ ಹೋದರು. ಅಲ್ಲಿ ನವದಂಪತಿ ಗಳ ಊರಟಣೆಯು ನಡೆದಿತ್ತು, ಸವಾರರ ನಿರ್ಧಾರದ ಸೂಚನೆಯಂತೆ ದ್ವಾರರಕ್ಷಕರು ನಾಯಕನ ಬಳಿಗೆ ಹೋಗಿ "ಚಂದ್ರಗಿರಿಯಿಂದ ಸವಾರರು ಧಾವಿಸಿ ಬಂದಿರುವರೆಂ"ಬ ವರ್ತಮಾನವನ್ನು ಭಿನ್ನಯಿಸಿದರು; ಅದನ್ನು ಕೇಳಿ ನಾಯಕನ ಎದೆಯೊಡೆದು ನೀರಾಯಿತು. ಸ್ವಾಮಿಯಾದ ಚಿಕ್ಕರಾಯನು ನಾಯಕನ ಲಗ್ನ ಸಮಾರಂಭಕ್ಕಾಗಿ ಬಹುಮಾನದಿಂದ ಉಡುಗರೆಗಳನ್ನು ಕೊಟ್ಟು ನಿನ್ನೆಯೇ ಮುದ್ದುರಂಗನೆಂಬ ಸರದಾರನನ್ನು ಅಲ್ಪ ಸೈನ್ಯದೊಡನೆ ಪ್ರತಾಪದುರ್ಗಕ್ಕೆ ಕಳಿಸಿದ್ದನು. ಆದ್ದರಿಂದ ಈದಿನ ಸಂಜೆಗೇ ಚಂದ್ರಗಿರಿ ಯಿಂದ ಮತ್ತೆ ಕುದುರೆಯ ಸವಾರರು ಧಾವಿಸುತ್ತ ಬಂದದ್ದು ನಾಯಕನ ಅಸಮಾಧಾನ ಕಾರಣ ವಾಯಿತು. ಸವಾರರ ಮುಖವನ್ನು ನೋಡಿದ ಕೂಡಲೆ ನಾಯಕನ ಚಿಂತೆಯು ಹೆಚ್ಚಿತು. ತಾನು ಯಾವ ಕೆಟ್ಟ ಸುದ್ದಿಯನ್ನು ಕೇಳುವೆನೋ, ಎಂದು ಆತನು ಬೆದರಿರಲು, ಸವಾರರು ಆತನಿಗೆ

ಸಾಷ್ಟಾಂಗವಾಗಿ ವಂದಿಸಿ ಕಣ್ಣೀರು ಸುರಿಸುತ್ತ ನಿಂತುಕೊಂಡರು. ಮಾರ್ಗಾಯಾಸದಿಂದಲೂ, ಕೆಟ್ಟ ಸುದ್ದಿಯನ್ನು ಹೇಳುವ ಪ್ರಸಂಗವು ಒದಗಿದ ದುಃಖದಿಂದಲೂ ಹಣ್ಣಾಗಿದ್ದ ಆ ಸವಾರರ ಬಾಯಿಂದ ಅಕ್ಷರಗಳೇ ಹೊರಡಲೊಲ್ಲವು. ಆಗ ನಾಯಕನು ಸೌಮ್ಯಸ್ವರದಿಂದ–ತಿರುಮಲರಾಯಾ, ಹೀಗೆ ಕಣ್ಣೀರು ಸುರಿಸುತ್ತ ನಿಂತುಕೊಳ್ಳುವುದರಿಂದ ಆಗುವುದೇನು? ದುಷ್ಟ ಜಗರಾಯನು ನಮ್ಮ ದೊರೆಗೆ ಏನು ಅಪಾಯ ಮಾಡಿದನೆಂಬುದನ್ನು ಬೇಗನೆ ಹೇಳು. ಸ್ತ್ರೀ ಮೋಹಕ್ಕೆ ಒಳಗಾಗಿ ಸ್ವಾಮಿಗೆ ಕೇಡನ್ನುಂಟುಮಾಡಿದ ಚಂಚಲ ಸ್ವಭಾವದ ಈ ನೀಚ ಎಚ್ಚಮನಾಯಕನು ಅದನ್ನು ಕೇಳಲು ಸಿದ್ಧನಿದ್ದಾನೆ!

ನಾಯಕನ ಈ ಮಾತುಗಳನ್ನು ಕೇಳಿ ತಿರುಮಲರಾಯನು–ದೊರೆಗಳೇ, ತಾವು ಚಂದ್ರಗಿರಿಯಿಂದ ಹೊರಟ ಮರುದಿವಸವೇ ಜಗರಾಯನ ಸುಳಿದಾಟಕ್ಕೆ ಆರಂಭವಾಯಿತು. ತಾವು ಇರುವಾಗಲೇ ಆತನ ಒಳಸಂಚುಗಳು ನಡೆದಿದ್ದವೆಂದು ಹೇಳಬೇಕಾಗುತ್ತದೆ; ಯಾಕಂದರೆ ಮುಖ್ಯ ಮಂತ್ರಿಯಾದ ನರಸರಾಜನೂ, ಸೇನಾಪತಿಯಾದ ಅರುಣಾಚಲನೂ ಒಮ್ಮೆಲೆ ಆತನ ಪಕ್ಷವನ್ನು ವಹಿಸಿದರು. ದೊರೆಗಳ ಪಕ್ಷದವರೆಂದು ತಿಳಿಯಲ್ಪಟ್ಟಿದ್ದ ಕೆಲವು ಸರದಾರರು ಜಗರಾಯನ ಪಕ್ಷವನ್ನು ಸ್ವೀಕರಿಸಿ, ಆತನ ದಂಡಿನವರಿಗೆ ಆಸ್ಪದ ಕೊಡಹತ್ತಿದರು. ಇದರಿಂದ ಜಗರಾಯನ ಕಡೆಯ ಬಹುಜನರು ರಾಜಧಾನಿಯ ಆಯಕಟ್ಟಿನ ಸ್ಥಳದಲ್ಲಿ ಇರಹತ್ತಿದರು. ಪಟ್ಟಣದ ಹೊರಗಂತು ಜಗರಾಯನ ಪುಂಡಾಟಿಕೆಗೆ ನೆಲೆಯಿಲ್ಲದಾಯಿತು. ಬಹಳ ಹೇಳುವುದೇನು, ಚಂದ್ರಗಿರಿಯಿಂದ ಹೊರಗೆ ಹೋಗುವ, ಹಾಗು ಚಂದ್ರಗಿರಿಗೆ ಬರುವ, ರಾಜ ಪಕ್ಷದ ಜನರನ್ನು ಜಗರಾಜನ ಪಕ್ಷದವರು ಶೋಧಿಸಿ ದೊರೆತ ಕಾಗದಪತ್ರಗಳನ್ನು ತಕ್ಕೊಂಡು ಪ್ರಸಂಗಬಂದರೆ ಆ ಜನರನ್ನು ತುಂಡರಿಸಿ ಚೆಲ್ಲುತ್ತಿದ್ದರು. ಈ ಸಂಗತಿಗಳು ದೊರೆಗಳ ಕಿವಿಗೆ ಮುಟ್ಟಲು, ನೀವು ಹೋದ ಮೂರು ದಿನಗಳ ಮೇಲೆ ದೊರೆಗಳು ದರ್ಬಾರ ನೆರೆಸಿ ಎಲ್ಲ ಸರದಾರರ, ಹಾಗು ಮಂತ್ರಿ ಮಂಡಲದ ಸಮಕ್ಷ ಈ ಪ್ರಸಕ್ತಿಯನ್ನು ತೆಗೆದರು. ದೊರೆಗಳು ತಮ್ಮ ಸೌಜನ್ಯಕ್ಕನುಸರಿಸಿ ದರ್ಬಾರದಲ್ಲಿ ನುಡಿದದ್ದೇನೆಂದರೆ–ಪ್ರಿಯಮಿತ್ರರೇ, ಅನರ್ಥಮೂಲವಾದ ದೊರೆತನವನ್ನು ಒಲ್ಲೆನೆಂದು ನಾನು ಮೊದಲಿಗೇ ವೆಂಕಟದೊರೆಗಳಿಗೆ ಹೇಳಿಕೊಂಡೆನು; ಆದರೆ ಅವರು ಆಗ್ರಹದಿಂದ ಅದನ್ನು ನನ್ನ ಕೊರಳಿಗೆ ಕಟ್ಟಿದರು. ನೀವೆಲ್ಲರು ದೊರೆಗಳ ಮಾತು ನಡೆಸಬೇಕೆಂದು ಬಲವಂತ ಮಾಡಿದ್ದರಿಂದ ನಾನು ದೊರೆತನವನ್ನು ಸ್ವೀಕರಿಸಿರುತ್ತೇನೆ; ಆದ್ದರಿಂದ ಪ್ರಬಲರಾಗುತ್ತ ನಡೆದಿದ್ದ ರಾಜದ್ರೋಹಿಗಳ ಶಾಸನ ಮಾಡಲಿಕ್ಕೆ ನೀವೆಲ್ಲರೂ ಒಕ್ಕಟ್ಟಿನಿಂದ ನನಗೆ ಸಹಾಯ ಮಾಡಲಿಕ್ಕೆ ಬೇಕು. ಜಗರಾಯನ ವಕೀಲರು ಪ್ರಸಿದ್ಧ ರೀತಿಯಿಂದ ನಮ್ಮ ಪ್ರಮುಖರಾದ ಅಧಿಕಾರಿಗಳ ಕಡೆಗೆ ಬರುತ್ತಾರೆಂತಲೂ, ನಮ್ಮ ಪಕ್ಷದ ಎಷ್ಟೋ ಜನರು ಜಗರಾಯನನ್ನು ಕೂಡಿ ಆತನ ತಂತ್ರಗಳಿಗೆ ಸಹಾಯ ಮಾಡುತ್ತಾರೆಂತಲೂ ನಾವು ಕೇಳಿರುತ್ತೇವೆ. ರಾಜಧಾನಿಯಿಂದ ಹೋಗುವ, ಹಾಗು ರಾಜಧಾನಿಗೆ ಬರುವ ನಮ್ಮ ಜನರನ್ನು ಬಂಡುಗಾರರು ಶೋಧಿಸಿ, ಪ್ರಸಂಗ ಬಂದರೆ ಅವರನ್ನು ತುಂಡರಿಸಿ ಚೆಲ್ಲುವದೆಂದರೆ ದೊರೆತನಕ್ಕೆ ಎಂಥ ಅಪಮಾನವು! ಸದ್ಯಕ್ಕೆ ಚಂದ್ರಗಿರಿಯ ಅರಸೊತ್ತಿಗೆಯು ಸಿಂಹಾಸನವೇರಿದ ಅರಸನ ಕಡೆಗೆ

ಇರದೆ, ರಾಜಧಾನಿಯ ಹೊರಗೂ ಒಳಗೂ ಮನಬಂದಂತೆ ಪುಂಡತನವನ್ನು ನಡೆಸಿರುವ ಪುಂಡರಕಡೆಗೆ ಇದ್ದಂತಾಗಿದೆ. ಇದು ಹಿತಕರವಲ್ಲ. ಇಂಥ ಅರಾಜಕ ಸ್ಥಿತಿಯು ಉಂಟಾದ ಬಗ್ಗೆ ನಮ್ಮ ಮುಖ್ಯಮಂತ್ರಿಗಳಾದ ನರಸರಾಜನನ್ನೂ, ಸೇನಾಪತಿಗಳಾದ ಅರುಣಾಚಲರನ್ನೂ ಜವಾಬುದಾರರೆಂದು ತಿಳಿಯಬೇಕಾಗುತ್ತದೆ. ಈಗ ಕ್ಷಣವಾದರೂ ವಿಳಂಬಮಾಡದೆ, ರಾಜದ್ರೋಹಿಗಳ ಶಾಸನ ಮಾಡತಕ್ಕದ್ದು. ಈ ಕೆಲಸಕ್ಕೆ ಸಹಾಯ ಮಾಡದವರನ್ನು ರಾಜದ್ರೋಹಿಗಳೆಂತಲೇ ತಿಳಿಯಬೇಕಾಗುವುದು. ಕರುಳಿನಲ್ಲಿ ಕತ್ತರಿಯಾಡಿಸುವುದು ಪೌರುಷಕ್ಕೂ, ನಿಜವಾದ ಕ್ಷಾತ್ರಧರ್ಮಕ್ಕೂ ಒಪ್ಪುವುದಿಲ್ಲ. ಆದ್ದರಿಂದ ವೈರಿಗಳ ಪಕ್ಷವನ್ನು ಸ್ವೀಕರಿಸಿದವರು ಹಾಗೆ ಸ್ಪಷ್ಟವಾಗಿ ನುಡಿದು ದರ್ಬಾರದಿಂದ ಹೊರಟು ಹೋಗತಕ್ಕದ್ದು. ವಿಜಯನಗರದ ರಾಯರ ಸಿಂಹಾಸನದ ವಿಷಯವಾಗಿ ನಿಜವಾದ ನಿಷ್ಠೆಯುಳ್ಳವರು, ತಾವು ವೈರಿಗಳ ಶಾಸನ ಮಾಡಲು ಸಿದ್ಧರಿರುತ್ತೇವೆಂಬುದನ್ನು ತೋರಿಸುವುದಕ್ಕಾಗಿ ಈ ತಬಕದಲ್ಲಿರುವ ತಾಂಬೂಲಗಳನ್ನು ಸ್ವೀಕರಿಸತಕ್ಕದ್ದು.

ದೊರೆಗಳ ಈ ಮಾತುಗಳನ್ನು ಕೇಳಿ ನರಸರಾಜನೂ, ಅರುಣಾಚಲನೂ ಯಾವ ಮಾತನ್ನೂ ಆಡದೆ ಸುಮ್ಮನೆ ಕುಳಿತಿದ್ದರು. ಅವರು ದರ್ಬಾರದಿಂದ ಹೊರಟೂ ಹೋಗಲಿಲ್ಲ. ತಾಂಬೂಲ ವನ್ನೂ ಸ್ವೀಕರಿಸಲಿಲ್ಲ. ಇತ್ತ ರಾಜಪಕ್ಷದ ಎಷ್ಟೋ ಸರದಾರರು, ಆವೇಶದಿಂದ ಎದ್ದು ತಾಂಬೂಲಗಳನ್ನು ಸ್ವೀಕರಿಸಿ ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತುಕೊಂಡರು. ಎಲ್ಲರ ಸಂಗಡ ನಾನೂ ತಾಂಬೂಲವನ್ನು ಸ್ವೀಕರಿಸಿದೆನು. ಆಗ ತಾಂಬೂಲ ಸ್ವೀಕರಿಸಿದ ಸರದಾರರ ಸೈನ್ಯಗಳನ್ನು ಒಟ್ಟುಗೂಡಿಸಿದರೆ, ಒಟ್ಟು ಸಂಖ್ಯೆಯು ಮೂವತ್ತು ಸಾವಿರವನ್ನು ಮೀರಬಹುದಾಗಿತ್ತು. ದರ್ಬಾರವನ್ನು ಮುಗಿಸುವ ಸಂಧಿಯಲ್ಲಿ ನರಸರಾಜನು ಎದ್ದುನಿಂತು – ದೊರೆಗಳು ರಾಜದ್ರೋಹದ ಪ್ರಸಾರದ ಬಗ್ಗೆ ನನ್ನನ್ನೂ, ಮುಖ್ಯ ಸೇನಾಪತಿಗಳಾದ ಅರುಣಾಚಲರವರನ್ನೂ ಜವಾಬುದಾರರೆಂದು ತಿಳಿಯುವುದು ಯೋಗ್ಯವು. ವಿಜಯನಗರದ ರಾಯರ ಸಿಂಹಾಸನದ ವಿಷಯವಾಗಿ ಎಲ್ಲರಂತೆ ನಮಗಾದರೂ ಅಭಿಮಾನವಿದೆಯೆಂದು ನುಡಿದು ತೋರಿಸುವ ಕಾರಣವಿಲ್ಲ! ಆದರೆ, ಸದ್ಯದ ಪ್ರಸಂಗವೇ ವಿಚಿತ್ರವಾಗಿರುತ್ತದೆ! ವಿಜಯನಗರದ ಸಿಂಹಾಸನಕ್ಕೆ ಇಬ್ಬರು ಅಧಿಕಾರಿಗಳಾಗಿದ್ದಾರೆ. ಒಬ್ಬರು ವೆಂಕಟದೊರೆಗಳ ಪ್ರತ್ಯಕ್ಷ ಹೊಟ್ಟೆಯಮಕ್ಕಳು; ಇನ್ನೊಬ್ಬರು, ವೆಂಕಟದೊರೆಗಳು ಮರಣೋನ್ಮುಖರಾಗಿರುವಾಗ ಅವರಿಂದ ರಾಜಚಿಹ್ನಗಳನ್ನು ಸ್ವೀಕರಿಸಿದವರು. ಈ ಸ್ಥಿತಿಯಲ್ಲಿ ಸಿಂಹಾಸನದ ಬಾಧ್ಯತೆಯನ್ನು ಸ್ಥಾಪಿಸುವುದಕ್ಕಾಗಿ ಎರಡು ಪಂಗಡಗಳಾದರೆ, ಅದಕ್ಕೆ ಮಂತ್ರಿಯೇನು ಮಾಡಬೇಕು, ಸೇನಾಪತಿಯೇನು ಮಾಡಬೇಕು? ಈ ಪಂಗಡಗಳ ವಿಷಯವಾಗಿ ಕ್ಷಣಕ್ಷಣಕ್ಕೆ ಜನರ ಮನಸ್ಸುಗಳು ತಿರುಗಹತ್ತಿವೆ. ಈಗ ಹ್ಯಾಗೂ ನಮ್ಮ ಸರದಾರ ಮಂಡಲವು ತಾಂಬೂಲವನ್ನು ಸ್ವೀಕರಿಸಿಯೇ ಇರುತ್ತದೆ. ಅವರ ಹೆಜ್ಜೆಗಳ ಮೇಲೆ ಹೆಜ್ಜೆಗಳನ್ನಿಡಲಿಕ್ಕೆ 3ನೆಯ ರಂಗರಾಯರೆಂದು ಕರೆಸಿಕೊಂಡು ಸದ್ಯಕ್ಕೆ ಸಿಂಹಾಸನವೇರಿರುವ ಚಿಕ್ಕರಾಯರ ಪಕ್ಷದವರು ಯಾಕೆ ಹಿಂದೆ ಮುಂದೆ ನೋಡುವರು? ಸುಮ್ಮನೆ ಸಂಶಯವು ಉತ್ಪನ್ನವಾಗುವಂತೆ ಕೂಡಿದ ದರ್ಬಾರದಲ್ಲಿ ದೊರೆಗಳು ಆರಿಸಿದ ಹಾಗೆ ಇಬ್ಬರ ಹೆಸರುಗಳನ್ನು

ಉಚ್ಚರಿಸದೆ ಬಿಟ್ಟಿದ್ದರೆ ನೆಟ್ಟಗಾಗುತ್ತಿತ್ತೆಂದು ತೋರುತ್ತದೆ. ಯಾರ ಯಾರ ನಿಷ್ಠೆಯು ಯಾರ ಯಾರಲ್ಲಿರುತ್ತದೆಂಬುದನ್ನು ತೋರಿಸಲಿಕ್ಕೆ ವಿಲಂಬವಾಗುವಂತೆ ಇಲ್ಲ. ಅಂದ ಬಳಿಕ ತಾಂಬೂಲ ಗ್ರಹಣಾದಿ ಡಾಂಭಿಕಕೃತಿಗಳ ಗೊಡವೆಗೆ ಹೋಗದೆ, ರಾಜಾಜ್ಞೆಯಂತೆ ನಡಕೊಳ್ಳುವುದು ಯೋಗ್ಯವಾಗಿ ತೋರುತ್ತದೆ.

ಮಂತ್ರಿಯು ಡಾಂಭಿಕ ಶಬ್ದವನ್ನು ಉಚ್ಚರಿಸಿದ ಕೂಡಲೆ ಸರದಾರರ ಅಪಮಾನ ವಾದಂತಾಗಿ ಅವರ ಒರೆಗಳೊಳಗಿಂದ ಕತ್ತಿಗಳು ಸರಸರನೆ ಹೊರಗೆ ಬಂದವು ಆ ಖಡ್ಗಗಳ ಹೊಳಪಿನ ಸಂಗಡ ಕ್ಷಾತ್ರತೇಜಸ್ಸು ಝಗ್ಗನೆ ಹೊಳೆದು, ಅಳ್ಳೆದೆಯವರ ಕೈಕಾಲುಗಳು ನಡುಗಿದವು. ಸರದಾರರು ಕೆಂಪಡರಿಂದ ಕಣ್ಣುಗಳಿಂದ ಮಂತ್ರಿಯನ್ನು ನೋಡಹತ್ತಿದರು. ಈ ಪ್ರಸಂಗದಲ್ಲಿ ದೊರೆಗಳು ಗಂಭೀರಸ್ವರದಿದ ಮಂತ್ರಿಯನ್ನು ಕುರಿತು–ನರಸರಾಜನು ಅತಿಪ್ರಸಂಗದ ಭಾಷಣ ಮಾಡುವ ಗೊಡವೆಗೆ ಹೋಗದಿದ್ದರೆ ನೆಟ್ಟಗಾಗುತ್ತಿತ್ತು, ತಮಗೆ ಯೋಗ್ಯಕಂಡರೆ, ಬೇಕಾದವರ ಹೆಸರನ್ನು ದರ್ಬಾರದಲ್ಲಿ ಉಚ್ಚರಿಸಿ, ಬೇಕಾದವರಿಗೆ ದರ್ಬಾರದಲ್ಲಿ ಬುದ್ಧಿ ಹೇಳಲಿಕ್ಕೆ ವಿಜಯನಗರದ ರಾಯರಿಗೆ ಎರಡನೆಯವರ ಒಪ್ಪಿಗೆಯು ಅವಶ್ಯವಿರುವುದಿಲ್ಲ. ಸಿಂಹಾಸನದ ಎದುರಿಗೆ ನಿಂತು ಅರಸರ ಮಾತನ್ನು ನಿಷೇಧಿಸುವುದು ಮಹಾಪರಾಧವೆಂಬುದನ್ನು ಮಂತ್ರಿಗಳೆನಿಸಿಕೊಳ್ಳುವವರಾದರೂ ಅರಿತಿರಬೇಕಾಗಿತ್ತು. ನಮ್ಮ ಸರದಾರ ಮಂಡಲವು ಡಾಂಭಿಕತನದಂಥ ಹೇಡಿತನಕ್ಕೆ ಮೆಚ್ಚಿದ್ದಲ್ಲವೆಂಬುದನ್ನು ನಾವು ಬಲ್ಲೆವು. ಈ ಪ್ರಸಂಗದಲ್ಲಿ ಅಪರಾಧಿಗಳನ್ನು ಶಿಕ್ಷಿಸುವುದಕ್ಕಿಂತ ಕ್ಷಮಿಸುವುದೇ ಭೂಷಣವೆಂದು ನಮಗೆ ತೋರುವುದರಿಂದ ಅಪರಾಧಗಳನ್ನು ಕ್ಷಮಿಸಿದ್ದೇವೆ. ಒಬ್ಬರ ಅಪರಾಧದ ನಿಷೇಧಕ್ಕಾಗಿ ಇಷ್ಟು ಜನ ರಣಶೂರರ ಖಡ್ಗಗಳು ಒರೆಬಿಟ್ಟು ಇಷ್ಟು ಹೊತ್ತು ಹೊರಗಿದ್ದುದು ಸಾಕಾಗಿರುವುದು ಸದ್ಯಕ್ಕೆ ದರ್ಬಾರದ ಕಾರ್ಯವು ನಿಲ್ಲಿಸಲ್ಪಟ್ಟಿದೆ. ಎಂದು ದೊರೆಗಳು ನುಡಿಯುತ್ತಿರಲು, ಎಲ್ಲರ ಖಡ್ಗಗಳು ಒರೆಗಂಡು ಅವರು ತಮ್ಮ ತಮ್ಮ ಸ್ಥಳಗಳಿಗೆ ಹೋದರು. ನರಸರಾಜನೂ, ಅರುಣಾಚಲನೂ ತಮ್ಮ ತಮ್ಮ ಪಕ್ಷದ ಜನರೊಡನೆ ಆಗಲೆ ಜಗರಾಯನನ್ನು ಕೂಡಿಕೊಂಡರು.

ಮರುದಿನ ಸರದಾರರ ಸೈನ್ಯಗಳೆಲ್ಲ ಸಜ್ಜಾಗತೊಡಗಿದವು. ದೊರೆಗಳು ಬಂಡುಗಾರ ರನ್ನು ಶಿಕ್ಷಿಸುವುದಕ್ಕಾಗಿ ಸ್ವತಃ ಯುದ್ಧೋತ್ಸಾಹದಿಂದ ಆ ದಿನ ಸೈನ್ಯದ ಅಧಿಪತ್ಯವನ್ನು ಕೈ ಕೊಳ್ಳುವವರಿದ್ದರು. ರಾಜಧಾನಿಯಲ್ಲಿ ಸೇರಿಕೊಂಡಿದ್ದ ಜಗರಾಯನ ಜನರನ್ನೂ, ಅವರಿಗೆ ಆಶ್ರಯಕೊಟ್ಟವರನ್ನೂ ಪ್ರತಿಬಂಧದಲ್ಲಿಡುವ ಕೆಲಸವು ಒತ್ತರದಿಂದ ಸಾಗಿತ್ತು. ಅಷ್ಟರಲ್ಲಿ ಕಪಟ ಪಟುವಾದ ಜಗರಾಯನ ವಕೀಲನು, ಕೈಕಟ್ಟಿಕೊಂಡು ದೊರೆಗಳ ಬಳಿಗೆ ಬಂದು ಸಾಷ್ಟಾಂಗ ವಾಗಿ ವಂದಿಸಿ ಮುದ್ರೆ ಮೂಡಿದ ಒಂದು ಪತ್ರವನ್ನು ದೊರೆಗಳ ಸನ್ನಿಧಿಯಲ್ಲಿರಿಸಿದನು. ಅದರಲ್ಲಿ ಠಕ್ಕನಾದ ಜಗರಾಯನು ಬರೆದ ಅಭಿಪ್ರಾಯವೇನಂದರೆ–ಹಿಂದಕ್ಕೆ ದರ್ಬಾರದಲ್ಲಿ ವೆಂಕಟ ದೊರೆಗಳ ಹೊಟ್ಟೆಯ ಮಕ್ಕಳಾದ ಚಿಕ್ಕರಾಯನನ್ನು ಕಟ್ಟಿಕೊಂಡು ನಾನೂ, ತಿಮ್ಮನಾಯಕ– ಮಕರನಾಯಕರೂ ದರ್ಬಾರದಿಂದ ಎದ್ದುಹೋದೆವಲ್ಲದೆ, ಅಂದಿನಿಂದ ಇಂದಿನವರೆಗೆ ನಾವು ರಾಜದ್ರೋಹದ ಹಲವು ಕೃತ್ಯಗಳನ್ನು ಮಾಡುತ್ತ ಬಂದಿರುತ್ತೇವೆ. ಈಗ

ನಮ್ಮ ಕೃತಿಗಳು ನಮಗೇ ಅನ್ಯಾಯದವಾಗಿ ತೋರುವುದರಿಂದ ನಾವು ಪಶ್ಚಾತ್ತಾಪಪಟ್ಟು ದೊರೆಗಳಿಗೆ ಶರಣು ಬಂದಿರುತ್ತೇವೆ. ನಮ್ಮ ಎಲ್ಲ ತಪ್ಪುಗಳನ್ನು ಹೊಟ್ಟೆಯಲ್ಲಿ ಹಾಕಿಕೊಳ್ಳ ಬೇಕೆಂದು ಬೇಡಿಕೊಳ್ಳುವೆವು. ನಮ್ಮನ್ನು ಬೆನ್ನಿಗೆ ಹಾಕಿಕೊಂಡಿರುವ ವೆಂಕಟದೊರೆಗಳ ಹೊಟ್ಟೆಯ ಮಕ್ಕಳ ಮಾನವು ತಮ್ಮ ಮಾನವೆಂದು ತಿಳಿದು, ಅವರ ಮಾನಕ್ಕೆ ಕೊರತೆಬಾರದಂತೆ ದಯಾಳು ದೊರೆಗಳು ಅವರನ್ನು ನಡೆಸಿಕೊಳ್ಳಬೇಕೆಂತಲೂ, ನಮ್ಮ ನಮ್ಮ ಅಧಿಕಾರಮಾನಗಳನ್ನು ನಮನಮಗೆ ಸ್ಥಿರಪಡಿಸುವ ಕೃಪೆಮಾಡಬೇಕೆಂತಲೂ ಚರಣಕ್ಕೆರಗಿ ಮತ್ತೆ ಮತ್ತೆ ಬೇಡಿಕೊಳ್ಳುವೆವು. ಅಪ್ಪಣೆಯಾದರೆ ಚರಣವನ್ನು ಕಾಣಲಿಕ್ಕೆ ಸಿದ್ಧರಿರುತ್ತೇವೆ.

ಬಹು ವಿನಯದಿಂದ ಬರೆದಿದ್ದ ಈ ಪತ್ರಾಭಿಪ್ರಾಯವನ್ನು ನಿಜವೆಂದು ತಿಳಿದು ನಮ್ಮ ಸರಳ ಹೃದಯದ ದೊರೆಗಳು ಜಗರಾಯನೇ ಮೊದಲಾದ ಮೂವರು ಸರದಾರರಿಗೂ ದರ್ಶನಕ್ಕೆ ಬರಬಹುದೆಂದು ಅಪ್ಪಣೆಯಿತ್ತು ಯುದ್ಧದ ವಿಚಾರವನ್ನು ಸದ್ಯಕ್ಕೆ ನಿಲ್ಲಿಸಿದ್ದೇವೆಂದು ಪ್ರಸಿದ್ಧಗೊಳಿಸಿದರು. ಅತ್ತ ಜಗರಾಯನು ಎರಡು ದಿನಗಳಾದರೂ ದರ್ಶನಕ್ಕೆ ಬರಲಿಲ್ಲ. ಆಲಸ್ಯಕ್ಕೆ ಮೆಚ್ಚಿದ್ದ ನಮ್ಮ ದಂಡಾಳುಗಳು ಮೈಮರೆತು ಕುಳಿತುಕೊಂಡರು. ಮುಂದೆ ಮೂರನೆಯ ದಿವಸ ಜಗರಾಯನು ಸಂಶಯಬಾರದಂತೆ ತನ್ನ ಹೆಚ್ಚಿನ ಸೈನ್ಯವನ್ನು ದೂರದಲ್ಲಿಟ್ಟು ಐದುಸಾವಿರ ಉತ್ತಮ ದಂಡಾಳುಗಳೊಡನೆ ಕೋಟೆಯ ಕಡೆಗೆ ಸಾಗಿದನು. ಜಗರಾಯನು ಇಪ್ಪತ್ತು ಸಾವಿರ ಸೈನ್ಯಕ್ಕೂ, ತಿಮ್ಮನಾಯಕನು ಹನ್ನೆರಡು ಸಾವಿರ ಸೈನ್ಯಕ್ಕೂ, ಮಕರನಾಯಕನು ಆರು ಸಾವಿರ ಸೈನ್ಯಕ್ಕೂ ಅದಿಪತಿಗಳಾಗಿದ್ದರು. ಇವರಲ್ಲಿ ಮುಖ್ಯನಾದ ಜಗರಾಯನು ತನ್ನ ಸೈನ್ಯದೊಡನೆ ಕೋಟೆಯ ಕಡೆಗೆ ಸಾಗಿರುವ ರೀತಿಯನ್ನು ನೋಡಿದರೆ, ಈತನು ಅರಸನಿಗೆ ಶರಣುಹೋಗುವ ನೆಂದು ಯಾರಿಗೂ ಕಾಣುವ ಹಾಗಿದ್ದಿಲ್ಲ. ಈ ಮೋಸಗಾರನು ತನ್ನ ದಂಡಿನಲ್ಲಿ ಒಂದು ಸಾವಿರ ದಂಡಾಳುಗಳನ್ನು ಹೊರಗೋಡೆಯ ಬಾಗಿಲ ಬಳಿಯಲ್ಲಿಯೂ ಒಂದು ಸಾವಿರ ದಂಡಾಳುಗಳನ್ನು ಒಳಗೋಡೆಯ ಬಾಗಿಲ ಬಳಿಯಲ್ಲಿಯೂ ಬಿಟ್ಟು, ಉಳಿದ ಮೂರು ಸಾವಿರ ಜನರೊಡನೆ ಕೋಟೆಯೊಳಗೆ ಹೊಕ್ಕನು. ತಿಮ್ಮನಾಯಕ–ಮಕರನಾಯಕರು ಎರಡೆರಡು ಸಾವಿರ ದಂಡಾಳು ಗಳೊಡನೆ ಬಂದಿದ್ದರು. ದೊರೆಯನ್ನು ಲಕ್ಷಿಸದೆ ಸ್ವಚ್ಛಂದವಾಗಿ ಸಾಗಿರುವ ಈ ತ್ರಿವರ್ಗರ ಸೈನ್ಯಗಳನ್ನು ನೋಡಿ ರಾಜಧಾನಿಯೊಳಗಿನ ಜನರು ಬೆದರಿದರು. ಕಾವಲುಗಾರರೂ, ಬೇರೆ ರಾಜಪಕ್ಷದ ಜನರೂ ಚಕಿತರಾದರು. ಇತ್ತ ದಳವಾಯಿಯಾದ ಅರುಣಾಚಲನು ಕೋಟೆಯ ಎರಡನೆಯ ಮಗ್ಗುಲಿನಲ್ಲಿರುವ ಎರಡು ಬಾಗಿಲುಗಳ ಕಾವಲುಗಾರರನ್ನು ತುಂಡರಿಸಿ, ಆ ಬಾಗಿಲುಗಳನ್ನು ಹಿಡಕೊಂಡನು. ಈ ಎಲ್ಲ ಸಂಗತಿಗಳು ಕೂಡಲೆ ದೊರೆಗಳ ಕಿವಿಗೆ ಮುಟ್ಟಲು, ಅವರು ಪಶ್ಚಾತ್ತಾಪ ಕ್ಕೊಳಗಾದರು. ವೈರಿಗಳು ಆಕಸ್ಮಿಕವಾಗಿ ಸರ್ವಸನ್ನಾಹದೊಡನೆ ಆವೇಶದಿಂದ ಸಾಗಿ ಬಂದದ್ದರಿಂದ, ಅವರನ್ನು ಎದುರಿಸಿ ಹಿಂದಕ್ಕಟ್ಟಲಿಕ್ಕೆ ದೊರೆಗಳಿಗೆ ಅನುವು ದೊರೆಯ ಲೊಲ್ಲದು. ಆಗ ಅವರು ಅವಸರದಿಂದ ಅರಮನೆಯ ಬಾಗಿಲುಗಳನ್ನು ಇಕ್ಕಿಸಿ, ಕುಟುಂಬದವರ ಸುರಕ್ಷಿತತೆಯ ಸಲುವಾಗಿ ಹೆಣಗಹತ್ತಿದರು. ರಾಜಕುಟುಂಬದೊಳಗಿನ ಜನರ ಮುಖಗಳು ನಿಸ್ತೇಜನವಾದವು. ರಾಜಧಾನಿಯಲ್ಲೆಲ್ಲ ಗೊಂದಲವೆದ್ದು ಮುಂದೆಯೇನಾಗುವುದೋ, ಎಂದು

ಜನರು ಚಿಂತಿಸಹತ್ತಿದರು. ತಮ್ಮ ತಮ್ಮ ಸೊತ್ತುಗಳ ಸಂರಕ್ಷಣದ ಸಲುವಾಗಿ ಜನರ ಪೇಚಾಟಗಳು ಸಾಗಿದವು. ರಾಜಪಕ್ಷದ ದಂಡಾಳುಗಳಿಗೆ ಮಿಸಕಾಡಲಿಕ್ಕೆ ಬಾರದಂತೆ ವೈರಿಗಳು ಆಯಕಟ್ಟಿನ ಸ್ಥಳಗಳನ್ನು ತಟ್ಟನೆ ಹಿಡಿದುಕೊಂಡು ಕುಳಿತರು. ಇಂಥ ಕಠಿಣ ಪ್ರಸಂಗದಲ್ಲಿ ನಮ್ಮ ಸೇನಾಪತಿಯಾದ ವೀರನರಸಿಂಗನು ತನ್ನ ದಂಡನ್ನು ಬಂಡುಗಾರರ ಮೇಲೆ ನೂಕಿ ಪರಾಕ್ರಮದಿಂದ ಕಾದಹತ್ತಿದನು. ಈ ಸಂಗತಿಗಳನ್ನು ಒಡೆಯರಿಗೆ ತೀವ್ರ ಅರಿಕೆ ಮಾಡಬೇಕೆಂದು ಸೇನಾಪತಿಯ ಅಪ್ಪಣೆಯಾಗಲು, ನಡುವೆ ಎಲ್ಲಿಯೂ ನಿಲ್ಲದೆ ಎರಡೇ ದಿನಗಳಲ್ಲಿ ನಾವು ಸನ್ನಿಧಿಗೆ ಬಂದಿದ್ದೇವೆ. ತಮ್ಮ ಲಗ್ನಪತ್ರಿಕೆಯು ದೊರೆಗಳಿಗೆ ಮುಟ್ಟದೆ, ವೈರಿಗಳ ಕೈಗೆ ಹತ್ತಿ ಅವರು ಏನೋ ದುರಾಲೋಚನೆಯನ್ನು ಮಾಡಿದಂತೆ ಕಾಣುತ್ತದೆ; ಆದ್ದರಿಂದ ತಾವು ಯಾವಾಗಲೂ ಜಾಗರೂಕರಾಗಿರತಕ್ಕದ್ದು.''

ತಿರುಮಲನ ಈ ಮಾತುಗಳನ್ನು ಕೇಳಿ ಎಚ್ಚಮನಾಯಕನಿಗೆ ಬಹಳ ವ್ಯಸನವಾಯಿತು. ತಿಳಿದೂ ತಿಳಿದೂ ತಾನು ಅರಸನನ್ನು ಬಿಟ್ಟು ಬಂದು ಅನರ್ಥವನ್ನುಂಟುಮಾಡಿದ್ದಕ್ಕಾಗಿ ಆತನು ತನ್ನನ್ನು ಮನಸ್ಸಿನಲ್ಲಿ ಬಹಳವಾಗಿ ಹಳಿದುಕೊಳ್ಳಹತ್ತಿದನು. ಪಶ್ಚಾತ್ತಾಪದ ಭರದಲ್ಲಿ ತಿರುಮಲನ ಕಟ್ಟಕಡೆಯ ಮಾತನ್ನು ಆತನು ಲಕ್ಷಿಸಲೇ ಇಲ್ಲ, ಆ ಮಾತು ಆತನಿಗೆ ಕೇಳಲಿಲ್ಲೆಂದರೂ ಅನ್ನಬಹುದು; ಯಾಕಂದರೆ, ತಿರುಮಲನು ಆ ಮಾತನ್ನು ಆಡುವಾಗ ನಾಯಕನ ಮನಸ್ಸು ದುಃಖದಿಂದ ಬಹಳ ಅಸ್ವಸ್ಥವಾಗಿತ್ತು. ಹಿಡಿದ ಕೆಲಸವನ್ನು ದೃಢನಿಶ್ಚಯದಿಂದ ಮಾಡದೆ. ಚಂಚಲ ಮನಸ್ಸಿನಿಂದ ಅತ್ತಿತ್ತ ಎಡತಾಕುವವರು ಕಾರ್ಯಹಾನಿಯನ್ನುಂಟು ಮಾಡುತ್ತಾರೆಂಬ ಅಪಕೀರ್ತಿಯ ಸಿದ್ಧಾಂತಕ್ಕೆ ತಾನು ಉದಾಹರಣನಾಗಬೇಕಾಯಿತೆಂದು ಆತನು ವ್ಯಸನಪಡಹತ್ತಿದ್ದನು. ಹೀಗಿರುವಾಗ ಒಬ್ಬ ತರುಣವೀರನು ನಾಯಕನನ್ನು ಕೊಲ್ಲುವ ಹವಣಿಕೆ ಯಿಂದ ಒರೆಯೊಳಗಿನ ಕತ್ತಿಯನ್ನು ಹಿರಿಯಲು ಹೊಂಚುಹಾಕಿದ್ದನು. ತನ್ನ ಸ್ವಾಮಿಗೆ ಬಂದಿದ್ದ ಅರಿಷ್ಟದ ನಿವಾರಣವು ಹ್ಯಾಗಾದೀತೆಂದು ಚಿಂತಿಸುತ್ತ ನಿಂತಿರುವಾಗ ಆ ಕೊಲೆಗಡುಕನ ಕಡೆಗೆ ನಾಯಕನ ಲಕ್ಷ್ಯವು ಹೋಗಿದ್ದಿಲ್ಲ. ತಿರುಮಲನ ಲಕ್ಷ್ಯವಾದರೂ ಅತ್ತಕಡೆಗೆ ಇದ್ದಿಲ್ಲ; ಆದರೆ ಒಬ್ಬ ಸುಂದರಿಯು ಮಾತ್ರ ಆ ಕೊಲೆಗಡುಕನ ಮೇಲೆ ಹಾಕಿದ್ದ ತನ್ನ ವಕ್ರದೃಷ್ಟಿಗಳನ್ನು ಕ್ಷಣವಾದರೂ ಮರೆಮಾಡಿದ್ದಿಲ್ಲ. ಕೊಲೆಗಡುಕನು ನಾಯಕನ ಸನಿಯಕ್ಕೆ ಹೋದ ಹೋದಂತೆ ಆ ಸುಂದರಿಯೂ ಹೋಗಹತ್ತಿದಳು. ಕೊಲೆಗಡುಕನು ನಾಯಕನ ಬಳಿಯಲ್ಲಿ ಸ್ಥಿರವಾಗಿ ನಿಂತುಕೊಂಡು ಒರೆಯೊಳಗಿನ ಖಡ್ಗಕ್ಕೆ ಕೈಹಾಕಲು, ಅತ್ತ ಆ ಸುಂದರಿಯೂ ತನ್ನ ಮುಸುಕಿನಲ್ಲಿ ಏನೋ ಅಣಿಮಾಡುತ್ತಿದ್ದಳು. ಉತ್ಸವಪ್ರಿಯರಾದ ಜನರು ಉತ್ಸವಕ್ಕೆ ವಿಘ್ನ ಬಂದದ್ದಕ್ಕಾಗಿ ಅಸಮಾಧಾನ ಪಡುತ್ತ ಅಲ್ಲಲ್ಲಿ ನೆರೆದು ನಿಂತುಕೊಂಡಿದ್ದರು. ಎಲ್ಲ ಕಡೆಯಲ್ಲಿ ಶಾಂತತೆಯು ನೆಲೆಗೊಂಡಿತ್ತು. ಆಗ ಎಚ್ಚಮನಾಯಕನು ತಿರುಮಲನಿಗೆ–ತಿರುಮಲರಾಯಾ, ಹೀಗೆ ಚಿಂತೆಯಿಂದ ಕಾಲಹರಣ ಮಾಡಿದರೆ ಆಗುವುದೇನು? ಸ್ವಾಮಿಕಾರ್ಯವು ಸಾಧಿಸಿದಂತಾಗುವುದೋ? ಇನ್ನು ಕ್ಷಣವಾದರೂ ವಿಲಂಬ ಮಾಡದೆ, ಸರ್ವಸನ್ನಾಹದೊಡನೆ ನಮ್ಮ ಸಮಗ್ರವಾದ ಸೈನ್ಯವು ಈಗಲೇ ಹೊರಪಯಣ ಮಾಡಲಿ; ವಿವಾಹಕಾರ್ಯಗಳು ಇಲ್ಲಿಗೆ ನಿಂತುಹೋಗಲಿ; ನನ್ನ ಕುದುರೆಯು ಜೀನುಹಾಕಿ ಅರಮನೆಯ ಬಾಗಿಲಿಗೆ ಬಂದು ನಿಂತುಕೊಳ್ಳಲಿ!

ಈ ಮೇರೆಗೆ ನುಡಿದು ಎಚ್ಚಮನಾಯಕನು ಮುಂದಕ್ಕೆ ಸಾಗುತ್ತಿರಲು, ಕೊಲೆಗಡುಕನು ನಾಯಕನ ಇಹಲೋಕದ ಯಾತ್ರೆಯನ್ನು ಮುಗಿಸುವದಕ್ಕಾಗಿ ತನ್ನ ಖಡ್ಗವನ್ನು ಮೇಲ ಕೈತ್ತಿದನು. ಕೂಡಲೆ ಆತನ ಪಕ್ಷದ ಜನರ ಖಡ್ಗಗಳು ಒರೆಯೊಳಗಿಂದ ಹೊರಬಿದ್ದವು. ಆಗ ನೆರೆದ ಜನಸಮೂಹವು ಚೆದರಿ ಚೆಲ್ಲಾಪಿಲ್ಲಿಯಾಗುತ್ತಿರಲು ತಿರುಮಲರಾಯನು–ಹಾ! ಘಾತವಾಯಿತು–ಘಾತವಾಯಿತು, ಎಂದು ತನ್ನ ಖಡ್ಗವನ್ನು ಒರೆಯೊಳಗಿಂದ ಹಿರಿದನು. ಅಷ್ಟರಲ್ಲಿ ಆ ಸುಂದರಿಯ ಕಠಾರಿಯ ಇರಿತದಿಂದ ಕೊಲೆಗಡುಕನು ನೆಲಕ್ಕುರುಳಿದನು. ಅತ್ತ ತಿರುಮಲನ, ಹಾಗು ಆತನ ಸಂಗಡಿಗರ ಖಡ್ಗಗಳ ತೀಕ್ಷ್ಣಧಾರೆಗಳಿಗೆ ಕೊಲೆಗಡುಕನ ನಾಲ್ಕಾರು ಜನ ಅನುಯಾಯಿಗಳು ಆಹುತಿಯಾದರು. ಈ ಗದ್ದಲವನ್ನು ಕೇಳಿ ಅರಮನೆಯ ಕಾವಲುಗಾರರು ಬಂದು ಕೊಲೆಗಡುಕನ ಅನುಯಾಯಿಗಳನ್ನು ತುಂಡರಿಸಿ ಶರಣು, ಬಂದವರನ್ನು ಸೆರೆಹಿಡಿಯಹತ್ತಿದರು. ಈಗೊಂದು ಕ್ಷಣಕ್ಕೆ ಮೊದಲು, ವಿವಾಹದ ಕಾರ್ಯಗಳಿಂದ ಸುಮಂಗಲವಾಗಿ ಒಪ್ಪುತ್ತಿದ್ದ ಅಂತರ್ಗೃಹವು, ಈಗ ರಕ್ತಮಯವಾಗಿ, ನೆಲಕ್ಕುರುಳಿದವರ ಆರ್ತಧ್ವನಿಯಿಂದ ಭಯಂಕರವಾಗಿ ತೋರ ಹತ್ತಿತು. ಸೆರೆಯಾಳುಗಳು ನಾಯಕನ ಅಪ್ಪಣೆಯಿಂದ ಕಾರಾಗೃಹಕ್ಕೆ ಕಳುಹಲ್ಪಡಲು, ಜನರ ಸಂದಣೆಯಿಂದಲೂ, ಗಲಿಬಿಲಿಯಿಂದಲೂ ಗಜಿಬಿಜಿಸುತ್ತಿದ್ದ ಅಂತರ್ಗೃಹವು ಶವಗಳ ಶಯನದ ನಿವಾಂತಸ್ಥಾನವಾಯಿತು. ಕಡೆಗೆ ಅಂತರ್ಗೃಹದಲ್ಲಿ ಎಚ್ಚಮ ನಾಯಕ, ತಿರುಮಲ ಒಬ್ಬ ಸುಂದರಿ, ಖಡ್ಗ ಪಾಣಿಗಳಾದ ಐವರು ದಂಡಾಳುಗಳು ಮಾತ್ರ ಉಳಿದರು. ಎಚ್ಚಮನಾಯಕನೂ–ತಿರುಮಲನೂ ಆಶ್ಚರ್ಯದಿಂದ ಈ ಸುಂದರಿಯನ್ನು ನೋಡಹತ್ತಿದರು. ಆಗ ಆಕೆಯ ಹುಬ್ಬುಗಳು ಗಂಟಿಕ್ಕಿದ್ದವು; ಮುಖವೂ ಕಣ್ಣುಗಳೂ ಕೆಂಪಗಾಗಿದ್ದವು; ಕ್ರೋಧಾವೇಶದಿಂದ ಆಕೆಯ ಶ್ವಾಸೋಚ್ಛ್ವಾಸ ವ್ಯಾಪಾರವು ಒತ್ತರದಿಂದ ಸಾಗಿತ್ತು; ಆಕೆಯ ಸುಂದರವಾದ ಕೆಳದುಟಿಯು ನಡುಗುತ್ತಿತ್ತು, ಆ ಸುಂದರಿಯು ಬಹು ಪ್ರಯಾಸದಿಂದ ತನ್ನ ವೀರಾವೇಶವನ್ನು ಅಡಗಿಸಿ ಆವೇಶದ ಭರದಲ್ಲಿ ದಿಟ್ಟತನದಿಂದ ಎಚ್ಚಮನಾಯಕನ ಕೈಯನ್ನು ಹಿಡಿದು ನುಡಿದಳೇನಂದರೆ–ವೀರಶಿಖಾಮಣಿಗಳೇ, ಏಳಿರಿ ತಡವೇಕೆ? ಸ್ವಾಮಿಗೊದಗಿದ ವಿಪತ್ತನ್ನು ನಿವಾರಿಸುವ ಕಾರ್ಯದಲ್ಲಿ ನಮ್ಮ ದೇಹಗಳು ಸವೆದು ಹೋಗಲಿ. ಋಷಿವರ್ಯರು ನಿಮಗೆ—''ಹತ್ತನೆಯ ದಿವಸ ಮನಸ್ಸನ್ನು ಸಮಾಧಾನದಿಂದ ಇದ್ದರೆ ಲಗ್ನಮಾಡಿಕೊಳ್ಳಬಹುದೆ''ಂದು ಹೇಳಿದ್ದರಷ್ಟೇ? ಅಂದಬಳಿಕ ಮನಸ್ಸು ಸಮಾಧಾನದಿಂದಿದ್ದಾಗ ಇಲ್ಲಿಯವರೆಗೆ ಆಗಿದ್ದ ವಿವಾಹದ ಕಾರ್ಯಗಳು ಆಗಿ ಹೋದವು. ಸ್ವಾಮಿಗೊದಗಿದ ವಿಪತ್ತಿನ ಶ್ರವಣದಿಂದ ನಮ್ಮ ಮನಸ್ಸು ತಾಪಕ್ಕೆ ಗುರಿಯಾಗಿರಲು, ನಮಗೆ ಇನ್ನು ವಿವಾಹದ ಸಡಗರದ ಕಾರ್ಯಗಳೇಕೆ? ಅದರಂತೆ, ವಿವಾಹದ ಸೊಬಗಿನ ಈ ಉಡುಪು ತೊಡುಪುಗಳಾದರೂ ಏಕೆ? ನಾನು ಸ್ವಾಮಿನಿಷ್ಠನೆಂದು ಖ್ಯಾತಿಯನ್ನು ಪಡೆದಿದ್ದ ನರಸಿಂಗನಾಯಕನ ಹೊಟ್ಟೆಯಲ್ಲಿ ಹುಟ್ಟಿ, ಅದೇ ಪವಿತ್ರ ಸ್ವಾಮಿನಿಷ್ಠೆಯ ಮೂಲಕ ಚಂದ್ರಗಿರಿಯ ದರ್ಬಾರದಲ್ಲಿ ಅಗ್ರಸ್ಥಾನವನ್ನು ಪಡೆದ ವೀರಾಗ್ರೇಸರರಾದ ಎಚ್ಚಮನಾಯಕರ ಕೈಯನ್ನು ಹಿಡಿದು ಈಗ ಸ್ವಾಮಿಕಾರ್ಯಕ್ಕೆ ವಿಘ್ನವಾಗಬಹುದೆ? ಶಿವಶಿವ!! ತಾವು ನನ್ನ

ಪಾಣಿಗ್ರಹಣ ಮಾಡುತ್ತಿರುವಾಗ ಸ್ವಾಮಿಗೆ ವಿಪತ್ತು ಒದಗಿದ್ದರಿಂದ ನಾನೇ ವಿಪದ್ರೂಪ ವಾದಂತಾಯಿತು. ಈ ಅಪರಾಧದ ಪ್ರಾಯಶ್ಚಿತಕ್ಕಾಗಿ ಇನ್ನು ಈ ದೇಹವು ಪುರುಷವೇಷದಿಂದ ಎಚ್ಚಮನಾಯಕರ ನೆರಳಿನಂತೆ ಅವರು ಹೋದಲ್ಲಿ ಇರಲಿಕ್ಕೆ ತಪ್ಪಲಿಕ್ಕಿಲ್ಲ. ಋಷಿವರ್ಯರು ರಹಸ್ಯವಾಗಿ ಹೇಳಿದ ಭವಿಷ್ಯದ ಅನುಭವವು ಈಗ ನನಗೆ ಬಂದಂತಾಯಿತು. ಪ್ರಾಣ ಪ್ರಿಯರೇ, ಸ್ವಾಮಿಕಾರ್ಯವು ಸಾಧಿಸುವವರೆಗೆ ವಿಷಯಸುಖದ ನೆರಳಿಗೆ ಹೋಗಲಿಕ್ಕಿಲ್ಲೆಂದು ಶ್ರೀ ಗುರುಸ್ಮರಣದಿಂದ ನಾನು ತಮ್ಮ ಸನ್ನಿಧಿಯಲ್ಲಿ ಪ್ರತಿಜ್ಞೆ ಮಾಡುತ್ತೇನೆ.

ಆವೇಶದ ಭರದಲ್ಲಿ ಹೀಗೆ ತಟ್ಟನೆ ಪ್ರತಿಜ್ಞೆ ಮಾಡಿದ ಸುಂದರ ತರುಣಿಯು, ಕುಮುದಿನಿಯೇ ಆಗಿದ್ದಳೆಂಬುದನ್ನು ನಮ್ಮ ವಾಚಕರು ಸಹಜವಾಗಿ ಗೊತ್ತುಹಿಡಿದಿರಬಹುದು. ಹಿಂದಕ್ಕೆ ತಿರುಮಲರಾಯನು ನಾಯಕನಿಗೆ ನಿಮ್ಮ ಲಗ್ನ ಪತ್ರವು ಅರಸನಿಗೆ ಮುಟ್ಟದೆ, ವೈರಿಗಳ ಕೈಗೆ ಬಿದ್ದು ಅವರು ಮೋಸದಿಂದ ನಿಮಗೆ ಕೇಡು ಬಗೆಯುವ ವಿಚಾರ ಮಾಡಿದಂತೆ ಕಾಣುತ್ತದೆಂದು ಹೇಳಿದ್ದೂ ವಾಚಕರ ಸ್ಮರಣದಲ್ಲಿರಬಹುದು. ಲಗ್ನಪತ್ರವು ಜಗರಾಯನ ಕೈಗೆ ಬಿದ್ದದ್ದರಿಂದ ಆತನು ಮುದ್ದುರಂಗನೆಂಬ ಸರದಾರನ ಕೈಯಲ್ಲಿ ಬಹುಮಾನದ ಉಡುಗರೆಗಳನ್ನು ಕೊಟ್ಟು ಒಂದು ಚಿಕ್ಕ ಸೈನ್ಯದೊಡನೆ ಆತನನ್ನು ಅರಸನು ಕಳಿಸಿದಂತೆ ಎಚ್ಚಮನಾಯಕನ ಕಡೆಗೆ ಕಳಿಸಿದ್ದನು. ಮುದ್ದುರಂಗನು ರಾಜಪಕ್ಷದ ಏಕನಿಷ್ಠ ಸರದಾರನಿದ್ದು, ಜಗರಾಯನು ಆತನನ್ನು ಪ್ರಯತ್ನಪಟ್ಟು ಅದೇ ತನ್ನ ಕಡೆಗೆ ಒಡಕೊಂಡದ್ದರಿಂದ, ನಾಯಕನಿಗೆ ಈ ಮೋಸವು ತಿಳಿಯುವಂತೆ ಇದ್ದಿಲ್ಲ. ಅರಸನು ಕಳಿಸಿದ ಸರದಾರನೆಂದು ನಾಯಕನು ಆತನ ಆದರೋಪ ಚಾರಗಳನ್ನು ಭಕ್ತಿಯಿಂದ ಮಾಡುತ್ತಿರುವಾಗ ಹೊತ್ತು ನೋಡಿ ನಾಯಕನ ಪ್ರಾಣಹರಣ ಮಾಡಬೇಕೆಂದು ಜಗರಾಯನು ಮುದ್ದುರಂಗನಿಗೆ ಹೇಳಿದ್ದನು. ಎಚ್ಚಮನಾಯಕನೊಬ್ಬನು ಇಲ್ಲದಂತಾದರೆ, ರಾಜಪಕ್ಷದ ಪರಾಜಯಕ್ಕೆ ವಿಳಂಬವಾಗದೆಂದು ಜಗರಾಯನ ನಂಬಿಗೆಯಿತ್ತು. ಈ ನಂಬಿಗೆಯು ಯಥಾರ್ಥ ವಾದದ್ದೆಂದು ವಾಚಕರಾದರೂ, ಒಪ್ಪಿಕೊಳ್ಳಬಹುದು; ಯಾಕಂದರೆ, ಎಚ್ಚಮನಾಯಕನಂಥ ಏಕನಿಷ್ಠ ಸ್ವಾಮಿಭಕ್ತ ತರುಣವೀರನು ರಾಜಪಕ್ಷದಲ್ಲಿ ಇನ್ನೊಬ್ಬನಿದ್ದಿಲ್ಲ. ಅತ್ತ ಮುದ್ದುರಂಗನು ಎಚ್ಚಮನಾಯಕನ ಕೊಲೆಮಾಡಿದ ಕೂಡಲೆ, ಇತ್ತ ಪ್ರತಾಪದುರ್ಗಕ್ಕೆ ಮುತ್ತಿಗೆ ಹಾಕುವುದಕ್ಕಾಗಿ ಒಂದು ದೊಡ್ಡ ಸೈನ್ಯವನ್ನು ಜಗರಾಯನು ಕಳಿಸಿದ್ದನು. ಈ ಸಂಕೇತದಂತೆ ಮುದ್ದುರಂಗನು ಗಂಡ–ಹೆಂಡಿರ ಊರಟಣೆಯು ನಡೆದಾಗ ನಾಯಕನ ಕೊಲೆಮಾಡುವುದನ್ನು ನಿಶ್ಚಯಿಸಿದ್ದನು. ಅಷ್ಟರಲ್ಲಿ ಚಂದ್ರಗಿರಿಯಿಂದ ಅಕಸ್ಮಾತ್ತಾಗಿ ತಿರುಮಲನು ಬಂದದ್ದನ್ನು ನೋಡಿ, ತನ್ನ ಮೋಸವು ಎಲ್ಲಿ ಹೊರಬೀಳುವುದೋ, ಎಂದು ಆ ಕೊಲೆಗಡುಕನು ಹೆದರಿದ್ದನು; ಆದರೆ ಮೊದಲು ತಿರುಮಲನಿಗೆ, ಮುದ್ದುರಂಗನು ರಾಜಪಕ್ಷವನ್ನು ಬಿಟ್ಟು ಜಗರಾಯನನ್ನು ಕೂಡಿಕೊಂಡಿದ್ದೇ ಗೊತ್ತಿಲ್ಲದ್ದರಿಂದ ಯಾವ ಸಂಶಯಕ್ಕೂ ಮಾರ್ಗವಾಗಲಿಲ್ಲ. ಮುದ್ದುರಂಗನ ಈ ದುರಾಲೋಚನೆ ಯನ್ನು ಚಾಣಾಕ್ಷಳಾದ ಕುಮುದಿನಿಯು ಹ್ಯಾಗೆ ಹ್ಯಾಗೋ ಕಂಡುಹಿಡಿದು, ಪತಿಯ ಸುರಕ್ಷತತೆಯ ಸಲುವಾಗಿ ಕಾದುಕೊಂಡಿದ್ದಳು. ತಿರುಮಲನು ನಾಯಕನ ಮುಂದೆ ಚಂದ್ರಗಿರಿಯ ಸುದ್ದಿಯನ್ನು

ಹೇಳುತ್ತಿರುವಾಗ, ಮುದ್ದುರಂಗನು ಸಂಶಯದಿಂದ ಅತ್ತಿತ್ತ ನೋಡುತ್ತ ಖಡ್ಗಕ್ಕೆ ಕೈನೀಡು ವುದನ್ನೂ, ಕ್ಷಣಕ್ಷಣಕ್ಕೆ ಅವನ ಮುಖ ಮುದ್ರೆಯಲ್ಲಿ ಆಗುತ್ತಿದ್ದ ಹೆಚ್ಚು ಕಡಿಮೆಗಳನ್ನೂ ನೋಡಿ ಕುಮುದಿನಿಯು ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಆ ಕೊಲೆಗಡುಕನನ್ನು ನೋಡುತ್ತಿದ್ದಳು. ತನ್ನ ಕೊಲೆಯು ಸಾಧಿಸಿ, ರಾಜಪಕ್ಷವನ್ನು ನೆಲಸಮ ಮಾಡಿದ ಶ್ರೇಯಸ್ಸು ತನ್ನ ಪಾಲಿಗೆ ಹ್ಯಾಗೆ ಬಂದೀತೆಂಬ ವಿಚಾರದಲ್ಲಿ ಮುಣುಗಿಹೋಗಿದ್ದ ಮುದ್ದುರಂಗನು, ಕಮುದಿನಿಯ ಈ ಜಾಗರೂ ಕತೆಯನ್ನು ನೋಡಿದ್ದಿಲ್ಲ, ತಾನು ಮುಸಲ್ಮಾನರ ಕೈಯಿಂದ ಪಾರಾದಂದಿನಿಂದ ಕುಮುದಿನಿಯು ತನ್ನ ಬಳಿಯಲ್ಲಿ ಗುಪ್ತರೀತಿಯಿಂದ ಯಾವಾಗಲೂ ಕಠಾರಿಯನ್ನು ಇಟ್ಟುಕೊಳ್ಳುವ ಪರಿಪಾಠ ವಿಟ್ಟಿದ್ದಳು. ತನ್ನ ಮಾನಹಾನಿಯಾಗುವ ಪ್ರಸಂಗ ಒದಗಿದಲ್ಲಿ ಆತ್ಮರಕ್ಷಣ ಮಾಡಿಕೊಳ್ಳಲಿಕ್ಕೆ. ಅಥವಾ ಅದು ಸಾಧಿಸದಿದ್ದರೆ ಆತ್ಮಘಾತ ಮಾಡಿಕೊಳ್ಳಲಿಕ್ಕೆ ತನಗೆ ಅನು ಕೂಲವಾಗಬೇಕೆಂದು ಆಕೆಯು ಅದನ್ನು ಯಾವಾಗಲೂ ಧರಿಸುತ್ತಿದ್ದಳು. ಅದೇ ಕಠಾರಿಯಿಂದ ಆ ಧೀರೆಯು ಪತಿಯ ಪ್ರಾಣರಕ್ಷಣ ಮಾಡಿದ್ದನ್ನು ವಾಚಕರು ಅರಿತೇ ಇರುವರು.

ಕುಮುದಿನಿಯ ಸಾಹಸವನ್ನೂ, ಘೋರ ಪ್ರತಿಜ್ಞೆಯನ್ನೂ ನೋಡಿ ಎಚ್ಚಮನಾಯಕನು ಆಶ್ಚರ್ಯಪಟ್ಟನು. ಪ್ರೇಮಾತಿಶಯದಿಂದ ತನ್ನ ಪ್ರಾಣರಕ್ಷಣ ಮಾಡಿದ್ದಲ್ಲದೆ, ಅಭಿಮಾನ ಪುರಸ್ಸರವಾಗಿ ತನ್ನಕಾರ್ಯಕ್ಕೆ ಸಹಾಯಮಾಡಲು ಪುರುಷಶ್ರೇಷ್ಠರಂತೆ ಪ್ರತಿಜ್ಞಾಪೂರ್ವಕ ಟೊಂಕಕಟ್ಟಿದ್ದನ್ನು ನೋಡಿ ಆತನು ಕುಮುದಿನಿಯ ವಿಷಯವಾಗಿ ಪರಮಾದರವನ್ನು ತಾಳಿದನು. ತಿರುಮಲನೂ ಉಳಿದ ದಂಡಾಳುಗಳೂ ಚಕಿತಮುದ್ರೆಯಿಂದ ಕುಮುದಿನಿಯನ್ನು ನೋಡುತ್ತ ನಿಂತುಕೊಂಡಿದ್ದರು. ಆಗ ಎಚ್ಚಮನಾಯಕನು ಪ್ರೇಮಾತಿಶಯದಿಂದ ಕುಮುದಿನಿ ಯನ್ನು ತಬ್ಬಿಕೊಂಡು–ಪ್ರಿಯೇ, ನಿನ್ನ ಜಾಗರೂಕತೆಯಿಂದಲೇ ಇಂದಿನ ದಿವಸ ನಾನು ಸ್ವಾಮಿಕಾರ್ಯ ವನ್ನು ಮಾಡಲಿಕ್ಕೆ ಜೀವದಿಂದ ಉಳಿದೆನು. ನೀನು ನಿಶ್ಚಯವಾಗಿ ನನಗೆ ಪ್ರಾಣ ದಾನವನ್ನು ಮಾಡಿರುತ್ತೀ, ನಾನು ಹೇಳುವುದಕ್ಕಿಂತ ಮೊದಲೇ ನನ್ನ ಕಾರ್ಯಕ್ಕೆ ಅನುಕೂಲಳಾಗಿ ನಿಂತಿರುವ ನಿನ್ನ ಉಪಕಾರವನ್ನು ನಾನು ಎಷ್ಟು ಸ್ಮರಿಸಿದರೂ ತೀರದು, ಬಹು ದಿವಸದ ಪತಿ–ಸಮಾಗಮದಿಂದ ಪ್ರೇಮಾಭಿವೃದ್ಧಿಯನ್ನು ಪಡೆದವರು ಕೂಡ ಪತ್ನಿಯ ಕಷ್ಟದ ಕಾರ್ಯದಲ್ಲಿ ಪತಿಯೊಡನೆ ಕಷ್ಟಪಡಲಿಕ್ಕೆ ಹಿಂದೆ ಮುಂದೆ ನೋಡುತ್ತಿರುವರು; ಅಂದ ಬಳಿಕ ಪತಿಯ ಪ್ರಥಮ ದರ್ಶನದಲ್ಲಿ ಪತಿಗೆ ತನುಮನೋಧನಗಳನ್ನು ಸಮರ್ಪಿಸಿಬಿಡುವ ನಿನ್ನ ಯೋಗ್ಯತೆಯನ್ನು ನಾನೇನು ವರ್ಣಿಸಲಿ? ಸತ್ಸಮಾಗಮದ ಮಹಿಮೆಯೇ ಅಂಥಾದ್ದು. ಸತ್ಸಮಾಗಮದಿಂದ ನೀನು ಧನ್ಯಳಾಗಿರುತ್ತೀ. ನಿನ್ನ ಪುಣ್ಯದಿಂದಲೇ ನಾನು ಕಾರ್ಯದಲ್ಲಿ ಯಶಸ್ಸನ್ನು ಪಡೆಬೇಕಾಗಿದೆ. ಪ್ರಿಯೇ, ನಿನ್ನ ಪಾಣಿಗ್ರಹಣ ಮಾಡಿದ ಒಂದೇ ದಿವಸದಲ್ಲಿ ಎಂಥ ಗಂಡಾಂತರದಿಂದ ನಾನು ಪಾರಾದೆನಲ್ಲ! ನಿನ್ನಂಥ ಪುಣ್ಯಾತ್ಮಳಾದ ಅರ್ಧಾಂಗಿಯು, ನೆರಳಿನಂತೆ ಸಹಾಯಮಾಡಲು ಒಪ್ಪಿಕೊಂಡಿರುವುದರಿಂದ ಸ್ವಾಮಿಕಾರ್ಯಕ್ಕಾಗಿ ಪ್ರತ್ಯಕ್ಷ ಯಮನ ಕೋರೆಗಳನ್ನು ಮುರಿಯುವ ಪ್ರಸಂಗ ಬಂದರೂ ನಾನು ಹಿಂದೆ ಮುಂದೆ ನೋಡುವುದಿಲ್ಲ ನಿನ್ನಂಥ ಕರ್ತವ್ಯ ಧಕ್ಷಳಾದ ಪತ್ನಿಯೊಡನೆ ಹೆಚ್ಚಿನ ಮಾತುಗಳೇಕೆ? ಅವು ಹೊಯ್ಮಾಲೆಯ

ಹೆಂಗಸರ ಪಾಲಿಗೆ ಇಟ್ಟಿರಲಿ, ನಡೆ, ಪ್ರತಿಜ್ಞೆಯಂತೆ ಪುರುಷವೇಷವನ್ನು ಧರಿಸು. ನಿನ್ನ ಪವಿತ್ರ ಪ್ರತಿಜ್ಞೆಗೆ ಭಂಗಬಾರದಂತೆ ನಾನು ನಡಕೊಳ್ಳುವೆನೆಂದು ನಾನಾದರೂ ಪ್ರತಿಜ್ಞಾ ಪೂರ್ವಕವಾಗಿ ನಿನಗೆ ಹೇಳುತ್ತೇನೆ. ಎಂದು ನುಡಿಯುತ್ತಿರಲು, ವೈರಿಗಳ ದಂಡು ದುರ್ಗವನ್ನು ಮುತ್ತಿದ್ದ ಸುದ್ದಿಯನ್ನು ಸೇವಕರು ಹೇಳಿದರು. ಕೂಡಲೆ ಎಚ್ಚಮನಾಯಕನು ಯುದ್ಧಾವೇಶದಿಂದ ಅಂತರ್ಗೃಹವನ್ನು ಬಿಟ್ಟು ಹೊರಡಲು, ಕುಮುದಿನಿಯೇ ಮೊದಲಾದವರು ಆತನನ್ನು ಹಿಂಬಾಲಿಸಿದರು.

ಜಗರಾಯನ ಸಂಕೇತದಂತೆ ಆತನ ದಂಡು ದುರ್ಗವನ್ನು ಮುತ್ತಿತು; ಆದರೆ ಮುದ್ದು ರಂಗನು ಎಚ್ಚಮನಾಯಕನನ್ನು ಕೊಲ್ಲದೆ, ಕುಮುದಿನಿಯ ಕಠಾರಿಗೆ ತಾನೇ ತುತ್ತಾದದ್ದನ್ನೂ, ಆತನ ಚಿಕ್ಕ ದಂಡಿನೊಳಗಿನ ಕೆಲವರು ಪ್ರಾಣಕ್ಕೆ ಎರವಾಗಿ, ಕೆಲವರು ಸೆರೆಮನೆಯ ಸೋಬತಿ ಯಾದದ್ದನ್ನೂ ಅವರೇನು ಬಲ್ಲರು? ಎಚ್ಚಮನಾಯಕನು ತನ್ನ ದಂಡಿನ ವ್ಯವಸ್ಥೆಯನ್ನು ಮಾಡಿ ಯುದ್ಧೋತ್ಸಾಹದಿಂದ ವೈರಿಗಳ ಮೇಲೆ ಬೀಳುವುದಕ್ಕಾಗಿ ಹೊರಡಲು, ದುರ್ಗವನ್ನು ಮುತ್ತಿದ್ದ ದಂಡು ಮುತ್ತಿಗೆಯನ್ನೆಬ್ಬಿಸಿ ತಾನೇ ಕಾಲುದೆಗೆಯಹತ್ತಿತ್ತು, ಎಚ್ಚಮನಾಯಕನನ್ನು ಕೊಂದಕೂಡಲೆ, ಮುದ್ದುರಂಗನ ಚಿಕ್ಕ ದಂಡು ಹೊಂಚುಹಾಕಿಕೊಂಡು ಕೋಟೆಯ ಬಾಗಿಲು ಗಳಲ್ಲಿಯ ಕಾವಲುಗಾರರನ್ನು ತುಂಡರಿಸಿ ಬಾಗಿಲು ತೆರೆಯಬೇಕೆಂದು ಮೊದಲೇ ಗೊತ್ತಾಗಿತ್ತು! ಆದರೆ ಗೊತ್ತಾದಂತೆ ಕಾರ್ಯವು ನಡೆಯದೆ, ದುರ್ಗದಲ್ಲಿಯ ದಂಡಾಳುಗಳು ಯುದ್ಧೋತ್ಸಾಹ ದಿಂದ ತಮ್ಮ ಮೇಲೆ ತೋಪು ತುಬಾಕಿಗಳ ಮಳೆ ಸುರಿಸುವುದನ್ನು ನೋಡಿ ಜಗರಾಯನ ದಂಡಿನವರು ಗಾಬರಿಯಾಗಿ ಮುತ್ತಿಗೆಯನ್ನು ಎಬ್ಬಿಸಿದ್ದರು. ದಂಡಿನವರಲ್ಲಿ ಪರಾಕ್ರಮಕ್ಕಿಂತ ಡಾಂಭಿಕತನವು ವಿಶೇಷವಾಗಿದ್ದದ್ದರಿಂದ ಪ್ರತ್ಯಕ್ಷ ಯುದ್ಧಪ್ರಸಂಗವು ಒದಗಿದಾಗ ಅವರು ವೈರಿಗಳಿಗೆ ಎದುರಾಗುವುದಕ್ಕಿಂತ ಬೆನ್ನು ತೋರಿಸಲಿಕ್ಕೇ ಮುಂದುವರಿಯುತ್ತಿದ್ದರು. ಎಚ್ಚಮನಾಯಕನು ತನ್ನ ದಂಡಿನದೊಂದು ಭಾಗಕ್ಕೆ ತಿರುಮಲನನ್ನು ಮುಖ್ಯನನ್ನಾಗಿ ನಿಯಮಿಸಿ ವೈರಿಗಳನ್ನು ಬೆನ್ನಟ್ಟಲಿಕ್ಕೆ ಕಳಿಸಿ, ತಾನು ಚಂದ್ರಗಿರಿಗೆ ಹೊರಡುವ ಸಿದ್ಧತೆಯಲ್ಲಿ ತೊಡಗಿದನು. ತಮ್ಮ ಪಕ್ಷದ ಮುದ್ದುರಂಗನು ಜಗರಾಯನನ್ನು ಕೂಡಿ ಮಾಡಿದ ಆಟಕ್ಕಾಗಿ ಎಚ್ಚಮನಾಯಕನು ಸಂತಾಪಗೊಂಡನು. ಇನ್ನು ಕ್ಷಣವಾದರೂ ವಿಲಂಬಮಾಡದೆ ಚಂದ್ರಗಿರಿಗೆ ಹೋಗಿ ದುಷ್ಟ ಜಗರಾಯನ ಪಾರುಪತ್ಯವನ್ನು ಮಾಡಿ ಸ್ವಾಮಿಯ ದರ್ಶನವನ್ನು ಯಾವಾಗ ತಕ್ಕೊಂಡೇನೆಂದು ಆತನು ಆತುರಪಡಹತ್ತಿದ್ದನು. ಸೂರ್ಯೋದಯದ ಪೂರ್ವದಲ್ಲಿ ಹೊರಡುವ ಸಿದ್ಧತೆಯಾಯಿತು. ತಿರುಮಲನು ವೈರಿಗಳನ್ನು ಸುಲಿದು ಓಡಿಸಿ ಕೆಲವನ್ನು ಸೆರೆಹಿಡಕೊಂಡು ಬಂದನು. ಚಂದ್ರಗಿರಿಗೆ ಹೋಗುವ ಅವಸರವಿದ್ದದ್ದರಿಂದ ಹೆಚ್ಚಿನ ಯಾವ ವಿಚಾರದ ಗೊಡವೆಗೂ ಹೋಗದೆ, ಎಚ್ಚಮನಾಯಕನು ದುರ್ಗದ ಸಂರಕ್ಷಣಕ್ಕೆ ಬೇಕಾಗುವಷ್ಟು ಸೈನ್ಯವನ್ನು ಬಿಟ್ಟು ಉಳಿದ ದಂಡಿನೊಡನೆ ಚಂದ್ರಗಿರಿಗೆ ಸಾಗಿದನು. ತೇಜೋವಿಶೇಷದಿಂದ ಅಲೌಕಿಕತೆಯನ್ನು ಪ್ರಕಟಿಸುವ ಕುಮುದಿನಿಯು ಪುರುಷವೇಷದಿಂದ ಅಶ್ವಾರೂಢಳಾಗಿ ಬೆನ್ನು ಹತ್ತಿರುವುದನ್ನು ನೋಡಿ ನಾಯಕನು, ತನಗೊಂದು ದೊಡ್ಡ ಬೆಂಬಲವು ದೊರೆತಂತೆ ಸಮಾಧಾನಪಡುತ್ತಲಿದ್ದನು. ಕಾರ್ಯಾನುಕೂಲೆಯಾದ ಅರ್ಧಾಂಗಿಯಳ ಪುರುಷನೇ ಧನ್ಯನು.

ಎಚ್ಚಮನಾಯಕನು ನಡುವೆ ಎಲ್ಲಿಯೂ ನಿಲ್ಲದೆ ಮಾರ್ಗವನ್ನು ಕ್ರಮಿಸಿಹೋಗಿ ಚಂದ್ರಗಿರಿಗೆ ಮುಟ್ಟಿದನು. ಆದರೆ ವೀರ ನರಸಿಂಗನಿಂದ ಅಲ್ಲಿಯ ವರ್ತಮಾನವನ್ನು ಕೇಳಿದ ಕೂಡಲೆ ಆತನು ಚಿಂತಾಕ್ರಾಂತನಾಗಿ, ತನಗೆ ಅತ್ಯಂತಾಪ್ತಳಾದ ಕುಮುದಿನಿಯೊಡನೆ ಆಪ್ತಾಲೋಚನೆಯನ್ನು ಮಾಡತೊಡಗಿದನು.

## ಅಸ್ತಿವಾರ

ಇತ್ತ ಚಂದ್ರಗಿರಿಯಲ್ಲಿ ಎಚ್ಚಮನಾಯಕನ ಸೇನಾಪತಿಯಾದ ವೀರ ನರಸಿಂಹನು ಬಂಡುಗಾರರ ಮೇಲೆ ಬಿದ್ದು ಶೌರ್ಯದಿಂದ ಕಾದುತ್ತಿರುವಾಗ ದಾಳಿಗಾರರು ಅರಮನೆಯ ಬಾಗಿಲುಗಳನ್ನು ಮುರಿದು ಒಳಗೆ ಹೊಕ್ಕರು. ಶತ್ರುಗಳ ದೊಡ್ಡ ಸೈನ್ಯದೊಡನೆ ಹೋರಾಡುವಾಗ ವೀರನರಸಿಂಹನ ಸ್ವಲ್ಪ ಸೈನ್ಯದಿಂದ ಆಗತಕ್ಕಷ್ಟು ಪ್ರಯೋಜನವಾಗಲಿಲ್ಲ. ಮಕರನಾಯಕನು ಅರಸನಿಗೆ–ನೀವು ಸಕುಟುಂಬವಾಗಿ ಶರಣುಬಂದರೆ, ನಿಮಗೇನೂ ಅಪಾಯ ಮಾಡುವುದಿಲ್ಲೆಂದು ವಚನಕೊಟ್ಟನು. ಆಗ ಆ ಬಡಪ್ರಾಣಿಯು ಮುಂದುಗಾಣದೆ ಹೆಂಡಿರು– ಮಕ್ಕಳೊಡನೆ ಮಕರರಾಯನ ಆಧೀನವಾಗಲು, ಜಗರಾಯನು ಆತನನ್ನು ಕುಟುಂಬ ಸಹಿತವಾಗಿ ಸೆರೆಯಲ್ಲಿಟ್ಟು ತನ್ನ ಮೊಮ್ಮಗನನ್ನು ಪಟ್ಟಕ್ಕೆ ಕುಳ್ಳಿರಿಸುವ ಉದ್ಯೋಗಕ್ಕೆ ತೊಡಗಿದನು. ಇತ್ತ ವೀರನರಸಿಂಗನು ಶೌರ್ಯದಿಂದ ಕಾದುತ್ತ ಕಾದುತ್ತ ತನ್ನ ದಂಡಿನೊಡನೆ ರಾಜಧಾನಿಯಿಂದ ಹೊರಬಿದ್ದು ಹೋಗಿ ತನ್ನ ಒಡೆಯನಾದ ಎಚ್ಚಮನಾಯಕನನ್ನು ಮೇಲೆ ಹೇಳಿದಂತೆ ಕೂಡಿಕೊಂಡನು ರಾಜಪಕ್ಷದ ಎದುರಾಳಿಗಳು ಯಾರೂ ಉಳಿಯದ್ದರಿಂದ ರಾಜಧಾನಿಯು ಸುಲಭವಾಗಿ ಜಗರಾಯನ ಕೈಸೇರಿತು. ಜಗರಾಯನು ಮೊಮ್ಮಗನನ್ನು ಪಟ್ಟಕ್ಕೆ ಕುಳ್ಳಿರಿಸಿ ಎಲ್ಲ ಸರದಾರರು ಆತನಿಗೆ ಶರಣು ಬರುವಂತೆ ಮಾಡಿದನು. ಈ ಹೊಸ ಅರಸನು ಅರಮನೆಯನ್ನು ಹೊಕ್ಕು ಅಲ್ಲಿಯ ಬೊಕ್ಕಸವನ್ನೂ, ಅಮೂಲ್ಯ ರತ್ನಗಳನ್ನೂ ತನ್ನ ವಶಕ್ಕೆ ತಕ್ಕೊಂಡನು. ವಜ್ರದ ಹರಳುಗಳಷ್ಟೇ ದೊಡ್ಡ ದೊಡ್ಡ ಮೂರು ಪೆಟ್ಟಿಗೆಗಳು ತುಂಬಿದ್ದವಂತೆ. ವಸ್ತ್ರಪ್ರಾವರಣಗಳಿಗೂ, ವರಹಪುತ್ತಳಿಗಳಿಗೂ ನೆಲೆಯಿದ್ದಿಲ್ಲ. ತಾಳೀಕೋಟೆಯ ಕಾಳಗದಲ್ಲಿ ಅಪಜಯವಾದಕೂಡಲೆ, ವಿಜಯನಗರದ ರಾಯರು ಆನೆ–ಒಂಟೆಗಳ ಮೇಲೆ ಹೇರಿಕೊಂಡು ಚಂದ್ರಗಿರಿಗೆ ತಂದಿದ್ದ ಸಂಪತ್ತು ಬಹುತರ ಅಚ್ಚಳಿದಿದ್ದಿಲ್ಲ. ಅಕಸ್ಮಾತ್ ಅರಸೊತ್ತಿಗೆಯು ಹೋದ್ದರಿಂದ ವ್ಯಸನಗ್ರಸ್ತನಾಗಿದ್ದ ಬ್ರಾಹ್ಮಣಪುತ್ರನು, ಜಗರಾಯನ ಪ್ರಯತ್ನದಿಂದ ಸಿಂಹಾಸನವೇರಲು, ಆತನು ಈ ಅಮೋಘವಾದ ಸಂಪತ್ತಿಗೆ ಒಡೆಯನಾಗಿ ರಾಜ್ಯಾಧಿಕಾರವನ್ನು ಪಡೆದನು. ಪ್ರಾಣಿಗಳ ಪ್ರಾರಬ್ಧವಶದಿಂದ ಕ್ಷಣದಲ್ಲಿ ತಿಪ್ಪೆಯು ಉಪ್ಪರಿಗೆಯಾಗುತ್ತದೆ, ಉಪ್ಪರಿಗೆಯು ತಿಪ್ಪೆಯಾಗುತ್ತದೆಂಬ ಮಾತು ಸುಳ್ಳಲ್ಲ

ಅರಸನ ಕಾರಾಗೃಹವಾಸದ ವೃತ್ತಾಂತವನ್ನು ಕೇಳಿ ಎಚ್ಚಮನಾಯಕನು ಸಂತಾಪಗೊಂಡು, ಮುಂದೆ ಏನು ಮಾಡಬೇಕೆಂದು ಚಿಂತಿಸಹತ್ತಿದನು. ಆತನ ಬಳಿಯಲ್ಲಿ ಎಂಟು ಸಾವಿರ ಸೈನ್ಯವಿತ್ತು, ಬಲಿಷ್ಠನಾದ ಜಗರಾಯನೊಡನೆ ಇಷ್ಟು ಸಣ್ಣ ಸೈನ್ಯದಿಂದ ಹೋರಾಡುವುದು ಅಶಕ್ಯವೆಂದು ತಿಳಿದು, ತನ್ನ ಪ್ರತಾಪದುರ್ಗಕ್ಕೆ ಹೋಗಿ ಹೆಚ್ಚು ಸೈನ್ಯವನ್ನು ಕೂಡಿಸಬೇಕೆಂದು ಮಾಡಿದನು. ಈ ಜಗತ್ತಿನಲ್ಲಿ ನ್ಯಾಯಾನ್ಯಾಯಗಳ ವಿಚಾರಮಾಡಿ, ನ್ಯಾಯದ ಪಕ್ಷವನ್ನು ಸ್ವೀಕರಿಸುವುದಕ್ಕಿಂತ, ಗೆದ್ದ ಎತ್ತಿನ ಬಾಲ ಹಿಡಿಯುವ ಜನರೇ ಯಾವಾಗಾದರೂ ವಿಶೇಷವಾಗಿರುವರು. ಸದ್ಯಕ್ಕೆ ಬಾಯಮ್ಮನ ಮಗನಾದ ಚಿಕ್ಕರಾಯನು ಸಿಂಹಾಸನವೇರಿದ್ದರಿಂದ, ಬಹುಜನ ಸರದಾರರು ಒಬ್ಬರ ಹಿಂದೊಬ್ಬರಂತೆ ಆತನನ್ನು ಕೂಡಿದರು; ಆದರೆ ಎಚ್ಚಮನಾಯಕನು ಅಂಥ ನೀಚತನಕ್ಕೆ ಮನಸ್ಸು ಮಾಡಲಿಲ್ಲ. ಜಗರಾಯನು ಆತನನ್ನು ಒಲಿಸಿಕೊಳ್ಳಲಿಕ್ಕೆ ನಡೆಸಿದ ಯತ್ನಗಳೆಲ್ಲ ವ್ಯರ್ಥವಾದವು. ಜಗರಾಯನು ತನ್ನ ಸಾಮರ್ಥ್ಯದ ಅಂಜಿಕೆಯನ್ನು ತೋರಿಸುವ ಉದ್ದೇಶದಿಂದ ಎಚ್ಚಮ ನಾಯಕನಿಗೆ–ಅದೂರದರ್ಶಿಯಾದ ತರುಣನಾಯಕನೇ, ನೀನು ಅಪಕ್ವ ವಿಚಾರದಿಂದ ಹೊಸ ಅರಸನಿಗೆ ಶರಣು ಬಾರದಿದ್ದರೆ, ನಿನ್ನ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲ. ನಿನ್ನ ಪಕ್ಷದ ಅರಸನು ಸಕುಟುಂಬವಾಗಿ ನಮ್ಮ ಸೆರೆಯಾಳಾಗಿದ್ದಾನೆ. ಪ್ರಕೃತದಲ್ಲಿ ಸಿಂಹಾಸನವೇರಿರುವ ದೊರೆಯು, ಕಾರಾಗೃಹದಲ್ಲಿದ್ದ ದೊರೆಯನ್ನು ಬೇಕಾದಹಾಗೆ ನಡೆಸಿಕೊಳ್ಳಬಹುದು; ಅಂತ ಪ್ರಸಂಗಬಂದರೆ, ಸಕುಟುಂಬವಾಗಿ ಆತನನ್ನು ಸಂಹರಿಸಲೂಬಹುದು. ಆ ಸ್ಥಿತಿಯಲ್ಲಿ ನಿನ್ನ ಪಕ್ಷದ ಅಂಕುರವು ಕೂಡ ಉಳಿಯುವುದು ಅಶಕ್ಯವಾಗಿರಲು, ನೀನು ಇನ್ನು ಯಾರ ಪಕ್ಷದಿಂದ ಹೋರಾಡುವವನು? ರಾಜಪಕ್ಷಪಾತಿಯಲ್ಲದ ನಿನ್ನಂಥ ಬಂಡುಗಾರನಿಗೆ ಆದಾವ ಮಾಂಡಲಿಕನು, ಇಲ್ಲವೆ ಸರದಾರನು ಸಹಾಯ ಮಾಡುವನು? ಇದನ್ನೆಲ್ಲ ವಿಚಾರಿಸಿ, ವಿವೇಕಿಯಾಗಿ ಹೊಸ ಅರಸನ ಪಕ್ಷವನ್ನು ಸ್ವೀಕರಿಸಿದರೆ, ಈಗಿದ್ದ ನಿನ್ನ ವೈಭವಾಧಿಕಾರಗಳೆಲ್ಲ ನಿನಗೆ ನಡೆಸಲ್ಪಡುವವು. ಇಲ್ಲದಿದ್ದರೆ ರಾಜದ್ರೋಹಿಯೆಂದು ನಿನ್ನ ಪಾರುಪತ್ಯ ಮಾಡಬೇಕಾಗುವುದು, ಎಂದು ಹೇಳಿಕಳಿಸಿದನು.

ಎಚ್ಚಮ್ಮ ನಾಯಕನು ಜಗರಾಯನ ಈ ಉನ್ಮತ್ತತನದ ಮಾತುಗಳಿಗೆ ಸೊಪ್ಪು ಹಾಕುವಂಥ ಹೇಡಿಯಿದ್ದಿಲ್ಲೆಂಬುದನ್ನು ವಾಚಕರು ಬಲ್ಲರು. ಆತನು ತನಗೆ ಉಪದೇಶ ಮಾಡಲಿಕ್ಕೆ ಬಂದ ವಕೀಲನ ಸಂಗಡ ಸ್ಪಷ್ಟವಾಗಿ ಹೇಳಿಕಳಿಸಿದನೇನೆಂದರೆ–ಜಗರಾಯಾ, ನಿನ್ನ ಹೊಸ ಅರಸು ಯಾರಿಗೆ ಹುಟ್ಟಿದವನೋ ಏನೋ! ಆತನ ಕುಲಗೋತ್ರಗಳು ಕೂಡ ಯಾರಿಗೂ ಗೊತ್ತಿಲ್ಲ, ಇಂಥವನಿಗೆ ನಾನು ಶರಣುಬರುವೆನೇ? ಶರಣು ಬಾರದಿದ್ದರೆ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲೆಂದು ನನಗೆ ಹೇಳಿಕಳಿಸಿರುತ್ತೀ, ಆದರೆ ಬೈಲಿಗೆ ಬಾ, ಯಾರ ಪರಿಣಾಮವು ಏನಾಗುತ್ತದೆಂಬುದು ತಾನೇ ಗೊತ್ತಾಗುವುದು. ನನ್ನ ವಿಚಾರಗಳು ಪಕ್ವವಿದ್ದರೇನು, ಅಪಕ್ವವಿದ್ದರೇನು, ಅವು ಶುದ್ಧಾಂತಃಕರಣದಿಂದ ಸ್ವಾಮಿಯ ಹಿತವನ್ನು ಧ್ಯೇಯವಾಗಿ ಇಟ್ಟುಕೊಂಡು ಹುಟ್ಟಿರುತ್ತವೆಂದು ಚೆನ್ನಾಗಿ ನೆನಪಿನಲ್ಲಿಡು. ಸ್ವಾಮಿಕಾರ್ಯಕ್ಕಾಗಿ ಬೆಂಕಿಯಲ್ಲಿ ಹಾರಿಕೊಳ್ಳಲಿಕ್ಕೂ ಎಚ್ಚಮನಾಯಕನು ಹಿಂದೆಮುಂದೆ ನೋಡುವಹಾಗಿಲ್ಲ! ಎಲೈ ಮುಟ್ಠಾಳನಾದ ರಾಯಾ, ಈಗ ನಮ್ಮ ಸ್ವಾಮಿಯನ್ನು

ವಿಶ್ವಾಸಘಾತದಿಂದ ಸಕುಟುಂಬ ಸೆರೆಯಲ್ಲಿಟ್ಟಿರುವೆಯಲ್ಲ? ಅದು ನಿನ್ನ ಪರಿಪಕ್ವ ವಿಚಾರದ ಫಲವಾಗಿರುವುದೇನು? ಈಗ ಪದಚ್ಯುತನಾಗಿರುವ ನಮ್ಮ ದೊರೆಯನ್ನು ಅಯೋಗ್ಯ ರೀತಿಯಿಂದ ನಡೆಸಿಕೊಳ್ಳಲಿಕ್ಕೆ ಇಲ್ಲವೆ ಆತನನ್ನು ಸಕುಟುಂಬ ನಾಶಮಾಡಲಿಕ್ಕೆ ನಿನಗೆ ಧೈರ್ಯ ಸಾಲದೆಂಬುದನ್ನು ನಾನು ಬಲ್ಲೆನು. ಒಂದು ಪಕ್ಷದಲ್ಲಿ ಅಂಥ ಸಾಹಸ ಕಾರ್ಯವನ್ನು ಮಾಡಿದರೆ, ನಿನ್ನ ಹಾಗು ನಿನ್ನ ಪಕ್ಷದ ಕಂಗಾಲ ದೊರೆಯ ಆಳಿಗಾಲವು ಒದಗಿತೆಂದು ಸೆರಗಿಗೆ ಗಂಟು ಹೊಡೆದು ನೆನಪಿನಲ್ಲಿಟ್ಟುಕೋ. ವಿಪನ್ನ ಸ್ಥಿತಿಯಲ್ಲಾದರೂ ಸ್ವಾಮಿಯ ಪಕ್ಷವನ್ನು ಅಂಟಿಕೊಂಡು ಕುಳಿತಿದ್ದ ನಾನು ರಾಜದ್ರೋಹಿಯಲ್ಲ! ಆದರೆ ನಿನ್ನ ಮೊಮ್ಮಗನು ರಾಜವಂಶಜನಲ್ಲೆಂಬದು ನಿನಗೆ ಗೊತ್ತಿದ್ದರೂ, ಸ್ವಪಕ್ಷಾಭಿಮಾನದಿಂದ ಹಕ್ಕುದಾರನಾದ ದೊರೆಯ ಅಹಿತಚಿಂತನ ಮಾಡುವ ನೀನು ರಾಜದ್ರೋಹಿಯು. ಸ್ವಾಮಿಕಾರ್ಯಕ್ಕಾಗಿ ದೇಹವನ್ನು ಒಪ್ಪಿಸಿದವರು ಹಾಳು ವೈಭವಾಧಿ ಕಾರಗಳನ್ನು ಕಟ್ಟಿಕೊಂಡು ಮಾಡುವುದೇನು? ತಾತ್ಕಾಲಿಕ ಲಾಭದಿಂದ ಉಬ್ಬಿದ ಜಗರಾಯಾ, ಕಚ್ಚುವ ನಾಯಿ ಬೊಗಳುವುದಿಲ್ಲೆಂಬುದನ್ನು ಮರೆತು ವ್ಯರ್ಥವಾದ ಬಾಯ್ಬಡಕತನವನ್ನು ತೋರಿಸುವ ಗೊಡವೆಗೆ ಹೋಗಬೇಡ! ರಾಜದ್ರೋಹಿಯಾದ ನೀನು ಶಾಸನಾರ್ಹನಿರುತ್ತೀ.

ಅಧಿಕಾರಸಂಪನ್ನನಾಗಿದ್ದ ಜಗರಾಯನಿಗೆ ನಾಯಕನ ಈ ಉದ್ಧಟತನದ ಮಾತುಗಳಿಂದ ಬೆಂಕಿಯಂಥ ಸಿಟ್ಟುಬಂದಿತು! ಆದರೆ ಕಾರ್ಯಸಾಧಕನಾದ ಆತನು ಅದನ್ನು ಹೊರಗೆ ತೋರಗೊಡಲಿಲ್ಲ. ಎಚ್ಚಮನಾಯಕನಂಥ ಸ್ವಾಮಿನಿಷ್ಠ ರಣಸೂರನೊಬ್ಬನು ವಶವಾದರೆ, ಅವನ ಮೊಮ್ಮಗನು ನಿಷ್ಕಂಟಕನಾಗುತ್ತಿದ್ದನು. ಈ ಸುಲಭ ಮಾರ್ಗವನ್ನು ಬಿಟ್ಟು, ಯುದ್ಧದಂಥ ಭಯಂಕರ ಮಾರ್ಗದಿಂದ ಹೋಗಲಿಕ್ಕೆ ಆ ಇಳಿಕೆಯ ರಕ್ತದ ಜಗರಾಯನ ಮನಸ್ಸು ಮೆಚ್ಚಲಿಲ್ಲ. ಆತನು ಯುದ್ಧವನ್ನು ತಪ್ಪಿಸಲಿಕ್ಕೆ ಅದಷ್ಟು ಯತ್ನಿಸಹತ್ತಿದನು. ಮಾನವಾಗಲಿ–ಅಪಮಾನ ವಾಗಲಿ, ಕೆಲಸವಾದರೆ ತೀರಿತೆಂದು ಹೊತ್ತು ಬಂದಹಾಗೆ ಕೊಡೆಹಿಡಿಯುವ ಕಳ್ಳಸ್ವಭಾವ ದವನು ಜಗರಾಯನು! ಕಾರ್ಯವಾಗಲಿ–ಆಗದಿರಲಿ ಮರ್ಯಾದೆಗೆ ಭಂಗಬಾರದಂತೆ ಸರಳ ಮಾರ್ಗದಿಂದ ನಡೆದು, ಒಂದು ಕಡತ ಎರಡು ತುಂಡು ಎಂಬಂತೆ ಒಂದು ಮಾರ್ಗದಿಂದ ನಡೆಯುವ ಸರಳಸ್ವಭಾವದವನು ಎಚ್ಚಮನಾಯಕನು. ಈ ವಿರುದ್ಧ ಸ್ವಭಾವದವರ ಸ್ನೇಹವು ಕೂಡುವ ಬಗೆಯೇನು? ಎಚ್ಚಮನಾಯಕನ ಸ್ವಭಾವಕ್ಕೆ ಜಗರಾಯನು ಅಂಜುತ್ತಿದ್ದನು! ಜಗರಾಯನ ಸ್ವಭಾವಕ್ಕೆ ಎಚ್ಚಮನಾಯಕನು ಸಂತಾಪಗೊಳ್ಳುತ್ತಿದ್ದನು. ಜಗರಾಯನು ನಾಯಕನೊಡನೆ ಯುದ್ಧ ಮಾಡಲಿಕ್ಕೆ ಹೆದರಿ, ತನ್ನ ಮಾನ ಮರ್ಯಾದೆಯ ಮಾತು ಬದಿಗಿಟ್ಟು ಒಳ್ಳೆಯ ಮಾತು ಗಳಿಂದಾಗಲಿ, ಲಂಚದಿಂದಾಗಲಿ ನಾಯಕನ ಮನಸ್ಸನ್ನು ತಿರುಗಿಸುವುದಕ್ಕಾಗಿ ಆತನ ಬಳಿಗೆ ಮತ್ತೆ ವಕೀಲರನ್ನು ಕಳಿಸಿದನು. ಆಗ ಎಚ್ಚಮನಾಯಕನು ವಕೀಲನಿಗೆ ಏನಯ್ಯಾ, ನಿಮ್ಮ ಒಡೆಯನ ಈ ಸೋಗಿನ ನಡತೆಯು ನಿನಗಾದರೂ ಸರಿಬರುತ್ತದೋ? ಆತನು ಮೊದಲು ನನ್ನನ್ನು ಬೆದರಿಸಿ ನೋಡಿದನು; ಆದರೆ ಅದರಿಂದ ಪ್ರಯೋಜನವಾಗದ್ದರಿಂದ ಈಗ ಸವಿಮಾತುಗಳಿಂದ ನನ್ನನ್ನು ರಮಿಸಲಿಕ್ಕೂ ಏನಾದರೂ ಆಶೆತೋರಿಸಿ ನನ್ನ ಬಾಯಲ್ಲಿ ನೀರು

ಬಿಡಿಸಲಿಕ್ಕೂ ನಿನ್ನನ್ನು ಕಳಿಸಿದ್ದಾನೆ. ಈ ಬಹು ರೂಪಕ್ಕೆ ಎಚ್ಚಮನಾಯಕನು ಮೆಚ್ಚತಕ್ಕವನಲ್ಲ, ಹೀಗೆ ವ್ಯರ್ಥವಾಗಿ ಆಯಾಸ ಪಡುವುದಕ್ಕಿಂತ ನನ್ನೊಬ್ಬನನ್ನು ಗೆದ್ದುಬಿಟ್ಟರೆ, ಮೊಮ್ಮಗನಿಗೆ ಯಾರೂ ಎದುರಾಳಿಗಳು ಉಳಿಯುವುದಿಲ್ಲೆಂದು ನಿಮ್ಮ ಒಡೆಯನಿಗೆ ಸ್ಪಷ್ಟವಾಗಿ ಹೇಳು. ಪಟ್ಟವನ್ನು ನಮ್ಮ ಒಡೆಯನಿಗೆ ಬಿಟ್ಟುಕೊಟ್ಟು, ಸ್ನೇಹಬಳಸಲಿಕ್ಕೆ ಒಪ್ಪಿಕೊಳ್ಳುವ ಪ್ರಸಂಗವಿದ್ದಲ್ಲಿ ಇನ್ನು ನನ್ನ ಬಳಿಗೆ ವಕೀಲನು ಬರಲಿ, ಇಲ್ಲದಿದ್ದರೆ ಸಮರಾಂಗಣದಲ್ಲಿಯೇ ಎಲ್ಲ ಮಾತಿನ ನಿರ್ಣಯವಾಗುವುದು, ಎಂದು ಹೇಳಿದನು. ಈ ಸಂಗತಿಯನ್ನು ವಕೀಲನು ಜಗರಾಯನಿಗೆ ತಿಳಿಸಲು ಆತನು ಎಚ್ಚಮನಾಯಕನ ಗೊಡವಿಯನ್ನು ಬಿಟ್ಟು ಬೇರೆ ಸರದಾರರನ್ನು ತನ್ನ ಕಡೆಗೆ ಒಲಿಸಿಕೊಳ್ಳುವ ಉದ್ಯೋಗವನ್ನು ಆರಂಭಿಸಿದನು.

ವಕೀಲನು ಹೋದಬಳಿಕ ಎಚ್ಚಮನಾಯಕನು ಡೇರೆಯಲ್ಲಿ ಒಬ್ಬನೇ ಕುಳಿತಿದ್ದನು. ಆಗ ಹೊರಗೆ ಒಂದು ತಾಸು ಹೊತ್ತು ಇರಬಹುದು. ಬಗೆ ಬಗೆಯ ವಿಚಾರಗಳಿಂದ ನಾಯಕನ ಚಿತ್ತವು ಅಸ್ವಸ್ಥವಾದ್ದರಿಂದ ಆತನು ಹೊರಗೆ ಹೋಗಲಿಲ್ಲ, ವಕೀಲನಿಗೆ ಸ್ಪಷ್ಟ ಉತ್ತರಕೊಟ್ಟಂತೆ, ಪ್ರಸಂಗದಲ್ಲಿ ತನ್ನ ಉತ್ತರದ ಗೌರವವನ್ನು ಕಾಯ್ದುಕೊಳ್ಳುವುದು ಕಠಿಣವೆಂಬ ಮಾತು ಆತನ ಮನಸ್ಸಿಗೆ ಹೊಳೆಯಹತ್ತಿತ್ತು. ಉತ್ತರಕುಮಾರನಂತೆ ಬೇಕಾದವರು ಮಾತಾಡಬಹುದು, ಆದರೆ ಮಾತಿನಂತೆ ಮಾಡಿತೋರಿಸುವುದು ವಿರಳ. ನಾಯಕನು ಬರಿಯ ಬಾಯಿಬಡಕನಿದ್ದಿಲ್ಲ, ಆಗಿನ ಕರ್ತೃತ್ವಶಾಲಿಗಳಲ್ಲಿ ಆತನ ಗಣನೆಯಿತ್ತು, ದಿನದಿನಕ್ಕೆ ಜಗರಾಯನ ದಂಡು ಹೆಚ್ಚುತ್ತ ಹೋಗಿ ಆತನು ಬಲಿಷ್ಠನಾಗುತ್ತ ನಡೆದಿದ್ದನು. ರಾಜಕುಟುಂಬವೇ ಜಗರಾಯನ ಕೈಯಲ್ಲಿ ಸಿಕ್ಕದ್ದರಿಂದ, ಎಚ್ಚಮನಾಯಕನ ಪಕ್ಷಕ್ಕೆ ಅರಸುಮನೆತನದ ಒಂದು ಅಂಕುರವು ಕೂಡ ಉಳಿದಿದ್ದಿಲ್ಲ. ಅದರಿಂದ ಮಾಂಡಲಿಕರೂ, ಸರದಾರರೂ, ದಂಡಾಳುಗಳೂ, ಪ್ರಜೆಗಳೂ ಎಚ್ಚಮನಾಯಕನ ಪಕ್ಷಕಟ್ಟಲಿಕ್ಕೆ ಹಿಂದೆಮುಂದೆ ನೋಡಹತ್ತಿದ್ದರಲ್ಲದೆ, ಈಗಿದ್ದವರು ಕೂಡ ಒಬ್ಬೊಬ್ಬರೇ ಜಗರಾಯನ ಕಡೆಗೆ ಹೋಗಹತ್ತಿದ್ದರು. ಇಂಥ ಪ್ರಸಂಗದಲ್ಲಿ ವಿಜಾಪುರದ ಬಾದಶಹನ ಸಹಾಯವನ್ನು ಪಡೆಯಬಹುದೆಂದು ನಾಯಕನು ನೆನಿಸಿದನು; ಆದರೆ ತಾನಾಗಿ ತನ್ನ ಮನೆಯನ್ನು ವೈರಿಗಳಿಗೆ ಸುಲಿಯಲಿಕ್ಕೆ ಬಿಟ್ಟುಕೊಟ್ಟಂತಾಗುತ್ತದೆಂಬ ವಿಚಾರವು ಮನಸ್ಸಿನಲ್ಲಿ ಬರಲು, ಆತನು ಆ ಪ್ರಸಕ್ತಿಯನ್ನು ಬಿಟ್ಟುಕೊಟ್ಟನು. ಈ ಪ್ರಸಂಗದಲ್ಲಿ ತಕ್ಕ ಹಾದಿಯನ್ನು ತೋರಿಸುವ ಹಿತಚಿಂತಕರೇ ನಾಯಕನಿಗೆ ಕಾಣದಾದರು. ಮನುಷ್ಯನು ಎಂಥ ತೀಕ್ಷ್ಣ ಬುದ್ಧಿಯವನಿದ್ದರೂ, ಪ್ರಸಂಗವಿಶೇಷದಲ್ಲಿ ಆತನಿಗೆ ಅನ್ಯರ ಬುದ್ಧಿವಾದದ ಅವಶ್ಯಕತೆಯು ಬೀಳುತ್ತದೆ. ನಾಯಕನು ಹೀಗೆ ಚಿಂತೆಮಾಡುತ್ತ ಕುಳಿತಿರಲು, ಕುಮುದಿನಿಯು ಅಲ್ಲಿಗೆ ಬಂದಳು. ಆಕೆಯ ಮನೋಹರ ವಾದ ಮುಖವನ್ನು ನೋಡಿದಕೂಡಲೆ, ನಾಯಕನ ಮನಸ್ಸು ಸಮಾಧಾನಹೊಂದಿತು. ಎಚ್ಚಮನಾಯಕನೂ, ಕುಮುದಿನಿಯೂ ಸ್ವಾಮಿಕಾರ್ಯಸಾಧನ ತತ್ಪರರಾಗಿ ಪತಿ-ಪತ್ನೀಭಾವ ವನ್ನು ಮರೆತು, ಶುದ್ಧಾಂತಃಕರಣದ ಮಿತ್ರರಂತೆ ನಡಕೊಳ್ಳುತ್ತಿದ್ದರು! ಕುಮುದಿನಿಯು ಮುಗುಳು ನಗೆಯಿಂದ ನಾಯಕನನ್ನು ನೋಡುತ್ತ ಇದೇನು? ನಾಯಕರು ಚಿಂತಾಕ್ರಾಂತ ರಾಗಿರುವಂತೆ ತೋರುತ್ತದೆ? ಕರ್ತೃತ್ವಶಾಲಿಗಳು ಈ ಕೆಟ್ಟ ಚಿಂತೆಗೆ ಒಳಗಾಗುವುದರಿಂದ ಕರ್ತವ್ಯ

ಪರಾಙ್ಮುಖತೆಯ ದೋಷಕ್ಕೆ ಗುರಿಯಾದಂತಾಗುವುದಿಲ್ಲವೆ? ''ಏನು ಮಾಡಬೇಕು–ಹ್ಯಾಗೆ ಮಾಡಬೇಕು'' ಎಂಬ ದ್ವಾದಶಾಕ್ಷರೀ ಮಂತ್ರವನ್ನು ಜಪಿಸುತ್ತ ಚಿಂತಾಮಗ್ನರಾಗಿ ಕುಳಿತು ಕೊಳ್ಳುವುದಕ್ಕಿಂತ, ತಟ್ಟನೆ ಉದ್ಯೋಗದ ದಿಶೆಯನ್ನು ಗೊತ್ತುಮಾಡಿಕೊಂಡು ಉದ್ಯೋಗ ತತ್ಪರರಾಗುವುದು ಹಿತಕರವು, ತಾವು, ಇಬ್ಬರು ವಕೀಲರಿಗೂ ಕೊಟ್ಟಿರುವ ಉತ್ತರಗಳನ್ನು ನಾನು ಕೇಳಿದ್ದೇನೆ. ಆ ಉತ್ತರಗಳು ನಿಮ್ಮಂಥ ನರವೀರರಿಗೆ ನಿಶ್ಚಯವಾಗಿ ಒಪ್ಪುತ್ತಲಿವೆ. ನಮ್ಮ ಪಕ್ಷವು ಸತ್ಪಕ್ಷವಾಗಿದ್ದರೂ, ರಾಜಪಕ್ಷದ ಒಂದು ಅಂಕುರವು ಕೂಡ ನಮ್ಮ ಕಡೆಗೆ ಇಲ್ಲದ್ದರಿಂದ ಅದು ಬಲಿಷ್ಠವಾಗಲಿಕ್ಕೆ ಪ್ರತಿಬಂಧವಾಗಿದೆ. ಈ ಮಾತನ್ನು ಜಗರಾಯನು, ಮೊದಲನೆಯ ವಕೀಲನ ಮುಖಾಂತರ ಸೂಚಿಸಿದ್ದನ್ನು ನಾಯಕರು ಮರೆತಿರಲಿಕ್ಕಿಲ್ಲ. ನಾವು ಹ್ಯಾಗಾದರೂ ಮಾಡಿ ಪ್ರತಿಬಂಧದಲ್ಲಿರುವ ಒಬ್ಬ ರಾಜಕುಮಾರನನ್ನಾದರೂ ಸಂಪಾದಿಸತಕ್ಕದ್ದು, ಎಂದು ಹೇಳಿ ನಾಯಕನನ್ನು ಉತ್ಸುಕತೆಯಿಂದ ನೋಡಹತ್ತಿದಳು.

ಕುಮುದಿನಿಯ ಮಾತಿಗೆ ನಾಯಕನು ಒಡಂಬಟ್ಟು—ಪ್ರಿಯೇ, ನಿನ್ನ ಮಾತುಗಳು ಬಹು ಸಮರ್ಪಕವಾದವುಗಳು. ಇತ್ತ ಬಾ, ಕುಳಿತುಕೋ, ನಿಂತು ಮಾತಾಡುವುದೇಕೆ? ಅಲ್ಪ ವಯಸ್ಸಳಾದ ನಿನ್ನ ವಿಚಾರಗಳನ್ನು ಕೇಳಿ ನನಗೆ ಕೌತುಕವಾಗುತ್ತದೆ. ಒಬ್ಬ ರಾಜಪುತ್ರನು ಇಂದು ನಮ್ಮ ಪಾಳಯಕ್ಕೆ ಬಂದರೆ, ನಾಳಿನಿಂದಲೇ ನಮ್ಮ ಸೈನ್ಯವು ಸಹಸ್ರ ಸಂಖ್ಯಾಕರವಾಗಿ ಬೆಳೆಯುತ್ತ ಹೋಗುವುದರಲ್ಲಿ ಸಂಶಯವಿಲ್ಲ ಆದರೆ ರಾಜಪುತ್ರನನ್ನು ಕರೆತರುವ ಬಗೆ ಹೇಗೆ? ಕಾರಾಗೃಹದಲ್ಲಿರುವ ದೊರೆಗಳನ್ನು ನಾನೇ ಉಪಾಯದಿಂದ ಕಂಡು, ಒಬ್ಬ ರಾಜ ಪುತ್ರನನ್ನು ಸಂಪಾದಿಸಬೇಕೆಂದು ಯೋಚಿಸಿದೆನು; ಏನು ಮಾಡಲಿ, ಯೋಗ್ಯ ಉಪಾಯವೇ ತೋಚ ಲೊಲ್ಲದು. ನನ್ನ ಎಂಟುಸಾವಿರ ಸೈನ್ಯದೊಡನೆ ರಾತ್ರಿ ಚಂದ್ರಗಿರಿಯ ಮೇಲೆ ಸಾಗಿಹೋಗಿ, ಎದುರಾದವರನ್ನು ತುಂಡರಿಸುತ್ತ ಕಾರಾ ಗೃಹದಲ್ಲಿರುವ ರಾಜಕುಟುಂಬವನ್ನೇ ಬಿಡಿಸಿಕೊಂಡು ಬರಬೇಕೆಂಬ ವಿಚಾರವು ಮನಸ್ಸಿನಲ್ಲಿ ಬರುವುದು; ಆದರೆ ನಾನು ಸಮೀಪದಲ್ಲಿರುವೆನೆಂದು ಹೆದರಿ ಜಗರಾಯನು ಹಗಲಿರುಳು ಜಾಗರೂಕನಾಗಿ ದೊಡ್ಡ ಸೈನ್ಯದೊಡನೆ ಪಟ್ಟಣವನ್ನು ರಕ್ಷಿಸುತ್ತಿರುವುದರಿಂದ, ಈ ವಿಚಾರದ ಫಲವು ಮೊದಲ ತುತ್ತಿಗೇ ನೊಣ ತಿಂದಂತಾಗಬಹುದೆಂಬ ಭಯವು ಬಾಧಿಸತೊಡಗಿದೆ; ಮುಂದೆ ಮಹತ್ವದ ಕೆಲಸಗಳು ಇರುವುದರಿಂದ ಈಗಲೇ ಅಂಥ ಸಾಹಸಕ್ಕೆ ಹೋಗುವುದು ಯೋಗ್ಯವಾಗದು. ಮರೆಮೋಸಗಳಿಗೆ ನನ್ನ ಮನಸ್ಸು ಮೆಚ್ಚದಿದ್ದರೂ, ಮುಯ್ಯಕ್ಕೆಮುಯ್ಯ ತೀರಿಸುವುದಕ್ಕಾಗಿ ಏನಾದರೂ ಮೋಸಮಾಡಿ ಕಾರ್ಯ ಸಾಧಿಸಬೇಕೆಂದು ಯೋಚಿಸಿದರೆ, ಆ ಕೆಲಸದಲ್ಲಿ ಪ್ರವೀಣನಲ್ಲದ ನನಗೆ ಮೋಸದ ಉಪಾಯಗಳೇ ಸೂಚಿಸದಾಗಿವೆ; ಆದರೆ ಪ್ರಿಯೆ ಕುಮುದಿನೀ, ಏನು ಮಾಡಬೇಕು ಹೇಳು? ರಾಜಪುತ್ರರು ನಮ್ಮ ಪಾಳಯಕ್ಕೆ ದಯಮಾಡಿಸಿ, ಅದನ್ನು ಸನಾಥವಾಗಿ ಹ್ಯಾಗೆ ಮಾಡ್ಯಾರು? ಚಿಕ್ಕವಳಾದರೂ ನೀನು ಉಪಾಯಕೋವಿದಳಿರುತ್ತೀ. ಸ್ವಾಭಾವಿಕವಾಗಿಯೇ ನಿನ್ನ ಬುದ್ಧಿಯು ತೀಕ್ಷ್ಣವಾಗಿರುತ್ತದೆ. ನೋಡು, ಏನಾದರೂ ಹಂಚಿಕೆಯು ಗೊತ್ತಾದರೆ ಹೇಳು.

ನಾಯಕನ ಈ ಉತ್ತೇಜನಪರವಾದ ಮಾತುಗಳನ್ನು ಕೇಳಿ ಕುಮುದಿನಿಯು ಯೋಚಿಸುತ್ತ ಸುಮ್ಮನೆ ಕುಳಿತುಕೊಂಡಳು. ಆಕೆಯ ಆಗಿನ ಗಂಭೀರ ಮುದ್ರೆಯು ವರ್ಣಿಸತಕ್ಕದ್ದಾಗಿತ್ತು. ಆ ಶುದ್ಧಾಂತಃಕರಣದ ಪ್ರಮದೆಯು ಗುರುಸ್ತವನ ಮಾಡುತ್ತ ಏಕಾಗ್ರ ಚಿತ್ತದಿಂದ ಉಪಾಯವನ್ನು ಚಿಂತಿಸಹತ್ತಿದಳು. ತಟ್ಟನೆ ಸಮರ್ಪಕವಾದ ಉಪಾಯವು ತೋಚಲೊಲ್ಲದು. ಪತಿಯ ಪ್ರಸನ್ನತೆಯನ್ನು ಪಡೆಯುವ ಪ್ರಥಮ ಪ್ರಸಂಗವು ಎಲ್ಲಿ ವ್ಯರ್ಥವಾಗುವುದೋ, ಎಂದು ಚಿಂತಿಸುತ್ತ ತಾನು ಕುಳಿತ ಡೇರೆಯಲ್ಲಿ ಅತ್ತಿತ್ತ ಸಹಜವಾಗಿ ನೋಡಿದಳು. ಅಲ್ಲಿ ಒತ್ತಟ್ಟಿಗೆ ಅಗಸನು ಒಗೆದಿಟ್ಟಿದ್ದ ಬಟ್ಟೆಗಳ ರಾಶಿಯು ಆಕೆಯ ಕಣ್ಣಿಗೆ ಬಿದ್ದಿತು. ಬಟ್ಟೆಗಳ ನೆವದಿಂದ ಆಕೆಗೆ ಅಗಸನ ನೆನಪಾಗಲು, ಕೂಡಲೆ ಯೋಗ್ಯವಾದ ಉಪಾಯವು ಆಕೆಗೆ ತೋಚಿತು. ಆಗ ಆ ಮುಗ್ಧೆಯು ಉತ್ಸಾಹದಿಂದ ನಾಯಕನನ್ನು ಕುರಿತು–ಒಡೆಯರೇ, ಮಹತ್ವದ ಕಾರ್ಯಕ್ಕೆ ಕೈ ಹಾಕಿರುವ ತಾವು, ಸಹಸಾ ಅಷ್ಟಕ್ಕಿಷ್ಟಕ್ಕೆ ಸಹಾಯಮಾಡುವುದು ಹಿತಕರವಲ್ಲ. ತಾವು ಸ್ಥಳಬಿಟ್ಟು ಕದಲದೆ ಇದ್ದಲ್ಲಿಂದಲೇ ಕೆಲಸ ಮಾಡಿಸಬೇಕು. ಇಂಥ ಬಿಕ್ಕಟ್ಟಿನ ಪ್ರಸಂಗದಲ್ಲಿ ಅವಸರವೂ, ಗದ್ದಲವೂ ಕೆಲಸದವಲ್ಲ. ರಾಜಪುತ್ರರನ್ನು ಸಂಪಾದಿಸುವ ಉಪಾಯವು ಬಹು ಗೂಢ ವಾದದ್ದಿರಲಿಕ್ಕೇ ಬೇಕು. ರಣಪಂಡಿತರಾದ ತಾವು, ತಟ್ಟನೆ ಚಂದ್ರಗಿರಿಗೆ ದಾಳಿಯನ್ನಿಟ್ಟು, ವೈರಿಗಳನ್ನು ತುಂಡರಿಸಿ ದೊರೆಗಳ ಬಂಧವಿಮೋಚನ ಮಾಡಲಾರಿರೆಂತಲ್ಲ; ಆದರೆ ದುಷ್ಟ ಜಗರಾಯನು, ಕಲಹದ ಮೂಲವೇ ಕಡಿದುಹೋಗಲೆಂದು ಕ್ರೂರತನದಿಂದ ದೊರೆಗಳ ಕುಟುಂಬವನ್ನು ಸಂಹರಿಸಿದರೆ ಮಾಡುವುದೇನು? ಉಗುರಿನಿಂದ ಹೋಗುವುದಕ್ಕೆ ಕೊಡಲಿಯನ್ನು ತಕ್ಕೊಳ್ಳುವುದು ಸರಿಯಲ್ಲ. ತಮ್ಮ ಪುಣ್ಯ ಪ್ರಭಾವದಿಂದ ನನಗೊಂದು ಉಪಾಯವು ತೋಚಿರುತ್ತದೆ. ಸೆರೆಮನೆಯಲ್ಲಿದ್ದ ಅರಸರ ಅರಿವೆಗಳನ್ನು ಒಗೆಯುವ ಅಗಸನಿಂದ ಈ ಕಾರ್ಯವಾಗಬಹುದಾಗಿದೆ. ಪ್ರಸಂಗವಿಶೇಷದಲ್ಲಿ ಕ್ಷುಲ್ಲಕ ಜನರಿಂದ ಮಹತ್ವದ ಕಾರ್ಯಗಳು ಸಾಧಿಸುವುದುಂಟು. ಈಗಲೆ ಅಗಸನನ್ನಷ್ಟು ಕರೆಸಿಕೊಟ್ಟು, ನಾನು ಹೇಳಿದಂತೆ ಕೇಳಲು ಆತನನ್ನು ಒಡಂಬಡಿಸಿಕೊಟ್ಟರೆ, ಇನ್ನು ಒಂದು ತಿಂಗಳೊಳಗಾಗಿ ರಾಜಪುತ್ರರನ್ನು ತಮ್ಮ ಪಾಳಯಕ್ಕೆ ಬಿಜಯ ಮಾಡಿಸುವೆನು. ಈ ಸ್ವಾಮಿಕಾರ್ಯವನ್ನಷ್ಟು ನನಗೆ ಒಪ್ಪಿಸಿ, ಅದನ್ನು ಸಾಧಿಸುವ ವಿಷಯವಾಗಿ ನನಗೆ ಸಂಪೂರ್ಣ ಸ್ವಾತಂತ್ರ್ಯವನ್ನು ಕೊಡಬೇಕು. ನಾಯಕರೇ, ನಾನು ಅಬಲೆಯು, ಅಪ್ರಬುದ್ಧಳು, ಮೇಲೆ ಅನನುಭವಿಯು, ಎಂದು ನನ್ನಲ್ಲಿ ಅವಿಶ್ವಾಸವನ್ನು ಮಾತ್ರ ಮಾಡಬೇಡಿರಿ ಕಂಡಿರಾ! ಸಮರ್ಥನಾದ ಸದ್ಗುರುವಿನ ಕೃಪೆಯಿಂದಲೂ, ತಮ್ಮ ಪುಣ್ಯ ಪ್ರತಾಪದಿಂದಲೂ ಈ ಮಹತ್ವದ ಕಾರ್ಯವು ನನ್ನಿಂದ ನಿಶ್ಚಯವಾಗಿ ಸಾಧಿಸುವುದು!

ಸ್ವಾಮಿಕಾರ್ಯದ ವಿಷಯವಾಗಿ ಅತ್ಯಂತಾಸಕ್ತಿಯುಳ್ಳ ನಾಯಕನು, ಯಾರ ಪುಣ್ಯದಿಂದಲೇ ಆಗಲೊಲ್ಲದೇಕೆ, ಕಾರ್ಯವು ಸಾಧಿಸಿದರಾಯಿತೆಂದು ತಿಳಿದು ಕುಮುದಿನಿಯ ಮಾತಿಗೆ ಒಡಂಬಟ್ಟು ಅಗಸನನ್ನು ಕರೆಸಿಕೊಟ್ಟನು. ಅಗಸನೂ ಕುಮುದಿನಿಯು ಹೇಳಿದಂತೆ ಕೇಳಲು ಒಡಂಬಟ್ಟನು. ಮೊದಲಿನಿಂದಲೇ ಕುಮುದಿನಿಯ ಯೋಗ್ಯತೆಯಲ್ಲಿ ನಾಯಕನ ವಿಶ್ವಾಸ ಬಹಳ. ಅದರಲ್ಲಿ ತನ್ನ ಪ್ರಾಣವನ್ನು ರಕ್ಷಿಸಿದಂದಿನಿಂದಂತೂ ಆತನು ಕುಮುದಿನಿಯನ್ನು

ಅಲೌಕಿಕ ಸ್ತ್ರೀಯಳೆಂದೇ ಭಾವಿಸಿದ್ದನು. ಉಪಾಯವೇನು ಯೋಚಿಸಿರುವೆಯೆಂದು ಸಹ ಆತನು ಕುಮುದಿನಿಯಲ್ಲಿ ಕೇಳಲಿಲ್ಲ. ಅವಳು ಕೇಳಿಕೊಂಡ ಸಹಾಯವನ್ನಷ್ಟು ಆಸ್ಥೆಯಿಂದ ಒದಗಿಸಿ ಕೊಟ್ಟನು. ಕುಮುದಿನಿಯು ತನ್ನ ಪುರುಷವೇಷವನ್ನು ಬಿಟ್ಟು, ಅಗಸರ ಜಾತಿಗೆ ಒಪ್ಪುವಂಥ ಉಡುಪು ತೊಡುಪುಗಳನ್ನು ಧರಿಸಿ ಅಗಸನ ಸಂಗಡ ನಡೆದಳು. ಸ್ವಾಮಿನಿಷ್ಠರಾದ ಇಬ್ಬರು ದಾಸಿಯರೂ, ಇಬ್ಬರು ಸೇವಕರೂ ಕುಮುದಿನಿಯನ್ನು ಹಿಂಬಾಲಿಸಿದರು. ಸರಳಸ್ವಭಾವದವಳೂ, ಸಚ್ಚರಿತ್ರಳೂ, ಸತ್ವಶೀಲಳೂ ಆದ ಕುಮುದಿನಿಯು ಕಾರ್ಯಸಾಧನತತ್ಪರಳಾಗಿ, ಅಗಸರ ಮನೆಯ ಬಳಿಯಲ್ಲಿಯ ಒಂದು ಮನೆಯಲ್ಲಿದ್ದು ಕಾರ್ಯವನ್ನು ಸಾಧಿಸತೊಡಗಿದಳು. ಪ್ರತಿನಿತ್ಯ ಒಗೆದ ಬಟ್ಟೆಗಳದೊಂದು ಗಂಟನ್ನು ಹೊತ್ತುಕೊಂಡು ಅಗಸನೊಡನೆ ಕಾರಾಗೃಹಕ್ಕೆ ಹೋಗುವುದು ಕುಮುದಿನಿಯ ಕೆಲಸವಾಗಿತ್ತು ಮನೆಗೆ ಬರುವಾಗ ಒಮ್ಮೊಮ್ಮೆ ಅಗಸನೊಡನೆ ಮೈಲಿಗೆಯ ಬಟ್ಟೆಗಳದೊಂದು ಗಂಟನ್ನು ಹೊತ್ತುಕೊಂಡು ಬರಲಿಕ್ಕೂ ಆಕೆಯು ಹಿಂದೆಮುಂದೆ ನೋಡುತ್ತಿದ್ದಿಲ್ಲ. ಕೈಕೊಂಡ ಕಾರ್ಯವನ್ನು ಸಾಧಿಸುವಾಗ ಮಾನಾಪಮಾನಗಳನ್ನೂ ಕಷ್ಟ– ಶ್ರಮಗಳನ್ನೂ, ಮಹಾತ್ಮರು ಎಣಿಸುವುದಿಲ್ಲೆಂಬ ಮಾತು ಕುಮುದಿನಿಯ ಕೃತಿಯಿಂದ ಸ್ಪಷ್ಟವಾಗುತ್ತದೆ. ಎಚ್ಚಮನಾಯಕನಂಥ ಸ್ವಾಭಿಮಾನಿಯಾದ ತರುಣವೀರನು ಕೂಡ, ತನ್ನ ಹೆಂಡತಿಯ ಈ ಸಾಹಸವು ಅಪಮಾನಕರವೆಂದು ಎಣಿಸದಿದ್ದದ್ದರ ಮರ್ಮವನ್ನಾದರೂ ವಾಚಕರು ವಿಚಾರಿಸ ಬಹುದಾಗಿದೆ. ತಮ್ಮ ಮನೆಯ ಕೆಲಸವನ್ನು ತಾವು ಕೈಮುಟ್ಟಿ ಮಾಡಲು ಆತಂಕಪಟ್ಟು, ಕೆಲಸ ಕೆಡಿಸಿಕೊಂಡು ಪೇಚಾಡುವ ದುರಭಿಮಾನಿಗಳಾದ ಸ್ತ್ರೀ–ಪುರುಷರು, ಕುಮುದಿನಿಯ ಈ ಕಾರ್ಯದಕ್ಷತೆಯನ್ನು ನೋಡಿ ಬುದ್ಧಿಗಲಿತರೆ ನೆಟ್ಟಗಾದೀತು.

ಲೋಕೋತ್ತರ ಸುಂದರಿಯಾದ ಕುಮುದಿನಿಯು ಹದಿನೆಂಟು ವರ್ಷದ ಪ್ರಾಯ ಸ್ಥಳಿದ್ದಳೆಂಬುದನ್ನು ನಮ್ಮ ವಾಚಕರು ಬಲ್ಲರು. ಆಕೆಯನ್ನು ನೋಡಿದ ಪುರುಷಮಾತ್ರ ಮರುಳಾಗುವುದಂತು ಇರಲಿ, ಸ್ತ್ರೀಯರು ಕೂಡ ನಿರ್ವಂಚನೆಯಿಂದ ಆಕೆಯ ಸೌಂದರ್ಯಕ್ಕೆ ತಲೆದೂಗಿ, ಆಕೆಯ ಸದ್ಗುಣಗಳಿಗಾಗಿ ಆಕೆಯನ್ನು ತುಂಬಾ ಪ್ರೀತಿಸುತ್ತಿದ್ದರು. ಕಾರಾಗೃಹದ ರಕ್ಷಕರಿಗಂತು ಕುಮುದಿನಿಯ ದರ್ಶನವೂ, ಸಂಭಾಷಣದ ಯೋಗವೂ ಅಲಭ್ಯ ಲಾಭಗಳಾಗಿ ತೋರಹತ್ತಿದವು. ಅಗಸನ ಬಳಿಯಲ್ಲಿ ಇಂಥ ರತ್ನವಿರುವುದು ಪರಮಾಶ್ಚರ್ಯವೆಂದು ಜನಸಾಮಾನ್ಯರು ಹಲವು ಬಗೆಯಾಗಿ ಆಕ್ಷೇಪಿಸುತ್ತಿದ್ದರಲ್ಲದೆ ಅವರಲ್ಲಿಯ ಎಷ್ಟೋ ಅಧಮರು, ಈ ರತ್ನವು ಅಗಸನ ಬಳಿಯಲ್ಲಿರುವುದರಿಂದ ಸುಲಭಸಾಧ್ಯವೆಂದು ಮನಸ್ಸಿನಲ್ಲಿ ಮಂಡಿಗೆ ತಿನ್ನುತ್ತಿದ್ದರು. ಕುಮುದಿನಿಯ ಯೋಗದಿಂದ ಅಗಸನ ಯೋಗ್ಯತೆಯೂ, ಪ್ರತಿಷ್ಠೆಯೂ ಹೆಚ್ಚಿದಂತಾದವು. ಆತನ ಮೇಲಿನ ಕಾವಲುಗಾರರ ಸಂಶಯವು ಕಡಿಮೆಯಾಗಿ ಅವರು ಒಂದು ಬಗೆಯಿಂದ ಅಗಸನ ಪ್ರಸನ್ನತೆಯನ್ನು ಪಡೆಯಲು ಯತ್ನಿಸಹತ್ತಿದರು. ಕಾರಾಗೃಹದಲ್ಲಿ ಹೋಗುವಾಗೂ, ಕಾರಾಗೃಹದಿಂದ ಹೊರಗೆ ಬರುವಾಗೂ ಅಗಸನನ್ನು ಶೋಧಿಸುವುದು ಕಾವಲುಗಾರರ ನಿತ್ಯಕ್ರಮವಾಗಿತ್ತು ಆದರೆ ಕುಮುದಿನಿಯ ಮುರವತ್ತಿನಿಂದ ಈ ನಿತ್ಯಕ್ರಮದಲ್ಲಿ ಶೈಥಿಲ್ಯವು ಉತ್ಪನ್ನವಾಗಹತ್ತಿ ಬರಬರುತ್ತ ಅಗಸನನ್ನು ಶೋಧಿಸುವುದು ಅನವಶ್ಯಕವೆಂದು

ಕಾವಲುಗಾರರು ಭಾವಿಸಹತ್ತಿದರು. ಇದನ್ನು ನೋಡಿ ಕುಮುದಿನಿಯು ಸಮಾಧಾನಪಡಹತ್ತಿದಳು. ಕುಮುದಿನಿಯನ್ನು ನೋಡಿದ ಪುರುಷಮಾತ್ರರು ಕಲ್ಪನಾಮಯರಾಗಿ ಆ ಪ್ರಮದೆಯನ್ನು ಬಹುವಿಧವಾಗಿ ಕಂಡರೂ, ಸರಳಸ್ವಭಾವದ ಕುಮುದಿನಿಯ ನಡೆನುಡಿಗಳಲ್ಲಿ ತಿಲಮಾತ್ರವೂ ಹೆಚ್ಚುಕಡಿಮೆಯಾಗಿದ್ದಿಲ್ಲ. ಆಕೆಯು ಪುರುಷಮಾತ್ರರನ್ನು ಬಂಧುಭಾವನೆಯಿಂದ ಏಕರೂಪವಾಗಿಯೇ ಕಾಣುತ್ತಿದ್ದಳು. ಸ್ತ್ರೀಯರು ತಾವು ಇರುವ ಹಾಗೆ ಇದ್ದರೂ, ಕುಹಕರಾದ ಪುರುಷರು ತಮ್ಮ ಕುಕಲ್ಪನೆಯಿಂದ ಅವರ ಮೇಲೆ ಇಲ್ಲದ ಆರೋಪಗಳನ್ನು ಹೊರಿಸುವುದು ಅಪರೂಪವಲ್ಲ. ಕಾವಲುಗಾರರಲ್ಲಿ ಒಬ್ಬ ರಾಚಿದೇವನ ಹೊರತು ಉಳಿದವರು ವಿಷಯಾಸಕ್ತರೂ, ಸ್ವಾರ್ಥಪರಾಯಣರೂ, ದುರ್ವ್ಯಸನಿಗಳೂ ಆಗಿದ್ದರು. ಅವರ ಪರಾಕ್ರಮವನ್ನು, ಹುರಿಮಾಡಿದ ಮೀಸೆ, ದೊಡ್ಡ ಢಾಲು, ಸೈಲಾದ ಚಣ್ಣ, ಹಿರಿದ ಕತ್ತಿ, ಅರ್ಭಟದ ಮಾತು ಮುಂತಾದ ಬಾಹ್ಯ ಚಿಹ್ನೆಗಳಿಂದಲೇ ಅರಿಯಬೇಕಾಗಿತ್ತಲ್ಲದೆ, ಕೃತಿಯಿಂದ ಅರಿಯುವ ಹಾಗಿದ್ದಿಲ್ಲ. ನಿಖರದ ಯುದ್ಧಪ್ರಸಂಗಗಳೊದಗಿದರೆ, ಓಡಿಹೋಗುವ ಜನರೇ ಬಹಳ. ವಿಷಯಸುಖಕ್ಕೆ ಮೆಚ್ಚಿದ ಡಾಂಭಿಕರಾದ ಆ ಹೇಡಿ ಕಾವಲುಗಾರರು, ದುರ್ಬಲರನ್ನು ನೀಚತನದಿಂದ ರಸಾತಳಕ್ಕೆ ಮೆಟ್ಟುವುದರಲ್ಲಿಯೂ, ಸಬಲರ ಕಾಲಿನಿಂದ ಎಗ್ಗಿಲ್ಲದೆ ಒದೆಸಿಕೊಳ್ಳುವುದರಲ್ಲಿಯೂ ಒಳ್ಳೇ ಪ್ರವೀಣರಾಗಿದ್ದರು. ಒಬ್ಬ ರಾಚೀದೇವನು ಮಾತ್ರ ತಪ್ಪಿ ಈ ನೀಚರ ಗುಂಪಿನಲ್ಲಿ ಸೇರಿದಂತಾಗಿತ್ತು. ಆತನ ಉಡಿಗೆ-ತೊಡಿಗೆಗಳು ತೀರ ಸಾಧಾರಣವಾಗಿದ್ದವು. ದುರ್ವ್ಯಸನಗಳ ಸುದ್ದಿಯು ಆತನಿಗೆ ಗೊತ್ತಿದ್ದಿಲ್ಲ. ಮೌನವೂ, ಕರ್ತವ್ಯಜಾಗರೂಕತೆಯೂ ಆತನ ಮುಖ್ಯ ಲಕ್ಷಣಗಳಾಗಿದ್ದವು; ಸ್ವಾಮಿಕಾರ್ಯದಲ್ಲಿ ದೇಹವನ್ನು ಅರ್ಪಿಸುವುದೇ ಪರಮಪುರುಷಾರ್ಥವೆಂದು ಆ ಪುಣ್ಯವಂತನು ತಿಳಿದಿದ್ದನು. ಆತನೊಬ್ಬನು ಮಾತ್ರ ಕುಮುದಿನಿಯನ್ನು ಅಗಸರವಳೆಂದು ತಿಳಿದಿದ್ದಿಲ್ಲ. ಕುಮುದಿನಿಯು ಅಗಸನ ಸಂಗಡ ಪ್ರತಿನಿತ್ಯ ಕಾರಾಗೃಹಕ್ಕೆ ಬರುವುದರಲ್ಲಿ ಏನಾದರೂ ಗೂಢವಿರಬೇಕೆಂದು ತಿಳಿದು, ಆತನು ಯಾವಾಗಲೂ ಜಾಗರೂಕನಾಗಿರುತ್ತಿದ್ದನು. ಈ ಸಂಗತಿಯನ್ನು ಚಾಣಾಕ್ಷಳಾದ ಕುಮುದಿನಿಯು ತಿಳಿದು, ರಾಚಿದೇವನ ವಿಷಯವಾಗಿ ಭಯಪಟ್ಟು ಬಹು ಎಚ್ಚರದಿಂದ ನಡೆಯುತ್ತಿದ್ದಳು.

ಸೆರೆಮನೆಯಲ್ಲಿದ್ದ 3ನೆಯ ರಂಗರಾಯರ ಕಣ್ಣಿಗೆ ಕುಮುದಿನಿಯು ಒಂದು ದಿನ ಅಕಸ್ಮಾತ್ತಾಗಿ ಬೀಳಲು, ಅವರು ಚಕಿತಮುದ್ರೆಯಿಂದ ಆಕೆಯನ್ನು ನೋಡಹತ್ತಿದರು. ಇಂಥ ಕುಲೀನ ಸ್ತ್ರೀಯು ಅಗಸನ ಬಳಿಯಲ್ಲಿರುವುದರ ಗೂಢವೇ ಅವರಿಗೆ ತಿಳಿಯದಾಯಿತು. ಆ ತರುಣಿಯ ಮುಖಲಕ್ಷಣದಿಂದ ಯಾವನೋ ಒಬ್ಬ ವೀರನ ಪರಿಚಯವು ಹತ್ತಿದಂತಾಗಿ, ಆತನು ಯಾರೆಂಬುದು ತಟ್ಟನೆ ಮನಸ್ಸಿಗೆ ಹೊಳೆಯದ್ದರಿಂದ ಅವರು ವಿಚಾರಮಗ್ನರಾದರು. ಈ ಪ್ರಸಂಗವನ್ನರಿತು ಚಾಣಾಕ್ಷಳಾದ ಕುಮುದಿನಿಯು, ದಿಟ್ಟತನದಿಂದ ದೊರೆಗಳ ಬಳಿಗೆ ಹೋಗಿ ಸಾಷ್ಟಾಂಗವಾಗಿ ವಂದಿಸಿ, ಯಾರಿಗೂ ಕಾಣದಂತೆ ಒಂದು ತಾಡವಾಲಿಯ ಪತ್ರವನ್ನು ದೊರೆಗಳ ಮುಂದೆ ಇಟ್ಟು ಹೊರಗೆ ಬಂದಳು. ಪತ್ರವನ್ನೋದುತ್ತಹೋದಂತೆ ಸದಯಾಂತಃಕರಣದ ರಂಗರಾಯರ ಮುಖಮುದ್ರೆಯು ಗಂಭೀರವಾಗುತ್ತ ಹೋಯಿತು. ಅವರು ಕುಮುದಿನಿಯ

ವಿಷಯವಾಗಿ ಪರಮಾದರವುಳ್ಳವರಾಗಿ ಆಕೆಯನ್ನು ಏಕಾಂತದಲ್ಲಿ ಕಂಡು, ಆಪ್ತಾಲೋಚನೆಯನ್ನು ಯಾವಾಗ ಮಾಡೇವೆಂದು ಆತುರ ಪಡಹತ್ತಿದರು; ಆದರೆ ಜಗರಾಯನ ಬಿಗಿಯಾದ ಕಾವಲಿನಲ್ಲಿದ್ದ ಅವರಿಗೆ ಆಸ್ಪದವು ದೊರೆಯಲೊಲ್ಲದು. ಪ್ರಸಿದ್ಧ ರೀತಿಯಿಂದ ಸೇವಕರ ಮುಖಾಂತರವಾಗಿ ಕುಮುದಿನಿಯನ್ನು ಕರೆಸಿಕೊಂಡು ಆಕೆಯೊಡನೆ ನಾಲ್ಕು ಮಾತುಗಳನ್ನಾಡಲಿಕ್ಕೆ ಅವರಿಗೆ ಬರುವಹಾಗಿದ್ದಿಲ್ಲ; ಆದರೆ ಒಬ್ಬ ರಾಚಿದೇವನ ಹೊರತು ಸೆರೆಮನೆಯಲ್ಲಿದ್ದ ಕಾವಲುಗಾರರೇ ಮೊದಲಾದವರ ಮೆಟ್ಟನ್ನು ಕುಮುದಿನಿಯು ಅರಿತವಳಾದ್ದರಿಂದ, ಆಕೆಯು ಅನುವು ನೋಡಿ ತಟ್ಟನೆ ದೊರೆಗಳ ಮುಂದೆ ಹೋಗಿ ನಿಂತುಕೊಂಡಳು. ಪತ್ರವನ್ನು ಓದಿದ ಬಳಿಕ ತನ್ನ ದರ್ಶನಕ್ಕಾಗಿ ದೊರೆಗಳು ಆತುರರಾಗಲೇಬೇಕೆಂದು ಆಕೆಯು ಭಾವಿಸಿದ್ದಳು. ಕುಮುದಿನಿಯು ಬಂದದ್ದನ್ನು ನೋಡಿ ದೊರೆಗಳು ಬಹುಮಾನಪೂರ್ವಕವಾಗಿ ಸೌಜನ್ಯದಿಂದ ಆಕೆಯನ್ನು ಅಭಿನಂದಿಸಿ, ನಾಳೆ ಅದೇ ಸ್ಥಳದಲ್ಲಿ ತಮ್ಮನ್ನು ಕಾಣಬೇಕೆಂದು ಹೇಳಿದರು. ಆಗ ಕುಮುದಿನಿಯು "ದೊರೆಗಳ ಅಪ್ಪಣೆ" ಎಂದು ತಲೆವಾಗಿ ವಿನಯದಿಂದ ಸಮ್ಮತಿಯನ್ನು ಪ್ರಕಟಿಸಿ ಹೊರಗೆ ಬರಲು, ರಾಚಿದೇವನು ತೀಕ್ಷ್ಣದೃಷ್ಟಿಯಿಂದ ತನ್ನನ್ನು ನೋಡುತ್ತ ನಿಂತದ್ದು ಆಕೆಯ ಕಣ್ಣಿಗೆ ಬಿತ್ತು!

ಹೀಗೆ ರಾಚಿದೇವನು ಸದ್ದಿಲ್ಲದೆ ತನ್ನ ಬೆನ್ನಮೇಲಿದ್ದು ತನ್ನ ತಂತ್ರಗಳ ಅವಲೋಕನ ಮಾಡುವುದನ್ನು ನೋಡಿ ಕುಮುದಿನಿಯು ಅಸಮಾಧಾನಪಟ್ಟಳು. ಇಡೀ ಸೆರೆಮನೆಯಲ್ಲಿ ರಾಚಿದೇವನೊಬ್ಬನು ಮಾತ್ರ ಮುಳ್ಳಿನಂತೆ ಅಳುಕಿ, ಕುಮುದಿನಿಯನ್ನು ನೋಯಿಸುತ್ತಿದ್ದನು; ಇನ್ನೊಬ್ಬರ ಗಣನೆಯು ಅವಳಿಗಿದ್ದಿಲ್ಲ ರಾಚಿದೇವನು ತನ್ನ ಕಾರಸ್ಥಾನವನ್ನು ಬೈಲಿಗೆಳೆದು ಎಲ್ಲಿ ಅನರ್ಥವನ್ನುಂಟುಮಾಡುವನೋ ಎಂದು ಆಕೆಯು ಬೆದರಿದಳು; ಆದರೆ, ಎಲ್ಲ ಪ್ರಸಂಗಗಳಿಂದ ರಕ್ಷಿಸಲು ಸದ್ಗುರುವೇ ಸಮರ್ಥನೆಂದು ನಂಬಿ, ಆಕೆಯು ಕೂಡಲೆ ಧೈರ್ಯವನ್ನು ತಾಳಿ ಮರುದಿನ ಅಪ್ಪಣೆಯಂತೆ ರಂಗರಾಯನ ದರ್ಶನಕ್ಕಾಗಿ ಹೋದಳು. ಆಗ ದೊರೆಗಳು ತಮ್ಮ ಪರಿವಾರದೊಡನೆ ಕುಮುದಿನಿಯ ಹಾದಿಯನ್ನು ನೋಡುತ್ತ ಕುಳಿತಿದ್ದರು. ಹೀಗೆ ರಾಜಪರಿವಾರವು ಪರಾಧೀನತೆಯಿಂದ ತೇಜೋಹೀನವಾಗಿ ತನ್ನ ಸ್ವಾಗತಮಾಡುವ ನೆವದಿಂದ ಒಟ್ಟುಗೂಡಿರುವುದನ್ನು ನೋಡಿ ಕುಮುದಿನಿಯ ಹೃದಯವು ಕರಗಿ ನೀರಾಗಿ, ಆಕೆಯ ಕಣ್ಣುಗಳೊಳಗಿಂದ ನೀರುಗಳು ತಾವಾಗಿ ಹೋಗಹತ್ತಿದವು. ಆಕೆಯು ಗದ್ಗದಕಂಠೆಯಾಗಿ ರಾಜಪರಿವಾರವನ್ನು ಸಾಷ್ಟಾಂಗವಾಗಿ ವಂದಿಸಲು ರಾಜಪತ್ನಿಯೂ, ರಾಜಪುತ್ರಿಯರೂ ಆಕೆಯನ್ನು ಹಿಡಿದೆತ್ತಿ ಆದರದಿಂದ ತಮ್ಮ ಬಳಿಯಲ್ಲಿ ಕುಳ್ಳಿರಿಸಿಕೊಂಡರು. ಪರಮ ಆಪ್ತಳಂತೆ ತಮ್ಮ ದುಃಖಕ್ಕಾಗಿ ದುಃಖಿಸುತ್ತ ಕೈಜೋಡಿಸಿ ವಿನಯದಿಂದ ಕುಳಿತಿರುವ ಕುಮುದಿನಿಯನ್ನು ನೋಡಿ ದೊರೆಗಳು ನುಡಿದರೇನಂದರೆ—ಸಾಧ್ವಿಯೇ, ಸ್ವಾಮಿ ಭಕ್ತಿಯಿಂದ ನೀನು ಮಾಡುತ್ತಿರುವ ಸಾಹಸಕ್ಕಾಗಿ ಪುರುಷರು ಕೂಡ ಬಟ್ಟುಕಚ್ಚಬಹುದಾಗಿದೆ. ಎಚ್ಚಮನಾಯಕರು ಸ್ವಾಮಿನಿಷ್ಠರೂ, ಯುದ್ಧಕುಶಲರೂ, ಪರಾಕ್ರಮಿಗಳೂ ಇರುವರೆಂಬುದನ್ನು ನಾವು ಬಲ್ಲೆವು. ಸ್ವಾರ್ಥಪರಾಯಣರ ದುರಾಶೆಯಿಂದ ಮೇಘದಿಂದ ಮಬ್ಬುಗವಿದ ಕರ್ನಾಟಕದ ಆಕಾಶಮಂಡಲದಲ್ಲಿ

ಎಚ್ಚಮ ನಾಯಕರಂಥ ತೇಜಃಪುಂಜ ನಕ್ಷತ್ರಗಳು ಅಲ್ಲೊಂದು ಇಲ್ಲೊಂದು ಮಿನುಗುತ್ತಲಿರುವವು. ಆ ತೇಜೋಮೂರ್ತಿಯ ಮಗ್ಗಲಲ್ಲಿ ತೇಜೋವಿಶೇಷದಿಂದ ಮಿನುಗಲಿಕ್ಕೆ ವೀರಾಗ್ರೇಸರರಾದ ನರಸಿಂಗನಾಯಕರ ಮಗಳು ನೀನು ತಕ್ಕವಳಾಗಿರುತ್ತೀ. ವೀರಪತ್ನಿಯೇ ಪತಿಯ ಕಾರ್ಯಕ್ಕಾಗಿ ಜೀವದ ಹಂಗು ಇಲ್ಲದೆ ಹೆಣಗುವ ನೀನು ಪರಮಧನ್ಯಳು! ಶುಷ್ಕವಾದ ಧನ್ಯವಾದದ ಹೊರತು ಹೆಚ್ಚಿನ ಕ್ರಿಯೆಯನ್ನು ಮಾಡಿ ತೋರಿಸುವ ಯೋಗ್ಯತೆಯು ನಿನ್ನ ಒಡೆಯರಾದ 3ನೆಯ ರಂಗರಾಯರಲ್ಲಿಲ್ಲೆಂಬುದು ನಿಜವು! ಆದರೆ ಸ್ವಾಮಿಭಕ್ತಳೇ, ತೇಜೋವಿಶೇಷದಿಂದ ಪ್ರತ್ಯಕ್ಷ ಆದಿಮಾಯೆಯನ್ನು ಹೋಲುವ ಕುಮುದಿನಿಯೇ, ಇದ್ದದ್ದರಲ್ಲಿಯೇ ವಂಚನೆಯಿಲ್ಲದೆ ನಿನ್ನ ಬಹುಮಾನವನ್ನು ಮಾಡಲು ಈ ಬಡರಂಗರಾಯನು ಸಂತೋಷದಿಂದ ಮುಂದುವರಿ ಯುತ್ತಾನೆ. ನೋಡು, ಇಗೋ ಈತನು ನಮ್ಮ ನಡುವಿನ ಮಗನಾದ ಚಿನ್ನವೆಂಕಟನು. ಹನ್ನೆರಡು ವರ್ಷದ ವಯಸ್ಸಿನ ಈತನನ್ನು ನಿನಗೆ ಒಪ್ಪಿಸಿದ್ದೇನೆ. ಬೇಕಾದಾಗ ಈತನನ್ನು ಕರಕೊಂಡು ಹೋಗಬಹುದು. ಈತನು ಎಲ್ಲ ಬಗೆಯಿಂದ ನಿಮ್ಮನ್ನೇ ಕೂಡಿದ್ದಾನೆ. ನಿಮ್ಮಂಥ ಸ್ವಾಮಿನಿಷ್ಠರ ಪುಣ್ಯದಿಂದ ನಮ್ಮೆಲ್ಲರ ಬಂಧವಿಮೋಚನವಾದರೆ ಆಗಬೇಕಾಗಿದೆ. ನಮ್ಮ ಗತಿಯು ಏನೇ ಆಗಲಿ, ನಮ್ಮ ಚಿನ್ನವೆಂಕಟನು ನಿನ್ನಂಥ ಸಾಧ್ವಿಯ ಪುಣ್ಯದಿಂದ ಚಿರಾಯುವಾಗಿ ನಮ್ಮ ವಂಶವು ಉದ್ಧೃತವಾದರೆ ಸಾಕು. ಇಲ್ಲಿ ನೀನು ಬಹಳ ಹೊತ್ತು ಕುಳಿತುಕೊಳ್ಳುವುದರಿಂದ ಹಿತವಾಗಲಿಕ್ಕಿಲ್ಲ. ಆದ್ದರಿಂದ ಕುಮುದಿನೀ, ಹೋಗಿ ಬಾರಮ್ಮಾ! ಕೈಕೊಂಡ ಕಾರ್ಯದಲ್ಲಿ ನೀನು ಈಶ್ವರಕೃಪೆಯಿಂದ ಜಯಶೀಲೆಯಾಗು, ಎಂದು ನುಡಿಯುತ್ತಿರಲು, ಕುಮುದಿನಿಯ ಸಂಗಡ ಎಲ್ಲ ರಾಜಪರಿವಾರವು ಕಣ್ಣೀರು ಸುರಿಸ ಹತ್ತಿತು. ರಾಜಪತ್ನಿಯು ತನ್ನ ದುಃಖವನ್ನು ನುಂಗಿಕೊಂಡು ಕುಮುದಿನಿಯನ್ನು ಸಮಾಧಾನ ಗೊಳಿಸುತ್ತ ಅರಿಸಿನ–ಕುಂಕುಮ ಮೊದಲಾದ ಸೌಭಾಗ್ಯ ದ್ರವ್ಯಗಳಿಂದ ಆಕೆಯನ್ನು ಸತ್ಕರಿಸಿ, ಪುತ್ರವತಿಯಾಗೆಂದು ಆಶೀರ್ವದಿಸಿ ಹೋಗಲಪ್ಪಣೆ ಕೊಟ್ಟಳು. ಕುಮುದಿನಿಯು ರಾಜಪರಿವಾರ ವನ್ನು ಬಿಟ್ಟು ಹೋಗಲಾರದೆ ಕಷ್ಟದಿಂದ ಹೊರಬಿದ್ದು ಸಂಗಡಿಗನಾದ ಅಗಸನೊಡನೆ ಅರಿವೆಯ ಮೂಟೆಯನ್ನು ಹೊತ್ತುಕೊಂಡು ಮನೆಗೆ ಹೋದಳು. ಯಾವ ಕಾರಣದಿಂದಲೋ ರಾಚಿದೇವನು ಎರಡು ದಿನಗಳಿಂದ ಕಾರಾಗೃಹಕ್ಕೆ ಬಾರದ್ದರಿಂದ ಕುಮುದಿನಿಯ ಅರ್ಧ ಚಿಂತೆಯು ಕಡಿದಂತಾಗಿತ್ತು.

ಮುಂದೆ ನಾಲ್ಕು ದಿನಗಳಾದವು. ಐದನೆಯ ದಿವಸ ಕುಮುದಿನಿಯು ಪ್ರತಿನಿತ್ಯದಂತೆ ಅಗಸನ ಸಂಗಡ ಕಾರಾಗೃಹಕ್ಕೆ ಬಂದಳು. ರಾಚಿದೇವನು ಬರುವುದರೊಳಗಾಗಿಯೇ ತನ್ನ ಕಾರ್ಯವನ್ನು ಸಾಧಿಸಬೇಕೆಂದು ತಿಳಿದು, ಆಕೆಯು ಅದೇ ದಿನ ರಾಜಪುತ್ರನನ್ನು ಗುಪ್ತ ರೀತಿಯಿಂದ ಕರೆದುಕೊಂಡು ಹೋಗುವ ಉದ್ಯೋಗದಲ್ಲಿ ತೊಡಗಿದಳು. ಅಗಸನನ್ನು ಕರೆದು ಆತನಿಗೆ ಹೇಳತಕ್ಕದ್ದನ್ನೆಲ್ಲ ಹೇಳಿ, ಆತನ ಮೂಟೆಯಲ್ಲಿ ಅರಸುಮಗನನ್ನು ಅಪಾಯವಾಗದಂತೆ ಮಲಗಿಸಿ, ಬೆದರಬಾರದೆಂದು ಆತನಿಗೆ ಧೈರ್ಯವನ್ನು ಹೇಳಿದಳು; ಆಮೇಲೆ ಮೂಟೆಯ ಮೇಲುಗಡೆಯಲ್ಲಿ ಕಮಟು ಅರಿವೆಗಳನ್ನು ಹಾಕಿ, ಮೂಟೆಯ ಸನಿಯಕ್ಕೆ ಜನರು ಬಾರದಂತೆ ಮಾಡಿದಳು. ಅಗಸನು ಮೂಟೆಯನ್ನು ಹೊತ್ತು ''ಸರಿಯಿರಿ ದೇವರು, ಮುಟ್ಟೇರಿ, ದೂರ ಸರಿಯಿರಿ'' ಎಂದು ಒದರುತ್ತ ಸಾಗಿದನು. ಆ ದಿನ ಕುಮುದಿನಿಯು ಬರಿಗೈಯಿಂದಲೇ ಇದ್ದಳು.

ವಿಚಿತ್ರವಾದ ತೇಜವು ಆಕೆಯ ಮುಖದಲ್ಲಿ ಮಿನುಗುತ್ತಿತ್ತು ತೀಕ್ಷ್ಣವಾದ ಸಣ್ಣಪುಟ್ಟ ಆಯುಧಗಳನ್ನು ಆಕೆಯು ಸಜ್ಜುಗೊಳಿಸಿಕೊಂಡಿದ್ದಳು. ಕುಮುದಿನಿಯ ಅಲೌಕಿಕ ತೇಜಸ್ಸು ನೋಡುವವರನ್ನು ದಂಗುಬಡಿಸುತ್ತಿತ್ತು ಆಕೆಯು ಸುಹಾಸ್ಯವದನೆಯಾಗಿ ಕಾವಲುಗಾರರೊಡನೆ ಸವಿಮಾತುಗಳನ್ನಾಡುತ್ತ "ಮೈಲಿಗೆಯ ಬಟ್ಟೆಗಳು, ಮುಟ್ಟೀರಿ" ಎಂದು ಜನರನ್ನು ವಿನಯ ದಿಂದ ಎಚ್ಚರಗೊಳಿಸುತ್ತ ಮುಂದಕ್ಕೆ ಸಾಗಿದ್ದಳು. ಕುಮುದಿನಿಯ ಮೋಹಕ ಸ್ವರೂಪವನ್ನು ನೋಡುವುದರಲ್ಲಿಯೂ, ಆಕೆಯ ಮಂಜುಲವಾಣಿಯನ್ನು ಕೇಳುವುದರಲ್ಲಿಯೂ ಕಾವಲು ಗಾರರೇ ಮೊದಲಾದವರು ಮಗ್ನರಾಗಿದ್ದರಲ್ಲದೆ, ಅಗಸನನ್ನೂ, ಆತನು ಹೊತ್ತಿದ್ದ ಮೂಟೆ ಯನ್ನೂ ಯಾರೂ ಕಣ್ಣೆತ್ತಿ ನೋಡಲಿಲ್ಲ ಹೀಗೆ ಕುಮುದಿನಿಯು ರಾಜಪುತ್ರನೊಡನೆ ಸೆರೆಮನೆಯ ಬಾಗಿಲುಗಳನ್ನೂ, ಕೋಟೆಯ ಬಾಗಿಲುಗಳನ್ನೂ ದಾಟಿ ಮನೆಯನ್ನು ಮುಟ್ಟಿದಳು! ಸುದೈವ ದಿಂದ ಯಾವ ತೊಂದರೆಗಳೂ ತಟ್ಟದೆ ರಾಜಪುತ್ರನ ಬಿಡುಗಡೆಯಾದದ್ದನ್ನು ನೋಡಿ ಆಕೆಗೆ ಬಹಳ ಸಂತೋಷ ವಾಯಿತು. ಈ ರಾಜಪುತ್ರನು ಈಶ್ವರಕೃಪೆಯಿಂದ ಸುರಕ್ಷಿತವಾಗಿ ನನ್ನ ಪತಿಯ ಪಾಳಯವನ್ನು ಮುಟ್ಟಿದರೆ, ಪತಿಯು ಕೈಕೊಂಡಿರುವ ಕಾರ್ಯದ ಬಲವಾದ ಅಸ್ತಿವಾರವನ್ನು ಹಾಕಿದಂತಾಗುವು ದೆಂದು ಆಕೆಯು ನೆನಿಸಿದಳು.

## ಸುಚಿಹ್ನ

ಕುಮುದಿನಿಯು ಮುಂದೆ ಮೂರುದಿನ ರಾಜಪುತ್ರನನ್ನು ಅಗಸನ ಮನೆಯಲ್ಲಿಯೇ ಗುಪ್ತವಾಗಿ ಇಟ್ಟು, ತಾನು ನಿತ್ಯಕ್ರಮದಂತೆ ಅಗಸನ ಸಂಗಡ ಸೆರೆಮನೆಗೆ ಹೋಗುತ್ತ-ಬರುತ್ತ ಇದ್ದಳು. ಇನ್ನೂ ರಾಚಿದೇವನು ಬಾರದ್ದನ್ನು ನೋಡಿ ಆಕೆಗೆ ಬಹಳ ಸಂತೋಷವಾಯಿತು. ಇದೇ ಸಂಧಿಯಲ್ಲಿ ತಾನು ರಾಜಪುತ್ರನೊಡನೆ ಪತಿಯನ್ನು ಕೂಡಬೇಕೆಂದು ಯೋಚಿಸಿ, ನಾಲ್ಕನೆಯ ದಿವಸ ರಾತ್ರಿ ತನ್ನ ದಾಸಿಯರೂ, ಸೇವಕರೂ, ಅಗಸನೂ ಕುದುರೆಯನ್ನು ಹತ್ತಿ ಸಿದ್ಧರಾಗಲು, ಎಲ್ಲ ಪರಿವಾರದೊಡನೆ ಪತಿಯ ಪಾಳಯದ ಕಡೆಗೆ ಸಾಗಿದಳು. ಆಕೆಯು ರಾಜಪುತ್ರನನ್ನು ತನ್ನ ಮುಂದೆ ಕುಳ್ಳಿರಿಸಿಕೊಂಡಿದ್ದಳು. ಅಂದಿನ ತಿಥಿಯು ಜ್ಯೇಷ್ಠವದ್ಯ ಚತುರ್ದಶಿಯಾಗಿತ್ತು ವಿರಲ ಮೋಡಗಳು ಆಕಾಶದಲ್ಲಿ ಸಂಚರಿಸುತ್ತಿದ್ದು ಧೂಮ್ರಾಕಾರದ ವೃಷ್ಟಿಯು ನಡುನಡುವೆ ಉದುರಹತ್ತಿದ್ದರಿಂದ ಕಗ್ಗತ್ತಲೆಯು ಮುಸುಕಿ, ಹೋಗುವವರಿಗೆ ದಾರಿಯು ಕಾಣದಾಯಿತು. ಎಲ್ಲಕ್ಕೂ ಮುಂದೆ ಒಬ್ಬ ಸೇವಕನಿದ್ದನು; ಆತನ ಹಿಂದೆ ಒಬ್ಬ ದಾಸಿ, ಆಕೆಯ ಹಿಂದೆ ಕುಮುದಿನಿಯು, ಆಕೆಯ ಹಿಂದೆ ಇನ್ನೊಬ್ಬ ದಾಸಿ- ಅಗಸ, ಎಲ್ಲಕ್ಕೂ ಹಿಂದುಗಡೆಯಲ್ಲಿ ಇನ್ನೊಬ್ಬ ಸೇವಕನು. ಈ ಕ್ರಮದಿಂದ ಆ ಪರಿವಾರವು ಸಾಗಿತ್ತು ರಾತ್ರಿ ಆರು ತುಂಬಿ ಏಳನೆಯ ಅಮಲಾದದ್ದರಿಂದ ಸುತ್ತು ಮುತ್ತು ಶಾಂತತೆಯ ಸಾಮ್ರಾಜ್ಯವು ನೆಲೆಗೊಳ್ಳಬಹುದಾಗಿತ್ತು; ಆದರೆ ಚಂದ್ರಗಿರಿಯಿಂದಲೂ, ಸಮೀಪದ ಹಳ್ಳಿಗಳಿಂದಲೂ ನಾಯಿಗಳ ಬೊಗಳುವಿಕೆಗಳು-ವಾದ್ಯಗಳ ಧ್ವನಿಗಳೂ

ಕೇಳಬಂದು ಶಾಂತತೆಯನ್ನು ಭಂಗಗೊಳಿಸುತ್ತಿದ್ದವು. ನೆರೆಯ ಕ್ಷುದ್ರ ಜಲಾಶಯಗಳಲ್ಲಿ ಗಡರುಗುಟ್ಟುವ ಕಪ್ಪೆಗಳ ವಿಚಿತ್ರಧ್ವನಿಗಳೂ, ಆ ಧ್ವನಿಗಳ ನಡುವೆ ಕರ್ಣಕಠೋರವಾಗಿ ಕೀಸರಿಟ್ಟಿದ್ದ ಕ್ಷುದ್ರ ಕೀಟಕಗಳ ಕರ್ಕಶಧ್ವನಿಗಳೂ ಆ ಮಾರ್ಗಸ್ಥರ ಕಿವಿಗಳನ್ನು ಗಡಚಿಕ್ಕುತ್ತಿದ್ದವು. ನಮ್ಮ ಹಾದಿಕಾರರು ಒಬ್ಬರೂ ಪಿಟ್ಟೆಂದು ಮಾತಾಡುತ್ತಿದ್ದಿಲ್ಲ, ಎಲ್ಲರ ಲಕ್ಷ್ಯವು ಎಚ್ಚಮ ನಾಯಕನ ಪಾಳಯದ ಕಡೆಗೆ ಹೋಗಿತ್ತು, ಮಾರ್ಗದ ಮಧ್ಯದಲ್ಲಿ ಯಾರಾದರೂ ತಮ್ಮನ್ನು ಅಡ್ಡಗಟ್ಟಿದರೆ, ಕಷ್ಟವೆಂಬ ವಿಚಾರವು ಎಲ್ಲರ ಮನಸ್ಸಿನಲ್ಲಿಯೂ ಹೊಳೆಯುತ್ತಿತ್ತು, ಎಚ್ಚಮ ನಾಯಕನ ಪಾಳಯವು ಚಂದ್ರಗಿರಿಯಿಂದ ಐದು ಮೈಲಿನ ಮೇಲೆ ಇತ್ತು, ಕುಮುದಿನಿಯ ಪರಿವಾರವು ಒಂದು ಮೈಲು ನಡೆದು ಬಂದಿರಬಹುದು; ಅಷ್ಟರಲ್ಲಿ ಯಾವನೋ ಒಬ್ಬ ಸವಾರನು ಕುದುರೆಯನ್ನು ಓಡಿಸುತ್ತ ನೆಟ್ಟಗೆ ಕುಮುದಿನಿಯ ಬಳಿಗೆ ಬಂದು ಆಕೆಯ ಕೈಯನ್ನು ಹಿಡಿದು—ಪರಮಸಾಹಸಿಯಾದ ಸ್ತ್ರೀಯೇ, ಕಳವಿನಿಂದ ರಾಜಪುತ್ರನನ್ನು ಎಬ್ಬಿಸಿಕೊಂಡು ಹೋಗುವ ನೀನು, ಕ್ಷುದ್ರರಾದ ಕಾವಲುಗಾರರನ್ನು ವಂಚಿಸಿದಂತೆ ನನ್ನನ್ನು ವಂಚಿಸಲಿಕ್ಕೆ ಹ್ಯಾಗೆ ಸಮರ್ಥಳಾದೀ? ನಿನ್ನ ಸಾಹಸಕ್ಕಾಗಿ ನಾನು ಪ್ರಸನ್ನನಾಗಿದ್ದೇನೆ; ಆದರೆ ಇನ್ನು ನೀನು ಮುಂದಕ್ಕೆ ಒಂದು ಹೆಜ್ಜೆಯನ್ನು ಸಹ ಇಡದೆ, ರಾಜಪುತ್ರನನ್ನು ಸುಮ್ಮನೆ ನನಗೆ ಒಪ್ಪಿಸಿಬಿಟ್ಟರೆ, ನಾನು ನಿನ್ನ ಕೂದಲು ಕೊಂಕಗೊಡುವುದಿಲ್ಲ, ಪುರುಷರಿಗೂ ನೀಗದ ಸಾಹಸಕ್ಕೆ ಕೈಹಾಕಿದ ನೀನು, ನಿಜವಾಗಿ ಆದರಣೀಯಳಿರುತ್ತೀ. ನಿನ್ನ ಧೈರ್ಯದ ಅಭಿನಂದನಕ್ಕಾಗಿ ನನ್ನ ಶೂರ ದಂಡಾಳುಗಳನ್ನು ನಿನ್ನ ಸಹಾಯಕ್ಕೆ ಕಳಿಸುವೆನು. ಅವರು ನಿನ್ನನ್ನು ಮನೆಗೆ ಮುಟ್ಟಿಸಿಬರುವರು. ನನ್ನ ಈ ಹಿತದ ಮಾತುಗಳಿಗೆ ಒಪ್ಪದೆ, ಗದ್ದಲಮಾಡತೊಡಗಿದ್ದರೆ, ನಿಮ್ಮೆಲ್ಲರ ಪಾರಪತ್ಯ ಮಾಡಿ ರಾಜಪುತ್ರನನ್ನು ಅಪಹರಿಸಿಕೊಂಡು ಹೋಗುವೆನು, ಎಂದು ನುಡಿಯುತ್ತಿರಲು, ಆತನ ಹತ್ತುಜನ ಕುದುರೆಯ ಸವಾರರು ಕುದುರೆಗಳನ್ನೋಡಿಸುತ್ತ ಬಂದು ಕುಮುದಿನಿಯ ಪರಿವಾರವು ಉಲುಕಾಡದಂತೆ ಸುತ್ತುಗಟ್ಟಿ ನಿಂತುಕೊಂಡರು!

ವಿಚಾರಮಗ್ನಳಾಗಿ ಒಂದೂ ಅರಿಯದೆ ಕುದುರೆಯ ಮೇಲೆ ಕುಳಿತುಸಾಗಿದ್ದ ಕುಮುದಿನಿಯು, ಅಕಸ್ಮಾತ್ತಾಗಿ ಒಬ್ಬ ಮನುಷ್ಯನು ಬಂದು ತಟ್ಟನೆ ಕೈ ಹಿಡಿದದ್ದರಿಂದ, ಬೆದರಿ, ಮೆಟ್ಟಿಬಿದ್ದು ಹೌಹಾರಿ ಕುಳಿತುಕೊಂಡಳು. ಆಕೆಯ ಮುಂದೆ ಕುಳಿತಿದ್ದ ರಾಜಪುತ್ರನೂ ಅಂಜಿ ಹಿಂದಕ್ಕೆ ತಿರುಗಿ ಕುಮುದಿನಿಯನ್ನು ಅಪ್ಪಿಕೊಂಡನು. ಕೈಯನ್ನು ಹಿಡಿದ ಪುರುಷನು ಆಡಿದ ದರ್ಪೋಗಳು ಸ್ವಪ್ನದಲ್ಲಿ ಕೇಳಿಸಿದಂತೆ ಕುಮುದಿನಿಗೆ ಕೇಳಿಸಿದ್ದವು. ಕುಮುದಿನಿಯ ಈ ಅಂಜುಬುರುಕತನವು ಬಹಳ ಹೊತ್ತು ನಿಲ್ಲಲಿಲ್ಲ, ತನ್ನ ಪರಿವಾರವನ್ನು ಕುದುರೆಯ ಸವಾರರು ಸುತ್ತುಗಟ್ಟುವಷ್ಟರಲ್ಲಿ ಆಕೆಯ ವೃತ್ತಿಯಲ್ಲಿ ಅಂತರವಾಗಿತ್ತು. ದುಷ್ಟರಾದ ದೈತ್ಯರ ರುಂಡಗಳನ್ನು ಚಂಡಾಡಲಿಕ್ಕೆ ಅವತರಿಸಿದ ಆದಿಮಾಯೆಯ ದ್ವಿಭುಜಾಂಕಿತ ಮೂರ್ತಿಯಂತೆ ಆಕೆಯು ಒಪ್ಪಹತ್ತಿದ್ದಳು. ತಾನು ಅಬಲೆಯೆಂಬ ಭಾವವು ಆಕೆಯಲ್ಲಿ ಅಳಿದುಹೋಗಿತ್ತು, ಕೈಹಿಡಿದ ಸರದಾರನನ್ನೂ ಸುತ್ತಗಟ್ಟಿದ್ದ ಸವಾರರನ್ನೂ ಆಕೆಯು ತೃಣೀಕರಿಸಿದಳು. ಕುಮುದಿನಿಯು ತನ್ನ ಸಂತಾಪವನ್ನು ಸ್ವಲ್ಪ ನುಂಗಿಕೊಂಡು, ಭಯದಿಂದ ತನ್ನನ್ನು ಅಪ್ಪಿಕೊಂಡಿದ್ದ ರಾಜಪುತ್ರನನ್ನು

ಸಂತಯಿಸುತ್ತ ಕೈಹಿಡಿದ ಸರದಾರನನ್ನು ಕುರಿತು ನುಡಿದಳೇನಂದರೆ– ಎಲೈ ಪುರುಷಾಧಮನೆ, ನಿರ್ಲಜ್ಜನಾಗಿ ಪರಸ್ತ್ರೀಯ ಕೈಯನ್ನು ತಟ್ಟನೆ ಹಿಡಿಯುವ ನಿನ್ನ ಕೆಟ್ಟ ಕೈಯು ಹುಳಿತು ಹೋಗಲಿಕ್ಕಿಲ್ಲವೆ? ಬಿಡು ಕೈಯನ್ನು, ಸರಿ ಹಿಂದಕ್ಕೆ! ವಿಚಾರಶೂನ್ಯಾ ನಾನಂತು ಕಳ್ಳೆಯು ಸರಿ; ಆದರೆ ಮೀಸೆಹೊತ್ತ ಗಂಡಸೆನಿಸುವ ನೀನು ಸದ್ದಿಲ್ಲದೆ ಮಾರ್ಗಸ್ಥರ ಮೇಲೆ ಮುಗಿಬಿದ್ದು ಅವರನ್ನು ದಿಗಿಲುಗೊಳಿಸಿರುವೆಯಲ್ಲ? ಇಂಥ ನೀನು ಕಳ್ಳನೋ, ದೊಡ್ಡ ಸಂಪನ್ನನೋ ತಿಳಿದುಹೇಳು ನೋಡೋಣ! ಎಲಾ ರಾಚಿದೇವಾ, ಸೆರೆಮನೆಯಲ್ಲಿ ನಿನ್ನ ಚರಿತ್ರವನ್ನು ನೋಡಿದ ನಾನು, ನೀನು ಮಹಾ ಸತ್ಯವಂತನೂ, ಸ್ವಾಮಿಕಾರ್ಯದಕ್ಷನೂ, ಸದಾಚಾರಿಯೂ, ನಿಸ್ಪೃಹಿಯೂ ಎಂದು ತಿಳಿದು ನಿನಗೆ ಅಂಜಿ ನಡಕೊಳ್ಳುತ್ತಿದ್ದೆನು; ಆದರೆ ಇಂದಿನ ರಾತ್ರಿಯ ನಿನ್ನ ಕೃತಿಯಿಂದ ಹೆಂಗಸಾದ ನಾನು ನಿನ್ನ ವಿಷಯವಾಗಿ ಏನು ಅಭಿಪ್ರಾಯಪಡಲೆಂಬದನ್ನು ನೀನೇ ಹೇಳು. ನನ್ನನ್ನು ಅನನ್ಯಗತಿ ಕತೆಯಿಂದ ಅಪ್ಪಿಕೊಂಡಿರುವ ಈ ರಾಜಕುಮಾರನನ್ನು ನಾನು ಜೀವ ದಿಂದಿರುವವರೆಗೆ ಅದಾವ ಗಂಡುಸು ಅಪಹರಿಸಿಕೊಂಡು ಹೋಗುತ್ತಾನೋ ನೋಡುತ್ತೇನೆ! ನನ್ನ ಮನೋರಥವನ್ನು ಮಣ್ಣುಗೂಡಿಸಿ, ನನ್ನನ್ನು ಮೃತಪ್ರಾಯಳನ್ನು ಮಾಡಿದಮೇಲೆ, ನನ್ನ ಕೂದಲು ಕೊಂಕಗೊಡದೆ ಮನೆಗೆ ಕಳಿಸುವ ಅನಾಥರಕ್ಷಕನು ನೀನೆಲ್ಲಿ ಹೊಸದಾಗಿ ಅವತರಿಸಿ ಬಂದೆ? ನನ್ನ ಗುಣಗಳ ಅಭಿನಂದನಮಾಡುವ ನಿಜವಾದ ಯೋಗ್ಯತೆಯು ನಿನ್ನಲ್ಲಿದ್ದರೆ, ರಾಜಕುಮಾರನೊಡನೆ ಸುರಕ್ಷಿತವಾಗಿ ನನ್ನನ್ನು ನನ್ನ ಪತಿಯಾದ ಎಚ್ಚಮನಾಯಕನ ಬಳಿಗೆ ಹೋಗಗೊಡು; ಆಮೇಲೆ ನಿನ್ನಲ್ಲಿ ಪರಾಕ್ರಮವಿದ್ದರೆ, ರಾಜಪುತ್ರನನ್ನು ಅಪಹರಿಸಿಕೊಂಡು ಹೋಗು. ಇದರಿಂದ ನಿನ್ನ ಕೀರ್ತಿಯು ದಿಕ್ಕುದಿಕ್ಕುಗಳಲ್ಲಿ ಹಬ್ಬಿ ಹರಿಬೀಳುವುದಲ್ಲದೆ, ಕಾರ್ಯವನ್ನು ಕೈಗೂಡಿಸಿದ್ದರಿಂದ ತುಂಬಾ ಆನಂದಪಟ್ಟು ನನ್ನಂಥ ಅಬಲೆಯ ಹರಿಕೆಯಿಂದ ನಿನ್ನ ಕೋಟಿ ಕಲ್ಯಾಣವಾದೀತು. ರಾಚಿದೇವಾ, ನೀನು ಸೌಜನ್ಯವನ್ನು ಬಿಡದಿದ್ದರೆ, ನಾನು ಸರ್ವಥಾ ಗದ್ದಲವನ್ನು ಮಾಡುವುದಿಲ್ಲ! ತಿಳಿಯದೆ ದುರಭಿಮಾನದಿಂದ ನನ್ನ ಕೈಯನ್ನು ಹಿಡಿದು ನಿನ್ನ ಅಪರಾಧವನ್ನು ಕ್ಷಮಿಸುತ್ತೇನೆ; ಆದರೆ ಕುದುರೆಯನ್ನು ತಿರುಗಿಸಿ ಬಂದ ದಾರಿಯಿಂದ ಹಿಂದಕ್ಕೆ ಹೋಗು ನೋಡೋಣ!

ಕುಮುದಿನಿಯ ಈ ಸ್ವಾವಲಂಬನಪೂರ್ಣವಾದ ಅರ್ಥವುಳ್ಳ ಸ್ಪಷ್ಟ ಮಾತುಗಳನ್ನು ಕೇಳಿ ರಾಚಿದೇವನು ನಾಚಿ ಆಗಲೆ ಕೈಯನ್ನು ಬಿಟ್ಟು ಕುದುರೆಯನ್ನು ಹಿಂದಕ್ಕೆ ಸರಿಸಿದ್ದನು. ಪರಸ್ತ್ರೀಯೆಂಬ ಶಬ್ದವು ಕಿವಿಗೆ ಬಿದ್ದಾಗಲೇ ಆ ಪಾಪಭೀರುವಿನ ಹಸ್ತವು ಕುಮುದಿನಿಯ ಹಸ್ತವನ್ನು ಬಿಟ್ಟುಕೊಟ್ಟಿತ್ತು ರಾಚಿದೇವನು ನಿಜವಾಗಿ ಕಾವಲುಗಾರನಿದ್ದಿಲ್ಲ ರಾಚಿದೇವನೆಂಬದು ಆತನ ನಿಜವಾದ ಹೆಸರೂ ಇದ್ದಿಲ್ಲ; ಆದರೆ ಚಿತ್ರದುರ್ಗದ ದುರಗಪ್ಪನಾಯಕನೆಂಬ ಬೇಡಜಾತಿಯ ಪ್ರಸಿದ್ಧ ನಾಯಕನು ಜಗರಾಯನ ಪಕ್ಷವನ್ನು ಸ್ವೀಕರಿಸಿ, ಕಾರಾಗೃಹದಲ್ಲಿದ್ದ ಅರಸನ ನಡತೆಯ ಮೇಲೆ ಕಾವಲುಗಾರನ ವೇಷದಿಂದ ಕಣ್ಣಿಟ್ಟಿದ್ದನು. ದುರಗಪ್ಪನಾಯಕನು, ಮಹಾಶೂರನೂ, ಸತ್ಯಪಕ್ಷಪಾತಿಯೂ, ಪರನಾರೀಸೋದರನೂ ಆಗಿದ್ದನು. ಕೊಟ್ಟ ವಚನವನ್ನು

ಪಾಲಿಸುವುದು ಆತನ ಶೀಲವಾಗಿತ್ತು, ಆತನು ಪರಮ ಕಾರುಣಿಕನೆಂತಲೂ, ಧರ್ಮಯುದ್ಧದ ಅಭಿಮಾನಿಯೆಂತಲೂ ಜನರು ಆತನನ್ನು ಶ್ಲಾಘಿಸುತ್ತಿದ್ದರು. ಚಿತ್ರದುರ್ಗದ ಜಗದ್ಗುರು ಮುರುಘಾ ರಾಜೇಂದ್ರರು ಆತನ ಗುರುಗಳಾಗಿದ್ದರು. ಹೀಗೆ ಸತ್ಸಮಾಗಮದಿಂದ ಧನ್ಯನಾಗಿದ್ದ ನಾಯಕ ಶ್ರೇಷ್ಠನು ಆರುಸಾವಿರ ದಂಡಿನ ಅಧಿಪತಿಯಾಗಿ ಸತ್ವಾತಿಶಯದಿಂದ ಜಗರಾಯನ ಪಕ್ಷದ ಸರದಾರರಲ್ಲಿ ಅಗ್ರೇಸರತ್ವವನ್ನು ಪಡೆದಿದ್ದನು. ಜಗರಾಯನೂ ದುರಗಪ್ಪನಾಯಕನಿಗೆ ಅಂಜುತ್ತಿದ್ದನೆಂದು ಹೇಳಬಹುದು. ತಾನು ಇಂಥ ಘನತರವಾದ ಯೋಗ್ಯತೆಯವನೆಂದು ಅಭಿಮಾನಪಡುವ ಆ ಪ್ರತಾಪಿಯು, ತನ್ನ ನಡತೆಯೊಳಗಿನ ತಪ್ಪುಗಳನ್ನು ಧೀರೆಯಾದ ಕುಮುದಿನಿಯು ತಟ್ಟನೆ ಬೈಲಿಗಿಟ್ಟಿದ್ದನ್ನು ನೋಡಿ ಹಣ್ಣಾಗಿದ್ದನು. ಅವನ ಸದಸದ್ವಿವೇಕ ಬುದ್ಧಿಯು ಕುಮುದಿನಿಯ ಮಾತಿಗೆ ಒಪ್ಪಿಕೊಳ್ಳುವಂತೆ ಅವನನ್ನು ಪ್ರೇರೇಪಿಸಿತು. ಆಗ ಆತನು ಕುಮುದಿನಿಯನ್ನು ಕುರಿತು—ಅವ್ವಾ, ನೀನು ಯಾರು, ಯಾವ ಪುಣ್ಯಾತ್ಮನ ಪಾಣಿಗ್ರಹಣ ಮಾಡಿದವಳು, ಎಂಬುದನ್ನು ನಾನು ಅರಿಯೆನು; ಆದರೆ ನಿನ್ನ ಯಥಾರ್ಥವಾದ ಗಂಭೀರ ಭಾಷಣವನ್ನು ಕೇಳಿ, ನೀನು ದೊಡ್ಡ ಮನೆತನದಲ್ಲಿ ಹುಟ್ಟಿದವಳಿರಬೇಕೆಂದು ನಾನು ನಂಬಿದ್ದೇನೆ. ನಾನು ತಟ್ಟನೆ ನಿನ್ನ ಕೈಯನ್ನು ಹಿಡಿಯುವಾಗ ಪಾಪವಾಸನೆಯು ಸರ್ವಥಾ ನನ್ನಲ್ಲಿ ಇದ್ದಿಲ್ಲ ಕಂಡೆಯಾ! ಪತಿವ್ರತೆಯರ ಶಾಪವು ಪ್ರಜ್ವಲಿತವಾದ ಅಗ್ನಿಯೆಂದು ನನ್ನ ಗುರುವು ಹೇಳಿರುವುದರಿಂದ ನಾನು ಯಾವಾಗಲೂ ಅದಕ್ಕೆ ಅಂಜಿ ನಡೆಯುತ್ತೇನೆ. ನನ್ನ ಸ್ವಾಮಿಯ ಶತ್ರುವಿನ ಮಗನನ್ನು ಸೆರೆಮನೆಯಿಂದ ಓಡಿಸಿಕೊಂಡು ಹೋಗುವವರನ್ನು ಪ್ರತಿಬಂಧಿಸಿ, ಸ್ವಾಮಿಕಾರ್ಯವನ್ನು ಸಾಧಿಸಬೇಕೆಂಬ ಸದುದ್ದೇಶದಿಂದ ನಿನ್ನ ಕೈಯನ್ನು ಹಿಡಿದೆನು; ಆದರೆ ಹೊಲ್ಲದ ನನ್ನ ಈ ಕೃತಿಗಾಗಿ ನೊಂದುಕೊಂಡು ಸುಮ್ಮನೆ ಕೋಪಿಸಬೇಡಮ್ಮಾ! ಕ್ಷಮಿಸು. ನೀನು ಎಷ್ಟು ಹೇಳಿದರೂ ರಾಜಪುತ್ರರನ್ನು ಮಾತ್ರ ನಾನು ಬಿಟ್ಟು ಹೋಗುವವನಲ್ಲ. ಇಲ್ಲಿಯೇ–ಇದೇಕ್ಷಣದಲ್ಲಿ–ಅನಾಯಾಸವಾಗಿ ಸಾಧಿಸುವ ಸ್ವಾಮಿಕಾರ್ಯವನ್ನು, ನಾಲ್ಕು ಮೈಲಿನ ಮೇಲೆ–ಕಾಲಾಂತರದಿಂದ–ಬಹು ಶ್ರಮಬಟ್ಟು–ಅನುಮಾನಪಕ್ಷದಿಂದ ಸಾಧಿಸುವ ಮಜಲಿಗೆ ಹೋಗಗೊಡುವುದು ಸ್ವಾಮಿಭಕ್ತರ ಧರ್ಮವಲ್ಲ. ಇಲ್ಲಿಯೇ ಯಾವ ಮಾರ್ಗದಿಂದ ನಾನು ಪೌರುಷವನ್ನು ತೋರಿಸಿದರೆ, ಅಧರ್ಮವಾಗದೆಂಬುದನ್ನು ಹೇಳು. ನಿನ್ನ ಮಾತಿನಲ್ಲಿ ಸ್ವಲ್ಪ ವಾದರೂ ವ್ಯತ್ಯಾಸವನ್ನುಂಟುಮಾಡದೆ ಸ್ವಾಮಿಕಾರ್ಯವನ್ನು ಸಾಧಿಸುವೆನು, ಎಂದು ನುಡಿಯುತ್ತಿರಲು, ಇಪ್ಪತ್ತೈದು ಜನ ಕುದುರೆಯ ಸವಾರರು ಕುದುರೆಗಳನ್ನೋಡಿಸುತ್ತ ದೂರದಿಂದ—"ವೀರಪತ್ನಿಯಾದ ನರಸಿಂಗಪುತ್ರಿಯೇ, ಮಾತೇ–ಕುಮುದಿನೀ, ಬೆದರ ಬೇಡವ್ವಾ! ಇಗೋ ನೋಡು ಬಂದೆವು" ಎಂದು ಕೂಗುತ್ತ ವೇಗದಿಂದ ಬಂದು, ದುರಗಪ್ಪ ನಾಯಕನ ಜನರು ಅತ್ತಿತ್ತ ಸರಿದಾಡದಂತೆ ಸುತ್ತುಗಟ್ಟಿ ನಿಂತುಕೊಂಡರು.

ಈ ವಿಚಿತ್ರ ಯೋಗವನ್ನು ನೋಡಿ ಎಲ್ಲರೂ ಸ್ತಬ್ಧರಾದರು. ಕುಮುದಿನಿಯ ಪಕ್ಷದವರ ದೇಹದಲ್ಲಿ ಪ್ರಾಣಪ್ರತಿಷ್ಠಾಪನೆಯಾದಂತಾಗಿ, ಅವರು ಚೇತರಿಸಿ ಆವೇಶಗೊಂಡರು. ಕುಮುದಿನಿಯನ್ನು ಅಪ್ಪಿಕೊಂಡಿದ್ದ ಬಾಲರಾಜನು ಕೂಡಲೆ ಆಕೆಯನ್ನು ಬಿಟ್ಟು ವೀರಾವೇಶ

ದಿಂದ ತನ್ನ ಪುಟ್ಟ ಖಡ್ಗಕ್ಕೆ ಕೈಯನ್ನು ನೀಡಿದನು. ಇತ್ತ ದುರಗಪ್ಪನಾಯಕನು ಈ ಆಕಸ್ಮಿಕ ಮುತ್ತಿಗೆಯನ್ನೂ, ಮುತ್ತಿದವರು ಕೂಗುತ್ತ ಬಂದ ಕೂಗನ್ನೂ ಮನಸ್ಸಿನಲ್ಲಿ ತಂದು ಬೆರಗಾದದ್ದಲ್ಲದೆ, ತಮ್ಮಿಂದ ಇಮ್ಮಡಿಯಾಗಿರುವ ವೀರರಿಂದ ತಾವು ಸುತ್ತಲ್ಪಟ್ಟಿದ್ದನ್ನು ಸ್ಮರಿಸಿ ಆತನು ಸ್ವಲ್ಪ ಬೆದರಿದನು; ಆದರೆ ಆ ವೀರನ ಈ ಕ್ಷಣೈಕ ಭಯವು ಕೂಡಲೆ ನಷ್ಟವಾಗಿ ಆತನು ಒರೆಯೊಳಗಿಂದ ಖಡ್ಗವನ್ನು ಹಿರಿಯಲು, ಆತನ ಅನುಯಾಯಿಗಳೂ ಸರಸರನೆ ಖಡ್ಗಗಳನ್ನು ಒರೆಗಳಿಂದ ಹಿರಿದರು. ಹೀಗೆ ಹನ್ನೊಂದು ಜನರ ಖಡ್ಗಗಳು ಕತ್ತಲೆಯಲ್ಲಿ ಹೊಳೆಯುವುದನ್ನು ನೋಡಿ, ಕುಮುದಿನಿಯ ಹೊರತಾಗಿ ಆಕೆಯ ಪಕ್ಷದ ಮೂವತ್ತು ಜನರ ಖಡ್ಗಗಳೂ ಒಮ್ಮೆಲೆ ಒರೆಗಳಿಂದ ಹೊರಬಿದ್ದವು. ಹ್ಯಾಗಿದ್ದರೂ ಸದ್ಯಕ್ಕೆ ಕುಮುದಿನಿಯ ಪಕ್ಷವು ಬಲಿಷ್ಠವಾಗಿದ್ದದ್ದರಿಂದ, ಆ ವೀರವನಿತೆಯು ಅಂಜುವ ಕಾರಣವಿದ್ದಿಲ್ಲ. ಇಂಥ ಅನುಕೂಲ ಸ್ಥಿತಿಯಲ್ಲಿ ಆ ದಿಟ್ಟೆಯು ಅಂಜುವಳೆಂತಲೂ ದುರಗಪ್ಪ ನಾಯಕನು ನಂಬಿದ್ದಿಲ್ಲ. ಅಷ್ಟರಲ್ಲಿ ಕುಮುದಿನಿಯು ಸಮಾಧಾನದಿಂದ ನಾಯಕನನ್ನು ಕುರಿತು ನುಡಿದಳೇನಂದರೆ—ರಾಚಿದೇವಾ, ನನಗೆ ಧರ್ಮಯುದ್ಧದ ಮಾರ್ಗವನ್ನು ಕೇಳಿದ ನೀನು, ನನ್ನ ಉತ್ತರದ ಹಾದಿಯನ್ನು ನೋಡನೆ, ನಾನೂ–ನಮ್ಮವರೂ ಸುಮ್ಮನಿರಲು, ಒಮ್ಮೆಲೆ ಖಡ್ಗವನ್ನು ಒರೆಯೊಳಗಿಂದ ಹಿರಿದೆಯಲ್ಲ! ಇದು ಯಾವ ನ್ಯಾಯವು? ನನ್ನ ಮಾತನ್ನು ಕೇಳುವ ಪ್ರಾಮಾಣಿಕತನದ ಇಚ್ಛೆ ನಿನಗಿದ್ದರೆ, ಮೊದಲು ಖಡ್ಗವನ್ನು ಒರೆಗಾಣಿಸು–ನಿನ್ನ ಪಕ್ಷದ ವೀರರೂ ಒರೆಗಾಣಿಸಲಿ; ಅದರಂತೆ ಕುಮುದಿನಿಯ ಪಕ್ಷದವರೆಂದು ನುಡಿಯುತ್ತಿರುವ ಈ ಸವಾರರು. ನಿಜವಾಗಿಯೇ ಕುಮುದಿನಿಯ ಪಕ್ಷದವರಾಗಿದ್ದರೆ, ಅವರೂ ನನ್ನ ಆಜ್ಞೆಯಿಂದ ಈಗ ಖಡ್ಗಗಳನ್ನು ಒರೆಗಾಣಿಸುವರು. ರಾಚಿದೇವಾ, ಕಾರ್ಯದಲ್ಲಿ ಇಷ್ಟು ಅವಸರವೇಕೆ? ಅದರಲ್ಲಿ ಧರ್ಮಯುದ್ಧದ ಪ್ರಸಕ್ತಿಯಿರಲು, ಇಷ್ಟು ಅವಸರವೇಕೆ? ಅಬಲೆಯಾದ ನನ್ನ ಮಾತನ್ನು ಮನ್ನಿಸಿ, ಖಡ್ಗಗಳನ್ನು ಒರೆಗಾಣಿಸಿರುವ ಉಭಯ ಪಕ್ಷದ ವೀರರು, ನನ್ನನ್ನು ಮಗಳೆಂದು ತಿಳಿದು, ಈಗ ನಾನು ಆಡುವ ಮಾತುಗಳನ್ನು ದಯವಿಟ್ಟು ಕೇಳಿಕೊಳ್ಳತಕ್ಕದ್ದು. ಬಂಧುವಾದ ರಾಚಿದೇವನೇ, ನೀನು ಧರ್ಮಯುದ್ಧದಿಂದ ಇಲ್ಲಿಯೇ ರಾಜಪುತ್ರರನ್ನು ಅಪಹರಿಸಬೇಕೆಂದು ಹೇಳುವೆಯಲ್ಲವೆ? ಅದಕ್ಕೂ ನಾನು ಒಪ್ಪಿಕೊಳ್ಳುತ್ತೇನೆ. ಸದ್ಯಕ್ಕೆ ನನ್ನ ಪಕ್ಷವು ಬಲಿಷ್ಠವಾಗಿರುವುದೆಂದು ಉಬ್ಬಿ, ನಿನ್ನನ್ನು ಹಣಿದು ರಾಜಪುತ್ರರೊಡನೆ ಪಾರಾಗಿ ಹೋಗಲಿಕ್ಕೆ ನಾನು ಮನಸ್ಸು ಮಾಡುವುದಿಲ್ಲ. ರಾಜಪುತ್ರರು ಸದ್ಯಕ್ಕೆ ನನ್ನ ಬಳಿಯಲ್ಲಿದ್ದಾರಷ್ಟೆ? ಅಂದಬಳಿಕ ಅವರ ಸಂರಕ್ಷಣದ ಭಾರವು ನನ್ನ ಮೇಲೆಯೇ ಬಿದ್ದಂತಾಯಿತು. ಉಭಯಪಕ್ಷದ ವೀರರು ತಟಸ್ಥವೃತ್ತಿಯಿಂದ ನಿಂತುಕೊಂಡು ನೋಡಲಿ; ನಾವಿಬ್ಬರೂ ಯುದ್ಧ ಮಾಡೋಣ, ಯುದ್ಧದಲ್ಲಿ ನಾನು ಸೋತರೆ, ರಾಜಪುತ್ರನನ್ನು ನೀನು ಅಪಹರಿಸಿಕೊಂಡು ಹೋಗಬಹುದು. ನನ್ನಿಂದ ನೀನೇ ಪರಾಜಿತನಾದರೆ, ನಾನು ರಾಜಪುತ್ರನನ್ನು ಪತಿಯ ಬಳಿಗೆ ಕರೆದೊಯ್ದು ಕೃತಕೃತ್ಯಳಾಗುವೆನು; ಇದು ಧರ್ಮಯುದ್ಧವಾಗಬಹುದೆಂದು ನನಗೆ ತೋರುತ್ತದೆ. ನಿನಗೆ ಸಮ್ಮತವಿದ್ದರೆ, ಯುದ್ಧಕ್ಕೆ ಸಿದ್ಧನಾಗು. ಧರ್ಮಯುದ್ಧವಾಗುವುದೋ ಇಲ್ಲವೋ ಎಂಬ ಸಂಶಯ ಬಂದರೆ, ಧರ್ಮಯುದ್ಧದ ಅಭಿಮಾನಿಗಳನ್ನು ಕೇಳಿಕೊಂಡು

ಬೇಕಾದಾಗ ನನ್ನ ಸಂಗಡ ಯುದ್ಧಮಾಡಿ ರಾಜಪುತ್ರರ ಹಕ್ಕಿನ ನಿರ್ಣಯ ಮಾಡಿಕೋ. ಚಿತ್ರದುರ್ಗದ ಅಧಿಪತಿಗಳಾದ ದುರಗಪ್ಪನಾಯಕರು, ನೀತಿ ವಿಶಾರದರೆಂತಲೂ, ಧರ್ಮ ಯುದ್ಧದ ಅಭಿಮಾನಿಗಳೆಂತಲೂ ನನ್ನ ಪತಿಯ ಮುಖದಿಂದ ಕೇಳಿದ್ದೇನೆ. ಬೇಕಾದರೆ, ಅವರನ್ನು ಕೇಳಿಕೊಂಡು ಬಾ. ನನ್ನ ಈ ನಿಯಮಕ್ಕೆ ನನ್ನ ಪತಿಯಾದ ಎಚ್ಚಮನಾಯಕರು ಒಪ್ಪಿಕೊಂಡೇ ಒಪ್ಪಿಕೊಳ್ಳುವರು. ಅವರು ಒಪ್ಪಿಕೊಳ್ಳದಿದ್ದರೆ, ವಚನಭಂಗ ದೋಷದ ಪ್ರಾಯಶ್ಚಿತ್ತಕ್ಕಾಗಿ ನಾನು ಅಗ್ನಿಪ್ರವೇಶ ಮಾಡುವೆನು. ಇನ್ನು ನಿನ್ನ ಇಚ್ಛೆಯಂತೆ ನಡೆ, ಸ್ವಾಮಿಕಾರ್ಯಸಾಧನ ತತ್ಪರನಾದ ನೀನು ಸುಮ್ಮನೆ ವಿಲಂಬ ಮಾಡಬೇಡ!

ಕುಮುದಿನಿಯ ಈ ಮಾತುಗಳನ್ನು ಕೇಳಿ ದುರಗಪ್ಪನಾಯಕನು ಬಹಳವಾಗಿ ನಾಚಿದನು. ಕುಮುದಿನಿಯು ತನ್ನನ್ನು ದುರಗಪ್ಪನಾಯಕನೆಂದು ತಿಳಿಯದೆ, ರಾಚಿದೇವನೆಂದು ತಿಳಿದಿರುವದೇ ತನ್ನ ಮರ್ಯಾದೆಯುಳಿಸಿಕೊಳ್ಳಲಿಕ್ಕೆ ಸಾಧನವಾಯಿತೆಂದು ಆತನು ಸಮಾಧಾನಪಟ್ಟನು. ತನ್ನ ಕೀರ್ತಿಯಂತೆ ತನ್ನ ಆಚರಣೆಯು ಘಟಿಸಿದ್ದನ್ನು ತಿಳಿದು ಮೊದಲೇ ಅಸಮಾಧಾನಪಟ್ಟಿದ್ದ ಆ ನಾಯಕನು, ಕುಮುದಿನಿಯ ಮಾತುಗಳ ಪೆಟ್ಟಿನಿಂದ ಮೆತ್ತಗಾಗಿ, ಹೆಂಗಸಿನ ಮೇಲೆ ಶಸ್ತ್ರವನ್ನೆತ್ತಿ ಅಪಕೀರ್ತಿಗೆ ಗುರಿಯಾಗಲಿಕ್ಕೆ ಸಮ್ಮತಿಸಲಿಲ್ಲ. ಆತನು ಕುಮುದಿನಿಯನ್ನು ಕುರಿತು–ಅಮ್ಮಾ ಕುಮುದಿನೀ, ನೀನು ಯಥಾಯೋಗ್ಯವಾಗಿ ಹೇಳಿದೆ. ನಾನು ಇಂದು ಒಬ್ಬ ಅಲೌಕಿಕ ಸ್ತ್ರೀಯ ದರ್ಶನ ಮಾಡಿಕೊಂಡಂತಾಯಿತು! ತಾಮಸವೃತ್ತಿಯ ಶಸ್ತ್ರಾಸ್ತ್ರಗಳ ಪ್ರಯೋಗಗಳ ಗೊಂದಲ ವಿಲ್ಲದೆ, ಸಾತ್ವಿಕವೃತ್ತಿಯ ಸದುಪದೇಶದಿಂದಲೇ ನನ್ನನ್ನು ಜಯಿಸಿದ ನಿನಗೆ ನನ್ನ ನಮಸ್ಕಾರಗಳು! ಜಯಶೀಲೆಯಾದ ನೀನು ರಾಜಪುತ್ರರನ್ನೊಡಗೊಂಡು ಸಕಲ ಪರಿವಾರದೊಡನೆ ಯಥೇಚ್ಛವಾಗಿ ನಿನ್ನ ಪತಿಯ ಸನ್ನಿಧಿಯನ್ನು ಹೊಂದು. ನಿನ್ನ ಅಪ್ಪಣೆ ದೊರೆತರೆ ನಾನು ನನ್ನ ಪರಿವಾರದೊಡನೆ ಚಂದ್ರಗಿರಿಗೆ ಹೋಗುತ್ತೇನೆ, ಅನ್ನಲು, ಕುಮುದಿನಿಯು ಕುದುರೆಯಿಂದಿಳಿದು ರಾಚಿದೇವನನ್ನು ವಂದಿಸಿ–ಎಲೈ ಸನ್ಮಾನನೀಯನಾದ ಪುರುಷಶ್ರೇಷ್ಠನೇ, ನೀನು ಸದ್ಗುಣಾತಿಶಯದಿಂದ ನಿಜವಾಗಿ ಪೂಜ್ಯನಿರುತ್ತೀ. ಕನ್ನಡಿಗರ ಇಂಥ ಹೀನಸ್ಥಿತಿಯಲ್ಲಿಯೂ ನಿನ್ನಂಥ ಸುಜನರು ಅವರಲ್ಲಿ ಹುಟ್ಟುತ್ತಿರುವುದು ಸಮಾಧಾನದ ಸಂಗತಿಯು. ಪ್ರಮಾದದಿಂದ ನನ್ನಿಂದಾದ ಅಪರಾಧಗಳನ್ನು ಕ್ಷಮಿಸಿ, ರಾಜಪುತ್ರರೊಡನೆ ಪತಿಯ ಬಳಿಗೆ ಹೋಗಲಿಕ್ಕೆ ನನಗೆ ಅಪ್ಪಣೆಯನ್ನು ಕೊಡು, ಎಂದು ಕೇಳಿಕೊಳ್ಳಲು, ದುರಗಪ್ಪನಾಯಕನು ಕೂಡಲೆ ತಾನೂ ಕುದುರೆಯನ್ನಿಳಿದು, ಬಹುಮಾನ ಪೂರ್ವಕವಾಗಿ ಕುಮುದಿನಿಗೆ ಕುದುರೆಯನ್ನು ಹತ್ತಬೇಕೆಂದು ಹೇಳಿ, ರಾಜಪುತ್ರನನ್ನು ಅಭಿವಂದಿಸಿ, ತಾನು ಕುದುರೆಯನ್ನು ಹತ್ತಿ ತನ್ನ ಅನುಯಾಯಿಗಳೊಡನೆ ಚಂದ್ರಗಿರಿಯ ಕಡೆಗೆ ಸಾಗಿದನು. ಇತ್ತ ಕುಮುದಿನಿಯೂ ತನ್ನ ಪರಿವಾರವನ್ನೊಡಗೊಂಡು ಆನಂದದಿಂದ ತನ್ನ ಪಾಳಯದ ಕಡೆಗೆ ತೆರಳಿದಳು. ಹಾದಿಯಲ್ಲಿ ಹೋಗಹೋಗುತ್ತ ತಿರುಮಲರಾಯನೆಂಬ ಸರದಾರನು ಕುಮುದಿನಿಯನ್ನು ಕುರಿತು–ತಾಯೀ, ನಿನ್ನ ಸಂಕೇತದಂತೆ ಚಂದ್ರಗಿರಿಯಿಂದ ಎರಡು ಮೈಲುಗಳ ಮೇಲೆ ನಾವು ನಿನ್ನ ದಾರಿಯನ್ನು ನೋಡುತ್ತ ನಿಂತುಕೊಂಡಿದ್ದೆವು; ಆದರೆ ದೂರದಿಂದ ಬಹಳ ಕುದುರೆಗಳ ಕಾಲಸಪ್ಪಳಗಳು ಕೇಳಹತ್ತಿದ್ದರಿಂದ, ವೈರಿಗಳಿಂದ ಏನಾದರೂ

ಅಪಾಯ ಒದಗುವ ಸಂಭವವಿರಬಹುದೆಂದು ತಿಳಿದು ನಾವು ಮುಂದಕ್ಕೆ ಸಾಗಿ ನಿನ್ನ ಬಳಿಗೆ ಬಂದೆವು. ಬಂದದ್ದು ಬಹಳ ನೆಟ್ಟಗಾಯಿತೆಂದು ತೋರುತ್ತದೆ. ನಿನ್ನಂಥ ಸತ್ವಶಾಲಿನಿಗೆ ಅನ್ಯರ ಸಹಾಯದ ಅಪೇಕ್ಷೆಯಿರದಿದ್ದರೂ, ನಮ್ಮ ಕರ್ತವ್ಯವನ್ನು ಸರಿಯಾಗಿ ಮಾಡಿದ ಬಗ್ಗೆ ನಮಗೆ ಬಹಳ ಸಮಾಧಾನವಾಗಿರುವುದು, ಎಂದು ನುಡಿಯಲು, ಕುಮುದಿನಿಯು ತನ್ನ ರಾಹುತರಿಂದಾದ ಅತ್ಯಂತ ಮಹತ್ವದ ಸಹಾಯಕ್ಕಾಗಿ ಸಮಯೋಚಿತವಾದ ಮೃದುನುಡಿಗಳಿಂದ ತಿರುಮಲರಾಯನೇ ಮೊದಲಾದವರನ್ನು ಸಂತೋಷಗೊಳಿಸಿದಳು. ಹೀಗೆ ಜಯದಿಂದ ಉತ್ಸಾಹ ಗೊಂಡ ಆ ವೀರರ ತಂಡವು ಪ್ರಸಂಗಕ್ಕೆ ತಕ್ಕ ಮಾತುಗಳನ್ನಾಡುತ್ತ ಎಚ್ಚಮನಾಯಕನ ಪಾಳಯ ವನ್ನು ಮುಟ್ಟಿತು.

ಕುಮುದಿನಿಯು ಪಾಳಯವನ್ನು ಮುಟ್ಟಿದಾಗ ಅರುಣೋದಯ ಸಮಯವಾಗಿತ್ತು ಪಾಳಯದೊಳಗಿನ ದಂಡಾಳುಗಳು ಎದ್ದು ಕೆಲವರು ಉದಯರಾಗ ಮಾಡುತ್ತಿದ್ದರು; ಕೆಲವರು ಪ್ರಾತಸ್ಮರಣ ಮಾಡುತ್ತಿದ್ದರು; ಕೆಲವರು ತಮ್ಮ ಕುದುರೆಗಳಿಗೆ ಜೀನು ಏರಿಸಿ ಸವಾರಿಗೆ ಹೊರಡುತ್ತಲಿದ್ದರು. ಅಷ್ಟರಲ್ಲಿ ಮೂಡಲು ಕೆಂಪೇರಿ ಕತ್ತಲೆಯು ಹರಿಯಹತ್ತಿತು. ಕೈಕೊಂಡ ಕಾರ್ಯವು ಸಾಧಿಸಿದ್ದರಿಂದ ಕುಮುದಿನಿಯು ಸಂತೋಷಭರಿತಳಾಗಿ ರಾಜಪುತ್ರನೊಡನೆ ಆತನ ಭಾವೀ ವೈಭವವನ್ನು ಕುರಿತು ಆನಂದದಿಂದ ಮಾತಾಡತೊಡಗಿದ್ದಳು. ಆಗ ನಡುನಡುವೆ ಆಕೆಗೆ ಪತಿಯ ಸ್ಮರಣವಾಗಿ ಆನಂದಾತಿಶಯದಿಂದ ಆಕೆಯ ಶರೀರವು ರೋಮಾಂಚಿತವಾಗುತ್ತಿತ್ತು ರಾಜಪುತ್ರನು ಒಂದೇ ರಾತ್ರಿಯಲ್ಲಿ ಕುಮುದಿನಿಯ ಸಹವಾಸದಿಂದ ಎಷ್ಟೋ ಮಹತ್ವದ ಸಂಗತಿಗಳನ್ನು ಅವಲೋಕಿಸಿದನು. ಅದರಿಂದ ಆತನ ಚಿತ್ತವೃತ್ತಿಯು ಉನ್ನತಿಯನ್ನು ಪಡೆದು, ಅದರಲ್ಲಿ ಪ್ರತಾಪ, ಧೈರ್ಯ ಮೊದಲಾದ ಮಹತ್ವದ ಗುಣಗಳ ಬೀಜಾರೋಪಣವಾಯಿತು. ರಾಜಪುತ್ರರು ದಯಮಾಡಿಸಿದ ಸುದ್ದಿಯನ್ನು ಎಚ್ಚಮನಾಯಕನಿಗೆ ಹೇಳುವುದಕ್ಕಾಗಿ ತಿರುಮಲರಾಯನು ಪಾಳಯದೊಳಗೆ ಹೋಗಿರಲು, ಇತ್ತ ಕುಮುದಿನಿಯೇ ಮೊದಲಾದವರು ಪ್ರಾತರ್ವಿಧಿಗಳನ್ನು ತೀರಿಸಿಕೊಂಡು, ತಮ್ಮ ಉಡುಪು-ತೊಡುಪುಗಳನ್ನು ಸರಿಮಾಡಿಕೊಳ್ಳ ಹತ್ತಿದರು. ರಾಜಪುತ್ರನನ್ನು ಯುದ್ಧದ ಉಡುಪುತೊಡುಪುಗಳಿಂದ ಕುಮುದಿನಿಯು ಕೈಮುಟ್ಟಿ ಶೃಂಗರಿಸಿದಳು. ಅತ್ತ ಕುದುರೆಗಳು ಅದೇ ಹುಟ್ಟಿದ್ದ ಹುಲ್ಲನ್ನು ಮೇಯುತ್ತ ಶ್ರಮಪರಿಹಾರಾರ್ಥವಾಗಿ ಆಗಾಗ್ಗೆ ಭುರುಗುಟ್ಟುತ್ತಿದ್ದವು. ಅಷ್ಟರಲ್ಲಿ ಬೆಳ್ಳಗೆ ಬೆಳಗಾಯಿತು. ಪಾಳಯದಲ್ಲಿ ರಣವಾದ್ಯಗಳೂ, ಬೇರೆ ಮಂಗಲವಾದ್ಯಗಳೂ ಭೋರ್ಗರೆಯಹತ್ತಿದವು. ಎಚ್ಚಮನಾಯಕನ ಆನಂದವು ಹೊಟ್ಟೆಯಲ್ಲಿ ಹಿಡಿಸದಾಯಿತು. ಆತನು ಎದುರುಗೊಳ್ಳುವ ಸಿದ್ಧತೆಯನ್ನು ಮಾಡಿಕೊಂಡು ತೀವ್ರ ಬರುವುದಕ್ಕಾಗಿ ತಿರುಮಲರಾಯನಿಗೆ ಹೇಳಿ, ತಾನು ದರ್ಬಾರದ ಉಡುಪು-ತೊಡುಪುಗಳನ್ನು ಹಾಕಿಕೊಂಡು ರಾಜದರ್ಶನಕ್ಕಾಗಿ ಲಗುಬಗೆಯಿಂದ ಹೊರಟನು. ನಡುವೆ ಎಚ್ಚಮನಾಯಕನು, ಎಡಬಲಗಳಲ್ಲಿ ಇಬ್ಬರು ಸರದಾರರು, ಹಿಂದೆ ನಾಲ್ಕು ಜನ ರಾವುತರು, ಮುಂದೆ ನಾಲ್ಕು ಜನ ರಾವುತರು. ಇಷ್ಟೇ ಪರಿವಾರದಿಂದ ನಾಯಕನು ಹೊರಟಿದ್ದನು. ನಾಯಕನ ಹಾಗು ಸರದಾರರ ಬಿಚ್ಚುಗತ್ತಿಗಳು ಟೊಂಕದಲ್ಲಿ ಅಲೆದಾಡುತ್ತಿದ್ದವು.

ರಾವುತರು ತಮ್ಮ ಬಿಚ್ಚುಗತ್ತಿಗಳನ್ನು ನೆಗಹಿ, ತಮ್ಮ ಒಡೆಯ ನನ್ನು ವಕ್ರದೃಷ್ಟಿಯಿಂದ ನೋಡುವವರನ್ನು ಕ್ಷಣದಲ್ಲಿ ತುಂಡರಿಸುವೆವೆಂಬ ಭಾವವನ್ನು ವ್ಯಕ್ತಗೊಳಿಸುತ್ತ ಸಾಗಿದ್ದರು. ಬೆಟ್ಟದಂಥ ಕುದುರೆಗಳು ಉಷಃಕಾಲದ ಸ್ವಾಭಾವಿಕವಾದ ತಮ್ಮ ಉಲ್ಲಾಸದಿಂದ ಸ್ಫೂರ್ತಿಗೊಂಡು ಭರದಿಂದ ಸಾಗಿರಲು, ಪ್ರಭುಶಕ್ತಿಯ ದರ್ಪವು ನೋಡುವವರ ಹೃದಯದಲ್ಲಿ ಬಿಂಬಿಸಿ ಲೀನತೆಯನ್ನು ಹುಟ್ಟಿಸುತ್ತಿತ್ತು. ಎಚ್ಚಮನಾಯಕನು ಕುಮುದಿನಿಯನ್ನು ಮನಸ್ಸಿನಲ್ಲಿ ಶತಃ ಅಭಿನಂದಿಸುತ್ತ ಅಲ್ಪಕಾಲದಲ್ಲಿ ಮುಕ್ಕಾಲು ಮೈಲಿನ ಹಾದಿಯನ್ನು ಕ್ರಮಿಸಿ ರಾಜಪುತ್ರನ ಸನ್ನಿಧಿಯನ್ನು ಹೊಂದಿದನು.

ಎಚ್ಚಮನಾಯಕನು ಹೋದಾಗ, ರಾಜಪುತ್ರನು ಯುದ್ಧದ ಉಡುಪು–ತೊಡುಪುಗಳನ್ನು ಧರಿಸಿ, ವೀರಾಗ್ರೇಸರನಾದ ಅಭಿಮನ್ಯುವಿನ ನೆನಪುಮಾಡಿ ಕೊಡುತ್ತ ವೀರಾಸನವನ್ನು ಹಾಕಿ ದರ್ಪದಿಂದ ಕುಳಿತಿದ್ದನು. ಕುಮುದಿನಿಯು ಆತನ ಹಿಂದೆ ನಿಂತು ಭಕ್ತಿಯಿಂದ ಓಲಯಿಸುತ್ತಿದ್ದಳು. ದಂಡಾಳುಗಳು ಖಡ್ಗಪಾಣಿಗಳಾಗಿ ಸುತ್ತುಗಟ್ಟಿ ನಿಂತಿದ್ದರು. ಉಳಿದ ಜನರು ಕೈಕಟ್ಟಿಕೊಂಡು ದೂರ ನಿಂತುಕೊಂಡಿದ್ದರು. ಈ ಅಪೂರ್ವ ನೋಟವನ್ನು ನೋಡಿ ಎಚ್ಚಮನಾಯಕನ ರಾಜನಿಷ್ಠೆಯು ಉಕ್ಕಿಬಂದು, ಆತನ ಕಣ್ಣುಗಳು ಆನಂದಬಾಷ್ಪಗಳಿಂದ ಪೂರ್ಣವಾದವು. ಆತನು ರಾಜ ಕುಮಾರನನ್ನು ಸಾಷ್ಟಾಂಗವಾಗಿ ವಂದಿಸಿ, ಕಾಣಿಕೆಯನ್ನರ್ಪಿಸಿ ತನ್ನ ನಿಷ್ಠೆಯನ್ನು ಪ್ರಕಟಿಸಿದನು. ಆಗರ್ಭ ಶ್ರೀಮಂತನಾದ ರಾಜಕುಮಾರನು, ನಾಯಕನನ್ನು ಯಥೋಚಿತವಾಗಿ ಮನ್ನಿಸಿ ಕುಳಿತು ಕೊಳ್ಳುವುದಕ್ಕೆ ಸ್ಥಳವನ್ನು ತೋರಿಸಲು, ನಾಯಕನು ವಿನಯದಿಂದ ತಲೆಬಾಗಿ ಸಮ್ಮತಿಯನ್ನು ಪ್ರಕಟಿಸಿ, ಕುಮುದಿನಿಯನ್ನು ಕೃತಜ್ಞತೆಯಿಂದ ಬಹುಮಾನ ಪೂರ್ವಕವಾಗಿ ನೋಡುತ್ತ ತನ್ನ ಆಸನದಲ್ಲಿ ಕುಳಿತುಕೊಂಡನು. ಆಗ ಜಯಶಾಲಿಯಾದ ಕುಮುದಿನಿಯ ಮುಖಕಮಲವು ಪ್ರಫುಲ್ಲಿತವಾಯಿತು. ಆಕೆಯ ವಿಶಾಲವಾದ ನೇತ್ರಗಳ ಹೊಳಪೂ, ನಿಷ್ಕಲಂಕವಾದ ಮುಖಕಾಂತಿಯೂ, ಅಪೂರ್ವವಾದ ಸೌಂದರ್ಯದ ಸೊಬಗೂ, ಬೆಳಗಿನ ಸುಳಿಗಾಳಿಯಿಂದ ಮೆಲ್ಲಮೆಲ್ಲನೆ ಅಲ್ಲಾಡುವ ಮುಂಗುರುಳುಗಳ ಚಂದವೂ ನಾಯಕನಲ್ಲಿ ಧನ್ಯತೆಯನ್ನುಂಟು ಮಾಡಿದವು. ಪತಿಯು ತನ್ನ ಮೇಲೆ ಕೃಪಾದೃಷ್ಟಿಯನ್ನು ಚೆಲ್ಲಿದಾಗ ಕುಮುದಿನಿಯು ತಾನು ಕಾರ್ಯಸಾಧಿಸಿದವಳೆಂಬ ಗರ್ವದಿಂದಾಗಲಿ, ಮಹಾ ಸಾಹಸಿಯೆಂಬ ಅಭಿಮಾನದಿಂದಾಗಲಿ, ಪತಿಯ ದರ್ಶನವನ್ನು ತಕ್ಕೊಳ್ಳಲಿಲ್ಲ; ಆಕೆಯು ಅತ್ಯಂತ ವಿನಯ ಶೀಲಳಾಗಿ ನಿಸ್ಪೃಹತೆಯನ್ನು ಪ್ರಕಟಿಸಿದಳು. ಪತಿಯ ದರ್ಶನದಿಂದ ಆಕೆಗೆ ಸ್ವರ್ಗಸುಖವು ಪ್ರಾಪ್ತವಾದಂತಾಯಿತು. ನಾಯಕನು ರಾಜಪುತ್ರರ ಯೋಗಕ್ಷೇಮವನ್ನು ವಿಚಾರಿಸುತ್ತ ನಡುನಡುವೆ ಪೌರುಷಶೀಲಳಾದ ತನ್ನ ಪತ್ನಿಯನ್ನು ಅಭಿಮಾನಪುರಸ್ಸರವಾಗಿ ನೋಡುವಾಗ, ಆ ವಿನಯಸಂಪನ್ನಳ ಹೃದಯವು, ಆನಂದಾಬ್ಧಿಯ ತೆರೆಗಳ ಆಘಾತದಿಂದ ಕಂಪಿತವಾಗುತ್ತಿತ್ತು! ಅವಳ ಸರ್ವಾಂಗವು ರೋಮಾಂಚಿತವಾಗುತ್ತಿತ್ತು! ಈ ಅಪೂರ್ವ ಪ್ರಸಂಗದಿಂದುಂಟಾದ ಆನಂದದಿಂದ ಪರಿವಾರವೆಲ್ಲ ಪರವಶವಾಗಿರಲು, ತಿರುಮಲರಾಯನು ಸರ್ವಸನ್ನಾಹದೊಡನೆ ರಾಜಪುತ್ರರನ್ನು ಎದುರುಗೊಳ್ಳುವುದಕ್ಕಾಗಿ ಬಂದನು. ವೈಭವದಿಂದ ರಾಜಪುತ್ರರ

ಮೆರವಣಿಗೆಯು ಹೊರಟು ಪ್ರವೇಶ ಸಮಾರಂಭವು ಸಾಂಗವಾಯಿತು. ಅಷ್ಟರಲ್ಲಿ ಪಾಳಯವನ್ನು ಗುಡಿ–ತೋರಣ ಧ್ವಜ–ಪತಾಕೆ ಮೊದಲಾದವು ಗಳಿಂದ ಅಲಂಕರಿಸಿದ್ದರು. ಹೀಗೆ ರಾಜಪುತ್ರರು ಪಾಳಯಕ್ಕೆ ದಯಮಾಡಿಸಿ, ಅದನ್ನು ಸನಾಥವಾಗಿ ಮಾಡಿದ್ದರಿಂದ, ಭಾವೀಕಲ್ಯಾಣದ ಸುಚಿಹ್ನವು ಎಲ್ಲರ ಮನಸ್ಸಿನಲ್ಲಿ ಹೊಳೆಯಹತ್ತಿತು!

## ಮುಯ್ಯಕ್ಕೆ ಮುಯ್ಯ

ದುರಗಪ್ಪನಾಯಕನು ಚಂದ್ರಗಿರಿಗೆ ಹೋದಬಳಿಕ, ರಾಜಪುತ್ರನನ್ನು ಕುಮುದಿನಿಯು ಎಬ್ಬಿಸಿಕೊಂಡು ಹೋದ ವರ್ತಮಾನವು ನಾಲ್ಕೂ ಕಡೆಗೆ ಹಬ್ಬಿತು. ಈ ದುಷ್ಟ ವಾರ್ತೆಯನ್ನು ಕೇಳಿ ಜಗರಾಯನು ಬಹಳ ವ್ಯಥೆಪಟ್ಟನು. ರಾಜಪಕ್ಷದವನೊಬ್ಬ ಪುರುಷನಾದರೂ ಎಚ್ಚಮನಾಯಕನು ಕಡೆಗೆ ಇದ್ದ ಹೊರತು ಅವನ ಪಕ್ಷವು ಬಲಿಷ್ಠವಾಗಲಾರದೆಂದು ತಿಳಿದು, ಜಗರಾಯನು ಕೆಲಮಟ್ಟಿಗಾದರೂ ಸಮಾಧಾನದಿಂದಿದ್ದನು! ಆದರೆ ಈಗೊದಗಿದ ಪ್ರಸಂಗ ದಿಂದ ಆ ಸಮಾಧಾನಕ್ಕೂ ಮಾರ್ಗವಿಲ್ಲದಂತಾಗಲು, ಆತನ ಮನಸ್ಸಿಗೆ ಏನೂ ಬೇಡಾಯಿತು. ಎಷ್ಟೋ ದಿವಸಗಳವರೆಗೆ ಆತನು ಅರಮನೆಯಿಂದ ಹೊರಗೆ ಬಾರದಾದನು. ಸರದಾರರು ಆತನ ಯೋಗಕ್ಷೇಮಕ್ಕಾಗಿ ಅರಮನೆಗೆ ಹೋಗುತ್ತ–ಬರುತ್ತಲಿದ್ದರು. ಒಂದು ದಿವಸ ದುರಗಪ್ಪ ನಾಯಕನೂ ಜಗರಾಯನ ಭೆಟ್ಟಿಗೆ ಹೋದನು. ಆಗ ಅಲ್ಲಿ ಬೇರೆ ನಾಲ್ಕು ಜನ ಸರದಾರರು ಜಗರಾಯನ ಯೋಗಕ್ಷೇಮವನ್ನು ವಿಚಾರಿಸುತ್ತ ಕುಳಿತಿದ್ದರು. ಆಗಿನ ಕರ್ನಾಟಕದಲ್ಲಿ ದುರಗಪ್ಪ ನಾಯಕನನ್ನು ಹೋಲುವಂಥ ಸರದಾರರು ತೀರ ಅಪರೂಪವಾಗಿದ್ದರು. ಡಾಂಭಿಕರೂ, ಆಲಸ್ಯಕ್ಕೆ ಮೆಚ್ಚಿದವರೂ, ದುರ್ವ್ಯಸನಿಗಳೂ, ಪರರ ಉತ್ಕರ್ಷವನ್ನು ಸಹಿಸದವರೂ, ಚಾಡಿ–ಚುದ್ದರಗಳಿಂದ ಪರಸ್ಪರರಲ್ಲಿ ಒಡಕನ್ನು ಹುಟ್ಟಿಸುವವರೂ ವಿಶೇಷವಾಗಿದ್ದರು. ಮೇಲೆ ಹೇಳಿದ ನಾಲ್ವರು ಸರದಾರರೂ ಇದೇ ವರ್ಗದವರಾಗಿದ್ದರೆಂದು ಹೇಳಬಹುದು. ಅವರು ದುರುಗಪ್ಪನಾಯಕನ ಉತ್ಕರ್ಷಕ್ಕೂ, ಅವನ ಸದ್ಗುಣಗಳಿಗೂ ಅಸೂಯೆಪಡುತ್ತಿದ್ದು, ಆ ನಾಯಕನ ವಿಷಯವಾಗಿ ಜಗರಾಯನ ಮನಸ್ಸನ್ನು ಹ್ಯಾಗೆ ಕೆಡಿಸೋಣವೆಂದು ಹೊಂಚು ಹಾಕಿಕೊಂಡು ಕುಳಿತಿದ್ದರು. ಆ ನೀಚರಿಗೆ ರಾಜಪುತ್ರನ ಪ್ರಕರಣವು ಅನಾಯಾಸವಾಗಿ ಅನುಕೂಲಿಸಿತು. ಈ ಅಧಮರು, ದುರಗಪ್ಪನಾಯಕನಂಥ ಘನವಾದ ಯೋಗ್ಯತೆಯ ಮನುಷ್ಯನು ತಾನಾಗಿ ಮನೆಮುಟ್ಟಿ ಸಮಾಚಾರಕ್ಕೆ ಬಂದರೆ, ಆತನ ಆದರಾತಿಥ್ಯವನ್ನು ಯೋಗ್ಯರೀತಿಯಿಂದ ಮಾಡದಷ್ಟು ಜಗರಾಯನ ಮನಸ್ಸನ್ನು ಕೆಡಿಸಿದ್ದರು. ಕೈಯಲ್ಲಿ ಸಿಕ್ಕ ರಾಜಪುತ್ರನನ್ನೂ, ಕುಮುದಿನಿಯನ್ನೂ ಸುರಕ್ಷಿತವಾಗಿ ಹೋಗಗೊಟ್ಟು, ದುರಗಪ್ಪನಾಯಕನೇ ಘಾತಮಾಡಿದನೆಂದು ಜಗರಾಯನ ನಂಬಿಗೆಯಾಗಿಹೋಗಿತ್ತು. ಆದ್ದರಿಂದ ಆತನು ಮನೆಗೆ ಬಂದ ದುರಗಪ್ಪ ನಾಯಕನನ್ನು ಮಾತಾಡಿಸಲಿಲ್ಲ, ನೆಟ್ಟಗೆ ಕೂಡ್ರೆನ್ನಲಿಲ್ಲ ಸಹ! ಇದು

ದುರಗಪ್ಪನಾಯಕನ ಮನಸ್ಸಿಗೆ ಬಹಳವಾಗಿ ಹತ್ತಿದರೂ, ಆತನು ಅದನ್ನು ಹೊರಗೆ ತೋರಗೊಡದೆ, ಹೋದತಪ್ಪಿಗಾಗಿ ಸ್ಥಳವಿದ್ದಲ್ಲಿ ಕುಳಿತುಕೊಂಡನು. ಕೆಲವು ಹೊತ್ತಿನವರೆಗೆ ಎಲ್ಲರೂ ಸುಮ್ಮನೆ ಕುಳಿತಿದ್ದರು. ಆಗ ಜಗರಾಯನು ಉರಿಮೋರೆಯಿಂದ ತನ್ನ ಬಳಿಯಲ್ಲಿ ಕುಳಿತಿದ್ದ ನಾಲ್ಕು ಜನ ಸರದಾರರ ಕಡೆಗೆ ನೋಡಿ–ಏನು ಮಾಡಬೇಕು! ನಮ್ಮವರೆನಿಸಿ ಕೊಳ್ಳುವವರೇ ಹೊತ್ತಿನಲ್ಲಿ ಕುತ್ತಿಗೆ ಕೊಯ್ದ ಹಾಗಾಯಿತು. ಕೈಯಲ್ಲಿ ವೈರಿಗಳು ಸಿಕ್ಕಿರಲು, ಧರ್ಮಯುದ್ಧದ ಡಾಂಭಿಕತನದಿಂದ ಅವರನ್ನು ಸುಮ್ಮನೆ ಹೋಗಗೊಡುವುದು ಮೂರ್ಖತನದ ಲಕ್ಷಣವಲ್ಲದೆ ಮತ್ತೇನು? ಭೀಷ್ಮನ ಧರ್ಮಯುದ್ಧದ ಸೋಗಿನಿಂದಲೇ ಭಾರತಯುದ್ಧದ ಪರಿಣಾಮವು ವಿಪರೀತವಾಗಿ, ದುರ್ಯೋಧನನು ಮುಣುಗಿಹೋದನು. ಈ ಧರ್ಮಯುದ್ಧದ ಹುಚ್ಚಿನ ಕಾಲದಲ್ಲಿಯೇ ರಜಪೂತರು ಹಾಳಾದರು. ತಮ್ಮ ಕುಯುಕ್ತಿಯನ್ನೂ, ಸ್ವಾರ್ಥವನ್ನೂ ಸಾಧಿಸಲಿಕ್ಕೆ ಎಷ್ಟೋ ಜನರು ಧರ್ಮಯುದ್ಧದ ನಿಶಾನೆಯನ್ನು ಮುಂದೆ ಮಾಡುವುದುಂಟು. ಅದರಲ್ಲಿ ಪ್ರಾಯದ ಸುಂದರ ಸ್ತ್ರೀಯರು ಎದುರಾದಲ್ಲಿಯಂತು ಧರ್ಮಯುದ್ಧಕ್ಕೆ ಪೂರಾ ಕಳೆಯೇರುತ್ತದೆ!

ಜಗರಾಯನು ವಿಚಾರಶೂನ್ಯನಾಗಿ ಹೀಗೆ ಮನಸ್ಸಿಗೆ ಹತ್ತುವ ಮಾತುಗಳನ್ನಾಡಲು, ಆ ಚಂಡಾಲ–ಚೌಕಳಿಯು ಪರಸ್ಪರರನ್ನು ನೋಡಿ ನಗತೊಡಗಿತು. ಇದನ್ನು ನೋಡಿ ದುರಗಪ್ಪ ನಾಯಕನಿಗೆ ಬಹಳ ಅಸಮಾಧಾನವಾಯಿತು. ಆದರೂ ಆತನು ಶಾಂತವೃತ್ತಿಯಿಂದ ಜಗರಾಯನಿಗೆ–ರಾಯರೇ, ನಾನು ರಾಜಪುತ್ರರನ್ನು ಹೋಗಗೊಟ್ಟಿದ್ದು ಕಾರ್ಯಸಾಧನದ ದೃಷ್ಟಿಯಿಂದ ಅಯೋಗ್ಯವಾಗಿರುವ ಕಾರಣ, ತಾವು ನನ್ನ ಮೇಲೆ ಸಿಟ್ಟಾದದ್ದಕ್ಕಾಗಿ ನಾನು ದೋಷವಿಡುವುದಿಲ್ಲ. ಧರ್ಮಯುದ್ಧವು ಕಲಿಯುಗದಲ್ಲಿ ನಿಷೇಧವೆಂತಲೇ ಹೇಳಬೇಕಾಗುತ್ತದೆ. ಅದಕ್ಕೆ ಎರಡೂ ಪಕ್ಷದವರು ಧರ್ಮಿಷ್ಠರಾಗಿರಬೇಕಾಗುವುದು. ನಿನ್ನೆ ಅಂಥ ಸುಯೋಗವು ಒದಗಿದ್ದರಿಂದ ನಿರ್ವಾಹವಿಲ್ಲದೆ ಧರ್ಮಯುದ್ಧದ ಪ್ರಸಕ್ತಿಗೆ ಹೋಗಬೇಕಾಯಿತು. ಧರ್ಮಯುದ್ಧವು ಕೇವಲ ಲಾಭವನ್ನು ಸಂಪಾದಿಸುವ ಸಾಧನವಲ್ಲ; ಅದು ಶೂರರ ನಿಜವಾದ ಶೌರ್ಯವನ್ನು ಪರೀಕ್ಷಿಸುವ ಒರೆಗಲ್ಲೂ, ಸತ್ವಶಾಲಿಗಳಾದ ವೀರರ ಸತ್ವವನ್ನು ಅಳೆಯುವ ಸತ್ವಮಾಪಕಯಂತ್ರವೂ ಆಗಿರುವುದು. ನಿಸ್ಪೃಹಿಗಳಾದ ಸದ್ಗುಣಮಂಡಿತ ರಣಪಂಡಿತರಲ್ಲದೆ, ಅನ್ಯರು ಅದಕ್ಕೆ ಮನಸ್ಸು ಮಾಡರು! ಈ ಕೌತುಕದ ಯುದ್ಧವು, ಭರತಭೂಮಿಯೊಳಗಿನ ಉದಾರವೃತ್ತಿಯ ಕ್ಷತ್ರಿಯ ವೀರರು ಮಾತ್ರ ಧರಿಸುವ ಅಮೌಲ್ಯ ಮಂಡನವಾಗಿರುತ್ತದೆ! ಈ ಯುದ್ಧದ ಅಭಿಮಾನಿಗಳಿಗೆ ಜಯಕ್ಕಿಂತ ಕೀರ್ತಿಯಲ್ಲಿ ಅಭಿಲಾಷೆ ಹೆಚ್ಚು. ಪ್ರಿಯಮಿತ್ರರಾದ ಜಗರಾಯರೇ, ಇಂಥ ಕ್ಷುದ್ರಪ್ರಸಂಗಕ್ಕಾಗಿ ನೀವು ಹೀಗೆ ಉದಾಸೀನರಾಗಬಹುದೇ? ಭೀಷ್ಮಾಚಾರ್ಯರಂಥ ಮಹಾತ್ಮರ ಕೃತಿಗೆ ಉದ್ದೇಶವರಿಯದೆ ಈಗ ಹೆಸರಿಡುವುದೇಕೆ? ರಜಪೂತರ ಧರ್ಮಯುದ್ಧದಿಂದ ಅವರ ಶುಭ್ರಕೀರ್ತಿಗೆ ಏನು ಕಲಂಕವುಂಟಾಗಿದೆ? ಪ್ರತಿ ಒಬ್ಬರು ತಮ್ಮ ತಮ್ಮ ಸಮಾಧಾನಕ್ಕಾಗಿ ಕಾರ್ಯಮಾಡುತ್ತಿರುವುದರಿಂದ ಸುಮ್ಮನೆ ಒಬ್ಬರು ಮತ್ತೊಬ್ಬರಿಗೆ ಹೆಸರಿಡುವುದು ಸರಿಯಲ್ಲ. ಈಗ ನಿಮಗೆ ಅಂಥ ಪ್ರಸಂಗವಾದರೂ ಏನು

ಬಂದಿದೆ? ರಾಜಪುತ್ರರನ್ನು ಹಿಡತರುವುದು ಅವಶ್ಯವಿದ್ದರೆ, ಅಪ್ಪಣೆಯಾಗಬೇಕು; ಈಗಲೆ ಸೈನ್ಯದೊಡನೆ ಎಚ್ಚಮನಾಯಕನ ಪಾಳಯವನ್ನು ನುಗ್ಗಿ ರಾಜಪುತ್ರರನ್ನು ಹಿಡತರುತ್ತೇನೆ. ಇಂದಿನ ಹಾನಿಯನ್ನು ಈ ದುರಗಪ್ಪನಾಯಕನು ತುಂಬಿಕೊಡದೆ ಇರನು. ತಾವು ಮಹಾ ಕಾರ್ಯಕ್ಕೆ ಕೈಹಾಕಿರುವುದರಿಂದ ಹೀಗೆ ಶೂರರ ಮನಸ್ಸಿಗೆ ಹತ್ತುವಂಥ ಮಾತುಗಳನ್ನು ಆಡಬಾರದು. ಎಲ್ಲರೂ ತಿಳಿದವರೇ ಇರುತ್ತಾರೆಂಬ ನಿಯಮವಿಲ್ಲ. ಅಷ್ಟಕ್ಕಿಷ್ಟಕ್ಕೆ ಮಂದಿಯ ಮೇಲೆ ಹರಿಹಾಯುವುದರಿಂದ ನಿಮ್ಮ ಪಕ್ಷದ ಹಾನಿಯೇ ಆದೀತು, ಎಂದು ನುಡಿಯುತ್ತಿರಲು, ತಿರುಕನಾಯಕನೆಂಬವನು ನಡುವೇ ಬಾಯಿಹಾಕಿ—ನಾಯಕರೇ, ಇನ್ನು ತಾವು ಆತ್ಮಪೌರುಷವನ್ನೂ, ಪರೋಪದೇಶದಲ್ಲಿ ಪಾಂಡಿತ್ಯ ತೋರಿಸುವುದನ್ನೂ ಸಾಕುಮಾಡಿರಿ. ರಾಜಪುತ್ರರನ್ನು ಕ್ಷಣದಲ್ಲಿ ಹಿಡತರಲಿಕ್ಕೆ ದೊರೆಗಳ ದಂಡಿನಲ್ಲಿ ಹಲವು ಜನ ಶೂರರಿದ್ದಾರೆ. ನಿಮ್ಮಂಥ ವಿಶ್ವಾಸಘಾತಕರು ದೊರೆಗಳ ಪಕ್ಷದಲ್ಲಿರುವುದಕ್ಕಿಂತ ಇಲ್ಲದಿರುವುದು ಸುರಕ್ಷಿತವು. ನೀವು ದೊರೆಗಳ ಅಜ್ಞಂದಿರನ್ನೂ ಲಕ್ಷಿಸದೆ, ಉದ್ಧಟತನದಿಂದ ಈಗ ಮನಬಂದಂತೆ ಮಾತಾಡುವುದನ್ನು ನೋಡಿದರೆ, ನಿಮ್ಮ ರಾಜನಿಷ್ಠೆಯ ಸಂಬಂಧದಿಂದ ಯಾರಿಗಾದರೂ ಸಂಶಯ ಬರಬಹುದಾಗಿ ತೋರುತ್ತದೆ, ಎಂದು ನುಡಿದನು.

ತಿರುಕನಾಯಕನ ಈ ಅಯೋಗ್ಯ ಮಾತುಗಳನ್ನು ಜಗರಾಯನು ನಿಷೇಧಿಸುವುದು ಅವಶ್ಯವಾಗಿತ್ತು ಆದರೆ ವಿಚಾರಶೂನ್ಯವಾಗಿ ದುರಭಿಮಾನಕ್ಕೆ ಬಿದ್ದ ಆ ರಾಯನು, ಮುಗುಳು ನಗೆ ನಕ್ಕು ತಿರುಕನಾಯಕನ ಕಡೆಗೆ ನೋಡಿ, ದುರುಗಪ್ಪನಾಯಕನನ್ನು ಸಂಪೂರ್ಣವಾಗಿ ನಿಷೇಧಿಸಿದನು. ಈ ಹುಡುಗಾಟಿಕೆಯನ್ನು ನೋಡಿ ನಾಯಕನ ಸರ್ವಾಂಗವು ಕ್ರೋಧಸಂತಪ್ತ ವಾಯಿತು ಅವನ ಕಣ್ಣುಗಳು ಕೆಂಡದಂತಾದವು. ಆತನು ಬಾಯಿಂದ ಪಿಟ್ಟೆಂದು ಮಾತಾಡದೆ ಕುಳಿತ್ತ ಸ್ಥಳದಿಂದ ಚಟ್ಟನೆ ಎದ್ದು ಹೋದನು. ಹೀಗಾದದ್ದನ್ನು ನೋಡಿ ಜಗರಾಯನ ಕಣ್ಣುಗಳು ಸ್ವಲ್ಪ ತೆರೆದರೂ, ಅವನ ಬಳಿಯಲ್ಲಿ ಕುಳಿತಿದ್ದ ನಾಯಕರ ಚೌಕಳಿಯು, ದುರಗಪ್ಪನಾಯಕನ ಮೇಲಿನ ದ್ವೇಷದಿಂದ ಇಲ್ಲದ್ದೊಂದು ಹುಟ್ಟಿಸಿ ಹೇಳಿ ಜಗರಾಯನ ಮನಸ್ಸನ್ನು ಮತ್ತೆ ತಿರುಗಿಸಿತು. ಸತ್ಯಪಕ್ಷಪಾತಿಯಾದ ನಾಯಕನು ಹೀಗೆ ಸಿಟ್ಟಿನಿಂದ ಹೊರಟುಹೋದರೂ, ಒಮ್ಮೆಲೆ ಆತನು ಜಗರಾಯನ ಮೇಲಿನ ಮನಸ್ಸನ್ನು ತೆಗೆಯಲಿಲ್ಲ. ಆ ರಾಯನ ಕಾರ್ಯಕ್ಕೆ ಅತ್ಯಂತ ಪ್ರತಿಕೂಲವಾದ ಸಂಗತಿಯು ತನ್ನಿಂದ ಒದಗಿದ್ದರಿಂದಲೂ, ನೀಚಜನರ ಕಿವಿಯೂದುವಿಕೆ ಯಿಂದಲೂ ಆತನ ತಲೆ ತಿರುಗಿರುವುದಲ್ಲದೆ, ಮೂಲತಃ ಮನುಷ್ಯನು ಕೆಡಕನಲ್ಲದ್ದರಿಂದ ಆತನನ್ನು ಒಮ್ಮೆಲೆ ಬಿಟ್ಟುಕೊಟ್ಟು, ಹೋಗುವದು ನ್ಯಾಯವಲ್ಲೆಂದು ತಿಳಿದು, ನಾಯಕನು ಮರುದಿನ ಮತ್ತೆ ಜಗರಾಯನ ಭೆಟ್ಟಿಗೆ ಹೋದನು; ಆದರೆ ''ವಿನಾಶಕಾಲೇ ವಿಪರೀತ ಬುದ್ಧಿಃ'' ಎಂಬಂತೆ ಆಗಲೂ ಜಗರಾಯನು ದುರಾಗ್ರಹದಿಂದ ದುರಗಪ್ಪನನ್ನು ಉಪಚರಿಸಲಿಲ್ಲ! ನಿನ್ನೆ, ಹೇಳದೆ ಒಮ್ಮೆಲೆ ಎದ್ದು ಹೋದ ದುರಗಪ್ಪನಾಯಕನು ಮಹಾ ಉದ್ಧಟನೆಂದು ತಿಳಿದು, ರಾಯನು ಬುದ್ಧಿಪೂರ್ವಕವಾಗಿಯೇ ಆ ನಾಯಕನ ಅಪಮಾನವನ್ನು ಇಂದು ಮಾಡಿದನು. ಆಗ ಜಗರಾಯನ ಬಳಿಯಲ್ಲಿ ಕುಳಿತಿದ್ದ ಗುಂಡನಾಯಕನೆಂಬವನಿಗೆ ಇದು ಸರಿದೋರಲಿಲ್ಲ.

ದುರಗಪ್ಪನಾಯಕನು ಈ ಅಪಮಾನವನ್ನು ಮನಸ್ಸಿನಲ್ಲಿ ತಾರದೆ, ನಿಂತುಕೊಂಡೇ ಜಗರಾಯನನ್ನು ಕುರಿತು—ಜಗರಾಯರೇ, ನನ್ನಿಂದ ಅಪರಾಧವಾಗಿದ್ದರೆ ಕ್ಷಮಿಸಿರಿ. ದುರ್ಯೋಧನನ ಪಕ್ಷದ ವೀರರು, ಆಗಾಗ್ಗೆ ತಮ್ಮತಮ್ಮೊಳಗೆ ಜಗಳಾಡಹತ್ತಿದ್ದರಿಂದ ದುರ್ಯೋಧನನ ಗತಿಯು ಏನಾಯಿತೆಂಬದನ್ನು ನಾನು ತಮಗೆ ನೆನಪು ಮಾಡಿಕೊಡುವ ಕಾರಣವಿಲ್ಲ. ಪ್ರಕೃತದಲ್ಲಿ ನಮ್ಮ ಶಕ್ತಿಯನ್ನೆಲ್ಲ ಒಟ್ಟುಗೂಡಿಸಿ ವೈರಿಯ ಬಲವನ್ನು ಮುರಿಯುವದು ಅಗತ್ಯವಾಗಿರುತ್ತದೆ. ಇಂಥ ಪ್ರಸಂಗದಲ್ಲಿನ ನೀವು ಹೀಗೆ ಸಣ್ಣಪುಟ್ಟ ಪ್ರಸಂಗಗಳಿಂದ ಸ್ವಪಕ್ಷವನ್ನು ಶಿಥಿಲಮಾಡಿಕೊಂಡರೆ, ಕೆಲಸವು ಯಾರದು ಕೆಡುವದು? ಇದರ ಮೇಲೆಯೂ ನನ್ನ ಸಹಾಯದ ಅಪೇಕ್ಷೆಯಿರದಿದ್ದರೆ, ನನ್ನ ಆಗ್ರಹವಿಲ್ಲ. ಇದೇ ಕಾಲಲ್ಲಿಯೇ ನನ್ನ ದುರ್ಗಕ್ಕೆ ನಾನು ಹೊರಟು ಹೋಗುತ್ತೇನೆ; ಆದರೂ ಒಮ್ಮೆ ನಿಮ್ಮ ಪಕ್ಷವನ್ನು ವಹಿಸಿರುವ ನಾನು, ನಿಮ್ಮ ಮೇಲೆ ಸೊಟ್ಟು ಹೊರಿಸಿ ವೈರಿಗಳನ್ನು ಕೂಡಿ ಸರ್ವಥಾ ನಿಮಗೆ ಕೇಡು ಬಗೆಯುವದಿಲ್ಲ. ಯುದ್ಧ ಮುಗಿಯುವವರೆಗೆ ತಟಸ್ಥವೃತ್ತಿಯಿಂದ ಸ್ವಸ್ಥವಾಗಿ ನನ್ನ ದುರ್ಗದಲ್ಲಿರುತ್ತೇನೆ. ವಿಪತ್ತಿಗೆ ಗುರಿಯಾಗಿ ಆಶ್ರಯ ಬೇಡಿದವರಿಗೆ ಆಶ್ರಯವನ್ನಷ್ಟು ಕೊಡುವೆನು. ಆಶ್ರಯ ವನ್ನು ಬಯಸುವವನು ನಿಮ್ಮ ಪಕ್ಷದವನಿದ್ದರೂ ಸರಿಯೇ, ವೈರಿಗಳ ಪಕ್ಷದವನಿದ್ದರೂ ಸರಿಯೇ! ನನ್ನ ಈ ಅಭಿವಚನದಲ್ಲಿ ಅಂತರವಾಗಲಿಕ್ಕಿಲ್ಲ. ಜಗರಾಯರೇ, ನಿಮ್ಮಂಥ ಶೂರರಾದ ಮುತ್ಸದ್ದಿಗಳು ಅಡ್ಡಹಾದಿ ಹಿಡಿಯುವದನ್ನು ನೋಡಿ ನನಗೆ ಬಹಳ ಆಶ್ಚರ್ಯವಾಗುತ್ತದೆ, ಹಿಂದುಮುಂದಿನ ವಿಚಾರವಿಲ್ಲದೆ, ಕೇವಲ ಮಾತ್ಸರ್ಯವನ್ನು ಸಾಧಿಸಿಕೊಳ್ಳುವ ಉದ್ದೇಶದಿಂದ ಮನಬಂದಂತೆ ಮಾತಾಡುವ ನೀಚಜನರ ಮಾತಿಗೆ ನಿಮ್ಮಂಥವರು ಕಿವಿಗೊಡತಕ್ಕದ್ದಲ್ಲ. ನಿಮ್ಮಲ್ಲಿ ವಿಪರೀತ ಬುದ್ಧಿಯು ಉಂಟಾದಂತೆ ಕಾಣುತ್ತದೆ, ಇನ್ನಾದರೂ ವಿನಾಶಕಾಲವು ಒದಗದಂತೆ ಜಾಗರೂಕರಾಗಿರತಕ್ಕದ್ದು. ನನ್ನ ಸ್ಪಷ್ಟ ಮಾತುಗಳಿಗಾಗಿ ನೀವು ಸಿಟ್ಟಾಗಬೇಡಿರಿ. ನನ್ನ ಮಾತುಗಳ ಯೋಗ್ಯತೆಯು ಮುಂದೆ ನಿಮಗೆ ಗೊತ್ತಾಗಬಹುದು, ಎಂದು ಹೇಳಿ ವಿನಯದಿಂದ ಮುಜುರೆ ಮಾಡಿ ದುರಗಪ್ಪನಾಯಕನು ಹೊರಟುಹೋದನು.

ಹೀಗೆ ದುರಗಪ್ಪನಾಯಕನ ಮಾನಭಂಗ ಮಾಡಿದ್ದನ್ನು ಕೇಳಿ ಜಗರಾಯನ ಪಕ್ಷದ ಬಹುಜನ ಸರದಾರರು ಅಸಮಾಧಾನಪಟ್ಟರು. ಅವರಲ್ಲಿ ಗುಂಡನಾಯಕನೆಂಬವನು ಜಗರಾಯನ ಬಳಿಗೆ ಹೋಗಿ, ಆತನ ತಲೆಯೊಳಗಿನ ಹುಚ್ಚನ್ನು ಚೆನ್ನಾಗಿ ಇಳಿಸಿದನು. ದುರಗಪ್ಪನಾಯಕನಂಥ ಪ್ರಸಿದ್ಧ ಪುರುಷನನ್ನು ಅವಮಾನಗೊಳಿಸಿದ ನೀವು ವಿಶ್ವಾಸಕ್ಕೆ ಪಾತ್ರರಲ್ಲೆಂತಲೂ, ಆ ಶೂರಪುರುಷನನ್ನು ಪ್ರಾರ್ಥಿಸಿ ಕರಕೊಂಡು ಬಾರದಿದ್ದರೆ, ನಾನೂ—ನನ್ನ ಮಿತ್ರರಾದ ಮೂವರು ಸರದಾರರು ನಿಮ್ಮ ಪಕ್ಷವನ್ನು ಬಿಡುವೆವೆಂತಲೂ, ಆತನು ಗುಡುಗುಹಾಕಿದನು. ಆಗ ಜಗರಾಯನು ಪಶ್ಚಾತ್ತಾಪಪಟ್ಟು ಸ್ವತಃ ದುರಗಪ್ಪನಾಯಕನನ್ನು ಕಂಡು ಹೀಗೆ ಸಿಟ್ಟಾಗಿ ಹೋಗಬಾರದೆಂದು ಬೇಕಾದಷ್ಟು ಪ್ರಾರ್ಥಿಸಿದನು; ಆದರೆ ನಾಯಕನು ಅದಕ್ಕೆ ಒಪ್ಪಲಿಲ್ಲ. ನಿಮ್ಮಿಂದಾದ ಅಪಮಾನದಿಂದ ರೊಚ್ಚಿಗೆದ್ದು ನಾನು ನಿಮ್ಮ ವೈರಿಗಳನ್ನು ಕೂಡದಿರುವದೊಂದು ಪುಣ್ಯವೆಂದು ತಿಳಿದು, ಸುಮ್ಮನೆ ಮನೆಗೆ ಹೋಗಿರೆಂದು ಜಗರಾಯನಿಗೆ

ಸ್ಪಷ್ಟವಾಗಿ ಹೇಳಿ, ತನ್ನ ಸೈನ್ಯದೊಡನೆ ಚಿತ್ರಗಲ್ಲದುರ್ಗಕ್ಕೆ ಹೋದನು. ಇದರಿಂದ ಜಗರಾಯನ ಪಕ್ಷದ ಬಿಗುವು ಬಹುಮಟ್ಟಿಗೆ ಕಡಿಮೆಯಾಯಿತೆಂದು ಹೇಳಬಹುದು. ಈ ಸಂಧಿಯನ್ನು ಸಾಧಿಸಿ ನೆವ ತೆಗೆದು, ಗುಂಡನಾಯಕನೂ, ಅವನ ಮೂವರು ಗೆಳೆಯರೂ ಎಂಟುಸಾವಿರ ಸೈನ್ಯದೊಡನೆ ಎಚ್ಚಮನಾಯಕನನ್ನು ಕೂಡಿದರು. ಸೆರೆಮನೆಯೊಳಗಿದ್ದ ಅರಸನ ಮಗನೊಬ್ಬನು ಎಚ್ಚಮ ನಾಯಕನ ಕಡೆಗೆ ಬಂದಿರುವನೆಂಬ ಸುದ್ದಿಯು ನಾಲ್ಕೂ ಕಡೆಗೆ ಹಬ್ಬುತ್ತ ಹೋದಂತೆ, ಎಚ್ಚಮನಾಯಕನ ಪಕ್ಷವು ಬಲಷ್ಠವಾಗುತ್ತ ಹೋಯಿತು. ಈಗ ಒಟ್ಟಿಗೆ ಹದಿನೆಂಟು ಸಾವಿರ ದಂಡಾಳುಗಳು ನಾಯಕನ ಕಡೆಗೆ ಆದರು. ರಾಜಪುತ್ರರ ಸಂರಕ್ಷಣಕ್ಕೆ ತೊಂದರೆಯಾಗ ಬಾರದೆಂತಲೂ, ತನ್ನ ಸೈನ್ಯವನ್ನು ಸಮಾಧಾನದಿಂದ ಹೆಚ್ಚಿಸಲಿಕ್ಕೆ ಅನುಕೂಲವಾಗಬೇಕೆಂತಲೂ, ಎಚ್ಚಮನಾಯಕನು ಬೈಲೊಳಗಿನ ತನ್ನ ಪಾಳಯವನ್ನು ಕಿತ್ತು, ಸಮೀಪದಲ್ಲಿದ್ದ ಒಂದು ಭದ್ರವಾದ ದುರ್ಗದಲ್ಲಿ ಇರಹತ್ತಿದನು. ರಾಜಪುತ್ರರ ಸಂರಕ್ಷಣಕ್ಕಾಗಿ ತಕ್ಕಷ್ಟು ಸೈನ್ಯವನ್ನು ಬಿಟ್ಟು ಉಳಿದ ಸೈನ್ಯದೊಡನೆ ಜಗರಾಯನ ಸಂಗಡ ಯುದ್ಧಕ್ಕೆ ನಿಲ್ಲಬೇಕಾದರೆ, ನಾಯಕನ ದಂಡು ಇನ್ನೂ ಹೆಚ್ಚಬೇಕಾಗಿತ್ತು. ಎಚ್ಚಮನಾಯಕನು ಉದಾರನಾದ್ದರಿಂದ ತನ್ನ ಪಕ್ಷವನ್ನು ಸ್ವೀಕರಿಸಿದ ಸರದಾರರ ಮಾನಮರ್ಯಾದೆಗಳನ್ನು ಸರಿಯಾಗಿ ಕಾದು, ಅವರ ಯೋಗಕ್ಷೇಮವನ್ನು ಬಹು ಆದರದಿಂದ ನೋಡುತ್ತಿದ್ದನು. ಒಬ್ಬರನ್ನು ಏರಿಸುವುದು, ಒಬ್ಬರನ್ನು ಇಳಿಸುವುದು ನಾಯಕನಿಗೆ ಸೇರುತ್ತಿದ್ದಿಲ್ಲ. ಆತನು ಜನರ ಗುಣದೋಷಗಳನ್ನು ಎಣಿಸದೆ, ಎಲ್ಲರನ್ನು ಸರಿಯಾಗಿ ಪ್ರೀತಿಸುತ್ತಿದ್ದನು. ಇದರಿಂದ ನಾಯಕನ ದಂಡಿನಲ್ಲಿ ಪರಸ್ಪರ ಪ್ರೇಮವು ಬೆಳೆಯುತ್ತ ಹೋಗಿ, ಒಕ್ಕಟ್ಟಿನಿಂದ ನಾಯಕನ ದಂಡಿನ ಸಾಮರ್ಥ್ಯವು ಹೆಚ್ಚುತ್ತ ಸಾಗಿತು.

ಒಂದು ದಿನ ನಾಯಕನು ಪ್ರಕೃತದ ಸ್ಥಿತಿಯನ್ನು ತಿಳಿಸಿ, ಮುಂದಿನ ಕಾರ್ಯವನ್ನು ಕುರಿತು ಆಲೋಚಿಸುವುದಕ್ಕಾಗಿ ದರ್ಬಾರ ನೆರೆಸಿದನು. ಆಗ ರಾಜಪುತ್ರನಾದ ಚಿನ್ನವೆಂಕಟನು ಉಚ್ಚಾಸನದಲ್ಲಿ ಕುಳಿತಿದ್ದನು. ಎಚ್ಚಮನಾಯಕನು ಆತನ ಬಲಬದಿಯಲ್ಲಿಯೂ, ಪುರುಷ ವೇಷವನ್ನು ಧರಿಸಿದ ಕುಮುದಿನಿಯು ಎಡಬದಿಯಲ್ಲಿಯೂ ಕುಳಿತಿದ್ದರು. ಉಳಿದ ಸರದಾರರು ತಮ್ಮ ತಮ್ಮ ಯೋಗ್ಯತೆಗೆ ತಕ್ಕ ಸ್ಥಳಗಳಲ್ಲಿ ಕುಳಿತುಕೊಂಡಿದ್ದರು. ಆಗ ನಾಯಕನು ಎದ್ದುನಿಂತು ಸಭೆಯನ್ನುದ್ದೇಶಿಸಿ—ಪ್ರಿಯಮಿತ್ರರೇ, ರಾಜಪುತ್ರರು ದಯಮಾಡಿಸಿದಂದಿನಿಂದ ನಿಮ್ಮಂಥ ಶೂರರ ನೆರವು ದೊರೆತು, ರಾಜ ಪಕ್ಷವು ಬಲಿಷ್ಠವಾಗಹತ್ತಿರುವುದು. ಆದರೂ ರಾಜದ್ರೋಹಿ ಯಾದ ಜಗರಾಯನ ದಂಡು ದೊಡ್ಡದಿದ್ದದ್ದರಿಂದ, ಅವನೊಡನೆ ಯುದ್ಧವನ್ನು ವಿಚಾರಪೂರ್ವಕ ವಾಗಿಯೇ ಆರಂಭಿಸಬೇಕಾಗುತ್ತದೆ. ಇನ್ನು, ರಾಜಪಕ್ಷದವರಾದ ತಾವೆಲ್ಲರು, ಶೂರರೂ—ವಿಚಾರಸಂಪನ್ನರೂ—ಉದಾರರೂ—ಸ್ವಾಮಿಕಾರ್ಯದಕ್ಷರೂ ಇರುವುದರಿಂದ ತಮ್ಮ ಒಬ್ಬ ದಂಡಾಳು, ರಾಜದ್ರೋಹಿಗಳ ಹತ್ತು ಜನ ದಂಡಾಳುಗಳಿಗೆ ಭಾರಿಯಾಗುತ್ತಾನೆಂಬ ಮಾತು ಒಪ್ಪಿಕೊಳ್ಳತಕ್ಕದ್ದಾಗಿದೆ. ನಮ್ಮ ದೊರೆಗಳು ಕುಟುಂಬಸಹಿತವಾಗಿ ಕಾರಾಗೃಹದಲ್ಲಿ ಕಷ್ಟಪಡುತ್ತಿರಲು, ನಾವು ಏನೂ ಯತ್ನಿಸದೆ ಕಾಲಹರಣ ಮಾಡುವುದು ಸರಿಯಲ್ಲ. ನಿಮ್ಮೆಲ್ಲರ ಆಲೋಚನೆಯಿಂದ ಯುದ್ಧವನ್ನು ಆರಂಭಿಸಬೇಕಾಗಿದೆ. ನೀವು ನಿಮ್ಮ ನಿಮ್ಮ ವಿಚಾರಗಳನ್ನು

ಅವಶ್ಯವಾಗಿ ತಿಳಿಸುವಂತೆ ಮಾಡಬೇಕು, ಎಂದು ಹೇಳಿ ನಾಯಕನು ಕುಳಿತುಕೊಂಡನು. ಅಷ್ಟರಲ್ಲಿ ವಿಜಾಪುರದ ಬಾದಶಹನ ಒಬ್ಬ ಸರದಾರನು ದರ್ಶನಾಪೇಕ್ಷೆಯಾಗಿ ಬಾಗಿಲಲ್ಲಿ ಬಂದು ನಿಂತುಕೊಂಡಿರುವನೆಂದು ದ್ವಾರರಕ್ಷಕನು ಹೇಳಲು, ಎಚ್ಚಮನಾಯಕನು ಆತನನ್ನು ಒಳಗೆ ಬಿಡಬೇಕೆಂದು ಆ ದ್ವಾರರಕ್ಷಕನಿಗೆ ಆಜ್ಞಾಪಿಸಿದನು. ಇಲ್ಲಿ ಮುಸಲ್ಮಾನ ಸರದಾರನ ಕೆಲಸವೇನಿರ ಬಹುದೆಂದು ದರ್ಬಾರದ ಜನರೆಲ್ಲ ಕೌತುಕದಿಂದ ನೋಡುತ್ತಿರುವಾಗ ಸುಮಾರು ಮೂವತ್ತು ವರ್ಷದ ವಯಸ್ಸಿನ ಒಬ್ಬ ಸರದಾರನು ಒಳಗೆ ಬಂದು, ದರ್ಬಾರದ ನಿಯಮಗಳಂತೆ ವಂದನಾದಿಗಳನ್ನು ಮಾಡಿ, ನಾಯಕನು ತೋರಿಸಿದ ಆಸನದಲ್ಲಿ ಕುಳಿತುಕೊಂಡನು. ಆ ಸರದಾರನು ಮಹಾತೇಜಸ್ವಿಯಾಗಿದ್ದನು. ಆತನು ಒಳಗೆ ಬಂದಕೂಡಲೆ ದರ್ಬಾರವು ಸ್ತಬ್ಧವಾಯಿತು. ಎಚ್ಚಮನಾಯಕನಿಗೆ ಮೊದಲು ಸರದಾರನ ಗುರುತು ನೆಟ್ಟಗೆ ಹತ್ತಲಿಲ್ಲ. ಆದರೆ ಸ್ವಲ್ಪ ಹೊತ್ತಿನ ಮೇಲೆ ಆತನ ಗುರುತು ಚೆನ್ನಾಗಿ ಹತ್ತಲು, ನಾಯಕನು ಕೂಡಲೆ ಎದ್ದುಹೋಗಿ—ಪ್ರಿಯಮಿತ್ರರಾದ ಚಾಂದಖಾನರು ಇತ್ತ ಬರಬೇಕು! ಎಂದು ಕೈಯನ್ನು ಹಿಡಿದು ಆತನನ್ನು ತನ್ನ ಹತ್ತರ ಕುಳ್ಳಿರಿಸಿಕೊಂಡನು. ಚಾಂದಖಾನನೆಂಬ ಹೆಸರನ್ನು ಕೇಳಿ ಕುಮುದಿನಿಗೂ ಸಂತೋಷವಾಯಿತು.

ಮುಸಲ್ಮಾನರ ಹೆಸರನ್ನು ಉಚ್ಚರಿಸಿದ ಕೂಡಲೆ ಸಂತಾಪಗೊಳ್ಳುತ್ತಿದ್ದ ಎಚ್ಚಮ ನಾಯಕನಿಗೆ, ಮುಸಲ್ಮಾನ ಮಿತ್ರನು ಎಲ್ಲಿಂದ ಬಂದನೆಂದು ದರ್ಬಾರದವರೆಲ್ಲ ಆಶ್ಚರ್ಯಪಟ್ಟರು. ಅಷ್ಟರಲ್ಲಿ ತೇಜಸ್ವಿಯಾದ ಚಾಂದಖಾನನು ಎದ್ದುನಿಂತು ರಾಜಪುತ್ರರ ಅನುಮತಿಯಿಂದ ನುಡಿದನೇನಂದರೆ– ಪ್ರಿಯಮಿತ್ರರಾದ ಶೂರರೇ, ದೊರೆಗಳ ಸನ್ನಿಧಿಯಲ್ಲಿ ನಾನು ಈಗ ಆಡುವ ಮಾತುಗಳ ಮೇಲೆ ನಿಮ್ಮ ವಿಶ್ವಾಸವು ಸದ್ಯಕ್ಕೆ ಕೂಡ್ರಲಿಕ್ಕಿಲ್ಲ; ಆದರೆ ನನ್ನ ಕೃತಿಯಿಂದ ನಿಮ್ಮೆಲ್ಲರ ವಿಶ್ವಾಸವನ್ನು ಪಡೆಯುವ ನಿರ್ಧಾರದಿಂದಲೇ ನಾನು ಇಲ್ಲಿಗೆ ಬಂದಿರುತ್ತೇನೆ. ಈಗ ಸುಮಾರು ಮೂರು ತಿಂಗಳ ಹಿಂದೆ ನಾನು ವಿಜಾಪುರದ ಬಾದಶಹರ ಅಪ್ಪಣೆಯನ್ನು ಪಡೆದು, ಎಚ್ಚಮನಾಯಕರನ್ನು ಸೆರೆಹಿಡಕೊಂಡು ಹೋಗುವುದಕ್ಕಾಗಿ ಬಂದಿದ್ದೆನು. ವಿಜಯನಗರದ ರಾಯರ ಪಕ್ಷಪಾತಿಗಳಾದ ಸರದಾರರನ್ನು ಬೇರುಸಹಿತ ನಾಶಗೊಳಿಸಬೇಕೆಂದು ನಮ್ಮ ಬಾದಶಹರು ಮಾಡಿದ ನಿಶ್ಚಯವನ್ನು ನಿಮ್ಮ ಮುಂದೆ ನಾನು ಹೇಳುವ ಅವಶ್ಯವಿಲ್ಲ, ಅದು ಲೋಕಪ್ರಸಿದ್ಧವಾಗಿಯೇ ಇರುವುದು. ನಾನು ಎಚ್ಚಮನಾಯಕರನ್ನು ಹಿಡಿಯಲು ಹೊಂಚು ಹಾಕಿ, ಲಂಚ–ರುಸವತ್ತುಗಳ ಆಶೆಯಿಂದ ನಿಮ್ಮ ಜನರನ್ನು ಒಡಕೊಂಡು ನಾಯಕರ ಮರ್ಮಗಳನ್ನು ಅರಿತುಕೊಳ್ಳುವ ಯತ್ನ ನಡೆಸಿದೆನು. ಅಷ್ಟರಲ್ಲಿ ನಾಯಕರು ಪಂಪಾಪತಿಯ ದರ್ಶನಕ್ಕಾಗಿ ಬಂದು, ಆನೆಗುಂದಿಯ ಹತ್ತರ ತುಂಗಭದ್ರೆಯ ದಂಡೆಯಲ್ಲಿ ಪಾಳಯವನ್ನು ಬಿಟ್ಟರು. ಈ ಸಂಧಿಯನ್ನು ಸಾಧಿಸಿ ಒಂದು ದಿನ ರಾತ್ರಿ ನಾನು ನನ್ನ ಸೈನ್ಯದೊಡನೆ ಆಕಸ್ಮಾತ್ತಾಗಿ ನಾಯಕರ ಪಾಳಯದ ಮೇಲೆ ಬಿದ್ದೆನು. ಆಗ ಅಲ್ಲಿ ಚಿಕ್ಕದೊಂದು ಕಾಳಗವಾಗಿ, ಉಭಯಪಕ್ಷದ ಜನರೂ ರಣಭೂಮಿಯಲ್ಲಿ ಬಿದ್ದರು; ಆದರೆ ನಮ್ಮ ಸೈನ್ಯವು ದೊಡ್ಡದಿದ್ದದ್ದರಿಂದಲೂ, ನಾನು ಸದ್ದಿಲ್ಲದೆ ಹೋಗಿ ನಾಯಕರ ದಂಡನ್ನು ಎರಗಿದ್ದರಿಂದಲೂ ನಾಯಕರ ಸೈನ್ಯವು ಬಹುತರ

ನಾಶವಾದಂತಾಯಿತು. ಸತ್ತವರು ಸತ್ತರು, ಉಳಿದ ಸ್ವಲ್ಪ ಜನರು ಜೀವ ಉಳಿಸಿಕೊಂಡು ಓಡಿಹೋದರು; ಆದರೆ ಎಚ್ಚಮನಾಯಕರ ಸುಳವೇ ನನಗೆ ಕಾಣಲಿಲ್ಲ ಆದರಿಂದ ನಾಯಕರು ಎಲ್ಲಿ ಹೋಗಿರಬಹುದೆಂದು ಅತ್ತಿತ್ತ ನೋಡುತ್ತ ಅಶ್ವಾರೂಢನಾದ ನಾನು ಬೆಳಗುಮುಂಜಾವಿನಲ್ಲಿ ಸಹಜವಾಗಿ ರಣಭೂಮಿಗೆ ಹೋದೆನು! ಅಷ್ಟರಲ್ಲಿ ನಾಯಕರು ಪಾದಚಾರಿಗಳಾಗಿ ಅಲ್ಲಿಗೆ ಬಂದರು. ಅವರನ್ನು ನೋಡಿ ನನಗೆ ಬಹಳ ಸಮಾಧಾನವಾಯಿತು. ಕೈಕೊಂಡ ಕೆಲಸವು ಸಾಧಿಸುವ ಯೋಗ ಒದಗಿದರೆ, ಯಾರಿಗೆ ಸಮಾಧಾನವಾಗಲಿಕ್ಕಿಲ್ಲ? ನಾಶವಾಗಿದ್ದ ಸೈನ್ಯವನ್ನು ನೋಡಿ ದುಃಖಿಸುತ್ತಿದ್ದ ನಾಯಕರು ನನ್ನನ್ನು ನೋಡಿ ಸಂತಾಪಗೊಳ್ಳುತ್ತಿರಲು, ನಮ್ಮಿಬ್ಬರ ನಡುವೆ ಎರಡು ಯುದ್ಧಗಳಾದವು! ಆ ಎರಡೂ ಯುದ್ಧಗಳಲ್ಲಿ ನಾನು ನಾಯಕರಿಂದ ಪರಾಜಿತನಾದೆನು. ಆ ಪ್ರಸಂಗದಲ್ಲಿ ನಾಯಕರು ಕೆಟ್ಟ ಮನಸ್ಸುಮಾಡಿ ನನ್ನನ್ನು ಸಹಜವಾಗಿ ಸಂಹರಿಸಬಹುದಾಗಿತ್ತು; ಆದರೆ ಉದಾರಾಂತಃಕರಣದ ಆ ಶೂರರು ಹಾಗೆ ಮಾಡದೆ, ನನಗೆ ಜೀವದಾನವನ್ನು ಕೊಟ್ಟರು! ನಾನು ನಾಯಕರ ಸದ್ಗುಣಗಳನ್ನೂ, ಪರಾಕ್ರಮವನ್ನೂ ನೋಡಿ ಬೆರಗಾದೆನು. ಕನ್ನಡಿಗರ ವಿಷಯವಾಗಿ ನನ್ನಲ್ಲಿ ವಾಸಿಸುತ್ತಿದ್ದ ತಿರಸ್ಕಾರವು ಅಳಿದುಹೋಗಿ ಅವರ ವಿಷಯವಾಗಿ ನನ್ನಲ್ಲಿ ಪೂಜ್ಯಬುದ್ಧಿಯು ಉಂಟಾಯಿತು. ಆಗ ನಾನು ನಾಯಕರಿಗೆ—ಪ್ರಿಯಮಿತ್ರನೇ, ನಿನ್ನಿಂದ ಎರಡು ಸಾರೆ ಜಯಿಸಲ್ಪಟ್ಟದ್ದರಿಂದ ನಿನ್ನದೇ ಆಗಿದ್ದ ಚಾಂದಖಾನನ ಈ ದೇಹವು, ನಿನ್ನ ಹಿತವನ್ನು ಸಾಧಿಸುವ ಕಾರ್ಯದಲ್ಲಿಯೇ ಸವಿಯುವುದು, ಎಂದು ತಟ್ಟನೆ ಹೇಳಿದೆನು. ಇಂಥ ನಾನು ಕೃತಜ್ಞನಾಗಿ ಸಮೀಪದಲ್ಲಿದ್ದ ನನ್ನ ದಂಡಿನ ಸಹಾಯದಿಂದ ನಾಯಕರನ್ನು ಸೆರೆಹಿಡಿದುಕೊಂಡು ಬಾದಶಹನ ಬಳಿಗೆ ಹೋಗಿ, ಬಾಹುಷಿಯನ್ನು ಪಡೆಯುವ ಬಗೆಯೇನು?

ಪ್ರಿಯಮಿತ್ರರೇ, ಎಚ್ಚಮನಾಯಕರಿಗೆ ಹಿತವನ್ನು ಮಾಡುವ ಇನ್ನೊಂದು ಪ್ರಸಂಗವು ಸುದೈವದಿಂದ ನನಗೆ ಒದಗಿದ್ದನ್ನು ನಿಮ್ಮ ಮುಂದೆ ಹೇಳದೆ ಇರಲಾರೆನು. ನರಸಿಂಗನಾಯಕರ ಮಗಳಾದ ಮೋಹಿನಿಯೆಂಬ ಸುಂದರಿಯ ಮೇಲೆ ನಮ್ಮ ಬಾದಶಹರ ಮಗನು ಮೊದಲಿನಿಂದ ಕಣ್ಣು ಇಟ್ಟಿದ್ದನು. ನರಸಿಂಗನಾಯಕರು ಯುದ್ಧದಲ್ಲಿ ಬಿದ್ದನಂತರ ಆ ಸುಂದರಿಯು ನಮ್ಮ ಬಾದಶಹರ ಮಗನ ಕೈಸೇರಿದಳು; ಆದರೆ, ದಾಸಿಯ ಚಾತುರ್ಯದಿಂದ ಆ ಮೋಹಿನಿಯು ತಪ್ಪಿಸಿಕೊಂಡು ಬಂದು ಪಂಪಾಕ್ಷೇತ್ರಸ್ಥನಾದ ಒಬ್ಬ ಋಷಿಯ ಮರೆಬಿದ್ದಳು. ದಯಾಳುವಾದ ಆ ಋಷಿಯು ಆಕೆಯನ್ನು ಬಹು ಗುಪ್ತವಾಗಿ ರಕ್ಷಿಸುತ್ತಿರಲು, ನಮ್ಮ ಮುಸಲ್ಮಾನ ಸರದಾರರು ಬಾದಶಹನ ಮಗನ ಪ್ರೀತಿಯನ್ನು ಸಂಪಾದಿಸುವುದಕ್ಕಾಗಿ ಮೋಹಿನಿಯನ್ನು ನಾಲ್ಕೂ ಕಡೆಗೆ ಹುಡುಕಹತ್ತಿದರು. ನಾಯಕರು ಪಂಪಾಕ್ಷೇತ್ರಕ್ಕೆ ಬಂದ ಸಂಧಿಯಲ್ಲಿ ಮುಸಲ್ಮಾನರು ಪಂಪಾಕ್ಷೇತ್ರದ ಒಬ್ಬ ಬ್ರಾಹ್ಮಣನನ್ನು ಲಂಚದಿಂದ ಒಡಕೊಂಡು, ಮೋಹಿನಿಯಿರುವ ಗುಪ್ತಸ್ಥಾನವನ್ನು ಗೊತ್ತುಹಚ್ಚಿದರು. ಈ ಸಂಗತಿಯನ್ನು ಮೋಹಿನಿಯ ರಕ್ಷಕನಾದ ಋಷಿಯು ಮೊದಲೇ ತಿಳಿದು, ಮೋಹಿನಿಯನ್ನು ಎಚ್ಚಮನಾಯಕನ ಬಳಿಗೆ ಕಳಿಸಿ ತಾನು ಮುಕ್ತನಾಗಬೇಕೆಂದು ಮಾಡಿದನು. ಆತನು ರಾತ್ರಿ ಗುಪ್ತವಾಗಿ ಮೋಹಿನಿಯೊಡನೆ ಮಾರ್ಗವನ್ನು ಕ್ರಮಿಸುತ್ತಿರಲು, ಮುಸಲ್ಮಾನರು ಅವರಿಬ್ಬರನ್ನು ಸೆರೆಹಿಡಿದು, ಮೋಹಿನಿಯನ್ನು ಬಾದಶಹನ

ಮಗನ ಕಡೆಗೆ ಕಳಿಸತಕ್ಕವರಿದ್ದರು. ಅಷ್ಟರಲ್ಲಿ ಮೋಹಿನಿಯು ಎಚ್ಚಮನಾಯಕನ ಸಂಬಂಧಿ ಕಳೆಂಬುದು ನನಗೆ ಗೊತ್ತಾಗಲು, ನಾನು ಆಕೆಯನ್ನೂ, ಋಷಿಯನ್ನೂ ಬಂಧಮುಕ್ತಮಾಡಿ ನಾಯಕರ ಬಳಿಗೆ ಅವರನ್ನು ಸುರಕ್ಷಿತವಾಗಿ ಕಳಿಸಿದೆನು. ಹೀಗೆ ಎರಡು ಪ್ರಸಂಗಗಳಲ್ಲಿ ನಾನು ನಾಯಕರಿಗೆ ಬಾದಶಹರ ವಿರುದ್ಧವಾಗಿ ಸಹಾಯ ಮಾಡಿದ್ದನ್ನು, ನನಗೆ ಆಗದವರು ಹೊಟ್ಟೆಯ ಕಿಚ್ಚಿನಿಂದ ಬಾದಶಹರಿಗೆ ತಿಳಿಸಲು, ಅವರು ನನ್ನನ್ನು ರಾಜದ್ರೋಹಿಯೆಂದು ದರ್ಬಾರದಲ್ಲಿ ಅವಮಾನಗೊಳಿಸಿ ಹದ್ದುಪಾರು ಮಾಡಿದರು. ಬಾದಶಹರ ಹಿತಕ್ಕೆ ವಿಘ್ನವನ್ನುಂಟುಮಾಡಿದ ನನಗೆ ಶಿಕ್ಷೆಯಾದದ್ದು ಅನ್ಯಾಯವಲ್ಲ. ನನ್ನನ್ನು ಶಿಕ್ಷಿಸಿದ್ದಕ್ಕಾಗಿ ನಾನು ಬಾದಶಹರನ್ನು ಈಗ ನಿಂದಿಸುವುದೂ ಇಲ್ಲ. ಬಾದಶಹರ ಅನ್ನದಿಂದ ದೊಡ್ಡವನಾದ ನಾನು, ಎಂದೂ ಬಾದಶಹರ ಮೇಲೆ ಶಸ್ತ್ರವನ್ನು ಹಿಡಿಯಲಿಕ್ಕಿಲ್ಲ; ಆದರೆ ಎಚ್ಚಮನಾಯಕರು ಮುಸಲ್ಮಾನರೊಡನೆ ಯುದ್ಧಮಾಡದೆ, ರಾಜದ್ರೋಹಿಯಾದ ಜಗರಾಯನನ್ನು ದಂಡಿಸಿ, ವಿಜಯನಗರದ ರಾಯರ ನಿಜವಾದ ವಂಶಜರಿಗೆ ಪಟ್ಟವನ್ನು ಕೊಡಿಸುವ ನ್ಯಾಯದ ಕಾರ್ಯಕ್ಕೆ ಕೈಹಾಕಿರುವುದರಿಂದ, ಅವರಿಗೆ ಕೈಲಾದ ಮಟ್ಟಿಗೆ ಸಹಾಯ ಮಾಡಬೇಕೆಂದು ನಾನು ಬಂದಿದ್ದೇನೆ. ನನ್ನ ಶೇಷಾಯುಷ್ಯ ವನ್ನು ನಾಯಕರ ಸಹವಾಸದಲ್ಲಿ ಕಳೆಯುವ ನಿಶ್ಚಯ ಮಾಡಿರುವೆನು. ಇದ್ದ ಸಂಗತಿಯನ್ನು ಈಶ್ವರ ಸ್ಮರಣ ಪೂರ್ವಕವಾಗಿ ಹೇಳಿದ್ದೇನೆ, ಎಂದು ನುಡಿದು ಚಾಂದಖಾನನು ತನ್ನ ಸ್ಥಳದಲ್ಲಿ ಕುಳಿತುಕೊಂಡನು.

ಚಾಂದಖಾನನ ಈ ಭಾಷಣವನ್ನು ಕೇಳಿ ನೆರೆದ ಸರದಾರರು ಎಚ್ಚಮನಾಯಕನ ವಿಷಯವಾಗಿ ಆದರವುಳ್ಳವರಾದರು; ಆದರೆ ಖಾನನ ವಿಷಯವಾಗಿ ಮಾತ್ರ ಬೇರೆ ಬೇರೆ ಜನರು ಬೇರೆ ಬೇರೆ ತರ್ಕಗಳನ್ನು ಮಾಡಿದರು. ಮುಸಲ್ಮಾನರು ಘಾತಕರಾದ್ದರಿಂದ ನಮ್ಮ ಮಟ್ಟನ್ನು ತಿಳಕೊಂಡು ಬರುವುದಕ್ಕಾಗಿ, ಬಾದಶಹನು ಈತನನ್ನು ಇಲ್ಲಿಗೆ ಕಳಿಸಿರಬಹುದೆಂದು ಕೆಲವರು ತರ್ಕಿಸಿದರು. ಕೆಲವರು, ಮುಸಲ್ಮಾನರಲ್ಲಿ ಎಷ್ಟು ಜನರು ಪ್ರಾಮಾಣಿಕರಿರುವುದಿಲ್ಲ? ಪ್ರಮಾಣಪೂರ್ವಕವಾಗಿ ಇಷ್ಟು ಸರಳತನದಿಂದ ಮಾತಾಡಿದವನ ಹೊಟ್ಟೆಯಲ್ಲಿ ಕಪಟವು ಸರ್ವಥಾ ಇರಲಿಕ್ಕಿಲ್ಲೆಂದು ತರ್ಕಿಸಿದರು. ಬೇರೆ ಕೆಲವರು, ಹಿಂದೂ ಜನರಿಗೆ ಸಹಾಯಮಾಡಿದ ಕಾಫರನೆಂದು ತಿಳಿದು ಬಾದಶಹನು ಹೊರಗೆ ಹಾಕಿದ್ದರಿಂದ, ಮುಸಲ್ಮಾನರ ಆಶ್ರಯವನ್ನು ಪಡೆಯಲಿಕ್ಕೆ ನಾಚಿ ಈತನು ಇಲ್ಲಿಗೆ ಬಂದಿರಬಹುದೆಂದು ಊಹಿಸಿದರು; ಆದರೆ ಎಚ್ಚಮನಾಯಕನೂ, ಕುಮುದಿನಿಯೂ ಚಾಂದಖಾನನ ವಿಷಯವಾಗಿ ಯಾವ ಬಗೆಯ ಅವಿಶ್ವಾಸವನ್ನೂ ಕಲ್ಪಿಸಲಿಲ್ಲ. ಸರಳಸ್ವಭಾವದವರ ಹೃದಯವನ್ನು ಸರಳಸ್ವಭಾವದವರೇ ಬಲ್ಲರು. ಎಚ್ಚಮನಾಯಕನು ಆಗ ದರ್ಬಾರದಲ್ಲಿ ಹೆಚ್ಚಿಗೆಯೇನೂ ಮಾತಾಡದೆ, ಬಹುಮಾನದ ಪೋಷಾಕುಗಳನ್ನೂ, ಬಹು ಬೆಲೆಯುಳ್ಳ ರತ್ನಕೆಚ್ಚಿದ ಹಿಡಿಕೆಯ ಉತ್ತಮವಾದ ಒಂದು ಖಡ್ಗವನ್ನೂ ರಾಜಪುತ್ರರ ಕೈಯಲ್ಲಿ ಚಾಂದಖಾನನಿಗೆ ಕೊಡಿಸಿ, ನೀವು ಬಂದದ್ದರಿಂದ ರಾಜಪುತ್ರರಿಗೆ ಬಹಳ ಸಂತೋಷವಾಗಿರುವುದಲ್ಲದೆ, ನನ್ನ ಮೇಲೆ ನೀವು ಮಾಡುವ ಲೋಭಕ್ಕಾಗಿ ನಾನು ಅತ್ಯಂತ ಕೃತಜ್ಞನಾಗಿರುವೆನೆಂದು ಹೇಳಿದನು. ಕಾಲವು ಬಹಳವಾದ್ದರಿಂದ ಇಲ್ಲಿಗೆ ದರ್ಬಾರದ ಕೆಲಸವು

ಮುಗಿದಂತಾಯಿತು. ರಾಜಪುತ್ರರು ದರ್ಬಾರದಿಂದ ಹೊರಟುಹೋದರು. ಎಚ್ಚಮನಾಯಕನು ಚಾಂದಖಾನನ, ಹಾಗು ಆತನ ದಂಡಿನ ವ್ಯವಸ್ಥೆಯನ್ನು ಉತ್ತಮರೀತಿಯಿಂದ ಇಡಿಸಿದನು. ಖಾನನ ದಂಡಿನಲ್ಲಿ ಸಾವಿರ ಜನ ಕಾಲಾಳೂ, ಐನೂರು ಜನ ರಾವುತರೂ ಇದ್ದರು. ಖಾನನು ಎರಡು ದಿವಸ ಎಲ್ಲಿಯೂ ವಿಶೇಷವಾಗಿ ಹೊರಗೆ ಹೋಗದೆ ತನ್ನ ಬಿಡಾರದಲ್ಲಿಯೇ ವಿಶ್ರಾಂತಿಯನ್ನು ತಕ್ಕೊಂಡನು. ನಾಯಕನಾದರೂ ಆತನ ವಿಶ್ರಾಂತಿಗೆ ಭಂಗವನ್ನುಂಟು ಮಾಡಲಿಲ್ಲ, ಮೂರನೆಯ ದಿವಸ ನಾಯಕನು, ನಿಮಗೆ ಅನುಕೂಲವಿದ್ದರೆ ನಿಮ್ಮ ದರ್ಶನಕ್ಕೆ ಬರುವೆನೆಂದು ಖಾನನಿಗೆ ಹೇಳಿಕಳಿಸಲು, ನಾನೇ ತಮ್ಮ ದರ್ಶನಕ್ಕೆ ಬರುವೆನೆಂದು ಹೇಳಿ, ಗೊತ್ತುಮಾಡಿದ ಹೊತ್ತಿಗೆ ಖಾನನು ಸಂತೋಷದಿಂದ ನಾಯಕನ ದರ್ಶನಕ್ಕೆ ಹೋದನು.

ಖಾನನು ದರ್ಶನಕ್ಕೆ ಹೋದಾಗ ನಾಯಕನು ಒಬ್ಬನೇ ಕುಳಿತಿದ್ದನು. ಖಾನನು ಬಂದದ್ದನ್ನು ನೋಡಿ ಕೂಡಲೆ ನಾಯಕನು ಎದ್ದುಹೋಗಿ ವಿನಯದಿಂದ ಸಲಾಮುಮಾಡಿ, ಆತನನ್ನು ಕೈಹಿಡಿದು ಕರಕೊಂಡು ಬಂದು ಬಹುಮಾನದಿಂದ ತನ್ನ ಹತ್ತರ ಕುಳ್ಳಿರಿಸಿಕೊಂಡನು. ಆ ಸರಳಸ್ವಭಾವದ ಉಭಯ ಮಿತ್ರರಿಗೂ ಪರಸ್ಪರರ ದರ್ಶನದಿಂದ ಬಹಳ ಆನಂದವಾಯಿತು. ಗುಣಾಲುಬ್ಧರಾಗಿದ್ದ ಆ ತರುಣರ ಸರಳಹೃದಯದಲ್ಲಿ, ಕೃತಜ್ಞತಾರೂಪವಾದ ಗೊಬ್ಬರದ ಕಸುವಿನಿಂದ ಮೊಳೆತಿದ್ದ ಮಿತ್ರತ್ವಾಂಕುರವು, ವಿಕಲ್ಪ-ಕುಕಲ್ಪನೆ ಮೊದಲಾದ ಕೆಟ್ಟ ಕಸಗಳ ಕಾಟವಿಲ್ಲದೆ, ಪರಸ್ಪರ ಗುಣಸ್ಮರಣಾನಂದರೂಪವಾದ ಜಲದಿಂದ ಅಲ್ಪವಕಾಶದಲ್ಲಿ ಯಾರಿಗೂ ಗೊತ್ತಿಲ್ಲದೆ ಬೆಳೆದು, ಆ ಅಂಕುರವು ದೊಡ್ಡ ವೃಕ್ಷವಾಗಿತ್ತು! ನಾಯಕನು ಖಾನನ ಯೋಗ ಕ್ಷೇಮವನ್ನು ವಿಚಾರಿಸಿ, ಬಾದಶಹರ ಉಚ್ಚತರ ವೈಭವದಲ್ಲಿದ್ದ ತಮಗೆ, ನಮ್ಮ ರಾಯರ ಬಡತನದ ಆದರದಿಂದ ಸಂಕೋಚವಾಗುತ್ತಿರಬಹುದೆಂದು ಉಪಚರಿಸಿದನು. ಅದಕ್ಕೆ ಖಾನನು—ನಾಯಕರೇ, ನಿಮ್ಮ ಪ್ರೇಮದ ಆದರದಲ್ಲಿ ನನಗೆ ಬಡತನ ದೈವವುಳ್ಳತನಗಳ ತಾರತಮ್ಯವೇ ತಿಳಿಯದಂತಾಗಿದೆ. ಈಗ ಮೂರುತಿಂಗಳ ಹಿಂದೆ ನನ್ನ ಜೀವದ ಗೆಳೆಯರೆಂದು ತಿಳಿಯಲ್ಪಟ್ಟಿದ್ದ ನಿಮ್ಮ ಮನೆಯು, ನನಗೆ ಎರಡನೆಯವರ ಮನೆಯಾಗಿ ತೋರುವುದಿಲ್ಲ, ನನ್ನ ಮನೆಯಲ್ಲಿರುವಂತೆ ನಾನು ಸುಖವಾಗಿದ್ದೇನೆ. ನನಗೂ ನನ್ನ ದಂಡಿನವರಿಗೂ ಯಾವ ಮಾತಿನ ಕೊರತೆಯೂ ಆಗಿರುವುದಿಲ್ಲ, ಆದರೆ ಪ್ರಿಯಮಿತ್ರರೇ, ಮೋಹಿನೀ ದೇವಿಯವರು ಸುಖವಾಗಿರುವರೇ? ಅವರೊಡನೆ ನಿಮ್ಮ ವಿವಾಹವಾಯಿತಷ್ಟೇ? ಎಂದು ಕೇಳಲು, ಎಚ್ಚಮನಾಯಕನು ಮೋಹಿನಿಯ ನಿಜವಾದ ವೃತ್ತಾಂತವನ್ನೂ, ಆಕೆಯು ಕುಮುದಿನಿ ಎಂಬ ಹೆಸರು ಪಡೆದದ್ದನ್ನೂ ಸಾದ್ಯಂತವಾಗಿ ಹೇಳಿದನು. ಅಷ್ಟರಲ್ಲಿ ಪುರುಷರ ಉಡಿಗೆ-ತೊಡಿಗೆಗಳಿಂದ ಒಪ್ಪುವ ಕುಮುದಿನಿಯು ಅಲ್ಲಿಗೆ ಬರಲು, ನಾಯಕನು ಖಾನನಿಗೆ ಆಕೆಯ ಗುರುತು ಮಾಡಿಕೊಟ್ಟನು. ಖಾನನು ಕುಮುದಿನಿಯ ಇರವನ್ನು ನೋಡಿ ಬಹಳ ಆಶ್ಚರ್ಯ ಪಟ್ಟನು. ಹಿಂದೂ ಸ್ತ್ರೀಯರು, ವಿಶೇಷವಾಗಿ ಕರ್ನಾಟಕ ಸ್ತ್ರೀಯರು, ಇಷ್ಟು ದಿಟ್ಟತನದಿಂದ ವ್ಯವಹರಿಸುವುದೂ, ವಿಚಿತ್ರತರ ಸಾಹಸವನ್ನು ಮಾಡುವುದೂ ಅಪೂರ್ವವೆಂದು ಆತನು ನೆನಿಸಿದನು. ಕುಮುದಿನಿಯು ವಿನಯದಿಂದ ಚಾಂದಖಾನನಿಗೆ-ತಾವು ನನ್ನನ್ನು ಒಡಹುಟ್ಟಿ

ದವಳೆಂದು ತಿಳಿದು ನಡಿಸಿಕೊಳ್ಳಬೇಕೆಂದು ಹೇಳಿಕೊಂಡಳು. ಅದಕ್ಕೆ ಖಾನನು ಸಂತೋಷದಿಂದ ಒಪ್ಪಿಕೊಂಡ ಬಳಿಕ, ಪರಸ್ಪರರಲ್ಲಿ ವಿಶ್ವಾಸದ ಬಗ್ಗೆ ಆಣೆಗಳೂ, ಪ್ರಮಾಣಗಳೂ ಆದವು. ತರುವಾಯ ಖಾನನು ನಾಯಕನ ಅಪ್ಪಣೆಯನ್ನು ಪಡೆದು ಮನೆಗೆ ಹೊರಡಲು, ನಾಯಕನೂ, ಕುಮುದಿನಿಯೂ ಖಾನನನ್ನು ಕಳಿಸುತ್ತ ಆತನ ಮನೆಗೆ ಹೋದರು.

ಖಾನನು ಬಂದವರನ್ನು ಆದರಪೂರ್ವವಾಗಿ ಕುಳ್ಳಿರಿಸಿ, ಒಳಗೆ ಹೋಗಿ ಮುದ್ರೆಮಾಡಿದ ಒಂದು ಸಣ್ಣ ಪೆಟ್ಟಿಗೆಯನ್ನು ತಂದು ನಾಯಕನ ಮುಂದಿಟ್ಟನು. ಆಗ ನಾಯಕನು ಪೆಟ್ಟಿಗೆಯಿದೇನೆಂದು ವಿಚಾರಿಸಲು, ಖಾನನು—ನಾಯಕರೇ, ಈ ಪೆಟ್ಟಿಗೆಯಲ್ಲಿ ನನ್ನ ಜೀವನಸರ್ವಸ್ವವು ಇರುತ್ತದೆ. ಈ ಪೆಟ್ಟಿಗೆ ಹೋದರೆ ನನ್ನ ಪ್ರಾಣ ಹೋದಂತೆಯೇ ಸರಿ. ಕಂಡವರ ಕೈಯಲ್ಲಿ ಇದನ್ನು ಕೊಡುವಹಾಗಿಲ್ಲ. ನೀವು ನನ್ನ ಜೀವದ ಗೆಳೆಯರಾದ್ದರಿಂದಲೂ, ನಮ್ಮಿಬ್ಬರಲ್ಲಿ ದೃಢತರವಾದ ಅಕೃತ್ರಿಮ ಸಂಬಂಧವು ಇನ್ನು ಮೇಲೆ ಆಗಬೇಕಾಗಿರುವುದರಿಂದಲೂ ಪ್ರಸಂಗ ವಿಶೇಷದಲ್ಲಿ ಸಂಜೀವನದಂತೆ ಉಪಯೋಗಿಸುವ ಈ ಪೆಟ್ಟಿಗೆಯನ್ನು ನಿಮ್ಮ ಬಳಿಯಲ್ಲಿಡುತ್ತೇನೆ; ಜೋಕೆಯಿಂದ ಇಟ್ಟುಕೊಳ್ಳಿರಿ. ಇದಕ್ಕೆ ನೀವೂ ಒಂದು ಕೀಲಿಯನ್ನು ಹಾಕಿ ನಿಮ್ಮದೊಂದು ಮುದ್ರೆ ಮಾಡಿರಿ. ಬೇಡಿದಾಗ ನನ್ನ ಈ ಪೆಟ್ಟಿಗೆಯನ್ನು ಎರಡು ಮುದ್ರೆಗಳ ಸಹಿತವಾಗಿ ನನಗೆ ಒಪ್ಪಿಸಿದರೆ, ಬಹಳ ಸಂತೋಷವಾಗುವುದು, ಎಂದು ಹೇಳಿದನು. ಅದಕ್ಕೆ ನಾಯಕನು ಒಡಂಬಟ್ಟು, ಪೆಟ್ಟಿಗೆಯನ್ನು ತಕ್ಕೊಂಡು ಖಾನನ ಸಮಕ್ಷ ಅದಕ್ಕೆ ತನ್ನದೊಂದು ಬೀಗಹಾಕಿ ಮುದ್ರೆಮಾಡಿದನು. ಪೆಟ್ಟಿಗೆಯು ತೀರ ಹಗುರಾಗಿತ್ತು. ಇಂಥ ಹಗುರಾದ ಸಣ್ಣ ಪೆಟ್ಟಿಗೆಯಲ್ಲಿ ಖಾನನ ಜೀವನಸರ್ವಸ್ವವೇನಿರಬಹುದೆಂಬದರ ಕಲ್ಪನೆಯೇ ನಾಯಕನಿಗಾಗ ಲೊಲ್ಲದು. ಆದರೂ ಆತನು ಆಗ ಹೆಚ್ಚಿನ ವಿಚಾರದ ಗೊಡವೆಗೆ ಹೋಗದೆ, ಪೆಟ್ಟಿಗೆಯನ್ನು ತನ್ನ ಬಳಿಯಲ್ಲಿಟ್ಟು ಕೊಂಡನು. ಒಬ್ಬರ ಹಿಂದೊಬ್ಬರು ತನ್ನ ಪಕ್ಷಕ್ಕೆ ಬರಹತ್ತಿರುವುದನ್ನು ನೋಡಿ ನಾಯಕನು ಸಮಾಧಾನಪಟ್ಟನು. ಅದರಲ್ಲಿ ಚಾಂದಖಾನನಂಥ ನಿಶ್ಚಯಬುದ್ಧಿಯ ಶೂರನು ಪರಧರ್ಮದವನಾಗಿದ್ದು ತಾನಾಗಿ ಸಹಾಯಮಾಡಲಿಕ್ಕೆ ಬಂದದ್ದು ನಾಯಕನಿಗೆ ವಿಚಿತ್ರ ಯೋಗಾಯೋಗವಾಗಿ ತೋರಿತು. ಇದೆಲ್ಲ ಈಶ್ವರೀತಂತ್ರವೆಂದು ಆತನು ಭಾವಿಸಿದನು. ಈ ಸದ್ಭಾವನೆಯ ಸಂಗಡ ಇಚ್ಛಿತಫಲವು ಆತನಿಗೆ ತೀರ ಕೈಗೆ ನಿಲಕುವ ಹಾಗೆ ಕಂಡದ್ದರಿಂದ ಅದನ್ನು ಸಂಪಾದಿಸಲಿಕ್ಕೆ ಆತನು ಆತುರಪಡಹತ್ತಿದನು. ಖಾನನು ಬಂದು ಇನ್ನೂ ಮೂರುದಿವಸ ಪೂರಾ ಆಗಿದ್ದಿಲ್ಲ; ಆತನ ಗುಣಸ್ವಭಾವಾದಿಗಳು ತನಗೆ ಚೆನ್ನಾಗಿ ಗೊತ್ತಾಗಿದ್ದಿಲ್ಲ; ಆದರೂ ಮಹತ್ವದ ಆಲೋಚನೆಗಳನ್ನು ಆತನೊಡನೆ ಮನಬಿಚ್ಚಿ ಮಾಡಲಿಕ್ಕೆ ನಾಯಕನು ಹಿಂದೆ ಮುಂದೆ ನೋಡಲಿಲ್ಲ. ಇದೊಂದು ಕನ್ನಡಿಗರ ಸ್ವಭಾವದೋಷವೆಂದು ಹೇಳಿದರೂ ಹೇಳಬಹುದು. ನಾಯಕನು ಖಾನನನ್ನು ಕುರಿತು ಆತುರದಿಂದ—ಪ್ರಿಯಮಿತ್ರನೇ ನಮ್ಮ ಒಡೆಯರಾದ 3ನೇ ರಂಗ ರಾಯರನ್ನು ಜಗರಾಯನು ಸಕುಟುಂಬವಾಗಿ ಸೆರೆಯಲ್ಲಿಟ್ಟಿರುವುದರಿಂದ ನನಗೆ ಎಳ್ಳಷ್ಟು ಸಮಾಧಾನವಿಲ್ಲ. ಆ ನೀಚನು ಯಾವಕಾಲಕ್ಕೆ ಏನು ಮಾಡ್ಯಾನೆಂಬದರ ನೇಮವಿಲ್ಲ. ಋಷೀಶ್ವರನು ಹೇಳಿರುವ ಭವಿಷ್ಯವನ್ನು ನೆನಿಸಿದರಂತೂ; ದೊರೆಗಳ, ಹಾಗು ಅವರ

ಕುಟುಂಬದವರ ಸುರಕ್ಷಿತತೆಯ ಬಗ್ಗೆ ನನ್ನಲ್ಲಿ ಭಯವು ಉಂಟಾಗುತ್ತದೆ! ನನ್ನ ಬಳಿಯಲ್ಲಿ ಸದ್ಯಕ್ಕೆ ಇಪ್ಪತ್ತು ಸಾವಿರದವರೆಗೆ ಸೈನ್ಯವಿರುತ್ತದೆ. ಹಲವು ಜನ ಶೂರ ಸರದಾರರು ನನ್ನ ಹಿತದ ಸಲುವಾಗಿ ಟೊಂಕಕಟ್ಟಿರುವರಲ್ಲದೆ, ದೇವರು ಬಂದಹಾಗೆ ನಿನ್ನಂಥ ಶೂರಪುರುಷನು ನನಗೆ ಸಹಾಯ ಮಾಡಬೇಕೆಂದು ಅಕಸ್ಮಾತ್ತಾಗಿ ಬಂದಿರುತ್ತಿ; ಇದಲ್ಲದೆ, ಕುಮುದಿನಿಯಂಥ ಪ್ರಮದೆಯು ಕೂಡ ತನ್ನ ಸ್ವಭಾವಸಿದ್ಧವಾದ ಸುಕುಮಾರವೃತ್ತಿಯನ್ನು ಬಿಟ್ಟು, ಪುರುಷರ ಪೌರುಷವೃತ್ತಿಯನ್ನು ತಾಳಿ ಸಾಹಸವನ್ನು ಮಾಡುತ್ತಿರುವಳು; ಹೀಗಿದ್ದು ಇಲ್ಲಿಯವರೆಗೆ ದೊರೆಗಳ ಬಂಧವಿಮೋಚನವು ಆಗಬಾರದೇ? ಇನ್ನೆಲ್ಲಿಯವರೆಗೆ ವಿಚಾರವು? ಇನ್ನೆಲ್ಲಿಯವರೆಗೆ ಹಾದಿಯ ನೋಡವುದು? ಪ್ರಿಯಮಿತ್ರಾ, ಚಾಂದಖಾನಾ, ಕಾರ್ಯಸಾಧನದಲ್ಲಿ ವಿಲಂಬವಾಗುವುದ ರಿಂದುಂಟಾಗುವ ತಾಪವನ್ನು ನಾನು ಸಹಿಲಾರೆನು. ಇಗೋ, ಈ ಕುಮುದಿನಿಯನ್ನೂ, ಎಲ್ಲ ಬಗೆಯಿಂದ ನಮ್ಮನ್ನೇ ಆಶ್ರಯಿಸಿರುವ ನಮ್ಮ ಆಶಾಂಕುರವಾದ ರಾಜಪುತ್ರರನ್ನೂ ನಿನಗೆ ಒಪ್ಪಿಸಿದ್ದೆನೆ. ಹ್ಯಾಗಾದರೂ ಅವರ ಸಂರಕ್ಷಣ ಮಾಡು. ನಾಳೆ ನಾನು ಎಲ್ಲ ಉಪಾಧಿಗಳನ್ನು ಕಡಿದುಕೊಂಡು, ದೊರೆಗಳ ಬಂಧವಿಮೋಚನದ ಕಾರ್ಯವೊಂದನ್ನು ಇಟ್ಟುಕೊಂಡು ಯುಕ್ತಿ ಪ್ರಯುಕ್ತಿಗಳಿಂದ ಅದನ್ನು ಆದಷ್ಟು ತೀವ್ರ ಸಾಧಿಸುತ್ತೇನೆ, ಎನ್ನಲು, ಖಾನನು–ಪ್ರಿಯಮಿತ್ರಾ, ಎಚ್ಚಮನಾಯಕಾ, ನಿನ್ನ ಬಳಿಯಲ್ಲಿರುವ ಸ್ವಜಾತಿಯ ಬಹುಜನ ಶೂರ ಸರದಾರರನ್ನು ಬಿಟ್ಟು, ಪರಜಾತಿಯವನಾದ ನನ್ನ ಮೇಲೆ, ಇಷ್ಟು ಅಲ್ಪಾವಕಾಶದಲ್ಲಿ ಈ ಪರಿ ವಿಶ್ವಾಸವಿಡುವುದನ್ನು ನೋಡಿ ನನಗೆ ಆಶ್ಚರ್ಯವಾಗುವುದಲ್ಲದೆ, ಸಮಾಧಾನವೂ ಆಗುತ್ತದೆ! ವೀರಶ್ರೇಷ್ಠಾ, ಹೆದರಬೇಡ, ಚಾಂದಖಾನನು ಮೋಸಗಾರನಲ್ಲ–ಸ್ವಾರ್ಥಸಾಧಕನಲ್ಲ–ಪರಹಿಂಸಕನಲ್ಲ! ಆತನು ತನ್ನನ್ನು ನಂಬಿದವರ ನಂಬಿಗೆಗೆ ತನ್ನ ಪ್ರಾಣವನ್ನು ಬಲಿಯಾಗಿ ಕೊಡುವ ಮಹಾಮೂಢ ನಾಗಿದ್ದಾನೆ!! ಮಿತ್ರಾ ನಿನ್ನ ಕುಮುದಿನಿಯೂ, ನಿನ್ನ ರಾಜಪುತ್ರನೂ ನಿನ್ನ ಬಳಿಯಲ್ಲಿಯೇ ಇರಲಿ, ಅವರ ಸಂರಕ್ಷಣವನ್ನು ನಾನು ಮಾಡುವುದರಿಂದ ಚಂದಕಾಣಲಿಕ್ಕಿಲ್ಲವಾದ್ದರಿಂದ ನೀನೇ ಮಾಡು. ನಾನು ದೊರೆಗಳನ್ನು ಪ್ರತಿಬಂಧದೊಳಗಿಂದ ಬಿಡಿಸುವ ಯತ್ನಮಾಡುತ್ತೇನೆ. ಕುಮುದಿನಿಯನ್ನೂ– ರಾಜಪುತ್ರರನ್ನೂ ನನಗೆ ಒಪ್ಪಿಸಿ ನಿಶ್ಚಿಂತನಾಗುವುದಕ್ಕಿಂತ, ದೊರೆಗಳ ಬಂಧವಿಮೋಚನದ ಕಾರ್ಯವನ್ನು ನನಗೆ ಒಪ್ಪಿಸಿ ನಿಶ್ಚಿಂತನಾಗುವುದು ನಿನಗೆ ಸುಲಭವಾಗಿ ರುವುದಲ್ಲದೆ, ಹಿತಕರವೂ ಆಗಿರುವುದು. ಮನುಷ್ಯ ಯತ್ನಕ್ಕೆ ದೈವವು ಅನುಕೂಲವಾಗಿರಲಿಕ್ಕೆ ಬೇಕು. ನಾಳಿಗೇ ನಾನು ನನ್ನ ಎಲ್ಲ ಸೈನ್ಯದೊಡನೆ ಜಗರಾಯನ ಬಳಿಗೆ ಹೋಗಿ, ಅವನಿಗೆ ಮಂಕುಬೂದಿಯನ್ನು ಬಡಿದು ಕಾರ್ಯವನ್ನು ಸಾಧಿಸಲು ಆರಂಭಿಸುತ್ತೇನೆ. ವಿಶ್ವಾಸಘಾತವು ನನಗೆ ಸೇರದಿದ್ದರೂ, ನಾನು ಒಮ್ಮೆ ನನ್ನನ್ನು ನಿನಗೆ ಒಪ್ಪಿಸಿಬಿಟ್ಟಿರುವುದರಿಂದ, ನಿನ್ನ ಹಿತದ ಸಲುವಾಗಿ ನಾನು ಏನಾದರೂ ಮಾಡಲೇಬೇಕಾಗಿರುವದು. ನಿನ್ನ ಹಿತವೇ ನನ್ನ ಧ್ಯೇಯವು. ಅದರ ಸಲುವಾಗಿ ನನ್ನ ಪ್ರಾಣವನ್ನೇ ಅರ್ಪಿಸಲಿಕ್ಕೆ ಸಿದ್ಧನಾಗಿರಲು, ಉಳಿದ ಮಾತುಗಳ ವಿಚಾರವೇಕೆ? ಮೇಲಾಗಿ ವಿಶ್ವಾಸಘಾತದಿಂದ ದೊರೆಗಳನ್ನು ಪ್ರತಿಬಂಧದಲ್ಲಿಟ್ಟಿದ್ದ ಜಗರಾಯನಿಗೆ, ವಿಶ್ವಾಸಘಾತವನ್ನು ಮಾಡಿ, ಮುಯ್ಯಕ್ಕೆ ಮುಯ್ಯ ತೀರಿಸುವುದು ವ್ಯವಹಾರದ ದೃಷ್ಟಿಯಿಂದ ಅನ್ಯಾಯವಾಗದು!!

# ಮುಳ್ಳುಹಾಸಿಗೆ

ಇಳಿಹೊತ್ತಿನ ಸಮಯವು, ಜಡಿಮಳೆಯು ನಾಲ್ಕುದಿನ ಚೆನ್ನಾಗಿ ಹೊರಪಾದದ್ದರಿಂದ ಸ್ವಚ್ಛವಾಗಿ ಬಿಸಿಲು ಬಿದ್ದಿದೆ. ಚಂದ್ರಗಿರಿಯ ಉಪವನದೊಳಗಿನ ನೆಲವೆಲ್ಲ ಆರಿ, ಅಲ್ಲಿಯ ಗಿಡ–ಬಳ್ಳಿಗಳು ತಮ್ಮ ತಮ್ಮ ಸುಂದರವಾದ ಮಡಿಗಳಲ್ಲಿ ಆನಂದದಿಂದ ಅಲೆದಾಡುತ್ತ ಮಿರಿ ಮಿರಿ ಮಿಂಚುವ ತಮ್ಮ ಎಲೆ–ಚಿಗುರುಗಳಿಂದ ಮನೋಹರವಾಗಿ ಒಪ್ಪುತ್ತಲಿವೆ. ಪಾರಿಜಾತ, ಮಲ್ಲಿಗೆ, ಗುಲಾಬಿ, ನಿಶಾಗಂಧಿ ಮೊದಲಾದವುಗಳ ಅರಳ ಮೊಗ್ಗೆಗಳ ಪಕಳಿಗಳಲ್ಲಿ ಗಾಳಿಯು ಸೇರಿ, ಮೆಲ್ಲಮೆಲ್ಲನೆ ಅವನ್ನು ಅರಳಿಸುತ್ತಿರುವಾಗ, ಹೊರಬಿದ್ದ ಆಲ್ಹಾದಕರವಾದ ಮಿಶ್ರ ಗಂಧವು ಉಪವನದಲ್ಲಿ ಘಮಘಮಿಸುತ್ತಲಿದೆ. ಉದುರಿಬಿದ್ದ ತರತರದ ಮಾವಿನ ಪಾಡುಗಳೂ, ಕಳಚಿಬಿದ್ದ ಪಕ್ವವಾದ ಜಂಬುನೀರಲ ಹಣ್ಣುಗಳೂ, ಆರಿಸಿ ಹರಿದು ಒಟ್ಟುಗೂಡಿಸಿದ ಅಂಜೀರದ ಫಲಗಳೂ ಆಯಾ ಗಿಡಗಳ ಬುಡಗಳಲ್ಲಿ ಗುಂಪಿಗುಂಪಿಗಳಾಗಿ ಒಪ್ಪುತ್ತಲಿವೆ. ಅಲ್ಲಲ್ಲಿ ವಿಶ್ರಾಂತಿಗಾಗಿ ಕಟ್ಟಿದ ಸುಂದರವಾದ ಆಸನಗಳ ಮೇಲೆಯೂ, ಕಟ್ಟೆಗಳ ಮೇಲೆಯೂ ಜನರು ಆನಂದದಿಂದ ಕುಳಿತು ಸುಖಸಲ್ಲಾಪಗಳನ್ನು ಆಡತೊಡಗಿದ್ದಾರೆ. ನೋಡಿದತ್ತೆಲ್ಲ ವಿಚಿತ್ರವಾದ ಕಾರಂಜಿಗಳು ಹಾರಿಹಾರಿ ಜನರ ಕೌತುಕವನ್ನು ಹೆಚ್ಚಿಸುತ್ತಲಿವೆ. ಸುವ್ಯವಸ್ಥಿತವಾಗಿ ಕಟ್ಟಿದ ಕಾಲುವೆಗಳಲ್ಲಿ ಸರೋವರದ ಸ್ವಚ್ಛವಾದ ನೀರು ಸಳಸಳ ಹರಿಯುತ್ತಿರುವುದನ್ನು ನೋಡಿ ಜನರ ಮನಸ್ಸುಗಳು ಸುಪ್ರಸನ್ನವಾಗುತ್ತಲಿವೆ. ಗಿಳಿ, ಇಣಚಿ ಮೊದಲಾದ ಪ್ರಾಣಿಗಳು ಫಲವೃಕ್ಷ ಗಳೊಳಗಿನ ಪಕ್ವವಾದ ಫಲಗಳನ್ನು ಕಡಿಕಡಿದು ಮಧುರವಾದ ರಸವನ್ನು ಹೀರಿ ಹೀರಿ ತೃಪ್ತವಾಗುತ್ತಲಿವೆ. ಇಂಥ ಸುಮನೋಹರ ಸಮಯದಲ್ಲಿ ಬರಬರುತ್ತ ನಾಗರಿಕರ ಗುಂಪುಗಳಿಂದ ಉಪವನವು ಗಜಬಜಿಸುತ್ತಿರಲು, ಜಗರಾಯನ ದೊಡ್ಡ ಕುದುರೆಯು, ತನ್ನ ನಡಿಗೆಯಿಂದ ನೆಲವನ್ನು ಅದರಿಸುತ್ತ ಸೇನಾಪತಿಯಾದ ಇರುಗನಾಯಕನ ಕುದುರೆಯು ತನ್ನನ್ನು ಅನುಸರಿಸಲು, ಸರೋವರದ ದಡದಲ್ಲಿದ್ದ ವಿಶ್ರಾಂತಿ ಮಂಟಪದ ಕಡೆಗೆ ಸಾಗಿತ್ತು

ರಾಜಪುತ್ರನು ಎಚ್ಚಮನಾಯಕನ ಕಡೆಗೆ ಹೋದ ಸುದ್ದಿಯನ್ನು ಕೇಳಿದ ಎಷ್ಟೋ ದಿವಸಗಳ ವರೆಗೆ, ಜಗರಾಯನು ಅರಮನೆಯಿಂದ ಹೊರಗೆ ಬಂದಿದ್ದಿಲ್ಲವೆಂದು ಈ ಮೊದಲೆ ಹೇಳಿದೆಯಷ್ಟೆ? ಮುಂದೆ ಬರಬರುತ್ತ ಒಬ್ಬರ ಹಿಂದೆ ಒಬ್ಬರಂತೆ ಸರದಾರರು ತಮ್ಮ ತಮ್ಮ ದಂಡಿನೊಡನೆ ಎಚ್ಚಮನಾಯಕನನ್ನು ಕೂಡಿಕೊಳ್ಳಹತ್ತಿದ್ದರಿಂದ ಜಗರಾಯನ ಚಿಂತೆಯು ಮತ್ತಿಷ್ಟು ಹೆಚ್ಚಿತು. ತನ್ನ ಸೈನ್ಯದಲ್ಲಿ ಉಂಟಾಗಿದ್ದ ಕೊರತೆಯನ್ನು ಹ್ಯಾಗೆ ತುಂಬಿಕೊಳ್ಳಬೇಕೆಂದು ಆತನು ಯೋಚಿಸಹತ್ತಿದನು. ವೈರಿಗಳು ಮತ್ತೆಯೇನಾದರೂ ತಂತ್ರವನ್ನು ಒಡ್ಡಿ ಸೆರೆಮನೆಯಲ್ಲಿದ್ದ ಅರಸನನ್ನು ಬಿಡಿಸಿಕೊಂಡು ಹೋದಾರೆಂಬ ಭಯದಿಂದ ಆತನು, ರಾಜಕುಟುಂಬವನ್ನು ಬೇರೊಂದು ಕಠಿಣ ಸ್ಥಳದಲ್ಲಿ ಇಟ್ಟು, ಆ ಕುಟುಂಬದವರ ಊಟಕ್ಕೆ ಅನ್ನ–ರೊಟ್ಟಿಗಳ ಹೊರತು ಬೇರೆ ಯಾವ ಪದಾರ್ಥಗಳನ್ನೂ ಕೊಡಲಾಗದೆಂದು ಸೇವಕರಿಗೆ ಅಪ್ಪಣೆಮಾಡಿದನು. ಇದರಿಂದ ರಾಜಕುಟುಂಬದವರ ಕಷ್ಟವು ಹೆಚ್ಚಿತು; ಅವರ ಆರೋಗ್ಯಕ್ಕೆ ಬಾಧೆ ಬರಹತ್ತಿತು;

ಕೂಸು–ಕುನ್ನಿಗಳ ಪಡಿಪಾಟಲಕ್ಕಂತೂ ನೆಲೆಯಿಲ್ಲದಾಯಿತು! ಇಷ್ಟು ಮಾಡಿದ್ದರೂ ಜಗರಾಯನ ಚಿತ್ತಕ್ಕೆ ಸ್ವಾಸ್ಥ್ಯವು ಉಂಟಾಗಿದ್ದಿಲ್ಲ. ಅರಮನೆಯಲ್ಲಿ ಆತನಿಗೆ ಹೊತ್ತು ಹೋಗದಾಯಿತು. ಮನೆ ಹಿಡಿದು ಕುಳಿತುಕೊಂಡದ್ದರಿಂದ ಆತನ ಪಕ್ಷದವರಲ್ಲಿ ಔದಾಸೀನ್ಯವು ಹೆಚ್ಚಹತ್ತಿತು. ಇದನ್ನು ತಿಳಿದು ಜಗರಾಯನು ಮತ್ತೆ ರಾಜಕಾರ್ಯದಲ್ಲಿ ಆಸ್ಥೆಯಿಂದ ಮನಸ್ಸು ಹಾಕಹತ್ತಿದನು. ತನ್ನ ಉತ್ಸಾಹವನ್ನು ಜನರಿಗೆ ತೋರಿಸುವುದಕ್ಕಾಗಿಯೇ ಆತನು ಮೇಲಿಂದ ಮೇಲೆ ಉಪವನಕ್ಕೆ ಬರುವ ಪ್ರಚಾರವನ್ನಿಟ್ಟನೆಂದು ಹೇಳಬಹುದು. ಈ ದಿನ ಆ ರಾಜಪ್ರತಿನಿಧಿಯು ವಿಹಾರ ಮಂಟಪದಲ್ಲಿ ಆಲೋಚಿಸುತ್ತ ಕುಳಿತಾಗ ತನ್ನ ಸೇನಾಪತಿಯಾದ ಇರುಗ ನಾಯಕನನ್ನು ಕುರಿತು—

ಜಗರಾಯ—ಮಿತ್ರಾ, ನಾನು ದುರಗಪ್ಪನಾಯಕನ ಯೋಗ್ಯತೆಯನ್ನು ಅರಿತಿದ್ದು ವಿಕಾರವಶನಾಗಿ ಹಿಂದುಮುಂದು ನೋಡದೆ ಆತನನ್ನು ಕಳಕೊಂಡೆನಲ್ಲ! ನಾಯಕರ ಹಿಂಡಿಗೆ ಹಿಂಡು ಹೋಗಿ ವೈರಿಗಳನ್ನು ಕೂಡಿಕೊಂಡಿದ್ದರೂ ಚಿಂತೆಯಿಲ್ಲ. ದುರಗಪ್ಪನಾಯಕ ನೊಬ್ಬನು ಇದ್ದರೆ, ಆ ಧೈರ್ಯವೇ ಬೇರೆಯಾಗಿತ್ತು. ಉಪಾಯವಿಲ್ಲ. ಉತ್ತಮ ಮುತ್ಸದ್ದಿಯೆಂದು ಹೊಗಳಿಸಿಕೊಳ್ಳುವ ಜಗರಾಯನು ಮಹಾಮೂರ್ಖರು ಮಾಡಬಹುದಾದ ಕೆಲಸವನ್ನು ಮಾಡಿದ ಬಳಿಕ, ಭವಿಷ್ಯವು ಹ್ಯಾಗಿದೆಯೋ ಯಾರಿಗೆ ಗೊತ್ತು!

ಇರುಗನಾಯಕ—ಅದಿರಲಿ, ಮಿಂಚಿಹೋದ ಮಾತಿಗೆ ಚಿಂತಿಸಿ ಫಲವೇನು? ಆದರೆ ದುರಗಪ್ಪನಾಯಕನ ಯೋಗ್ಯತೆಯ ಒಬ್ಬ ಸರದಾರನು ನಮ್ಮ ಪಕ್ಷಕ್ಕೆ ಬರುವ ಹಾಗಿದ್ದಾನೆ; ತಮ್ಮ ಮನಸ್ಸಿಗೆ ಬಂದರೆ, ಮುಂದಿನ ವಿಚಾರವು.

ಜಗರಾಯ—ಕನ್ನಡಿಗರಲ್ಲಂತು ಅಂಥ ಯೋಗ್ಯತೆಯ ಮನುಷ್ಯನಿಲ್ಲ; ನೀನು ಹೇಳುವ ಸರದಾರನು ಮುಸಲ್ಮಾನನೇನು?

ಇರುಗನಾಯಕ—ಹೌದು, ಮುಸಲ್ಮಾನನು. ಆತನ ಹೆಸರು ಚಾಂದಖಾನ. ಆತನೇನೋ ಎಚ್ಚಮನಾಯಕನ ಕಡೆಗೆ ಹೋಗಿದ್ದನಂತೆ; ಆದರೆ ಆ ನಾಯಕನು, ನೀನು ನಮ್ಮ ಕನ್ನಡ ಸರದಾರರ ಕೈಕೆಳಗೆ ನಡೆಯಬೇಕೆಂತಲೂ, ನಮ್ಮ ಅರಸನಿಗೆ ಸಾಷ್ಟಾಂಗವಾಗಿ ವಂದಿಸ ಬೇಕೆಂತಲೂ ಹೇಳಿದನಂತೆ! ಈ ಮಾತುಗಳು ಖಾನನಿಗೆ ಒಪ್ಪಿಗೆಯಾಗದ್ದರಿಂದ ಆತನು ತಮ್ಮ ಆಶ್ರಯವನ್ನು ಪಡೆಯಬೇಕೆನ್ನುತ್ತಾನೆ. ಸದ್ಯಕ್ಕೆ ಆತನು ಚಂದ್ರಗಿರಿಯಿಂದ ಮೂರು ಮೈಲಿನ ಮೇಲಿರುವ ಕೆರೆಯ ದಂಡೆಯ ಮೇಲೆ ತಳ ಊರಿರುವನು.

ಜಗರಾಯ—ಚಾಂದಖಾನನನ್ನು ನಾನು ಕೇಳಬಲ್ಲೆನು. ಆತನು ವಿಜಾಪುರದ ಬಾದಶಹನ ಸರದಾರನು. ಚಾಂದಖಾನನ ಯೋಗ್ಯತೆಯ ಸರದಾರರು ಈಗ ಮುಸಲ್ಮಾನ ರಲ್ಲಿಯೂ ಕಡಿಮೆಯಾಗಹತ್ತಿದ್ದಾರೆ; ಆದರೆ ಅಂಥ ಯೋಗ್ಯತೆಯ ಸರದಾರನನ್ನು ಬಾದಶಹನು ನಿರಾಕರಿಸಲಿಕ್ಕೆ ಕಾರಣವೇನು? ಇದರಲ್ಲಿ ಏನಾದರೂ ಮೋಸವಿದ್ದಂತೆ ತೋರುತ್ತದೆ.

ಇರುಗನಾಯಕ—ಮೋಸವೇನು ಇದ್ದಂತೆ ತೋರುವುದಿಲ್ಲ. ಖಾನನು ಬಾದಶಹನ ವಿರುದ್ಧವಾಗಿ ಈ ಮೊದಲೆ ಎಚ್ಚಮನಾಯಕನಿಗೆ ಎರಡು ಸಾರೆ ಸಹಾಯ ಮಾಡಿದ್ದರಿಂದ

ಬಾದಶಹನು ಸಿಟ್ಟಾಗಿ, ಖಾನನನ್ನು ಹದ್ದುಪಾರು ಮಾಡಿರುವನಂತೆ. ಈ ಮಾತನ್ನು ನಾನು ಖಾನನ ಬಾಯಿಂದಲೇ ಕೇಳಿದೆನು.

ಜಗರಾಯ—ನೀನು ಖಾನನನ್ನು ಕಂಡಿದ್ದೆಯೋ? ಆತನು ಅಭಿಮಾನಿಯೂ, ಶೂರನೂ, ಸತ್ಯವಾದಿಯೂ ಇರುವನೆಂದು ನಾನು ಕೇಳಿದ್ದೇನೆ. ಆತನು ಸುಳ್ಳುಹೇಳುವ ಸಂಭವವಿಲ್ಲ. ಯಾರ ಸಹಾಯದಿಂದಲೇ ಆಗಲಿ, ನಮ್ಮ ಕಾರ್ಯವಾದರೆ ತೀರಿತು. ಕಾರ್ಯವಾದನಂತರ ಖಾನನಿಗೆ ಅಪ್ಪಣೆ ಕೊಡಲಿಕ್ಕೆ ಬರುವುದಿಲ್ಲವೇನು? ಒಳ್ಳೆಯದು, ನಿನ್ನ ಪರಿಚಯವಿದ್ದರೆ, ನಾಳಿನ ದರ್ಬಾರಕ್ಕೆ ಬರಬೇಕೆಂದು ಆತನಿಗೆ ತಿಳಿಸಿಬಿಡು. ವಿಚಾರಾಂತದಲ್ಲಿ ಮಾಡತಕ್ಕದ್ದನ್ನು ಮಾಡೋಣವಂತೆ.

ಇರುಗನಾಯಕ—ನಾನು ನಿನ್ನೆ ಬೇಟೆಯಾಡಿ ತಿರುಗಿ ಬರುವಾಗ ಕೆರೆಯ ದಂಡೆಯಮೇಲೆ ಖಾನನ ಗುರುತಾಯಿತು. ಆತನಿಗೂ ಆಶ್ರಯದ ಅವಶ್ಯಕತೆಯಿದ್ದಂತೆ ತೋರುತ್ತದೆ. ಖಾನನು ಸ್ವಾತಂತ್ರ್ಯ ಪ್ರೀಯನಿರುತ್ತಾನೆಂಬದು ಆತನ ಮಾತಿನ ಮೇಲಿಂದ ಗೊತ್ತಾಯಿತು. ಸ್ವಾತಂತ್ರ್ಯ ವೃತ್ತಿಗೂ, ಸೇವಾವೃತ್ತಿಗೂ ಹ್ಯಾಗೆ ಕೂಡುತ್ತದೋ ನೋಡಬೇಕು.

ಈಮೇರೆಗೆ ಸಂಭಾಷಣವಾಗುತ್ತಿರಲು, ರಾತ್ರಿಯು ಬಹಳವಾದದ್ದರಿಂದ ಜಗರಾಯನು ಎದ್ದು ಇರುಗನಾಯಕನೊಡನೆ ಪಟ್ಟಣವನ್ನು ಪ್ರವೇಶಿಸಿದನು. ಇರುಗನಾಯಕನು ಚಾಂದಖಾನನಿಗೆ, ನಾಳೆ ಒಂಬತ್ತು ತಾಸಿಗೆ ದರ್ಬಾರಕ್ಕೆ ಬರಬೇಕೆಂದು ಆಗಲೇ ಹೇಳಿ ಕಳಿಸಿದನು. ಮರುದಿವಸ ಜಗರಾಯನ ದರ್ಬಾರವು ನೆರೆಯಿತು. ಎಚ್ಚಮನಾಯಕನ ಪಕ್ಷವನ್ನು ನೋಡಿ ಬಂದಿದ್ದ ಖಾನನಿಗೆ ತನ್ನ ವೈಭವವನ್ನೂ, ಬಲವನ್ನೂ ತೋರಿಸಬೇಕೆದು ಜಗರಾಯನು ತನ್ನ ಪಕ್ಷದ ಎಲ್ಲ ಸರದಾರರನ್ನು ದರ್ಬಾರಕ್ಕೆ ಕರೆಸಿದ್ದನು. ರಾಯರ ಸಿಂಹಾಸನದ ಮೇಲೆ ಬ್ರಾಹ್ಮಣಪುತ್ರನಾದ ಚಿಕ್ಕರಾಯನು ಕುಳಿತಿದ್ದನು. ವಿಜಯನಗರದ ರಾಯರ ಅಮೌಲ್ಯವಾದ ವಸ್ತ್ರಾಭರಣಗಳೂ, ಅತುಲ ಸಂಪತ್ತೂ ಚಂದ್ರಗಿರಿಯ ಭಾಂಡಾರದಲ್ಲಿ ಇದ್ದೇ ಇದ್ದವು. ಉತ್ತಮೋತ್ತಮ ವಸ್ತ್ರಾಭರಣಗಳಿಂದ ಅಲಂಕೃತನಾಗಿದ್ದ ಅರಸನು ಪರಮ ವೈಭವಶಾಲಿಯಾಗಿ ಒಪ್ಪುತ್ತಿದ್ದನು. ವೈಭವಕ್ಕೆ ಮೆಚ್ಚಿದ ಜಗರಾಯನೂ ಮುತ್ತುರತ್ನಗಳ ಆಭರಣಗಳಿಂದ ಝಗಝಗಿಸುತ್ತಿದ್ದನು. ಅಲಂಕೃತವಾದ ಸರದಾರ ಮಂಡಲದಿಂದ ದರ್ಬಾರಕ್ಕೆ ವಿಚಿತ್ರವಾದ ಶೋಭೆಯು ಬಂದಿತ್ತು. ಒಬ್ಬ ಸಾಮಾನ್ಯ ಸರದಾರನ ಸಲುವಾಗಿ ಇಷ್ಟು ಅಟ್ಟಹಾಸವು ಯೋಗ್ಯವಲ್ಲೆಂದು ಜಗರಾಯನಿಗೆ ಹೊಳೆಯುತ್ತಿರಲು, ಚಾಂದಖಾನನು ತೀರ ಸಾಧಾರಣವಾದ ಉಡುಪು-ತೊಡುಪುಗಳಿಂದ ದರ್ಬಾರವನ್ನು ಪ್ರವೇಶಿಸಿದನು. ಖಾನನ ತೇಜಸ್ಸನ್ನು ನೋಡಿ ನಮ್ಮ ಸೋಗಿನ ಕನ್ನಡವೀರರು ಬೆರಗಾದರು. ಸ್ವಂತಶ್ರಮದಿಂದ ಪ್ರತಿಷ್ಠೆಯನ್ನು ಸಂಪಾದಿಸಿದ ಮನುಷ್ಯನು, ಆ ಪ್ರತಿಷ್ಠೆಯನ್ನು ಕಾಯ್ದುಕೊಳ್ಳುವ ಚಿಂತೆಯಲ್ಲಿ ಕೊರಗಬೇಕಾಗುವುದರಿಂದ, ವಸ್ತ್ರಾಭರಣಗಳ ಆಡಂಬರದ ಕಡೆಗೆ ಆತನ ಮನಸ್ಸು ಸಹಸಾ ಹರಿಯುವುದಿಲ್ಲ. ಪ್ರತಿಷ್ಠೆ ಸಂಪಾದನದ ಮುಖ್ಯಕಾರಣವು ಐಶ್ವರ್ಯವಲ್ಲ, ಸತ್ವವು ಸತ್ವಹೀನರು ತಮ್ಮಲ್ಲಿಯ ಕೊರತೆಯನ್ನು ಮುಚ್ಚಿಕೊಳ್ಳುವುದಕ್ಕಾಗಿ ತಮ್ಮ ಐಶ್ವರ್ಯದ ಆಡಂಬರವನ್ನು ತೋರಿಸಬೇಕಾಗುವುದು.

ವಿಜಯನಗರದ ಪ್ರತಾಪಶಾಲಿಗಳಾದ ರಾಯರ ಪುಣ್ಯದಿಂದ, ಹಿಂದಕ್ಕೆ ಕರ್ನಾಟಕದಲ್ಲಿ ಹಲವು ಜನ ಸರದಾರರು ಸ್ವಂತಶ್ರಮದಿಂದ ಉದಯಕ್ಕೆ ಬಂದಿದ್ದರು; ಆದರೆ ಅವರ ಮಕ್ಕಳು–ಮೊಮ್ಮಕ್ಕಳು–ಮರಿಮಕ್ಕಳಿಗೆ ಹಿರಿಯರು ಗಳಿಸಿಟ್ಟ ಸಂಸ್ಥಾನಗಳೂ, ಸಂಪತ್ತೂ ಅನಾಯಾಸವಾಗಿ ಕೈಸೇರಿದ್ದರಿಂದ ಅವರಲ್ಲಿ ಬಹುಜನರು ಕೈಲಾಗದವರಾಗಿ ಸಂಪತ್ತಿನ ಡೌಲಿನಿಂದ ಮೆರೆಯಹತ್ತಿದ್ದು ಆಶ್ಚರ್ಯವಲ್ಲ. ಚಾಂದಖಾನನು ವಿಜಯನಗರದ ರಾಯರ ಸಂಪತ್ತನ್ನು ನೋಡಿ, ಆ ವಂಶದೊಳಗಿನ ಕೃಷ್ಣರಾಜನೇ ಮೊದಲಾದ ಪ್ರತಾಪಿಗಳನ್ನು ಸ್ಮರಿಸಿ, ಸದ್ಗದಿತಾಂತಃಕರಣನಾದನು! ಖಾನನು ಗುಣಲುಬ್ಧನೆಂಬದನ್ನು ವಾಚಕರು ಬಲ್ಲರಷ್ಟೇ? ಆ ಪ್ರತಾಪಿಯು ಕವಲೆತ್ತಿನಂತೆ ಶೃಂಗರಿಸಲ್ಪಟ್ಟಿದ್ದ ಅರಸನನ್ನೂ, ಆಭರಣಗಳ ಸಡಗರದಿಂದ ಮೆರೆಯುವ ಸರದಾರ ಮಂಡಲವನ್ನೂ ಗಣನೆಗೆ ತಾರದೆ, ಕೀರ್ತಿಶೇಷರಾದ ಪೂರ್ವದ ರಾಯರ ಸಿಂಹಾಸನಕ್ಕೆ ವಿನಯದಿಂದ ವಂದಿಸಿ, ಕಾಣಿಕೆಯನ್ನಿತ್ತು ತನ್ನ ಸಲುವಾಗಿ ಸಿದ್ಧಮಾಡಿಟ್ಟ ಆಸನದಲ್ಲಿ ಜಗರಾಯನ ಸೂಚನೆಯಂತೆ ಕುಳಿತುಕೊಂಡನು. ಖಾನನ ಗಾಂಭೀರ್ಯವನ್ನೂ, ಆತನ ಸರಳ ವೃತ್ತಿಯನ್ನೂ ನೋಡಿ ಜಗರಾಯನು ನಮ್ರನಾಗಿದ್ದನು. ಆತನು ಖಾನನಿಗೆ—ವೀರಶ್ರೇಷ್ಠರೇ, ನಿಮ್ಮ ಆಗಮನದಿಂದ ದೊರೆಗಳಿಗೂ, ನಮ್ಮೆಲ್ಲರಿಗೂ ಬಹಳ ಸಂತೋಷವಾಗಿದೆ. ತಮ್ಮ ವೃತ್ತಾಂತವನ್ನು ನಮ್ಮ ಸೇನಾಪತಿಗಳಾದ ಇರುಗನಾಯಕರು ಹೇಳಿರುವುದರಿಂದ, ಅದನ್ನು ಮತ್ತೆ ತಾವು ಹೇಳುವ ಕಾರಣವಿಲ್ಲ. ರಾಜದ್ರೋಹಿಯಾದ ಎಚ್ಚಮ ನಾಯಕನು ತಮ್ಮಂಥ ವೀರರನ್ನು ನಿರಾಕರಿಸಿದ್ದು ನಮ್ಮ ಸುದೈವವೆಂದು ತಿಳಿಯುತ್ತೇನೆ. ಹಿಂದುಗಳು, ಮುಸಲ್ಮಾನರು ಎಂಬ ಭೇದವೆಣಿಸದೆ, ತಮ್ಮಂಥ ಗುಣಿಜರನ್ನು ಸಂಗ್ರಹಿಸುವುದು, ವಿಜಯನಗರದ ರಾಯರ ಪರಂಪರಾಗತ ಸಾಂಪ್ರದಾಯವಾಗಿರುತ್ತದೆ. ವಿಜಯನಗರದ ರಾಯರಿಗೂ ವಿಜಾಪುರದ ಬಾದಶಹರಿಗೂ ಅನರ್ಥಕಾರಕಗಳಾದ ಹಲವು ಯುದ್ಧದ ಪ್ರಸಂಗಗಳು ಒದಗಿರುವಂತೆ ಹಲವು ಸ್ನೇಹದ ಪ್ರಸಂಗಗಳೂ ಒದಗಿರುವವಲ್ಲದೆ, ರಾಯರು ಬಾದಶಹರ ಸಂಗಡ ಶರೀರ ಸಂಬಂಧವನ್ನೂ ಮಾಡಿರುತ್ತಾರೆ. ಆದ್ದರಿಂದ ವಿಜಾಪುರದ ದರ್ಬಾರದವರು ನಮಗೆ ಹೊರಗಿನವರಲ್ಲ! ಸದ್ಯಕ್ಕೆ ರಾಯರ ರಾಜದ್ರೋಹಿಗಳ ಶಾಸನ ಮಾಡಬೇಕಾಗಿರುವುದರಿಂದ ಅವರಿಗೆ ನಿಮ್ಮ ನೆರವು ಬೇಕಾಗಿರುತ್ತದೆ. ನೀವು ದೊಡ್ಡ ಮನಸ್ಸಿನಿಂದ ರಾಯರ ಚಾಕರಿಗೆ ನಿಂತುಕೊಂಡು ತ್ರಿಕರಣಪೂರ್ವಕವಾಗಿ ರಾಯರಿಗೆ ಸಹಾಯ ಮಾಡಬೇಕೆಂದು ಹೇಳಿಕೊಳ್ಳುವೆವು. ರಾಜದ್ರೋಹಿಗಳ ಶಾಸನವಾಗಿ ದೇಶದಲ್ಲಿ ಶಾಂತತೆಯುಂಟಾದರೆ, ನಿಮ್ಮ ಆಗಮನದಿಂದ ರಾಯರಿಗೆ ದೊಡ್ಡ ಸಹಾಯವಾದಂತಾಗುವುದು.

ಜಗರಾಯನ ಈ ಮಾತುಗಳನ್ನು ಕೇಳಿ, ಚಾಂದಖಾನನು ಎದ್ದುನಿಂತು ಪ್ರತ್ಯುತ್ತರವಾಗಿ ನುಡಿದನೇನಂದರೆ—ನನ್ನ ಪ್ರಿಯಮಿತ್ರರಾದ ಜಗರಾಯರು, ರಾಯರ ಎದುರಿಗೆ, ವಿಜಾಪುರದ ಬಾದಶಹರಿಗಿದ್ದ ರಾಯರ ಆಪ್ತತ್ವವನ್ನು ನೆನಪು ಮಾಡಿಕೊಟ್ಟು, ಪರ್ಯಾಯದಿಂದ ನನ್ನನ್ನು ಗೌರವಿಸಿದ್ದಕ್ಕಾಗಿ ನನಗೆ ಬಹಳ ಸಂತೋಷವಾಗಿದೆ. ರಾಯರ ಬಹುಮಾನದ ಚಾಕರಿಯನ್ನು ಮಾಡಲಿಕ್ಕೆ ನಾನು ಸಂತೋಷದಿಂದ ಒಪ್ಪಿಕೊಳ್ಳುತ್ತೇನೆ; ಆದರೆ ನನ್ನ ಕೆಲವು ನಿಯಮಗಳನ್ನು

ರಾಯರು ನಡೆಸಿಕೊಡಬೇಕೆಂದು ಹೇಳಿಕೊಳ್ಳುವೆನು. ಅದಕ್ಕೆ ರಾಯರ ಒಪ್ಪಿಗೆಯಿಲ್ಲದಿದ್ದರೆ, ರಾಯರ ಚಾಕರಿಯನ್ನು ಮಾಡಲಾಗುವುದಿಲ್ಲ. ನನ್ನ ಆ ನಿಯಮಗಳು ಯಾವವೆಂಬದನ್ನು ಈಗ ರಾಯರ ಸನ್ನಿಧಿಯಲ್ಲಿ ಅರಿಕೆಮಾಡಿಕೊಳ್ಳುತ್ತೇನೆ. ವಿಜಾಪುರದ ಬಾದಶಹರವರು ನನ್ನ ಸ್ವಾಮಿಯಾದ್ದರಿಂದ, ಅವರ ವಿರುದ್ಧವಾಗಿ ಶಸ್ತ್ರವನ್ನೆತ್ತಲಿಕ್ಕೆ ರಾಯರು ನನ್ನನ್ನು ಆಜ್ಞಾಪಿಸಬಾರದು. ಆ ಬಾದಶಹರ ಹೊರತು ಬೇಕಾದವರ ಮೇಲೆ ಶಸ್ತ್ರಹಿಡಿಯಲಿಕ್ಕೆ ನಾನು ಹಿಂದೆಮುಂದೆ ನೋಡಲಿಕ್ಕಿಲ್ಲ. ಆದರೆ ನನಗೆ ಒಪ್ಪಿಸಿದ ಚಾಕರಿಯ ಬಗ್ಗೆ ನನ್ನನ್ನೇ ಜವಾಬುದಾರನೆಂದು ತಿಳಿಯಬೇಕಲ್ಲದೆ, ನನ್ನ ಚಾಕರಿಯ ವಿಷಯವಾಗಿ ಮತ್ತೊಬ್ಬನ ಅಧಿಕಾರವು ನಡೆಯಲಾಗದು. ನಾನು ಯುದ್ಧದಲ್ಲಿ ವೈರಿಗಳನ್ನು ಸೋಲಿಸಿ ಸೆರೆಹಿಡಕೊಂಡು ಬಂದರೆ, ಅವರ ಯೋಗಕ್ಷೇಮವೂ, ಅವರ ಶಿಕ್ಷೆಯ ನಿರ್ಣಯವೂ ನನ್ನ ಒಪ್ಪಿಗೆಯಿಂದಲೇ ಆಗಬೇಕು; ಮತ್ತು ವೈರಿಗಳ ಸುಲಿಗೆಯ ವ್ಯವಸ್ಥೆಗಾದರೂ ನನ್ನ ಸಮ್ಮತಿಯನ್ನು ತಕ್ಕೊಳ್ಳಬೇಕು. ನಮ್ಮ ಧರ್ಮದಲ್ಲಿ ಒಬ್ಬ ದೇವರಿಗಲ್ಲದೆ ಅನ್ಯರಿಗೆ ಸಾಷ್ಟಾಂಗ ನಮಸ್ಕಾರವಿಲ್ಲ; ಆದ್ದರಿಂದ ರಾಯರ ಎದುರಿಗೆ ಸಾಷ್ಟಾಂಗ ಹಾಕುವ ಬಗ್ಗೆ ಎಲ್ಲರಂತೆ ನನಗೆ ಅಪ್ಪಣೆಯಾಗಬಾರದು. ಈ ಕರಾರುಗಳನ್ನು ನಡಿಸಲಿಕ್ಕೆ ಒಪ್ಪಿಗೆಯಿಲ್ಲದ ದಿವಸ, ಹಾಗೆ ನನಗೆ ತಿಳಿಸಿದರೆ, ಅಂದಿನವರೆಗೆ ಮಾಡಿದ ಚಾಕರಿಯ ಪ್ರತಿಫಲದ ವ್ಯವಸ್ಥೆಯನ್ನು ಮಾಡಿಕೊಂಡು ಅಂದೇ ನಾನು ಸಂತೋಷ ದಿಂದ ಚಾಕರಿಯನ್ನು ಬಿಡುವೆನು; ಹಾಗೆ ನನಗೆ ತಿಳಿಸದೆ ಪ್ರಸಂಗದಲ್ಲಿ ನನ್ನ ನಿಯಮಗಳನ್ನು ಯಾರಾದರೂ ಮುರಿದರೆ, ನನ್ನ ಅಪಮಾನ ಮಾಡಿದರೆಂದು ತಿಳಿದು, ಮರ್ಯಾದೆಯನ್ನು ಕಾಯ್ದುಕೊಳ್ಳುವುದಕ್ಕಾಗಿ ನನ್ನ ಮನಸ್ಸಿಗೆ ಸರಿದೋರಿದಂತೆ ನಡಕೊಳ್ಳವೆನು! ಈ ಕರಾರುಗಳಿಗೆ ಎಚ್ಚಮನಾಯಕನು ಒಪ್ಪಿಕೊಳ್ಳದ್ದರಿಂದ ನಿಮ್ಮ ಕಡೆಗೆ ಬಂದಿದ್ದೇನೆ; ನೀವು ಒಪ್ಪಿಕೊಳ್ಳದಿದ್ದರೆ ಮತ್ತೊಂದು ಕಡೆಗೆ ಹೋಗುವೆನು. ಈ ಕರಾರುಗಳಿಗೆ ಒಪ್ಪಿ, ನನ್ನನ್ನು ಚಾಕರಿಗೆ ಇಟ್ಟುಕೊಂಡ ಪಕ್ಷದಲ್ಲಿ ಪ್ರತ್ಯಕ್ಷ ಎಚ್ಚಮನಾಯಕನನ್ನು ಹಿಡಕೊಂಡು ಬರಲಿಕ್ಕೆ ಅಪ್ಪಣೆಯಾದರೆ, ನಿಂತಕಾಲಲ್ಲಿ ಆ ಕೆಲಸವನ್ನು ಕೈಗೊಂಡು ಸಾಧಿಸುವೆನು. ಇದರ ಮೇಲೆ ಪ್ರಭುಗಳ ಚಿತ್ತ ಎಂದು ನುಡಿದು ಖಾನನು ಕುಳಿತುಕೊಂಡನು.

ಚಾಂದಖಾನನ ಈ ಸ್ಪಷ್ಟ ಮಾತುಗಳನ್ನೂ, ಅವನ ಸ್ವಾಭಿಮಾನಪೂರ್ಣವಾದ ಕರಾರು ಗಳನ್ನೂ ಕೇಳಿ, ನೆರೆದ ಸರದಾರರು ಬೆದರಿಬಿದ್ದರು ಪ್ರತ್ಯಕ್ಷ ಜಗರಾಯನು ಖಾನನ ಒಗರಿಗೆ ಮನಸ್ಸಿನಲ್ಲಿ ತಲೆದೂಗಿದನು. ಆಡಿದ ಮಾತುಗಳನ್ನು ತಪ್ಪಲಿಕ್ಕಿಲ್ಲೆಂಬ ಭಾವವೂ, ಹಿಡಿದ ಕೆಲಸವನ್ನು ಮಾಡಿಯೇ ತೀರೇನೆಂಬ ನಂಬಿಗೆಯೂ ಆತನ ಮಾತುಗಳೊಳಗಿನ ಪ್ರತಿಯೊಂದು ವಾಕ್ಯದಿಂದ, ಪ್ರತಿ ಒಂದು ಶಬ್ದದಿಂದ, ಪ್ರತಿ ಒಂದು ಅಕ್ಷರದಿಂದ ವ್ಯಕ್ತವಾಗುತ್ತಿತ್ತು! ಇಂಥ ಸ್ವಾಭಿಮಾನದ ಸ್ವಾತಂತ್ರ್ಯಪ್ರಿಯನಾದ ಸರದಾರನನ್ನು ಚಾಕರಿಗೆ ಇಟ್ಟುಕೊಳ್ಳಬೇಕೋ, ಇಟ್ಟುಕೊಳ್ಳಬಾರದೋ ಎಂಬ ಬಗ್ಗೆ ಜಗರಾಯನಿಗೆ ದಿಗಿಲುಬಿದ್ದಿತು. ದರ್ಬಾರದೊಳಗಿನ ಕೆಲವು ಸರದಾರರು, ಇಂಥ ಎಟ್ಟಿ ಮನುಷ್ಯನನ್ನು ಚಾಕರಿಗೆ ಇಟ್ಟುಕೊಳ್ಳುವುದು ನೆಟ್ಟಗಲ್ಲೆಂದು ಮನಸ್ಸಿನಲ್ಲಿ ಅಂದುಕೊಂಡರು. ಕೆಲವರು, ಇಂಥ ಗಟ್ಟಿಗರಿಂದಲೇ ಮಹತ್ವದ ಕಾರ್ಯಗಳು

ಆಗುತ್ತವಲ್ಲದೆ, ನಾಯಿಯ ಹಾಗೆ ಬಾಲಾ ಗುಂಡಾಡಿಸುವುದರಿಂದ ಆಗುವುದಿಲ್ಲೆಂದು ನೆನಿಸಿದರು. ಕೆಲವರು, ಮುಸಲ್ಮಾನನಾದ್ದರಿಂದ ಚಾಕರಿಗೆ ಇಟ್ಟುಕೊಳ್ಳುವುದು ಯೋಗ್ಯವಲ್ಲೆಂತಲೂ, ಕೆಲವರು, ಮುಸಲ್ಮಾನರನ್ನು ಚಾಕರಿಗೆ ಇಟ್ಟುಕೊಳ್ಳುವುದರಲ್ಲಿಯೇ ಭೂಷಣವಿರುತ್ತದೆಂತಲೂ ಅಭಿಪ್ರಾಯಪಟ್ಟರು. ಹೀಗೆ ಬೇರೆ ಬೇರೆ ಜನರು ಬೇರೆ ಬೇರೆ ವಿಧವಾಗಿ ಕಲ್ಪಿಸುತ್ತಿರಲು, ಜಗರಾಯನು ಖಾನನಿಗೆ—ಏನೂ ಚಿಂತೆಯಿಲ್ಲ, ನಾಳೆ ವಿಚಾರಮಾಡಿ ತಮಗೆ ತಿಳಿಸತಕ್ಕದ್ದನ್ನು ತಿಳಿಸುತ್ತೇವೆ, ಎಂದು ಹೇಳಿ ಮರ್ಯಾದೆಗೆ ತಕ್ಕ ಉಡುಗೊರೆಗಳನ್ನು ಕೊಟ್ಟು ಖಾನನನ್ನು ಸನ್ಮಾನಿಸಿದನು. ಆಗ ಚಾಂದಖಾನನು ಅರಸನನ್ನು ವಂದಿಸಿ, ತನ್ನ ಬಿಡಾರಕ್ಕೆ ಹೊರಟು ಹೋದನು. ಹೊತ್ತು ಆದದ್ದರಿಂದ ದರ್ಬಾರದ ಕಾರ್ಯವು ನಿಲ್ಲಿಸಲ್ಪಟ್ಟು, ಸರದಾರರು ತಮ್ಮ ತಮ್ಮ ಸ್ಥಳಗಳಿಗೆ ಹೋದರು. ಜಗರಾಯನು ಇರುಗನಾಯಕ ನೊಡನೆ ಆಲೋಚಿಸುತ್ತ ತನ್ನ ಮನೆಗೆ ನಡೆದನು. ಮನೆಗೆ ಹೋದಬಳಿಕ ಆ ರಾಜಪ್ರತಿನಿಧಿಯೂ, ಸೇನಾಪತಿಯೂ ಬಗೆಬಗೆಯಾಗಿ ಆಲೋಚಿಸಿದರು. ಸೇನಾಪತಿಯ ಮನಸ್ಸಿನಲ್ಲಿ ಖಾನನನ್ನು ಚಾಕರಿಗೆ ಇಟ್ಟು ಕೊಳ್ಳುವದಿತ್ತು, ತನ್ನ ಇಚ್ಛೆಯಂತೆ ಆತನು ಜಗರಾಯನ ಮನಸ್ಸನ್ನು ಒಲಿಸಿ ಕೊಳ್ಳಲಿಕ್ಕೆ ಯತ್ನಿಸಿದನು. ಕಡೆಗೆ ಜಗರಾಯನು ಸೇನಾಪತಿಗೆ—ಇರುಗನಾಯಕಾ, ನಿಜವಾಗಿ ಕೇಳಿದರೆ, ಖಾನನನ್ನು ಚಾಕರಿಗೆ ಇಟ್ಟುಕೊಳ್ಳುವುದು ನಮ್ಮ ದೌರ್ಬಲ್ಯದ ಲಕ್ಷಣವಾದದ್ದರಿಂದ, ಅದಕ್ಕೆ ನನ್ನ ಮನಸ್ಸು ಒಡಂಬಡುವುದಿಲ್ಲ; ಆದರೆ ನೀನು ಹೇಳಿದಂತೆ ನಮ್ಮ ಪಕ್ಷದ ಸರದಾರರಲ್ಲಿ ಹೇಳಿಕೊಳ್ಳುವಂಥ ಗಟ್ಟಿಗರು ಇಲ್ಲದಿರುವುದರಿಂದ, ಮಹತ್ವದ ಕಾರ್ಯಗಳನ್ನು ಸಾಧಿಸಲಿಕ್ಕೆ ಖಾನನಂಥ ಸಾಹಸಿಯ ಅವಶ್ಯಕತೆಯು ಇರುತ್ತದೆ. ಕೆಲಸ ತೀರಿದ ಮೇಲೆ ಖಾನನಿಗೆ ಅಪ್ಪಣೆ ಕೊಟ್ಟರಾಯಿತು; ಸದ್ಯಕ್ಕೆ ರಾಜಪುತ್ರನನ್ನೂ, ಕುಮುದಿನಿಯನ್ನೂ ಸೆರೆಹಿಡಕೊಂಡು ಬರುವ ಮಹತ್ಕಾರ್ಯವನ್ನೇ ಖಾನನಿಗೆ ಒಪ್ಪಿಸೋಣ. ಎಚ್ಚಮನಾಯಕನಿಗೆ ರಾಜಪುತ್ರನ ಬಲವು ತಪ್ಪಿದರೆ, ಆತನು ಕ್ಷೀಣಬಲನಾಗುವುದು ನಿಶ್ಚಯವು. ನಾಯಕನ ಪಂಚಪ್ರಾಣದಂತೆ ಇದ್ದ, ಉಪಾಯ ಕೋವಿದಳಾದ ಕುಮುದಿನಿಯನ್ನು ಸೆರೆಹಿಡಕೊಂಡು ಬರುವುದರಿಂದ ಆತನ ಕೈಮುರಿದಂತಾಗುವುದು. ಆಮೇಲೆ ಆತನನ್ನು ಸಹಜವಾಗಿ ಜಯಿಸಿ, ನಮಗೆ ಅಂಕಿತನನ್ನಾಗಿ ಮಾಡಿಕೊಳ್ಳಬಹುದು, ಇಲ್ಲವೆ ಪ್ರತಿಬಂಧದಲ್ಲಿಡಬಹುದು. ನಾಳೆಗೆ ನೀನೇ ಹೋಗಿ, ನಮ್ಮಲ್ಲಿ ಚಾಕರಿಗೆ ಇರಬೇಕೆಂದು ನಿಮ್ಮ ಖಾನನಿಗೆ ಹೇಳಿಬರಬೇಕು.

ಇರುಗನಾಯಕನು ಮರುದಿನ ಚಾಂದಖಾನನಲ್ಲಿಗೆ ಹೋಗಿ ಆತನಿಗೆ ಜಗರಾಯನ ಮನೋದಯವನ್ನು ತಿಳಿಸಿದನು. ಇದರಿಂದ ಖಾನನಿಗೆ ಬಹಳ ಸಂತೋಷವಾಯಿತು. ತನ್ನ ಪಾಳಯವು ಊರ ಹೊರಗೆ ಇರಬೇಕೆಂತಲೂ, ತನ್ನಲ್ಲಿ ಗೋಷೆಯಿರುವುದರಿಂದ ತನ್ನ ಮನೆಯ ಸಮೀಪಕ್ಕೆ ಕೂಡ ಯಾರೂ ಹಾಯಲಾಗದೆಂತಲೂ ಹೇಳಿದನು. ಖಾನನ ಇಚ್ಛೆಯಂತೆ ಎಲ್ಲ ವ್ಯವಸ್ಥೆಯು ಮಾಡಲ್ಪಟ್ಟಿತು. ಕೋಟೆಯೊಳಗೆ ಅರಸನನ್ನು ಸೆರೆಯಲ್ಲಿಟ್ಟಿರುವ ಸ್ಥಳವು ತನಗೆ ಸಮೀಪವಾಗುವಂತೆ ಖಾನನು ತನ್ನ ಬಿಡಾರವನ್ನು ಊರಿದನು. ರಾಜಪುತ್ರನನ್ನೂ, ಕುಮುದಿನಿಯನ್ನೂ ಸೆರೆಹಿಡಕೊಂಡು ಬರುವ ಕಪಟೋಪಾಯವನ್ನು ಖಾನನು ಆಲೋಚಿಸ

ತೊಡಗಿದನು. ಇದಲ್ಲದೆ, ಆತನು ತನ್ನ ದಂಡಿನೊಳಗಿನ ಚತುರರಾದ ನಂಬಿಗೆಯ ಇಪ್ಪತ್ತೈದು ಜನರನ್ನು ಆರಿಸಿ, ತಾನಿರುವ ಬಿಡಾರದಿಂದ ಅರಸನಿರುವ ಸೆರೆಮನೆಯವರೆಗೆ ನೆಲದೊಳಗಿಂದ ದಾರಿಯನ್ನು ಮಾಡಬೇಕೆಂದು ಅವರಿಗೆ ಹೇಳಿದನು. ಆದರಂತೆ ಅವರು ಬಹು ಗುಪ್ತವಾಗಿ ಕೆಲಸವನ್ನು ಆರಂಭಿಸಿದರು. ಗೋಷೆಯ ನೆವದಿಂದ ತಾನಿರುವ ಡೇರೆಯ ಸುತ್ತಲೂ ಕಾವಲು ಇಟ್ಟಿದ್ದರಿಂದ, ಒಳಗೆ ಹೋಗಲಿಕ್ಕೆ ಯಾರಿಗೂ ಆಸ್ಪದವಿಲ್ಲದಾಯಿತು. ಇಲ್ಲಿ ಪ್ರತಿದಿನ ನಡೆದ ಸಂಗತಿಗಳೆಲ್ಲ ಎಚ್ಚಮನಾಯಕನ ಕಿವಿಗೆ ಮುಟ್ಟುತ್ತಲೇ ಇದ್ದವು. ಒಂದು ದಿನ ರಾತ್ರಿ ಚಾಂದಖಾನನು ತನ್ನ ೨೫೦ ಜನ ರಾವುತರೊಡನೆ ಎಚ್ಚಮನಾಯಕನಿರುವ ದುರ್ಗಕ್ಕೆ ಹೋದನು. ದುರ್ಗದ ಹೊರಗೆ ರಾವುತರು ನಿಂತುಕೊಳ್ಳಲು, ಖಾನನೊಬ್ಬನೇ ದುರ್ಗವನ್ನು ಪ್ರವೇಶಿಸಿ ಎಚ್ಚಮನಾಯಕನನ್ನು ಕಂಡನು. ರಾಜಪುತ್ರನನ್ನೂ, ಕುಮುದಿನಿಯನ್ನೂ ಸೆರೆ ಹಿಡಿಯುವ ಸಂಬಂಧದಿಂದ ಅವರಲ್ಲಿ ಹಲವು ಆಲೋಚನೆಗಳು ನಡೆದವು; ಆದರೆ ಒಂದೂ ಬಗೆಹರಿಯಲಿಲ್ಲ. ಉಭಯರ ಸೈನ್ಯದ ಪ್ರಾಣಹಾನಿಯಾಗದೆ, ಜಗರಾಯನಿಗೆ ಅಶಕ್ಯವಾಗಿ ತೋರದೆ, ಕಾರ್ಯವು ಸಾಧಿಸುವಂಥ ಹಂಚಿಕೆಯು ಅವರಿಗೆ ಬೇಕಾಗಿತ್ತು. ಅವರು ಕುಮುದಿನಿಯನ್ನು ಕರೆಸಿಕೊಂಡು ತಮ್ಮ ವಿಚಾರವನ್ನು ಆಕೆಗೆ ತಿಳಿಸಿದರು. ಆಕೆಯು ಸ್ವಲ್ಪಹೊತ್ತು ಆಲೋಚಿಸಿ ಚಾಂದಖಾನನನ್ನು ಕುರಿತು—ಅಣ್ಣಾ ನನ್ನನ್ನೂ, ರಾಜಪುತ್ರರನ್ನೂ ಜಗರಾಯನಿಗೆ ಸಂಶಯಬಾರದಂತೆ ಸೆರೆಹಿಡಿಯುವ ಯುಕ್ತಿಯನ್ನು ಹೇಳುವುದೇನು ಅಷ್ಟು ಕಠಿಣವಲ್ಲ; ಆದರೆ ನಮ್ಮನ್ನು ಸೆರೆಹಿಡಕೊಂಡು ಜಗರಾಯನಲ್ಲಿಗೆ ಒಯ್ದಬಳಿಕ ತಿರುಗಿ ನಮ್ಮನ್ನು ಈ ದುರ್ಗಕ್ಕೆ ಸುರಕ್ಷಿತ ಮುಟ್ಟಿಸುವುದು ಪ್ರಯಾಸದ ಕೆಲಸವಾಗಿರುತ್ತದೆ. ನಾನೂ, ರಾಜಪುತ್ರರೂ ಬೇಟೆ ಯಾಡುವುದಕ್ಕಾಗಿ ಸೈನ್ಯದೊಡನೆ ಅರಣ್ಯಕ್ಕೆ ಹೋಗುತ್ತಿರುವೆವಷ್ಟೇ? ಆಗ ನಾನು ಗೊತ್ತುಮಾಡಿದ ದಿವಸ, ಗೊತ್ತುಮಾಡಿದ ಸ್ಥಳದಲ್ಲಿ ನಿನ್ನ ಯಾವತ್ತು ರಾವುತರೊಡನೆ ಕಾದುಕೊಂಡಿರು. ನಿನ್ನ ರಾವುತರಲ್ಲದೆ ಜಗರಾಯನ ಕಡೆಯ ಕೆಲವು ರಾವುತರೂ ನಿನ್ನ ಸಂಗಡ ಬಂದಿರಲಿ; ಯಾಕಂದರೆ, ನೀನು ಯುಕ್ತಿಯಿಂದ ನಮ್ಮನ್ನು ಸೆರೆಹಿಡಿದ ವರ್ತಮಾನವು ಜಗರಾಯನಿಗೆ ಆತನ ಜನರ ಮುಖಾಂತರ ಗೊತ್ತಾಗುವುದರಿಂದ ಆತನಿಗೆ ಸಂಶಯವು ಬರಲಿಕ್ಕಿಲ್ಲ. ಬೇಟೆಯಾಡುತ್ತಾಡುತ್ತ ಒಂದು ಮೃಗವನ್ನು ಬೆನ್ನಟ್ಟಿ ಹುಡುಕುತ್ತ ಬರುವಂತೆ, ನಮ್ಮ ಸೈನ್ಯವನ್ನು ದೂರಬಿಟ್ಟು ನೀನಿದ್ದ ನಿಟ್ಟಿನ ಕಡೆಗೆ ನಾನೂ–ರಾಜಪುತ್ರರೂ ಬರುವೆವು. ಆಗ ನೀನು ನಮ್ಮನ್ನು ಸೆರೆಹಿಡಿದು ಜಗರಾಯನ ರಾವುತರೊಡನೆ ನಿನ್ನ ಬಿಡಾರಕ್ಕೆ ಕರಕೊಂಡು ನಡೆ. ನಮ್ಮ ಸೈನ್ಯದ ಕೂಡ ಯುದ್ಧ ಮಾಡಲಿಕ್ಕೆ ನಿಂತಂತೆ ನಿನ್ನ ಶೂರರಾದ ರಾವುತರು ಹಿಂದೆ ನಿಂತುಕೊಳ್ಳಲಿ. ನಮ್ಮ ನಿಮ್ಮ ಸೈನ್ಯದ ನಡುವೆ ಕೆಲವು ಹೊತ್ತು ವಿನೋದದ ಯುದ್ಧ ನಡೆದು, ನೀನು ಸಕಲಪರಿವಾರದೊಡನೆ ನಮ್ಮನ್ನು ಕರಕೊಂಡು ನಿನ್ನ ಬಿಡಾರಕ್ಕೆ ಮುಟ್ಟುವ ಸಂಧಿಯಲ್ಲಿ ನಮ್ಮ ದಂಡಿನವರು ನಮ್ಮ ದುರ್ಗಕ್ಕೆ ಹೋಗಲಿ, ನಿನ್ನ ರಾವುತರು ನಿನ್ನ ಪಾಳಯಕ್ಕೆ ಬರಲಿ. ಹೀಗೆ ನಮ್ಮನ್ನು ಸೆರೆಹಿಡಕೊಂಡು ಹೋಗುವಷ್ಟರಲ್ಲಿ ನೆಲದೊಳಗಿನ ಗುಪ್ತಮಾರ್ಗವು ಸಿದ್ಧವಾಗಿರಲಿಕ್ಕೆ

ಬೇಕು. ಈ ಗದ್ದಲದಲ್ಲಿಯೇ ರಾಜಕುಟುಂಬವನ್ನು ಬಂಧಮುಕ್ತವಾಗಿ ಮಾಡತಕ್ಕದ್ದು. ಕೆಲಸವು ಬಹು ಸೂಕ್ಷ್ಮವಾಗಿರುವು ದರಿಂದ, ಅಣ್ಣಾ ಜಾಗರೂಕತೆಯು ಹೆಚ್ಚು ಬೇಕಾಗುತ್ತದೆ ಕಂಡೆಯಾ? ಮೋಸಗಾರಿಕೆಯು ಮುಳ್ಳಹಾಸಿಗೆಯೆಂಬದನ್ನು ಮರೆಯಬೇಡ!

## ದುರ್ದಿನ

ಕುಮುದಿನಿಯ ಈ ಯುಕ್ತಿಯು ಉಭಯವೀರರಿಗೂ ಸಮರ್ಪಕವಾಗಿ ತೋರಿತು. ರಾಜಕುಟುಂಬವನ್ನು ಬಂಧಮುಕ್ತಮಾಡುವ ಸಂಬಂಧದಿಂದಲೂ, ಅಲ್ಲಲ್ಲಿ ದಂಡಾಳುಗಳನ್ನು ಗುಪ್ತವಾಗಿ ಇಟ್ಟು, ಯುದ್ಧಪ್ರಸಂಗವು ಒದಗಿದಲ್ಲಿ ವೈರಿಗಳನ್ನು ತುಂಡರಿಸಿ ರಾಜಪುತ್ರರನ್ನೂ, ಕುಮುದಿನಿಯನ್ನೂ ಪಾರುಮಾಡುವ ಸಂಬಂಧದಿಂದಲೂ ಆ ಮೂವರೂ ಕೂಡಿ ಬಹು ಸಮರ್ಪಕವಾಗಿ ಆಲೋಚನೆಗಳನ್ನು ಮಾಡಿದರು. ಆ ಆಲೋಚನೆಯಿಂದ ಅವರೆಲ್ಲರಿಗೂ ಸಮಾಧಾನವಾಯಿತು. ಬಳಿಕ ಚಾಂದಖಾನನು ನಾಯಕನ ಅಪ್ಪಣೆಯನ್ನು ಪಡೆದು ದುರ್ಗದಿಂದ ಹೊರಟನು. ಖಾನನು ದುರ್ಗವನ್ನು ಇಳಿಯುವವರೆಗೆ, ನಾಯಕನು ಆತನ ಸಂಗಡ ಮಾತಾಡುತ್ತ ಮಾತಾಡುತ್ತ ಕಳಿಸಬಂದನು. ಖಾನನು ತನ್ನ ರಾವುತರೊಡನೆ ಚಂದ್ರಗಿರಿಗೆ ಸಾಗಲು, ಇತ್ತ ನಾಯಕನು ತನ್ನ ದುರ್ಗವನ್ನು ಸೇರಿದನು. ಈ ಗುಪ್ತವಾದ ಆಲೋಚನೆಯು ಆದ ಒಂದು ತಿಂಗಳ ವರೆಗೆ ಖಾನನು ಹೇಳಿಕೊಳ್ಳುವಂತೆ ಯಾವ ಪ್ರಯತ್ನವನ್ನೂ ಮಾಡಲಿಲ್ಲ. ಒಂದೆರಡು ಸಾರೆ ಎಚ್ಚಮನಾಯಕನ ದುರ್ಗಕ್ಕೆ ಹೋಗುವ ಅನ್ನಸಾಮಗ್ರಿಯನ್ನೂ, ಹಣವನ್ನೂ ಹಿಡಿದು ಜಗರಾಯನಿಗೆ ಒಪ್ಪಿಸಿದನು. ಇದರಿಂದ ಜಗರಾಯನು ಸಂತುಷ್ಟನಾಗದೆ, ಖಾನನು ಇನ್ನೂ ರಾಜಪುತ್ರನನ್ನು ಸೆರೆಹಿಡಕೊಂಡು ಬರುವ ಯತ್ನವನ್ನು ಮಾಡಲಿಲ್ಲವೆಂದು ಇರುಗನಾಯಕನನ್ನು ಮೇಲೆ ಮೇಲೆ ಕೇಳುತ್ತಿದ್ದನು. ಇದಲ್ಲದೆ ಖಾನನು ದರ್ಬಾರಕ್ಕೆ ಬಂದಾಗ, ತಾನು ಖಾನನನ್ನು ಪ್ರತ್ಯಕ್ಷ ಕಂಡು ಈ ಸಂಬಂಧದಿಂದ ಪ್ರಶ್ನಮಾಡುತ್ತಿದ್ದನು. ಹೀಗೆ ಕೇಳಿದಾಗಲೆಲ್ಲ ಖಾನನು—ಈ ಕೆಲಸವು ಯುಕ್ತಿಯಿಂದ ಸಾಧಿಸತಕ್ಕದ್ದಾಗಿರುತ್ತದೆ; ಅವಸರ ಮಾಡಿದರೆ ಆಗುವದಿಲ್ಲ; ನಮ್ಮ ದಂಡಾಳುಗಳ ಒಂದು ರಕ್ತದ ಹನಿಯೂ ಬೀಳದೆ ಕೆಲಸವಾಗುವಂತೆ ಹಂಚಿಕೆಯನ್ನು ಒಡ್ಡಿದ್ದೇನೆ. ನಾನು ಕೇಳಿದಾಗ ೨೫೦ ಜನ ರಾವುತರನ್ನಷ್ಟು ನನ್ನ ಸಹಾಯಕ್ಕೆ ತಾವು ಕೊಡತಕ್ಕದ್ದು. ಇನ್ನು ಬಹಳ ದಿವಸಗಳು ಹೋಗಲಿಕ್ಕಿಲ್ಲ, ಕಾರ್ಯವು ತೀವ್ರ ಸಾಧಿಸುವುದು ಎಂದು ಹೇಳುತ್ತಿದ್ದನು. ಹಾಗೂ ಹೀಗೂ ಕಾಲಹರಣ ಮಾಡುವುದ ರೊಳಗಾಗಿ ನೆಲದೊಳಗಿನ ಮಾರ್ಗವು ಸಿದ್ಧವಾಗಿ ಖಾನನಿಗೆ ಬಹಳ ಸಂತೋಷವಾಯಿತು. ಮುಂದೆ ಎರಡು ದಿನ ಹೋಗಗೊಟ್ಟು, ಮೂರನೆಯ ದಿನ ಆತನು ಜಗರಾಯನ ಬಳಿಗೆ ಹೋಗಿ, ನಾಳೆಗೆ ನಿಮ್ಮಿಂದ ೨೫೦ ಜನ ರಾವುತರ ಸಹಾಯವು ದೊರೆತರೆ ಸಂಜೆಗೇ ರಾಜಪುತ್ರನನ್ನೂ, ಕುಮುದಿನಿಯನ್ನೂ ಸೆರೆಹಿಡಿದುಕೊಂಡು ಬರುತ್ತೇನೆಂದು ಹೇಳಿದನು.

ಅದನ್ನು ಕೇಳಿ ಜಗರಾಯನಿಗೆ ಸಮಾಧಾನವಾಯಿತು; ಆದರೆ ಖಾನನು ಅಂಥ ಗೂಢವಾದ ಉಪಾಯವನ್ನೇನು ಯೋಚಿಸಿರುವನೆಂಬದನ್ನು ತಿಳಕೊಳ್ಳುವುದಕ್ಕಾಗಿ ಆತನು ಆತುರಪಟ್ಟನು. ಜಗರಾಯನು ತನ್ನ ಈ ಮನೋದಯವನ್ನು ಖಾನನಿಗೆ ತಿಳಿಸಲು, ಆತನು—ರಾಯರೇ, ನಾನು ಯೋಚಿಸಿರುವ ಯುಕ್ತಿಯನ್ನು ತಮ್ಮಂಥ ಗುಣಗ್ರಾಹಿಗಳ ಮುಂದೆ ಹೇಳಲಿಕ್ಕೆ ನನಗೆ ಬಹಳ ಸಂತೋಷವಾಗುತ್ತದೆ. ಹೇಳುತ್ತೇನೆ, ಕೇಳುವದಾಗಬೇಕು; ಎಚ್ಚಮನಾಯಕನು ಪ್ರತಿ ಶುಕ್ರವಾರಕ್ಕೊಮ್ಮೆ ಕುಮುದಿನಿಯನ್ನೂ, ರಾಜಪುತ್ರರನ್ನೂ ಕರಕೊಂಡು ಬೇಟೆಯಾಡಲಿಕ್ಕೆ ಹೋಗುತ್ತಿರುವನು. ಬೇಟೆಯನ್ನು ಎಬ್ಬಿಸಿಕೊಡಲಿಕ್ಕೆ ಬೇಡರನ್ನು ಕರಕೊಂಡು ಹೋಗುವ ಪ್ರಚಾರವಂತು ಇದ್ದೇ ಇರುತ್ತದಷ್ಟೆ? ನಾನು ಈಗ ತಿಂಗಳಿನಿಂದ ನನ್ನ ಪಕ್ಷದ ಕೆಲವು ಚತುರರಾದ ಬೇಡರನ್ನು ಎಚ್ಚಮನಾಯಕನ ಬೇಡರೊಳಗೆ ಬೆರೆತುಕೊಂಡು ಚಾತುರ್ಯದಿಂದ ಕೆಲಸ ಮಾಡುವಂತೆ ಹೇಳಿಕಳಿಸಿದ್ದೇನೆ. ನಮ್ಮ ಬೇಡರು ಮೃಗಗಳನ್ನು ಎಬ್ಬಿಸಿ ಅವನ್ನು ಅಟ್ಟಿಕೊಂಡು ಹೋಗುವಲ್ಲಿ ಮಹಾ ಚತುರರಿದ್ದಾರೆ. ಅವರು ಬೇಟೆಯಾಡುತ್ತಾಡುತ್ತ ತಮ್ಮ ಮನಸ್ಸಿಗೆ ಬಂದರೆ, ಎಚ್ಚಮನಾಯಕನನ್ನು ಒಂದುಕಡೆಗೆ ಒಯ್ಯುವರು, ಕುಮುದಿನಿಯನ್ನು ಒಂದುಕಡೆಗೆ ಒಯ್ಯುವರು, ರಾಜಪುತ್ರರನ್ನು ಒಂದುಕಡೆಗೆ ಒಯ್ಯುವರು. ಬೇಟೆಯಾಡುವುದರಲ್ಲಿ ಆವೇಶ ವನ್ನುಂಟುಮಾಡಿ ಅವರನ್ನು ತಮ್ಮ ಬೆನ್ನಹತ್ತಿಸಿ ಕರಕೊಂಡು ಹೋಗುವಲ್ಲಿ ನಮ್ಮ ಬೇಡರು ಬಲ್ಲಿದ್ದಾರೆ. ಅವರ ಮೇಲೆ ನಾಯಕನೇ ಮೊದಲಾದವರ ಪ್ರೇಮ ಬಹಳ; ವಿಶ್ವಾಸವು ಹೆಚ್ಚು. ಹೀಗೆ ಪ್ರೇಮವೂ ವಿಶ್ವಾಸವೂ ಕೂಡ್ರಲಿಕ್ಕೆ ಕಾಲಾವಧಿಯು ಬೇಕಾದದ್ದರಿಂದ ಕಾರ್ಯಕ್ಕೆ ಇಷ್ಟು ವಿಲಂಬವಾಗಿದೆ. ನಮ್ಮ ಬೇಡರು ನಾಳಿನ ದಿವಸ ಕುಮುದಿನಿಯನ್ನೂ, ರಾಜಪುತ್ರರನ್ನೂ ನಾನು ಹೇಳಿದ ನಿಟ್ಟಿಗೆ ಕರಕೊಂಡು ಬರುವರು. ಅವರ ಸೈನ್ಯವನ್ನು ಬಿಟ್ಟು ದೂರ ಕರಕೊಂಡು ಬರಬೇಕೆಂದು ಗೊತ್ತಾಗಿದೆ; ಆದ್ದರಿಂದ ನಾಳಿಗೆ ಕಾರ್ಯವು ಸಾಧಿಸುವುದು. ತಮ್ಮಿಂದ ೨೫೦ ಜನ ರಾವುತರ ಸಹಾಯವಷ್ಟು ದೊರೆಯಬೇಕು, ಎಂದು ಹೇಳಿದನು.

ಮರುದಿನ ಚಾಂದಖಾನನು ತನ್ನ ೨೫೦ ಜನ ರಾವುತರನ್ನೂ, ಜಗರಾಯನು ಕಳುಹಿದ ೨೫೦ ಜನ ರಾವುತರನ್ನೂ ಕರಕೊಂಡು ಗೊತ್ತುಮಾಡಿದ ಸ್ಥಳದಲ್ಲಿ ನಿಂತುಕೊಂಡನು. ಎರಡು ತಾಸು ಹೊತ್ತು ಏರಿರಬಹುದು, ಅಷ್ಟರಲ್ಲಿ ಬೇಡರು ಕುಮುದಿನಿಯನ್ನೂ, ರಾಜಪುತ್ರನನ್ನೂ ಬೆನ್ನಹತ್ತಿಸಿಕೊಂಡು ಖಾನನಿದ್ದ ಕಡೆಗೆ ಬಂದರು. ಬೇಟೆಯಾಡುವ ಆವೇಶದಲ್ಲಿ ಗೊತ್ತಿಲ್ಲದೆ ಬಹುದೂರ ಬಂದವರಂತೆ ಕುಮುದಿನಿಯೂ, ರಾಜಪುತ್ರರೂ ಬಂದಿದ್ದರು. ಅಷ್ಟರಲ್ಲಿ ಚಾಂದಖಾನನು ಜಗರಾಯನ ೨೫೦ ಜನ ರಾವುತರೊಡನೆ ಕುಮುದಿನಿಯನ್ನೂ, ರಾಜಪುತ್ರನನ್ನೂ ಮುತ್ತಿದನು. ಆಗ ಬೇಡರು ನಗುತ್ತ ಖಾನನಿಗೆ ಬಹುವಿನಯದಿಂದ ಮುಜುರೆ ಮಾಡಿದರು. ಖಾನನು ಮೃದುಸ್ಮಿತನಾಗಿ ಆದರದಿಂದ ಅವರ ಮುಜುರೆಗಳನ್ನು ತಕ್ಕೊಳ್ಳುತ್ತ—ಶಾಬಾಸ, ವಸ್ತಾದಿಗಳಾದ ನಮ್ಮ ಬೇಡರೇ ಶಾಬಾಸ! ನೀವು ನಿಮ್ಮ ಕೆಲಸವನ್ನು ಬಹಳ ಚೆನ್ನಾಗಿ ಮಾಡಿದಿರಿ. ಇದಕ್ಕಾಗಿ ನಾಳೆ ದರ್ಬಾರದಲ್ಲಿ ಜಗರಾಯನ ಕೈಯಿಂದ ನಿಮಗೆ ಯೋಗ್ಯವಾದ ಇನಾಮುನ್ನು ಕೊಡಿಸುವೆವು. ಈಗ ನಿಮ್ಮ ಸ್ಥಳಗಳಿಗೆ ಹೋಗಿರಿ, ಎಂದು ಹೇಳಿ ಕುಮುದಿನಿಯ

ಕಡೆಗೆ ತಿರುಗಿ—ಅಮ್ಮಾ ನೀನು ಜಾಣಳಿರುತ್ತೀಯಾದ್ದರಿಂದ ನನ್ನ ಮಾತುಗಳನ್ನು ಕೇಳಿ ವಿಚಾರದಿಂದ ನಡೆದುಕೋ. ಜಗರಾಯನ ಚಾಕರನಾದ ನಾನು, ರಾಜಪುತ್ರನನ್ನೂ—ನಿನ್ನನ್ನೂ ಸೆರೆ ಹಿಡಿಯುವುದಕ್ಕಾಗಿ ಈಗ ತಿಂಗಳಿನಿಂದ ಹೊಂಚುಹಾಕಿದ್ದೆನು. ಇಂದು ಕಾರ್ಯವು ಸಾಧಿಸಿರುತ್ತದೆ. ನೀನು ಒಣ ಚಂಡಿತನ ಮಾಡದೆ, ರಾಜಪುತ್ರರೊಡನೆ ಚಂದ್ರಗಿರಿಗೆ ನಡೆ. ನಿಮ್ಮ ಜೀವಕ್ಕೆ ಅಪಾಯವಾಗದಂತೆಯೂ, ನಿಮ್ಮ ಮರ್ಯಾದೆಗೆ ಕುಂದುಬಾರದಂತೆಯೂ ನಾನು ನೋಡಿಕೊಳ್ಳುತ್ತೇನೆ. ಪ್ರಾಣವನ್ನು ಕೊಟ್ಟೇನು; ಆದರೆ ಕೊಟ್ಟ ಈ ವಚನವನ್ನು ಮೀರಲಿಕ್ಕಿಲ್ಲ. ನನ್ನ ಈ ವಚನಕ್ಕೆ ಜಗರಾಯನು ಭಂಗವನ್ನುಂಟುಮಾಡುವ ಪ್ರಸಂಗವನ್ನು ತಂದಲ್ಲಿ ಕೂಡಲೆ ಆತನ ಚಾಕರಿಯನ್ನು ಬಿಟ್ಟು ನಮ್ಮ ಸಹಸ್ರಾವಧಿ ಸೈನ್ಯದೊಡನೆ ನಾನು ಧಾರಾತೀರ್ಥದಲ್ಲಿ ಪತನಹೊಂದುವವರೆಗೆ ನಿಮ್ಮಿಬ್ಬರನ್ನು ಎಚ್ಚಮನಾಯಕನಿಗೆ ಒಪ್ಪಿಸುವುದಕ್ಕಾಗಿ ಹೆಣಗುವೆನು; ಇದಕ್ಕೆ ಇಲ್ಲಿ ನಿನ್ನ ಸುತ್ತಲು ನೆರೆದಿದ್ದ ಹಿಂದೂ ದಂಡಾಳುಗಳೇ ಸಾಕ್ಷಿಯು, ಅನ್ನಲು, ಕುಮುದಿನಿಯು ಒಮ್ಮೆ ನಿಟ್ಟುಸಿರುಬಿಟ್ಟು, ಅಸಮಾಧಾನವನ್ನು ಪ್ರಕಟಿಸಿದಂತೆ ಮಾಡಿ, ಕೂಡಲೆ ರಾಜಪುತ್ರನೊಡನೆ ಚಂದ್ರಗಿರಿಯ ಕಡೆಗೆ ತನ್ನ ಕುದುರೆಯನ್ನು ತಿರುಗಿಸಿದಳು. ಆಗ ಖಾನನು ಜಗರಾಯನ ೨೫೦ ಜನ ರಾಹುತರ ಸಹಾಯದಿಂದ ರಾಜಪುತ್ರನನ್ನೂ, ಕುಮುದಿನಿಯನ್ನೂ ರಕ್ಷಿಸುತ್ತ ಮುಂದಕ್ಕೆ ಸಾಗಿ, ಕೆಲವು ವೇಳೆಯಲ್ಲಿ ಸಕಲ ಪರಿವಾರದೊಡನೆ ತನ್ನ ಬಿಡಾರಕ್ಕೆ ಮುಟ್ಟಿದನು. ಅತ್ತ ಖಾನನ ೨೫೦ ರಾವುತರು, ಕುಮುದಿನಿಯ ಸಹಾಯಕ್ಕೆ ಎಚ್ಚಮನಾಯಕನ ದಂಡಾಳುಗಳು ಬಾರದಂತೆ ಹಾದಿಯನ್ನು ಕಟ್ಟಿಕೊಂಡು ನಿಂತಿದ್ದರು. ಎಚ್ಚಮನಾಯಕನು ಸಂಕೇತದಂತೆ ಬೇರೊಂದು ಮಾರ್ಗದಿಂದ ರಾಜಪುತ್ರರನ್ನು ಬಿಡಿಸಿಕೊಂಡು ಬರುವುದಕ್ಕಾಗಿ ಹೋಗಿ ಕೈ ಮೀರಿ ಹೋದದ್ದರಿಂದ ಉಪಾಯದೋರದೆ ಅಸಮಾಧಾನದಿಂದ ಹಿಂದುರುಗಿ ದವನಂತೆ, ತನ್ನ ಸೈನ್ಯದೊಡನೆ ತನ್ನ ದುರ್ಗದ ಕಡೆಗೆ ಸಾಗಿದನು. ಇತ್ತ ಖಾನನ ರಾವುತರು ಚಂದ್ರಗಿರಿಗೆ ಬಂದರು. ಹೀಗೆ ರಕ್ತದ ಒಂದು ಹನಿಯೂ ಬೀಳದೆ, ರಾಜಪುತ್ರನು ಕುಮುದಿನಿ ಯೊಡನೆ ಖಾನನ ಕೈಸೇರಿದಂತಾಯಿತು!

ಆಡಿದಂತೆ ಖಾನನು ನಿರಾಯಾಸವಾಗಿ ಕುಮುದಿನಿಯೊಡನೆ ರಾಜಪುತ್ರನನ್ನು ಸೆರೆಹಿಡಕೊಂಡು ಬಂದದ್ದಕ್ಕಾಗಿ ಚಂದ್ರಗಿರಿಯೊಳಗಿನ ಪ್ರತಿಯೊಬ್ಬ ಮನುಷ್ಯನಿಗೆ ಆಶ್ಚರ್ಯ ವಾಯಿತೆಂದು ಹೇಳಬಹುದು. ಆದರಲ್ಲಿ ಎಚ್ಚಮನಾಯಕನ ಪಕ್ಷದವರಿಗೆ ಆಶ್ಚರ್ಯದ ಸಂಗಡ ಅಸಮಾಧಾನವೂ ಉತ್ಪನ್ನವಾಯಿತು. ಇತ್ತ ಜಗರಾಯನ ಪಕ್ಷದವರು, ಇನ್ನು ಎಚ್ಚಮನಾಯಕನ ಕೈ ಮುರಿದ ಹಾಗಾಯಿತೆಂದು ಸಂತೋಷಪಟ್ಟರು; ಆದರೆ ಮುತ್ಸದ್ದಿಗಳೆನಿಸುವವರಿಗೆ ಇದರಿಂದ ಅಸಮಾಧಾನವೂ ಆಗಲಿಲ್ಲ, ಸಂತೋಷವೂ ಆಗಲಿಲ್ಲ. ಇಂಥ ಮಹತ್ವದ ಕೆಲಸವು ಇಷ್ಟು ಸದ್ದಿಲ್ಲದೆ ಹ್ಯಾಗಾಯಿತೆಂದು ಅವರ ಬಲವಾದ ಶಂಕೆಗೆ ಒಳಗಾದರು. ಜಗರಾಯನಂತು ಮೊದಮೊದಲು ಈ ಮಾತು ಅಶಕ್ಯವೆಂತಲೇ ಭಾವಿಸಿದನು; ಆದರೆ ಆತನು ರಾವುತರ ಮುಖ್ಯಸ್ಥನು ನಡೆದ ಸಂಗತಿಯನ್ನು ಸಾದ್ಯಂತವಾಗಿ ಹೇಳಲು, ಆತನು ಸಂಶಯವು ದೂರವಾಯಿತು; ಆದರೂ ಈ ಕಾರ್ಯದಲ್ಲಿ ಯಾವದೊಂದು ಬಗೆಯ ಮೋಸವು

ಇರಲೇಬೇಕೆಂತಲೂ, ಯಾವ ರೀತಿಯಿಂದಲೇ ಆಗಲಿ, ಈಗ ಕೈಗೆ ಸಿಕ್ಕಿರುವ ರಾಜಪುತ್ರನನ್ನು ಬಿಡಲಾಗದೆಂತಲೂ ಆತನು ನಿಶ್ಚಯಿಸಿದನು. ಪ್ರಸಂಗ ಬಂದರೆ ಖಾನನ, ಹಾಗು ಆತನ ದಂಡಿನ ಆಟವು ನಡೆಯದಂತೆ ತನ್ನ ದಂಡನ್ನು ನಾಲ್ಕೂ ಕಡೆಗೆ ಪಸರಿಸಿ, ರಾಜಪುತ್ರನೊಡನೆ ಖಾನನನ್ನು ಸಹ ಸೆರೆಹಿಡಿಯಬೇಕೆಂದು ಆತನು ನಿಶ್ಚಯಿಸಿದನು. ಈ ನಿಶ್ಚಯವು ಕೊನೆಗಾಣುವುದಕ್ಕಾಗಿ ಮಾಡತಕ್ಕ ಉಪಾಯುಗಳನ್ನು ಆಲೋಚಿಸಬೇಕೆಂದು ಆತನು ಸೇನಾಪತಿಯಾದ ಇರುಗನಾಯಕನನ್ನು ಕರೆಕಳಿಸುತ್ತಿರಲು, ಚಾಂದಖಾನನು ಭೆಟ್ಟಿಗೆ ಬಂದಿರುತ್ತಾರೆಂದು ದ್ವಾರರಕ್ಷಕನು ಹೇಳಿದನು. ಆಗ ಜಗರಾಯನು ಖಾನನನ್ನು ಬರಮಾಡಿಕೊಂಡು, ಹೊರಗೆ ಸಂತೋಷವನ್ನು ಪ್ರಕಟಿಸುತ್ತ, ಎದ್ದುನಿಂತು ಆತನನ್ನು ಬಹಳವಾಗಿ ಸತ್ಕರಿಸಿ, ''ಬಹು ಚಾತುರ್ಯದಿಂದ ಕಾರ್ಯವನ್ನು ಸಾಧಿಸಿದಿರೆ'' ಂದು ಸ್ತೋತ್ರ ಮಾಡಿದನು. ಅದಕ್ಕೆ ಖಾನನು, ಇದೆಲ್ಲ ತಮ್ಮ ಪುಣ್ಯಪ್ರಭಾವವೆಂದು ಹೇಳಿ, ನಡೆದ ಸಂಗತಿಯನ್ನು ಸಾದ್ಯಂತವಾಗಿ ಅರಿಕೆ ಮಾಡಿಕೊಂಡನು. ಈ ಮೊದಲೇ ರಾವುತರ ಮುಖ್ಯಸ್ಥನು ಹೇಳಿದ್ದಕ್ಕೆ ಖಾನನ ವರ್ಣನವು ಅಕ್ಷರಶಃ ಕೂಡಿತು. ಇಷ್ಟು ಹೊತ್ತಿಗೆ ಜಗರಾಯನು ತನ್ನ ಸರದಾರನ ಮುಖಾಂತರವಾಗಿ ಯಾವತ್ತು ಸಂಗತಿಯನ್ನು ಕೇಳಿರುವನೆಂದು ಭಾವಿಸಿಯೇ ಖಾನನು ನಡೆದ ಸಂಗತಿಯನ್ನೆಲ್ಲ ಒಂದು ಅಕ್ಷರ ಬಿಡದೆ ಹೇಳಿದನು. ಜಗರಾಯನು ಆಗ ಹೆಚ್ಚಿನ ಯಾವ ಮಾತುಗಳನ್ನೂ ಆಡದೆ, ನಾಳೆ ದರ್ಬಾರಕ್ಕೆ ರಾಜಪುತ್ರನನ್ನೂ, ಕುಮುದಿನಿಯನ್ನೂ ಕರಕೊಂಡು ಬರಬೇಕೆಂದು ಹೇಳಲು, ಖಾನನು– ರಾಯರೇ, ರಾಜಪುತ್ರರಿಗೂ, ಕುಮುದಿನಿಗೂ ದರ್ಬಾರದಲ್ಲಿ ಅಪಮಾನವಾಗದಂತೆ ವ್ಯವಸ್ಥೆಯನ್ನಿಡುವುದಕ್ಕಾಗಿ ನಾನು ಸೂಚಿಸುವ ಕಾರಣವಿಲ್ಲ. ಈಗ ವೈರಿಗಳನ್ನು ಯುದ್ಧದಲ್ಲಿ ಸೋಲಿಸದೆ, ಮೋಸದಿಂದ ಸೆರೆಹಿಡಕೊಂಡು ಬಂದಿರುವುದರಿಂದಲೂ, ದುಷ್ಟ ರಾಜ ದ್ರೋಹಿಗಳ ಶಾಸನ ಮಾಡುವದಷ್ಟೇ ರಾಯರ ಉದ್ದೇಶವಿರುವುದರಿಂದಲೂ, ರಾಜವಂಶದ ನಿರಪರಾಧಿಯಾದ ಕುಮಾರನನ್ನೂ, ಪತಿಯ ಕಾರ್ಯಕ್ಕಾಗಿ ದೇಹವನ್ನರ್ಪಿಸಲು ಸಿದ್ಧಳಾದ ಕುಮುದಿನಿಯಂಥ ಸಾಧ್ವಿಯನ್ನೂ, ಅವಮಾನಗೊಳಿಸುವುದು ಸರಿಯಲ್ಲ. ನಿಜವಾದ ಶೌರ್ಯಕ್ಕೂ, ಸೌಜನ್ಯಕ್ಕೂ ಒಪ್ಪುವ ಈ ಮಾತನ್ನು ತಮ್ಮ ಮುಂದೆ ಹೇಳುವ ಯೋಗ್ಯತೆಯು ನನ್ನದಲ್ಲ; ಆದರೆ ತಮ್ಮ ಎಲ್ಲ ರಾವುತರ ಸಮಕ್ಷ ನಾನು ಕಂಠರವದಿಂದ ಕುಮುದಿನಿಗೆ ಕೊಟ್ಟ ವಚನಗಳನ್ನು ಪಾಲಿಸಲೇ ಬೇಕಾಗಿರುವುದರಿಂದ ಸನ್ನಿಧಿಯಲ್ಲಿ ಅರಿಕೆ ಮಾಡಿಕೊಂಡಿರುವೆನು. ರಾಜಕುಮಾರನ, ಹಾಗು ಕುಮುದಿನಿಯ ಸಲುವಾಗಿ ಅವರ ಮರ್ಯಾದೆಗೆ ತಕ್ಕ ಆಸನಾದಿ ಗಳನ್ನೂ ಸಿದ್ಧಗೊಳಿಸುವಂತೆ ಅಪ್ಪಣೆಯಾಗಬೇಕು ಅನ್ನಲು, ಜಗರಾಯನು–ಆಗಬಹುದು, ಸೆರೆಯಾಳುಗಳ ಯೋಗ್ಯತೆಗೆ ತಕ್ಕಂತೆ ಮಾನ–ಮರ್ಯಾದೆಗಳನ್ನು ಮಾಡುವ ಪ್ರಚಾರವು ವಿಜಯನಗರದ ರಾಯರ ಮನೆತನದಲ್ಲಿ ಪೂರ್ವ ಪರಂಪರಾಗತವಾಗಿ ನಡೆದುಬಂದೇ ಇರುವುದು. ಅದರ ಸಲುವಾಗಿ ಇಷ್ಟೊಂದು ವಿನಂತಿ ಮಾಡಿಕೊಳ್ಳುವುದೇಕೆ?

ಜಗರಾಯನ ಈ ಉತ್ತರದಿಂದ ಖಾನನಿಗೆ ಸಮಾಧಾನವಾಗಲಿಲ್ಲ; ಆದರೂ ಕಾರ್ಯಸಾಧಕನಾದ ಆತನು ಯಾವ ಮಾತನ್ನೂ ಆಡದೆ, ಮನೆಗೆ ಹೋಗಿ ರಾಜಪುತ್ರನ, ಹಾಗು ಕುಮುದಿನಿಯ ಸಂರಕ್ಷಣದ ಸಲುವಾಗಿ ಮಾಡತಕ್ಕ ವ್ಯವಸ್ಥೆಯನ್ನು ಗೊತ್ತುಮಾಡಿಕೊಂಡನು.

ಸಂಕೇತದಂತೆ ಮರುದಿವಸ ಎಚ್ಚಮನಾಯಕನೂ ತನ್ನ ಸೈನ್ಯವನ್ನು ತಕ್ಕೊಂಡು ಖಾನನ ಸಹಾಯಕ್ಕಾಗಿ ನಿಯಮಿತ ಸ್ಥಳದಲ್ಲಿ ಸಿದ್ಧವಾಗಿರತಕ್ಕವನಿದ್ದನು. ಇತ್ತ ಜಗರಾಯನು, ತನ್ನ ಕೈಗೆ ಸಿಕ್ಕಿದ್ದ ರಾಜಪುತ್ರನನ್ನೂ, ಕುಮುದಿನಿಯನ್ನೂ, ಪ್ರಸಂಗಬಂದರೆ ಚಾಂದಖಾನನನ್ನು ಕೂಡ ಸೆರೆಯಲ್ಲಿಡಬೇಕೆಂದು ಯೋಚಿಸಿ, ಇರುಗನಾಯಕನ ಸಹಾಯದಿಂದ ಅಲ್ಲಲ್ಲಿ ತನ್ನ ದಂಡಾಳು ಗಳನ್ನು ಗುಪ್ತರೀತಿಯಿಂದ ಸಜ್ಜುಮಾಡಿ ಇಟ್ಟಿದ್ದನು. ಬೆಳಗಾಯಿತು, ಆ ದಿನ ಮಧ್ಯಾಹ್ನದ ಏಳು ತಾಸಿಗೆ ದರ್ಬಾರವು ನೆರೆಯತಕ್ಕದ್ದಿತ್ತು. ರಾಜಪುತ್ರನನ್ನೂ, ಮುಖ್ಯವಾಗಿ ಅಗಸರಾಕೆಯ ಸೋಗಿನಿಂದ ಆ ರಾಜಪುತ್ರನನ್ನು ಹೊರಡಿಸಿಕೊಂಡು ಹೋಗಿದ್ದ ಕುಮುದಿನಿಯನ್ನೂ ನೋಡುವುದರ ಸಲುವಾಗಿ ಪಟ್ಟಣಿಗರಲ್ಲಿ ವಿಚಿತ್ರವಾದ ಉತ್ಸುಕತೆಯು ಉತ್ಪನ್ನವಾಗಿತ್ತು. ದರ್ಬಾರದ ಸುದ್ದಿಯ ಹೊರತು ಬೇರೆ ಮಾತುಗಳನ್ನೇ ಅಂದು ಜನರು ಆಡುತ್ತಿದ್ದಿಲ್ಲವೆಂದು ಹೇಳಬಹುದು. ಬರಬರುತ್ತ ದರ್ಬಾರಕ್ಕೆ ಹೋಗುವ ಬೀದಿಗಳು ಜನರಿಂದ ತುಂಬಹತ್ತಿದವು. ದರ್ಬಾರವು ನಾಯಕರಿಂದಲೂ, ಬೇರೆ ಅಧಿಕಾರಿಗಳಿಂದಲೂ, ಪ್ರತಿಷ್ಠಿತ ಜನರಿಂದಲೂ ಕಾಲಿಡಲಿಕ್ಕೆ ಸ್ಥಳವಿಲ್ಲದಂತೆ ತುಂಬಿಹೋಗಿತ್ತು. ಜಗರಾಯನ ಸೈನ್ಯದವರು ದರ್ಬಾರದ ಬಾಗಿಲಲ್ಲಿ ಶಸ್ತ್ರಾಸ್ತ್ರ ಗಳಿಂದ ಸಜ್ಜಾಗಿದ್ದರಲ್ಲದೆ, ಪಟ್ಟಣದ ಬೇರೆ ಬೇರೆ ಆಯಕಟ್ಟಿನ ಸ್ಥಳಗಳಲ್ಲಿಯೂ ಅವರು ಯುದ್ಧೋತ್ಸುಕರಾಗಿ ನಿಂತುಕೊಂಡಿದ್ದರು. ಇಂದಿನ ವ್ಯವಸ್ಥೆಯು ಜನರಿಗೆ ವಿಚಿತ್ರತರವಾಗಿ ತೋರಿತು. ಹೀಗೆ ಪಟ್ಟಣದ ಬೀದಿಬೀದಿಗಳಲ್ಲಿ ದಂಡಾಳುಗಳು ಶಸ್ತ್ರಾಸ್ತ್ರಗಳಿಂದ ಸಜ್ಜಾಗಿ ನಿಂತುಕೊಂಡಿದ್ದ ಪ್ರಸಂಗಗಳು ಜನರ ಕಣ್ಣಿಗೆ ಬಿದ್ದಿದ್ದಿಲ್ಲವೆಂದರೂ ಅನ್ನಬಹುದು. ಏಳುತಾಸಿನ ಸುಮಾರಕ್ಕೆ ಚಾಂದಖಾನನ ಬಿಡಾರದ ಮುಂದುಗಡೆಯಲ್ಲಿ ದೊಡ್ಡ ದೊಡ್ಡ ಮೂರು ಕುದುರೆಗಳು ಜೇನುಹಾಕಿ ಸಿದ್ಧವಾಗಿದ್ದವು. ಆತನ ೨೫೦ ಜನ ರಾವುತರು ಸಾಲ್ಗೊಂಡು ನಿಂತುಕೊಂಡಿದ್ದರಲ್ಲದೆ, ಸಾವಿರ ಜನ ಕಾಲಾಳು ಯುದ್ಧಕ್ಕೆ ಸನ್ನದ್ಧರಾಗಿ ಮೊದಲೇ ಗೊತ್ತಾಗಿದ್ದಂತೆ ತಮ್ಮ ತಮ್ಮ ಸ್ಥಳಗಳಲ್ಲಿ ನಿಂತುಕೊಂಡಿದ್ದರು. ಖಾನನ ದಂಡಿನವರು ಜಗರಾಯನ ಪಕ್ಷದವರೇ ಆದದ್ದರಿಂದ ಅವರು ಬೇಕಾದಲ್ಲಿ ನಿಂತುಕೊಂಡರೂ ಯಾರಿಗೂ ವ್ಯತ್ಯಾಸ ತೋರುವಂತೆ ಇದ್ದಿಲ್ಲ. ಸ್ವಲ್ಪಹೊತ್ತಿನಲ್ಲಿ ಖಾನನು, ದರ್ಬಾರದ ರಾಜರೀವಿಯ ಪೋಷಾಕಿನಿಂದ ಒಪ್ಪುವ ರಾಜಪುತ್ರನನ್ನೂ, ಗೋಷೆಯಿಂದ ಒಪ್ಪುವ ಕುಮುದಿನಿಯನ್ನೂ ಕೂಡಿಕೊಂಡು ಹೊರಗೆ ಬಂದನು. ಮೂವರು ಮೂರು ಕುದುರೆಗಳನ್ನು ಹತ್ತಿದರು. ಮಧ್ಯದಲ್ಲಿ ರಾಜಪುತ್ರನ ಕುದುರೆಯೂ, ಎಡಬಲಗಳಲ್ಲಿ ಕುಮುದಿನೀ–ಚಾಂದಖಾನರ ಕುದುರೆಗಳೂ ಸಾಗಿದ್ದವು. ಶೂರರಾದ ಮುಸಲ್ಮಾನ ರಾವುತರು ಬಿಚ್ಚುಗತ್ತಿಗಳಿಂದ ಭಯಂಕರವಾಗಿ ಒಪ್ಪುತ್ತ ಸಂದುಬಿಡದೆ ಆ ಮೂರೂ ಕುದುರೆಗಳನ್ನು ಸುತ್ತುಗಟ್ಟಿ ಸಾಗಿದ್ದರು. ಶೂರರಾದ ಐವತ್ತು ಜನ ಮುಸಲ್ಮಾನ ದಂಡಾಳುಗಳು ಕುದುರೆಯ ಮುಂದೆ ಸಾಗಿದ್ದರು. ಖಾನನ ಈ ಗಂಭೀರವಾದ ಸವಾರಿಯು ಚಿತ್ತಾಕರ್ಷಕವಾಗಿಯೂ, ಭಯಪ್ರದವಾಗಿಯೂ ಇತ್ತು. ಖಾನನು ಕುದುರೆಯಿಂದ ಇಳಿದು ರಾಜಪುತ್ರನನ್ನೂ ಕುಮುದಿನಿಯನ್ನೂ ಕೂಡಿಕೊಂಡು, ಆರಿಸಿದ ಐವತ್ತು ಜನ ಮುಸಲ್ಮಾನ ವೀರರೊಡನೆ ದರ್ಬಾರವನ್ನು ಪ್ರವೇಶಿಸಿದಾಗ ಬಹುಜನರ ಹೃದಯಗಳು ಕಂಪಿಸಿದವು. ರಾಯರ ನಿಜವಾದ

ವಂಶದ ಕುಮಾರನನ್ನು ನೋಡಿ ಎಷ್ಟೋ ಜನರ ಕಂಠಗಳು ರಾಜಭಕ್ತಿಯಿಂದ ಉಕ್ಕಿಬಂದವು. ಈ ಚಾಂದಖಾನನ ಪರಿವಾರದ ವಿಷಯವಾಗಿ ದರ್ಬಾರದಲ್ಲಿಯ ಬಹುಜನರು ಸಹಾನುಭೂತಿ ಯುಳ್ಳವರಾದರು. ರಾಜಪುತ್ರನ ಸಲುವಾಗಿ ಬಹುಮಾನದ ಸ್ಥಳವನ್ನು ಜಗರಾಯನು ಕಾದಿಡ ದ್ದನ್ನು ನೋಡಿ ಖಾನನ ಸರ್ವಾಂಗವು ಕ್ರೋಧಸಂತಪ್ತವಾಯಿತು. ಆತನು ಯಾವ ಮಾತನ್ನೂ ಆಡದೆ, ಸಿಂಹಾಸನದಲ್ಲಿ ಕುಳಿತಿದ್ದ ಅರಸನಿಗೆ ವಂದನಾದಿಗಳನ್ನು ಮಾಡದೆ, ತನಗಾಗಿ ಗೊತ್ತು ಮಾಡಿದ್ದ ಆಸನದ ಮೇಲೆ ರಾಜಪುತ್ರನನ್ನು ಕುಳ್ಳಿರಿಸಿ, ತಾನೂ ಕುಮುದಿನಿಯೂ ರಾಜಪುತ್ರನ ಎಡಬಲಗಳಲ್ಲಿ ನಿಂತುಕೊಂಡು, ಆತನನ್ನು ರಕ್ಷಿಸತೊಡಗಿದರು. ಖಾನನ ಸಂಗಡ ಬಂದಿದ್ದ ಐವತ್ತು ಜನ ದಂಡಾಳುಗಳು ಅಲ್ಲಲ್ಲಿ ಅನುವು ನೋಡಿ ನಿಂತುಕೊಂಡರು. ದರ್ಬಾರವು ಸ್ತಬ್ಧವಾಗಿತ್ತು ಮುಂದೆ ಏನಾಗುವುದೋ ನೋಡಬೇಕೆಂದು ಜನರು ಆತುರರಾಗಿದ್ದರು.

ಚಾಂದಖಾನನೇ ಮೊದಲಾದವರು ಅರಸನಿಗೆ ವಂದನೆ ಮಾಡದೆಯಿದ್ದದ್ದನ್ನೂ, ಖಾನನು ರಾಜಪುತ್ರನನ್ನು ಈ ಪರಿ ಗೌರವಿಸಿದ್ದನ್ನೂ ನೋಡಿ ಜಗರಾಯನ ಪಿತ್ತವು ತಲೆಗೇರಿತು. ಆತನು ಎದ್ದುನಿಂತು ಚಾಂದಖಾನನಿಗೆ–ಖಾನರೇ, ವಿಜಾಪುರದ ಬಾದಶಹರ ದರ್ಬಾರದಲ್ಲಿ ದೊಡ್ಡ ವರಾಗಿದ್ದ ನಿಮಗೆ, ದರ್ಬಾರದ ಮಾನ ಮರ್ಯಾದೆಗಳು ಗೊತ್ತಿಲ್ಲವೋ? ದರ್ಬಾರದಲ್ಲಿ ಬಂದು ಸಿಂಹಾಸನಸ್ಥ ರಾಜನನ್ನು ವಂದಿಸದೆ ಇರಬಹುದೇ? ರಾಜಪುತ್ರನನೂ, ಕುಮುದಿನಿಯೂ ರಾಜದ್ರೋಹಿಗಳಾದ್ದರಿಂದ ಬಹುಮಾನಕ್ಕೆ ಪಾತ್ರರಲ್ಲ. ಅಂಥವರನ್ನು ನೀವು ಈ ಪರಿಯಾಗಿ ಮನ್ನಿಸುವುದನ್ನು ನೋಡಿ ನಮಗೆ ಬಹಳ ಸಂತಾಪವಾಗುತ್ತದೆ. ಸೆರೆಯಾಳಾದ ಈ ರಾಜಪುತ್ರನಿಗೆ ಅರಸುತನದ ಈ ಉಡುಪುತೊಡುಪುಗಳೇಕೆ? ಅಗಸನ ಸಂಗಡ ಹೊಲಸು ಬಟ್ಟೆಗಳನ್ನು ಹೊದ್ದುಕೊಂಡು ಹೋಗುತ್ತಿದ್ದ ಕುಮುದಿನಿಗೆ ಗೌರವದ ಗೋಷೆಯೇಕೆ? ಏನು ಹುಚ್ಚಾಟವಿದು! ಚಾಂದಖಾನರೇ, ನೀವು ಈ ರಾಜದ್ರೋಹಿಗಳನ್ನು ಕಟ್ಟಿಕೊಂಡು ಹೀಗೆ ಹುಡುಗಾಟಿಕೆಯನ್ನು ಮಾಡಬಹುದೆ? ಸ್ವಲ್ಪವಾದರೂ ವಿಲಂಬಮಾಡದೆ ಕುಮುದಿನಿಯ ಗೋಷೆಯನ್ನು ತೆಗೆಸಿರಿ. ಶಾಸನಕ್ಕೆ ಯೋಗ್ಯರಾದ್ದರಿಂದ ಇವರಿಬ್ಬನ್ನು ಸೆರೆಹಿಡಿದು ರಾಯರ ಸಮ್ಮುಖದಲ್ಲಿ ತರಿಸಿರುವೆ ವಲ್ಲದೆ, ರಾಯರ ಸಮಾನಸ್ಕಂದರಂತೆ ಮೆರೆಯುವುದಕ್ಕಾಗಿ ಇವರನ್ನು ಬಹುಮಾನದಿಂದ ಕರಿಸಿರುವುದಿಲ್ಲ. ರಾಜದ್ರೋಹಿಗಳಾದ ಈ ಪುಂಡರ ಬೆನ್ನಹತ್ತಿ ಈ ಐವತ್ತು ಜನ ದಂಡಾಳುಗಳು ಒಳಗೆ ಬಂದು ಗೊಂದಲಹಾಕುವುದೇಕೆ? ಇಂಥ ಉದ್ಧಟರಾದ ಯವನರು ರಾಯರ ಚಾಕರಿಯನ್ನು ಮಾಡಲಿಕ್ಕೆ ಯೋಗ್ಯರಲ್ಲ! ಉಳಿದ ಮಾತು ಹ್ಯಾಗಿದ್ದರೂ, ಇರಲಿ, ಕಳ್ಳತನದಿಂದ ರಾಜಪುತ್ರನನ್ನು ಎಬ್ಬಿಸಿಕೊಂಡು ಹೋಗಿ, ಹೊಯ್ಮಾಲಿತನದಿಂದ ದುರಗಪ್ಪನಾಯಕನಂಥ ಸರಳಹೃದಯದ ಸರದಾರನನ್ನು ವಂಚಿಸಿದ ಪರಮ ಸಾಹಸಿಯಾದ ಕುಮುದಿನಿಯು ಸದ್ಯಕ್ಕೆ ಗೋಷೆಯನ್ನು ತೆಗೆದು, ಈ ರಾಯರ ಸಿಂಹಾಸನದ ಎದುರಿಗೆ ಸೆರೆಯಾಳಾಗಿ ನಿಂತುಕೊಳ್ಳಲಿಕ್ಕೆ ಬೇಕು. ರಾಜಪುತ್ರನು ಅಪ್ರಬುದ್ಧನಾದ್ದರಿಂದ ಕ್ಷಮ್ಯನಾಗಿದ್ದಾನೆ. ಆತನನ್ನು ಈಗಲೇ ಕಾರಾಗೃಹಕ್ಕೆ ಕಳಿಸುವೆವು. ಮುಖ್ಯವಾಗಿ ಕುಮುದಿನಿಗೆ ಯೋಗ್ಯ ಶಾಸನ ಮಾಡುವುದು ಅವಶ್ಯವಾಗಿದೆ! ಅನ್ನಲು, ಖಾನನು–ಜಗರಾಯರೇ, ನಾನಂತು ರಾಜದರ್ಬಾರದಲ್ಲಿಯ ಶಿಷ್ಟಾಚಾರವನ್ನು

ಮುರಿದು ಅಯೋಗ್ಯನೆನಿಸಿಕೊಂಡೆನು; ಆದರೆ ನೀವು ನನ್ನ ವಿನಂತಿಯನ್ನು ಮನ್ನಿಸಿದಂತೆ ದೊಡ್ಡಸ್ತನವನ್ನು ತೋರಿಸಿ, ವಿಶ್ವಾಸಘಾತದಿಂದ ಪ್ರಸಂಗದಲ್ಲಿ ಮಾನಖಂಡನಮಾಡುವದು ಯೋಗ್ಯವೋ? ವಿಜಯನಗರದ ರಾಯರು ಎಂದಿಗೂ ಶಿಷ್ಟಾಚಾರಗಳನ್ನು ತಪ್ಪುವವರಲ್ಲ. ಒಬ್ಬರು ಶಿಷ್ಟಾಚಾರವನ್ನು ತಪ್ಪಿದ ಬಳಿಕ ಎರಡನೆಯವರು ಅವರನ್ನು ಎಚ್ಚರ ಗೊಳಿಸುವು ದಕ್ಕಾಗಿ, ಮನಸ್ಸಿಲ್ಲದಿದ್ದರೂ ಶಿಷ್ಟಾಚಾರವನ್ನು ತಪ್ಪಬೇಕಾಗುತ್ತದೆ, ಸಿಂಹಾಸನವೇರಿರುವ ಅರಸರ ಲಕ್ಷ್ಯವಿಲ್ಲದೆ, ಮನಬಂದಂತೆ ನಡೆಯುವ ನಿಮ್ಮ ಕಡಕ್ಕೆ ಕಡವು ಮುಟ್ಟಿದಂತಾಯಿತು. ಇನ್ನಾದರೂ ಹೇಳಿಕೊಳ್ಳುತ್ತೇನೆ, ನಾನು ನಿಮ್ಮ ರಾವುತರ ಸಮಕ್ಷ ಕುಮುದಿನಿಗೆ ಕೊಟ್ಟ ವಚನಕ್ಕೆ ಭಂಗವು ಉಂಟಾಗದಂತೆ ನಡೆದುಕೊಳ್ಳಬೇಕು. ರಾಜಪುತ್ರರನ್ನು ಕಾರಾಗೃಹದಲ್ಲಿರಿಸುವುದೂ, ಕುಮುದಿನಿಯ ಗೋಷೆಯನ್ನು ತೆಗೆಸಿ ಅಪಮಾನಗೊಳಿಸುವುದೂ ಯೋಗ್ಯವಲ್ಲ. ಈ ಇಬ್ಬರು ರಾಜಕೈದಿಗಳನ್ನು ಉದಾರಮನಸ್ಸಿನಿಂದಲೇ ನಡಿಸಿಕೊಳ್ಳತಕ್ಕದು. ಅವರ ರಾಜದ್ರೋಹಿ ಗಳಿರಲಿ–ರಾಜನಿಷ್ಠರಿರಲಿ, ನಾನು ನಿಮಗೆ ಬೇಕಾಗಿದ್ದರೆ, ನೀವು ನನಗೆ ಕೊಟ್ಟಿರುವ ವಚನವನ್ನು ನಡಿಸುವುದು ನ್ಯಾಯವಾಗಿದ್ದರೆ, ಈ ಇಬ್ಬರು ಕೈದಿಗಳನ್ನು ನನಗೆ ಒಪ್ಪಿಸ ತಕ್ಕದ್ದು. ಅವರಿಂದ ನಿಮಗೆ ತ್ರಾಸವಾಗದಂತೆಯೂ, ಅವರು ಚಂದ್ರಗಿರಿಯಿಂದ ಹೊರಗೆ ಹೋಗದಂತೆಯೂ ನೋಡಿಕೊಳ್ಳುವ ಜವಾಬ್ದಾರಿಯು ನನ್ನದು. ಇದರ ಮೇಲೆಯೂ ನಿಮ್ಮ ಹಟವನ್ನು ಸಾಧಿಸುವ ಇಚ್ಛೆಯಿದ್ದರೆ, ನನ್ನ ಕಡೆಗೆ ಮಾತು ಇಲ್ಲ. ಪೈಗಂಬರನ ಶಿಷ್ಯರಿಗೆ ವಚನಕ್ಕಿಂತ ಪ್ರಾಣವು ಹೆಚ್ಚಿನದಲ್ಲ, ಎಂದು ಹೇಳಿದನು. ಅದಕ್ಕೆ ಜಗರಾಯನು–ಅದು ಹೇಗೇ ಇರಲಿ, ಕುಮುದಿನಿಯು ಮೊದಲು ಗೋಷೆಯನ್ನು ತೆಗೆಯಲಿಕ್ಕೆ ಬೇಕು. ಆಕೆಯು ದುರಗಪ್ಪನಾಯಕನಿಗೆ ಮಂಕುಬೂದಿ ಯನ್ನು ಹಚ್ಚಿದಂತೆ, ನಿಮಗೂ ಹಚ್ಚಿ ಪಾರಾಗಿ ಹೋಗಿರಬಹುದು! ನೀವು ನಿಮ್ಮ ಪೌರುಷವನ್ನು ಮೆರೆಸುವದಕ್ಕಾಗಿ ಯಾವಳೊಬ್ಬ ಸ್ತ್ರೀಯನ್ನು ಕರಕೊಂಡು ಬಂದು, ಗೋಷೆಯನ್ನು ನೆವದಿಂದ ಮೋಸಮಾಡಿ, ಅವಳೇ ಕುಮುದಿನಿಯೆಂದು, ನಮ್ಮನ್ನು ಠಕ್ಕಿಸುವ ಯತ್ನ ಮಾಡುತ್ತಿರಬಹುದು; ಆದ್ದರಿಂದ ಸತ್ಯವು ಹೊರಬೀಳುವುದಕ್ಕಾಗಿ ಈ ಸ್ತ್ರೀಯು ತನ್ನ ಗೋಷೆಯನ್ನು ತೆಗೆಯಲೇ ಬೇಕು! ಎನ್ನಲು, ಖಾನನು ತೆಗೆಯಗೊಡಲಿಕ್ಕಿಲ್ಲೆಂದು ಹಟ ಹಿಡಿದನು. ಇಬ್ಬರೂ ಸಿಟ್ಟಿಗೆದ್ದು, ಅತ್ತ ಜಗರಾಯನು ತನ್ನ ಕತ್ತಿಯನ್ನು ಹಿರಿದನು; ಇತ್ತ ಖಾನನೂ ತನ್ನ ಕತ್ತಿಯನ್ನು ಹಿರಿದನು. ಇದನ್ನು ನೋಡಿ ಕುಮುದಿನಿಯು—''ಈ ಗದ್ದಲದಲ್ಲಿ ಎಲ್ಲಿಯಾದರೂ ರಾಜಪುತ್ರರಿಗೆ ಅಪಾಯವಾಗಿ ಕಾರ್ಯಹಾನಿಯಾದೀತೆ''ಂದು ತಿಳಿದು ಒಮ್ಮೆ ತನ್ನ ಗೋಷೆಯನ್ನು ತೆಗೆದು ಬಿಸುಟಿ, ಕ್ರುದ್ಧವಾದ ಮುದ್ರೆಯಿಂದ ಜಗರಾಯನನ್ನು ನೋಡುತ್ತ ನಿಂತುಕೊಂಡಳು!

ಸಿಟ್ಟಿನಿಂದ ಮುಖವು ಕೆಂಪಗಾಗಿರಲು, ಹುಬ್ಬುಗಳನ್ನು ಗಂಟಿಕ್ಕಿ ಜಗರಾಯನನ್ನು ನೋಡುವ ಕುಮುದಿನಿಯ ಸುಂದರ ಮೂರ್ತಿಯನ್ನೂ, ಆಕೆಯ ದಿವ್ಯತೇಜಸ್ಸನ್ನೂ ನೋಡಿ ದರ್ಬಾರದ ಜನರು ಚಕಿತರಾದರು. ಸಿಂಹಾಸನದಲ್ಲಿ ಕುಳಿತಿದ್ದ ಅರಸನೂ, ಪ್ರತ್ಯಕ್ಷ ಜಗರಾಯನೂ ಆಕೆಯನ್ನು ನೋಡಿ ವಿಸ್ಮಯಪಟ್ಟರು. ಕುಮುದಿನಿಯು ಸಿಟ್ಟಿನಿಂದ

ಉರಿಯುತ್ತಿದ್ದರೂ, ಮುಗುಳುನಗೆಯಿಂದ ನಗುತ್ತ ಜಗರಾಯನಿಗೆ– ರಾಜಪ್ರತಿನಿಧಿಗಳೇ, ನಿಮ್ಮೆದುರಿಗೆ ನಿಂತಿದ್ದ ನಾನು, ಕುಮುದಿನಿಯೋ, ಮತ್ತೆ ಯಾವಳಾದರೊಬ್ಬ ಸ್ತ್ರೀಯೋ ಚೆನ್ನಾಗಿ ನೋಡಿರಿ. ಪ್ರತಿವ್ರತೆಯರ ಮಾನಭಂಗಮಾಡುವುದು ವಿಜಯನಗರದ ರಾಯರ ಶೀಲವಲ್ಲ, ಯುದ್ಧದಲ್ಲಿ ಸೆರೆಯಾಳಾದ ವೈರಿಗಳ ಹೆಂಡಿರನ್ನು ಕೂಡ ರಾಯರೂ–ಅವರ ಸೈನಿಕರೂ ದಿಟ್ಟಿಸಿ ನೋಡರು; ಅಂದಬಳಿಕ ಸ್ತ್ರೀಯರ ಅಪಮಾನ ಮಾಡುವುದನ್ನೇ ಮುಖ್ಯ ವಿಷಯವಾಗಿ ಇಟ್ಟುಕೊಂಡಿರುವ ಈ ದರ್ಬಾರವನ್ನು ರಾಯರ ದರ್ಬಾರವೆಂದು ಯಾಕೆ ಕರೆಯಬೇಕು? ಬ್ರಾಹ್ಮಣರನ್ನು, ಗೋಗಳನ್ನು, ಹುಡುಗರನ್ನು, ಸ್ತ್ರೀಯರನ್ನು ಸೆರೆಯಲ್ಲಿರಿಸಲಾಗದೆಂದು ಸ್ಮೃತಿಕಾರರಾದ ನಮ್ಮ ಮಹನೀಯ ಋಷಿಗಳು ಹೇಳಿರಲು, ಹನ್ನೆರಡು ವರ್ಷದ ಕೂಸಾದ ರಾಜಪುತ್ರರನ್ನೂ, ಹೆಂಗಸಾದ ನನ್ನನ್ನೂ ಸೆರೆಯಲ್ಲಿಡಲಿಕ್ಕೂ, ಶಿಕ್ಷಿಸಲಿಕ್ಕೂ ಆತುರಪಡುವವರು ವಿಜಯನಗರದ ರಾಯರೆಂತಲೇ ಹೇಳಬಹುದೋ? ಜಗರಾಜರೇ, ಸೌಜನ್ಯವನ್ನು ಬಿಟ್ಟು, ಉದ್ಧಟತನದಿಂದ ನನ್ನನ್ನು ಅಗಸನ ಸಂಗಡ ಹೊಲಸು ಬಟ್ಟೆಗಳನ್ನು ಹೊತ್ತವಳೆಂದು ನಿರಾಕರಿಸುವಿರಲ್ಲ! ಈ ಮಾತು ಪೌರುಷಕ್ಕೆ ಒಪ್ಪುವುದಿಲ್ಲ, ಕಾರ್ಯಾರ್ಥಿಗಳಾದವರು ಕಾರ್ಯಸಾಧನದಲ್ಲಿ ದೃಷ್ಟಿಯಿಡಬೇಕಲ್ಲದೆ, ಉಪಾಯಗಳಲ್ಲಿ ದೃಷ್ಟಿಯನ್ನಿಡುವುದು ಯೋಗ್ಯವಲ್ಲ ಈ ಮಾತನ್ನು ಹೆಂಗಸಾದ ನಾನು ಮೀಸೆಹೊತ್ತ ತಮ್ಮಂಥ ಗಂಡಸರಿಗೆ ಹೇಳುವ ಪ್ರಸಂಗವು ಬಂದದ್ದಕ್ಕಾಗಿ ನನಗೆ ವಿಷಾದವಾಗುತ್ತದೆ! ಕಾರ್ಯಾರ್ಥಿಯಾದ ನಾನು ಅಗಸರ ಬಟ್ಟೆಯನ್ನು ಹೊತ್ತಾಗಲಿ, ಬೇರೆ ಯಾವ ಕೆಲಸವನ್ನು ಮಾಡಿಯೇ ಆಗಲಿ ಕಾರ್ಯವನ್ನು ಸಾಧಿಸಿಕೊಂಡು ಹೋಗುವಾಗ, ಪೌರುಷಶೀಲರಾದ ತಾವು ಎಲ್ಲಿ ಅಡಗಿಕೊಂಡಿದ್ದಿರಿ? ರಾಯರೇ, ದುರಗಪ್ಪನಾಯಕರನ್ನು ವಂಚಿಸಿದೆನೆಂದು ನನ್ನನ್ನು ನಿರಾಕರಿಸುವಿರಲ್ಲವೇ! ಪರರ ಗುಣಕ್ಕಾಗಿ ಮತ್ಸರಪಟ್ಟು ನೆವತೆಗೆದು ಅವರನ್ನು ದೂಷಿಸುವ ನೀವೆತ್ತ? ಪರರ ಗುಣಲೇಶವನ್ನು ಪರ್ವತಾಕಾರವಾಗಿ ಕಂಡು, ಅವರನ್ನು ಬಹುಮಾನಿಸುವ ದುರಗಪ್ಪನಾಯಕರೆತ್ತ? ಆ ಪುಣ್ಯಪುರುಷರ ಹೆಸರನ್ನು ಉಚ್ಚರಿಸಲಿಕ್ಕೂ ನಿಮ್ಮಲ್ಲಿ ಯೋಗ್ಯತೆಯಿಲ್ಲೆಂದು ನನಗೆ ತೋರುತ್ತದೆ. ಅಂತೇ ಆ ಧರ್ಮಾತ್ಮಾನಾದ ನಾಯಕನು ನಿಮ್ಮನ್ನು ನಿಕಾರಿಸಿ ಹೋದನು. ವಿವೇಕಿಗಳಲ್ಲದ ನಿಮ್ಮ ಮುಂದೆ ಮಾತಾಡಿ ಪ್ರಯೋಜನವೇನು? ಎಂದು ನುಡಿದು, ದರ್ಬಾರದ ಜನರನ್ನು ಉದ್ದೇಶಿಸಿ–ವೀರಶಿರೋಮಣಿಗಳಿರಾ, ಜಗರಾಯರ ಪೌರುಷದ ಮಾತುಗಳನ್ನು ಕೇಳಿದಿರಷ್ಟೆ? ನಾವು ರಾಜದ್ರೋಹಿಗಳಂತೆ, ಆದರೆ ಮರಣೋನ್ಮುಖರಾದ ವೆಂಕಟದೊರೆಗಳು ಮಾಡಿದ ಅಪ್ಪಣೆಯನ್ನು ನಿರಾಕರಿಸಿ, ಮನಬಂದಂತೆ ನಡೆಯುವ ತಾವು ಮಾತ್ರ ಮಹಾರಾಜನಿಷ್ಠರಂತೆ! ನೀವು ನನ್ನ ಒಡಹುಟ್ಟಿದವರೆಂದು ತಿಳಿದು, ಇನ್ನೆರಡು ಮಾತುಗಳನ್ನು ಆಡುತ್ತೇನೆ, ದಯವಿಟ್ಟು ಲಾಲಿಸಿರಿ. ಚಾಂದಖಾನರು ಮೋಸಮಾಡಿ ನಮ್ಮನ್ನು ಸೆರೆಹಿಡಕೊಂಡು ಬಂದಿದ್ದಾರೆ. ನಮ್ಮ ಜೀವಕ್ಕೆ ಅಪಾಯವಾಗದಂತೆಯೂ, ನಮ್ಮ ಮಾನಕ್ಕೆ ಕೊರತೆ ಬಾರದಂತೆಯೂ ನೋಡಿಕೊಳ್ಳುತ್ತೇವೆಂದು ಅವರು ನಿಮ್ಮ ರಾವುತರ ಸಮಕ್ಷ ವಚನ ಕೊಟ್ಟಿರುತ್ತಾರೆ. ಹಾಗೆ ಅವರು ವಚನ ಕೊಡದಿದ್ದರೆ, ಪ್ರಾಣವನ್ನಾದರೂ ಕೊಡುತ್ತಿದ್ದೆವು, ಸೆರೆಯಾಳಾಗುತ್ತಿದ್ದಿಲ್ಲ! ಈಗ

ಅಬಲೆಯಾದ ನಾನೂ, ಕೂಸಾದ ರಾಜಪುತ್ರರೂ ಅನಾಥರಾಗಿ ನಿಮ್ಮೆಲ್ಲರ ಮೇಲೆ ವಿಶ್ವಾಸವಿಟ್ಟು ದರ್ಬಾರದಿಂದ ಹೊರಟು ನನ್ನ ಪತಿಯ ಬಳಿಗೆ ಹೋಗುತ್ತೇವೆ; ನೀವಾದರೂ ರಕ್ಷಿಸಿರಿ, ರಾಯರ ಸಿಂಹಾಸನವನ್ನೇರಿದ ಈ ಅರಸರಾದರೂ ರಕ್ಷಿಸಲಿ, ತಮ್ಮ ತಪ್ಪನ್ನು ತಿದ್ದಿಕೊಂಡು ಜಗರಾಯರಾದರೂ ರಕ್ಷಿಸಲಿ, ತಮ್ಮ ಕರ್ತವ್ಯವೆಂದು ಖಾನನಾದರೂ ರಕ್ಷಿಸಲಿ, ಎಂದು ನುಡಿದು, ಆಕೆಯು ರಾಜಪುತ್ರನೊಡನೆ ದರ್ಬಾರದಿಂದ ತಟ್ಟನೆ ಹೊರಟಳು. ದರ್ಬಾರದ ಜನರು ಬೆರಗಾಗಿ ಆಕೆ ಹೋಗುವುದನ್ನು ನೋಡುತ್ತ ಕುಳಿತುಕೊಂಡರು; ಒಬ್ಬರೂ ಸ್ಥಳ ಬಿಟ್ಟು ಕದಲಿಲ್ಲ; ಕೆಲವರು ಭಯಗ್ರಸ್ಥರಾಗಿ ಸುಮ್ಮನೆ ಕುಳಿತುಕೊಂಡರು; ಕೆಲವರು ಹೆಂಗಸಿನ ಮೇಲೆಯೂ–ಹುಡುಗನ ಮೇಲೆಯೂ ಕೈಯೆತ್ತುವುದು ಅನ್ಯಾಯವೆಂದು ಸುಮ್ಮನೆ ಕುಳಿತು ಕೊಂಡರು; ಕೆಲವರು ಕುಮುದಿನಿಯ ಮಹಾಧೈರ್ಯವನ್ನೂ ಚಾಂದಖಾನನ ಮುಂಜಾಗ್ರತೆಯ ಸಿದ್ಧತೆಯನ್ನೂ ನೋಡಿ, ಮುಂದುಗಾಣದೆ ಸುಮ್ಮನೆ ಕುಳಿತುಕೊಂಡರು. ಆಗ ಜಗರಾಯನಿಗೆ ಏನು ಮಾಡಬೇಕೆಂಬದೇ ತಿಳಿಯದಾಯಿತು. ಖಾನನೂ–ಆತನ ಐವತ್ತು ಜನ ಶೂರ ದಂಡಾಳುಗಳೂ ಸುತ್ತುಗಟ್ಟಿರಲು, ಕುಮುದಿನಿಯು ರಾಜಪುತ್ರನೊಡನೆ ದರ್ಬಾರದಿಂದ ಹೊರಗೆ ಬಂದು ಕುದುರೆಯನ್ನು ಹತ್ತಿ ನಡೆದಳು. ಖಾನನು ತನ್ನ ೨೫೦ ಜನ ರಾವುತರೊಡನೆ ಅವರನ್ನು ರಕ್ಷಿಸುತ್ತ ಸಾಗಿದನು. ಒಬ್ಬರಿಗೂ ಅವರನ್ನು ತಡವುವ ಧೈರ್ಯವಾಗಲಿಲ್ಲ, ಕುಮುದಿನಿಯು ಕೆಲವು ಅಂತರವನ್ನು ಕ್ರಮಿಸಿ ಹೋದಮೇಲೆ ಜಗರಾಯನ ಸೈನಿಕರು ಅವನ ಅಪ್ಪಣೆಯಂತೆ ಕುಮುದಿನಿಯ ಮೇಲೆ ಏರಿ ಬರಲು, ಖಾನನ ೨೫೦ ಜನ ರಾವುತರೂ, ಸಾವಿರ ದಂಡಾಳಗಳೂ ಅಲ್ಲಲ್ಲಿ ಆ ಸೈನಿಕರ ಸಮಾಚಾರವನ್ನು ತಕ್ಕೊಳ್ಳಹತ್ತಿದನು. ಖಾನನು ಕುಮುದಿನಿ ಯನ್ನೂ, ರಾಜಪುತ್ರರನ್ನೂ ಕರಕೊಂಡು ಹೋಗಿ, ಗೊತ್ತುಮಾಡಿದ್ದ ಸ್ಥಳದಲ್ಲಿ ಸೈನ್ಯದೊಡನೆ ಸಿದ್ಧವಾಗಿ ನಿಂತಿದ್ದ ಎಚ್ಚಮನಾಯಕನಿಗೆ ಅವರನ್ನು ಒಪ್ಪಿಸಿ, ತನ್ನ ಸೈನ್ಯದೊಡನೆ ಹಿಂದಿರುಗಿ ಬಂದು, ತನ್ನ ಮೊದಲಿನ ಕೆರೆಯ ದಂಡೆಯ ಮೇಲೆ ತಳ ಊರಿದನು.

ಇತ್ತ ಎಚ್ಚಮನಾಯಕನು ರಾಜಪುತ್ರನನ್ನೂ, ಕುಮುದಿನಿಯನ್ನೂ ಕೂಡಿಕೊಂಡು ಸುರಕ್ಷಿತವಾಗಿ ತನ್ನ ದುರ್ಗಕ್ಕೆ ಮುಟ್ಟಿದನು. ಚಾಂದಖಾನನು ತಳ ಊರಿದ ಕೆರೆಯಿಂದ ನಾಯಕನ ದುರ್ಗವು ನಾಲ್ಕು ಹರದಾರಿ ದೂರವಾಗಿತ್ತು ಅಂದು ರಾತ್ರಿ ರಾಜಕುಟುಂಬವನ್ನು ಬಂಧಮುಕ್ತ ಮಾಡಬೇಕೆಂದು ಮೊದಲೇ ಗೊತ್ತಾಗಿತ್ತು ಐಶ್ವರ್ಯೋಪಭೋಗಕ್ಕೆ ಮೆಚ್ಚಿದ್ದರಿಂದ ಎದೆಗಾರಿಕೆಯೂ, ಚಟುವಟಿಕೆಯೂ, ಜಾಣತನವೂ ನಷ್ಟವಾಗಿಹೋಗಿದ್ದ ಜಗರಾಯನ ಸೈನ್ಯದ ಮಟ್ಟನ್ನು ಬಲ್ಲವನಾದ ಚಾಂದಖಾನನು, ರಾಜಕುಟುಂಬವನ್ನು ಸಹಜವಾಗಿ ಬಿಡಿಸಿಕೊಂಡು ಹೋಗಿ ಎಚ್ಚಮನಾಯಕನಿಗೆ ಒಪ್ಪಿಸಿ ಕೀರ್ತಿಯನ್ನು ಕಟ್ಟಿಕೊಳ್ಳಬಹುದೆಂದು ಭಾವಿಸಿದ್ದನು. ಅವನ ಭಾವನೆಗೆ ಅನುಕೂಲವಾದ ಸಂಗತಿಗಳೂ ಇದ್ದವು. ಜಗರಾಯನೇ ಮೊದಲಾದ ಚಂದ್ರಗಿರಿ ಯೊಳಗಿನ ಜನರು, ಚಾಂದಖಾನನ, ಹಾಗೂ ಕುಮುದಿನಿಯ ಧೈರ್ಯ– ಸಾಹಸಗಳನ್ನು ನೋಡಿ ಬೆರಗಾಗಿ ಅದೊಂದೇ ವಿಷಯವನ್ನು ಕುರಿತು ತಮ್ಮೊಳಗೆ ವಿಚಾರಿಸುತ್ತಲೂ, ಎರಡನೆಯವರೊಡನೆ ಚರ್ಚಿಸುತ್ತಲೂ ಇದ್ದರು. ಕೈಗೆ ಸಿಕ್ಕಿದ್ದ ರಾಜಪುತ್ರನೂ, ಕುಮುದಿನಿಯೂ

ತನ್ನ ದಂಡಿನ ಆಟವನ್ನು ನಡೆಯಗೊಡದೆ, ಎಲ್ಲರ ಸಮಕ್ಷ ನಿರಾತಂಕವಾಗಿ ಹೊರಟುಹೋದದ್ದರಿಂದ ಜಗರಾಯನು ಚಿಂತೆಗೊಳಗಾಗಿದ್ದನು. ಇದರಿಂದ ಎಚ್ಚಮ ನಾಯಕನಿಗೆ ತನ್ನ ಸಾಮರ್ಥ್ಯದ ಅಳವು ಮಾತ್ರ ಗೊತ್ತಾದಂತಾಯಿತೆಂದು ಆತನು ತಳಮಳಿಸಿದನು. ಮಾಡಿದ ಕೆಲಸಗಳೆಲ್ಲ ಹೀಗೆ ಮೈಮೇಲೆ ಬರಹತ್ತಿದ್ದರಿಂದ ಅವನ ಮನಸ್ಸು ಉದಾಸವಾಯಿತು. ಹೀಗೆ ಮುಖ್ಯ ಮನುಷ್ಯನೇ ಉದಾಸೀನನಾದ್ದರಿಂದ, ಆತನ ಔದಾಸೀನ್ಯವು ಎಲ್ಲರನ್ನು ಮುಸುಕಿಕೊಂಡಂತೆ ಆಗಿ, ಕಾವಲುಗಾರರೇ ಮೊದಲಾದವರು ತಮ್ಮ ತಮ್ಮ ಕೆಲಸದಲ್ಲಿ ಉದಾಸೀನರಾಗಿದ್ದರು ಈ ಎಲ್ಲ ಸ್ಥಿತಿಯು ಖಾನನಿಗೆ ಅನುಕೂಲವಾಗಿದ್ದರೂ. ಸೆರೆಮನೆಯಲ್ಲಿದ್ದ 3ನೇ ರಂಗರಾಜನ, ಹಾಗು ಆತನ ಕುಟುಂಬದವರ ದೈವವು ಅನುಕೂಲವಾಗಿದ್ದಿಲ್ಲೆಂಬದು ಬಹಳ ದುಃಖದ ಸಂಗತಿಯು! ಅರಸನೊಬ್ಬನು ದೈವಗೇಡಿಯಾದದ್ದರಿಂದ ಖಾನನ ಸಾಹಸವೆಲ್ಲ ಕ್ಷಣಮಾತ್ರದಲ್ಲಿ ವ್ಯರ್ಥವಾಗುವುದನ್ನು ನೋಡಿ ವಾಚಕರಾದರೂ ಮರುಗಬಹುದು. ನೆಲದೊಳಗಿನ ಮಾರ್ಗದಿಂದ ಗದ್ದಲವಿಲ್ಲದಂತೆ ಮೊದಲು ಅರಸನನ್ನು ಕರಕೊಂಡು ಬರಬೇಕೆಂದು ಹೇಳಿ, ಹಾದಿಯನ್ನು ಸಿದ್ಧಮಾಡಿದ ಇಪ್ಪತ್ತೈದು ಜನರನ್ನೇ ಖಾನನು ರಾತ್ರಿ ಆ ಕೆಲಸಕ್ಕೆ ನಿಯಮಿಸಿದನು. ಪ್ರಸಂಗದಲ್ಲಿ ಸಹಾಯಮಾಡಲಿಕ್ಕೆ ಅನುಕೂಲವಾಗಬೇಕೆಂದು ಅಲ್ಪ ಸೈನ್ಯದೊಡನೆ ತಾನು ಪಟ್ಟಣದಿಂದ ಎರಡು ಮೈಲಿನಮೇಲೆ ನಿಂತಿದ್ದನು. ಮಾಡತಕ್ಕ ವ್ಯವಸ್ಥೆಯಲ್ಲಿ ಯಾವ ಕೊರತೆಯೂ ಆಗಿದ್ದಿಲ್ಲ. ಖಾನನಿಂದ ಆತನ ಒಬ್ಬ ಯಕಃಶ್ಚಿತ ದಂಡಾಳಿನವರೆಗೆ ಎಲ್ಲರೂ ಎಚ್ಚರಿಕೆಯಿಂದ ಕೆಲಸ ಮಾಡುತ್ತಿದ್ದರು. ನೆಲಮಾರ್ಗವನ್ನು ಐವರು ಪ್ರವೇಶಿಸಿ, ಉಳಿದವರು ಮಾರ್ಗದ ಬಾಯಿಗೆ ನಿಂತುಕೊಂಡರು. ಒಳಗೆ ಹೊಕ್ಕವರು ಸೆರೆಮನೆಯನ್ನು ಮುಟ್ಟಿ, ಬೇಕೆಂತಲೇ ಪೂರಾ ತೋಡದೆ ಸ್ವಲ್ಪ ಉಳಿಸಿದ್ದ ಮಾರ್ಗವನ್ನು ಮೆಲ್ಲಗೆ ತೋಡಿ ಸೆರೆಮನೆಯನ್ನು ಪ್ರವೇಶಿಸಿದರು. ಆಗ ಆರುತಾಸು ರಾತ್ರಿಯಾಗಿತ್ತು ಅರಸನು ಚಿಂತಾಕ್ರಾಂತನಾಗಿ ಒಬ್ಬನೇ ವಿಚಾರಮಾಡುತ್ತ ಕುಳಿತಿದ್ದನು. ಮಿಣಗುಟ್ಟುವ ಒಂದು ದೀಪದ ಮಂದಪ್ರಕಾಶವು ಸೆರೆಮನೆ ಯಲ್ಲಿ ಬಿದ್ದಿತ್ತು.

ಗೋಡೆಯನ್ನು ಒಡೆದು ಒಬ್ಬರಹಿಂದೆ ಒಬ್ಬರಂತೆ ಐದು ಜನರು ಒಳಗೆ ಬಂದದ್ದನ್ನು ನೋಡಿ ಅರಸನು ಭಯಚಕಿತನಾದನು. ಅಷ್ಟರಲ್ಲಿ ಆ ಐವರೂ ಅರಸನನ್ನು ವಂದಿಸಿ, ಎಚ್ಚಮನಾಯಕನು ಕೊಟ್ಟಿದ್ದ ಒಂದು ಪತ್ರವನ್ನು ಅರಸನ ಕೈಯಲ್ಲಿ ಕೊಟ್ಟರು. ಅದನ್ನು ಓದಿ ಅರಸನಿಗೆ ಪರಮಾನಂದವಾಯಿತು! ತನ್ನ ಬಂಧವಿಮೋಚನದ ಪ್ರಸಂಗವು ಒದಗಿದ್ದನ್ನು ನೋಡಿ ಆತನು ದೇವರನ್ನು ಮನಸ್ಸಿನಲ್ಲಿ ಕೊಂಡಾಡಿದನು. ಒಳಗೆ ರಾಜಪತ್ನಿಯೂ, ರಾಜನ ಹಿರಿಯಮಗನೂ ವಿಚಾರಮಾಡುತ್ತ ಕುಳಿತುಕೊಂಡಿದ್ದರು. ಅವರು ಹೊರಗಿನ ಜನರ ಸುಳವನ್ನು ಅರಿತು ಅರಸನಿದ್ದಲ್ಲಿಗೆ ಬರಲು ಆತನು ಸಂತೋಷದಿಂದ ಅವರಿಗೆ ನಾಯಕನ ಪತ್ರವನ್ನು ತೋರಿಸಿದನು. ಅದರಿಂದ ಎಲ್ಲರಿಗೂ ಸಂತೋಷವಾಗಿ, ಅವರು ಮನೋರಾಜ್ಯದ ಸಿಂಹಾಸನವನ್ನೇರಿ ನಲಿದಾಡ ಹತ್ತಿದರು. ಇನ್ನು ಬೇಗನೆ ನಿಮ್ಮನ್ನು ಬಿಡಿಸಿಕೊಂಡು ಹೋಗುವೆನೆಂದು ಹೇಳಿ, ಅರಸನು ತಾನು ಬರಿಯ ಅಂಗಿಯನ್ನೊಂದು ಹಾಕಿಕೊಂಡು

ಹೊರಡಲು ಸಿದ್ಧನಾದನು. ಇನ್ನು ಆತನು ನೆಲಮಾರ್ಗದ ಕಡೆಗೆ ಸಾಗತಕ್ಕವನು, ಅಷ್ಟರಲ್ಲಿ ಜಗರಾಯನ ಇಪ್ಪತ್ತು ಜನ ದಂಡಾಳುಗಳು ನೆಲಮಾರ್ಗದಿಂದಲೇ ಒಳಗೆ ಬಂದು ಖಾನನ ಐದು ಜನರನ್ನು ತುಂಡರಿಸಿದನು. ಇದನ್ನು ನೋಡಿ ಅರಸನೂ, ಆತನ ಕುಟುಂಬದವರೂ ಅಂಜಿ ನೆಲಕ್ಕೆ ಕುಳಿತುಕೊಂಡರು. ಅವರ ಮೈಮೇಲಿನ ಪ್ರಜ್ಞೆಯು ಹಾರಿತು. ಜಗರಾಯನ ಕಾವಲು ಗಾರರು ಯಾವ ಮಾತನ್ನೂ ಆಡದೆ, ಹತ್ತು ಜನರು ಅಲ್ಲಿಯೇ ಉಳಿದು, ಉಳಿದ ಹತ್ತು ಜನರು ಜಗರಾಯನಿಗೆ ಈ ಸುದ್ದಿಯನ್ನು ಹೇಳಲಿಕ್ಕೆ ಹೋದರು. ಹಾಯ್ ಹಾಯ್! ಪ್ರಿಯವಾಚಕರೇ, ಸಾತ್ವಿಕನಾದ ರಂಗರಾಯನ ಬಂಧ ವಿಮೋಚನಕ್ಕೆ ಅಕಲ್ಪಿತ ವಿಘ್ನ ಒದಗಿದ್ದನ್ನು ನೋಡಿ ನಿಮಗೆ ವ್ಯಸನವಾಗಿರಬಹುದು; ನಮಗಾದರೂ ಬಹಳ ವ್ಯಸನವಾಗುತ್ತದೆ; ಆದರೆ ಬರಿಯ ವ್ಯಸನ ಪಟ್ಟರೆ ಆಗುವುದೇನು? ಪ್ರಾಚೀನ ಕರ್ಮದಿಂದ ಪ್ರಾಣಿಗಳ ಭೋಗಕ್ಕಾಗಿ ಬಡಿಸಿದ ಎಲೆಗಳಂತೆ ಭೋಗಗಳನ್ನು ಸಿದ್ಧಮಾಡಿಡುವ ದೈವದ ವ್ಯಾಪಾರಗಳನ್ನು ನಿಲ್ಲಿಸಲಿಕ್ಕೆ ಯಾರು ಸಮರ್ಥ ರಾಗುವರು? ಚಂದ್ರಗಿರಿಯೊಳಗಿನ ಕಾವಲುಗಾರರು ಸ್ವಾಭಾವಿಕ ವಾಗಿ ರಾತ್ರಿ ಕೊಳ್ಳಿಗಳನ್ನು ಹಿಡಕೊಂಡು ತಿರುಗಾಡುತ್ತಿರುವಾಗ, ಒಬ್ಬನ ಕಾಲು ನೆಲದಲ್ಲಿ ಸಿಗಿಬಿದ್ದಿತು! ಆಗ ಕಾವಲು ಗಾರರು ಒಟ್ಟುಗೂಡಿ ಇದೇನೆಂದು ಅಗಿದು ನೋಡಲು, ಅವರಿಗೆ ನೆಲದೊಳಗಿನ ಮಾರ್ಗವು ಗೊತ್ತಾಯಿತು. ಅವರು ಆ ಮಾರ್ಗದಿಂದ ಮುಂದಕ್ಕೆ ಸಾಗಿ ಹೋಗಿ, ಮೇಲೆ ಹೇಳಿದಂತೆ ಅರಸನು ಹೊರಡಲಿಕ್ಕೆ ಸಿದ್ಧನಾಗಿರುವಾಗ ಸೆರೆ ಮನೆಯನ್ನು ಪ್ರವೇಶಿಸಿ, ಚಾಂದಖಾನನ ಜನರನ್ನು ತುಂಡರಿಸಿದರು! ಜಗರಾಯನಿಗೆ ಈ ಸುದ್ದಿಯು ಮುಟ್ಟಲು, ಆತನು ಸಿಟ್ಟಿನಿಂದ ಹುಚ್ಚಾಗಿ, ಈ ಕ್ಷಣದಲ್ಲಿ ರಾಜಕುಟುಂಬವನ್ನು ಸಂಹರಿಸಬೇಕೆಂದು ನಿಶ್ಚಯಿಸಿದನು; ಆದರೆ ಅಷ್ಟರಲ್ಲಿ ಅವನು ಎಚ್ಚತ್ತು, ಹೀಗೆ ರಾಜಕುಟುಂಬವನ್ನು ಘಾತಿಸುವುದರಿಂದ ಬಹುಜನರ ಮನಸ್ಸುನೊಂದು ನನ್ನ ವಿಷಯವಾಗಿ ಜನಕ್ಷೋಭವು ಉತ್ಪನ್ನವಾಗಿ ಅನರ್ಥವು ಒದಗಬಹು ದೆಂದು ತಿಳಿದು, ಆ ಕ್ರೂರ ವಿಚಾರವನ್ನು ಬಿಟ್ಟುಕೊಟ್ಟನು. ಆತನು ಕಾವಲು ಗಾರರಿಗೆ–ಒಳ್ಳೇದು, ನಾಳಿಗೆ ಅರಸರ ವಿಚಾರಣೆಯನ್ನು ಮಾಡುತ್ತೇವೆ; ನಿಮ್ಮ ಕಾರ್ಯದಕ್ಷತೆಗಾಗಿ ಯೋಗ್ಯವಾದ ಇನಾಮನ್ನಾದರೂ ನಾಳಿಗೇ ಕೊಡುತ್ತೇವೆ. ಈಗ ಆ ನೆಲಮನೆಯನ್ನು ಕೆಡವಿ ಕಾರಾಗೃಹವನ್ನು ಜಾಗ್ರತೆಯಿಂದ ಕಾದುಕೊಂಡಿರತಕ್ಕದ್ದು, ಎಂದು ಹೇಳಿ ಕೂಡಲೆ ಸೇನಾಪತಿಯಾದ ಇರುಗನಾಯಕನನ್ನು ಕರೆಸಿದನು. ಆಗ ಸೇನಾಪತಿಯು ನಾಚಿಕೆಯಿಂದ ತಲೆಬಾಗಿಸಿ ನಿಂತುಕೊಂಡಿರಲು, ಇದೆಲ್ಲ ಚಾಂದಖಾನನ ಮೋಸದ ಕೃತಿಯ ಫಲವೆಂದು ಹೇಳಿ, ಇನ್ನು ವೈರಿಗಳ ತಂತ್ರಗಳು ನಡೆಯದಂತೆ ಬಹು ಜಾಗ್ರತೆಯಿಂದ ಇರಬೇಕೆಂದು ನಿರ್ಧಾರದಿಂದ ಸೂಚಿಸಿದನು. ಕೂಡಲೆ ಸೇನಾಪತಿಯ ವ್ಯವಸ್ಥೆಯಿಂದ ಪಟ್ಟಣದಲ್ಲೆಲ್ಲ ಜಾಗ್ರತೆಯು ಉತ್ಪನ್ನವಾಗಿ ಅಲ್ಲಲ್ಲಿ ದಂಡಾಳುಗಳು ಸಜ್ಜಾಗಿ ನಿಂತುಕೊಂಡರು. ಈ ಗದ್ದಲವನ್ನು ಕೇಳಿ, ನೆಲಮನೆಯ ಬಾಗಿಲಿಗೆ ನಿಂತಿದ್ದ ಖಾನನ ಇಪ್ಪತ್ತು ಜನ ದಂಡಾಳುಗಳು ಓಡುತ್ತ ಹೋಗಿ ಈ ದುರ್ವಾರ್ತೆಯನ್ನು ಖಾನನಿಗೆ ತಿಳಿಸಿದರು. ಅದನ್ನು ಕೇಳಿ ಖಾನನು ವ್ಯಥೆಪಟ್ಟು ಚಂದ್ರಗಿರಿಯ ಕಡೆಗೆ ಸಾಗಿದನು. ಒಟ್ಟಿಗೆ ಎಲ್ಲ ದೃಷ್ಟಿಯಿಂದ ಆ ದಿನವನ್ನು ದುರ್ದಿನವೆಂದು ಕರೆಯಬೇಕಾಗುವುದು; ಯಾಕಂದರೆ, ಕೈಗೆ ಸಿಕ್ಕಿದ್ದ ರಾಜಪುತ್ರನೂ,

ಕುಮುದಿನಿಯೂ ನೋಡನೋಡುತ್ತ ಹೊರಟುಹೋದದ್ದರಿಂದ ಜಗರಾಯನು ಭಗ್ನಮನೋರಥನಾದನು; ಈಗ ತಿಂಗಳಗಟ್ಟಲೆ ಸಾಹಸಪಟ್ಟು ತೋಡಿಸಿದ ನೆಲಮಾರ್ಗವು ಕ್ಷಣಮಾತ್ರದಲ್ಲಿ ವ್ಯರ್ಥವಾದದ್ದರಿಂದ ಚಾಂದಖಾನನು ಭಗ್ನ ಮನೋರಥನಾದನು; ಸ್ವಾಮಿಯ ಬಿಡುಗಡೆಯಾಗಿ ಆತನ ದರ್ಶನದಿಂದ ಧನ್ಯನಾಗುವೆನೆಂಬ ಆಶೆಯು ವ್ಯರ್ಥವಾದದ್ದರಿಂದ ಎಚ್ಚಮನಾಯಕನು ಭಗ್ನಮನೋರತನಾದನು; ಈಗ ಬಿಡುಗಡೆಯಾಗುವುದೆಂದು ಸಂತೋಷದಿಂದ ಬ್ಬುತ್ತಿರುವಾಗ ದುಃಖದ ಪರ್ವತವೇ ಅಡ್ಡಬಂದದಂತಾದ್ದರಿಂದ ರಾಜ ಕುಟುಂಬವು ಭಗ್ನಮನೋ ರಥವುಳ್ಳದ್ದಾಯಿತು. ಹೀಗೆ ಬಹುಜನರ ಮನೋಥರಗಳು ಭಗ್ನವಾದ ಆ ದಿನಕ್ಕೆ ದುರ್ದಿನವೆನ್ನದೆ ಮತ್ತೇನೆನ್ನಬೇಕು?

## ಅಂತಕನ ಕೋಲಾಹಲ!!

ಚಾಂದಖಾನನು ಬಹು ಶ್ರಮಪಟ್ಟು ಮಾಡಿದ ಪ್ರಯತ್ನವು ವ್ಯರ್ಥವಾದದ್ದನ್ನು ನೋಡಿ ಎಚ್ಚಮನಾಯಕನೇ ಮೊದಲಾದವರಿಗೆ ಬಹಳ ಅಸಮಾಧಾನವಾಯಿತು; ಆದರೂ ಅವರು ಅಷ್ಟಕ್ಕೇ ಕೈಸೋತು ಕೂಡ್ರಲಿಲ್ಲ. ಹ್ಯಾಗಾದರೂ ಮಾಡಿ ಅರಸನನ್ನು ಬಂಧಮುಕ್ತನನ್ನಾಗಿ ಮಾಡಬೇಕೆಂದು ನಿಶ್ಚಯಿಸಿ ಅವರು ಉಪಾಯವನ್ನು ಯೋಚಿಸತೊಡಗಿದರು. ಕೋಟೆಯೊಳಗಿನ ದಂಡಾಳುಗಳನ್ನು ಲಂಚದಿಂದ ಒಡಕೊಂಡು ಕಾರ್ಯ ಸಾಧಿಸುವ ಉಪಾಯವು ಅವರಿಗೆ ತೋಚಿತು; ಆದರೆ ಆ ಉಪಾಯವು ಸಾಧಿಸುವ ಬಗೆಯೇನು? ಯಾರ ಮುಖಾಂತರವಾಗಿ ಆ ಕೃಷ್ಣಕೃತಿಯ ಉಪಕ್ರಮವನ್ನು ಮಾಡಬೇಕು? ಆ ಕಳ್ಳ ಕೆಲಸಕ್ಕೆ ತಕ್ಕ ಪ್ರಸಂಗವು ಎಂದು ಒದಗಬೇಕು? ಇದೇ ಮೊದಲಾದ ಪ್ರಶ್ನೆಗಳು ಉತ್ಪನ್ನವಾದವು. ಅಷ್ಟರಲ್ಲಿ ದ್ವಾರರಕ್ಷಕನು ಅಲ್ಲಿಗೆ ಬಂದು, ಚಂದ್ರಗಿರಿಯಿಂದ ಓಬಲೇಶ್ವರನೆಂಬ ಸರದಾರನು ದರ್ಶನಾಪೇಕ್ಷಿಯಾಗಿ ಬಂದಿದ್ದಾನೆಂದು ಹೇಳಿದನು. ಇದನ್ನು ಕೇಳಿ ಎಚ್ಚಮನಾಯಕನೇ ಮೊದಲಾದವರಿಗೆ ಬಹಳ ಸಮಾಧಾನವಾಯಿತು; ಯಾಕಂದರೆ ಚಂದ್ರಗಿರಿಯ ದರ್ಬಾರದಲ್ಲಿ ರಾಜಪುತ್ರನನ್ನೂ, ಕುಮುದಿನಿಯನ್ನೂ ನೋಡಿದಾಗಿನಿಂದ, ಓಬಲೇಶ್ವರನ ಮನಸ್ಸು ನಿಜವಾದ ರಾಯರವಂಶದ ಕಡೆಗೆ ತಿರುಗಿ, ಆತನು ರಾಜಪುತ್ರನನ್ನೂ, ಕುಮುದಿನಿಯನ್ನೂ ಸುರಕ್ಷಿತವಾಗಿ ಕರಕೊಂಡು ಹೋಗುವ ಕೆಲಸದಲ್ಲಿ ಖಾನನಿಗೆ ಒಳಿತಾಗಿ ಸಹಾಯಮಾಡಿದ್ದನು. ನಾಯಕನು ಓಬಲೇಶ್ವರನನ್ನು ಆದರದಿಂದ ಬರಮಾಡಿಕೊಂಡು ಕುಶಲ ಪ್ರಶ್ನೆಗಳನ್ನು ಮಾಡಲು, ಆ ಅತಿಥಿಯು–ನಾಯಕರೇ, ನೀವು ಎಂಥ ವಿಪತ್ತಿನಲ್ಲಾದರೂ ವಿಜಯನಗರದ ರಾಯರ ನಿಜವಾದ ಪಕ್ಷವನ್ನು ಬಿಡದೆ, ಅದರ ಕಲ್ಯಾಣಕ್ಕಾಗಿ ತನು–ಮನೋ–ಧನಗಳಿಂದ ಯತ್ನಿಸುವುದನ್ನು ನೋಡಿ ನನಗೆ ಬಹಳ ಸಂತೋಷವಾಗುತ್ತದೆ. ತಾವು ಸ್ವಾಮಿನಿಷ್ಠರೂ, ಸತ್ಪಕ್ಷಪಾತಿಗಳೂ, ಶೂರರೂ ಆಗಿರುವುದರಿಂದ ತಮ್ಮ ಈ ಉದಾರ ಚರಿತದ ವಿಷಯವಾಗಿ ಆಶ್ಚರ್ಯಪಡುವ ಕಾರಣವಿಲ್ಲೆಂದು ನೆನಿಸಿದರೆ,

ಇತ್ತ ಅಬಲೆಯಾದ ಕುಮುದಿನಿಯು, ಲೋಕೋತ್ತರ ಪುರುಷರಂತೆ ಮಾಡುವ ಸಾಹಸವನ್ನೂ– ಪರಧರ್ಮಿಗಳಾದ ಚಾಂದಖಾನರು, ವಿಶ್ವಾಸ ಪೂರ್ವಕವಾಗಿ ಮಾಡುತ್ತಿರುವ ಆಶ್ಚರ್ಯಕಾರಕ ಸಹಾಯವನ್ನೂ ನೋಡಿ ಯಾರಿಗೆ ಹುಚ್ಚು ಹಿಡಿಯಲಿಕ್ಕಿಲ್ಲ? ಇದನ್ನೆಲ್ಲವನ್ನು ಮನಸ್ಸಿನಲ್ಲಿ ತೂಗಿನೋಡಲು, ವಿಜಯನಗರದ ರಾಯರ ಪುಣ್ಯವೇ, ಸತ್ಪಕ್ಷವನ್ನು ಸಮರ್ಥಿಸುವುದಕ್ಕಾಗಿ ಶೂರರ ಈ ತ್ರಿಪುಟಿಯ ರೂಪದಿಂದ, ಪ್ರಕಟವಾಗಿರುತ್ತದೆಂದು ಹೇಳಬೇಕಾಗುತ್ತದೆ! ನಾಯಕರೇ, ಬಹಳ ಮಾತಾಡುವುದರಿಂದೇನು ಪ್ರಯೋಜನವು? ನನಗೆ ನಿಮ್ಮ ಪಕ್ಷವು ನ್ಯಾಯವಾದದ್ದೆಂದು ತೋರುವುದರಿಂದ, ಆದರ ಸೇವೆಯನ್ನು ಯಥಾಶಕ್ತಿ ಮಾಡಬೇಕೆಂದು ತಮ್ಮೆಡೆಗೆ ಬಂದಿದ್ದೇನೆ. ಅನುಗ್ರಹಿಸಿ ನನ್ನ ಅಲ್ಪಸೇವೆಗೆ ಆಸ್ಪದ ಕೊಟ್ಟು ನನ್ನನ್ನು ಕೃತಾರ್ಥನಾಗಿ ಮಾಡಬೇಕು. ನನ್ನ ಕೈಕೆಳಗೆ ೫೦೦ ಜನ ಶೂರ ದಂಡಾಳುಗಳು ಇದ್ದು ಕೋಟೆಯ ರಕ್ಷಕರ ಮೇಲ್ವಿಚಾರಣೆಯ ಕೆಲಸವು ನನ್ನ ಕಡೆಗಿರುತ್ತದೆ.

ಓಬಲೇಶ್ವರನ ಮಾತುಗಳನ್ನು ಕೇಳಿ ಎಚ್ಚಮನಾಯಕನೇ ಮೊದಲಾದವರು ಸಮಾಧಾನಪಟ್ಟರು. ಆಗಿನ ಪ್ರತಿ ಒಬ್ಬ ದೊಡ್ಡ ಅಧಿಕಾರಸ್ಥನಿಂದ ಸರ್ವಸಾಧಾರಣ ಸಿಪಾಯಿಯವರೆಗೆ ಎಲ್ಲರೂ ಲಂಚಬೊಕ್ಕರಿಸುವವರಾಗಿದ್ದರೆಂದು ಹೇಳಬಹುದು. ಓಬಲೇಶ್ವರನು ಕೇವಲ ಸ್ವಾಮಿನಿಷ್ಠೆಯಿಂದ ಸಹಾಯಮಾಡುತ್ತೇನೆಂದು ಹೇಳಿದರೂ, ಆತನನ್ನೂ–ಆತನ ದಂಡಾಳುಗಳನ್ನೂ ಉತ್ಸಾಹದಿಂದ ಕಾರ್ಯದಲ್ಲಿ ತೊಡಗಿಸುವುದಕ್ಕಾಗಿ ಲಂಚದ ಸವಿಯನ್ನು ಹಚ್ಚುವುದು ಯೋಗ್ಯವೆಂದು ನಾಯಕನು ನಿರ್ಣಯಿಸಿದನು. ಆತನು ಓಬಲೇಶ್ವರನಿಗೆ– ಸತ್ಪಕ್ಷಪಾತಿಯಾದ ಸರದಾರನೇ, ನಿನ್ನ ಮಾತುಗಳನ್ನು ಕೇಳಿ ನಮ್ಮೆಲ್ಲರಲ್ಲಿ ಹೊಸ ಉತ್ಸಾಹದ ಸಂಚಾರವಾಗಹತ್ತಿದೆ. ನೀನು ಆಯಾಚಿತನಾಗಿ ಸಹಾಯಮಾಡಲು ಸಿದ್ಧನಾದದ್ದನ್ನು ನೋಡಿಯಂತು ನಿಶ್ಚಯವಾಗಿ ನಮ್ಮ ಬಲವು ಹೆಚ್ಚಾಗಿರುವುದು! ನಾನು ನಿನಗೆ ಒಂದು ಹಿತದ ಮಾತನ್ನು ಹೇಳುವೆನು, ಅದನ್ನು ಅಲ್ಲಗಳೆಯಬೇಡ; ನಿನ್ನಂತೆ ನಿನ್ನ 500 ಜನ ದಂಡಾಳುಗಳು ನಿಸ್ಪೃಹರಾಗಿ ಕೇವಲ ಸ್ವಾಮಿನಿಷ್ಠೆಯಿಂದ ಸಾಹಸ ಕಾರ್ಯಕ್ಕೆ ಕೈಹಾಕುವುದು ಅಸಂಭವವು. ಹಾಗೆ ಆ ಬಡವರನ್ನು ಕಾರ್ಯದಲ್ಲಿ ತೊಡಗಿಸುವುದೂ ನ್ಯಾಯವಲ್ಲ; ಆದ್ದರಿಂದ ಸದ್ಯಕ್ಕೆ ಈ ಐದು ಸಾವಿರ ವರಹಗಳನ್ನು ನೀನು ಒಯ್ದು ನಿನ್ನ ದಂಡಾಳುಗಳಲ್ಲಿ ಹಂಚಿ, ಅವರನ್ನು ಪ್ರೋತ್ಸಾಹಿಸು. ಕಾರ್ಯವಾದನಂತರ ನಿನ್ನನ್ನೂ, ನಿನ್ನ ದಂಡಾಳುಗಳನ್ನೂ ವಿಶೇಷವಾಗಿ ಗೌರವಿಸಲಿಕ್ಕೆ ರಾಯರು ಸಮರ್ಥರಿದ್ದಾರೆ! ನಿನಗೆ ಒಪ್ಪಿಸಬೇಕಾಗಿರುವ ಕೆಲಸವು ಮಹತ್ವದ್ದಾದ್ದರಿಂದ ಅದನ್ನು ಬಹು ಜಾಗ್ರತೆಯಿಂದ ಕೊನೆಗಾಣಿಸಬೇಕಾಗುವುದು. ರಾಜಕುಟುಂಬವನ್ನು ಬಂಧಮುಕ್ತಮಾಡುವ ಕೆಲಸವನ್ನೇ ನಿನಗೆ ಒಪ್ಪಿಸುತ್ತೇವೆ. ಅದನ್ನು ನೀನು ಸಾಧಿಸಿದರೆ, ನಮ್ಮ ಪರಮಶೂರರಾದ ಚಾಂದಖಾನರಿಂದ ಆಗದ ಕಾರ್ಯವನ್ನು ಸಾಧಿಸಿದ ಕೀರ್ತಿಗೆ ನೀನು ಪಾತ್ರನಾಗುತ್ತೀ. ಅದರಿಂದ ರಾಯರ ಪರಮಾನುಗ್ರಹವು ನಿನ್ನ ಮೇಲೆ ಆಗುವುದು. ಜಗರಾಯನು ಚಂದ್ರಗಿರಿಯಿಂದ ಹೊರಗೆ ಹೋದ ಸಂಧಿಯನ್ನು ಸಾಧಿಸಿ, ನೀನು ನಿನ್ನ ಕೆಲವು ದಂಡಾಳುಗಳೊಡನೆ ಸೆರೆಮನೆಯ ಮೇಲೆ ಬಿದ್ದು ಎಲ್ಲ ಕಾವಲುಗಾರರನ್ನು ಕೊಂದು,

ರಾಜಕುಟುಂಬವನ್ನು ಸೆರೆಮನೆಯಿಂದ ಹೊರಡಿಸತಕ್ಕದ್ದು. ಅಷ್ಟರಲ್ಲಿ ನಿನ್ನ ಉಳಿದ ದಂಡಾಳುಗಳು ಕೋಟೆಯ ದ್ವಾರರಕ್ಷಕರನ್ನು ಕೊಂದು ದ್ವಾರಗಳನ್ನು ಸ್ವಾಧೀನಪಡಿಸಿಕೊಂಡು, ಸೈನ್ಯದೊಡನೆ ಅಲ್ಲಿಯೇ ಸಮೀಪದಲ್ಲಿ ಬಂದು ನಿಂತಿದ್ದ ನಮಗೆ ಸುದ್ದಿಯನ್ನು ಮುಟ್ಟಿಸತಕ್ಕದ್ದು. ಇಷ್ಟು ಕೆಲಸವಾದರೆ, ನಮ್ಮ ಸ್ವಾಮಿಯ ಕುಟುಂಬವು ಬಂಧಮುಕ್ತವಾಯಿತೆಂದು ತಿಳಿ, ಅನ್ನಲು ಓಬಲೇಶ್ವರನು–ನಾಯಕರೇ, ಇಷ್ಟು ಕೆಲಸ ಮಾಡುವುದು ನನ್ನನ್ನು ಕೂಡಿತು; ನಿಮಗೆ ಅದರ ಚಿಂತೆಬೇಡ; ಆದರೆ ನಾನು ಕೇವಲ ಧನದ ಆಶೆಯಿಂದ ಈ ಕಾರ್ಯವನ್ನು ಸಾಧಿಸಲು ಬಂದವ ನೆಂದು ಮಾತ್ರ ತಿಳಿಯಬಾರದು. ಈಗ ನಿಮ್ಮ ಆಜ್ಞೆಯನ್ನು ಶಿರಸಾವಹಿಸಿ, ನನ್ನ ದಂಡಾಳುಗಳ ಉತ್ತೇಜನಕ್ಕಾಗಿ ನೀವು ಕೊಡುತ್ತಿರುವ ೫೦೦೦ ವರಹಗಳನ್ನು ಸ್ವೀಕರಿಸುತ್ತೇನೆ. ಉದಾರ ಮನಸ್ಸಿನಿಂದ ಕೊಟ್ಟಿರುವ ನಿಮ್ಮ ಈ ಧನವು, ನಮ್ಮ ಯೋಗ್ಯತೆಯನ್ನು ಮೀರಿರುತ್ತದಾದ್ದರಿಂದ, ಇನ್ನು ಹೆಚ್ಚಿನದಾವುದನ್ನೂ ನಾವು ಆಶಿಸುವಂತೆ ಇಲ್ಲ. ಇಷ್ಟರಿಂದಲೇ ನಮ್ಮ ದಂಡಾಳುಗಳು ಪರಮಸಂತುಷ್ಟರಾಗಿ ಸ್ವಾಮಿಕಾರ್ಯವನ್ನು ನಿಶ್ಚಯವಾಗಿ ಸಾಧಿಸುವರು. ನಾಳೆಗೇ ನಮ್ಮ ಈ ಕಾರ್ಯವು ಸಾಧಿಸುವ ಯೋಗವಿದ್ದಂತೆ ತೋರುತ್ತದೆ. ಯಾಕಂದರೆ, ಜಗರಾಯನು ಹೊಸದಾಗಿ ತನ್ನ ಪಕ್ಷಕ್ಕೆ ಬಂದಿರುವ ಮಧುರೆಯ ನಾಯಕನಾದ ಮುತ್ತುವೀರಪ್ಪನನ್ನು ಸೈನ್ಯದೊಡನೆ ಸಮಾರಂಭದಿಂದ ನಾಳೆಗೇ ಕರಕೊಂಡು ಬರತಕ್ಕವನಿದ್ದಾನೆ. ಅಷ್ಟರಲ್ಲಿ ನಾವು ನಮ್ಮ ಕಾರ್ಯವನ್ನು ಸಾಧಿಸಿಕೊಳ್ಳಬೇಕು. ನಾಳೆ ಮೂರು ತಾಸಿನ ಸುಮಾರಕ್ಕೆ ಹತ್ತು ಸಾವಿರ ಸೈನ್ಯ ದೊಡನೆ ಕೋಟೆಯ ಬಾಗಿಲಿಗೆ ಬಂದು ನಿಲ್ಲುವ ಕೆಲಸವು ನಿಮ್ಮದು, ಸೆರೆಮನೆಯ ಕಾವಲು ಗಾರರನ್ನು ಕೊಂದು, ಅರಸನನ್ನು ಬಂಧಮುಕ್ತಮಾಡಿ, ನಿಮಗೆ ಕೋಟೆಯ ಬಾಗಿಲು ತೆರೆದಿಟ್ಟು ಸುದ್ದಿಯನ್ನು ತಿಳಿಸುವ ಕೆಲಸವು ನನ್ನದು!

ಈ ಮೇರೆಗೆ ತಾನಾಡಿದ ಮಾತುಗಳಿಗೆ ನಾಯಕನೂ–ಖಾನನೂ ಒಡಂಬಡಲು, ಓಬಲೇಶ್ವರನು ಧನವನ್ನೂ, ವೀಳಯವನ್ನೂ ಸ್ವೀಕರಿಸಿ ಚಂದ್ರಗಿರಿಗೆ ನಡೆದನು. ಆತನು ತನ್ನ ಜನರನ್ನು ಯುಕ್ತಿಯುಕ್ತಾ ವಚನಗಳಿಂದಲೂ, ಪ್ರತ್ಯಕ್ಷ ದ್ರವ್ಯದಾನದಿಂದಲೂ ಭವಿಷತ್ಕಾಲದ ಬಲವಾದ ಆಶೆಯಿಂದಲೂ ಉತ್ತೇಜನಗೊಳಿಸಿ, ಅವರೊಡನೆ ತಾನೂ ಕಾರ್ಯಸಾಧಿಸು ವುದಕ್ಕಾಗಿ ಟೊಂಕಕಟ್ಟಿದನು. ಬೆಳಗಾಯಿತು, ಓಬಲೇಶ್ವರನು ತನ್ನ ದಂಡಾಳುಗಳೊಡನೆ ಕಾಲವನ್ನು ನಿರೀಕ್ಷಿಸುತ್ತ ನಿಂತುಕೊಂಡನು. ಆದರೆ, ಈಗಲೂ ರಂಗರಾಯರ ಬಂಧ ವಿಮೋಚನದ ಕಾರ್ಯವು ಒದಗಿದಂತೆ ತೋರಲಿಲ್ಲ! ಯಾಕಂದರೆ, ಜಗರಾಯನು ತನ್ನ ವಾಡಿಕೆಯ ನಿಯಮದಂತೆ ಎರಡುತಾಸು ಹೊತ್ತು ಏರಿ ಎದುರುಗೊಳ್ಳಲಿಕ್ಕೆ ಹೊರಡುವುದನ್ನು ಬಿಟ್ಟು, ರಂಗರಾಯರ ದುರ್ದೈವದಿಂದ ನಸುಕಿನಲ್ಲಿಯೇ ಹೊರಟನು. ಅದನ್ನು ನೋಡಿ ಓಬಲೇಶ್ವರನು ಚಿಂತೆಗೊಳಗಾದನು. ಜಗರಾಯನು ಇಷ್ಟು ಬೇಗನೆ ಹೊರಟಿರುವುದರಿಂದ, ನಾನು ಕಾವಲುಗಾರರನ್ನು ಕೊಂದು ರಾಜಕುಟುಂಬವನ್ನು ಬಂಧಮುಕ್ತಮಾಡಿ, ಕೋಟೆಯ ಬಾಗಿಲಿಗೆ ಅವರನ್ನು ಕರಕೊಂಡು ಬರುವುದರೊಳಗೆ ಎಚ್ಚಮನಾಯಕನು ಸೈನ್ಯದೊಡನೆ ಬಂದೊದಗುವನೋ ಇಲ್ಲವೋ, ಎಂಬ ಸಂಶಯವು ಅವನನ್ನು ಬಾಧಿಸಹತ್ತಿತು. ಆದರೂ

ಆತನು ದೈವದ ಮೇಲೆ ಭಾರಹಾಕಿ, ಅತ್ತ ಜಗರಾಯನು ಎದುರುಗೊಳ್ಳುವುದಕ್ಕೆ ಹೊರಟ ಕೂಡಲೆ, ತಾನು ಕೆಲವು ದಂಡಾಳುಗಳೊಡನೆ ಇತ್ತ ಸೆರೆಮನೆಯ ಕಡೆಗೆ ಸಾಗಿದನು. ಆಗ ಸೆರೆಮನೆಯ ಕಾವಲುಗಾರರಲ್ಲಿ ಕೆಲವರು ಪ್ರಾತರ್ವಿಧಿಗಳನ್ನು ತೀರಿಸಿಕೊಳ್ಳುತ್ತಿದ್ದರು; ಕೆಲವರು ಅದೇ ಹಾಸಿಗೆಯಿಂದ ಏಳುತ್ತಿದ್ದರು; ಕೆಲವರು ಇನ್ನೂ ಹಾಸಿಗೆ ಹಿಡಿದು ಮಲಗಿದ್ದರು. ಆಗ ಓಬಲೇಶ್ವರನು ತನ್ನ ಐವತ್ತು ಜನ ದಂಡಾಳುಗಳೊಡನೆ ಪಕ್ಕನೆ ಅವರ ಮೇಲೆ ಬಿದ್ದು, ಎಲ್ಲರನ್ನು ತುಂಡರಿಸಿ ಚಲ್ಲಿದನು. ಕಾರಾಗೃಹವೂ, ಅದರ ನೆರೆಯ ಪ್ರದೇಶವೂ ರಕ್ತಮಯವಾಯಿತು. ಈ ಭಯಂಕರ ಕೃತ್ಯವನ್ನು ನೋಡಿ ಸಾತ್ವಿಕನಾದ ರಂಗರಾಯನೂ, ಆತನ ಕುಟುಂಬದವರೂ ಹೆದರಿದರು. ತಮ್ಮ ಬಂಧವಿಮೋಚನಕ್ಕಾಗಿ ಇಷ್ಟು ಜನರ ಪ್ರಾಣಹಾನಿಯಾದ ಬಳಿಕ, ಹಿಂದಿನಂತೆ ತಮ್ಮ ಗತಿಯು ದುಃಖದಾಯಕವೇ ಆಗುವುದೆಂದು ಭಾವಿಸುತ್ತ ನಿರ್ವಾಹವಿಲ್ಲದೆ ಅವರು ಅಸಮಾಧಾನದಿಂದ ಓಬಲೇಶ್ವರನನ್ನು ಹಿಂಬಾಲಿಸಿದರು. ಅಷ್ಟರಲ್ಲಿ ಓಬಲನ ಉಳಿದ ೪೫೦ ಜನರು ಕೋಟೆಯ ಕಾವಲುಗಾರರನ್ನು ಕೊಂದು, ಕೋಟೆಯ ಬಾಗಿಲುಗಳನ್ನು ಸ್ವಾಧೀನಪಡಿಸಿಕೊಂಡರು. ಆದರೆ ದುರ್ದೈವಿಯಾದ ರಂಗರಾಯನ ಭಾವನೆಯು ಹ್ಯಾಗೆ ಸುಳ್ಳಾಗಬೇಕು? ಎಚ್ಚಮನಾಯಕನು ಹೊತ್ತಿಗೆ ಬಾರದ್ದರಿಂದ ಈವರೆಗೆ ಮಾಡಿದ ಸಾಹಸವು ಅನರ್ಥಕ್ಕೆ ಕಾರಣವಾಯಿತು. ಓಬಲನ ಈ ಪುಂಡಾಟಿಕೆಯು ಜಗರಾಯನ ಕಿವಿಗೆ ಮುಟ್ಟಲು, ಆತನು ಕೂಡಲೆ ಕೋಟೆಯ ಹಿಂದಿನ ಬಾಗಿಲಿನಿಂದ ಸೈನ್ಯದೊಡನೆ ಕೋಟೆಯೊಳಗೆ ಬಂದು ಓಬಲೇಶ್ವರನನ್ನೂ–ಆತನ ೫೦೦ ಜನ ದಂಡಾಳುಗಳನ್ನೂ ತುಂಡರಿಸಿ, ರಾಜಕುಟುಂಬವನ್ನು ಮತ್ತೆ ಕಠಿಣತರವಾದ ಪ್ರತಿ ಬಂಧದಲ್ಲಿಟ್ಟನು! ಹರಹರ! ರಂಗರಾಯನ ದುರ್ದೈವದ ಲೀಲೆಯು ಎಷ್ಟು ಅಗಾಧವಾದದ್ದಿರ ಬಹುದು!!

ಇತ್ತ ಎಚ್ಚಮನಾಯಕನು ಮೂರುತಾಸಿನ ಸುಮಾರಕ್ಕೆ ಸೈನ್ಯದೊಡನೆ ಕೋಟೆಯ ಬಾಗಿಲಿಗೆ ಬಂದನು; ಆದರೆ ದುರ್ದೈವದಿಂದ ವಿಪರೀತ ಪ್ರಸಂಗವು ಒದಗಿದ ಸುದ್ದಿಯನ್ನು ಕೇಳಿ, ಆತನು ಖಾನನೊಡನೆ ಕಣ್ಣೀರು ಸುರಿಸುತ್ತ ಕುಳಿತುಕೊಳ್ಳಬೇಕಾಯಿತು! ಕೋಟೆಯ ಬಾಗಿಲವರೆಗೆ ಬಂದು, ಹಾಗೆಯೇ ಹಿಂದಿರುಗಿ ಹೋಗುವುದು ಸರಿಯಲ್ಲೆಂದು ಖಾನನು ಹೇಳಲು, ನಾಯಕನು ತನ್ನ ಹತ್ತು ಸಾವಿರ ಸೈನ್ಯದಿಂದಲೇ ಪರಾಕ್ರಮದಿಂದ ಕೋಟೆಯನ್ನು ನುಗ್ಗಿ ರಾಜಕುಟುಂಬವನ್ನು ಬಂಧಮುಕ್ತ ಮಾಡಬೇಕೆಂದು ನಿಶ್ಚಯಿಸಿದನು. ಇದನ್ನು ಕೇಳಿ ಜಗರಾಯನು—''ನೀನು ಕೋಟೆಯನ್ನು ಪ್ರವೇಶಿಸಲು ಯತ್ನಿಸಿದರೆ, ರಾಜಕುಟುಂಬವನ್ನು ಸಂಹರಿಸುವೆನೆಂ''ದು ಹೇಳಿಕಳಿಸಿದನು; ಆದರಿಂದ ನಾಯಕನು ಆತಂಕಪಟ್ಟು ಸೈನ್ಯದೊಡನೆ ಹಿಂದಿರುಗಿ ತನ್ನ ದುರ್ಗಕ್ಕೆ ಹೋಗಬೇಕಾಯಿತು. ಇತ್ತ ಜಗರಾಯನು ರಂಗರಾಯನ ಮೇಲೆ ಬಹಳ ಸಿಟ್ಟಾದನು. ಎಲ್ಲ ಅನರ್ಥಗಳಿಗೂ ಇವನೇ ಕಾರಣನಾದ್ದರಿಂದ ಸಕುಟುಂಬವಾಗಿ ಇವನನ್ನು ಮೊದಲು ಸಂಹರಿಸಬೇಕೆಂದು ಹಿಂದುಮುಂದಿನ ವಿಚಾರವಿಲ್ಲದೆ, ತನ್ನ ತಮ್ಮನಾದ ಚಿನ್ನಓಬಲನನ್ನು ಆ ಕಾರ್ಯಕ್ಕೆ ನಿಯಮಿಸಿದನು. ಚಿನ್ನ ಓಬಲನನ್ನು ಪ್ರತ್ಯಕ್ಷ ಯಮನೆಂತಲೇ ಹೇಳತಕ್ಕದ್ದು! ಆ ವಜ್ರಹೃದಯದ ಮದಾಂಧನು, ಖಡ್ಗಪಾಣಿಯಾಗಿ ನಾಲ್ಕು ಜನ ಅಂಗರಕ್ಷಕರೊಡನೆ ಸೆರೆಮನೆಗೆ

ಸಾಗುತ್ತಿರಲು, ಸೇನಾಪತಿಯಾದ ಇರುಗನಾಯಕನು ಆತನನ್ನು ತಡೆದು, ಜಗರಾಯನ ಕಡೆಗೆ ನೋಡಿ—''ಹೀಗೆ ಮಾಡುವುದು ಹಿತಕರವಲ್ಲೆ''ಂದು ಹೇಳಿದನು. ಅದಕ್ಕೆ ಜಗರಾಯನು—ಸೇನಾಪತೀ, ನೀನು ಹೇಳುವುದೆಲ್ಲ ಸರಿ; ಆದರೆ ಈ ಕಲಿಯುಗದಲ್ಲಿ ಕಿವಿಯೊಳಗೆ ತುಲಸಿಯ ಪತ್ರವನ್ನಿಟ್ಟುಕೊಂಡರೆ, ಯಾವ ಕಾರ್ಯವೂ ಆಗುವುದಿಲ್ಲ. ರಾಜಕಾರ್ಯದಲ್ಲಿ ಮೋಸವೂ ಅನ್ಯಾಯದ ಕೊಲೆಯೂ ಬೇಕೆಬೇಕು. ಅರ್ಜುನನು ಯುದ್ಧದಲ್ಲಿ ಎದುರಾದ ಗುರು-ಹಿರಿಯರನ್ನೂ ಬಂಧು-ಬಳಗದವರನ್ನೂ ಕಟುಕನಂತೆ ಸಂಹರಿಸಿ ರಾಜ್ಯವನ್ನು ಗಳಿಸಲಿಲ್ಲವೇ? ಭೀಷ್ಮನನ್ನು ಸೋಲಿಸುವಾಗ ಅರ್ಜುನನು ಶಿಖಂಡಿಯನ್ನು ಮುಂದೆ ಮಾಡಿದನಲ್ಲ? ಆಗ ಅರ್ಜುನನ ಕ್ಷಾತ್ರಧರ್ಮವು ಎಲ್ಲಿ ಹೋಗಿತ್ತು? ದ್ರೋಣಾಚಾರ್ಯರ ಭಯಂಕರವಾದ ಯುದ್ಧವ್ಯಾಪಾರವನ್ನು ನಿಲ್ಲಿಸುವುದಕ್ಕೆ ಧರ್ಮರಾಜನು ''ಅಶ್ವತ್ಥಾಮನು ಸತ್ತನು'' ಎಂದು ಸುಳ್ಳು ಆಡಿದನಲ್ಲ? ಆಗ ಧರ್ಮರಾಜನ ಸಾಧುವೃತ್ತಿಯು ಎಲ್ಲಿ ಅಡಗಿತ್ತು? ಪಾಂಡವರಿಗೆ ಜಯವಾಗಬೇಕೆಂದು ಶ್ರೀ ಕೃಷ್ಣನು ಕರ್ಣ-ದುರ್ಯೋಧನರನ್ನು ಅನ್ಯಾಯದಿಂದ ವಂಚಿಸಿದ್ದನ್ನು ಅರಿಯೆಯಾ? ಮೊದಲು ರಾಜಕಾರಣವೇ ಕುಟಿಲನೀತಿಯುಳ್ಳದ್ದು, ಅದರಲ್ಲಿ ಕಲಿಯುಗ ದೊಳಗಂತು ಅದು ಅನೀತಿಯ ಪರಮಾವಧಿಯನ್ನು ಒಳಕೊಂಡಿರುತ್ತದೆಂದು ಹೇಳಬೇಕಾ ಗುವುದು! ಕಲಿಯುಗದಲ್ಲಿ ರಾಜ್ಯವನ್ನು ಸಂಪಾದಿಸುವವನು, ಆಪ್ತೇಷ್ಟರ, ಅದೇಕೆ? ಪ್ರತ್ಯಕ್ಷ ತಾಯಿ-ತಂದೆಗಳ ಹಾಗು ಹೊಟ್ಟೆಯ ಮಕ್ಕಳ ಹೆಣಗಳನ್ನು ಅನ್ಯಾಯವಾಗಿ ತುಳಿಯುತ್ತ ನಿಷ್ಕಾರಣವಾಗಿ ಆದ ಮನುಷ್ಯ ಸಂಹಾರದ ಯೋಗದಿಂದ ಹರಿಯುವ ರಕ್ತದ ಪ್ರವಾಹಗಳನ್ನು ದಾಟುತ್ತ ಗುರು-ಹಿರಿಯರಿಗೂ, ಅಪ್ತೇಷ್ಟರಿಗೂ ಕೊಟ್ಟ ವಚನಗಳನ್ನು ಅತಿಕ್ರಮಿಸುತ್ತ ಸತ್ಯ-ನ್ಯಾಯ-ನೀತಿಗಳನ್ನು ಬದಿಗೊತ್ತಿ ತನ್ನ ದುಷ್ಕರ್ಮದ ಯೋಗದಿಂದುಂಟಾದ ಪಾಪರಾಶಿಯ ಮಟ್ಟೆಯನ್ನು ಹೊತ್ತುಕೊಂಡು, ಹಿತಾಹಿತದ ಪ್ರಜ್ಞೆಯಿಲ್ಲದೆ ರತ್ನಖಚಿತ ಸಿಂಹಾಸನವೇರುವ ಪ್ರಸಂಗ ಬಂದರೂ ಹಿಂಜರಿಯಬಾರದು. ಅಂತೇ ಕಲಿಯುಗದಲ್ಲಿ ''ಪೃಥ್ವಿಯು ಬಲಿಷ್ಠರದೆ''ಂಬ ಮಾತು ಸಿದ್ಧವಾಗಿರುತ್ತದೆ; ಬಲಿಷ್ಠನಾದವನು ದುರ್ಬಲರನ್ನು ನಾಶಗೊಳಿಸಿಯೇ ಅರಸೊತ್ತಿಗೆಯನ್ನು ಸಂಪಾದಿಸಬೇಕಾಗುತ್ತದೆ; ಆದ್ದರಿಂದ, ಸೇನಾಪತೀ, ರಾಜಕುಟುಂಬದ ಕೊಲೆಗೆ ಈಗ ನೀನು ಅಡ್ಡಾಗಬೇಡ. ಎಲೈ ಚಿನ್ನ ಓಬಲಾ ನಡಿ ಬೇಗನೆ; ಯಾವಾಗಾದರೂ ಮಾಡಬೇಕಾಗಿದ್ದ ಕೆಲಸವನ್ನು ಒಮ್ಮೆ ತಟ್ಟನೆ ಮಾಡಿಬಿಡು! ಆದರೆ ಸೇನಾಪತಿಯು ಹೇಳುವವನಾದ್ದರಿಂದ ಇಂದಿನ ಕೆಲಸ ನಾಳೆ ಮುಂಜಾವಿಗೆ ಹಾಕು.

ಮರುದಿನ ಬೆಳಗಾಯಿತು. ರಂಗರಾಯನು ತನ್ನ ದುರವಸ್ಥೆಯನ್ನು ಕುರಿತು ಚಿಂತಿಸುತ್ತ ಯಾವ ಪಾಪವನ್ನೂ ಅರಿಯದೆ ಸೆರೆಮನೆಯಲ್ಲಿ ಒಂದು ಚಾಪೆಯಮೇಲೆ ಕುಳಿತಿದ್ದನು! ತಾಸು ಹೊತ್ತು ಏರಿದ್ದರೂ ಆತನು ಕುಳಿತಿದ್ದ ಸ್ಥಳದ ಕಸ ತೆಗೆದಿದ್ದಿಲ್ಲ. ಅರಸನಿಂದ ಸ್ವಲ್ಪ ಅಂತರದ ಮೇಲೆ ರಾಣಿಯು ಕಸದಲ್ಲಿಯೇ ನೆಲದ ಮೇಲೆ ಕುಳಿತಿದ್ದಳು. ಹಿರಿಯಮಗನಾದ ವೀರನರಸಿಂಗನು ತಾಯಿಯ ಬಳಿಯಲ್ಲಿ ಕುಳಿತು ಮೆಲ್ಲಗೆ ಏನೋ ಮಾತಾಡುತ್ತಿದ್ದನು. ಅರಸನ ನಡುವಿನ ಮಗಳಾದ ಮುದ್ದುರಂಗಮ್ಮನೂ, ಕಿರಿಯ ಮಗನಾದ ದೇವರಾಯನೂ ಅರಸನ

ಚಿಕ್ಕಮಗುವಾದ ನಾಗಲಾಂಬಿಕೆಯನ್ನು ಆಡಿಸುತ್ತ ಅವರೆಲ್ಲರ ನಡುವೆ ಕುಳಿತಿದ್ದರು. ವೀರನರಸಿಂಗನ ಹೆಂಡತಿಯಾದ ಕುಪ್ಪಮ್ಮನು ಒಳಗೆ ಒಬ್ಬಳೇ ಚಿಂತಿಸುತ್ತ ಕುಳಿತಿದ್ದಳು. ನಿನ್ನೆ ಒದಗಿದ ಭಯಂಕರ ಪ್ರಸಂಗದ ಸ್ಮರಣದಿಂದ ನಾಗಲಾಂಬಿಕೆಯ ಹೊರತು ಉಳಿದವರಿಗೆ ರಾತ್ರಿ ನಿದ್ರೆ ಬಂದಿದ್ದಿಲ್ಲ. ಹೆಚ್ಚಿದ ಚಿಂತೆಯಿಂದ ಅವರಿಗೆ ಯಾವುದೂ ಬೇಡಾಗಿತ್ತು; ಆದರೆ, ಚಪಲೆಯಾದ ನಮ್ಮ ನಾಗಲಾಂಬಿಕೆಯು ಅಲ್ಪಕಾಲವೇ ಆಗಲೊಲ್ಲದೇಕೆ, ಆ ರಾಜಕುಟುಂಬದ ಚಿಂತೆಯನ್ನು ದೂರಮಾಡಿ ಆನಂದವನ್ನುಂಟು ಮಾಡಿದಳು. ಆ ಕೂಸಿಗೆ ಅದೇ ಎರಡು ತುಂಬಿ ಮೂರರಲ್ಲಿ ಬಿದ್ದದ್ದರಿಂದ ನಗುವಾಗ ಕಾಣುವ ಆ ಕೂಸಿನ ಸುಂದರವಾದ ಮೊಳಕೆಯ ಹಲ್ಲುಗಳೂ, ಕಿವಿಗೆ ಇಂಪಾಗಿ ತೋರುವ ಅದರ ಅಸಂಬದ್ಧವಾದ ಮುದ್ದುಮಾತುಗಳೂ, ಸುಳಿದಾಡುವ ಮುಂಗು ರುಳುಗಳಿಂದ ಸುಮನೋಹರವಾಗಿ ಒಪ್ಪುವ ಅದರ ಸುಂದರ ಮುಖವೂ ಆ ರಾಜಕುಟುಂಬವನ್ನು ಸಂತೋಷಪಡಿಸುತ್ತಿದ್ದವು. ಆ ಚಿಕ್ಕಮಗುವು ದಿಗ್ಗನೆ ಎದ್ದು ಅಕ್ಕನ ಬಳಿಯಿಂದ ತಾಯಿಯ ಬಳಿಗೂ, ತಾಯಿಯ ಬಳಿಯಿಂದ ತಂದೆಯ ಬಳಿಗೂ, ತಂದೆಯ ಬಳಿಯಿಂದ ಅಣ್ಣನ ಬಳಿಗೂ ಓಡುತ್ತ ಹೋಗಿ ಅವರನ್ನು ಅಪ್ಪಿಕೊಳ್ಳುವಾಗ, ಅವರ ಚಿಂತೆಯೆಲ್ಲ ನಷ್ಟವಾಗಿ, ರೋಮಾಂಚನಗಳೆದ್ದು ಕ್ಷಣಮಾತ್ರ ಅವರ ಸ್ವರ್ಗಸುಖಾನುಭವದಿಂದ ಮತ್ತರಾದರು! ಇಂಥ ಅಪತ್ಯಾಲಿಂಗನ ಸುಖವನ್ನು ಪಡೆದ ತಾಯಿ ತಂದೆಗಳೇ ಧನ್ಯರು! ಅಪತ್ಯವು, ಸಂಸಾರತಾಪವನ್ನು ಶಾಂತಗೊಳಿಸುವ ಶೀತಲಜಲವೂ, ಉದ್ವೇಗಾತಿಶಯದಿಂದ ಶಾಂತವಾದ ಮನಸ್ಸನ್ನು ಹುರಪುಗೊಳಿಸುವ ಉತ್ತೇಜಕ ಪೇಯವೂ, ದಂಪತಿಗಳ ಕಲಹವನ್ನು ಕ್ಷಣದಲ್ಲಿ ಅಳುಕಿಸಿ, ಅವರನ್ನು ಏಕಜೀವವಾಗುವಂತೆ ಗಟ್ಟಿಯಾಗಿ ಕಟ್ಟುವ ಪ್ರೇಮರಜ್ಜುವೂ ಆಗಿರುವುದು. ಪ್ರಿಯವಾಚಕರೇ, ಅಂತೇ, ಸಾಂಸಾರಿಕ–ಸುಖ–ರಾಶಿಗೆ ಅಪತ್ಯಪ್ರಾಪ್ತಿಯು ಶಿಖರಪ್ರಾಯ ವಾಗಿರುವುದೆಂದು ಹೇಳುವುದುಂಟು! ಈ ಜಗತ್ತಿನಲ್ಲಿ ಎಷ್ಟೋ ಜನರ ಪರ್ವತಪ್ರಾಯವಾದ ಸಾಂಸಾರಿಕ ಸುಖರಾಶಿಗಳು, ಈ ಶಿಖರವಿಲ್ಲದ್ದರಿಂದ ಭಣಗುಟ್ಟಿ ಔದಾಸೀನ್ಯವನ್ನು ತೋರ್ಪಡಿ ಸುವುವು! ನಮ್ಮ ರಂಗರಾಯರ ಕುಟುಂಬದ ಸಾಂಸಾರಿಕ ಸುಖರಾಶಿಯೆಲ್ಲ ಅಸ್ತವಾಗಿ ಹೋಗಿದ್ದರೂ, ಅದರ ಸುಂದರ ಕಳಸಗಳನ್ನು ನೋಡಿ ಆ ಕುಟುಂಬಕ್ಕೆ ಕ್ಷಣಿಕವೇ ಆಗಲೊಲ್ಲದೇಕೆ, ಮೇಲೆ ಹೇಳಿದಂತೆ ಸ್ವರ್ಗಸುಖವು ಪ್ರಾಪ್ತವಾಗಿತ್ತು.

ಈ ಮೇರೆಗೆ ರಾಜ್ಯ ಕುಟುಂಬವು ನಾಗಲಾಂಬಿಕೆಯ ಬಾಲಲೀಲೆಗಳಿಂದ ಆನಂದ ಪರವಶವಾಗಿರಲು, ಆ ಕೂಸು ಆನಂದಾತಿಶಯದಿಂದ ಎದ್ದುನಿಂತು ಅಟ್ಟಹಾಸದೊಡನೆ ಕುಣಿಯಹತ್ತಿತು. ರಾಣಿಯು ಕೂಸಿನ ಈ ಮನೋಹರ ಕುಣಿತವನ್ನು ನೋಡುವಾಗ ಆಕೆಯ ಮನಸ್ಸಿನಲ್ಲಿ, ಕೂಸಿನ ಕಾಲೊಳಗೆ ಒಂದಾದರೂ ಒಡವೆಯಿಲ್ಲೆಂಬ ಅಲ್ಪವಾದ ದುಃಖವು ಹುಟ್ಟಲು, ಆ ಅಲ್ಪ ದುಃಖವೇ ದುರ್ದೈವದಿಂದ ಪರ್ವತಾಕಾರವನ್ನು ಧರಿಸಿ ನಿಂತಂತೆ, ಖಡ್ಗಪಾಣಿಯಾದ ಚಿನ್ನಓಬಲನು ಅವರೆದುರಿಗೆ ನಿಂತುಕೊಂಡನು! ಆಕಸ್ಮಾತ್ತಾಗಿ ರಾಹುವು ನುಂಗುವುದರಿಂದ ಚಂದ್ರನು ಕಾಣದಂತಾಗಿ ಲೋಕದ ಆನಂದವು ಅಸ್ತವಾಗುವಂತೆ, ಚಿನ್ನಓಬಲನು ಬಂದದ್ದರಿಂದ ನಾಗಲಾಂಬಿಕೆಯು ಚಟ್ಟನೆ ಚೀರಿ ಓಡಿಹೋಗಿ ತಾಯಿಯನ್ನು

ಅಪ್ಪಿಕೊಳ್ಳಲು, ಆ ರಾಜಕುಟುಂಬದ ಆನಂದವು ಅಸ್ತವಾಯಿತು! ರಾಜಪತ್ನಿಯು ನಡಗುತ್ತ ತನ್ನ ಮಕ್ಕಳನ್ನು ಕರಕೊಂಡು ಒಳಗೆ ಹೋದಳು. ರಂಗರಾಯನು ಗಾಬರಿಯಾಗಿ ಚಿನ್ನಓಬಲನಿಗೆ- ವೀರನೇ, ಇದೇನು ಅಕಾಲದಲ್ಲಿ ನಿನ್ನ ಬರುವಿಕೆಯು? ಈಗ ಹಿರಿದ ಕತ್ತಿಯೇಕೆ? ನಮ್ಮಿಂದ ಹಲವು ತೊಂದರೆಗಳಾಗುತ್ತವೆಂದು ತಿಳಿದು, ನೀನು ನಮ್ಮನ್ನು ಸಂಹರಿಸ ಬೇಕೆಂದು ಬಂದಿದ್ದರೆ, ಓಬಲರಾಯಾ, ನಿಶ್ಚಯವಾಗಿ ಹೇಳುತ್ತೇನೆ, ನಾನು ಯಾವ ಪಾಪವನ್ನೂ ಅರಿತವನಲ್ಲ; ಸುಮ್ಮನೆ ನಮ್ಮನ್ನು ಸಂಹರಿಸಬೇಡ ಕಂಡೆಯಾ! ದಯಮಾಡಿ ಕತ್ತಿಯನ್ನು ಒರೆಗಾಣಿಸಿ, ಬಂದ ಕಾರಣವನ್ನು ಸಮಾಧಾನದಿಂದ ಹೇಳು, ಅನ್ನಲು, ಕ್ರೂರನಾದ ಚಿನ್ನಓಬಲನು-ರಂಗರಾಯಾ, ನಿನ್ನ ಸಂಗಡ ನಾನು ಮಾತಾಡಲು ಇಚ್ಛಿಸುವುದಿಲ್ಲ, ಸಕುಟುಂಬ ವಾಗಿ ನಿನ್ನನ್ನು ಸಂಹರಿಸಬೇಕೆಂದು ರಾಜಾಜ್ಞೆಯಾಗಿದೆ. ಬೇಗನೆ ನೀನು ಆತ್ಮಹತ್ಯೆ ಮಾಡಿಕೋ; ಇಲ್ಲದಿದ್ದರೆ, ನಾನೇ ನಿಮ್ಮನ್ನು ಕೈಮುಟ್ಟಿ ಕೊಲ್ಲಬೇಕಾಗುವುದು, ಎಂದು ಹೇಳಿದನು. ಓಬಲನ ಈ ಕಠೋರ ಭಾಷಣದಿಂದ ರಂಗರಾಯನ ಎದೆಗೆ ವಜ್ರಾಘಾತವಾದಂತಾಗಿ ಆತನು ನೆಲಕ್ಕೆ ಕುಸಿಬಿದ್ದನು! ಆತನು ವಿನಯದಿಂದ ಚಿನ್ನಓಬಲನಿಗೆ ಓಬಲರಾಯಾ, ನನಗೆ ಅರಸೊತ್ತಿಗೆಯು ಸರ್ವಥಾ ಬೇಡ, ನನ್ನ ಮಕ್ಕಳಿಗೂ ಬೇಡ! ನಾವು ಎಲ್ಲಿಯಾದರೂ ಬಡವರಾಗಿರುತ್ತೇವೆ. ಮೊದಲೇ ಈ ಕೆಟ್ಟ ಪಟ್ಟಕ್ಕೆ ಹೇಸಿಕೊಂಡಿದ್ದ ನಾನು, ಈ ಸೌಭಾಗ್ಯವನ್ನುಂಡಬಳಿಕ ತಿರುಗಿ ಪಟ್ಟವನ್ನು ಬಯಸಬಹುದೇ, ನೀನೇ, ಹೇಳು! ಸ್ವಂತಪರಾಕ್ರಮದಿಂದ ಅರಸುತನವನ್ನು ಪಡೆದ ತೇಜಸ್ವಿಗಳಿಗೆ ಅರಸೊತ್ತಿಗೆಯು ದಕ್ಕಿದರೆ ದಕ್ಕಬೇಕಲ್ಲದೆ, ನಮ್ಮಂಥ ಅನಾಮದೇಹಿಗಳಿಗೆ ಅದನ್ನು ಜುಲುಮೆಯಿಂದ ಕೊರಳಲ್ಲಿ ಕಟ್ಟಿದರೆ ಹ್ಯಾಗೆ ದಕ್ಕೀತು! ಇಗೋ, ನಾನು ನಿನಗೆ ಶರಣು ಹೊಕ್ಕಿದ್ದೇನೆ, ಹ್ಯಾಗಾದರೂ ಮಾಡಿ ನಿಮ್ಮ ಅಣ್ಣನಾದ ಜಗರಾಯನಿಗೆ ಏನಾದರೂ ಹೇಳಿ ನಮಗಿಷ್ಟು ಜೀವದಾನವನ್ನು ಕೊಡಿಸು, ಎಂದು ಬೇಡಿಕೊಳ್ಳಲು ಓಬಲನು—ಛೀ, ನೃಪಾಧಮನೇ, ಹೆಂಗಸಿನಂತೆ ಹೀಗೆ ಬೇಡಿಕೊಳ್ಳುವುದಕ್ಕೆ ನಿನಗೆ ನಾಚಿಕೆ ಬರುವುದಿಲ್ಲವೇ? ನಿನ್ನಂಥ ಅಧಮನು ಬದುಕಿ ಇದ್ದು ಕ್ಷತ್ರಿಯ ಕುಲಕ್ಕೆ ಕಲಂಕವನ್ನುಂಟುಮಾಡುವುದಕ್ಕಿಂತ ಆತ್ಮಹತ್ಯೆಮಾಡಿಕೊಳ್ಳುವುದು ಯೋಗ್ಯವು!

ದುಷ್ಟನ ಈ ಮಾತುಗಳನ್ನು ಕೇಳಿ ವೀರನರಸಿಂಗನು ತಂದೆಗೆ-ತಾತಾ, ಈ ಅಧಮನಿಗೆ ಪ್ರಾರ್ಥಿಸುವುದೇಕೆ? ನನ್ನ ಸಲುವಾಗಿ ನೀವು ವ್ಯಸನಬಡುವ ಕಾರಣವಿಲ್ಲ, ನನ್ನೊಡನೆ ದ್ವಂದ್ವಯುದ್ಧ ಮಾಡಲಿಕ್ಕೆ ಧೈರ್ಯವಿದ್ದರೆ ಈ ಚಿನ್ನಓಬಲನು ಬರಲಿ; ಅದಕ್ಕೆ ಹೇಡಿತನದಿಂದ ಒಪ್ಪಿಕೊಳ್ಳದೆ, ಪರಾಧೀನರೂ-ಶಸ್ತ್ರಹೀನರೂ ಆದ ನಮಗೆ, ಆತ್ಮಹತ್ಯವನ್ನೇ ಮಾಡಿಕೊಳ್ಳೆಂದು ಒತ್ತಾಯಮಾಡಿದರೆ, ನಾನು ನಿರ್ಭಯದಿಂದ ಆತ್ಮಹತ್ಯೆ ಮಾಡಿಕೊಳ್ಳಲಿಕ್ಕೆ ಸಿದ್ಧನಿದ್ದೇನೆ. ಹುಟ್ಟಿದ ಪ್ರಾಣಿಗಳಿಗೆ ಮರಣವು ಸಿದ್ಧವಾದದ್ದು, ಇಷ್ಟು ಹೊತ್ತಿಗೆ ಈ ವಿಜಯನಗರದ ಸಿಂಹಾಸನದ ಕಾಲದಲ್ಲಿ ಎಷ್ಟೋ ರಾಜಪುರುಷರ ಕೊಲೆಯಾಗಿರುವುದಲ್ಲದೆ ಲಕ್ಷಾಂತರ ದಂಡಾಳುಗಳ ನಾಶವೂ, ನಿರಪರಾಧಿಗಳಾದ ಅನಂತ ಪ್ರಜೆಗಳ ನಾಶವೂ ಆಗಿರುವುದು. ಅಷ್ಟು ದೂರವೇಕೆ, ನಮ್ಮ ಕಾಲದಲ್ಲಿ ನಿನ್ನೆಯೇ ಸಾವಿರಾರು ಜನರ ಕೊಲೆಯಾಗಿರುವುದು; ಅಂದಬಳಿಕ ನಮ್ಮ

ಪಾಡೇನು? ಈ ನೀಚನಿಗೆ ಹೇಳಿಕೊಳ್ಳುವುದೇಕೆ? ಎಲಾ ನೀಚಾ, ಚಿನ್ನ ಓಬಲಾ, ಮರಣಕ್ಕೆ ಸಿದ್ಧರಾಗಿ ನಿಂತವರಿಗೆ ನೀನು ಕಣ್ಣು ಕಿಸಿದು ಮಾಡುವುದೇನು. ಇಗೋ ನೋಡು, ಮರಣಕ್ಕೆ ಸಿದ್ಧನಾಗಿದ್ದೇನೆ, ಸಂಹರಿಸುವ ಹಾಗಿದ್ದರೆ ಸಂಹರಿಸು ಬಾ, ಎಂದು ರಾಜಪುತ್ರನು ಓಬಲನ ಮುಂದೆ ಎದೆ ಹಾಯಿಸಿ ನಿಂತುಕೊಳ್ಳಲು, ರಂಗರಾಯನು–ತಮ್ಮಾ ನಿಲ್ಲು ಪುತ್ರಶೋಕದ ಅನುಭವವನ್ನು ಈ ದುರ್ದೈವಿಗೆ ಉಂಟುಮಾಡಬೇಡ. ಎಲಾ, ಓಬಲಾ, ತಾ ಖಡ್ಗವನ್ನು, ಎಂದು ಕೈಚಾಚಲು, ಓಬಲನು ಖಡ್ಗವನ್ನು ಕೊಟ್ಟನು. ಅಷ್ಟರಲ್ಲಿ ರಾಜಪತ್ನಿಯು ಹೊರಗೆ ಬಂದು ಪತಿಯ ಚರಣಕ್ಕೆರಗಿ–ಪ್ರಾಣ ಪ್ರಿಯರೇ, ನನಗೆ ವೈಧವ್ಯದ ಕಲಂಕವು ಹತ್ತದಂತೆ ಅನುಗ್ರಹಿಸಿರಿ! ತಂಗೀ, ಕುಪ್ಪಮ್ಮಾ ಕರೆದುಕೊಳ್ಳವ್ವಾ ಈ ನಾಗಲಾಂಬಿಕೆಯನ್ನು ನೋಡು, ಪತಿಯ ಚರಣಕಮಲಕ್ಕೆ ನನ್ನ ಶಿರಃಕಮಲವನ್ನು ಏರಿಸಿ ಧನ್ಯಳಾಗಬೇಕೆನ್ನುವ ಅವಸರದಲ್ಲಿ ಈ ಕಂದಮ್ಮನು ಹ್ಯಾಗೆ ನನ್ನನ್ನು ಬಿಗಿಯಾಗಿ ಅಪ್ಪಿಕೊಂಡಿದ್ದಾಳೆ! ಹಾಯ್ ಹಾಯ್! ನಾಗಲಾಂಬಿಕೇ, ಇಂಥ ಅನರ್ಥವು ಒದಗತಕ್ಕದ್ದಿರುವುದರಿಂದಲೇ, ಇಂದು ನೀನು, ಎಂದೂ ತೋರಿಸದ ಬಾಲಲೀಲೆಯಿಂದ ನಮ್ಮೆಲ್ಲರಿಗೆ ವಿಚಿತ್ರವಾದ ಆನಂದವನ್ನು ಉಂಟುಮಾಡಿದೆ ಯಲ್ಲವೇ? ಕಂದಾ, ಹೋಗವ್ವಾ ಅತ್ತಿಗೆಯ ಹತ್ತರ, ಎಂದು, ಜುಲುಮೆಯಿಂದ ಸೊಸೆಯ ಕೈಯಲ್ಲಿ ಕೊಡಹೋಗಲು, ನಾಗಲಾಂಬಿಕೆಯು ತಾಯಿಯನ್ನು ಗಟ್ಟಿಯಾಗಿ ಅವಚಿಕೊಂಡು ದೊಡ್ಡದನಿಯಿಂದ ಅಳಹತ್ತಿದಳು! ಅತ್ತ ಮುದ್ದುರಂಗಮ್ಮನು ಗಾಬರಿಯಾಗಿ ಬೆದರಿದ ಚಿಗರೆಯ ಮರಿಯಂತೆ ತನ್ನ ದೊಡ್ಡ ಕಣ್ಣುಗಳನ್ನು ತಿರುಗಿಸುತ್ತ–ಅವ್ವನ ಹತ್ತರ ಹೋಗಲೋ, ಅಪ್ಪನ ಹತ್ತರ ಹೋಗಲೋ, ಅಣ್ಣನ ಹತ್ತರ ಹೋಗಲೋ, ಅತ್ತಿಗೆಯ ಹತ್ತರ ಹೋಗಲೋ, ಎಂದು ಯೋಚಿಸುತ್ತಿದ್ದಳು. ನೋಡನೋಡುತ್ತ ಆ ಬಾಲೆಯ ಕಣ್ಣುಗಳು ನೀರಿನಿಂದ ತುಂಬಲು, ಆಕೆಯು ಅಂಜಿ ಓಡುತ್ತ ತಂದೆಯನ್ನು ಗಟ್ಟಿಯಾಗಿ ಅಪ್ಪಿಕೊಂಡು ಬಿಕ್ಕಿ ಬಿಕ್ಕಿ ಅಳಹತ್ತಿದಳು! ದೇವರಾಯನು ಅಳುತ್ತ ಅಣ್ಣನ ಕೊರಳಿಗೆ ಬಿದ್ದನು. ಹೀಗೆ ರಾಜನೂ–ರಾಜಪತ್ನಿಯೂ –ರಾಜಪುತ್ರನೂ ಅಳುತ್ತಿರುವ ಒಂದೊಂದು ಕೂಸುಗಳನ್ನು ಎತ್ತಿಕೊಂಡು ಚುಂಬಿಸಿ ಕಣ್ಣೀರು ಸುರಿಸಹತ್ತಿದರು. ಅದನ್ನು ನೋಡಿ ಕುಪ್ಪಮ್ಮನ ಕಣ್ಣೊಳಗಿಂದ ಬಳಬಳ ನೀರು ಸುರಿದವು! ಅಷ್ಟರಲ್ಲಿ ರಂಗರಾಯನು ಎಚ್ಚತ್ತು ಈ ನೀಚ ಓಬಲನ ಮುಂದೆ ಹೀಗೆ ಅಳುತ್ತನಿಲ್ಲುವುದು ಯೋಗ್ಯವಲ್ಲೆಂದು ತಿಳಿದು, ಮಗನ ಕೈಯಲ್ಲಿ ಮುದ್ದುರಂಗಮ್ಮನನ್ನು ಜುಲುಮೆಯಿಂದ ಕೊಟ್ಟನು. ಅತ್ತ ರಾಜಪತ್ನಿಯು ಪತಿಯ ಆಜ್ಞೆಯಂತೆ ನಾಗಲಾಂಬಿಕೆಯನ್ನು ಸೊಸೆಯ ಕೈಯಲ್ಲಿ ಕೊಟ್ಟು, ಕೈಜೋಡಿಸಿಕೊಂಡು ಪತಿಯಮುಂದೆ ನಿಂತುಕೊಂಡಳು. ಆಗ ರಂಗರಾಯನು–ಪ್ರಿಯೇ, ಅಗ್ನಿ ಸಾಕ್ಷಿಯಿಂದ ನನ್ನ ಕೈಯನ್ನು ಹಿಡಿದ ನೀನು, ಸತೀಧರ್ಮವನ್ನು ತಪ್ಪದೆ, ಅರ್ಧಾಂಗಿಯೆಂಬ ಹೆಸರಿಗೆ ಒಪ್ಪುವಂತೆ ನಡೆದು ನನಗೆ ಪರಮ ಸೌಖ್ಯವನ್ನು ಕೊಟ್ಟೆ, ರಾಜಪತ್ನಿಯೆನಿಸಿದ ನೀನು, ನನ್ನ ಸಹವಾಸದಿಂದ ಕಡೆತನಕ ಕಷ್ಟವನ್ನೇ ಅನುಭವಿಸಬೇಕಾಯಿತಲ್ಲದೆ, ಈಗ ನನ್ನ ಕೈಯಲ್ಲಿರುವ ಈ ಖಡ್ಗಕ್ಕೆ ತುತ್ತಾಗಬೇಕಾಗಿದೆ, ಹರಹರ! ರಂಗರಾಯಾ, ಏನು ನಿನ್ನ ದುರ್ದೈವವಿದು! ಎಂಥ ಹತಭಾಗ್ಯನು ನೀನು!! ಸುಖಪಟ್ಟೇನೆಂಬ ಆಶೆಯಿಂದ, ಹುಟ್ಟಿದ ಮನೆಯನ್ನು ಬಿಟ್ಟು

ತನುಮನೋಧನಗಳಿಂದ ನಿನ್ನನ್ನು ಆಶ್ರಯಿಸಿರುವ ಈ ಸತೀಮಣಿಯನ್ನು, ಕಟುಕನು ತಾನು ಸಾಕಿದ ಗಿಳಿಯ ಗೋಣು ಮುರಿಯುವಂತೆ ಖಡ್ಗದಿಂದ ತುಂಡರಿಸುವೆಯಾ! ಹಾ! ಪ್ರಿಯೇ, ಬಾ ಮುಂದಕ್ಕೆ ಸ್ಮರಿಸು ದೇವರನ್ನು, ಅನ್ನಲು ರಾಜಪತ್ನಿಯು–ಪ್ರಿಯರೇ, ಪ್ರತ್ಯಕ್ಷ ಮೂರ್ತಿಮಂತ ದೇವರು ಕೈಯ್ಯಲ್ಲಿ ಖಡ್ಗವನ್ನು ಹಿಡಕೊಂಡು ಸ್ವರ್ಗವನ್ನು ಪ್ರವೇಶಿಸು ಬಾ, ಎಂದು ಕರೆಯುತ್ತ ಎದುರಿಗೆ ನಿಂತಿರಲು, ಇನ್ನೆಲ್ಲಿಯ ದೇವರನ್ನು ತರಲಿ? ಇಗೊಳ್ಳಿರಿ, ಇವೇ ನನ್ನ ಆರಾಧ್ಯ ದೇವತೆಯ ಚರಣಗಳು! ಈ ಚರಣಕಮಲ ಗಳು ನನ್ನ ಶಿರಃಕಮಲದಿಂದ ಅಲಂಕೃತವಾಗು ವಂತೆ ಮಾಡಿರಿ! ಸತಿಗೆ ಪತಿಯ ಚರಣಗಳು ಕಾಶಿಗಿಂತ ದೊಡ್ಡ ಕ್ಷೇತ್ರವಾಗಿರುವುದರಿಂದ, ಅಲ್ಲಿ ದೇಹವನ್ನು ನೀಗುವ ನಾನು ಪರಮಧನ್ಯಳು– ಪರಮ ಭಾಗ್ಯವಂತಳು–ಪರಮ ಪುಣ್ಯವತಿಯು, ಎಂದು ನುಡಿದು ಪುನಃ ಪುನಃ ಪತಿಯ ಚರಣಗಳಿಗೆ ಎರಗಿ ನಿಂತುಕೊಳ್ಳಲು, ರಂಗರಾಯನು ಒಂದೇ ಕಡತದಿಂದ ಹೆಂಡತಿಯ ಶಿರಸ್ಸನ್ನು ಭೂಮಿಗಿಳಿಸಿದನು.

ತಾಯಿಯ ಈ ಅವಸ್ಥೆಯನ್ನು ನೋಡಿ ಮುದ್ದು ರಂಗಮ್ಮನು ಬಿರಿಬಿರಿ ಕಣ್ಣುಬಿಡುತ್ತ ಅಂಜಿಕೆಯಿಂದ ಗದಗದ ನಡಗುತ್ತ ತಂದೆಯನ್ನು ನೋಡುತ್ತಿರಲು, ಹೆಂಡತಿಯ ರಕ್ತದಿಂದ ಸ್ನಾನಮಾಡಿದ್ದ ರಂಗರಾಜನು ಆವೇಶಗೊಂಡು ಆಕೆಯನ್ನು ಕೆಳಗೆ ಇಳಿಸೆಂದು ಮಗನಿಗೆ ಹೇಳಿದನು. ಆಗ ರಾಜಪುತ್ರನು ಬೋರೆಂದು ಅಳುತ್ತ ತಂಗಿಯನ್ನು ಜುಲುಮೆಯಿಂದ ಇಳಿಸಿ ಹಿಂದಕ್ಕೆ ಸರಿಯಲು, ರಂಗರಾಯನ ಕ್ರೂರವಾದ ಖಡ್ಗವು "ಅಪ್ಪಾ, ಬೇಡ ಬೇಡೆ"ಂದು ಕೈ ಮರೆಮಾಡಿ ಕೂಗುವ ಆ ಕೂಸಿನ ರುಂಡವನ್ನು ನಿರಾಯಾಸದಿಂದ ನೆಲಕ್ಕೆ ಕೆಡವಿತು!! ಕೂಡಲೆ ದೇವರಾಯನ ರುಂಡವೂ ಅರಸನ ಕೈ ಖಡ್ಗದಿಂದ ನೆಲಕ್ಕೆ ಬಿತ್ತು! ಅರಸನು ಎಷ್ಟು ಆವೇಶ ಗೊಂಡಿದ್ದರೂ, ಎಳೆ ಮಗುವಾದ ನಾಗಲಾಂಬಿಕೆಯನ್ನು ಕೊಲ್ಲುವುದು ಮಾತ್ರ ಆತನಿಂದಾಗಲಿಲ್ಲ. ಆ ಅಜ್ಞಾನಿಯಾದ ಕೂಸು, ತನ್ನ ತಾಯಿಯ ಹಾಗು ತನ್ನ ಅಕ್ಕನ, ಮತ್ತು ಚಿಕ್ಕ ಅಣ್ಣನ ಕೊಲೆಯನ್ನು ನೋಡಿ ರಾವುಹೊಡೆದು, ಏನೂ ತಿಳಿಯದೆ ಕಣ್ಣು ಬಿಡುತ್ತ ಅತ್ತಿಗೆಯ ಬಗಲಲ್ಲಿ ಕುಳಿತುಕೊಂಡಿತ್ತು ಆಗ ರಂಗರಾಯನು ತನ್ನ ಮಗನಿಗೆ–ನರಸಿಂಗಾ, ಏನು ನೋಡುವೆ? ನಿನ್ನ ಹೆಂಡತಿಯನ್ನು ಸಂಹರಿಸು, ಎಂದು ಆಜ್ಞಾಪಿಸಲು, ಕುಪ್ಪಮ್ಮನು ನಾಗಲಾಂಬಿಕೆ ಯನ್ನು ಕೆಳಗೆ ರಕ್ತದ ಮಡುವಿನಲ್ಲಿ ಇಳಿಸಿ, ಭಯದಿಂದ ಗಡಗಡನೆ ನಡುಗುತ್ತ ತನ್ನ ಪತಿಯ ಚರಣಕ್ಕೆರಗಿ ಕೈಜೋಡಿಸಿ ನಿಂತುಕೊಳ್ಳುವಷ್ಟರಲ್ಲಿಯೇ, ನರಸಿಂಗನ ಖಡ್ಗವು, ಆಕೆಯ ರುಂಡವನ್ನು ದಿಂಡದಿಂದ ಬೇರೆಮಾಡಿತು! ಈ ಮೇರೆಗೆ ಜಗರಾಯನ ಕಾರಾಗೃಹದ ಕಠಿಣವಾದ ದುಃಖ ದಿಂದ ರಾಜಪರಿವಾರವು ಮುಕ್ತವಾಗಲು, ಆಗ ರಂಗರಾಯನು ಓಬಲನಿಗೆ–ಎಲಾ ದುಷ್ಟಾ, ಓಬಲಾ, ನಿನ್ನ ಬಯಕೆಯು ಪೂರ್ಣವಾಯಿತೇ? ಈ ಕೂಸಾದ ನಾಗಲಾಂಬಿಕೆಯನ್ನು ಕೊಲ್ಲುವುದು ನನ್ನಿಂದಾಗದ್ದರಿಂದ, ಆಕೆಯನ್ನು ಕ್ರೂರನಾದ ನಿನ್ನ ಪಾಲಿಗೆ ಬಿಟ್ಟಿದ್ದೇನೆ. ಇನ್ನು ನಾನೂ–ನನ್ನ ಮಗನೂ ನಿನ್ನೆದುರಿಗೆ ಈಗ ಪ್ರಾಣವನ್ನು ಕೊಡುತ್ತೇವೆ. ನಮ್ಮ ಪ್ರಾಚೀನ ಕರ್ಮದಿಂದ ನಮಗೆ ಈ ದುರ್ದೆಸೆಯು ಪ್ರಾಪ್ತವಾಗಿದ್ದರೂ, ನಮ್ಮ ವಂಶವೇ ವಿಜಯನಗರದ ರಾಯರ ಸಿಂಹಾಸನವೇರುವುದೆಂಬುದನ್ನು ಸೆರಗಿಗೆ ಗಂಟು ಹೊಡೆದು, ನೆನಪಿನಲ್ಲಿಟ್ಟುಕೊ.

ನಮ್ಮ ಚಿನ್ನವೆಂಕಟನು ಎಚ್ಚಮನಾಯಕನ ಪುಣ್ಯದಿಂದ ಅರಸನಾಗಿ ನಿಮ್ಮ ಶಾಸನಮಾಡುವನು, ಎಂದು ಹೇಳಿ, ನಾಲ್ಕು ಬೆರಳು ಅಗಲಾದ ಎರಡುಕಡೆ ಅಲಗುಳ್ಳ ಒಂದು ಉದ್ದದ ಕತ್ತಿಯನ್ನು ತಕ್ಕೊಂಡು, ಅದರ ಮೇಲೆ ಬಿದ್ದು ಪ್ರಾಣವನ್ನು ಕೊಟ್ಟನು. ವೀರನರಸಿಂಗನಾದರೂ ತಡಮಾಡದೆ ತಂದೆ ಹಿಡಿದ ಮಾರ್ಗವನ್ನೇ ಹಿಡಿದು ನಡೆದನು, ರಕ್ತಮುಣುಗಿದ ಒಂದು ಕೂಸು ಮಾತ್ರ, ಅಂತಕ ಸ್ವರೂಪನಾದ ಓಬಲನ ಎದುರಿಗೆ ಕಣ್ಣುಬಿಡುತ್ತ ಕುಳಿತಿತ್ತು! ಅದನ್ನು ದಯಾಶೂನ್ಯನಾದ ಓಬಲನು ಎಗ್ಗಿಲ್ಲದೆ ತುಂಡರಿಸಿ, ಅರಸುಮನೆತನದವರಾರೂ ಉಳಿಯದಂತೆ ಮಾಡಿ, ಸೆರೆಮನೆ ಯಿಂದ ಹೊರ ಹೊರಟನು. ಪ್ರಿಯವಾಚಕರೇ, ಹ್ಯಾಗಿದೆ ಅರಸುತನದ ಸುಖ! ಈ ಅಂತಕನ ಕೋಲಾಹಲದ ಸುದ್ದಿಯು ಕ್ಷಣದಲ್ಲಿ ಚಂದ್ರಗಿರಿಯ ತುಂಬ ಹಬ್ಬಿತು.

## ಸತ್ಸಮಾಗಮ

ಚಿನ್ನ ಓಬಲನ ಭಯಂಕರವಾದ ಈ ಅದ್ಭುತ ಕೃತ್ಯವನ್ನು ಕೇಳಿ ಚಂದ್ರಗಿರಿಯೊಳಗಿನ ಎಷ್ಟೋಜನರು ಮರಮರನೆ ಮರುಗಿ, ಜಗರಾಯನಿಗೆ ಬಾಯಿಗೆ ಬಂದ ಹಾಗೆ ಅಂದರು. ಜಗರಾಯನ ಪಕ್ಷದ ಕೆಲವು ಸರದಾರರು, ಈ ಕ್ರೂರ ಕತ್ಯವನ್ನು ನೋಡಿ ದಿಗಿಲುಬಿದ್ದು ಆ ಕ್ರೂರನ ಪಕ್ಷವನ್ನು ಬಿಟ್ಟು ಎಚ್ಚಮನಾಯಕನನ್ನು ಕೂಡಿದರು. ಈ ರಾಜಕುಟುಂಬದ ಘಾತ ದಿಂದ ಎಚ್ಚಮನಾಯಕನಿಗಾದ ದುಃಖವನ್ನು ವರ್ಣಿಸುವುದು ಅಸಾಧ್ಯವೇ ಸರಿ. ತನ್ನ ಸ್ವಾಮಿಯನ್ನು ಏಕನಿಷ್ಠೆಯಿಂದ ಆರಾಧಿಸುವ ಸ್ವಾಮಿಭಕ್ತರು ಮಾತ್ರ ಅದನ್ನು ಯಥಾರ್ಥವಾಗಿ ಕಲ್ಪಿಸಲೂಬಹುದು–ವರ್ಣಿಸಲೂಬಹುದು. ತನ್ನ ಸ್ವಾಮಿಯ ಕುಟುಂಬದ ಹೃದಯದ್ರಾವಕ ವಾದ ಕೊಲೆಯ ಸುದ್ದಿಯನ್ನು ಕೇಳಿ, ಆ ಸ್ವಾಮಿನಿಷ್ಠನು ಜಡಮೂಢನಂತೆ ಒಂದೇಸವನೆ ಕಣ್ಣೀರುಸುರಿಸಹತ್ತಿದನು. ಆತನಿಗೆ ಅನ್ನ–ನೀರುಗಳ ಪರಿವೆಯಿಲ್ಲದಾಯಿತು; ಸ್ವೀಕೃತಕಾರ್ಯದ ಮೇಲಿನ ಆತನ ನಿಷ್ಠೆಯು, ಸಮೂಲ ನಷ್ಟವಾದಂತಾಯಿತು; ತ್ರೈಲೋಕ್ಯದ ಸಾಮ್ರಾಜ್ಯ ಪ್ರಾಪ್ತಿಯೂ ಆತನಿಗೆ ತುಚ್ಛವಾಗಿ ತೋರಹತ್ತಿತು. ಒಬ್ಬರ ಸಂಗಡ ಮಾತಿಲ್ಲ–ಕತೆಯಿಲ್ಲ ಸುಮ್ಮನೆ ಏಕಾಂತಸ್ಥಾನದಲ್ಲಿ ಚಿಂತೆಮಾಡುತ್ತ ಆತನು ಕುಳಿತುಕೊಳ್ಳುತ್ತಿದ್ದನು. ಆತನು ಯಾವಾ ಗಾದರೂ ಒಮ್ಮೆ ನಿಟ್ಟುಸಿರುಬಿಟ್ಟು–"ನಮ್ಮ ರಂಗರಾಯರು ಈ ಭವಿಷ್ಯವನ್ನು ಅರಿತಿದ್ದರೋ ಅನ್ನುವಂತೆ ಪಟ್ಟವನ್ನು ಒಲ್ಲೆನೆಂತಲೇ ಅಂದರು; ಆದರೆ ಕೈಲಾಗದ ಅಧಮನಾದ ನಾನು ದುರಭಿಮಾನಕ್ಕೆ ಒಳಗಾಗಿ ಕೇವಲ ಸರ್ವತಂತ್ರ ಸ್ವತಂತ್ರನಂತೆ ಎದೆಯನ್ನು ತಟ್ಟಿಕೊಂಡು ಅವರ ಕೊರಳಿಗೆ ಅರಸೊತ್ತಿಗೆಯ ಉರಲು ಹಾಕಿದೆನು; ಇಲ್ಲದಿದ್ದರೆ ಅವರ ಪಾಲಿಗೆ ಈ ಭಯಂಕರ ಕೊಲೆಯ ಪ್ರಸಂಗವು ಯಾಕೆ ಬರುತ್ತಿತ್ತು?" ಎಂದು ನುಡಿಯುತ್ತಿದ್ದನು. ಇದೊಂದು ಆತನ ಜಪದ ಮಂತ್ರವೇ ಆಗಿತ್ತೆಂದು ಹೇಳಬಹುದು. ನಾಲ್ಕು ದಿನವಾಯಿತು, ಎಂಟು ದಿನವಾಯಿತು, ತಿಂಗಳಾಯಿತು; ಆದರೂ ನಾಯಕನ ದುಃಖವು ಕಡಿಮೆಯಾಗಲಿಲ್ಲ! ಅವನ ಮುಖಮುದ್ರೆಯು

ನಿಸ್ತೇಜವಾಯಿತು, ದೇಹವು ಕ್ಷೀಣವಾಯಿತು, ಉತ್ಸಾಹವು ಭಂಗವಾಯಿತು. ಚಾಂದಖಾನನೇ ಮೊದಲಾದ ಆತನ ಮಿತ್ರರ ಉಪದೇಶದ ಆಟವು ನಡೆಯಲಿಲ್ಲ; ಕುಮುದಿನಿಯಂಥ ನಿರ್ಮಲಾಂತಃ ಕರಣದ ಸುಂದರಿಯ ಅಕೃತ್ರಿಮ ಪ್ರೇಮದ ಉಪಚಾರದಿಂದ ಆತನಿಗೆ ಸಮಾಧಾನವಾಗಲಿಲ್ಲ. ಆತನು ಜಗರಾಯನ ಅಹಿತವನ್ನೂ ಚಿಂತಿಸದಾದನು, ತನ್ನಲ್ಲಿದ್ದ ರಾಜಪುತ್ರನ ಹಿತವನ್ನೂ ಚಿಂತಿಸದಾದನು. ಆತನು ತನ್ನ ಸೈನ್ಯದ ಕ್ಷಯವೃದ್ಧಿಗಳನ್ನು ಲಕ್ಷಿಸಲಿಲ್ಲ, ಬಹಳ ಹೇಳುವುದೇನು? ತನ್ನ ಅತ್ಯಂತ ಕೃತಜ್ಞತೆಗೆ ಪಾತ್ರನಾದ ಚಾಂದಖಾನನ ಸಂಗಡವು, ಅತ್ಯಂತ ಪ್ರೀತಿಗೆ ಪಾತ್ರಳಾದ ಕುಮುದಿನಿಯ ಸಂಗಡವು ಆ ಸ್ವಾಮಿನಿಷ್ಠನು ಮನಬಿಚ್ಚಿ ಮಾತಾಡದಷ್ಟು ನಿರುತ್ಸಾಹಿಯಾದನು! ಒಟ್ಟಿಗೆ ತನ್ನ ಸ್ವಾಮಿಯ ಆತ್ಮದ ಸಂಗಡ ಎಚ್ಚಮನಾಯಕನ ಆತ್ಮನಿಷ್ಠೆಯೊಂದು ಹೋಗಿಬಿಟ್ಟಿದ್ದರಿಂದ, ಆ ವೀರನು ಭೂಮಿಯಲ್ಲಿ ಬದುಕಿ ಇದ್ದೂ ಇಲ್ಲದ ಹಾಗೆ ಆಗಿತ್ತು! ದಿನದಿನಕ್ಕೆ ಆಗಹತ್ತಿದ ದೇಹಕೃಶತೆಯನ್ನು ನೋಡಿ, ಈ ಹೃದ್ರೋಗದಲ್ಲಿಯೇ ಸ್ವಲ್ಪ ದಿನಗಳಲ್ಲಿ ಈ ಶೂರನ ಅಂತವಾಗುವುದೆಂದು ಜನರು ಮಾತಾಡ ಹತ್ತಿದರು! ಇಂಥ ಶೋಚನೀಯ ಸ್ಥಿತಿಯಲ್ಲಿ ರಾಜಪುತ್ರನಾದ ಚಿನ್ನವೆಂಕಟನು ಎದುರಿಗೆ ಬಂದರೆ, ನಾಯಕನ ಕಂಠವು ಬಿಗಿದುಬಂದು ಒಂದೇಸವನೆ ಕಣ್ಣೀರುಗಳು ಹೋಗಹತ್ತಿದ್ದವು. ಆ ಪ್ರಸಂಗದಲ್ಲಿ ಒಮ್ಮೆಯಾದರೂ ಆತನ ಮುಖದಿಂದ ಅಕ್ಷರಗಳ ಉಚ್ಚಾರವಾದದ್ದು ಕಿವಿಗೆ ಬೀಳಲಿಲ್ಲ! ಶಾಬಾಸ, ನಾಯಕಾ, ನೀನೇ ಧನ್ಯನು, ನೀನೇ ಸ್ವಾಮಿನಿಷ್ಠನು, ಪ್ರಸಂಗವಶದಿಂದ ಪರಮಾತ್ಮನಲ್ಲಿ ಏಕನಿಷ್ಠೆಯನ್ನಿಡಲಿಕ್ಕೆ ನೀನೇ ಅಧಿಕಾರಿಯು!

ಈ ಮೇರೆಗೆ ಮುಖಂಡನಾದ ಒಬ್ಬ ಎಚ್ಚಮನಾಯಕನು ಹೃದ್ರೋಗದಿಂದ ಕೃಶವಾಗಹತ್ತಿದ್ದರಿಂದ, ಅವನ ಬಲಸರ್ವಸ್ವವೂ ಕೃಶವಾಗುತ್ತಿರುವಂತೆ ತೋರಹತ್ತಿತು. ಆತನ ಪಕ್ಷವನ್ನು ಔದಾಸೀನ್ಯವು ಮುಸುಕಿತು. ಇನ್ನು ಇಲ್ಲಿಗೆ ಎಚ್ಚಮನಾಯಕನ ಕತೆಯು ಮುಗಿದಂತಾಯಿತೆಂತಲೂ, ವಿಜಯನಗರದ ರಾಯರ ಸದ್ವಂಶದ ಪುನರುಜ್ಜೀವನವಾಗುವ ಆಶೆಯು ಕಡಿಯಿತೆಂತಲೂ ಜನರು ಮರಗಹತ್ತಿದರು; ಆದರೆ ಶುದ್ಧಾಂತಃಕರಣದ ಎಚ್ಚಮ ನಾಯಕನ ಪ್ರತಿಜ್ಞೆಯನ್ನು ಪೂರ್ಣಮಾಡುವ ಚಿಂತೆಯು ಸರ್ವೇಶ್ವರನಿಗೆ ಇತ್ತೆಂದು ತೋರುತ್ತದೆ! ದೇವರು ಏಕನಿಷ್ಠರ ಕೈವಾರಿಯೆಂಬದು ಸುಳ್ಳಲ್ಲ. ಒಂದು ದಿನ ಮುಂಜಾನೆ ಕುಮುದಿನಿಯೂ, ಖಾನನೂ ನಾಯಕನ ಬಳಿಯಲ್ಲಿ ಕುಳಿತಿದ್ದರು; ರಾಜಪುತ್ರನು ಸಲಿಗೆಯಿಂದ ಕುಮುದಿನಿಯ ತೊಡೆಯಮೇಲೆ ಕುಳಿತಿರುವುದನ್ನು ನಾಯಕನು ಕೌತುಕದಿಂದ ನೋಡುತ್ತಿದ್ದನು; ದೊಡ್ಡ ದೊಡ್ಡ ಸರದಾರರು ಸುತ್ತಲು ನೆರೆದಿದ್ದರು; ಅಪೂರ್ವವಾದ ಸ್ತಬ್ಧತೆಯಿಂದ ಎಲ್ಲರ ಮನಸ್ಸುಗಳು ಚಿಂತೆಯಲ್ಲಿ ಏಕಾಗ್ರವಾಗಿದ್ದವು. ಆಗ ಪ್ರಾಣಿಗಳ ಅಂತಃಕರಣದಲ್ಲಿ ಸನ್ಮಾರ್ಗಪ್ರವೃತ್ತಿಯ ಬೀಜವನ್ನು ಊರಲಿಕ್ಕೆ ಇದೇ ಸಮಯವು ತಕ್ಕದ್ದೆಂದು ತಿಳಿದು, ಪರಮೇಶ್ವರನು ಸತ್ಪುರುಷ ರೂಪದಿಂದ ದರ್ಶನ ಕೊಡುವಾಗ ಆತುರತೆಯಿಂದ ತಾನು ಬರುವುದನ್ನು ಸಂಕೇತದಿಂದ ಎಲ್ಲರ ಕಿವಿಗಳಿಗೆ ತಿಳಿಸುವನೋ ಅನ್ನುವಂತೆ, ಹೊರಗೆ ಅವುಗೆಗಳ ಸ್ಪಷ್ಟವಾದ ಸಪ್ಪಳವಾಗು ತ್ತಿದ್ದದ್ದು ಎಲ್ಲರ ಕಿವಿಗಳಿಗೆ ಕೇಳಹತ್ತಿತು. ಆ ಸಪ್ಪಳವು ಯಾತರದೆಂಬದನ್ನು ಅರಿತುಕೊಳ್ಳುವುದಕ್ಕಾಗಿ

ಎಲ್ಲರು ಬಾಗಿಲದ ಕಡೆಗೆ ನೋಡುತ್ತಿರಲು, ಮತ್ತು ದಿವ್ಯ ತೇಜಸ್ಸಿಗೆ ಲೀನವಾಗಿ ದ್ವಾರರಕ್ಷಕನು ಏನೂ ತೋಚದೆ ಸುಮ್ಮನೆ ನಿಂತಿರಲು, ಅವುಗೆಗಳಿಗೆ ಖಟ್ಟಖಟ್ಟೆಂಬ ಸಪ್ಪಳದ ಆಘಾತದಿಂದ ಪ್ರಾಣಿಮಾತ್ರಗಳ ಚಿಂತಾವೃಕ್ಷದ ಬೇರುಗಳನ್ನು ಸಡಲಿಸುವ ಒಂದು ತೇಜಃಪುಂಜ ಮೂರ್ತಿಯು ನಾಯಕನು ಮಲಗಿದಲ್ಲಿಗೆ ಬಂದಿತು ! ಕೂಡಲೆ ಎಲ್ಲರು ಅಚಿಂತ್ಯವಾಗಿ ಎದ್ದುನಿಂತು ಆ ಮೂರ್ತಿಯನ್ನು ಆದರಿಸಿದರು. ಹೀಗೆ ಎಲ್ಲರು ಒಮ್ಮೆಲೆ ಎದ್ದು ನಿಂತದ್ದನ್ನು ನೋಡಿ ನಾಯಕನು ಬಾಗಿಲದ ಕಡೆಗೆ ನೋಡುತ್ತಿರಲು, ಮೂರ್ತಿಗೊಂಡ ತೇಜಸ್ಸಿನ ದರ್ಶನದಿಂದ ಅವನ ನೇತ್ರಗಳು ಸಫಲವಾದವು. ಇದಲ್ಲದೆ, ಆ ತೇಜಃಪುಂಜಮೂರ್ತಿಯ ಭಸ್ಮೋದ್ಧೂಳಿತವಾದ ಮಂಗಲ ಗಾತ್ರವೂ ಹಣೆಯಮೇಲೆ ಸ್ಪಷ್ಟವಾಗಿ ಕಂಗೊಳಿಸುವ ಶುಭ್ರಭಸ್ಮದ ಮೇಲೆ ಢಾಳಾಗಿ ಹಚ್ಚಿದ ಮೂರು ಗೀರಿನ ಅಡ್ಡಗಂಧದಿಂದ ಮನೋಹರವಾಗಿ ಒಪ್ಪುವ ಸುಂದರ ಮುಖಮಂಡಲವೂ, ಅತ್ಯಂತ ಪವಿತ್ರತೆಯನ್ನು ವ್ಯಕ್ತಗೊಳಿಸುವ ಬಗಲೊಳಗಿನ ಕೃಷ್ಣಾಜಿನದ ಸುರುಳಿಯೂ, ಮೂರ್ತಿಮಂತ ವೈರಾಗ್ಯದ ದರ್ಶಕವಾಗಿರುವ ಕೌಪೀನವೂ, ನೈರಾಶ್ಯವನ್ನು ತೋರ್ಪಡಿಸುವ ಕೈಯೊಳಗಿನ ಕಮಂಡಲವೂ, ಅಲೌಕಿಕತೆಯ ಲಾಂಛನಗಳಾದ ಪಾದಗಳಲ್ಲಿಯ ಅವುಗೆಗಳೂ, ಇವೆಲ್ಲವುಗಳ ಏಕಸಮಯಾವಚ್ಛೇದದ ದರ್ಶನದಿಂದ ವ್ಯಕ್ತವಾಗುವ ಭೂತದ ಯಾಯುಕ್ತ ಶಾಂತಿಯ ನಿಧಿಯೂ, ಆ ನಾಯಕನ ತಾಪವನ್ನು ನಾಶಗೊಳಿಸುತ್ತಿರಲು, ಆತನ ದೇಹದಲ್ಲಿ ಹೊಸದಾಗಿ ಉತ್ಸಾಹ ಬಲಗಳ ಸಂಚಾರವಾಯಿತೋ ಅನ್ನುವಂತೆ, ಆತನು ಚಟ್ಟನೆ ಎದ್ದುನಿಂತು, ಭಕ್ತಿಯಿಂದ ಸತ್ಪುರುಷನ ಚರಣಕ್ಕೆರಗಿದನು. ಕೂಡಲೆ ಎಲ್ಲರು ಅತ್ಯಂತ ಲೀನತೆಯಿಂದ ಆ ಸತ್ಪುರುಷನನ್ನು ನಮಿಸಿದರು. ಆ ಮಹರ್ಷಿಯು, ತನ್ನ ಗುರುತುಹಿಡಿದು, ಪ್ರೇಮಪೂರ್ಣವಾದ ನೇತ್ರಗಳಿಂದ ನೋಡುತ್ತ ಕೈಜೋಡಿಸಿಕೊಂಡು ಕೃತಕೃತ್ಯಭಾವದಿಂದ ನಿಂತುಕೊಂಡಿರುವ ಕುಮುದಿನಿಯ ತಲೆಯಮೇಲೆ ವರದ ಹಸ್ತವನ್ನಿಟ್ಟು, ''ರಾಜಪುತ್ರರು ಮೇಲೆ ಕುಳಿತುಕೊಳ್ಳಬೇಕು'' ಎಂದು ಚಿನ್ನವೆಂಕಟನನ್ನು ಆದರಿಸುತ್ತ, ನಾಯಕನ ಕೈಯನ್ನು ಹಿಡಿದು ಆತನನ್ನು ಹಾಸಿಗೆಯಮೇಲೆ ಕುಳ್ಳಿರಿಸುತ್ತ ತನ್ನ ಕೃಷ್ಣಾಜಿನವನ್ನು ಹಾಸಿ, ಅದರ ಮೇಲೆ ತಾನು ಕುಳಿತುಕೊಂಡನು. ಕೂಡಲೆ ಆ ಋಷಿವರ್ಯನು ಎಲ್ಲರನ್ನು ಕೃಪಾದೃಷ್ಟಿಯಿಂದ ನೋಡಿ, ''ಎಲ್ಲರು ಕುಳಿತುಕೊಳ್ಳಬೇಕು'' ಎಂಬ ಭಾವದ ಶಿರಸ್ಸಿನ ಸಂಜ್ಞೆಯನ್ನು ಮಾಡಲು, ಆ ಆಜ್ಞೆಯನ್ನು ಶಿರಸಾವಹಿಸಿ, ಎಲ್ಲರೂ ವಿನಯದಿಂದ ಕುಳಿತುಕೊಂಡರು. ಕುಮುದಿನಿಯು, ತನ್ನ ರಕ್ಷಕನಾದ ಮಹಾಪುರುಷನು ಇಂಥ ವಿಪತ್ಕಾಲದಲ್ಲಿ ತಾನು ಸ್ಮರಿಸಿದ ಕೂಡಲೆ ಬಂದದ್ದನ್ನು ನೋಡಿ, ಆನಂದಾತಿಶಯದಿಂದ ನಮ್ರಳಾಗಿ, ಮನಸ್ಸಿನಲ್ಲಿದ್ದರೂ ಆ ಮಹಾಪುರುಷನನ್ನು ದಿಟ್ಟಿಸಿನೋಡುವ ಉದ್ಧಟತನವನ್ನು ಮಾಡಲಾರದೆ ಆನಂದಭಾಷ್ಪಗಳನ್ನುದುರಿಸುತ್ತ ತಲೆಬಾಗಿ ಕುಳಿತುಕೊಂಡಿದ್ದಳು! ನಾಯಕನು, ಸತ್ಪುರುಷನ ಕರಾವಲಂಬನದಿಂದ ಧನ್ಯನಾಗಿ ತನ್ನ ದಕ್ಷಿಣ ಹಸ್ತವನ್ನು ಋಷಿಗೆ ಒಪ್ಪಿಸಿಬಿಟ್ಟಂತೆ, ಕೇವಲ ಪರಾಧೀನನಾಗಿ ವಿನಯದಿಂದ ಕುಳಿತುಕೊಂಡಿದ್ದನು. ಉಳಿದ ಜನರು ಋಷಿಯ ಕಣ್ಣುತಪ್ಪಿಸಿ, ಆತನ ತೇಜಃಪುಂಜವಾದ ಮುಖವನ್ನು ನೋಡುತ್ತ ಕುಳಿತುಕೊಂಡಿದ್ದರು.

ಋಷಿವರ್ಯನ ಮಾತುಗಳನ್ನು ಕೇಳುವ ಕುತೂಹದಿಂದ ಮಿಸಿಕಾಡದೆ ಹೀಗೆ ಎಲ್ಲರೂ ಸುಮ್ಮನೆ ಕುಳಿತಿರಲು, ಆ ಮಹಾತ್ಮನು ಈ ಮೊದಲೇ ನಡೆದಿದ್ದ ಸಂಗತಿಗಳನ್ನೆಲ್ಲ ತನ್ನ ಜ್ಞಾನದೃಷ್ಟಿಯಿಂದ ಅರಿತವನಂತೆ ನಾಯಕನ ಹಸ್ತವನ್ನು ಅಲ್ಲಾಡಿಸಿ ಅತ್ಯಂತ ವಾತ್ಸಲ್ಯದಿಂದ— ಶುದ್ಧಾಂತಃಕರಣದ ವೀರನೇ, ಇದೇನು ನಿನ್ನ ರೀತಿ? ಅವರವರ ಪ್ರಾರಬ್ಧ ಕರ್ಮಾನುಸಾರ, ಕಾಲಕ್ಕನುಸರಿಸಿ ಒದಗುವ ಸಂಗತಿಗಳಿಗಾಗಿ ನಿನ್ನಂಥವರು ಹೀಗೆ ದೇಹವನ್ನು ವ್ಯರ್ಥವಾಗಿ ತಿಕ್ಕಿ ಸವೆಸುವರೇ? ವೀರಶಿಖಾಮಣಿಯೇ,ಪರೋಪಕಾರದ ಕೃತಿಗಳನ್ನು ಮಾಡುತ್ತಿರುವಾಗ ಸವೆದುಹೋಗುವ ದೇಹವು ಮಾತ್ರ ಧನ್ಯವಾಗುವುದೆಂಬದನ್ನು ಮರೆಯಬೇಡ. ನಿನ್ನ ಅಕೃತ್ರಿಮ ರಾಜನಿಷ್ಠೆಯನ್ನು ನಾನು ಒಪ್ಪಿಕೊಳ್ಳುತ್ತೇನೆ; ಏಕನಿಷ್ಠೆಯಿಂದ ನೀನು ಸರ್ವಸಂಗಪರಿತ್ಯಾಗ ಮಾಡಿದ್ದನ್ನಾದರೂ ನಾನು ಹೀಯಾಳಿಸುವುದಿಲ್ಲ; ಆದರೆ ಪರಿತ್ಯಾಗಕ್ಕೆ ಪ್ರಬಲೋದ್ದೇಶವೇನಾದರೂ ಇರಬೇಕಷ್ಟೆ? ನಿನ್ನ ಪರಿತ್ಯಾಗದಲ್ಲಿ ಘಾತಕವಾದ ಚಿಂತೆಯ ಅಭಿವೃದ್ಧಿಯ ಹೊರತು ಹೆಚ್ಚಿನ ಉದ್ದೇಶವೇನಿರುತ್ತದೆ ಹೇಳು! ಅಕೃತ್ರಿಮ ಸ್ವಾಮಿನಿಷ್ಠೆಯ ಅಂತಿಮಫಲವು ದುರ್ನಿವಾರವಾದ ಚಿಂತೆಯೇ ಏನು? ಅಲ್ಲ, ನಾಯಕಾ, ಸರ್ವಥಾ ಅಲ್ಲ. ಅಧಿಕಾರಸಂಪನ್ನನಾದ ನಿನ್ನ ಈ ತಪ್ಪನ್ನು ತಿಳಿಸುವದಕ್ಕಾಗಿಯೇ ನಾನು ಇಲ್ಲಿಗೆ ಬಂದಿದ್ದೇನೆ. ರಾಜನಿಷ್ಠನಾದ ನೀನು, ನಂದರಾಜರ ಅಮಾತ್ಯನಾದ ರಾಕ್ಷಸನಂತೆ, ನಿನ್ನ ರಾಜನ ಹಿತವನ್ನು ಸಾಧಿಸುವುದರಲ್ಲಿಯೇ ದೇಹವನ್ನು ಸವೆಸತಕ್ಕದ್ದು. ಹಾಗೆ ಮಾಡದೆ ಅರಸನ ಪ್ರಾರಬ್ಧ ಕರ್ಮದಿಂದ ಆತನಿಗೆ ಒದಗಿದ ದುರವಸ್ಥೆಗಾಗಿ ಚಿಂತಿಸುತ್ತ, ಪರಲೋಕದಲ್ಲಿಯಾದರೂ ಸ್ವಾಮಿಯ ಆತ್ಮಕ್ಕೆ ಶಾಂತಿಯನ್ನೀಯಲು ಸಮರ್ಥವಾದ ರಾಜಪುತ್ರಾಂಕುರವು ನಿನ್ನ ಮನೆಯಲ್ಲಿ ಪಲ್ಲವಯುಕ್ತವಾಗಿ ಮೆರೆಯುತ್ತಿರಲು, ಅದರ ಹಿತಕ್ಕೆ ಲಕ್ಷ್ಯಗೊಡದೆ, ಪರ್ಯಾಯದಿಂದ ಸ್ವಾಮಿಯ ಅಹಿತವನ್ನು ಚಿಂತಿಸಿ, ಸ್ವಾಮಿ ದ್ರೋಹದ ಮಹಾಪಾತಕಕ್ಕೆ ಗುರಿಯಾಗುವುದು ನಿನ್ನ ಅಜ್ಞಾನವಲ್ಲವೆ? ನಿನ್ನ ಸ್ವಾಮಿಯು ಆತ್ಮಹತ್ಯವನ್ನು ಮಾಡಿಕೊಳ್ಳುವ ಮೊದಲು ಕೊಲೆಗಡಕನಾದ ಓಬಲನಿಗೆ ''ಎಲಾ ದುಷ್ಟಾ, ಓಬಲಾ, ನಮ್ಮ ಪ್ರಾಚೀನಕರ್ಮದಿಂದ ನಮಗೆ ಈ ದುರ್ದಸೆಯು ಪ್ರಾಪ್ತವಾಗಿದ್ದರೂ, ನಮ್ಮ ವಂಶವೇ ವಿಜಯ ನಗರದ ರಾಯರ ಸಿಂಹಾಸನವೇರುವುದೆಂಬದನ್ನು ಸೆರಗಿಗೆ ಗಂಟುಹೊಡೆದು ನೆನಪಿನಲ್ಲಿಟ್ಟುಕೋ. ನಮ್ಮ ಚಿನ್ನವೆಂಕಟನು ಎಚ್ಚಮನಾಯಕನ ಪುಣ್ಯದಿಂದ ಅರಸನಾಗಿ ನಿಮ್ಮ ಶಾಸನಮಾಡುವೆನು'' ಎಂದು ಹೇಳಿರುವೆನಲ್ಲ ! ಆ ನಿನ್ನ ಸ್ವಾಮಿಯ ಮಾತು ನಿನ್ನ ಈ ಘೋರವಾದ ಹೃದ್ರೋಗದಿಂದ ಸತ್ಯವಾಗಬಹುದೋ? ಕರ್ಮಪಾಶಬದ್ಧರಾದ ಮನುಷ್ಯರು ಸುಖಾಪೇಕ್ಷೆಯಿಂದ ಉಬ್ಬಿ ಉಬ್ಬಿ ದುಷ್ಕರ್ಮಗಳನ್ನು ಮಾಡಿ ಅವುಗಳ ಫಲಗಳನ್ನು ಉಣ್ಣುವಾಗ ಮಾತ್ರ ಅವರು ಅತ್ತರೆ ನೀನೇನು ಮಾಡುತ್ತೀ? ಅವರೇನು ದುಷ್ಕರ್ಮ ಮಾಡುವಾಗ ನಿನ್ನನ್ನು ಕೇಳಿ ಮಾಡಿರುವರೋ? ಆಗ ನೀನು ಬೇಡೆಂದಿದ್ದರೆ ಅವರು ಬಿಡುತ್ತಿದ್ದರೋ? ಮಂದಿಯ ದುಷ್ಕರ್ಮ ಪ್ರವೃತ್ತಿಯನ್ನು ತಟ್ಟನೆ ತೆಗೆದುಹಾಕುವ ಘನತರವಾದ ಯೋಗ್ಯತೆಯು ನಿನ್ನಲ್ಲಿದ್ದರೆ ಆ ಮಾತು ಬೇರೆ. ಸೃಷ್ಟಿ–ಸ್ಥಿತಿ–ಲಯಕರ್ತೃವೂ, ಕರ್ತುಮ ಕರ್ತುಮನ್ಯಥಾ ಕರ್ತುಂಸಮರ್ಥನೂ ಆದ ಪರಮೇಶ್ವರನೇ ಅವರವರ ಕರ್ಮದಂತೆ ಫಲಗಳನ್ನು ಕೊಡುತ್ತ ಸತ್ಫಲದಿಂದ

ಸುಖಿಸುವವರನ್ನು ನೋಡಿ ಆನಂದಪಡದೆ, ದುಷ್ಫಲದಿಂದ ದುಃಖಿಸುವವರನ್ನು ನೋಡಿ ದುಃಖಪಡದೆ ತಟಸ್ಥವೃತ್ತಿಯಿಂದ ಇದ್ದು, ತನ್ನ ಸೃಷ್ಟಿವ್ಯಾಪಾರ ರೂಪವಾದ ಕರ್ತವ್ಯವನ್ನು ಮಾಡುತ್ತಿರಲು ಕರ್ಮಪ್ರವಾಹದ ಸಂಗಡ ತೇಲಿಹೋಗುತ್ತಿರುವ ನಮ್ಮಂಥ ಪರಾಧೀನರು, ದುರಭಿಮಾನದಿಂದ ಮಂದಿಯ ದುಃಖಕ್ಕಾಗಿ ಕೊರಗಿ ಕರ್ತವ್ಯಪರಾಙ್ಮುಖರಾಗಬೇಕೆನ್ನುವುದು ಯಾವ ಸೀಮೆಯ ಮಾತು? ನಿಜವಾದ ದುಃಖವು ಹಿತಪರ್ಯವಸಾಯಿಯಾಗುತ್ತದೆಂಬದನ್ನು ಅರಿತವರು ತೀರ ಕಡಿಮೆ! ತರುಣವೀರಾ, ನಿನ್ನಲ್ಲಿ ನಿಜವಾದ ಸ್ವಾಮಿನಿಷ್ಠೆಯಿದ್ದರೆ, ಮತ್ತು ನಿಮ್ಮ ಸ್ವಾಮಿಗೊದಗಿದ ಕೇಡಿನಿಂದ ನಿನಗೆ ನಿಜವಾಗಿ ದುಃಖವಾಗಿದ್ದರೆ, ಇದೊಂದೇ ಜನ್ಮದಲ್ಲಿಯೇ ಏಕೆ ಸ್ವಾಮಿಯ ಹಿತಬುದ್ಧಿಯ ವಾಸನೆಯಿಂದ ಅನಂತ ಜನ್ಮಗಳನ್ನು ತಾಳಿ ಸ್ವಾಮಿಯ ಸೇವೆಯೇ ಪರಮಪುರುಷಾರ್ಥವೆಂದು ತಿಳಿದು ಆತನ ಹಿತವನ್ನು ಸಾಧಿಸು. ಇದರಿಂದ ನಿನ್ನ ಸ್ವಾಮಿಯೂ, ನಿನ್ನ ಸ್ವಾಮಿಯ ಸಂಗಡ ನೀನೂ ಧನ್ಯರಾದೀರಿ ! ಅಪ್ಪಾ ಎಚ್ಚಮನಾಯಕಾ, ಈ ಮಾತನ್ನು ಮರೆತು ಸುಮ್ಮನೆ ಚಿಂತೆಯಿಂದ ಕೊರಗುವುದು ನಿನ್ನ ರೀತಿಯಲ್ಲ. ಸತ್ಪುರುಷರ ಕೃಪೆಯಿಂದ ದೇವರ ದರ್ಶನವಾಗುವವರೆಗೆ ಕರ್ಮಪಾಶವು ಯಾರಿಗೂ ಬಿಟ್ಟಿದ್ದಲ್ಲ. ಕರ್ಮಫಲಗಳಲ್ಲಿರುವ ಈಶ್ವರನ ವೈಭವವಾದರೂ ಕಡಿಮೆ ತರದ್ದಲ್ಲ ! ಆದ್ದರಿಂದ ಈಗಿನ ನಿನ್ನ ಕೆಟ್ಟ ಚಿಂತೆಯನ್ನು ಕಳಚಿಬಿಡು. ರಂಗರಾಯರು ಸತ್ತಿದ್ದರೆ, ರಂಗರಾಯರ ಮಗನಾದ ಈ ಚಿನ್ನವೆಂಕಟನೇ ರಂಗರಾಯರೆಂದು ತಿಳಿದು, ನಿನ್ನ, ಹಾಗು ನಿನ್ನ ಸ್ವಾಮಿಯ ಪ್ರತಿಜ್ಞೆಯನ್ನು ಪೂರ್ಣಮಾಡಿ ಧನ್ಯನಾಗು. ರಂಗರಾಯನೇ ತನ್ನ ಪತ್ನಿಯ ಉದರದಿಂದ ಪುತ್ರರೂಪವಾಗಿ ಜನಿಸಿರುತ್ತಾನೆಂಬರ್ಥದ ಶ್ರುತಿವಾಕ್ಯವನ್ನು ನಂಬಿ ಉದ್ಯೋಗತತ್ಪರನಾಗು. ಪ್ರತಾಪಶೀಲನಾದ ನಾಯಕನೇ, ಹೆಚ್ಚಿಗೆ ಹೇಳುವುದೇನು? ಚಿನ್ನವೆಂಕಟನ ಪಟ್ಟಾಭಿಷೇಕವನ್ನು ಈ ಕೈಗಳಿಂದ ಮಾಡಬೇಕೆಂದು ಬಂದಿರುವ ಈ ಬ್ರಾಹ್ಮಣನ ಮಾತನ್ನು ನಿರಾಕರಿಸಬೇಡ ! ಎಂದು ಹೇಳಿ, ನಾಯಕನ ಬೆನ್ನ ಮೇಲೆ ಕೈಯಾಡಿಸುತ್ತ ಆತನು ಚರಣಕ್ಕೆರಗಲು, ತನ್ನ ವರದ ಹಸ್ತವನ್ನು ಆತನ ತಲೆಯ ಮೇಲಿಟ್ಟು ಆತನನ್ನು ಪೂರ್ಣ ಕೃಪಾದೃಷ್ಟಿಯಿಂದ ನೋಡಿದನು !! ಪ್ರಿಯವಾಚಕರೇ, ಮಹಾಪುರುಷನ ಈ ಪರಮಾನುಗ್ರಹದಿಂದ ನಾಯಕನ ತಾಪತ್ರಯಗಳು ದೂರವಾದವೆಂದು ನಾವು ಯಾಕೆ ಹೇಳಬೇಕು? ಚಾಂದಖಾನನಂಥ ಪರಧರ್ಮಿಯೂ ಋಷೀಶ್ವರನ ಬೋಧದಿಂದ ಸಂತುಷ್ಟನಾಗಿರಲು, ಉಳಿದವರು ಸಂತುಷ್ಟರಾದರೆಂದು ಹೇಳುವುದರಲ್ಲಿ ಮಹತ್ವವೇನು? ಒಬ್ಬ ಸತ್ಪುರುಷನ ತೇಜಸ್ಸಿನ ಸಹವಾಸದಿಂದ ಕ್ಷಣಮಾತ್ರದೊಳಗೆ ಎಲ್ಲರೂ ತೇಜಸ್ವಿಗಳಾದರೆಂದಬಳಿಕ ಸತ್ಸಮಾಗಮಕ್ಕೆ ಸರಿಯಾದದ್ದು ಈ ಜಗತ್ತಿನಲ್ಲಿ ಬೇರೆ ಯಾವುದಾದರೂ ಇರುವುದೆ ? ಇಲ್ಲ; ಸರ್ವಥಾ ಇಲ್ಲ. ಅಂತೇ ಯಾತಕ್ಕೂ ಹಣೆಯದೆ, ಸತ್ಪುರುಷರ ಸದುಪದೇಶದಿಂದ ಮಾತ್ರ ಉತ್ಸಾಹಿಸಲ್ಪಟ್ಟ ನಾಯಕನು, ಅದೇಕ್ಷಣದಲ್ಲಿ ಜಗರಾಯನಿಗೆ ಒಂದು ಪತ್ರವನ್ನು ಬರೆದು ಸೇವಕನ ಸಂಗಡ ಕಳಿಸಿದನು. ಆಹಾ! ಇಷ್ಟು ಅವಸರದಿಂದ ಆತನು ಆ ಪತ್ರದಲ್ಲಿ ಏನು ಬರೆದಿರಬಹುದು !

ಇತ್ತ ಜಗರಾಯನು ಎಚ್ಚಮನಾಯಕನ ಹೃದ್ರೋಗದ ವರ್ತಮಾನವನ್ನು ಕೇಳಿ ಸಂತೋಷಪಟ್ಟಿದ್ದನು. ನಾಯಕನು ದಿನದಿನಕ್ಕೆ ಕ್ಷೀಣವಾಗುತ್ತ ನಡೆದಿರುವನೆಂತಲೂ, ಆತನು ಯಾವ ಕೆಲಸದಲ್ಲಿಯೂ ಮನಸ್ಸು ಹಾಕುವುದಿಲ್ಲವಾದ್ದರಿಂದ ಎಲ್ಲರೂ ಉದಾಸೀನರಾಗಿದ್ದು, ದಿನದಿನಕ್ಕೆ ಒಬ್ಬೊಬ್ಬರೇ ನಾಯಕನನ್ನು ಬಿಟ್ಟು ತಮ್ಮ ತಮ್ಮ ಸ್ಥಳಗಳಿಗೆ ಹೋಗಹತ್ತಿದ್ದಾರೆಂತಲೂ, ಜನರು ಹೇಳುವುದನ್ನು ಜಗರಾಯನು ಬಹು ಆಸ್ಥೆಯಿಂದ ಕೇಳುತ್ತಿದ್ದನು. ಇನ್ನುಮೇಲೆ ತನ್ನ ಪ್ರಚಂಡವಾದ ಸೈನ್ಯವನ್ನು ತಕ್ಕೊಂಡು ಹೋಗಿ ನಾಯಕನನ್ನು ಸೋಲಿಸಿ, ರಾಜಪುತ್ರನನ್ನು ಸೆರೆಹಿಡಿದು ಸಂಹರಿಸಿಬಿಟ್ಟರೆ, ತನ್ನ ಮೊಮ್ಮಗನ ರಾಜ್ಯವು ನಿಷ್ಕಂಟಕವಾಗುವುದೆಂದು ಆತನು ಮನಸ್ಸಿನಲ್ಲಿ ಮಂಡಿಗೆ ತಿನ್ನುತ್ತಿದ್ದನು. ಒಂದುದಿನ ಆತನು ದರ್ಬಾರ ನೆರಿಸಿ, ನಾಯಕನ ಸಂಗಡ ಯುದ್ಧಕ್ಕೆ ಹೋಗುವ ಸಂಬಂಧದ ಪ್ರಸಕ್ತಿಯನ್ನು ತೆಗೆಯಲು, ಯುದ್ಧಕ್ಕೆ ಹೋಗಲಿಕ್ಕೆ ಈಗ ಒಳ್ಳೇ ಸಮಯವೆಂದು ಬಹುಜನ ಸರದಾರರು ಅಭಿಪ್ರಾಯಪಟ್ಟರು. ಸಕಲ ಸೈನ್ಯದೊಡನೆ ಒಮ್ಮೆಲೆ ನಾಯಕನ ಮೇಲೆ ಬಿದ್ದು ಅವನನ್ನು ಪೂರ್ಣವಾಗಿ ಸೋಲಿಸಿ, ಹೊಕ್ಕಲ್ಲಿ ಬೆನ್ನುಹತ್ತಿ ಅವನನ್ನೂ,ರಾಜಪುತ್ರನನ್ನೂ ಸೆರೆಹಿಡಿಯಬೇಕೆಂದು ಗೊತ್ತಾಯಿತು. ವಿಜಯದಶಮಿಯ ಸುಮುಹೂರ್ತದಲ್ಲಿ ಹೊರಪಯಣವನ್ನು ಮಾಡಬೇಕೆಂದು ನಿರ್ಧರಿಸಿದರು. ಅಷ್ಟರಲ್ಲಿ ಎಚ್ಚಮನಾಯಕನ ಸೇವಕನು ಪತ್ರವನ್ನು ತಕ್ಕೊಂಡು ಬಂದನು. ಜಗರಾಯನು ಆ ಪತ್ರವನ್ನು ತೆಗಿಸಿ ಓದಿಸಲು ಅದರಲ್ಲಿ ನಾಯಕನು ಸ್ಪಷ್ಟವಾಗಿ ಬರೆದಿದ್ದನೇನೆಂದರೆ— ''ಜಗರಾಯಾ, ನೀನು ಅರಸನನ್ನೂ, ಆತನ ಕುಟುಂಬವನ್ನೂ ಕೊಲ್ಲಿಸಿದಿಯಷ್ಟೇ ? ಈಗ ಒಬ್ಬ ಹುಡುಗನು–ನಾನು ಇಬ್ಬರು ಮಾತ್ರ ಉಳಿದಿದ್ದೇವೆ. ಕೈಲಾದರೆ ಕಾಳಗವನ್ನು ಮಾಡಿ ನಮ್ಮಿಬ್ಬರನ್ನು ಕೊಲ್ಲು ಅಂದರೆ ನಿನ್ನ ಮೊಮ್ಮಗನು ಸುಖವಾಗಿ ಪಟ್ಟದ ಮೇಲೆ ಉಳಿಯುವನು''. ಈ ಪತ್ರದಿಂದ ಜಗರಾಯನಿಗೆ ಅಸಮಾಧಾನವಾಯಿತು. ಕೇಳಿಕೆಯಲ್ಲಿದ್ದಂತೆ ಎಚ್ಚಮನಾಯಕನು ಹತವೀರ್ಯನಾಗಿಲ್ಲೆಂದು ಆತನು ಮನಸ್ಸಿನಲ್ಲಿ ನೊಂದುಕೊಂಡನು. ಆತನು ಹೊರಗೆ ಅಸಮಾಧಾನವನ್ನು ತೋರ್ಪಡಿಸದೆ, ಆ ಪತ್ರವನ್ನು ಹರಿದು ಚೂರು ಚೂರು ಮಾಡಿ, ಬಂದ ಸೇವಕನಿಗೆ– ಎಲಾ, ಹೋಗು, ಮನಸ್ಸಿಗೆ ಬಂದಂತೆ ಮಾಡಲು ಚಿಕ್ಕರಾಯರು ಸಮರ್ಥರಿದ್ದಾರೆ. ಇಂಥ ಹಾಳು ಪತ್ರಗಳಿಂದ ಆಗುವುದೇನು? ಎಂದು ಹೇಳಿ, ಅವನನ್ನು ಹೊರಗೆ ದಬ್ಬಿಸಿಬಿಟ್ಟನು. ವಿಜಯದಶಮಿಯ ಸುಮಾರಕ್ಕೆ ಯುದ್ಧ ಪ್ರಸಕ್ತಿಯು ಒದಗಬಹುದೆಂದು ಋಷೀಶ್ವರನು ಎಚ್ಚಮನಾಯಕನಿಗೆ ಈ ಮೊದಲೇ ಹೇಳಿದ್ದನು. ವಿಜಯದಶಮಿಯು ಒಂದು ತಿಂಗಳು ಇತ್ತು ನಾಯಕನು ಅಷ್ಟರಲ್ಲಿ ತನ್ನ ಪಕ್ಷದ ಜನರನ್ನು ಕರೆಸಿ ಒಟ್ಟುಗೂಡಿಸಿ, ಸೈನ್ಯವನ್ನು ವ್ಯವಸ್ಥೆಗೊಳಿಸಿದನು. ಒಂದು ತಿಂಗಳಲ್ಲಿ ಆತನ ಪ್ರಕೃತಿಯು ಸದೃಢವಾಗಿ, ಆತನು ಮೊದಲಿನಂತೆ, ಯುದ್ಧೋತ್ಸಾಹದಿಂದ ಮೆರೆಯಹತ್ತಿದನು. ವಿಜಯಾದಶಮಿಯ ಸುಮುಹೂರ್ತದಿಂದ ಜಗರಾಯನು ಹೊರಪಯಣ ಮಾಡಿ, ಏಕಾದಶಿಯ ದಿವಸ ಅರವತ್ತು ಸಾವಿರ ದಂಡಿನೊಡನೆ ಆಯಕಟ್ಟಿನ ಸ್ಥಳವನ್ನು ನೋಡಿ ತಳಊರಿದನು.

ಇತ್ತ ಎಚ್ಚಮನಾಯಕನು ತನ್ನ ಇಪ್ಪತ್ತು ಸಾವಿರ ಸೈನ್ಯದಲ್ಲಿ ಮೂರು ಭಾಗಗಳನ್ನು ಮಾಡಿದನು. ಕುಮುದಿನಿಯು ಐದು ಸಾವಿರ ಸೈನ್ಯದೊಡನೆ ದುರ್ಗದಲ್ಲಿದ್ದು ರಾಜಪುತ್ರನನ್ನು ಸಂರಕ್ಷಿಸಬೇಕೆಂತಲೂ, ಚಾಂದಖಾನನು ಐದುಸಾವಿರ ಸೈನ್ಯದಲ್ಲಿ ತನ್ನ ಸಾವಿರ ಕಾಲಾಳುಗಳನ್ನೂ, ೨೫೦ ಜನ ರಾವುತರನ್ನೂ ಕೂಡಿಸಿಕೊಂಡು, ಯುದ್ಧಭೂಮಿಯಿಂದ ಕೆಲವು ಅಂತರದ ಮೇಲೆ ಇರಬೇಕೆಂತಲೂ ಗೊತ್ತಾಯಿತು. ಉಳಿದ ಹತ್ತುಸಾವಿರ ದಂಡಿನೊಡನೆ ನಾಯಕನು ಜಗರಾಯನಿಗೆ ಎದುರಾದನು. ಚಾಂದಖಾನನ ದಂಡಿನ ಹೊರತು ಉಭಯರ ದಂಡಾಳುಗಳು ಹಿಂದೂ ಜನರಾಗಿದ್ದರು. ಕನ್ನಡಿಗರು–ತೆಲಗರು–ಮಲಬಾರಿಗಳು–ತಮಿಳರು ಮೊದಲಾದವ ರಿಂದ ಕೂಡಿದ ಆ ಸೈನಿಕರು, ತರತರದ ವಾಹನಗಳಿಂದಲೂ, ಶಸ್ತ್ರಾಸ್ತ್ರಗಳಿಂದಲೂ ಸಜ್ಜಾಗಿದ್ದರು. ಅಶ್ವೀನಶುದ್ಧ ದ್ವಾದಶಿಯ ದಿವಸ ಯುದ್ಧಕ್ಕೆ ಆರಂಭವಾಯಿತು. ಜಗರಾಯನ ಸೈನ್ಯವು ದೊಡ್ಡದಿದ್ದದ್ದರಿಂದ ಮೊದಮೊದಲು ಎಚ್ಚಮನಾಯಕನ ಸೈನ್ಯವು ಅದರ ಹೊಡತಕ್ಕೆ ಈಡಾಗದಾಯಿತು. ನಾಯಕನ ದಂಡಾಳುಗಳು ಹಿಂಜರಿಯಹತ್ತಿದರು. ಈ ದುರ್ಲಕ್ಷಣವನ್ನು ಕಂಡು ಎಚ್ಚಮನಾಯಕನು ಆವೇಶದಿಂದ ಶತ್ರುಗಳ ಮೇಲೆ ಬಿದ್ದನು. ನಾಯಕನ ಅಂದಿನ ಪರಾಕ್ರಮವು ವರ್ಣನೀಯವಾಗಿತ್ತು ಅದನ್ನು ನೋಡಿ ಶತ್ರುಗಳು ಕೂಡ ಬಟ್ಟು ಕಚ್ಚಿದರು. ನಾಯಕನ ಈ ಪರಾಕ್ರಮವನ್ನು ನೋಡಿ ಅವನ ಸೈನಿಕರು ಆವೇಶದಿಂದ ವೈರಿಗಳ ಮೇಲೆ ಬಿದ್ದರು. ಉಭಯರ ದಂಡಾಳುಗಳಲ್ಲಿಯೂ ಶೂರರ ಚಂಡುಗಳು ತೂರಾಡಿದವು. ಬರಬರುತ್ತ ಯುದ್ಧವು ಭರಕ್ಕೆ ಬಂದು, ನಾಯಕನ ದಂಡಿನವರ ಕೈಯು ಮೇಲಾಗತೊಡಗಿತು. ಜಗರಾಯನ ದಂಡಿನ ಬಲಕಡೆಯ ನಿಟ್ಟಿನವರು, ಎಚ್ಚಮನಾಯಕನ ಉಪಟಳವನ್ನು ತಾಳಲಾರದೆ ಕಾಲದೆಗೆದರು. ನಾಯಕನ ದಂಡಿನೊಳಗಿನ ಉಳಿದ ಸರದಾರರೂ ಆ ದಿನ ಒಳ್ಳೇ ಪರಾಕ್ರಮ ದಿಂದ ಕಾದಿದರು. ಇದೇ ಸಂಧಿಯಲ್ಲಿ ಚಾಂದಖಾನನು ವೀರಾವೇಶದಿಂದ 'ದೀನ ದೀನ' ಎಂದು ಶಬ್ದಮಾಡುತ್ತ ತನ್ನ ಹಿಂದೂ ಮುಸಲ್ಮಾನರ ಮಿಶ್ರದಂಡಿನೊಡನೆ ಜಗರಾಯನ ದಂಡಿನ ಮೇಲೆ ಬಿದ್ದನು. ತಮ್ಮ ಮೇಲೆ ಅಕಸ್ಮಾತ್ತಾಗಿ ಮುಸಲ್ಮಾನ ದಂಡು ಬಂದದ್ದನ್ನು ನೋಡಿ ಜಗರಾಯನ ದಂಡಿನವರು ಎದೆಗುಂದಿದರು. ತಾಳೀಕೋಟೆಯ ಕಾಳಗದಿಂದ ಮುಸಲ್ಮಾನರ ಅಂಜಿಕೆಯು ಹಿಂದೂಜನರ ಹೃದಯದಲ್ಲಿ ಮನೆಮಾಡಿಕೊಂಡಿತ್ತು! ಚಾಂದಖಾನನೂ, ಆತನ ಮುಸಲ್ಮಾನ ದಂಡಾಳುಗಳೂ, ಆ ದಂಡಾಳುಗಳೊಡನೆ ಹಿಂದೂ ದಂಡಿನವರೂ ಶೌರ್ಯದಿಂದ ಶತ್ರುಗಳನ್ನು ಸಂಹರಿಸ ತೊಡಗಿದರು. ಜಗರಾಯನ ದಂಡು, ವೈರಿಗಳ ಹೊಡತವನ್ನು ತಾಳಲಾರದೆ, ವೈರಿಗಳಿಗೆ ಬೆನ್ನು ತೋರಿಸಿ ಓಡಹತ್ತಿತು. ಅದನ್ನು ಹಿಂದಕ್ಕೆ ತಿರುಗಿಸಲಿಕ್ಕೆ ಜಗರಾಯನು ಪಟ್ಟ ಶ್ರಮವು ವ್ಯರ್ಥವಾಯಿತು. ಆಗ ಎಚ್ಚಮನಾಯಕನ ಪಕ್ಷದವರು ಅವರನ್ನು ಬೆನ್ನಟ್ಟಿ, ದಿಕ್ಕುಪಾಲಾಗಿ ಓಡಿಸಿದರು. ಜಗರಾಯನು ಓಡಿಹೋಗುವ ಅವಸರದಲ್ಲಿ ತನ್ನ ಕುಟುಂಬದವರನ್ನು ಹಿಂದೆ ಬಿಟ್ಟನು. ಅತ್ತ ಎಚ್ಚಮನಾಯಕನು ಜಗರಾಯನ ಡೇರೆಗಳನ್ನು ಹೊಕ್ಕು, ಅಲ್ಲಿದ್ದ ಬೊಕ್ಕಸವನ್ನೂ, ರಾಜಚಿಹ್ನೆಗಳನ್ನೂ ತಕ್ಕೊಂಡನು. ಎಷ್ಟೋ ಆನೆಗಳೂ, ಕುದುರೆಗಳೂ ನಾಯಕನ ಕೈ ಸೇರಿದವು. ಚಾಂದಖಾನನು ಜಗರಾಯನಿಗೆ ಚಂದ್ರಗಿರಿಯ ಕಡೆಗೆ ಹೋಗಲಿಕ್ಕೆ ಆಸ್ಪದ ಕೊಡದ್ದರಿಂದ,

ಅವನು ತನ್ನ ಉಳಿದ ಸೈನ್ಯದೊಡನೆ ಮೊಮ್ಮಗನನ್ನು ಕಟ್ಟಿಕೊಂಡು ಅಡವಿಯನ್ನು ಸೇರಬೇಕಾಯಿತು. ಇತ್ತ ಎಚ್ಚಮನಾಯಕನು ಎಂಟುಸಾವಿರ ಸೈನ್ಯವನ್ನು ಚಾಂದಖಾನನ ವಶಕ್ಕೆ ಕೊಟ್ಟು ಚಂದ್ರಗಿರಿಯನ್ನು ಮುತ್ತಲಿಕ್ಕೆ ಕಳಿಸಿ, ತಾನು ಉಳಿದ ಸೈನ್ಯದೊಡನೆ ಶತ್ರುವಿನ ರಾಣೀವಾಸವನ್ನು ಕೂಡಿಕೊಂಡು ವಿಜಯೋತ್ಸವದಿಂದ ದುರ್ಗವನ್ನು ಸೇರಿ, ಋಷೀಶ್ವರನನ್ನು ವಂದಿಸಿದನು. ಎಚ್ಚಮನಾಯಕನು ಋಷಿಯ ಹಸ್ತಸ್ಪರ್ಶದಿಂದ ಚಿನ್ನವೆಂಕಟನಿಗೆ ರಾಜ ಚಿಹ್ನಗಳನ್ನು ಅರ್ಪಿಸಿ, ಆತನೇ ವಿಜಯನಗರದ ನ್ಯಾಯದ ಅರಸನೆಂದು ಸಾರಿದನು. ಅತ್ತ ಚಾಂದಖಾನನು ಗೊತ್ತಾದಂತೆ ಚಂದ್ರಗಿರಿಯನ್ನು ಮುತ್ತಿದನು.

ಎಚ್ಚಮನಾಯಕನು ದುರ್ಗದಲ್ಲಿ ಮೂರು ದಿನ ವಿಶ್ರಾಂತಿಯನ್ನು ಪಡೆದು, ಋಷೀಶ್ವರನ ಸೇವೆಯಿಂದಲೂ, ಆತನ ಸದ್ಬೋಧಶ್ರವಣದಿಂದಲೂ ಪರಮಾನಂದವನ್ನು ಹೊಂದಿದ್ದನು. ಬಳಿಕ ಪ್ರತಿಪದೆಯ ದಿವಸ ಉಷಃಕಾಲಕ್ಕೆ ಆತನು ರಾಜಪುತ್ರನನ್ನು ಮುಂದೆ ಮಾಡಿಕೊಂಡು ಸಕಲ ಸೈನ್ಯದೊಡನೆ ಚಂದ್ರಗಿರಿಗೆ ಸಾಗಿದನು. ಸ್ವತಃ ರಾಜಕುಮಾರನು ದೊಡ್ಡ ಸೈನ್ಯದೊಡನೆ ಚಂದ್ರಗಿರಿಯನ್ನು ಮುತ್ತಿದ್ದನ್ನು ನೋಡಿ, ರಾಜಧಾನಿಯ ರಕ್ಷಕನು ಶರಣುಬಂದು– ''ಅರಸರು ತಮ್ಮ ರಾಜಧಾನಿಯನ್ನು ಸ್ವಾಧೀನಪಡಿಸಿಕೊಂಡು ನನ್ನನ್ನು ಕ್ಷಮಿಸಬೇಕೆಂ''ದು ಪ್ರಾರ್ಥಿಸಿದನು. ಎಚ್ಚಮನಾಯಕನು ಆತನನ್ನು ಬಹುಮಾನಿಸಿ ಅಭಯವನ್ನಿತ್ತು ಕೋಟೆಯ ಯಾವತ್ತೂ ದ್ವಾರಗಳಲ್ಲಿಯೂ, ಪಟ್ಟಣದ ಬೇರೆ ಬೇರೆ ಕಾವಲಿನ ಸ್ಥಳಗಳಲ್ಲಿಯೂ ನಮ್ಮ ಸೈನಿಕರನ್ನು ಕಾವಲಿಡೆಂದು ತಿರುಮಲರಾಯನಿಗೆ ಆಜ್ಞಾಪಿಸಿಲು, ಅದರಂತೆ ತಿರುಮಲರಾಯನು ಎಲ್ಲ ವ್ಯವಸ್ಥೆಯನ್ನು ಮಾಡಿದನು. ಮರುದಿವಸ ಉಷಃಕಾಲಕ್ಕೆ ರಾಜಧಾನಿಯನ್ನು ಪ್ರವೇಶಿಸಬೇಕೆಂದು ಋಷೀಶ್ವರನ ಅಪ್ಪಣೆಯಾಗಿತ್ತು. ಪಟ್ಟಣವನ್ನು ಶೃಂಗರಿಸುವ ಕೆಲಸವು ಒತ್ತರದಿಂದ ಸಾಗಿತು. ರಂಗರಾಯರ ಕುಟುಂಬದ ಕೊಲೆಯಿಂದ ದುಃಖಿತರಾಗಿದ್ದ ಜನರು, ರಂಗರಾಯರ ಮಗನೇ ಜಯಶಾಲಿಯಾಗಿ ಪಟ್ಟಣವನ್ನು ಪ್ರವೇಶಿಸುವನೆಂಬ ಆನಂದದಿಂದ ತಂತಮ್ಮ ಮನೆಗಳನ್ನು ಆಸ್ಥೆಯಿಂದ ಶೃಂಗರಿಸತೊಡಗಿದರು. ಎಷ್ಟೋ ಜನರು ಮನಸ್ಸಿನಲ್ಲಿಲ್ಲದಿದ್ದರೂ ರಾಜಕ್ಷೋಭಕ್ಕೆ ಗುರಿಯಾಗಬೇಕಾದೀತೆಂಬ ಭಯದಿಂದ ತಮ್ಮ ಮನೆಗಳನ್ನು ಶೃಂಗರಿಸತೊಡಗಿದರು. ಜಗರಾಯನ ಪಕ್ಷದ ಬಹುಜನರ ಮನಸ್ಸು ತಿರುಗಿ, ಅವರು ಹೊಸ ಅರಸನನ್ನು ಪ್ರೀತಿಸ ತೊಡಗಿದರು. ಗೆದ್ದ ಎತ್ತಿನ ಬಾಲ ಹಿಡಿಯುವ ಜನರೇ ಈ ಜಗತ್ತಿನಲ್ಲಿ ಹೆಚ್ಚು. ಒಟ್ಟಿಗೆ ಚಂದ್ರಗಿರಿಯ ಪ್ರಜೆಗಳೆಲ್ಲ ಬಹುತರ ರಂಗರಾಯನ ಪಕ್ಷವನ್ನು ವಹಿಸಿ ಮಾತಾಡುತ್ತ ಓಣಿ–ಬೀದಿಗಳನ್ನು ಶೃಂಗರಿಸತೊಡಗಿದ್ದರೆಂದು ಹೇಳಬಹುದು. ಈ ಜಗತ್ತಿನಲ್ಲಿ ಯಾರ ಸಲುವಾಗಿ ಯಾವುದು ತಾನೆ ನಿಲ್ಲುತ್ತದೆ? ಈಗ ಒಂದು ಒಂದುವರೆ ತಿಂಗಳ ಹಿಂದೆ ಇನೇ ರಂಗರಾಯನ ಸಕುಟುಂಬ ಕೊಲೆಯಾಗಿಹೋಗಿರಲು ಅದೇ ರಂಗರಾಯನ ಮಗನ ಪುರಪ್ರವೇಶ ಸಮಾರಂಭದ ಸಿದ್ಧತೆಯು ಈಗ ಆಸ್ಥೆಯಿಂದ ಮಾಡಲ್ಪಡತೊಡಗಿತ್ತು! ಬೆಳಗಿನ ಐದು ತಾಸಿಗೆ ರಾಜಧಾನಿಯು ಕೈಸೇರಿ, ಸಂಜೆಯೊಳಗಾಗಿ ಇಡೀ ರಾಜಧಾನಿಯು ಗುಡಿ–ತೋರಣ–ಧ್ವಜ– ಪತಾಕೆಗಳಿಂದಲೂ, ಬಗೆ ಬಗೆಯ ಕಮಾನು ಗಳಿಂದಲೂ, ಮಂಟಪಗಳಿಂದಲೂ ಶೃಂಗರಿಸಿ ಸಿದ್ಧವಾಯಿತು.

ಬೆಳಗು ಎರಡು ತಾಸು ಇರುತ್ತಲೇ ಅರಸನ ಪಾಳಯದಲ್ಲಿ ವಾದ್ಯಗಳು ಬಾರಿಸ ತೊಡಗಿದವು. ಎಲ್ಲರ ಪ್ರಾತರ್ವಿಧಿಗಳು ತೀರಿ, ಆನೆಗಳು–ಕುದುರೆಗಳು ಶೃಂಗಾರವಾಗಹತ್ತಿದವು. ದಂಡಾಳುಗಳು ಪೋಷಾಕುಗಳನ್ನು ಹಾಕಿಕೊಳ್ಳಹತ್ತಿದರು. ಕುಮುದಿನಿಯು ರಾಜಪುತ್ರನಿಗೆ ದರ್ಬಾರದ ಸುಂದರವಾದ ಪೋಷಾಕು ಹಾಕಿ, ಆತನನ್ನು ರಾಜಚಿಹ್ನಗಳಿಂದ ಕೈಮುಟ್ಟ ಅಲಂಕರಿಸಿದಳು. ತಾನು ಪುರುಷರ ಯುದ್ಧದ ಉಡುಪು–ತೊಡಪುಗಳನ್ನು ಧರಿಸಿ, ಕಡುಗಲಿಯಂತೆ ಒಪ್ಪಿದಳು. ಎಚ್ಚಮನಾಯಕನು ಪೋಷಾಕು ಹಾಕಿಕೊಳ್ಳುತ್ತಿರಲು, ಕುಮುದಿನಿಯು ಅಲ್ಲಿಗೆ ಹೋಗಿ ರಾಜಪುತ್ರನ ಸಿದ್ಧತೆಯಾದದ್ದನ್ನು ತಿಳಿಸಿದಳು. ಆ ತರುಣದಂಪತಿಗಳು ಪರಸ್ಪರರನ್ನು ನೋಡುತ್ತಿರುವಾಗ, ಕುಮುದಿನಿಯ ಎಡಗಣ್ಣೂ ನಾಯಕನ ಬಲಗಣ್ಣೂ ಹಾರಹತ್ತಿದವು. ಆಗ ಪರಸ್ಪರರ ವಿಷಯವಾಗಿ ವಿಚಿತ್ರತರವಾದ ಆದರವು ಉತ್ಪನ್ನವಾಯಿತು. ಆ ಬಗೆಯ ಆದರವು ಆ ದಂಪತಿಗಳಲ್ಲಿ ಈವರೆಗೆ ಎಂದೂ ಹುಟ್ಟಿದ್ದಿಲ್ಲ. ಆ ಕಾಲದಲ್ಲಿ ಅವರ ಮನಸ್ಸುಗಳು ಅಸ್ವಸ್ಥವಾದವು. ಪರಸ್ಪರರ ಅವಲೋಕನಕ್ಕಾಗಿ ಮನಸ್ಸು ಉತ್ಸುಕವಾಗಿದ್ದರೂ, ಏನೋ ಒಂದು ಪ್ರಕಾರದ ಸಂಕೋಚತ್ವವು ಹುಟ್ಟಿ ಒಬ್ಬರು ಮತ್ತೊಬ್ಬರನ್ನು ನೋಡದಾದರು. ಆಗ ನಾಯಕನ ಮನಸ್ಸು ನಿಲ್ಲಲಾರದೆ ಕುಮುದಿನಿಗೆ– ಪ್ರಿಯೇ, ಕುಮುದಿನೀ, ನಿಮ್ಮೆಲ್ಲರ ಸಾಹಸದಿಂದ ಹಿಡಿದ ಕೆಲಸವು ಕೈಗೂಡಿದಂತಾಗಿ, ಹಿಂದಕ್ಕೆ ವಿವಾಹಕಾಲದಲ್ಲಿ ಮಾಡಿದ್ದ ನಿನ್ನ ಪ್ರತಿಜ್ಞೆಯು ಪೂರ್ಣ ವಾದಂತಾಯಿತಲ್ಲವೆ? ಅನ್ನಲು ಕುಮುದಿನಿಯು ಸ್ವಲ್ಪ ಲಜ್ಜಿತಳಾಗಿ– ಇದರಲ್ಲಿ ಯಾರ ಸಾಹಸವೇನು ಮಾಡಿದೆ? ಎಲ್ಲ ತಮ್ಮ ಪುಣ್ಯಪ್ರಭಾವವು, ಎಂದು ಉತ್ತರಕೊಡುತ್ತಿರುವಷ್ಟರಲ್ಲಿ ಋಷೀಶ್ವರನು ಕರೆಯುತ್ತಾನೆಂದು ಒಬ್ಬ ಸೇವಕನು ನಾಯಕನಿಗೆ ಹೇಳಿದನು. ಕೂಡಲೆ ನಾಯಕನು ಋಷೀಶ್ವರನ ಬಳಿಗೆ ಹೋದನು, ಆಗ ಆ ಮಹಾತ್ಮನು ನಾಯಕನನ್ನು ಕುರಿತು– ಪ್ರತಾಪಿಯೇ, ಇನ್ನು ಬೇಗನೆ ಪುರಪ್ರವೇಶ ಸಮಾರಂಭ ಆರಂಭವಾಗಲಿ. ಈ ದಿನ ಸುಮುಹೂರ್ತವು ಸಂಪೂರ್ಣವಾಗಿರುವುದರಿಂದ ರಾಜಕುಮಾರನ ಪಟ್ಟಾಭಿಷೇಕದ ಕಾರ್ಯವೂ, ನಿನ್ನ ವಿವಾಹದ ಕಾರ್ಯವೂ ಈ ದಿನವೇ ತೀರಿಹೋಗಲಿ. ''ಶುಭಸ್ಯಶೀಘ್ರಂ'' ಎಂಬ ಉಕ್ತಿಯಂತೆ ಶುಭಕಾರ್ಯದಲ್ಲಿ ವಿಲಂಬವು ಕೆಲಸದ್ದಲ್ಲ. ಪ್ರತಿಜ್ಞೆಯು ಪೂರ್ಣವಾಗಿರುವುದರಿಂದ ಈ ಕುಮುದಿನಿಯೊಡನೆ ಇನ್ನೊಮ್ಮೆ ನಿನ್ನ ನಿಜವಾದ ವಿವಾಹವಾಗಲಿಕ್ಕೆ ಪ್ರತಿಬಂಧವಿಲ್ಲ, ಎನ್ನಲು ನಾಯಕನಿಗೂ, ಕುಮುದಿನಿಗೂ ಪರಮಾನಂದವಾಯಿತು. ಅಷ್ಟರಲ್ಲಿ ಉಷಃಕಾಲವು ಸಮೀಪಿಸಿದ್ದರಿಂದ ರಾಜಪುತ್ರನೇ ಮೊದಲಾದವರು ಋಷೀಶ್ವರನ ಚರಣಕ್ಕೆರಗಿ, ಆ ಮಹಾತ್ಮನು ಪಲ್ಲಕ್ಕಿಯನ್ನೇರಲು, ತಮ್ಮ ತಮ್ಮ ವಾಹನಗಳನ್ನು ಹತ್ತಿದರು. ಅನೇಕ ವಾದ್ಯಗಳೊಡನೆ ಚತುರಂಗ ಬಲವು ಯಥಾಕ್ರಮದಿಂದ ಹಿಂದೆಯೂ, ಮುಂದೆಯೂ ಸಡಗರದಿಂದ ಸಾಗಿತು. ಮಧ್ಯದಲ್ಲಿ ಎಲ್ಲಕ್ಕೂ ಮುಂದೆ ಪ್ರಸಿದ್ಧ ಸರದಾರರ ಕುದುರೆಗಳ ಸಾಲುಗಳು, ಅವುಗಳ ಹಿಂದೆ ಋಷೀಶ್ವರನ ಪಲ್ಲಕ್ಕಿಯು, ಆ ಪಲ್ಲಕ್ಕಿಯ ಹಿಂದೆ, ರಾಜಪುತ್ರನ ಶೃಂಗರಿಸಿದ ಆನೆಯು ಸಾಗಿದ್ದವು. ರಾಜಪುತ್ರ ನೊಡನೆ ಅಂಬಾರಿಯಲ್ಲಿ ಕುಮುದಿನಿಯು ಕುಳಿತಿದ್ದಳು. ರಾಜಪುತ್ರನ ಆನೆಯ ಬಲಗಡೆಯಲ್ಲಿ ಎಚ್ಚಮನಾಯಕನ ಶೃಂಗರಿಸಿದ ಕುದುರೆಯೂ, ಎಡಗಡೆಯಲ್ಲಿ ಚಾಂದಖಾನ ಕುದುರೆಯೂ ಸಾಗಿದ್ದವು. ಅದರ ಹಿಂದೆ ಮತ್ತೆ ಸರದಾರರ ಕುದುರೆಗಳು ಸುವ್ಯವಸ್ಥೆಯಿಂದ ಸಾಗಿದ್ದವು.

ಈ ಮೇರೆಗೆ ರಾಜಪುತ್ರನು ಅತ್ಯಂತ ವೈಭವದಿಂದ ಪಟ್ಟಣವನ್ನು ಪ್ರವೇಶಿಸಿ, ಕೆಲವು ಹೊತ್ತಿನ ಮೇಲೆ ಮುಖ್ಯ ರಾಜಮಾರ್ಗದಲ್ಲಿ ಸಾಗಿದನು. ಆಗ ಸಮಾರಂಭದ ಸೌಂದರ್ಯವೂ, ವೈಭವವೂ ಹೆಚ್ಚಿದವು. ರಾಜಮಾರ್ಗದ ಎಡಬಲಗಳಲ್ಲಿರುವ ಅಂತಸ್ತಿನ ಸುಂದರವಾದ ಮನೆಗಳ ಮುಂದೆ ಜಲಪೂರ್ಣ ಕುಂಭಗಳನ್ನಿಟ್ಟು, ಬಾಗಿಲುಗಳನ್ನು ತೋರಣ, ಪುಷ್ಪಹಾರ, ಫಲ, ಪಲ್ಲವ ಮೊದಲಾದವುಗಳಿಂದ ಶೃಂಗರಿಸಿ, ಸುಗಂಧಯುಕ್ತ ಜಲದಿಂದ ಅಂಗಳಕ್ಕೆ ಥಳಿ ಹಾಕಿದ್ದರು. ಪ್ರತಿ ಒಬ್ಬರ ಬಾಗಿಲುಗಳಲ್ಲಿ ಹಾಕಿದ ಸುಗಂಧಯುಕ್ತಧೂಪದಿಂದ ಪಟ್ಟಣವೆಲ್ಲ ಘಮಘಮಿಸುತ್ತಿತ್ತು ಸುಮಂಗಲೆಯರು ನಡುನಡುವೆ ಆರತಿಗಳನ್ನು ಮಾಡಲು, ಅವರ ಆರತಿಯ ತಟ್ಟೆಗಳು ಧನಪೂರ್ಣವಾಗುತ್ತಿದ್ದವು. ಉಪ್ಪರಿಗೆಯಲ್ಲಿ ಕುಳಿತಿದ್ದ ಸುಂದರ ಸ್ತ್ರೀಯರು ರಾಜಪುತ್ರನ ಮೇಲೆ ಮೊದಲು ತಮ್ಮ ನೇತ್ರಕುಮುದಗಳ ಮಳೆಸುರಿಸಿ, ಆಮೇಲೆ ಸುಗಂಧಪುಷ್ಪಗಳ ವೃಷ್ಟಿಗರೆಯುತ್ತಿದ್ದರು. ಎಷ್ಟೋ ಪ್ರಮದೆಯರು ರಾಜಪುತ್ರನ ಮೇಲೆ ಸುವರ್ಣಪುಷ್ಪಗಳನ್ನು ತೂರಿದರು; ಕೆಲವರು ಭತ್ತದ ಅರಳುಗಳನ್ನು ಸೂರೆ ಮಾಡಿದರು. ರಾಜಪುತ್ರನು ಮುಂದಕ್ಕೆ ಸಾಗಿದಂತೆ ರಾಜಮಾರ್ಗವು ಈ ಸುಮಂಗಲೆಯರು ತಮ್ಮ ಸುಂದರ ಕರಗಳಿಂದ ಸುರಿಸಿದ ಮಂಗಲದ್ರವ್ಯಗಳಿಂದ ಸುಶೋಭಿತವಾಗುತ್ತಿತ್ತು. ಈ ಸುಮನೋಹರವಾದ ಪ್ರವೇಶ ಸಮಾರಂಭವು ಸಹೃದಯರ ಆನಂದಭಾಷ್ಪಗಳ ಸೇಚನದಿಂದ ಸತೇಜತ್ವವನ್ನು ಪಡೆದು, ಎರಡು ತಾಸು ಏರುವುದರೊಳಗೆ ಮುಗಿದು, ರಾಜಪುತ್ರನು ದಿವಾಣಖಾನೆಯ ಬಾಗಿಲಿಗೆ ಬರಲು, ಅಲ್ಲಿ ಸುಮಂಗಲೆಯರು ಆರತಿಗಳನ್ನು ಮಾಡಿ ನಿವಾಳಿಗಳನ್ನು ತೆಗೆದರು. ರಾಜಪುತ್ರನು ಶೃಂಗರಿಸಿದ ಆ ದಿವಾಣಖಾನೆಯನ್ನು ಪ್ರವೇಶಿಸುವಷ್ಟರಲ್ಲಿ, ಅದು ನಿಯಂತ್ರಿತ ಜನರಿಂದ ಸಂಘಟಿತವಾಗಿತ್ತು. ಸರದಾರರು, ಸರಕಾರದ ದೊಡ್ಡ ದೊಡ್ಡ ಅಧಿಕಾರಸ್ಥರು, ಶೆಟ್ಟರು,ಸಾವುಕಾರರು, ಪ್ರತಿಷ್ಠಿತ ಜನರು ಮೊದಲಾದವರಿಂದ ಅದು ತುಂಬಿಹೋಗಿತ್ತು. ಋಷೀಶ್ವರನು ಹಸ್ತಲಾಘವವನ್ನು ಕೊಟ್ಟು, ರಾಜಪುತ್ರನನ್ನು ಸಿಂಹಾಸನದ ಮೇಲೆ ಕುಳ್ಳಿರಿಸುವಾಗ, ಇನೇ ರಂಗರಾಯನ ಸೌಜನ್ಯವನ್ನು ನೆನಸಿ, ಎಲ್ಲರ ಕಣ್ಣುಗಳೊಳಗಿಂದ ನೀರುಗಳು ಬಂದವು. ಪಟ್ಟಾಭಿಷೇಕದ ಉಪಕರಣಗಳು ಸಿದ್ಧವಾಗಿರಲು, ಆ ಮಹಾಪುರುಷನೇ ಕೈಮುಟ್ಟಿ ಅಭಿಷೇಕದ ವಿಧಿಯನ್ನು ಮುಗಿಸಿದನು ! ಋಷೀಶ್ವರನು ಪೀಠದಲ್ಲಿ ವಿಶ್ರಮಿಸಲು, ಎಚ್ಚಮನಾಯಕನೇ ಮೊದಲಾದರು ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತುಕೊಂಡರು. ಸ್ತುತಿಪಾಠಕರ ಸ್ತುತಿಗಳೂ, ಸಂಬೋಧನಗಳೂ, ಸೂಚನೆಗಳೂ ನಡೆದಿರಲು, ಅರಸನ ವಂದನದ ಶಿಷ್ಟಾಚಾರಕ್ಕೆ ಆರಂಭವಾಯಿತು. ಎಲ್ಲ ಸರದಾರರು ಚಿನ್ನವೆಂಕಟರಾಜನ ಅಧಿಕಾರವನ್ನು ಒಪ್ಪಿಕೊಂಡದ್ದರ ಚಿಹ್ನವೋ ಅನ್ನುವಂತೆ, ಆತನಿಗೆ ಕಾಣಿಕೆಯನ್ನಿತ್ತು ಸಾಷ್ಟಾಂಗವಾಗಿ ವಂದಿಸಿದರು. ವಿಜಯನಗರದ ರಾಯರ ಪೂರ್ವ ಸಾಂಪ್ರದಾಯದಂತೆ, ಮುಸಲ್ಮಾನರ ಸಮಾಧಾನಕ್ಕಾಗಿ ಸಿಂಹಾಸನದ ಹತ್ತರ ಕುರಾಣವನ್ನು ಇಟ್ಟಿರಲು, ಚಾಂದಖಾನನು ಕಾಣಿಕೆಯನ್ನಿತ್ತು ಅರಸನಿಗೆ ಸಾಷ್ಟಾಂಗವಾಗಿ ನಮಿಸಿದನು. ಸಾಂಪ್ರದಾಯದಂತೆ ಆಗಬೇಕಾಗಿದ್ದ ಕೃತಿಗಳೆಲ್ಲ ಸಾಂಗವಾಗತೊಡಗಿದ್ದವು. ಇದನ್ನೆಲ್ಲ ನೋಡಿ ಎಚ್ಚಮನಾಯಕನ, ಹಾಗು ಕುಮುದಿನಿಯ ಕಣ್ಣುಗಳೊಳಗಿಂದ ಆನಂದಭಾಷ್ಪಗಳು ಹರಿಯತೊಡಗಿದವು !

ಆ ಆನಂದಪೂರ್ಣವಾದ ಸುಸಮಯದಲ್ಲಿ ಋಷೀಶ್ವರನು ಎದ್ದುನಿಂತು ಕುಮುದಿನಿಯನ್ನು ಕರೆದು– ಅಮ್ಮಾ ಕುಮುದಿನೀ, ಮುಂದಕ್ಕೆ ಬಾರಮ್ಮಾ! ಗಂಗಾಪ್ರವಾಹ ದಂತೆ ಪವಿತ್ರವಾದ ಅಂತಃಕರಣವೂ, ಪರಿಶುದ್ಧವಾದ ಆಚರಣೆಯೂ ಉಳ್ಳ ನೀನು, ಎಲ್ಲ ಬಗೆಯಿಂದಲೂ ನಿನಗೆ ಅನುರೂಪನಾಗಿದ್ದು ಪವಿತ್ರವಾದ ಬ್ರಹ್ಮಚರ್ಯವ್ರತದಿಂದ ಪರಿಪೂರ್ಣವಾಗಿರುವ ಈ ನರವೀರನಾದ ಎಚ್ಚಮನಾಯಕನ ಕೊರಳಲ್ಲಿ ಈ ಗಂಭೀರವಾದ ಸಭೆಯ ಸಮಕ್ಷ ಮಾಲೆಹಾಕುವುದಕ್ಕಾಗಿ ಮುಂದಕ್ಕೆ ಬಾ, ಎಂದು ಕರೆದು ಕುಮುದಿನಿಯ ಮುಂದೆ ಪುಷ್ಪಮಾಲೆಯನ್ನು ಹಿಡಿದನು. ಆಗ ಕುಮುದಿನಿಯು ವಿನಯದಿಂದ ತಲೆಬಾಗಿ, ಆನಂದಾತಿಶಯದಿಂದ ಕಂಪಿಸುತ್ತ ಋಷೀಶ್ವರನ ಚರಣಕ್ಕೆರಗಿ ಆತನ ಕೈಯೊಳಗಿನ ಮಾಲೆಯನ್ನು ಸ್ವೀಕರಿಸಿದಳು. ತರುವಾಯ ಆ ಕೋಮಲೆಯು ತಲೆಯನ್ನು ಸ್ವಲ್ಪ ಮೇಲಕ್ಕೆತ್ತಿ ಹೃದಯವು ಕಂಪಿಸುತ್ತಿರಲು, ಆಗಲೇ ಋಷೀಶ್ವರನನ್ನು ವಂದಿಸಿ ನಿಂತಿದ್ದ ಎಚ್ಚಮನಾಯಕನ ಕೊರಳಲ್ಲಿ ಮಾಲೆಯನ್ನು ಹಾಕಿದಳು. ತರುವಾಯ ಋಷೀಶ್ವರನು ಕುಮುದಿನಿಯ ಬಲಗೈಯನ್ನು ತನ್ನ ಬಲಗೈಯಲ್ಲಿಯೂ, ಎಚ್ಚಮನಾಯಕನ ಬಲಗೈಯನ್ನು ತನ್ನ ಎಡಗೈಯಲ್ಲಿಯೂ ಹಿಡಿದು, ಅವರಿಬ್ಬರನ್ನು ಕೃಪಾದೃಷ್ಟಿಯಿಂದ ನೋಡುತ್ತ ಕುಮುದಿನಿಯ ಹಸ್ತವನ್ನು ನಾಯಕನ ಹಸ್ತದಲ್ಲಿ ಇಟ್ಟು— ನಾಯಕನೇ, ಕುಮುದಿನಿಯ ಈ ಪುಣ್ಯಹಸ್ತವು ಎರಡುವರ್ಷ ಸತ್ಪುರುಷ ಸೇವೆಯನ್ನು ಮಾಡಿ ಧನ್ಯನಾಗಿರುವುದು ಕಂಡೆಯಾ ! ಇಂದಿನಿಂದ ನೀನು ವಿವಾಹಿತನಾಗಿ ಅಗಾಧವಾದ ಈಶ್ವರೀಮಾಯೆಯ ವೈಭವವನ್ನು ಅರಿಯಲು ಅಧಿಕಾರಿಯಾದೆ! ಆದರೂ, ಈಶ್ವರನನ್ನು ಮರೆತು ಆ ಮಾಯಾಮೋಹಕ್ಕೆ ಒಳಗಾಗಿ ಸುಖ–ದುಃಖಗಳ ತಿಕ್ಕಾಟದಿಂದ ಗಾಸಿಯಾಗಬೇಡ; ಸತ್ಸಮಾಗಮದ ಯೋಗದಿಂದ ಮಾಯೆಯು ನಿರ್ದುಷ್ಟವಾದ ಈಶ್ವರೀ ಪ್ರಸಾದವೆಂತಲೇ ತಿಳಿದು, ಅದರ ಸಹಾಯದಿಂದಲೇ ಈಶ್ವರಜ್ಞಾನವನ್ನು ಪಡೆದು ಪತ್ನಿಯೊಡನೆ ಕೃತಕೃತ್ಯನಾಗು ! ಇದು ನನ್ನ ಪೂರ್ಣಾಶೀರ್ವಾದವು, ಎಂದು ಹೇಳಿ, ಅವರಿಬ್ಬರು ವಂದಿಸುತ್ತಿರಲು ವರದ ಹಸ್ತವನ್ನು ಅವರ ತಲೆಯ ಮೇಲೆ ಇಟ್ಟು, ತನ್ನ ಸ್ಥಳದಲ್ಲಿ ಕುಳಿತುಕೊಂಡನು. ಈ ಕಾಲದಲ್ಲಿ ಸತ್ಸಮಾಗಮದ ಪ್ರಭಾವದಿಂದ ಸಭೆಯು ನಿರ್ವೈರವಾಗಿ ಶುದ್ಧಾನಂದದ ಅನುಭವವನ್ನು ಹೊಂದುತ್ತಿತ್ತು. ಪ್ರಿಯವಾಚಕರೇ, ಈಗ ಚಂದ್ರಗಿರಿಯ ದಿವಾಣಖಾನೆಯಲ್ಲಿ ಕ್ರಮಿಸಿ ಹೋಗುತ್ತಿರುವ ಸುಮುಹೂರ್ತದಲ್ಲಿ ಎಷ್ಟು ಜನರ ಇಷ್ಟಾರ್ಥಗಳು ಪೂರ್ಣವಾದವೆಂಬುದನ್ನು ಮನಸ್ಸಿನಲ್ಲಿ ತಂದಿರೇನು? ಮಗನಾದ ಚಿನ್ನವೆಂಕಟನು ಪಟ್ಟವೇರಿದ್ದರಿಂದ ಸ್ವರ್ಗಸ್ಥರಾದ ೩ನೇ ರಂಗರಾಯರ ಇಷ್ಟಾರ್ಥವು ಪೂರ್ಣವಾಯಿತು; ಪ್ರತಿಜ್ಞೆಯು ಕೈಗೂಡಿದ್ದರಿಂದಾದ ಆನಂದ ದೊಡನೆ ಕುಮುದಿನಿಯ ಪ್ರಾಪ್ತಿಯಾಗಲು, ಎಚ್ಚಮನಾಯಕನ ಇಷ್ಟಾರ್ಥವು ಪೂರ್ಣವಾಯಿತು; ಸನ್ಮಿತ್ರನ ಕಾರ್ಯಸಾಧನದಲ್ಲಿ ತನ್ನಿಂದ ಯಥಾಶಕ್ತಿ ಸಹಾಯವಾದದ್ದರಿಂದ ಚಾಂದಖಾನನ ಇಷ್ಟಾರ್ಥವು ಪೂರ್ಣವಾಯಿತು. ಸತ್ಸಮಾಗಮದಿಂದ ಯಾರ ಇಷ್ಟಾರ್ಥವು ತಾನೆ ಪೂರ್ಣ ವಾಗಲಿಕ್ಕಿಲ್ಲ !!

# ಶೃಂಗಾರಸಾಗರ

ಮೇಲೆ ಹೇಳಿದಂತೆ ಎಚ್ಚಮನಾಯಕನು ಕುಮುದಿನಿಯ ಪಾಣಿಗ್ರಹಣವನ್ನು ಮಾಡಿದ ಬಳಿಕ ಆ ತರುಣದಂಪತಿಗಳ ಭಾವವು ಒಮ್ಮೆಲೆ ಬಲವಾದದ್ದನ್ನು ನೋಡಿದರೆ, ಯಾರಿಗಾದರೂ ಕೌತುಕವಾಗದೆಯಿರದು. ಕುಮುದಿನಿಯ ದಿಟ್ಟತನವೆಷ್ಟು, ಪರಾಕ್ರಮವೆಷ್ಟು, ಸಾಹಸವೆಷ್ಟು? ಆಕೆಯು ಮಾಡಿದ ಒಂದೊಂದು ಕೆಲಸವನ್ನು ಮನಸ್ಸಿನಲ್ಲಿ ತಂದರೆ, ಆಕೆಯನ್ನು ಸ್ತ್ರೀ ರೂಪಧರಿಸಿದ ಪುರುಷನೆಂತಲೇ ಹೇಳಬೇಕಾಗುವುದು. ಅಂಥ ಕುಮುದಿನಿಯ ಆ ದಿಟ್ಟತನವೂ, ಪರಾಕ್ರಮವೂ, ಸಾಹಸವೂ ವಿವಾಹಕಾಲದಲ್ಲಿ ಎತ್ತ ಹೋದವೋ ಏನೋ ! ಆಕೆಗೆ ಎಚ್ಚಮನಾಯಕನ ಎದುರಿಗೆ ನಿಲ್ಲಲಿಕ್ಕೂ, ಆತನನ್ನು ದಿಟ್ಟಿಸಿ ನೋಡಲಿಕ್ಕೂ ಧೈರ್ಯವಾಗ ದ್ದರಿಂದ, ಎದೆಯು ದಡಗುಟ್ಟಿ ಹಾರುತ್ತಿರಲು, ಆಕೆಯು ಮೆಲ್ಲನೆ ಮುಖವೆತ್ತಿ ಯಾವಾಗಾದ ರೊಮ್ಮೆ ಆತನನ್ನು ಕದ್ದು ತಟ್ಟನೆ ನೋಡಿ, ನೋಡಿಯೂ ನೋಡದವಳಂತೆ ಇರುತ್ತಿದ್ದಳು! ಆ ಸುಂದರಿಯು ಕಂಪಿಸುವ ಕೈಗಳಿಂದ ಪುಷ್ಪಮಾಲೆಯನ್ನು ಪ್ರಯಾಸಪಟ್ಟು ಪತಿಯ ಕೊರಳಲ್ಲಿ ಹಾಕುವಾಗ, ಅಂಗಸ್ಪರ್ಶವಾದ ನೆವದಿಂದ ದಮ್ಮನೆ ದಣಿದಂತೆ ಆಗಿ ಆಕೆಯ ಸರ್ವಾಂಗವು ಬೆವರಲು, ಮೈಜುಮ್ಮೆಂದು ಕಂಪಿಸಹತ್ತಿ ರೋಮಾಂಚನಗಳೆದ್ದವು! ಋಷೀಶ್ವರನು ಆ ಕೋಮಲೆಯ ಹಸ್ತವನ್ನು ನಾಯಕನ ಹಸ್ತದಲ್ಲಿ ಇಟ್ಟಿರಲು, ಆಕೆಗೆ ಸುಖವೊ—ದುಃಖವೋ ಎಂಬುದಾವುದೂ ತಿಳಿಯದೆ, ಏನೋ ಒಂದು ತರವಾದಂತಾಗಿ ಆಕೆಯ ಮನಸ್ಸು ಚಂಚಲವಾಯಿತು, ಶ್ವಾಸೋಚ್ಛ್ವಾಸದ ವ್ಯಾಪಾರವು ಒತ್ತರದಿಂದ ಸಾಗಹತ್ತಿತು. ಆಕೆಯ ಹಸ್ತವು ಬೆವತು ಜಡವಾಯಿತು! ಇಂಥ ಪುಕ್ಕಿಯು ಅಗಸನ ಸಹಾಯದಿಂದ ರಾಜಪುತ್ರನನ್ನು ಹ್ಯಾಗೆ ಕರಕೊಂಡು ಹೋಗಿರಬಹುದು! ಮಧ್ಯಮಾರ್ಗದಲ್ಲಿ ಅಕಸ್ಮಾತ್ತಾಗಿ ತನ್ನ ಕೈಯನ್ನು ಹಿಡಿದ ದುರಗಪ್ಪ ನಾಯಕನನ್ನು ಮಾತಿನಪೆಟ್ಟಿನಿಂದಲೇ ಹ್ಯಾಗೆ ಮೆತ್ತಗೆ ಮಾಡಿರಬಹುದು! ಇರಲಿ, ಕುಮುದಿನಿಯು ಎಷ್ಟಾದರೂ ಹೆಂಗಸು, ಆಕೆಯು ಪ್ರಸಂಗವಿಶೇಷದಲ್ಲಿ ಪುಕ್ಕಿಯಾದಳೆಂದೂ ಅನ್ನಬಹುದು; ಆದರೆ ಎಚ್ಚಮನಾಯಕನಂಥ ನರವೀರನ ಸ್ಥಿತಿಯೂ ಕುಮುದಿನಿಯಂತೆಯೇ ಆಗಲಿಕ್ಕೆ ಕಾರಣವೇನು? ಕುಮುದಿನಿಯನ್ನು ದಿಟ್ಟಿಸಿ ನೋಡಲಿಕ್ಕೂ, ಆಕೆಯ ಹೆಸರನ್ನು ಸಂಕೋಚವಿಲ್ಲದೆ ಉಚ್ಚರಿಸಲಿಕ್ಕೂ ಆತನಿಗೆ ಧೈರ್ಯವಾಗಬಾರದೇನು? ಕುಮುದಿನಿಯೇನು ಹೊಸಬಳೆ? ಆಕೆಯ ಪರಿಚಯವು ನಾಯಕನಿಗೆ ಇದ್ದಿಲ್ಲವೆ? ಅಥವಾ ಮನುಷ್ಯಲೋಕದ ಕುಮುದಿನಿಯು ಹೋಗಿ ದೇವಲೋಕದ ಕುಮುದಿನಿಯು ಆಗಿದ್ದಳೆ? ಏನೂ ಇಲ್ಲ; ವಿವಾಹವೆಂಬ ಮನೋಹರವಾದ ಬಂಧನದ ಪ್ರಭಾವವೇ ಅಂಥಾದ್ದು! ಆ ಬಂಧನಕ್ಕೊಳಗಾದ ಸ್ತ್ರೀಪುರುಷರ ಸ್ವಾತಂತ್ರ್ಯವು ನಷ್ಟವಾಗಿ, ಹೆಂಡತಿಯಲ್ಲಿದ್ದ ಪತಿಭಕ್ತಿಯ ಮಾನದಿಂದ ಗಂಡನಿಗೂ, ಗಂಡನಲ್ಲಿದ್ದ ಪತ್ನೀಪ್ರೇಮದ ಮಾನದಿಂದ ಹೆಂಡತಿಗೂ ಸುಖವಾಗಬೇಕೆಂಬದು ಸಾಮಾನ್ಯ ನಿಯಮವಾಗಿರುವುದು! ಹೀಗೆ ಸ್ವಾತಂತ್ರ್ಯವು ನಷ್ಟವಾದ ಬಳಿಕ ಪರಾವಲಂಬಿಗಳಾದ ದಂಪತಿಗಳನ್ನು ಲಜ್ಜಾ-ಭಯಗಳು ಆವರಿಸುವು ದೇನಾಶ್ಚರ್ಯವು?

ರಸಿಕರಾದ ಪ್ರಿಯವಾಚಕರೇ, ಕುಮುದಿನಿಯು ಲೋಕಸುಂದರಿಯೆಂದು ನಾವು ಹಿಂದೆ ಆಗಾಗ್ಗೆ ವರ್ಣಿಸಿದ್ದನ್ನು ನೀವು ಮರೆತಿರಲಿಕ್ಕಿಲ್ಲ; ಆದರೆ, ಅವಿವಾಹಿತಳಾಗಿ ಕೇವಲ ಸರಳವೃತ್ತಿಯಿಂದ ಒಪ್ಪುತ್ತಿದ್ದ ಆಗಿನ ಕುಮುದಿನಿಯ ಸ್ವಾಭಾವಿಕ ಸೌಂದರ್ಯಕ್ಕೂ ವಿವಾಹಿತಳಾಗಿ ಸಂಕೋಚ ವೃತ್ತಿಯಿಂದ ಒಪ್ಪುವ ಈಗಿನ ಕುಮುದಿನಿಯ ಸುಲಲಿತ ಸೌಂದರ್ಯಕ್ಕೂ ಬಹಳ ಅಂತರವಿರುವುದೆಂಬ ಮಾತನ್ನು ನೀವು ಒಪ್ಪದೆ ಇರಲಾರಿರಿ. ಸಂಕೋಚ ವೃತ್ತಿಯಿಂದುಂಟಾದ ಲಜ್ಜೆ ಮೂಲಕ ಸ್ತ್ರೀಯರ ಸೌಂದರ್ಯಕ್ಕೆ ಕಳೆಯೇರುವುದರಿಂದ, ಲಜ್ಜೆಯನ್ನು ಸ್ತ್ರೀಯರ ಸ್ವಾಭಾವಿಕವಾದ ಅಲಂಕಾರವೆಂತಲೇ ಹೇಳತಕ್ಕದ್ದು. ಕುಮುದಿನಿಯು ಇಂದು ಈ ಅಲಂಕಾರ ದಿಂದ ಅಲಂಕೃತಳಾಗಿರಲು, ಆ ಮುಗ್ಧೆಯನ್ನು ರಸಿಕರಾದ ಪ್ರಮದೆಯರು ಉತ್ತಮೋತ್ತಮವಾದ ವಸ್ತ್ರಾಭರಣಗಳಿಂದಲೂ, ಕುಂಕುಮ–ಕೇತಕಿ–ಪುಷ್ಪಮಾಲೆ–ಕಾಡಿಗೆ ಮೊದಲಾದ ಸೌಭಾಗ್ಯ ದ್ರವ್ಯಗಳಿಂದಲೂ, ಮತ್ತಿಷ್ಟು ಅಲಂಕರಿಸಿದರು. ಕುಮುದಿನಿಯ ಇಂದಿನ ಸೌಂದರ್ಯವನ್ನು ವರ್ಣಿಸುವ ಯೋಗ್ಯತೆಯು ಯಾವನಿಗಿರುವುದು? ತಿದ್ದಿಮಾಡಿದ ಚಿನ್ನದ ಪುತ್ಥಳಿಯಂತೆ ಇದ್ದ ಆಕೆಯು, ವಸ್ತ್ರಾಭರಣಗಳಿಂದ ಎದ್ದುಕಾಣುವುದನ್ನು ಪ್ರತ್ಯಕ್ಷ ನೋಡಿದವರ ಕಣ್ಣುಗಳು ಮಾತ್ರ ಸಫಲವಾದವುಗಳೆಂದು ನಾವು ಸ್ಪಷ್ಟವಾಗಿ ಹೇಳುವೆವು? ಆ ದಿನ ಕುಮುದಿನಿಯು ಉತ್ತಮವಾದ ಜರದ ಬಿಳಿಯ ಸೂಕ್ಷ್ಮಪತ್ತಲವನ್ನು ತಿದ್ದಿ ಉಟ್ಟುಕೊಂಡು, ಜರದಂಚಿನ ಹಸರು ರೇಶಿಮೆಯ ಸೂಕ್ಷ್ಮ ಕುಪ್ಪಸವನ್ನು ಮೈಗೆ ಒರಕೊಳ್ಳುವಂತೆ ತೊಟ್ಟುಕೊಂಡಿದ್ದಳು. ಮೊದಲೇ ಮುದ್ದು ಸುರಿಯುವ ಆಕೆಯ ಮುಖವು; ಅದರಲ್ಲಿ ಚತುರರಾದ ಸ್ತ್ರೀಯರು ಆಕೆಯ ಕಿವಿಗಳಲ್ಲಿ ಮುತ್ತಿನ ಬುಗುಡಿ–ವಜ್ರದ ಬೆಂಡೋಲೆಗಳನ್ನೂ, ಮೂಗಿನಲ್ಲಿ ಬುಲಾಕು–ಮೂಗುಬಟ್ಟುಗಳನ್ನೂ ಒಪ್ಪುವಂತೆ ಇಟ್ಟಿದ್ದರಿಂದ ಆ ಮುಖದ ಮೋಹಕತ್ವವು ಮತ್ತಿಷ್ಟು ಹೆಚ್ಚಿತು. ಆಕೆಗೆ ಹೆರಳುಹಾಕಿ ಚಕ್ರದುರುಬವನ್ನು ಕಟ್ಟಿ, ಅದರಲ್ಲಿ ಹರಳು ಕೆಚ್ಚಿದ ಚಿನ್ನದ ಒಂದೆಂದರೆ ಒಂದೇ ಗುಲಾಬಿಯ ಹೂವನ್ನು ತಿರುಗಿಸಿ, ಆ ತುರುಬಿನ ಸುತ್ತಲು, ಮಲ್ಲಿಗೆ–ಪಾರಿಜಾತಗಳ ಅರಳುಮಗ್ಗೆಗಳ ಸುಂದರ ಮಾಲೆಗಳನ್ನು ಮುಡಿಸಿದ್ದರು. ಆ ಚಾರುಗಾತ್ರಿಯ ಕೊರಳಲ್ಲಿ, ಸೂಕ್ಷ್ಮವಾದ ಪತ್ತಲದೊಳಗಿಂದ ಕಾಣುವ ಸರಿಗೆ–ಚಂದ್ರ ಹಾರಗಳೂ, ತೋಳುಗಳಲ್ಲಿ ಒಪ್ಪುವ ಒಂಕಿ–ನಾಗಮುರಿಗೆಗಳೂ, ಕೈಯೊಳಗಿನ ಜಣ್ಣ ಜಣ್ಣದ ಬಳೆಗಳನ್ನಲಂಕರಿಸುವ ವಜ್ರದ ಕಂಕಣ– ತೋಡೆಗಳೂ ಬಹು ಮನೋಹರವಾಗಿ ಒಪ್ಪುತ್ತಿದ್ದವು. ಆ ಮುಗ್ಧೆಯ ಟೊಂಕದೊಳಗಿನ ಚಿನ್ನದ ಪಟ್ಟಿಯಿಂದುಂಟಾದ ಶೋಭೆಯನ್ನು ವರ್ಣಿಸುವುದಂತು ಅಸಾಧ್ಯವೇ ಸರಿ. ಆ ಪಟ್ಟಿಯು ಟೊಂಕವನ್ನು ರಾವಿಕೊಂಡು ಹೊಳೆಯುತ್ತಿದ್ದದ್ದರಿಂದ, ಅದರ ಮೇಲ್ಗಡೆಯಲ್ಲಿ ಕುಪ್ಪಸವನ್ನು ಬಿಗಿದು, ಸೆರಗನ್ನು ಮೆಲ್ಲನೆ ಎತ್ತಿ ಅದೇ ಬರುತ್ತಿರುವ ಬಟ್ಟಕುಚಗಳಿಂದ ಸುಂದರವಾಗಿ ತೋರುವ ಹೃದಯಪ್ರದೇಶವೂ, ಕೆಳಗಡೆಯಲ್ಲಿ ಶರೀರದ ಸೌಂದರ್ಯವನ್ನು ವೃದ್ಧಿಗೊಳಿಸುವ ಸ್ಥೂಲವಾದ ನಿತಂಬಪ್ರದೇಶವೂ ವಿಂಗಡವಾಗಿ ಕಾಣುತ್ತಿದ್ದವು. ಆಕೆಯು ಕಾಲಲ್ಲಿ ಸರಪಳಿಯನ್ನೂ ಪೈಜಣವನ್ನೂ ಇಟ್ಟು, ಪಾದದ ಬೆರಳುಗಳಲ್ಲಿ ಕಾಲುಂಗುರ ಸುರಳಿ–ಪಿಲ್ಲೆಗಳನ್ನೂ ಇಟ್ಟಿದ್ದಳು. ಆ ವಿಶಾಲಾಕ್ಷಿಯು ಕಣ್ಣುಗಳು ಕಾಡಿಗೆಯಿಂದಲೂ, ಹಣೆಯು ಸುಂದರವಾದ ತಿಲಕದಿಂದಲೂ ಚಿತ್ತಾಕರ್ಷಕವಾಗಿ ಒಪ್ಪುತ್ತಿದ್ದವು.

ಆಕೆಯ ಶರೀರವು ಸುಗಂಧಲೇಪನದಿಂದ ಘಮಘಮಿಸುತ್ತಿದ್ದು ಮುಖವು ಸುಗಂಧಯುಕ್ತವಾದ ತಾಂಬೂಲದಿಂದ ಅಲಂಕೃತವಾಗಿತ್ತು. ಕುಮುದಿನಿಯ ಯಾವ ಅವಯವಗಳ ಸೌಂದರ್ಯ ದಲ್ಲಿಯೂ ಕುಂದು ಇಡುವ ಹಾಗಿದ್ದಿಲ್ಲ. ಒಟ್ಟಿಗೆ ಆಕೆಯು ಮಧ್ಯಮ ನಿಲುವಿಕೆಯ, ಬಿಗಿಯಾದ ಮೈಕಟ್ಟಿನ ಚೆಲುವೆಯಾದ ಸುಂದರ ತರುಣಿಯಾಗಿದ್ದಳು.

ಇತ್ತಿತ್ತ ಬಹುತರ ಯಾವಾಗಲೂ ಪುರುಷವೇಷದಿಂದಲೇ ಇರುತ್ತಿದ್ದ ಕುಮುದಿನಿಗೆ, ಇಂದಿನ ವಸ್ತ್ರಾಲಂಕಾರಗಳ ಆಡಂಬರದಿಂದ ಹಿಡಿದುಬಿಟ್ಟ ಹಾಗಾಗಿ, ಜನರಮುಂದೆ– ವಿಶೇಷವಾಗಿ ಪತಿಯ ಎದುರಿಗೆ ಹೋಗಲಿಕ್ಕೆ ಆಕೆಗೆ ನಾಚಿಕೆಸಾವು ಬಂದಂತಾಯಿತು! ಏಕಾಂತದಲ್ಲಿ ಈ ವೇಷದಿಂದ ಪತಿಯ ಬಳಿಗೆ ಹ್ಯಾಗೆ ಹೋಗಬೇಕು? ಅಲ್ಲಿಗೆ ಹೋದಬಳಿಕ ಪತಿಯ ಎದುರಿಗೆ ಹ್ಯಾಗೆ ನಿಲ್ಲಬೇಕು? ಅಂಜುತ್ತ ನಿಂತುಕೊಂಡಿದ್ದ ನನ್ನನ್ನು ಪತಿಯು ಮಾತಾಡಿಸಿದರೆ, ಹ್ಯಾಗೆ ಮಾತಾಡಬೇಕು? ಮಾತಾಡಲಾರದೆ ಮರುಳಿಯಂತೆ ನಿಂತಿದ್ದ ನನಗೆ ಪತಿಯು ಏನಾದರೂ ಬೇಡಿದರೆ ಹ್ಯಾಗೆ ಒಯ್ದುಕೊಡಬೇಕು? ಎಂಬಿವೇ ಮೊದಲಾದ ಸರ್ವಸಾಧಾರಣ ಸಂಗತಿಗಳೂ ಅಂದು ಆ ಕೋಮಲೆಗೆ ಗಹನ ವಿಷಯಗಳಾಗಿ, ಆಕೆಯನ್ನು ವಿಚಾರಮಗ್ನವಾಗಿ ಮಾಡಿಬಿಟ್ಟವು! ಅನುಭವಿಕರಾದ ತನ್ನ ಓರಿಗೆಯ ಗೆಳತಿಯರನ್ನು ಕೇಳಿ ಈ ಪ್ರಶ್ನೆಗಳ ನಿರ್ಣಯ ಮಾಡಿಕೊಳ್ಳ ಬೇಕೆಂದರೆ, ಯಾವಾಗಲೂ ಗಂಡರಾಮಿಯಂತೆ ಪುರುಷರೊಡನೆ ದೊಡ್ಡ ದೊಡ್ಡ ಪೌರುಷದ ಆಲೋಚನೆಗಳನ್ನೂ, ಕೃತಿಗಳನ್ನೂ ಮಾಡುವುದರಲ್ಲಿಯೇ ಆಕೆಯ ಕಾಲಕ್ಷೇಪವಾದದ್ದರಿಂದ, ಆಕೆಗೆ ಅಂಥ ಸಲಿಗೆಯ ಗೆಳತಿಯರೇ ಇದ್ದಿಲ್ಲ. ಹೊತ್ತು ಮುಣುಗಿತು. ಬಿದಿಗೆಯ ಚಂದ್ರನು ಮೇಲಕ್ಕೇರಿ ಮೋಡಗಳೊಳಗೆ ತನ್ನ ಕಿರಣಗಳನ್ನು ಭೇದಿಸಿ ಮಂದಪ್ರಕಾಶ ವನ್ನು ಎಲ್ಲ ಕಡೆಗೆ ಹರವಿದನು. ಕುಮುದಿನಿಯು ನಾಲ್ಕು ತಾಸು ರಾತ್ರಿಯ ಸುಮಾರಕ್ಕೆ ವಿಲಾಸ ಮಂದಿರದಲ್ಲಿದ್ದ ಪತಿಯ ಬಳಿಗೆ ಶಂಕಿಸುತ್ತ ಹೊರಟಳು. ಆಕೆಯ ಕಾಲುಂಗುರಗಳ ಸ್ಪಷ್ಟವಾದ ಸಪ್ಪಳವು, ಪೈಜಣಗಳ ಮಂಜುಳ ನಾದದಲ್ಲಿ ಬೆರೆತುಕೊಂಡು ಸುಶ್ರಾವ್ಯ ಮಿಶ್ರಧ್ವನಿ ಯನ್ನುಂಟುಮಾಡುತ್ತಿರಲು, ವಿಲಾಸ ಮಂದಿರವು ಸಮೀಪಿಸಿದಂತೆ ಆಕೆಯ ಎದೆಯು ದಡಗುಟ್ಟಿ ಹಾರುತ್ತಿರಲು, ಆಕೆಗೆ ಎಂದೂ ನಡೆದು ಗೊತ್ತಿಲ್ಲದ ಮಂದಗಮನವು ತಾನೇ ತಲೆದೋರಿ ನೋಡುವವರಿಗೆ ಅಂದವಾಗಿ ಒಪ್ಪುತ್ತಿರಲು, ಒಮ್ಮೆ ಹ್ಯಾಗಾದರೂ ಮಾಡಿ ಆಕೆಯು ಪತಿಯ ಸನ್ನಿಧಿಯನ್ನು ಹೊಂದಿದಳು.

ಕುಮುದಿನಿಯು ಹೋದಾಗ ಎಚ್ಚಮನಾಯಕನು ವೀಣೆಯನ್ನು ಕೂಡಿಸುವದರಲ್ಲಿ ಮಗ್ನನಾದವನಂತೆ ಕುಳಿತುಕೊಂಡಿದ್ದನು. ಆ ವಿಲಾಸ ಮಂದಿರವು ಬಗೆಬಗೆಯ ಕೃಷ್ಣಲೀಲೆಗಳ ಸುಂದರ ಚಿತ್ರಗಳಿಂದ ಮನೋಹರವಾಗಿ ಒಪ್ಪುವ ಗೋಡೆಗಳಿಂದಲೂ, ಮುತ್ತಿನ ಜಾಲರ– ಮುತ್ತಿನ ಗೊಂಚಲು–ವಿಚಿತ್ರವರ್ಣದ ಕಾಜಿನ ಜುಮುರುಗಳು–ಬಣ್ಣಬಣ್ಣದ ಕಾಜಿನ ಹಂಡೆಗಳು ಇವುಗಳಿಂದ ಸುಶೋಭಿತವಾಗಿದ್ದ ಛತ್ತಿನಿಂದಲೂ, ತಕ್ಕ ಸ್ಥಳದಲ್ಲಿ ಸುವ್ಯವಸ್ಥಿತವಾಗಿ ಇರಿಸಿದ್ದ ಬಗೆಬಗೆಯ ಕಲಾಕೌಶಲ್ಯದ ಸುಂದರವಾದ ಒಡವೆಗಳಿಂದಲೂ ಅಲಂಕೃತವಾಗಿತ್ತು. ನೆಲದ ಮೇಲೆ ಉತ್ತಮವಾದ ರತ್ನಗಂಬಳಿಯನ್ನು ಹಾಸಿ, ಅದರ ಮೇಲೆ ಮಂದಿರದ ಮಧ್ಯದಲ್ಲಿ

ಬಂಗಾರದ ನೀರಿನ ಸುಳುವುಗಳಿಂದ ಸುಶೋಭಿತವಾಗಿದ್ದ ಪಲ್ಲಂಗವನ್ನು ಇಟ್ಟಿದ್ದರು. ಆ ಪ್ರಶಸ್ತವಾದ ಪಲ್ಲಂಗವು ಬೆಲೆಯುಳ್ಳ ಸುಖಕರವಾದ ಹಾಸಿಗೆ–ಹೊದಿಕೆಗಳಿಂದಲೂ, ಶುಭ್ರವಸ್ತ್ರದ ಮೇಲುಮುಸುಕಿನಿಂದಲೂ, ಅಲ್ಲಲ್ಲಿ ಅಲೆದಾಡುತ್ತ ಸುಗಂಧವನ್ನು ಬೀರುವ ಮಲ್ಲಿಗೆ–ಸಂಪಿಗೆ–ಸುರಗಿ–ಸೇವಂತಿಗೆ ಮೊದಲಾದ ಸುಗಂಧ ಪುಷ್ಪಗಳ ಮಾಲೆಗಳಿಂದಲೂ ಚಿತ್ತಾಕರ್ಷಕವಾಗಿತ್ತು ಸುಗಂಧದ ಎಣ್ಣೆಗಳಿಂದ ಪರಿಪೂರ್ಣವಾಗಿ ತುಂಬಿದ ಬಂಗಾರದ ಸಮೆಗಳೊಳಗೂ, ಛತ್ತಿನಲ್ಲಿ ತೂಗಾಡುವ ಕಾಜಿನ ಹಂಡೆಗಳೊಳಗೂ ಢಾಳಾಗಿ ಉರಿಯುವ ದೀಪ ಜ್ಯೋತಿಗಳ ಅವಿಚ್ಛಿನ್ನ ಪ್ರಕಾಶವು ವಿಲಾಸಮಂದಿರದ ಶೋಭೆಯನ್ನು ಹೆಚ್ಚಿಸುತ್ತಿತ್ತು, ಬಗೆಬಗೆಯ ಸುಗಂಧದ್ರವ್ಯಗಳನ್ನೂ–ಸುಗಂಧಪುಷ್ಪಗಳ ಸುಂದರ ಹಾರಗಳನ್ನೂ–ಸ್ವಾದಿಷ್ಟವಾದ ತರತರದ ಖಾದ್ಯಗಳನ್ನೂ–ಉತ್ತೇಜಕವಾದ ಹಲವು ವಿಧದ ರುಚಿಕರ ಪೇಯಗಳನ್ನೂ ಉತ್ಸಾಹವರ್ಧಕ ವಾದ ತಾಂಬೂಲ ದ್ರವ್ಯಗಳನ್ನೂ ಬೆಳ್ಳಿ–ಬಂಗಾರದ ಪ್ರಶಸ್ತವಾದ ತಾಟುಗಳಲ್ಲಿ ತುಂಬಿ ತುಂಬಿ ವ್ಯವಸ್ಥೆಯಿಂದ ಇಟ್ಟಿದ್ದರು. ವೀಣೆ, ಸಾರಂಗ, ಜಲತರಂಗ, ಮೃದಂಗ ಮೊದಲಾದ ಸಂಗೀತದ ಸುಂದರವಾದ ಉಪಕರಣಗಳು ದೀಪಜ್ಯೋತಿಯಲ್ಲಿ ಲಕಲಕಿಸುತ್ತಿದ್ದವು. ವಿಶ್ರಾಂತಿಗೆ ಯೋಗ್ಯವಾದ ಬಗೆಬಗೆಯ ಸುಖಾಸನಗಳು ಆ ವಿಲಾಸಮಂದಿರಕ್ಕೆ ಅಲಂಕಾರಭೂತವಾಗಿ ಅಲ್ಲಲ್ಲಿ ಒಪ್ಪುತ್ತಿದ್ದವು. ನಮ್ಮ ವರ್ಣನಾಶಕ್ತಿಯನ್ನು ಮೀರಿದ್ದ ಆ ವಿಲಾಸಮಂದಿರವನ್ನು ವರ್ಣಿಸಹೋಗಿ, ಅದರ ಯೋಗ್ಯತೆಯನ್ನು ಕಡಿಮೆಮಾಡುವುದಕ್ಕಿಂತ, ಆ ಮಂದಿರವು ವಿಜಯನಗರದ ರಾಯರ ವಿಲಾಸಮಂದಿರವನ್ನು ಹೋಲುತ್ತಿತ್ತೆಂದು ಹೇಳಿಬಿಟ್ಟರೆ, ನಮ್ಮ ವರ್ಣನದಲ್ಲಿ ಕಂಡುಬರುವ ಕೊರತೆಗಳನ್ನು ತುಂಬಿಕೊಳ್ಳಲಿಕ್ಕೆ, ನಮ್ಮ ರಸಿಕ ವಾಚಕರಿಗೆ ಅನುಕೂಲ ಮಾಡಿ ಕೊಟ್ಟಂತಾಗುವುದು ! ಇಂಥ ಮನೋಜ್ಞಸ್ಥಾನದಲ್ಲಿ ಮೇಲೆ ಹೇಳಿದಂತೆ ನಾಯಕನು ವೀಣೆಯನ್ನು ಕೂಡಿಸತೊಡಗಿರಲು, ಕುಮುದಿನಿಯು ಒಳಗೆ ಬಂದು ಬಗೆಬಗೆಯ ವಿಚಾರಗಳ ಗುಂಗಿನಿಂದ ತನ್ನ ಕೈಯಲ್ಲಿದ್ದ ಸುಂದರವಾದ ಹೂವಿನತುರಾಯಿಯ ದೇಟನ್ನು, ಅಂಗುಷ್ಠ–ತರ್ಜನೀ–ಮಧ್ಯಮಾಂಗುಲಿಗಳ ಮಧ್ಯದಲ್ಲಿ ತಿರುಗಿಸುತ್ತ ನಾಯಕನ ಕಡೆಗೆ ಮೋರೆಮಾಡಿ ನಿಂತು ಕೊಳ್ಳದವಳಂತೆ ಗೋಡೆಯಕಡೆಗೆ ಸ್ವಲ್ಪ ಒಲಿದು, ಕಾಲುಂಗುಟದಿಂದ ರತ್ನಗಂಬಳಿಯನ್ನು ತಿಕ್ಕುತ್ತ ಬಾಗಿಲ ಬಳಿಯಲ್ಲಿಯೇ ನಿಂತುಕೊಂಡಳು. ಆಕೆಯನ್ನು ಕಳಿಸಬಂದ ಸಖಿಯರು ವಿಲಾಸಮಂದಿರದ ಬಾಗಿಲನ್ನು ಹಾಕಿಕೊಂಡು ಹೋಗಲು, ನಾಯಕನ ವೀಣಾವಾದನಕ್ಕೆ ಆರಂಭವಾಯಿತು. ನಾಯಕನಿಗೆ ವೀಣೆಯನ್ನು ಬಾರಿಸುವ ಇಚ್ಛೆಯೂ, ಕುಮುದಿನಿಗೆ ಅದನ್ನು ಕೇಳುವ ಇಚ್ಛೆಯೂ ಇಲ್ಲದಿದ್ದರೂ, ಆ ತರುಣದಂಪತಿಗಳ ಮಟ್ಟ ಮೊದಲಿನ ಏಕಾಂತವಾಸದಿಂದುಂಟಾದ ಸಂಕೋಚಾದಿ ವಿಕಾರಗಳ ಭರವು ತಗ್ಗುವವರೆಗೆ, ವೀಣೆಯಂಥ ಮಧ್ಯಸ್ಥಳ ಮಾತಿಗೆ ಅವರು ಒತ್ತಾಯದಿಂದಾದರೂ ಕಿವಿಗೊಡಲೇಬೇಕಾಗಿತ್ತು.

ಕುಮುದಿನಿಯು ಬಂದಬಳಿಕ ಒಂದು ತಾಸಿನವರೆಗೆ ನಾಯಕನು ಗಟ್ಟಿ ಮನಸ್ಸು ಮಾಡಿ ವೀಣೆಯನ್ನು ಬಾರಿಸಿ ನೋಡಿದನು; ಆದರೆ ಆ ಸುಂದರಿಯೇನು ತನ್ನ ಸ್ಥಳಬಿಟ್ಟು ಕದಲಲಿಲ್ಲ. ಒಂದು ತುಟಿಯನ್ನು ಎರಡು ಮಾಡಲಿಲ್ಲ. ಆಕೆಯು ತನ್ನ ಕೈಯಲ್ಲಿ ಲೀಲಾರ್ಥವಾಗಿ ಹಿಡಿದಿದ್ದ

ತುರಾಯಿಯನ್ನು ತನ್ನ ಸುಂದರವಾದ ಕಣ್ಣುಗಳಿಂದ ನೋಡುತ್ತ, ನಡುನಡುವೆ ಕೋಲಮಿಂಚು ಪಳಕ್ಕನೆ ಹೊಳೆದು ಅಸ್ತವಾಗುವಂತೆ ತನ್ನ ಕಟಾಕ್ಷವನ್ನು ನಾಯಕನ ಮೇಲೆ ಎಸೆದು, ಕೂಡಲೆ ಅದನ್ನು ಸೆಳೆದುಕೊಳ್ಳುತ್ತಿದ್ದಳು. ಸೌಂದರ್ಯದ ರಾಶಿಯಂತೆ ನಿಂತುಕೊಂಡಿದ್ದ ತನ್ನ ಪ್ರಿಯಳನ್ನು, ವೀಣೆಬಾರಿಸುತ್ತ ನಾಯಕನು ನಡುನಡುವೆ ನೋಡುವಾಗ, ಆತನ ನೋಟದ, ಹಾಗು ಕುಮುದಿನಿಯ ಕಟಾಕ್ಷದ ತಾಕಲಾಟದ ಸುಯೋಗವು ಒದಗಿದ ಕೂಡಲೆ, ಅವರಿಬ್ಬರ ಹೃದಯ ದಲ್ಲಿ ಏನೋ ಸಂಚರಿಸಿದಂತಾಗಿ ಅವರ ಸುಂದರ ಶರೀರಗಳು ರೋಮಾಂಚಿತವಾಗುತ್ತಿದ್ದವು! ಬರಬರುತ್ತ ಈ ರೋಮಾಂಚನ ವ್ಯಾಪಾರದಿಂದ ಅವರ ಶರೀರಗಳು ಶಿಥಿಲವಾಗಿ, ಅವು ಒಂದನ್ನೊಂದು ಅಗಲಿ ಇರಲಾರದೆ, ಸೋಂಕಿ ಇರಲು ಆತುರಪಡಹತ್ತಿದವು. ಅವರಿಬ್ಬರಿಗೂ ವೀಣೆಯ ಕಿರಿಕಿರಿಯು ತಲೆಬೇಸರಿಟ್ಟಿತು. ಈ ಬೇಸರದಿಂದ ಕುಮುದಿನಿಯು ಒಮ್ಮೆ ಮೆಲ್ಲನೆ ಆಕಳಿಸಿ, ತನ್ನ ಬಲಗೈಯ ತರ್ಜನಿಯ ಬೆರಳಿನಿಂದ ಬಲಗಡೆಯ ಕಣ್ಣನ್ನು ತಿಕ್ಕಿಕೊಳ್ಳಹತ್ತಿದಳು; ಆಗ ಆಕೆಯ ಅನಾಮಿಕೆಯಲ್ಲಿ ಲಕಲಕಿಸುವ ವಜ್ರದ ಉಂಗರದ ಹೊಳಪೂ, ನಾಯಕನ ಮೇಲೆ ದುಮುಕಹೋಗುವ ಆಕೆಯ ಸುಂದರ ಕಟಾಕ್ಷದ ಹೊಳಪೂ ಒಂದನ್ನೊಂದು ತಡ ಹಾಯುತ್ತಿರಲು, ಆ ಮನಮೋಹಿನಿಯ ಕಕ್ಷದ ಕೆಳಗಿನ ಪ್ರದೇಶವೂ, ಸುಂದರವಾದ ಆಕೆಯ ಉದರ ಪ್ರದೇಶವೂ ನಾಯಕನ ಕಣ್ಣಿಗೆ ಬಿದ್ದು ಆತನ ಮನಸ್ಸು ಸಂಪೂರ್ಣವಾಗಿ ಆಕರ್ಷಿಸಿದವು! ಆಗ ನಾಯಕನು ಅತ್ಯಂತವಾದ ಆತುರತೆಯಿಂದ ವೀಣೆಯನ್ನು ಅಲ್ಲಿಯೇ ಇಟ್ಟು, ಕಣ್ಣನ್ನು ನಿಷ್ಕಾರಣವಾಗಿ ತಿಕ್ಕಿ ಗಾಸಿಮಾಡುವ ಪ್ರಿಯಳ ಸುಂದರವಾದ ಹಸ್ತವನ್ನು ಮೆಲ್ಲನೆ ಹಿಡಿದು– ಪ್ರಿಯೇ, ಕುಮುದಿನೀ, ಇದೇನು ವಿಚಿತ್ರವು! ಗುರುತಿಲ್ಲದವಳಂತೆ ಹೀಗೆ ಸುಮ್ಮನೆ ಬಂದು ನಿಂತುಕೊಳ್ಳಬಹುದೆ? ನಾನೇ ಸೋತು ಎದ್ದುಬಂದು ಕರಕೊಂಡು ಹೋಗಬೇಕೆಂಬ ಈ ಸವಿಯಾದ ಹಟವನ್ನು ನೀನು ಎಂದು ಕಲಿತೆ? ಆಗಲಿ, ಜಯಶಾಲಿಯಾದ ನಿನ್ನನ್ನು ಉಪಚರಿಸುವುದು ನನ್ನ ಕರ್ತವ್ಯವಾಗಿರು ವುದರಿಂದ, ನಡೆ, ನಿನ್ನನ್ನು ಆ ಪಲ್ಲಂಗದ ಮೇಲೆ ಕುಳ್ಳಿರಿಸಿ ಪೂಜಿಸುತ್ತೇನೆ, ಎಂದು ನುಡಿಯುತ್ತ ಕುಮುದಿನಿಯ ಕಂಪಿತವಾದ ಹಸ್ತವನ್ನು ಹಿಡಿದು ಮೆಲ್ಲನೆ ಕರೆದೊಯ್ಯುತ್ತಿರಲು, ಶೃಂಗಾರದೀಕ್ಷಾಗುರುವಾದ ಮನ್ಮಥನನ್ನು ಅನುಸರಿಸಿ ಹೋಗುವ ರತಿಯಂತೆ ಆಕೆಯು ತನ್ನ ಹಸ್ತವನ್ನು ಬಿಡಿಸಿಕೊಳ್ಳುವ ಸೋಗಿನಿಂದ ಪತಿಯನ್ನನುಸರಿಸಿ ಪಲ್ಲಂಗದ ಕಡೆಗೆ ಸಾಗಿದಳು! ನಾಯಕನು ತನ್ನ ಪ್ರಿಯಳನ್ನು ಪಲ್ಲಂಗದ ಮೇಲೆ ಎಡಕ್ಕೆ ಕುಳ್ಳಿರಿಸಿಕೊಂಡು ಎದುರಿನ ನಿಲುವುಗನ್ನಡಿಯನ್ನು ನೋಡಲು, ಪ್ರತ್ಯಕ್ಷ ರತಿಮನ್ಮಥರ ಪ್ರತಿಮೆಗಳು ಇಲ್ಲಿ ಬಂದವೆಂದು ಆತನಿಗೆ ಕ್ಷಣಮಾತ್ರ ಭ್ರಾಂತಿಯು ಉತ್ಪನ್ನವಾಯಿತು! ಆದರೆ ವಿಚಾರದಿಂದ ಆ ಭ್ರಾಂತಿಯು ತಗ್ಗಿದಮೇಲೆ ನಾಯಕನು ಕುಮುದಿನಿಗೆ–ಪ್ರಿಯೇ, ಇದೆಲ್ಲಿಯ ನಿನ್ನ ಹಾಳುಲಜ್ಜೆಯು! ಸಾಕು ಬಿಡು, ರತ್ನಗಂಬಳಿಯನ್ನು ಕಾಲುಂಗುಟದಿಂದ ಈ ಪರಿ ತಿಕ್ಕಲಿಕ್ಕೆ ಅದೇನು ತಪ್ಪು ಮಾಡಿದೆ? ದಾಸನಂತೆ ಉಪಚರಿಸಲು ಸಿದ್ಧನಿರುವ ನನ್ನನ್ನು ಕಣ್ಣೆತ್ತಿ ನೋಡ ದಿರಲಿಕ್ಕೆ ನಾನೇನು ಅಂಥ ತಪ್ಪು ಮಾಡಿದ್ದೇನೆ? ಹೀಗೆ ನಿರಪರಾಧಿಗಳ ಶಾಸನದ ಪಾಪ ಕಟ್ಟಿಕೊಳ್ಳುವುದಕ್ಕಿಂತ ಅಲ್ಲಿ ನೋಡು, ಯಾವನೋ ಉತ್ತಮ ಶಿಲ್ಪಿಯು ನನಗೆ ಹೇಳದೆ ರತಿಯ

ಸುಂದರ ಪ್ರತಿಮೆಯನ್ನು ಮಾಡಿ ನಮ್ಮ ಎದುರಿಗೆ ಇಟ್ಟಿದ್ದಾನೆ! ನನಗೆ ಮೊದಲೇ ಗೊತ್ತಾಗಿದ್ದರೆ, ಹಾಳು ವೀಣೆಯನ್ನು ಬಾರಿಸಿ ವ್ಯರ್ಥ ಕಾಲಹರಣ ಮಾಡುವುದಕ್ಕಿಂತ, ಆ ಪ್ರತಿಮೆಯನ್ನು ನೋಡುತ್ತ ಆನಂದಪರವಶನಾಗಿ ಕುಳಿತುಕೊಂಡು ನೇತ್ರಗಳ ಸಾಫಲ್ಯವನ್ನಾದರೂ ಪಡೆಯುತ್ತಿದ್ದೆನು, ಅನ್ನಲು, ಆ ಮುಗ್ಧೆಯು, ಎಲ್ಲಿಯ ಪ್ರತಿಮೆಯು, ಎಂದು ಮನಸ್ಸಿನಲ್ಲಿ ಅಂದುಕೊಂಡು ಎದುರಿಗೆ ನಿಲುವುಗನ್ನಡಿಯ ಕಡೆಗೆ ಮೆಲ್ಲನೆ ನೋಡಿದಳು. ಆಕೆಗೆ ಪತಿಯ ಮಾತು ಅಸತ್ಯವಾಗಿ ತೋರಲಿಲ್ಲ, ಕನ್ನಡಿಯಲ್ಲಿ ರತಿಯ ಪ್ರತಿಮೆಯೊಂದೇ ಇರದೆ, ಅದರ ಬಳಿಯಲ್ಲಿ ಮನ್ಮಥನ ಪ್ರತಿಮೆಯಿರುವುದನ್ನು ಆಕೆಯು ನೋಡಿದಳು. ಮೂರ್ತಿಗಳನ್ನು ಮಾಡುವಾಗ ಮೂರ್ತಿಕಾರನ ಕೌಶಲ್ಯವು ಚೆನ್ನಾಗಿ ವ್ಯಕ್ತವಾಗಿರುತ್ತದೆಂದು ತಿಳಿದು, ಆಕೆಯು ಅವನನ್ನು ಕೌತುಕದಿಂದ ದಿಟ್ಟಿಸಿ ನೋಡತೊಡಗಿದಳು! ನಾಯಕನಾದರೂ ಆ ಮೂರ್ತಿಗಳನ್ನು ನೋಡುವುದರಲ್ಲಿಯೇ ಮಗ್ನನಾದ್ದರಿಂದ ಇಬ್ಬರೂ ಕೆಲವು ಹೊತ್ತು ಸುಮ್ಮನೆ ಆ ಕನ್ನಡಿಯೊಳಗಿನ ತಮ್ಮ ಪ್ರತಿಬಿಂಬಗಳನ್ನು ನೋಡುತ್ತ ಕುಳಿತುಕೊಂಡರು. ಅಷ್ಟರಲ್ಲಿ ರಸಿಕನಾದ ನಾಯಕನು ಮುಗ್ಧೆಯಾದ ಕುಮುದಿನಿಯನ್ನು ನಾಚಿಸುವುದಕ್ಕಾಗಿ ಆಕೆಯನ್ನು ಮೆಲ್ಲನೆ ಆಲಿಂಗಿಸಿ, ಗಲ್ಲವನ್ನು ಹಿಡಿದು– ಸುಂದರೀ, ನೋಡು, ರತಿಯ ಪ್ರತಿಮೆಯು ಎಷ್ಟು ಸುಂದರವಾಗಿದೆ! ಅನ್ನಲು, ಕುಮುದಿನಿಯು ಲಜ್ಜಿತಳಾಗಿ ಮೋರೆಯನ್ನು ತಿರುಗಿಸಿ ಸ್ವಲ್ಪ ದೂರಸರಿದು ಕುಳಿತುಕೊಂಡಂತೆ ಮಾಡಿ, ಪ್ರಣಯಕೋಪದಿಂದ ಪತಿಯಮೇಲೆ ಒಂದು ಕಟಾಕ್ಷವನ್ನು ಎಸೆದು–ಪ್ರಿಯರೇ, ಇದೇನು ಚಂದ! ಮನ್ಮಥನ ಪ್ರತಿಮೆಯ ಹೆಸರು ಸಹ ತಕ್ಕೊಳ್ಳದೆ, ನನ್ನನ್ನು ವಂಚಿಸುವುದೇಕೆ? ಎಂದು ನುಡಿದು ಮೃದುಸ್ಮಿತೆಯಾಗಿ ನೆಲವನ್ನು ನೋಡುತ್ತ–ಪ್ರಿಯರೆ, ಅದು ಹೇಗೇ ಇರಲಿ, ಈಗೊದಗಿದ ಈ ಪ್ರತಿಮೆಯ ಪ್ರಸಂಗವು ಬಲು ಸೋಜಿಗವಾದದ್ದೆಂದು ನನಗೆ ತೋರುತ್ತದೆ! ನಾನು ಇಷ್ಟು ಅಲಂಕಾರಗಳನ್ನಿಟ್ಟುಕೊಂಡು ಈ ವರೆಗೆ ಕನ್ನಡಿಯಲ್ಲಿ ನನ್ನ ರೂಪವನ್ನು ಎಂದೂ ನೋಡಿದ್ದಿಲ್ಲವಾದ್ದರಿಂದ, ನನ್ನ ರೂಪದ ಗುರುತು ನನಗೇ ಹತ್ತದೆ ಇದ್ದದ್ದು ಆಶ್ಚರ್ಯವಲ್ಲ! ಆದರೆ, ಈ ದಿನದ ಉಡಿಗೆತೊಡಿಗೆಯಿಂದೊಪ್ಪುವ ತಮ್ಮ ರೂಪವನ್ನು ನಿತ್ಯಶಃ ನೋಡುತ್ತಿದ್ದ ನಾನು, ಕನ್ನಡಿಯಲ್ಲಿಯ ಮನ್ಮಥ ಪ್ರತಿಮೆಯು ತಮ್ಮದೇ ಎಂದು ತಿಳಿಯದೆ, ಹುಚ್ಚಿಯಹಾಗೆ ನಿರ್ಲಜ್ಜೆಯಿಂದ ನೋಡುತ್ತಿದ್ದೆನಲ್ಲ!! ಅದರಲ್ಲಿ ಆಶ್ಚರ್ಯವಾದರೂ ಏನಿರುವುದು? ಅಲೌಕಿಕ ರೂಪಸಂಪನ್ನರಾದ ತಮ್ಮ ರೂಪವನ್ನು ನೋಡುವುದರಲ್ಲಿ ಈವರೆಗೂ ನನ್ನ ಮನಸ್ಸು ತೃಪ್ತವಾಗದೆ ಚಾಂಚಲ್ಯವನ್ನೇ ಹೊಂದುತ್ತ ಬಂದದ್ದರಿಂದ, ತಮ್ಮ ರೂಪವನ್ನು ಸ್ಥಿರವಾಗಿ ಗ್ರಹಿಸಿಕೊಳ್ಳಲಿಕ್ಕೆ ಅದು ಅಸಮರ್ಥವಾಯಿತು! ಪ್ರಿಯರೇ, ಮನ್ಮಥಸ್ವರೂಪರಾದ ತಮ್ಮ ಬಳಿಯಲ್ಲಿ ಕುಳಿತಿದ್ದ ನಾನು ಹ್ಯಾಗಿದ್ದರೂ ರತಿಯೇ ಅಲ್ಲವೇ?

ಈ ಮೇರೆಗೆ ಆ ತರುಣ ದಂಪತಿಗಳು ಸುಖಸಲ್ಲಾಪಗಳನ್ನಾಡುತ್ತ ಸುರತ ಸುಖ ಲೋಲುಪರಾಗಿ ಆ ರಾತ್ರಿಯನ್ನು ಅರೆನಿಮಿಷದಂತೆ ಕಳೆದರು! ಪರಿಪಕ್ವದೆಸೆಯು ಪ್ರಾಪ್ತ ವಾಗುವವರೆಗೆ ಬ್ರಹ್ಮಚರ್ಯದಿಂದಿದ್ದು, ಪರಸ್ಪರರ ಗುಣಗಳಿಗೆ ಲುಬ್ಧರಾಗಿ ದಾಂಪತ್ಯವನ್ನು ವಹಿಸಿದ ದೃಢಮನಸ್ಸಿನ ಸುಶೀಲರಾದ ಪುಣ್ಯವಂತರು ಮಾತ್ರ, ನಮ್ಮ ಈ ತರುಣ ದಂಪತಿಗಳ

ಸುಖವನ್ನು ಯಥಾಸ್ಥಿತವಾಗಿ ಕಲ್ಪಿಸಬಹುದು! ಹಾಗಲ್ಲದೆ, ನೀಚರ ಸಹವಾಸದಿಂದ ಚಿಕ್ಕಂದಿನಲ್ಲಿಯೇ ಬ್ರಹ್ಮಚರ್ಯದ ಹಾನಿಯನ್ನು ಮಾಡಿಕೊಂಡು ತಾಯಿತಂದೆಗಳ ಮುರವತ್ತಿನಿಂದ ವಿವಾಹಿತರಾಗಿ, ಅಲ್ಪವಯಸ್ಸಿನಲ್ಲಿಯೇ ಗೃಹಸೌಖ್ಯದ ಮಬ್ಬಿಗೆ ಬಿದ್ದ ಹತವೀರ್ಯರು ಅದನ್ನು ಕಲ್ಪಿಸಲು ಸರ್ವಥಾ ಶಕ್ಯವಿಲ್ಲ! ಇರಲಿ, ಯೌವನದ ಮದದಿಂದ ಒಪ್ಪುವ ಆ ತರುಣರು ಬಗೆಬಗೆಯ ವಿಲಾಸಗಳನ್ನು ಭೋಗಿಸುತ್ತ ಶೃಂಗಾರಸಾಗರದಲ್ಲಿ ಸ್ವಚ್ಛಂದದಿಂದ ಈಸಾಡಹತ್ತಿದರು! ತೇಜಸ್ವಿಗಳೂ, ಕರ್ತೃತ್ವಶಾಲಿಗಳೂ ಆದ ಆ ದಂಪತಿಗಳು ಭೋಗಿಸಿದ ನ್ಯಾಯಸಮ್ಮತವಾದ ವಿಲಾಸಗಳನ್ನು ವರ್ಣಿಸಿದರೆ, ಅದೊಂದು ಪುಸ್ತಕವೇ ಆಗಬಹುದು! ಅವರು ಎಷ್ಟೋಸಾರೆ ಜಲವಿಹಾರದ ಸುಖವನ್ನು ಪಡೆದರು; ವನವಿಹಾರದ ಸೌಖ್ಯವನ್ನು ಅನುಭೋಗಿಸಿದರು; ಚಂದ್ರಿಕಾವಿಹಾರದ ಸವಿಯನ್ನುಂಡರು. ಇವೆಲ್ಲವನ್ನು ವರ್ಣಿಸುವುದರಿಂದ ಶೃಂಗಾರಸಾಗರವನ್ನು ಉಕ್ಕೇರಿಸಿ, ತಾರತಮ್ಯವಿಲ್ಲದೆ ವಾಚಕರ ಮನಸ್ಸನ್ನು ಆ ಸಾಗರದ ಸಂಪಿನ ಕಡೆಗೆ ಎಳಕೊಂಡು ಹೋದ ದೋಷಕ್ಕೆ ಪಾತ್ರರಾಗಬೇಕಾದೀತು! ಆಗಿನ ಇಳಿಕೆಯ ಕಾಲದಲ್ಲಿ ನಮ್ಮ ಕನ್ನಡಿಗರು ವಿಷಯ ಸುಖಭೋಗಕ್ಕೆ ತೀರಾ ಮೆಚ್ಚಿದವ ರಾಗಿದ್ದರು. ಅಂದಬಳಿಕ ಎಚ್ಚಮನಾಯಕನಂಥ ಪ್ರಬಲೋರ್ಮಿಯ ರಸಿಕನು ವಿಲಾಸಕ್ಕೆ ಮೆಚ್ಚಿದ್ದೇನಾಶ್ಚರ್ಯವು? ನಮ್ಮ ತರುಣ ದಂಪತಿಗಳನ್ನು ಶ್ರೀ ಸೀತಾರಾಮರಿಗೆ ಹೋಲಿಸಲಿಕ್ಕೆ ಬಾಧೆಯಿಲ್ಲ! ನಾಯಕನು ನಿಜವಾದ ಏಕಪತ್ನೀ ವ್ರತಸ್ಥನಿದ್ದನು. ಕುಮುದಿನಿಯಂತು ತನ್ನ ಜೀವನ ಸರ್ವಸ್ವವೂ ಪತಿಯೆಂತಲೇ ತಿಳಿದಿದ್ದಳು. ಆ ತರುಣ ದಂಪತಿಗಳು ಪರಸ್ಪರರ ಮನಸ್ಸುಗಳು ನೊಂದಾವೆಂಬ ಅಂಜಿಕೆಯಿಂದ ಯಾವಾಗಲೂ ಜಾಗರೂಕರಾಗಿ ನಡೆಯುತ್ತಿದ್ದರು! ಅಂತೇ ಅವರಿಗೆ ಶೃಂಗಾರಸಾಗರದಲ್ಲಿ ಯಥೇಚ್ಛವಾಗಿ ಈಸಾಡುವ ಅಧಿಕಾರವು ಪ್ರಾಪ್ತವಾಯಿತು.

## ಸಂಶಯ ಪಿಶಾಚ

ಎಚ್ಚಮನಾಯಕನು ಚಾಂದಖಾನನ ಸಹಾಯದಿಂದ ರಾಜ್ಯದೊಳಗಿನ ಪುಂಡಾಟಿಕೆ ಗಳನ್ನು ಮುರಿದು, ತನ್ನ ಅಧಿಕಾರವನ್ನು ಒತ್ತರಿದಿಂದ ಕೂಡ್ರಿಸಹತ್ತಿದನು. ಇತ್ತ ಜಗರಾಯನು ಸೈನ್ಯದೊಡನೆ ಅರಣ್ಯವನ್ನು ಸೇರಿದ್ದನಷ್ಟೆ? ಅಲ್ಲಿ ಆತನ ದಂಡು ಸ್ವಲ್ಪ ಹೆಚ್ಚಿದ್ದರಿಂದ, ಆತನು ಎಚ್ಚಮನಾಯಕನೊಡನೆ ಆಗಾಗ್ಗೆ ಯುದ್ಧಗಳನ್ನು ಮಾಡುತ್ತಿದ್ದನು. ಈ ಯುದ್ಧಗಳಲ್ಲೆಲ್ಲ ಎಚ್ಚಮನಾಯಕನೇ ಜಯಶಾಲಿಯಾಗುತ್ತಿದ್ದರೂ, ಆತನಿಗೆ ಜಗರಾಯನ ಕಾಟವು ವರ್ಷಗಟ್ಟಲೆಯಾದರೂ ತಪ್ಪಲಿಲ್ಲ; ಆದ್ದರಿಂದ ಚಾಂದಖಾನನು ಒಮ್ಮೆ ರಾಯನ ಪಾರುಪತ್ಯ ಮಾಡಿ, ಆತನ ಸದ್ದು ಅಡಗಿಸಿಬಿಡಬೇಕೆಂದು ದೊಡ್ಡ ಸೈನ್ಯದೊಡನೆ ಹೊರಟನು. ಇತ್ತ ಎಚ್ಚಮನಾಯಕನು ತನ್ನ ಅಧಿಕಾರವನ್ನು ಒಪ್ಪಿಕೊಳ್ಳದ ಕೆಲವು ನಾಯಕರನ್ನು ಬಗ್ಗುಬಡಿ ಯುವದಕ್ಕಾಗಿ ಕೆಲವು ಸೈನ್ಯದೊಡನೆ ದಂಡಯಾತ್ರೆಗೆ ಹೊರಟನು. ಹೀಗೆ ಅವರಿಬ್ಬರೂ ಚಂದ್ರ

ಗಿರಿಯನ್ನು ಬಿಟ್ಟುಹೋದದ್ದರಿಂದ ರಾಜಧಾನಿಯ ಸಂರಕ್ಷಣಾದ ಭಾರವೆಲ್ಲ ತಿರುಮಲರಾಯನ ಮೇಲೆ ಬಿದ್ದಿತು. ಕುಮುದಿನಿಯು ವಿವಾಹವಾದಂದಿನಿಂದ ಪೌರುಷದ ಯಾವ ಕೆಲಸಗಳಿಗೂ ಮನಸ್ಸು ಹಾಕದಿರಲು, ಸ್ತ್ರೀಯರಿಗೆ ಸ್ವಭಾವಸಿದ್ಧವಾಗಿಯೇ ಇರುವ ಸೌಕುಮಾರ್ಯವು ಆಕೆಯನ್ನು ಆವರಿಸಿತು. ಆಗಿನ ಕಾಲದ ಪದ್ಧತಿಯಂತೆ ಕುಮುದಿನಿಯು ಕಠಿಣತರವಾದ ಗೋಷೆಯ ಪದ್ಧತಿಯನ್ನು ಅಂಗೀಕರಿಸಿದ್ದಳು. ಆಕೆಯ ಪಾದನಖಗಳ ಕಾಂತಿಯು ಕೂಡ ಪುರುಷರ ಕಣ್ಣಿಗೆ ಬೀಳುವುದು ದುಸ್ತರವಾಗಿತ್ತು! ಆಕೆಯು ಮಾಡತಕ್ಕ ದಿನದ ಕೆಲಸಗಳೆಂದರೆ, ಏಕನಿಷ್ಠೆಯ ಪತಿಸೇವೆಯು. ಕುಮುದಿನಿಗೆ ದಾಸ–ದಾಸಿಯರ ಕೊರತೆಯಿದ್ದಿಲ್ಲ; ಆದರೆ ಆಕೆಯು ಅತ್ಯಂತವಾದ ನಿಷ್ಠೆಯಿಂದ ಪತಿಯ ಸುಖದ ವಿಷಯವಾಗಿ ಜಾಗರೂಕಳಾಗಿ, ಆತನ ಸ್ನಾನ–ಪಾನ, ಊಟ–ಉಡಿಗೆ, ನಿದ್ದೆ–ನೀರಡಿಕೆ, ಸುಖ–ದುಃಖ ಮೊದಲಾದವುಗಳಿಗೆ ಸಂಬಂಧಿಸಿದ ಎಲ್ಲ ಕೆಲಸಗಳನ್ನು ಕೈಮುಟ್ಟಿ ಮಾಡುತ್ತಿದ್ದಳು. ಪತಿಯು ಯುದ್ಧಕ್ಕೆ ಹೊರಡಲಿ, ಬೇಟೆಗೆ ಹೊರಡಲಿ, ದರ್ಬಾರಕ್ಕೆ ಹೊರಡಲಿ–ವಿಶ್ರಾಂತಿಗೆ ಹೊರಡಲಿ ಪೋಷಾಕು ಹಾಕುವ ಕೆಲಸವು ಕುಮುದಿನಿಯದು! ಹೆಚ್ಚು ಹೇಳುವುದೇನು? ಏನು ಮಾಡಿದರೆ ಪತಿಗೆ ಸುಖವಾದೀತೆಂಬ ವಿಚಾರದಲ್ಲಿ ಕುಮುದಿನಿಯು ಆಗಾಗ್ಗೆ ಮಗ್ನಳಾಗಿಹೋಗುತ್ತಿದ್ದಳು! ಹೀಗೆ ಪತಿಯನ್ನೇ ನೆರಳಿನಂತೆ ಅನುಸರಿಸಿ ಪರಾವಲಂಬಿಯಾದವಳು ಅನ್ಯಕಾರ್ಯಗಳಿಗೆ ಮನಸ್ಸು ಕೊಡುವ ಬಗೆಹೇಗೆ? ನಾಯಕನೂ–ಖಾನನೂ ತಮ್ಮ ತಮ್ಮ ಕೆಲಸಗಳನ್ನು ಬೇಗನೆ ಕೈಗೂಡಿಸಿಕೊಂಡು, ಮಕರ ಸಂಕ್ರಮಣಕ್ಕೆ ಚಂದ್ರಗಿರಿಗೆ ತಿರುಗಿ ಬರಬೇಕೆಂದು ಗೊತ್ತುಮಾಡಿಕೊಂಡು ಹೋಗಿದ್ದರು. ಅವರು ಯುದ್ಧಕ್ಕೆ ಹೊರಟ ತಿಥಿಯು ಕಾರ್ತಿಕವದ್ಯ ತೃತೀಯೆಯಾಗಿತ್ತು, ಅಲ್ಲಿಂದ ಮಕರಸಂಕ್ರಮಣದವರೆಗೆ, ಕಳೆಯಬೇಕಾಗಿದ್ದ ಎರಡು ತಿಂಗಳು ಕುಮುದಿನಿಗೆ ಎರಡು ವರ್ಷಗಳಿಗಿಂತ ಹೆಚ್ಚಾಗಿ ತೋರಿ, ಆಕೆಯು ದಿನಗಳನ್ನು ಎಣಿಸುತ್ತ ಪತಿಯಲ್ಲಿಯೇ ಚಿತ್ತವನ್ನಿಟ್ಟು ಅಸಮಾಧಾನದಿಂದ ಕಾಲಹರಣ ಮಾಡಹತ್ತಿದಳು.

ವಿವಾಹವಾದಂದಿನಿಂದ ನಾಯಕನು ಕುಮುದಿನಿಯನ್ನು ಇಷ್ಟು ದೀರ್ಘಕಾಲ ಆಗಲಿ ಹೋದದ್ದೆಂದರೆ, ಇದೇ ಮೊದಲು. ಆತನು ಯುದ್ಧಕ್ಕೆ ಹೊರಡುವಾಗ ''ನಾನು ಇನ್ನು ಎರಡು ತಿಂಗಳು ಕುಮುದಿನಿಯನ್ನು ಅಗಲಿಯಿರುವುದು ಹ್ಯಾಗೆ'' ಎಂದು ಚಿಂತಿಸಿದನು; ಆದರೆ ವೈರಿಗಳೊಡನೆ ಹೋರಾಡುವ ಪ್ರತ್ಯಕ್ಷ ಪ್ರಸಂಗ ಒದಗಿದ ಬಳಿಕ ಆತನ ಈ ಚಿಂತೆಯು ಕಡಿಮೆಯಾಗತೊಡಗಿತು. ಯಾವಾಗಾದರೊಮ್ಮೆ ಕುಮುದಿನಿಯ ನೆನಪಾದಾಗ ಆತನ ಮನಸ್ಸು ಚಡಪಡಿಸುತ್ತಿತ್ತು, ಒಂದೊಂದು ದಿನ ವೈರಿಗಳೊಡನೆ ಹೋರಾಡುವಲ್ಲಿ ಮಗ್ನನಾದನೆಂದರೆ, ಇಡಿಯ ದಿನ ಆತನಿಗೆ ಕುಮುದಿನಿಯ ನೆನಪೇ ಆಗುತ್ತಿದ್ದಿಲ್ಲ. ಯುದ್ಧದಲ್ಲಿ ಗೆಲವು ಉಂಟಾಗಿ ಮನಸ್ಸು ಉಲ್ಲಸಿತವಾಗಿರಲು, ಕುಮುದಿನಿಯ ಸುಂದರ ಪ್ರತಿಮೆಯು ಆತನ ಕಣ್ಣಿಗೆ ಕಟ್ಟುತ್ತಿತ್ತು! ಎಚ್ಚಮನಾಯಕನ ಉದ್ಯೋಗತತ್ಪರತೆಯಿಂದ ಆತನ ತಾಪವು ತಾನಾಗಿ ಶಾಂತವಾಗಬಹುದಾಗಿತ್ತು; ಆದರೆ ಪತಿಯ ವಿಯೋಗಕಾಲದಲ್ಲಿ ಕುಮುದಿನಿಯ ಕಾರ್ಯಾಸಕ್ತಿಗೆ ಮಾರ್ಗವಿಲ್ಲದಂತಾದ್ದರಿಂದ, ಬರಬರುತ್ತ ಆಕೆಯ ಮನಸ್ಸು ಅಸ್ವಸ್ಥವಾಗತೊಡಗಿತು. ಆಕೆಗೆ ಕೂತರೂ ಪತಿಯ

ಚಿಂತನ, ನಿಂತರೂ ಪತಿಯ ಚಿಂತನ, ಮಲಗಿದರೂ ಪತಿಯ ಚಿಂತನ; ಹೀಗಾಗಿ ಆಕೆಯು ಪತಿಯ ಹೊರತು ಅನ್ಯವಸ್ತುಗಳನ್ನು ಚಿಂತಿಸದಾದಳು! ಆಕೆಯು ಎಚ್ಚತ್ತಿರುವಾಗ ಪತಿಯ ಚಿತ್ರವನ್ನು ನೋಡುತ್ತ ಆತನ ಸದ್ಗುಣಗಳನ್ನು ನೆನಿಸುತ್ತ ಯಾವಾಗ ಪತಿಯ ದರ್ಶನವಾದೀತೆಂದು ಹಾತೊರೆಯುತ್ತಿದ್ದಳು; ಕನಸು ಬಿದ್ದಾಗ ಆಕೆಯು ಪತಿಯೊಡನೆ ಹಲವು ಬಗೆಯ ವಿಲಾಸಗಳಲ್ಲಿ ಮಗ್ನಳಾಗಿ, ಕಾರಣಾಂತರದಿಂದ ಎಚ್ಚರವಾಗಲು, ಉಸಿರ್ಗರೆದು, ತಿರುಗಿ ಕಣ್ಣಿಗೆ ಕಣ್ಣು ಹತ್ತದ್ದರಿಂದ ಹಾಸಿಗೆಯ ಮೇಲೆ ಸುಮ್ಮನೆ ಹೊರಳಾಡುತ್ತ ಮಲಗಿಕೊಳ್ಳುವಳು. ಪತಿಯು ಊರಿಗೆ ಹೋಗಿರುವಾಗ ಆಕೆಯು ಒಳ್ಳೆಯ ವಸ್ತ್ರಾಭರಣಗಳಿಂದ ಅಲಂಕೃತಳಾಗುವುದಂತು ಇರಲಿ, ಆ ಪತಿವ್ರತೆಯು ನೆಟ್ಟಗೆ ಹಿಕ್ಕಿ ಹೆಳಲು ಹಾಕಿಕೊಳ್ಳಲಿಲ್ಲ, ಕನ್ನಡಿ ನೋಡಿ ಕುಂಕುಮ ಹಚ್ಚಿಕೊಳ್ಳಲಿಲ್ಲ, ಹೂ ಮಾಲೆಯನ್ನು ಮುಡಿದುಕೊಳ್ಳಲಿಲ್ಲ, ಕಣ್ಣಿಗೆ ಕಾಡಿಗೆ ಹಚ್ಚಿಕೊಳ್ಳಲಿಲ್ಲ, ತಾಂಬೂಲವನ್ನು ಹಾಕಿಕೊಳ್ಳಲಿಲ್ಲ! ಪತಿಯು ಸುರಕ್ಷಿತವಾಗಿ ಬರಬೇಕೆಂದು ಆ ಸತಿಯು ಅಶ್ವತ್ಥನಾರಾಯಣನನ್ನು ಸೇವಿಸುವಾಗಲೂ, ತುಲಸಿಯನ್ನು ಪೂಜಿಸುವಾಗಲೂ, ದೇವರನ್ನು ಪ್ರಾರ್ಥಿಸುವಾಗಲೂ ಭಕ್ತಿಪರವಶಳಾಗಿ ವಿರಹವ್ಯಥೆಯನ್ನಷ್ಟು ಮರೆಯುತ್ತಿದ್ದರೆ ಮರೆಯುತ್ತಿರ ಬಹುದು! ಆಕೆಯು ಉಣ್ಣುವಾಗ ತುತ್ತು ತುತ್ತಿಗೆ ಪತಿಯನ್ನು ಸ್ಮರಿಸುವಳು; ಸಖಿಯರ ಮುಂದೆ ಪತಿಯ ಚರಿತ್ರವನ್ನು ಉಸಿರುವಾಗ ಸೊಲ್ಲುಸೊಲ್ಲಿಗೆ ಉಸಿರ್ಗರೆಯುವಳು; ದಿನದಿನಕ್ಕೆ ಬರುತ್ತಿರುವ ಪತಿಯ ಪರಾಕ್ರಮದ ಸುದ್ದಿಗಳು ಕಿವಿಗೆ ಬಿದ್ದಾಗ, ಕಂಠಬಿಗಿದು ಶರೀರವು ಪುಲಕಿತವಾಗಲು, ಎಡೆಬಿಡದೆ ಆನಂದಬಾಷ್ಪಗಳನ್ನು ಉದುರಿಸುವಳು. ಪತಿಯು ಇದ್ದಾಗ ಮೈಗೆ ಮೆತ್ತಗೆ ಹತ್ತುವ ಕುತ್ತನಿಯಗಾದಿಯ ಮೇಲೆ ಈಗ ನಿದ್ದೆಯೇ ಬಾರದಹಾಗಾದ್ದರಿಂದ ಆಕೆಯು ಅದನ್ನು ತೆಗಿಸಿ ಒತ್ತಟ್ಟಿಗೆ ಇಡಿಸಿದಳು. ಗೋಡೆಗಳ ಮೇಲಿನ ಚಿತ್ರಗಳ ಅವಲೋಕನದಿಂದ ಮನಸ್ಸಿಗೆ ತಾಪವಾದೀತೆಂಬ ಭಯವು ಉತ್ಪನ್ನವಾಗಲು, ಅವನ್ನು ಕಣ್ಣೆತ್ತಿ ನೋಡದಾದಳು. ಪತಿಯೊಡನೆ ಬಾರಿಸುತ್ತಿದ್ದ ಸಂಗೀತದ ಸಾಧನಗಳು ಈಗ ಮನಸ್ಸಿಗೆ ಚುಚ್ಚಹತ್ತಿದ್ದರಿಂದ, ಅವನ್ನು ತೆಗಿಸಿ ಕಣ್ಣಿಗೆ ಬೀಳದಂತೆ ದೂರ ಇಡಿಸಿದಳು. ಪತಿಯು ಬಳಿಯಲ್ಲಿ ಇಲ್ಲದಾಗ ರಾತ್ರಿ ಉದ್ಯಾನದೊಳಗಿನ ಸುಗಂಧವನ್ನು ಹೊತ್ತುಕೊಂಡು ತಿರುಗುವ ಮಂದಮಾರುತನು ಒಳಗೆ ಸುಳಿಯುವುದು ಸರಿಯಲ್ಲೆಂತಲೂ, ಚಂದ್ರನ ತಂಪಾದ ಸ್ವಚ್ಛ ಕಿರಣಗಳು ಒಳಗೆ ಬರುವುದು ಒಳಿತಲ್ಲೆಂತಲೂ ಬಗೆದು, ವಿಲಾಸಮಂದಿರದ ಎಲ್ಲ ಕಿಡಕಿಗಳನ್ನು ಗಟ್ಟಿಯಾಗಿ ಇಕ್ಕಿಕೊಳ್ಳುತ್ತಿದ್ದಳು! ಅಂದಿನ ರತಿ–ಮನ್ಮಥರ ಪ್ರತಿಮೆಗಳ ಪ್ರಸಂಗವು ಎಲ್ಲಿಯಾದರೂ ನೆನಪಾದೀತೆಂಬ ಅಂಜಿಕೆ ಯಿಂದ ಪಲ್ಲಂಗದ ಎದುರಿಗಿನ ನಿಲುವು ಗನ್ನಡಿಯನ್ನು ಎಲ್ಲಿಯೋ ತೆಗಿಸಿ ಇಟ್ಟುಬಿಟ್ಟಿದ್ದಳು! ನಾಲಿಗೆಗೆ ರುಚಿಯು ಅಸಹ್ಯವಾದ್ದರಿಂದಲೂ, ಮೂಗಿಗೆ ಸುಗಂಧವು ತಡೆಯದಂತಾದ್ದರಿಂದಲೂ ಆಕೆಯು ಸ್ವಾದಿಷ್ಟವಾದ ಖಾದ್ಯಗಳನ್ನೂ, ಉತ್ತೇಜಕವಾದ ಪೇಯಗಳನ್ನೂ, ಉತ್ಸಾಹವರ್ಧಕ ವಾದ ಸುಗಂಧದ್ರವ್ಯಗಳನ್ನೂ ವರ್ಜ್ಯಮಾಡಿದ್ದಳು. ಹೆಚ್ಚಿಗೆ ಹೇಳುವುದೇನು? ಪತಿಪ್ರಾಣಳಾದ ನಮ್ಮ ಸುಶೀಲೆ ಕುಮುದಿನಿಯು, ಪತಿಯ ವಿಯೋಗದಿಂದ ಸಂತಾಪಗೊಂಡು ಯಾವ ವಿಲಾಸದ್ರವ್ಯಗಳನ್ನೂ ಸಮೀಪಕ್ಕೆ ಸುಳಿಯಗೊಡದೆ, ಕೇವಲ ಬಡಮುತ್ತೈದೆಯಂತೆ ಥಾಳಾಗಿ ಕುಂಕುಮ ಹಚ್ಚಿಕೊಂಡು ವ್ರತಸ್ಥಳಾಗಿ ಇರುತ್ತಿದ್ದಳು !!

ಈ ಮೇರೆಗೆ ಕುಮುದಿನಿಯ ಮನಸ್ಸು ಪತಿಯನ್ನು ಚಿಂತಿಸಿ–ಚಿಂತಿಸಿ ಬೇಸರಗೊಂಡಿರಲು, ಆಕೆಯ ಬೆರಳುಗಳು ಪತಿಯು ಬರುವ ದಿನಗಳನ್ನು ಎಣಿಸಿ ಎಣಿಸಿ ಸೋತಿರಲು, ಕಣ್ಣುಗಳು ಪತಿಯ ಹಾದಿಯನ್ನು ನೋಡಿನೋಡಿ ದಣಿದಿರಲು, ಆಕೆಗೆ ಹೊಸ ಜೀವನವು ಬಂದಂತೆ ಒಮ್ಮೆ ಮಕರಸಂಕ್ರಮಣದ ಹಬ್ಬವು ಬಂದಿತು. ಆ ದಿನ ಪತಿಯು ನಿಶ್ಚಯವಾಗಿ ಬರುವನೆಂದು ನಂಬಿ ಆ ಮುಗ್ಧೆಯು, ಆಸ್ಥೆಯಿಂದ ವಿಲಾಸಮಂದಿರವನ್ನು ಶೃಂಗರಿಸಿ, ಹಬ್ಬದ ನೆವಮಾಡಿ ವಸ್ತ್ರಾಲಂಕಾರಗಳಿಂದ ಅಲಂಕೃತಳಾಗಿ ಪತಿಯ ಹಾದಿಯನ್ನು ನೋಡುತ್ತ ಕುಳಿತುಕೊಂಡಳು. ನಾಲ್ಕು ತಾಸಾಯಿತು, ಆರು ತಾಸಾಯಿತು, ಒಂಬತ್ತು ತಾಸಾಯಿತು; ಆದರೂ ಪತಿಯ ಸುದ್ದಿಯೇ ಇಲ್ಲ. ಅಷ್ಟು ಹೊತ್ತಾದರೂ ಪತಿಯ ಹಾದಿಯ ನೋಡುವ ಭರದಲ್ಲಿ ಕುಮುದಿನಿಯು ಊಟವನ್ನು ಸಹ ಮಾಡಿದ್ದಿಲ್ಲ. ಇನ್ನು ಆಕೆಯು ನಿರಾಶೆಪಟ್ಟು ಅಲಂಕಾರಗಳನ್ನು ತೆಗೆದಿಟ್ಟು ಸ್ವಸ್ಥ ಮಲಗಿಕೊಳ್ಳಬೇಕೆಂದು ಯೋಚಿಸಿದಳು. ಅಷ್ಟರಲ್ಲಿ ಹೊತ್ತು ಮುಳುಗುವ ಮುಂದೆ ಚಾಂದಖಾನನು ಜಯಶಾಲಿಯಾಗಿ ಭೆಟ್ಟಿಗೆ ಬಂದಿರುತ್ತಾನೆಂದು ದಾಸಿಯು ಆಕೆಗೆ ಹೇಳಿದಳು. ಅದನ್ನು ಕೇಳಿ ಕುಮುದಿನಿಗೆ ಸಮಾಧಾನವಾದರೂ, ಪತಿಯಿಲ್ಲದಾಗ ಖಾನನಿಗೆ ಭೆಟ್ಟಿಯಾಗುವುದು ಆಕೆಗೆ ಸಮರ್ಪಕವಾಗಿ ತೋರಲಿಲ್ಲ; ಆದರೂ ಖಾನನ ಸದಾಚರಣೆಯಲ್ಲಿ ವಿಶ್ವಾಸವುಳ್ಳ ಆ ಪತಿವ್ರತೆಯು, ತನ್ನ ಪತಿಯ ಮಿತ್ರನನ್ನೂ, ತನ್ನ ಹಿತಕರ್ತೃವನ್ನೂ ಹಿಂದಕ್ಕೆ ಕಳಿಸಿ ಅವಮಾನಗೊಳಿಸುವುದು ಯೋಗ್ಯವಲ್ಲೆಂದು ಖಾನನನ್ನು ಒಳಗೆ ಕರೆಸಿಕೊಂಡಳು. ಖಾನನಿಗೂ ಕುಮುದಿನಿಗೂ ನಡುವೆ ಒಂದು ಸುಂದರವಾದ ಪರದೆಯನ್ನು ಇಳಿಬಿಟ್ಟು, ಖಾನನ ಮರ್ಯಾದೆಗೆ ತಕ್ಕಂತೆ ಆಸನಾದಿಗಳನ್ನು ಸಿದ್ಧಗೊಳಿಸಿದ್ದರು. ಆಗ ಕುಮುದಿನಿಯು ಪರದೆಯ ಹಿಂದಿನಿಂದ ಖಾನನನ್ನು ಕುರಿತು–

ಕುಮುದಿನಿ–ಅಣ್ಣಾ, ನಿನಗೆ ಕುಶಲವಷ್ಟೆ? ಜಯಲಕ್ಷ್ಮಿಯು ನಿನಗೆ ಮಾಲೆ ಹಾಕುವುದಂತು ಸ್ವಾಭಾವಿಕವೇ ಆಗಿರುವುದು!

ಚಾಂದಖಾನ– ತಂಗೀ, ದೇವರ ದಯದಿಂದ ಸುರಕ್ಷಿತವಾಗಿದ್ದೇನಮ್ಮಾ! ಮಹಾಪತಿವ್ರತೆಯಾದ ನಿನ್ನ ಪುಣ್ಯದಿಂದ ವಿಜಯನಗರದ ರಾಯರ ಸದ್ವಂಶದ ಉದ್ಧಾರವೇ ಆಗಿರಲು, ನಾನು ಜಯಶಾಲಿಯಾಗುವುದು ಯಾವ ದೊಡ್ಡ ಮಾತು? ಜಗರಾಯನು ಪೂರ್ಣವಾಗಿ ಸೋತು, ಮೊಮ್ಮಗನನ್ನು ಕಟ್ಟಿಕೊಂಡು ಚಿತ್ರದುರ್ಗದ ದುರಗುಪ್ಪನಾಯಕನಿಗೆ ಶರಣುಹೋದನು. ದುರಗಪ್ಪನಾಯಕನ ಯೋಗ್ಯತೆಯು ಬಹು ಘನವಾದದ್ದು. ಆತನು ಹಿಂದಕ್ಕೆ ಜಗರಾಯನಿಂದ ತನಗೆ ಆಗಿದ್ದ ಅಪಮಾನವನ್ನು ಮರೆತು, ತಾನು ವಚನ ಕೊಟ್ಟಂತೆ ಜಗರಾಯನಿಗೆ ಆಶ್ರಯಕೊಟ್ಟನು. ದುರಗಪ್ಪನಾಯಕನು ಮುಂದೆ ಎರಡು ದಿನಗಳ ಮೇಲೆ ನನ್ನ ಬಳಿಗೆ ಬಂದು– ''ಜಗರಾಯನು ನಿಮಗೆ ಶರಣು ಬಂದಿರುವುದರಿಂದ ಆತನನ್ನು ಕ್ಷಮಿಸಬೇಕೆಂತಲೂ, ಇನ್ನು ಸ್ವಲ್ಪದಿನಗಳಲ್ಲಿಯೇ ಆತನನ್ನು ಮೊಮ್ಮಗನೊಡನೆ ರಾಯರ ಸನ್ನಿಧಿಗೆ ತಾನೇ ಕರಕೊಂಡು ಬರುವೆನೆಂತಲೂ, ಹೇಳಿದನು. ಆತನು ನಿನ್ನ ಘನತರವಾದ ಯೋಗ್ಯತೆಯನ್ನು ಬಹಳ ಹೊಗಳಿದನು. ಇನ್ನೊಂದು ವಿಶೇಷವೇನೆಂದರೆ, ದುರಗಪ್ಪನಾಯಕನು ಎಚ್ಚಮನಾಯಕನ

ಸದ್ಗುಣಗಳಿಗೆ ಲುಬ್ಧನಾಗಿ ತಾನಾಗಿ ರಾಯರ ಮಾಂಡಲಿಕತ್ವವನ್ನು ಒಪ್ಪಿಕೊಂಡಿದ್ದಾನೆ. ಈ ಆನಂದದ ಸುದ್ದಿಯನ್ನು ಹೇಳುವುದಕ್ಕಾಗಿಯೇ ಇಷ್ಟು ಅವಸರದಿಂದ ಬಂದೆನು. ಅದಿರಲಿ; ತಂಗೀ, ಪ್ರಿಯಮಿತ್ರರಾದ ನಾಯಕರು ಯಾಕೆ ಬಂದಿರಲಿಕ್ಕಿಲ್ಲ?

ಕುಮುದಿನಿ–ಅಣ್ಣಾ, ಅದನ್ನು ನಾನೇನು ಹೇಳಲಿ? ಇಲ್ಲಿಂದ ಹೊರಡುವಾಗ ಗೊತ್ತಾದಂತೆ, ಇಬ್ಬರ ಜಯದ ವಾರ್ತೆಯನ್ನು ಒಮ್ಮೆಲೆ ಕೇಳುವ ಯೋಗವಿದ್ದಂತೆ ತೋರುವುದಿಲ್ಲ! ದುರಗಪ್ಪನಾಯಕನಂಥ ತೇಜಸ್ವಿಯು, ಗುಣಲುಬ್ಧನಾಗಿ ತಾನೇ ರಾಯರ ಮಾಂಡಲಿಕತ್ವವನ್ನು ಒಪ್ಪಿಕೊಂಡನೆ? ಬಹಳ ಸಂತೋಷವು.

ಈ ಮೇರೆಗೆ ಅವರಿಬ್ಬರ ಸಂಭಾಷಣವು ನಡೆದಿರಲು, ಹಾ ಹಾ ಅನ್ನುತ್ತ ಎರಡು ತಾಸು ರಾತ್ರಿಯಾಯಿತು. ದುರಗಪ್ಪನಾಯಕನು ಪತಿಯ ಘನತೆಯನ್ನು ಒಪ್ಪಿಕೊಂಡನೆಂಬ ಆನಂದದಿಂದ ಕುಮುದಿನಿಯು ಪರದೆಯ ಹೊರಗೆ ಬಂದು–ಅಣ್ಣಾ, ಈದಿನ ನೀನು ಬಹು ದೊಡ್ಡ ಆನಂದದ ಸುದ್ದಿಯನ್ನು ಹೇಳಿದೆ! ಇಗೋ, ಹಿಡಿ, ಎಳ್ಳು ಸಕ್ಕರೆಯನ್ನು ಈವರೆಗೆ ಏನಾದರೂ ತಂಗಿಯಿಂದ ಅಪರಾಧವಾಗಿದ್ದರೆ ಕ್ಷಮಿಸು, ಎಂದು ಹೇಳಿ, ಮುಗುಳುನಗೆಯಿಂದ ಖಾನನ ಕೈಯಲ್ಲಿ ಎಳ್ಳು ಸಕ್ಕರೆಯನ್ನು ಕೊಡುತ್ತಿರಲು ಎಚ್ಚಮನಾಯಕನು ಅಲ್ಲಿಗೆ ಬಂದನು.

ಎರಡು ತಿಂಗಳು ಕುಮುದಿನಿಯನ್ನು ಅಗಲಿಹೋಗಿದ್ದ ಜಯಶಾಲಿಯಾದ ಎಚ್ಚಮನಾಯಕನು, ಯಾವಾಗ ತನ್ನ ಪ್ರಿಯಳನ್ನು ಕಂಡೇನೆಂಬ ಆತುರದಿಂದ ಧಾವಿಸಿ ವಿಲಾಸಮಂದಿರಕ್ಕೆ ಬಂದಿದ್ದನು. ಆಗ ಎರಡು ತಾಸು ರಾತ್ರಿಯಾಗಿತ್ತು, ವಿಲಾಸಮಂದಿರವು ಇಂದ್ರಭವನದಂತೆ ಶೃಂಗರಿಸಲ್ಪಟ್ಟಿದ್ದು ಝಗಝಗಿಸುವ ದಿವ್ಯಜ್ಯೋತಿಯಲ್ಲಿ ಕುಮುದಿನಿಯ ಅಲಂಕೃತ ಸುಂದರ ರೂಪವು ಸ್ಪಷ್ಟವಾಗಿ ನಾಯಕನ ಕಣ್ಣಿಗೆ ಬಿದ್ದಿತು. ಆದರೆ ಪರಪುರುಷರ ಕಣ್ಣಿಗೆ ಬೀಳಲಾರದ ಕುಮುದಿನಿಯು, ತಾನಿಲ್ಲದಾಗ ರಾತ್ರಿ ಚಾಂದಖಾನನಂಥ ತರುಣನ ಕೈಯಲ್ಲಿ ಎಳ್ಳುಸಕ್ಕರೆ ಕೊಡುವುದನ್ನು ನೋಡಿದಕೂಡಲೆ, ನಾಯಕನ ನಿರ್ಮಲ ಮನಸ್ಸಿನಲ್ಲಿ ಸಂಶಯದ ಬೀಜಾರೋಪಣವಾಗಿ, ನೋಡನೋಡುತ್ತ ಅದು ಮೊಳಕೆಯೊಡೆದು ದಳವಿಟ್ಟಿತು, ಆದ್ದರಿಂದ ನಾಯಕನ ಉತ್ಸಾಹವು ಒಮ್ಮೆಲೆ ಕುಗ್ಗಿ ಕುಮುದಿನಿಯು ಆತನಿಗೆ ತಿರಸ್ಕರಣೀಯಳಾಗಿ ತೋರಹತ್ತಿದಳು. ಚಾಂದಖಾನನ ವಿಷಯದ ಆತನ ಆದರಬುದ್ಧಿಯು ಶಿಥಿಲವಾಗತೊಡಗಿತು. ಪತಿಯನ್ನು ನೋಡಿ ಕುಮುದಿನಿಯು ಆನಂದದಿಂದ ಪುಳಕಗೊಂಡು ಒಳಗೆ ಹೋದಳು. ಚಾಂದಖಾನನು ನಿರ್ಮಲ ಮನಸ್ಸಿನಿಂದ ಕುಮುದಿನಿಯನ್ನು ಕಾಣಲಿಕ್ಕೆ ಬಂದಿದ್ದರೂ, ಭೆಟ್ಟಿಯ ಕ್ರಮವು ತಪ್ಪಿದ್ದಕ್ಕಾಗಿ ಆತನ ಮನಸ್ಸಿಗೆ ಒಂದು ತರಹವಾಗಹತ್ತಿತು. ಎಚ್ಚಮನಾಯಕನು ತನ್ನ ಮನಸ್ಸಿನ ಸಂಶಯವನ್ನು ವಿವೇಕದಿಂದ ಆಚ್ಛಾದಿಸಿದನು. ಖಾನನಾದರೂ ತನ್ನ ಮನಸ್ಸಿಗೆ ಹತ್ತಿದ್ದನ್ನು ಹೊರಗೆ ತೋರಗೊಡಲಿಲ್ಲ, ಉಭಯರೂ ಪರಸ್ಪರ ಕುಶಲಪ್ರಶ್ನೆಗಳನ್ನು ಕೇಳಿದ ಮೇಲೆ ತಮ್ಮ ತಮ್ಮ ಜಯದ ವಾರ್ತೆಗಳನ್ನು ಒಬ್ಬರಮುಂದೊಬ್ಬರು ಹೇಳಿದರು; ದುರಗಪ್ಪನಾಯಕನು ಮಾಂಡಲಿಕನಾದದ್ದನ್ನು ಕೇಳಿ ನಾಯಕನು ಸಮಾಧಾನವನ್ನು ಪ್ರಕಟಿಸಿದನು. ಇಬ್ಬರ ಅಂತರಂಗಗಳು ಕಿಂಕರವಾದದ್ದರಿಂದ ಯಾರ ಮಾತಿನಲ್ಲಿಯೂ ಉತ್ಸಾಹವು ತೋರಲಿಲ್ಲ, ಆಗ

ಖಾನನು ಹೆಚ್ಚಿಗೆ ಮಾತು ಬೆಳಿಸದೆ ನಾಯಕನ ಅನುಮತಿಯನ್ನು ಪಡೆದು ತನ್ನ ಮನೆಗೆ ಹೋದನು.

ಎಚ್ಚಮನಾಯಕನಿಗೆ ಆಕಸ್ಮಿಕವಾಗಿ ಸಂಶಯಪಿಶಾಚಿಯು ಬಡಕೊಂಡದ್ದರಿಂದ ಅವನ ಸುಖದಲ್ಲಿ ಮಣ್ಣುಗೂಡಿದ ಹಾಗಾಯಿತು. ಆತನು ಖಾನನನ್ನು ಕಳಿಸಲಿಕ್ಕೆ ಹೋದ ನೆವದಿಂದ ಹೊರಬಿದ್ದವನು ತಿರುಗಿ ವಿಲಾಸಮಂದಿರಕ್ಕೆ ಕಾಲು ಹಾಕಲಿಲ್ಲ. ಯಾವ ಕುಮುದಿನಿಯ ಸುಂದರರೂಪವನ್ನು ನೋಡಿ, ಮಧುರ ನುಡಿಗಳನ್ನು ಕೇಳಿ, ಮೈಗಂಧವನ್ನು ಆಘ್ರಾಣಿಸಿ, ಬಿಗಿಯಾದ ಅಪ್ಪಿನಿಂದ ಆಕೆಯ ಅಧರಾಮೃತಪಾನಮಾಡಿ ತೃಪ್ತಿಪಡೆಯಬೇಕೆಂಬ ಮನೋರಾಜ್ಯದ ಮದದಿಂದ ಪರವಶನಾಗಿ ಬಂದಿದ್ದನೋ, ಆ ಕುಮುದಿನಿಯ ಹೆಸರನ್ನು ಕೇಳಿದರೆ, ಈಗ ನಾಯಕನ ಜೀವಕ್ಕೆ ತ್ರಾಸವಾಗಹತ್ತಿತು. ಸುಕುಮಾರಿಯೂ, ಕೋಮಲ ಮನಸ್ಸಿನವಳೂ, ಅಕೃತ್ರಿಮ ಪ್ರೇಮಸಂಪನ್ನಳೂ ಆದ ಕುಮುದಿನಿಯನ್ನು ವಿಲಾಸಮಂದಿರದ ವರೆಗೆ ಬಂದು ಮಾತನಾಡಿಸದೆ ಹಾಗೇ ಹೋಗುವುದರಿಂದ, ಆಕೆಯು ಎಷ್ಟು ವ್ಯಸನಪಟ್ಟಾಳೆಂಬ ಮರುಗು ನಾಯಕನಿಗೆ ಉಳಿಯಲಿಲ್ಲ. ಸಂಶಯ ಬಾಧೆಯಿಂದ ಪೀಡಿತನಾದ ನಾಯಕನನ್ನು ಕುಮುದಿನಿಯ ಸೌಂದರ್ಯವು ಸೋಂಕಲಿಲ್ಲ; ಆಕೆಯ ಸಾಹಸ ಕೃತ್ಯಗಳು ಎಚ್ಚರಗೊಳಿಸಲಿಲ್ಲ; ಆಕೆಯ ಸದ್ಗುಣಗಳು ಸಮಾಧಾನಪಡಿಸಲಿಲ್ಲ! ಕುಮುದಿನಿಯಿಂದೊದಗಿದ ಉಪಕಾರವನ್ನೂ, ಸುಖವನ್ನೂ ನಾಯಕನು ಕ್ಷಣದಲ್ಲಿ ಮರೆತು, ಆ ಮುಗ್ಧೆಯಲ್ಲಿ ಶತ್ರುಭಾವವನ್ನು ವಹಿಸಿದನು! ಬಲು ದೂರದಿಂದ ದಣಿದು ಬಂದಿದ್ದ ನಾಯಕನು ಊಟವನ್ನು ಕೂಡ ಮಾಡದೆ, ತನಗೆ ವಿಚಿತ್ರವಾದ ತಲೆಶೂಲಿಯು ಎದ್ದಿರುವುದೆಂದು ಹೇಳಿ, ಯಾವುದೋ ಒಂದು ಕೋಣೆಯಲ್ಲಿ ಸ್ವಸ್ಥವಾಗಿ ಮಲಗಿಕೊಂಡುಬಿಟ್ಟನು; ನಾಯಕನು ಎಷ್ಟು ಶೂರನಿರಲಿ—ಎಷ್ಟು ಸದ್ಗುಣಿಯಿರಲಿ, ಆತನ ಮನಸ್ಸು ಬಹು ಬೇಗ ವಿಕಾರವಶವಾಗುತ್ತಿದ್ದದ್ದರಿಂದ ಅವನು ಕ್ಷಣದಲ್ಲಿ ತಾಪಕ್ಕೆ ಗುರಿಯಾಗಬೇಕಾಗುತ್ತಿತ್ತು. ಪತಿಯು ತನ್ನನ್ನು ಮಾತಾಡಿಸದೆ, ಹೊರಗಿನಿಂದ ಹೊರಗೇ ಹೋದದ್ದರಿಂದ ಕುಮುದಿನಿಯ ಹೃದಯಕ್ಕೆ ವಜ್ರಾಘಾತವಾದಂತಾಯಿತು. ಆಕೆಯ ಕಣ್ಣುಗಳು ನೀರಿನಿಂದ ತುಂಬಿ, ಕಂಠವು ಬಿಗಿದು, ಬಾಯಿಂದ ಮಾತುಗಳು ಹೊರಡದಾದವು. ಆಕೆಯು ಕೂಡಲೆ ದಾಸಿಯೊಡನೆ ನಾಯಕನು ಮಲಗಿದ ಕೋಣೆಗೆ ಹೋಗಿ ಉಪಚರಿಸತೊಡಗಲು, ನಾಯಕನು ಕವಕ್ಕನೆ ಕುಮುದಿನಿಯ ಮೈಮೇಲೆ ಹೋಗಿ—ಕುಮುದಿನೀ, ಇಂದು ನನಗೆ ಬಹಳ ತ್ರಾಸವಾಗಿದೆ, ಮಾತಾಡಿಸಬೇಡ. ನಿನ್ನ ವಿಲಾಸ ಮಂದಿರದಲ್ಲಿ ಸ್ವಸ್ಥವಾಗಿ ಮಲಗಿಕೋ ಹೋಗು, ಎಂದು ನುಡಿದು, ಕುಮುದಿನಿಯ ಕಡೆಗೆ ಬೆನ್ನುಮಾಡಿ ಮಲಗಿಕೊಂಡನು. ಇದನ್ನು ನೋಡಿ ಕುಮುದಿನಿಯು ಗಡಗಡನೆ ನಡುಗುತ್ತ ಕಣ್ಣೀರು ಸುರಿಸುತ್ತ ನಡುನಡುವೆ ಮೆಲ್ಲನೆ— ಯಾಕೆ, ಈ ಅನಾಥಳ ಮೇಲೆ ಇಷ್ಟು ಸಿಟ್ಟುಯೇಕೆ? ನನ್ನಿಂದಾದ ಅಪರಾಧವಾದರೂ ಏನು? ಅಂಥ ಅಪರಾಧವಾಗಿದ್ದರೆ ಹೇಳಿ ದಂಡಿಸಬೇಕು, ಎಂದು ನುಡಿಯುತ್ತ ಒಂದು ತಾಸು ಕುಳಿತಳು, ಎರಡು ತಾಸು ಕುಳಿತಳು, ಮೂರು ತಾಸು ಕುಳಿತಳು; ಆದರೆ ನಾಯಕನು ಅತ್ಯಂತ ನಿಷ್ಠುರನಾಗಿ ಕುಮುದಿನಿಯೊಡನೆ ಮಾತಾಡಲಿಲ್ಲ, ಆಕೆಯನ್ನು ಕಣ್ಣೆತ್ತಿ ನೋಡಲಿಲ್ಲ! ಆಗ ಕುಮುದಿನಿಯು

ದುಃಖದ ವೇಗವನ್ನು ತಡೆಯಲಾರದೆ ಕಣ್ಣೀರಿನಿಂದ ನೆಲವನ್ನು ತೋಯಿಸುತ್ತ ಅಲ್ಲಿಯೇ ನೆಲದಮೇಲೆ ಮಲಗಿಕೊಂಡಳು.

ಕುಮುದಿನಿಯಲ್ಲಿ ತುಂಬಾ ಪ್ರೇಮವುಳ್ಳ ನಾಯಕನು, ಈ ಮೇರೆಗೆ ಸಂಶಯ ಬಾಧೆಯಿಂದ ಪೀಡಿತನಾದ್ದರಿಂದ ತಳಮಳಿಸುತ್ತ ಮನಸ್ಸಿನಲ್ಲಿ– ಆಹಾ! ಕುಮುದಿನಿಯನ್ನು ನಾನು ಪ್ರಾಣಕ್ಕಿಂತಲೂ ಹೆಚ್ಚೆಂದು ತಿಳಿದು ಪ್ರೀತಿಸುತ್ತಿರಲು, ಆಕೆಯು ನನ್ನನ್ನು ಹೀಗೆ ವಂಚಿಸಬಹುದೆ? ನಾನು ಊರಲ್ಲಿ ಇಲ್ಲದಾಗ ಈಕೆಗೆ ಶೃಂಗರಿಸಿದ ವಿಲಾಸಮಂದಿರವೇಕೆ, ವಸ್ತ್ರ ಒಡವೆಗಳೇಕೆ? ಅದೂ ಇರಲಿ, ರಾತ್ರಿ ಚಾಂದಖಾನನ ಸಂಗಡ ಈಕೆಯ ಮಾತುಗಳೇನು? ಕುಮುದಿನೀ, ಎಲೈ ದುಷ್ಟಳೇ, ಎಳ್ಳುಸಕ್ಕರೆ ಕೊಡುವ ನೆವದಿಂದ ಖಾನನ ಹಸ್ತಸ್ಪರ್ಶಮಾಡಿ ಅಪವಿತ್ರಳಾದೆಯಾ? ನೀನು ಇಂಥ ಸಾಹಸಿಯಾದ್ದರಿಂದಲೇ ಹೆಂಗಸರು ಮಾಡಬಾರದ ಸಾಹಸದ ಕೆಲಸಗಳನ್ನು ಮಾಡಿದೆ. ಅಗಸರಾಕೆಯ ವೇಷದಿಂದ ರಾಜಪುತ್ರರನ್ನು ಬಿಡಿಸಿಕೊಂಡು ಬಂದದ್ದೂ, ಮಧ್ಯಮಾರ್ಗದಲ್ಲಿ ದುರಗಪ್ಪನಾಯಕನನ್ನು ಮಾತಿನಿಂದ ಮರುಳುಮಾಡಿದ್ದೂ, ಜಗರಾಯನ ದರ್ಬಾರದಲ್ಲಿ ಯಾರ ಅಂಜಿಕೆಯೂ ಇಲ್ಲದೆ, ಘುಡಘುಡಸಿ ಮಾತಾಡಿದ್ದು ಹೆಂಗಸರ ಕೆಲಸಗಳೇ? ಮರ್ಯಾದೆಶೀಲರು ಹೀಗೆ ಮಾಡಬಹುದೇ? ನಾನು ಊರಲ್ಲಿಲ್ಲದಾಗ ಹೊಲ್ಲದ ಕೆಲಸಕ್ಕೆ ಮನಸ್ಸು ಮಾಡಿದ ಈ ನೀಚಳು, ಪುರುಷವೇಷದಿಂದ ಮನಸ್ಸಿಗೆ ಬಂದಂತೆ ತಿರುಗಿದಾಗ ಏನೇನು ಮಾಡಿರುವಳೋ ಯಾರಿಗೆ ಗೊತ್ತು! ಈ ಸಾಹಸಿಯು ವಿಜಾಪುರದ ಬಾದಶಹನ ಮಗನ ಪ್ರೇಮಕ್ಕೆ ಪಾತ್ರಳಾದವಳು. ಆಗಿನಿಂದಲೇ ಚಾಂದಖಾನನ ಪರಿಚಯವು ಈಕೆಗೆ ಇರುತ್ತದೆ! ಹಾ ದುಷ್ಟೇ ! ಸ್ತ್ರೀಯರ ನೆರಳಿಗೆ ಹೋಗದೆ ಸುಖದಿಂದಿದ್ದ ನನ್ನನ್ನು ಈ ಪರಿತಾಪಕ್ಕೆ ಗುರಿಮಾಡಿದೆಯಾ? ನಿನ್ನನ್ನು ಈಗಲೇ ತುಂಡರಿಸಿ ಚಲ್ಲತಕ್ಕದ್ದು, ಎಂದು ಮಲಗಿದವನು ದಿಗ್ಗನೆ ಎದ್ದು ನಿಂತು ಕೊಳ್ಳಲು, ಕುಮುದಿನಿಯು ಚಟ್ಟನೆ ಎದ್ದು ಕೈಜೋಡಿಸಿ ನಿಂತುಕೊಂಡು ಗಡಗಡನೆ ನಡಗುತ್ತ– ಹೀಗೆ ಯಾಕೆ ಏಳೋಣವಾಯಿತು? ಏನು ಬೇಕು? ಇನ್ನೂ ತಮಗೆ ನಿದ್ದೆಯೇ ಹತ್ತಿರುವುದಿಲ್ಲವೇ? ಎಂದು ಕೇಳಲು, ನಾಯಕನು– ನೀನು ಕಣ್ಮರೆಯಾಗುವವರೆಗೆ ನನಗೆ ನಿದ್ದೆಯು ಹತ್ತುವ ಹಾಗಿಲ್ಲ. ನಿನ್ನ ಸಂಗಡ ಮಾತಾಡುವ ಪ್ರಸಂಗವು ಬರುವುದಕ್ಕಿಂತ ತಟ್ಟನೆ ಪ್ರಾಣಹೋದರೆ ನೆಟ್ಟಗಾದೀತು. ದುಷ್ಟಳೇ, ಇಲ್ಲಿಂದ ಎದ್ದುಹೋಗು. ಸ್ವಲ್ಪ ನಿದ್ದೆ ಬಂದರೆ ನನಗೆ ಸಮಾಧಾನ ವಾದರೂ ಆದೀತು, ಅನ್ನಲು, ಕುಮುದಿನಿಯು ಬಳಬಳ ಕಣ್ಣೀರು ಸುರಿಸುತ್ತ ಕೈಜೋಡಿಸಿ ಕೊಂಡು– ಕ್ಷಮಿಸುವ ಕೃಪೆಯಾಗಬೇಕು, ನಾನು ಅಪ್ಪಣೆಗೆ ಹೊರಗಾದವಳಲ್ಲ, ಹೋಗುತ್ತೇನೆ, ತಮಗೆ ಸುಖವಾದರೆ ಸಾಕು, ಎಂದು ನುಡಿದು, ಮರಣವ್ಯಥೆಗೆ ಗುರಿಯಾಗಿ ಹೊರಗೆ ಬರಲು, ಬೆಳ್ಳಗೆ ಬೆಳಗಾಗಿತ್ತು!

# ಬಾಲಕ್ಕೆ ಬಡಿದಾಟ

ಈ ಮೇರೆಗೆ ಎಚ್ಚಮನಾಯಕನು ಪ್ರಬಲವಾದ ಸಂಶಯಪಿಶಾಚದಿಂದ ಪೀಡಿತನಾಗಿ, ಕುಮುದಿನಿಯನ್ನು ನೆನಿಸಿ ನೆನಿಸಿ ಸಂತಾಪಗೊಳ್ಳುತ್ತ ಹದಿನೈದು ದಿನಗಳನ್ನು ಕಳೆದನು. ಈ ಅವಧಿಯಲ್ಲಿ ಆತನು ಕುಮುದಿನಿಯನ್ನು ಕಣ್ಣೆತ್ತಿ ನೋಡಲಿಲ್ಲ. ನಾಯಕನು ಚಂಚಲ ಸ್ವಭಾವದವನೆಂಬದನ್ನು ವಾಚಕರು ಬಲ್ಲರಷ್ಟೇ? ಆತನು ತನ್ನ ಸ್ವಭಾವಕ್ಕನುಸರಿಸಿ, ಒಂದು ದಿನ ಕುಮುದಿನಿಯ ಗುಣಗಳನ್ನೂ ಚಾಂದಖಾನನ ಗುಣಗಳನ್ನೂ ಅವರಿಂದ ತನಗಾದ ಸಹಾಯವನ್ನೂ ಸ್ಮರಿಸಿ ಪಶ್ಚಾತ್ತಾಪಪಟ್ಟು, ಅವರನ್ನು ಆದರಿಸಿ ಸಮಾಧಾನಗೊಳಿಸಬೇಕೆಂದು ಕೂಡಲೆ ಚಾಂದಖಾನನನ್ನು ಕರೆಸಿದನು. ಇದ್ದಲ್ಲಿ ತಾನಾಗಿ ಹೋಗಿ ಮಾತಾಡಿಸಿದರೆ ಚೆನ್ನಾಗಿ ಮಾತಾಡದೆ ತನ್ನನ್ನು ನಿರಾಕರಿಸುತ್ತಿದ್ದ ನಾಯಕನು, ಈದಿನ ತಾನಾಗಿ ಕರೆಸಿದ್ದನ್ನು ನೋಡಿ ಖಾನನಿಗೆ ಆಶ್ಚರ್ಯವಾಯಿತು. ನಾಯಕನು ತನ್ನನ್ನು ನಿರಾಕರಿಸಲಿಕ್ಕೂ, ಕುಮುದಿನಿಯನ್ನು ಕಣ್ಣೆತ್ತಿ ನೋಡದಿರುವುದಕ್ಕೂ ತಾನೇ ಕಾರಣನೆಂಬದನ್ನು ಖಾನನು ಅರಿತಿದ್ದನು. ಮಕರ ಸಂಕ್ರಮಣದ ದಿವಸ ರಾತ್ರಿ ನಾಯಕನಿಲ್ಲದಾಗ ತಾನು ಕುಮುದಿನಿಯೊಡನೆ ಮಾತಾಡುತ್ತ ಕುಳಿತದ್ದೂ ಆಕೆಯಿಂದ ಎಳ್ಳುಸಕ್ಕರೆಯನ್ನು ಇಸಿದುಕೊಂಡದ್ದೂ ನಾಯಕನ ವಿಕಲ್ಪಕ್ಕೆ ಕಾರಣ ವಾದವೆಂಬದು ಖಾನನಿಗೆ ಗೊತ್ತಿತ್ತು ಆತನು ಹೆಚ್ಚಿನ ವಿಚಾರಕ್ಕೆ ಹೋಗದೆ, ಕರೆಸಿದಂತೆ ನಾಯಕನ ಭೆಟ್ಟಿಗೆ ಹೋದನು. ಖಾನನು ಬಂದದ್ದನ್ನು ನೋಡಿ ನಾಯಕನು ಎದ್ದುನಿಂತು ಸಲಾಮುಮಾಡಿ ಕೈಹಿಡಿದು ಆದರದಿಂದ ಆತನನ್ನು ಬರಮಾಡಿಕೊಂಡನು. ಆಗ ಖಾನನು ನಾಯಕನಿಗೆ– ಪ್ರಿಯಮಿತ್ರಾ, ಸಾಕು–ಸಾಕು; ಇಷ್ಟೊಂದು ಆದರವೇಕೆ? ಮನೆಗೆ ಬಂದರೆ ಮಾತಾಡಿಸದ ನೀನು ಇಂದು ಈ ಪರಿ ಆದರಿಸಲಿಕ್ಕೆ ಕಾರಣವೇನು? ಶೂರನಾದ ನಾಯಕನೇ, ನಿನ್ನನ್ನು ನಾನು ಬಹು ವಿವೇಕಿಯೆಂದು ತಿಳಿದಿದ್ದೆನು; ಆದರೆ, ನೀನು ಅವಿವೇಕ ಶಿಖಾಮಣಿಯಿರುತ್ತೀ! ನೀನಿಲ್ಲದಾಗ ನಾನು ರಾತ್ರಿ ಕುಮುದಿನಿಯೊಡನೆ ಮಾತಾಡುತ್ತ ಕುಳಿತ ಕ್ಷುಲ್ಲಕ ತಪ್ಪಿಗಾಗಿ ನೀನು ಹೀಗೆ ವಿಕಲ್ಪವನ್ನು ಎಣಿಸಿ, ಮೂರ್ಖನಂತೆ ಆಚರಿಸಬಹುದೇ? ನನಗೆ ಕುಮುದಿನಿಯು ಅಪರಿಚಿತಳೇ? ನೀನು ಅಪರಿಚಿತನೇ? ನನ್ನ ಸ್ವಭಾವವನ್ನೂ, ಕುಮುದಿನಿಯ ಯೋಗ್ಯತೆಯನ್ನೂ ನೀನು ಅರಿತಿಲ್ಲವೇ? ಪ್ರತ್ಯಕ್ಷವಾದರೂ ಪ್ರಮಾಣಿಸಿ ನೋಡಬೇಕೆಂಬ ಅನುಭವದ ಮಾತು ವ್ಯರ್ಥವಾದದ್ದಲ್ಲ, ನನ್ನಲ್ಲಿ ನೀನು ಅಂಥ ತಪ್ಪನ್ನೇನು ಕಂಡೆ? ಕುಮುದಿನಿಯ ಮೇಲೆ ಯಾವ ಅಂಥ ತಪ್ಪನ್ನು ಹೊರಿಸುವೆ? ಕನ್ನಡವೀರಾ, ನಿನ್ನ ಈ ಕ್ಷುದ್ರ ವಿಚಾರವು ನಿನ್ನ ಶೌರ್ಯಕ್ಕೆ ಕುಂದನ್ನಿಡುವು ದಾಗಿರುತ್ತದೆ, ಅನ್ನಲು, ನಾಯಕನು–ಚಾಂದಖಾನ್, ಅದು ಹ್ಯಾಗೇ ಇರಲಿ ಸ್ವಭಾವಕ್ಕೆ ಔಷಧವಿಲ್ಲ, ನೀನು ಸಾವಿರ ಮಾತುಗಳನ್ನಾಡಿದರೂ ನನ್ನ ಮನಸ್ಸಿನ ಸಂಶಯವು ಹೋಗ ಲಾರದು; ಆದರೂ ಸಂಶಯ ಬಂದಮಾತ್ರದಿಂದ ನಿನ್ನನ್ನೂ, ಕುಮುದಿನಿಯನ್ನೂ ಇಷ್ಟು ನಿರಾಕರಿಸಿದ್ದು ನನ್ನ ಅಪರಾಧವು. ಅಂತೇ ನಾನು ನಿನ್ನನ್ನು ಕರೆಸಿ ಈಗ ಕ್ಷಮೆಯನ್ನು ಬೇಡಿಕೊಳ್ಳುತ್ತೇನೆ. ನಡೆ, ಕುಮುದಿನಿಯಲ್ಲಿಗೆ ಹೋಗಿ ಆಕೆಯನ್ನು ಸಮಾಧಾನಗೊಳಿಸೋಣ.

ನನ್ನನ್ನು ನೀನು ನೀಚನೆಂದು ಬೇಕಾದಷ್ಟು ನಿರಾಕರಿಸು; ಆದರೆ ಕುಮುದಿನಿಯು ನಿರ್ದೋಷಿಯೆಂಬದನ್ನು ನಾನು ಮನಗಾಣುವವರೆಗೆ ಆಕೆಯನ್ನು ಮುಟ್ಟಲಿಕ್ಕಿಲ್ಲ. ನೀವಿಬ್ಬರೂ ನನ್ನ ಸ್ವಾಮಿಯ ಕಾರ್ಯಸಾಧಕರಾದ್ದರಿಂದಲೇ, ಇಲ್ಲಿಯವರೆಗೆ ಕೈಕಾದಿದ್ದೇನೆ. ಇಲ್ಲದಿದ್ದರೆ, ಕುಮುದಿನಿಯ ಅಷ್ಟೇ ತಪ್ಪಿಗಾಗಿ ಅವಳನ್ನೂ, ನಿನ್ನನ್ನೂ ಅದೇ ಕ್ಷಣದಲ್ಲಿ ತುಂಡರಿಸುತ್ತಿದ್ದೆನು ! ಇರಲಿ ಮಿತ್ರಾ, ನನ್ನ ಬಿರುನುಡಿಗಳಿಗಾಗಿ ಸಿಟ್ಟಾಗಬೇಡ, ಕಣ್ಣು ಕೆಂಪಗೆ ಮಾಡಬೇಡ, ಶಾಂತನಾಗು; ಇದ್ದದ್ದನ್ನು ಸರಳತನದಿಂದ ಹೇಳಿಬಿಡುವ ನಿನ್ನ ಮಿತ್ರನನ್ನು ಕ್ಷಮಿಸಿ, ಆತನಿಗೆ ಕುಮುದಿನಿಯ ಭೆಟ್ಟಿಯನ್ನು ಮಾಡಿಸು, ನಡೆ. ನಿನ್ನ ಮಿತ್ರನು ದುರಭಿಮಾನದಿಂದ ಕುಮುದಿನಿಯನ್ನು ಮಿತಿಮೀರಿ ನಿರಾಕರಿಸುವ ಕಾರಣ, ಆಕೆಯ ಬಳಿಗೆ ಹೋಗಲಿಕ್ಕೆ ಆತನಿಗೆ ಮೋರೆಯಿಲ್ಲ, ಎಂದು ನುಡಿಯುವಾಗ ನಾಯಕನ ಕಣ್ಣೊಳಗಿಂದ ನೀರುಗಳು ದಳದಳ ಉದುರಿದವು !

ಎಂದೂ ಕಣ್ಣೀರು ಸುರಿಸಿ ಗೊತ್ತಿಲ್ಲದ ನಾಯಕನು, ಇಂದು ಕಣ್ಣೀರು ಸುರಿಸುವುದನ್ನು ನೋಡಿದರೆ, ವಿವಾಹಿತಪುರುಷನು ಪ್ರಸಂಗದಲ್ಲಿ ಎಷ್ಟು ಹಣ್ಣಾಗಬೇಕಾಗುತ್ತದೆಂಬದು ವಾಚಕರ ಅನುಭವಕ್ಕೆ ಬರುವಹಾಗಿದೆ. ನಾಯಕನ ಈ ಸ್ಥಿತಿಯನ್ನು ನೋಡಿ ಖಾನನ ಮನಸ್ಸು ಕರಗಿತು. ಆತನು ನಾಯಕನ ಬಿರುನುಡಿಗಳಿಂದ ಬಂದ ಸಿಟ್ಟನ್ನು ನುಂಗಿಕೊಂಡು, ನಾಯಕನೊಡನೆ ಕುಮುದಿನಿಯ ಬಳಿಗೆ ಹೋದನು. ಆಗ ವಿಲಾಸಮಂದಿರದ ಬಾಗಿಲು ಇಕ್ಕಿತ್ತು, ದ್ವಾರರಕ್ಷಕರು ಕುಮುದಿನಿಯ ಬಳಿಗೆ ಓಡುತ್ತಹೋಗಿ ನಾಯಕರು ಖಾನನೊಡನೆ ಬಂದಿದ್ದಾರೆಂದು ಹೇಳಿದರು. ಕೂಡಲೆ ಪ್ರೇಮಾತಿಶಯದಿಂದ ಕುಮುದಿನಿಯ ದುಃಖವು ಉಕ್ಕೇರಲು, ಆಕೆಯು ಪರದೆಯ ಮರೆಯಲ್ಲಿ ಕುಳಿತು ಕಣ್ಣೀರು ಸುರಿಸಹತ್ತಿದಳು. ನಾಯಕನು ಖಾನನೊಡನೆ ವಿಲಾಸಮಂದಿರ ವನ್ನು ಹೊಕ್ಕು ಸುಮ್ಮನೆ ಕುಳಿತುಕೊಂಡನು. ಹೀಗೆ ಮೌನದಿಂದ ಕೆಲವು ಕಾಲವು ಕ್ರಮಿಸಿದ ಮೇಲೆ ಖಾನನು ಕುಮುದಿನಿಯನ್ನು ಕುರಿತು – ಅಮ್ಮಾ, ಕುಮುದಿನೀ, ನಿನ್ನ ಪತಿಯಾದ ಎಚ್ಚಮನಾಯಕರು ನಿನ್ನನ್ನು ನಿರಾಕರಿಸಿ, ಇಷ್ಟು ದಿವಸ ವ್ಯಥೆಪಡಿಸಿದ್ದಕ್ಕಾಗಿ ಪಶ್ಚಾತ್ತಾಪಪಟ್ಟು ನಿನ್ನನ್ನು ಕಾಣಲಿಕ್ಕೆ ಬಂದಿದ್ದಾರೆ. ಇಲ್ಲಿ ಪರಕೀಯರು ಯಾರೂ ಇಲ್ಲದ್ದರಿಂದ ಹೊರಗೆ ಬಂದು ನೀನು ಪತಿಯನ್ನು ಕಾಣಲು ಬಾಧೆಯಿಲ್ಲ, ಅನುಗ್ರಹಿಸಿ ನಿನ್ನ ಬಳಿಗೆ ಬಂದಿರುವ ಪತಿಯನ್ನು ಸಮಾಧಾನದ ನುಡಿಗಳಿಂದ ಸತ್ಕರಿಸುವುದು ಸೌಜನ್ಯದ ಲಕ್ಷಣವು ಅನ್ನಲು, ಕುಮುದಿನಿಯು ತನ್ನ ದುಃಖವನ್ನು ನುಂಗಿಕೊಂಡು ಗಂಭೀರವಾದ ಮುಖಮುದ್ರೆಯಿಂದ ಹೊರಗೆ ಬಂದು ವಿನಯದಿಂದ ನಿಂತುಕೊಂಡಳು. ಆಕೆಯ ಕ್ಷೀಣವಾದ ಶರೀರವನ್ನೂ ನಿಸ್ತೇಜವಾದ ಮುಖವನ್ನೂ ನೋಡಿ, ಹದಿನೈದೇ ದಿನಗಳಲ್ಲಾದ ಆಕೆಯ ಪ್ರಕೃತಿಯ ಸ್ಥಿತ್ಯಂತರಕ್ಕಾಗಿ ಖಾನನ ಎದೆಯೊಡೆದು ನೀರಾಯಿತು. ಆತನು ಸಂತಾಪದಿಂದ ನಾಯಕನಿಗೆ– ಎಲೈ ಕಠಿಣ ಹೃದಯದ ನಾಯಕನೇ, ನೋಡಿದೆಯಾ ಈ ಸಾಧ್ವಿಯ ಕ್ಷೀಣದೆಸೆಯನ್ನು ! ಸ್ತ್ರೀಹತ್ಯದ ಪಾತಕವನ್ನು ಅನ್ಯಾಯದಿಂದ ಯಾರ ಕೊರಳಿಗೆ ಕಟ್ಟಬೇಕೆಂದು ಮಾಡಿದ್ದೀ? ನಿರಪರಾಧಿಯಾದ ನನ್ನನ್ನೂ, ಮಹಾಪತಿವ್ರತೆಯಾದ ಕುಮುದಿನಿಯನ್ನೂ ಕಾರಣವಿಲ್ಲದೆ ಅವಮಾನಗೊಳಿಸಿ ಅಪಕೀರ್ತಿಗೆ

ಗುರಿಮಾಡಿದೆಯಲ್ಲ! ವೀರಶಿರೋಮಣಿಯೇ, ನೀನು ನನ್ನನ್ನೂ, ಕುಮುದಿನಿಯನ್ನೂ ಕ್ಷಣದಲ್ಲಿ ತುಂಡರಿಸತಕ್ಕವನಿದ್ದೆಯಲ್ಲವೆ? ಆದರೆ, ನಾನು ಈಗ ಪ್ರತಿಜ್ಞೆಮಾಡಿ ಹೇಳುತ್ತೇನೆ ಕೇಳು. ನಾನು ನಿರಪರಾಧಿಯೆಂದು ಇದೇ ಕ್ಷಣದಲ್ಲಿ ಪ್ರತ್ಯಕ್ಷಪ್ರಮಾಣದಿಂದ ನಿನಗೆ ಸಿದ್ಧಮಾಡಿ ತೋರಿಸದಿದ್ದರೆ, ಇದೇ ಕ್ಷಣದಲ್ಲಿ ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ; ಸಿದ್ಧಮಾಡಿ ತೋರಿಸಿದರೆ, ನೀನು ಮಹಾಸತಿಯಾದ ಈ ಕುಮುದಿನಿಯ ಕಾಲಿಗೆರಗಿ ಆಕೆಯ ಕ್ಷಮೆಯನ್ನು ಬೇಡಿಕೊಳ್ಳ ಬೇಕಾದೀತು! ಅನ್ನಲು, ಯಾವ ಪಾಪವನ್ನೂ ಅರಿಯದ ಕುಮುದಿನಿಯು ಖಾನನ ಮಾತಿನ ಅರ್ಥವನ್ನು ತಿಳಿಯದೆ, ಭಯದಿಂದ ನಡಗುತ್ತ ಮನಸ್ಸಿನಲ್ಲಿ ಗುರುಸ್ಮರಣೆ ಮಾಡಿದಳು! ಅಷ್ಟರಲ್ಲಿ ಆಕೆಯ ಗುರುವಾದ ಋಷೀಶ್ವರನು ದಕ್ಷಿಣದೇಶದ ಯಾತ್ರೆಗಳನ್ನು ಮಾಡಿಕೊಂಡು ಬಂದವನಂತೆ ಅಲ್ಲಿಗೆ ಬಂದು– ಎಲೈ ಯವನ ವೀರನೇ, ನೀನು ಮಾಡಿದ ಪ್ರತಿಜ್ಞೆಯನ್ನು ನಾನು ಒಪ್ಪಿಕೊಳ್ಳುತ್ತೇನೆ. ನನ್ನ ಆಶ್ರಮದಲ್ಲಿ ಎರಡುವರ್ಷ ಬೆಳೆದು ಸತ್ಸಮಾಗಮದಿಂದ ಸುಸಂಸ್ಕೃತಳಾಗಿರುವ ಕುಮುದಿನಿಯು, ನಿಷ್ಕಾರಣ ಲೋಕದ ಅಪಕೀರ್ತಿಗೆ ಗುರಿಯಾಗುವುದು ಶ್ರೇಯಸ್ಕರವಲ್ಲ. ನಾಯಕನ ಸಂಶಯವು ಪ್ರತ್ಯಕ್ಷಪ್ರಮಾಣದ ಹೊರತು ದೂರವಾಗಲಾರದು. ಚಾಂದಖಾನ, ಹೆಚ್ಚಿನ ಮಾತು ಹಿಂದುಗಡೆಗೆ; ಮೊದಲು ನೀನು ನಿರಪರಾಧಿಯೆಂಬದನ್ನು ಪ್ರತ್ಯಕ್ಷಪ್ರಮಾಣದಿಂದ ಹ್ಯಾಗೆ ಸಿದ್ಧಮಾಡುತ್ತೀ ಮಾಡು, ಅನ್ನಲು, ಚಾಂದಖಾನನು ಏಚ್ಚಮನಾಯಕನಿಗೆ ಎಲೈ ಮಿತ್ರನೇ, ಹಿಂದಕ್ಕೆ ನಿನ್ನ ಬಳಿಯಲ್ಲಿ ನಾನೊಂದು ಮುದ್ರೆಮಾಡಿದ ಪೆಟ್ಟಿಗೆಯನ್ನು ಇಟ್ಟಿದ್ದೆನಲ್ಲ? ಅದನ್ನು ಈಗ ತರಿಸು ಅನ್ನಲು, ನಾಯಕನ ಅಪ್ಪಣೆಯಿಂದ ಸೇವಕರು ಕೂಡಲೇ ಅದನ್ನು ತಂದರು. ಆಗ ಚಾಂದಖಾನನು ಋಷೀಶ್ವರನ ಬಳಿಗೆ ಹೋಗಿ ವಿನಯದಿಂದ ನಮಿಸಿ ಪೆಟ್ಟಿಗೆಯನ್ನು ಆತನ ಮುಂದಿಟ್ಟು– ಮಹಾಸ್ವಾಮೀ, ನನ್ನ ಪ್ರತ್ಯಕ್ಷ ಪ್ರಮಾಣವು ಈ ಪೆಟ್ಟಿಗೆಯಲ್ಲಿಯೇ ಇರುತ್ತದೆ. ಪುರುಷವೇಷದಿಂದ ಬೇಕಾದಹಾಗೆ ವ್ಯವಹರಿಸುವ ಕುಮುದಿನಿಯನ್ನು ನೋಡಿ, ಒಂದಿಲ್ಲೊಂದು ದಿನ ಇಂಥ ಪ್ರಸಂಗವು ಬರತಕ್ಕದ್ದೆಂತಲೇ ತಿಳಿದು, ನಾಯಕನ ಬಳಿಯಲ್ಲಿ ಈ ಪೆಟ್ಟಿಗೆಯನ್ನು ನಾನು ಹೇಳಿ ಇಟ್ಟಿದ್ದೆನು. ಮಹಾಸ್ವಾಮಿಗಳು ಇದನ್ನು ತೆರೆಯುವ ಕೃಪೆಮಾಡಬೇಕು!

ಖಾನನ ಈ ಮಾತುಗಳನ್ನು ಕೇಳಿ ನಾಯಕನಿಗೆ ಆಶ್ಚರ್ಯವಾಯಿತು. ಈ ಸಣ್ಣ ಪೆಟ್ಟಿಗೆಯಲ್ಲಿ ಪ್ರತ್ಯಕ್ಷಪ್ರಮಾಣವೇನಿರುತ್ತದೆಂದು ಆತನು ಎವೆಯಿಕ್ಕದೆ ಪೆಟ್ಟಿಗೆಯನ್ನು ನೋಡಹತ್ತಿದನು. ಕುಮುದಿನಿಯಂತೂ ಏನು ಅರಿಯದೆ ದಂಗುಬಡೆದು ನಿಂತುಕೊಂಡಿದ್ದಳು. ಅಷ್ಟರಲ್ಲಿ ಋಷೀಶ್ವರನು ಸ್ವತಃ ಕೈಮುಟ್ಟಿ ಪೆಟ್ಟಿಗೆಯನ್ನು ತೆರೆದುನೋಡಲು, ಅದರಲ್ಲಿ ವಿಜಾಪುರದ ಬಾದಶಹನು ಖಾನನಿಗೆ ಬರೆದು ಕೊಟ್ಟಿದ್ದ ಒಂದು ಸನದು ಇತ್ತು. ಅದನ್ನು ಓದಿ ನೋಡಿ ನಾಯಕನ ಸೊಂಡಿಯು ಒಣಗಿತು. ಆತನು ಆಶ್ಚರ್ಯಮಗ್ನನಾಗಿ ಚಾಂದಖಾನನ ಸ್ವಾಮಿನಿಷ್ಠೆಗಾಗಿಯೂ, ಪಾಪಭೀರುತ್ವಕ್ಕಾಗಿಯೂ, ವಿಚಿತ್ರ ಧೈರ್ಯಕ್ಕಾಗಿಯೂ ಮನಸ್ಸಿನಲ್ಲಿ ಆತನನ್ನು ಕೊಂಡಾಡಿದನು. ಈಗ ಐದು ವರ್ಷಗಳ ಹಿಂದೆ ಚಾಂದಖಾನನಿಗೆ ಬಾದಶಹನ ಅಪ್ಪಣೆಯಂತೆ ಆತನ ಒಬ್ಬ ಹೆಂಡತಿಯನ್ನು ಅಫಗಾನಿಸ್ಥಾನದಿಂದ ಕರಕೊಂಡು ಬರುವ

ಪ್ರಸಂಗವು ಒದಗಿತಂತೆ. ಆಗ ಖಾನನು, ಮನಸ್ಸು ಸ್ವತಂತ್ರವಲ್ಲೆಂತಲೂ, ರಾಜಾಜ್ಞೆಯನ್ನು ಮೀರುವುದು ದ್ರೋಹವೆಂತಲೂ, ಬಾದಶಹನ ಸಂಶಯಕ್ಕೆ ಗುರಿಯಾದರೆ ಅನರ್ಥವು ಒದಗೀತೆಂತಲೂ ತಿಳಿದು, ತನ್ನ ಶರೀರವನ್ನು ಬಾದಶಹನ ಮುಂದೆ ಕೊಯ್ದಿಟ್ಟು, ಸ್ವಾಮಿಕಾರ್ಯಕ್ಕಾಗಿ ಹೋದನಂತೆ ! ಖಾನನ ಈ ಸ್ವಾಮಿನಿಷ್ಠೆಗಾಗಿ ಬಾದಶಹನು ಕೆಲವು ಪ್ರಾಂತಗಳನ್ನು ಇನಾಮು ಹಾಕಿಕೊಟ್ಟಂತೆ ಆ ಸನದಿನಲ್ಲಿ ಬರೆದಿತ್ತು ! ಆಗ ಎಚ್ಚಮನಾಯಕನು ಖಾನನ ಬಳಿಗೆ ಬಂದು–ಸನ್ಮಾನನೀಯನಾದ ಪ್ರಿಯಮಿತ್ರನೇ, ನನ್ನ ಮಹಾಪರಾಧವನ್ನು ಕ್ಷಮಿಸು. ನೀನು ಹೇಳಿರುವಂತೆ ಕುಮುದಿನಿಗೆ ನಾನು ನಮಸ್ಕಾರ ಮಾಡುವುದು ಹಿಂದಿನಿಂದ! ಸದ್ಯಕ್ಕೆ ನಾನು ಶ್ರೀಗುರುಸನ್ನಿಧಿಯಲ್ಲಿ ನಿನ್ನನ್ನು ಭಕ್ತಿಪುರಸ್ಸರವಾಗಿ ನಮಿಸುತ್ತೇನೆ. ಮಿತ್ರಾ, ನನ್ನ ಸರ್ವಾಪರಾಧಗಳನ್ನು ಕ್ಷಮಿಸಿ ಮೊದಲಿನಂತೆ ನನ್ನ ಮೇಲೆ ಲೋಭಮಾಡೆಂದು ಬಾರಿಬಾರಿಗೆ ನಿನ್ನನ್ನು ಪ್ರಾರ್ಥಿಸುತ್ತೇನೆ. ನನ್ನ ಸ್ವಭಾವದ ದೋಷವನ್ನು ತೆಗೆದುಹಾಕುವುದಕ್ಕಾಗಿಯೇ ಈ ಪ್ರಸಂಗವು ಒದಗಿರುತ್ತದೆಂದು ನಾನು ತಿಳಿಯುತ್ತೇನೆ. ಇಗೋ, ಪ್ರಿಯಮಿತ್ರಾ, ಶ್ರೀಗುರುಸನ್ನಿಧಿಯಲ್ಲಿ ಪ್ರತಿಜ್ಞೆಯನ್ನು ಮಾಡುತ್ತೇನೆ ಕೇಳು. ಇನ್ನು ನಾನು ಇಂಥ ಸಂಶಯಕ್ಕೆ ಎಂದೂ ಆಸ್ಪದಕೊಡುವುದಿಲ್ಲ

ನಾಯಕನ ಈ ಮಾತುಗಳನ್ನು ಕೇಳಿ, ಋಷೀಶ್ವರನು ಆತನನ್ನು ನಿಷೇಧಿಸಿ–ಎಲೈ ವಿಕಾರವಶನಾದ ಎಚ್ಚಮನಾಯಕಾ, ಹೀಗೆ ತಟ್ಟನೆ ಪ್ರತಿಜ್ಞೆ ಮಾಡಿಬಿಡುವ ಚಾಳಿಯು ಒಳ್ಳೆಯದಲ್ಲ; ಇದರಿಂದ ಮತ್ತೂ ನಿನ್ನ ವಿಕಾರವಶತೆಯೇ ವ್ಯಕ್ತವಾದಂತಾಗುತ್ತದೆ. ಅಪ್ಪಾ ಘೋರವಾದ ತಪಶ್ಚರ್ಯದಿಂದ ಮನಸ್ಸನ್ನು ಜಯಿಸಿದ ವಿಶ್ವಾಮಿತ್ರ–ಪರಾಶರಾದಿ ಋಷಿಗಳೂ ಕೂಡ ವಿಕಾರವಶರಾಗಿ ಹೋಗಿರಲು, ನೀನು ಪ್ರತಿಜ್ಞೆಮಾಡಲಿಕ್ಕೆ ಎಷ್ಟರವನು? ಬಿಸಿಲನ್ನು ಹಿಡಿದು ಮಟ್ಟೆಯನ್ನು ಕಟ್ಟಬಹುದು; ಆದರೆ ಮನಸ್ಸನ್ನು ಜಯಿಸುವುದು ಅಸಾಧ್ಯವು! ತಿಳಿದವರು ಸಹಸಾ ಪ್ರತಿಜ್ಞೆಯನ್ನು ಮಾಡಬಾರದು. ಆತ್ಮಸಂಯಮನದಿಂದ ಮನಸ್ಸನ್ನು ಸ್ವಾಧೀನಪಡಿಸಿಕೊಳ್ಳಬಾರದಂತಲ್ಲ; ಆದರೆ ಒಮ್ಮೆ ಮನಸ್ಸನ್ನು ಬಿಗಿಹಿಡಿಯಲು ಹೆಣಗುವುದಕ್ಕಿಂತ, ಮನಸ್ಸಿನ ಎಳತಕ್ಕೆ ದೇಹವು ಸಿಗದಂತೆ, ದೇಹವನ್ನು ಸ್ವತಂತ್ರದಲ್ಲಿಟ್ಟುಕೊಳ್ಳುವುದು ಸುಲಭ. ದೇಹವು ಕೆಟ್ಟ ಕೆಲಸಕ್ಕೆ ಹೋಗದೆ ಸುಮ್ಮನೆ ಕುಳಿತರೆ, ಮನಸ್ಸು ಹರಿದು ಮಾಡುವುದೇನು? ಮನಸ್ಸು ಕೆಲಸಮಾಡಿಸಬಹುದಲ್ಲದೆ, ಕೆಲಸ ಮಾಡಲಾರದು. ಇರಲಿ, ಪ್ರಕೃತದ ವಿಷಯವನ್ನು ನೋಡೋಣ. ಈಶ್ವರ ಸಂಕೇತದಂತೆ ವಿಜಯನಗರದ ನಿಜವಾದ ವಂಶದ ರಾಜನು ಪಟ್ಟವನ್ನೇರಿದ್ದರಿಂದ ನಮ್ಮೆಲ್ಲರ ಕಾರ್ಯವಾದಂತಾಯಿತು. ಆನೆಗೆ ಆನೆಯು ಹೋಗಿರಲು, ಬಾಲಕ್ಕೆ ಬಡಿದಾಡುವಂತೆ, ಅರಸು ಮನೆತನದವರು ಆನೆಯಂಥ ತಮ್ಮ ವಿಜಯನಗರದ ಸಾಮ್ರಾಜ್ಯವನ್ನು ಕಳಕೊಂಡು, ಅದರ ಬಾಲದಂತೆ ಇರುವ ಚಂದ್ರಗಿರಿಯ ಪಟ್ಟಣದ ಸಲುವಾಗಿ ಬಡಿದಾಡುವುದನ್ನು ಇನ್ನು ಬಿಟ್ಟು ಬಿಡಬೇಕು; ಹಾಗೆಮಾಡದಿದ್ದರೆ, ಕಡೆಗೆ ಬಾಲವನ್ನೂ ಕಳಕೊಂಡು, ಆನೆಯ ಗುರುತನ್ನೇ ಮರೆಯುವ ಪ್ರಸಂಗವು ಅವರಿಗೆ ಬಂದೀತು! ಭರತಭೂಮಿಗೆ ಸದ್ಯಕ್ಕೆ ವೃದ್ಧಾಪ್ಯಕಾಲವು ಒದಗಿರುವುದರಿಂದ ಅದರ ಪುನರ್ಜನ್ಮವಾಗುವವರೆಗೆ ಅರಸರೇ ಏಕೆ, ಎಲ್ಲ ಭಾರತೀಯರು ಬಾಲಕ್ಕೆ ಬಡದಾಡುವುದೇ ಸರಿ. ನಮ್ಮೊಳಗೆ ಒಬ್ಬರ

ಉತ್ಕರ್ಷವು ಮತ್ತೊಬ್ಬರಿಗೆ ಸಹನವಾಗದೇ, ಕ್ಷುದ್ರವೃತ್ತಿಯಿಂದ ಒಬ್ಬರು ಮತ್ತೊಬ್ಬರನ್ನು ಕೆಡಿಸಹೋಗುವುದು ಬಾಲಕ್ಕೆ ಬಡಿದಾಡಿದಂತೆಯೇ ಇರುತ್ತದೆ. ತಮ್ಮ ಸತ್ವಾತಿಶಯದಿಂದ ಸ್ವರ್ಗಾದಿ ಭೋಗಗಳನ್ನು ಕೈಸೇರಿಸಿಕೊಂಡು, ತೃಣೀಕರಿಸಿ, ಆತ್ಮಾನುಭವದ ಅಖಂಡಾ ನಂದವನ್ನು ಪಡೆಯುವುದು ಆರ್ಯಋಷಿಗಳ ಶೀಲವಾಗಿರಲು, ಅವರ ವಂಶದವರಾದ ನಾವೆಲ್ಲರು ನಿಜವಾದ ಪುರುಷಾರ್ಥವನ್ನು ಎಣಿಸದೆ, ಸತ್ವಹೀನರಾಗಿ ಆತ್ಮೋನ್ನತಿಯ ಮಾರ್ಗವನ್ನು ಬದಿಗೊತ್ತಿ ಹೊಟ್ಟೆ, ಬಟ್ಟೆಗಳಿಗಾಗಿಯಾಗಲಿ, ಕ್ಷುದ್ರ ದ್ರವ್ಯ ಸಂಗ್ರಹಕ್ಕಾಗಿ ಯಾಗಲಿ, ನೀಚವಾದ ವಿಷಯ ವಾಸನಾತೃಪ್ತಿಗಾಗಿಯಾಗಲಿ ಹೆಣಗಾಡುತ್ತಿರುವುದು ಬಾಲಕ್ಕೆ ಬಡಿದಾಡಿದಂತೆಯಲ್ಲದೆ ಮತ್ತೇನು? ತರುಣನಾಯಕಾ, ಅಷ್ಟು ದೂರವೇಕೆ? ಇಂದಿನ ನಿನ್ನ ಕೃತಿಯನ್ನೇ ನೋಡು, ಕೈಕೊಂಡ ಕಾರ್ಯವು ಮುಗಿಯುವವರೆಗೆ ಕುಮುದಿನಿಯು ಬೇಕಾದಷ್ಟು ದಿವಸ ಬೇಕಾದಲ್ಲಿಗೆ ಹೋಗಿ ಸ್ವತಂತ್ರಳಾಗಿದ್ದರೂ ನೀನು ಸಂಶಯಪಡಲಿಲ್ಲ; ಆದರೆ ಕೇವಲ ಒಡಹುಟ್ಟಿದವನಂತೆ ಇದ್ದ ಚಾಂದಖಾನನಂಥ ಪಾಪಭೀರುವು ರಾತ್ರಿ ಆಕೆಯೊಡನೆ ಮಾತನಾಡುತ್ತ ಕುಳಿತಿದ್ದ ಕ್ಷುದ್ರ ಕಾರಣದಿಂದ ನೀನು ಸಂಶಯಪಟ್ಟು ನಿಷ್ಕಾರಣವಾಗಿ ಮಿತ್ರದ್ರೋಹಕ್ಕೂ, ಪತ್ನೀದ್ರೋಹಕ್ಕೂ ಗುರಿಯಾದೆ! ಇದೂ ಒಂದು ಬಗೆಯಿಂದ ಬಾಲಕ್ಕೆ ಬಡಿದಾಡಿದಂತೆಯೇ ಇರುತ್ತದೆ! ಅಪ್ಪಾ, ನಾಯಕಾ, ಪಾತಿವ್ರತ್ಯದ ಸ್ವರೂಪವು ಎಷ್ಟು ಸೂಕ್ಷ್ಮವಾಗಿರುತ್ತದೆಂಬ ಮಾತು ನಿನಗೆ ಗೊತ್ತಿದ್ದರೆ, ನೀನು ಇಂಥ ದುರಭಿಮಾನದ ಮೂರ್ಖತನಕ್ಕೆ ಎಂದೂ ಹೋಗುತ್ತಿದ್ದಿಲ್ಲ, ಪಾಂಡವರೊಡನೆ ಕೂಡಿ ಇದ್ದರೆ, ಕರ್ಣನೊಬ್ಬನು ತನ್ನ ಪತಿಯಾಗುತ್ತಿದ್ದನೆಂದು ಭಾವಿಸಿದ ಮಾತ್ರದಿಂದ ದ್ರೌಪದಿಯಂಥ ಪತಿವ್ರತೆಯ ಪಾತಿವ್ರತ್ಯವು ನಷ್ಟವಾಯಿತೆಂತಲೂ, ಪತಿಗಿಂತ ಮೊದಲು ಒಂದು ಹೂವನ್ನು ಮೂಸಿನೋಡಿದ ಮಾತ್ರದಿಂದ ಶ್ರೀ ಸೀತಾಮಾತೆಯ ಪಾತಿವ್ರತ್ಯವು ನಷ್ಟವಾಯಿತೆಂತಲೂ ಸಿದ್ಧವಾಗಿರಲು, ಜಗತ್ತಿನ ಸಾಮಾನ್ಯ ಜನರು ತಮ್ಮ ಹೆಂಡಿರ ಪಾತಿವ್ರತ್ಯಕ್ಕಾಗಿ ಶಂಕಿಸುತ್ತ ಇಲ್ಲದ ಮಹಾತಾಪಕಕ್ಕೂ, ಅನರ್ಥಕ್ಕೂ ಗುರಿಯಾಗುವುದನ್ನು ನೋಡಿದರೆ, ಯಾರಿಗೆ ನಗೆ ಬರಲಿಕ್ಕಿಲ್ಲ? ಪ್ರತಿ ಒಬ್ಬರು ತಮ್ಮ ತಮ್ಮ ಹೆಂಡಿರು ಪ್ರತ್ಯಕ್ಷ ಅರುಂಧತಿಯಂತೆ ಇಲ್ಲವೆ ಸೀತೆಯಂತೆ ಇರಬೇಕೆನ್ನುತ್ತಾರೆ; ಆದರೆ ತಾವು ಮಾತ್ರ ವಸಿಷ್ಠರಂತೆ ಇಲ್ಲವೆ ರಾಮನಂತೆ ಆಗಲಿಕ್ಕೆ ಒಲ್ಲರು! ಹೆಂಡತಿಯು ತನ್ನ ಪಾತಿವ್ರತ್ಯದ ರಕ್ಷಣದ ವಿಷಯವಾಗಿಯೂ, ಗಂಡನು ತನ್ನ ಏಕಪತ್ನೀ ವ್ರತದ ರಕ್ಷಣದ ವಿಷಯವಾಗಿಯೂ ಅವಶ್ಯವಾಗಿ ಜಾಗರೂಕರಾಗಿರಬೇಕು; ಆದರೆ ಪರಸ್ಪರರ ವಿಷಯವಾಗಿ ಘಾತಕವಾದ ಸಂಶಯಕ್ಕೆ ಗುರಿಯಾಗಿ ಸುಮ್ಮನೆ ದುಃಖಪಡಬಾರದು.

ತರುಣವೀರಾ, ಹೇಳುವ ಕೈಯಲ್ಲಿ ನಿನಗೆ ಇನ್ನೆರಡು ಮಾತುಗಳನ್ನು ಹೇಳುತ್ತೇನೆ, ಲಕ್ಷ್ಯಗೊಟ್ಟು ಕೇಳು. ಅಂತಃಕಲಹದಿಂದ ರಾಜ್ಯಕ್ಕೆ ಎಂದಿಗೂ ಸ್ಥಿರತ್ವವುಂಟಾಗುವುದಿಲ್ಲವಾದ್ದರಿಂದ ನೀನು ಜಗರಾಯನ ಸರ್ವಾಪರಾಧಗಳನ್ನು ಕ್ಷಮಿಸಿ, ಆತನಿಗೂ, ಆತನ ಮೊಮ್ಮಗನಿಗೂ ಅವರವರ ಮರ್ಯಾದೆಗೆ ತಕ್ಕಷ್ಟು ಸ್ವಾಸ್ಥ್ಯಗಳನ್ನು ಹಾಕಿಕೊಟ್ಟು, ಅವರಿಂದ ರಾಜದ್ರೋಹವು ಒದಗದಂತೆ ಯೋಗ್ಯ ವ್ಯವಸ್ಥೆಯನ್ನು ಮಾಡಬೇಕು. ಇಂದೇ ದುರಗಪ್ಪನಾಯಕನು

ಜಗರಾಯನನ್ನು ಕರಕೊಂಡು ಬರುವವನಿದ್ದಾನೆ. ಅದರಂತೆ ಚಾಂದಖಾನನನ್ನು ನಿನ್ನ ಒಡಹುಟ್ಟಿದವನೆಂದು ತಿಳಿದು ನಡೆಸಿಕೋ. ಒಟ್ಟಿನಮೇಲೆ ನಿಮ್ಮೆಲ್ಲರಿಗೆ ಹೇಳತಕ್ಕ ಗುಟ್ಟಿನ ಮಾತೇನೆಂದರೆ, ಕೇವಲ ಸ್ವಾರ್ಥದ ಆಶೆಯಿಂದ ಬಡಿದಾಡಹತ್ತಿ ರಸಾತಳಕ್ಕೆ ಇಳಿಯಹತ್ತಿರುವ ಈ ಭರತಭೂಮಿಯ ಉದ್ಧಾರವು, ಇಂಥ ನಿರರ್ಥಕ ಬೋಧಗಳನ್ನು ಕೇಳುವುದರಿಂದ ಆಗುವ ಹಾಗಿಲ್ಲ. ಈ ಪುಣ್ಯಭೂಮಿಯನ್ನು ಉದ್ಧರಿಸುವುದಕ್ಕಾಗಿ ಆಂಗ್ಲಭೂಮಿಯಿಂದ ಯೋಗ್ಯರಾದ ಗುರುಗಳು ಬಂದು, ಸರಾಸರಿ ಇನ್ನೂರು ವರ್ಷಗಳ ಮೇಲೆ ಭರತಭೂಮಿಯ ಆಧಿಪತ್ಯವನ್ನು ಸಂಪಾದಿಸುವರು. ಆ ಅಧಿಪತ್ಯದ ಸಂಪಾದನದ ಆರಂಭವು ಈ ಚಂದ್ರಗಿರಿಯ ರಾಯರ ಪುಣ್ಯಹಸ್ತದಿಂದಲೇ ಆಗುವುದು; ಹ್ಯಾಗೆಂದರೆ, ವ್ಯಾಪಾರಕ್ಕಾಗಿ ಬಂದ ಬುದ್ಧಿಶಾಲಿಗಳಾದ ಆಂಗ್ಲರು ಇನ್ನು ಕೆಲವು ವರ್ಷಗಳ ಮೇಲೆ ಈ ಚಂದ್ರಗಿರಿಯ ಅರಸನಿಂದಲೇ ಚನ್ನಪಟ್ಟಣ ಮದ್ರಾಸವನ್ನು ಕೊಂಡುಕೊಂಡು ತಮ್ಮ ರಾಜ್ಯಸಂಪಾದನೆಯ ಕಾರ್ಯವನ್ನು ಆರಂಭಿಸುವರು. ಅವರಿಂದಲೇ ಹಿಂದುಸ್ಥಾನದ ಉದ್ಧಾರವಾಗಬೇಕೆಂದು ಭಗವತ್ಸಂಕೇತವಿರುತ್ತದೆ. ಈಶ್ವರೀ ಸೂತ್ರದಿಂದ ಈ ಜಗತ್ತಿನಲ್ಲಿ ಆಗುವ ಕಾರ್ಯಗಳಿಗೆ ಹೆಸರಿಡುವ ಅಧಿಕಾರವು ಯಾರಿಗೂ ಇಲ್ಲ. ಈಶ್ವರ ಪ್ರೇರಣೆಯಿಂದಲೇ ನನ್ನ ಮುಖದಿಂದ ಹೊರಟಿರುವ ಈ ಭವಿಷ್ಯ ವಾಣಿಯನ್ನು ಭಾರತೀಯರು ನೆನಪಿನಲ್ಲಿಟ್ಟು, ಅಸೂಯಾಭಾವವನ್ನು ತ್ಯಜಿಸಿ, ರಾಜನಿಷ್ಠರಾಗಿ, ತಮ್ಮ ಶೀಲವನ್ನು ಬಿಡದೆ, ಬಾಲಕ್ಕೆ ಬಡಿದಾಡಿದಂತೆ ಇರುವ ಅಂತಃಕಲಹವನ್ನು ಬಿಟ್ಟು, ಪರಸ್ಪರ ಪ್ರೇಮವನ್ನು ಹೆಚ್ಚಿಸಬೇಕು; ನೀಚವಾದ ಸ್ವಾರ್ಥಕಲಹವನ್ನು ಬಿಡಬೇಕು; ಹುರುಳಿಲ್ಲದ ಶ್ರೀಮಂತಗಿರಿಯ ಆಶೆಯನ್ನು ತ್ಯಜಿಸಬೇಕು; ಮಕ್ಕಳ ವೃತ್ತಿಯನ್ನು ತಿದ್ದದೆ, ಅವರ ಸಲುವಾಗಿಯೆಂದು ದುಡ್ಡುಗಳಿಸಿ ಇಡುವ ಘಾತಕವಾದ ಉಪಾಯವನ್ನು ವಿಚಾರಿಸಿ ನೋಡಬೇಕು; ಅಂದರೆ, ಆಂಗ್ಲಗುರುಗಳ ಶಿಷ್ಯತ್ವದ ಪ್ರಯೋಜನವಾದಂತಾಗುವುದು!

ಈ ಮೇರೆಗೆ ನುಡಿದು ಋಷೀಶ್ವರನು ಸುಮ್ಮನಾದನು. ಆ ಮಹಾತ್ಮನ ಸದ್ಬೋಧದಿಂದ ಖಾನನು ಸಮಾಧಾನಪಟ್ಟು, ಆ ಋಷಿಶ್ರೇಷ್ಠನನ್ನು ಭಕ್ತಿಯಿಂದ ವಂದಿಸಿ ಆತನ ಅನುಮತಿಯಿಂದ ಮನೆಗೆ ಹೋದನು. ಕುಮುದಿನಿಯು ಗುರುಸೇವಾತತ್ಪರಳಾದಳು. ನಿಷ್ಕಾರಣ ವಾಗಿ ಕುಮುದಿನಿಯ ಮನಸ್ಸನ್ನು ನೋಯಿಸಿದ್ದಕ್ಕಾಗಿ ನಾಯಕನಿಗೆ ಪಶ್ಚಾತ್ತಾಪವಾಯಿತು. ಆತನು ರಾತ್ರಿ ಏಕಾಂತದಲ್ಲಿ ನಿಜವಾಗಿಯೇ ಕುಮುದಿನಿಯನ್ನು ಸಾಷ್ಟಾಂಗವಾಗಿ ವಂದಿಸಿ ಕ್ಷಮೆಯನ್ನು ಬೇಡಿದನು. ಆಗ ಕುಮುದಿನಿಯು ವಿನಯದಿಂದ ಪತಿಯ ಚರಣಕ್ಕೆರಗಿ– ಸಾಕು, ಇದೇನು ಚಂದ! ಅಣ್ಣನು ವಿನೋದಕ್ಕಾಗಿ ಅಂದದ್ದನ್ನೇ ನಿಜವೆಂದು ತಿಳಿಯಬೇಕೇನು? ಹ್ಯಾಗೇ ಇರಲಿ, ಮಹಾಪುರುಷರ ಕೃಪೆಯಿಂದ ನನ್ನ ಮಾನವು ಉಳಿದಂತಾಯಿತು! ಪ್ರಾಣಪ್ರಿಯಾ, ನಿನ್ನ ಸಂಶಯವನ್ನು ನನಗೆ ಮೊದಲೇ ಹೇಳಬಾರದಾಗಿತ್ತೇ? ನಾನು ನಿರ್ದೋಷಿಯೆಂದು ಸ್ಪಷ್ಟವಾಗಿ ನುಡಿದು ನಿನ್ನ ಸಂಶಯವನ್ನು ದೂರಮಾಡುತ್ತಿದ್ದೆನು.ಅಷ್ಟರಿಂದ ನಿನ್ನ ಸಮಾಧಾನವಾಗದಿದ್ದರೆ, ನನ್ನ ಹೃದಯವನ್ನು ಬಿಚ್ಚಿ ತೋರಿಸುತ್ತಿದ್ದೆನು ! ಹೋಗಲಿ, ಆದದ್ದರಲ್ಲಿ ಯಾರ ಅಪರಾಧವೂ ಇಲ್ಲ. ವಿಷವೇಳೆಯು! ಅನ್ನಲು, ನಾಯಕನು ಆಕೆಯನ್ನು ಆಲಿಂಗಿಸಿ– ಪ್ರಿಯೇ, ಇನ್ನು ಇಂಥ

ಪ್ರಮಾದವು ಜನ್ಮವಿರುವತನಕ ಆಗಲಿಕ್ಕಿಲ್ಲ ಕಂಡೆಯಾ! ನಿನ್ನ ಶುದ್ಧಾಂತಃಕರಣದ ಸ್ವರೂಪವು ಜಗತ್ತಿಗೆ ಒಡೆದು ಕಾಣಬೇಕೆಂದಲೇ ನನ್ನ ಮನಸ್ಸಿನಲ್ಲಿ ವಿಕಲ್ಪವು ಉತ್ಪನ್ನವಾಯಿತು, ಎಂದು ನುಡಿದು, ಒಂದು ದೊಡ್ಡ ಕುತ್ತಿನಿಂದ ಪಾರಾದಂತೆ ಸಮಾಧಾನಪಡುತ್ತ ಆತನು ಪ್ರಿಯತಮೆಯ ಆಲಿಂಗನದಲ್ಲಿಯೇ ನಿದ್ದೆ ಹೋದನು.

ಎಚ್ಚಮನಾಯಕನೂ, ಚಾಂದಖಾನನೂ, ದುರಗಪ್ಪನಾಯಕನೂ ಕೂಡಿ ಋಷೀಶ್ವರನ ಅಪ್ಪಣೆಯಂತೆ ಎಲ್ಲ ವ್ಯವಸ್ಥೆಯನ್ನು ಮಾಡಿದರು. ಜಗರಾಯನೂ, ಚಿಕ್ಕರಾಯನೂ ಕಲಹದ ಗೊಡವೆಯನ್ನು ಬಿಟ್ಟು, ತಮ್ಮ ತಮ್ಮ ಸ್ವಾಸ್ಥ್ಯಗಳನ್ನು ಭೋಗಿಸುತ್ತ ಸುಖವಾಗಿದ್ದರು. ಚಾಂದಖಾನನು ಮರಣಪರ್ಯಂತರವಾಗಿ ಎಚ್ಚಮನಾಯಕನ ಬಳಿಯಲ್ಲಿಯೇ ಇದ್ದನು. ಚಿನ್ನವೆಂಕಟರಾಯನು ಪ್ರಬುದ್ಧನಾಗುವವರೆಗೆ ಎಚ್ಚಮನಾಯನಕು ಚಂದ್ರಗಿರಿಯಲ್ಲಿದ್ದು ಆಮೇಲೆ ತನ್ನ ಪ್ರತಾಪದುರ್ಗಕ್ಕೆ ಹೋದನು. ಅಷ್ಟರಲ್ಲಿ ಕುಮುದಿನಿಗೆ ಪುತ್ರೋತ್ಸವವಾಗಿ ಆಕೆಯ ಮಗನು ಐದು ವರ್ಷದವನಾಗಿದ್ದನು. ಎಚ್ಚಮನಾಯಕನೂ, ಕುಮುದಿನಿಯೂ ಮೇಲೆ ಮೇಲೆ ಪಂಪಾಕ್ಷೇತ್ರಕ್ಕೆ ಹೋಗಿ, ಸತ್ಪುರುಷಸೇವೆಯ ಲಾಭವನ್ನು ಪಡೆಯುತ್ತಿದ್ದರು. ಮಹಾತ್ಮನಾದ ಋಷಿಯ ಭವಿಷ್ಯವಾಣಿಯಂತೆ ಭರತಭೂಮಿಯಲ್ಲಿ ಇಂಗ್ಲೀಷರ ಸಾಮ್ರಾಜ್ಯವು ಸ್ಥಾಪಿಸಲ್ಪಟ್ಟು, ಭಾರತಿಯರು ಸುಧಾರಣೆಯಲ್ಲಿ ಒಂದೊಂದೇ ಹೆಜ್ಜೆಯನ್ನು ಮುಂದಕ್ಕೆ ಇಡ ಹತ್ತಿದರು. ಇದರಂತೆ ಮನುಷ್ಯಮಾತ್ರರು ಸತ್ಸಂಗದಿಂದ ಚತುರ್ವಿಧ ಪುರುಷಾರ್ಥಗಳನ್ನು ಸಾಧಿಸಿ, ಕೃತಾರ್ಥರಾಗುವಂತೆ, ಶ್ರೀ ಶೇಷಾಚಲ ಸದ್ಗುರುವು ಎಲ್ಲರನ್ನೂ ಅನುಗ್ರಹಿಸಲಿ !!!

**ಸಮಾಪ್ತ**

# ಪ್ರಸ್ತಾವನೆ

ಶ್ರೀ ಮುರಗೀಶ ಗುರುವರನ ಕೃಪೆಯಿಂದ, ಈ ''ದುರ್ಗದ ಬಿಚ್ಚುಗತ್ತಿ'' ಅಥವಾ ''ಶ್ರೀ ಮುರಗೀಶ ಗುರುಮಹಿಮೆ'' ಎಂಬ ಸ್ವತಂತ್ರವಾದ ಐತಿಹಾಸಿಕ ಕಾದಂಬರಿಯ ಒಂದನೆಯ ಭಾಗವು ಮುಗಿದು, ಅದನ್ನು ಪ್ರಸಿದ್ಧ ಮಾಡುವ ಸುಯೋಗವು ಒದಗಿದ್ದಕ್ಕಾಗಿ ನನಗೆ ಬಹಳ ಸಂತೋಷವಾಗುತ್ತದೆ. ಈ ಕಾದಂಬರಿಯನ್ನೂ, ''ಕಲಿಕುಠಾರ'' ಅಥವಾ ''ಲೋಕಾಪುರ ಪೀರಪ್ರಭಾವ'' ಎಂಬ ಸತ್ಪುರುಷ ಚರಿತ್ರಮಾಲಿಕೆಯನ್ನೂ ಬರೆಯುವಾಗ, ಹಲವು ಬಗೆಗಳಿಂದ ಮಹಾಪುರುಷರ ಸಮಾಗಮ ಸಂಬಂಧವು ನನಗೆ ಒದಗಿ, ನನ್ನ ಕಲ್ಯಾಣ ವಾದದ್ದರ ಅನುಭವದಿಂದ, ಆ ಮಹಾಪುರುಷ ಚರಣಸನ್ನಿಧಿಯಲ್ಲಿ ನನ್ನ ಮನೋವೃತ್ತಿಯು ಕೃತಜ್ಞತೆಯ ಭಾರದಿಂದ ಅತ್ಯಂತ ಲೀನವಾಗಿರುವದು! ಶ್ರದ್ಧಾ–ಭಕ್ತಿಗಳೆರಡರ ಉದಯವಾದ ಹೊರತು, ದೈವೀಶಕ್ತಿಯ ದಿವ್ಯ ತೇಜಸ್ಸಿನ ಹೊಳವು ಮಾನವೀ ಹೃದಯದಲ್ಲಿ ಪ್ರಕಟವಾಗಿ, ಹೃದಯದ ಪರಿಶುದ್ಧತೆಯಾಗಲಾರದೆಂಬ ಮಾತು, ಅತ್ಯಂತ ಸತ್ಯವಾದದ್ದು. ಶ್ರದ್ಧೆಯೆಂದರೆ, ಪೂಜ್ಯವಸ್ತುವಿನ ವಿಷಯದ ಮನಃಪೂರ್ವಕವಾದ ಪೂಜ್ಯಭಾವವು; ಅದರಂತೆ, ಭಕ್ತಿಯೆಂದರೆ, ಪೂಜ್ಯವಸ್ತುವಿನ ವಿಷಯದ ತ್ಯಾಗಪೂರ್ವಕವಾದ ಮನಃಪೂರ್ವಕ ಪೂಜ್ಯಭಾವವು. ಈ ಸೂಕ್ಷ್ಮಭೇದದ ಶ್ರದ್ಧಾಭಕ್ತಿಗಳೆರಡೂ ಇರುವದು ಪೂರ್ಣಫಲಕಾರಿಯೆಂಬದನ್ನು ಚನ್ನಾಗಿ ಲಕ್ಷದಲ್ಲಿಡತಕ್ಕದ್ದು. ಯಾಕಂದರೆ, ತ್ಯಾಗವಿಲ್ಲದ ಕೇವಲ ಶ್ರದ್ಧೆಯು ನಿರರ್ಥಕವೂ, ಶ್ರದ್ಧೆಯಿಲ್ಲದ ಕೇವಲ ತ್ಯಾಗರೂಪಭಕ್ತಿಯು ದಾಂಭಿಕವೂ ಆಗುವ ಸಂಭವವಿರುತ್ತದೆ; ಅಂತೇ ಭಗವಂತನು ಗೀತೆಯಲ್ಲಿ ''ಶ್ರದ್ಧಾ–ಭಕ್ತಿ ಸಮನ್ವಿತಃ'' ಎಂದು ಹೇಳಿರುವನು; ಅಂದರೆ, ದೇವರಾಗಲಿ, ಗುರುಹಿರಿಯ ರಾಗಲಿ ಪ್ರಸನ್ನರಾಗಲಿಕ್ಕೆ, ಶ್ರದ್ಧಾ–ಭಕ್ತಿಗಳೆರಡೂ ಬೇಕೆಂಬುವದು ಭಗವಂತನ ಗೂಢತಾತ್ಪರ್ಯವು. ಈ ಗೌರವದ ಸಂಗತಿಯ ಅನುಭವವು ನನಗೆ ಆಗಿರದಿದ್ದರೂ, ಅದರ ಗೊತ್ತಾದದ್ದು, ಮೇಲೆ ಹೇಳಿರುವ ಮಹಾಪುರುಷಸಂಶ್ರಯದಿಂದಾದ ಲಾಭಗಳಲ್ಲಿ ಒಂದು ಅಲಭ್ಯಲಾಭವೆಂದು ನಾನು ಆನಂದದಿಂದ ಉಲ್ಲೇಖಿಸುವೆನು!

ಈ ಕಾದಂಬರಿಯ ಮುಖ್ಯ ಮೂಲಧನವೆಂದರೆ, ಶ್ರೀಮುರಗೀಶಗುರುವರನು ಕರುಣಿಸಿ ನನ್ನ ಅಂತರಾತ್ಮನಲ್ಲಿ ಸ್ಫುರಿಸಿದ ಸದೂರ್ಮಿಗಳು! ಅವುಗಳಲ್ಲದೆ, ನಮ್ಮ ಚಿತ್ರದುರ್ಗದ ಧರ್ಮಿಷ್ಠ ನಾಯಕರ ಮುಖ್ಯವಂಶದವರಾದ ಶ್ರೀಯುತ ಮದಕರಿನಾಯಕ ಭರಮಸಾಗರ ದವರು, ನನ್ನ ಕಡೆಗೆ ಕೊಟ್ಟಿದ್ದ ಕೈಬರಹದ ಪುಸ್ತಕಗಳು, ಹಾಗು ಪಾಳಯಗಾರರ ಚರಿತ್ರದ ಪ್ರಿಂಟಾದ ಪುಸ್ತಕಗಳು

ಇವು ನನಗೆ ಸಹಾಯಕಾರಕಗಳಾಗಿರುವವು. ಅವೆರಡು ಬಗೆಯ ಪುಸ್ತಕಗಳ ಸಂಗತಿಗಳಲ್ಲಿ ಹೇಳಿಕೊಳ್ಳುವಂಥ ಹೆಚ್ಚು ಕಡಿಮೆಗಳಿರುವದಿಲ್ಲ. ಆ ಪುಸ್ತಕಗಳಲ್ಲಿಯ ಸಂಗತಿಗಳು, ಕಾದಂಬರಿಯ ಮೊದಲನೆಯ ಎರಡು ಪ್ರಕರಣಗಳ ಐತಿಹಾಸಿಕ ಸಂಬಂಧಗಳನ್ನು ಬರೆಯುವಾಗ ಮಾತ್ರ ಉಪಯೋಗಿಸಿರುವವು. ಕಾದಂಬರಿಯ ಉಳಿದ ಪ್ರಕರಣಗಳೆಲ್ಲ, ಅವೆರಡು ಬಗೆಯ ಪುಸ್ತಕಗಳನ್ನು ಓದುವದರಿಂದಾದ ನನ್ನ ಮನಸ್ಸಿನ ಮೇಲಿನ ಸಂಸ್ಕಾರದ ಬೀಜವು, ಶ್ರೀ ಮುರಗೀಶ ಗುರುವರನ ಕರುಣಾಜಲದಿಂದ ಮೊಳೆತು, ಫಲಭರಿತ ವೃಕ್ಷರೂಪವಾಗಿ ಬೆಳೆದಿರುವದರಲ್ಲಿ ಪರಿಣಮಿಸಿರುವವು!

ನಮ್ಮ ಸನ್ಮಾನ್ಯ ಸತ್ಕುಲಪ್ರಸೂತರಾದ ಆ ಶ್ರೀಯುತ ಮದಕರಿ ನಾಯಕರು, ತಮ್ಮ ಪೂರ್ವಜರ ಕಾದಂಬರಿಯು ಬೇಗನೆ ಬರೆದು ಪ್ರಸಿದ್ಧವಾಗಬೇಕೆಂಬ ವಿಷಯದಲ್ಲಿ ತಾಳಿದ ಪೂಜ್ಯಭಾವ, ಆದರ, ಆಸ್ಥೆ, ಆತುರಗಳಿಗನುಸರಿಸಿ, ಶ್ರೀಮುರಗೀಶಗುರುವರನು ನನ್ನ ಪ್ರಾರ್ಥನೆಯಂತೆ ನನ್ನನ್ನು ಪ್ರೇರಿಸಿ ಕರುಣಿಸಿ ಬರೆಸಿದ್ದರೆ, ಈ ಕಾದಂಬರಿಯು ಮುಗಿದು ಇಷ್ಟುಹೊತ್ತಿಗೆ ವರ್ಷೆರಡುವರ್ಷಗಳಾಗುತ್ತಿದ್ದವೋ ಏನೊ! ಆದರೆ ಕಾದಂಬರಿಯ ಬರೆಯುವ ವಿಷಯದಲ್ಲಿ ನನಗೆ ಸ್ವಾತಂತ್ರ್ಯವೇನಿದೆ? ಯೋಗಾಯೋಗಗಳ ಜ್ಞಾನವಾದರೂ ನನಗೆಲ್ಲಿರುತ್ತದೆ? ನಾನು ಶ್ರೀಗುರು ಸರಕಾರದ ಮೂಢ ಗುಲಾಮನು! ಮದಕರಿ ನಾಯಕರು ಬೇಗನೆ ಕಾದಂಬರಿ ಮುಗಿಸಿರೆಂದು ಮೇಲೆ ಮೇಲೆ ನನಗೆ ಪತ್ರಬರೆದು ಬರೆದು ಬೇಸತ್ತು, ಕಡೆಗೆ ಅವರು ತಮ್ಮ ಮಾಹಿತಿಯ ಪುಸ್ತಕಗಳನ್ನು ಈಗ ವರ್ಷೆರಡುವರ್ಷಗಳ ಹಿಂದೆಯೇ ಒಂದು ನೆವಹೇಳಿ ಟಪಾಲದ್ವಾರದಿಂದ ಹಿಂದಿರುಗಿ ನನ್ನಿಂದ ತರಿಸಿಕೊಂಡುಬಿಟ್ಟರು! ತಿರುಗಿ ಅವನ್ನು ಕಳಿಸಿಕೊಡಿರೆಂದು ಬರೆಯಲಿಕ್ಕೆ ನನಗೂ ಸಂಕೋಚವಾಗಿ, ಪಾಳೆಗಾರರ ಪ್ರಿಂಟಾದ ಪುಸ್ತಗಳ ಧೈರ್ಯದಿಂದ ನಾನು ಕಾದಂಬರಿಯ ಈ ಒಂದನೆಯ ಭಾಗವನ್ನು ಮುಗಿಸಿಬಿಟ್ಟಿರುತ್ತೇನೆ. ಇದನ್ನು ಓದಿನೋಡಿ ಮುಂದಿನ ಮಹತ್ವದ ಎರಡನೆಯ ಭಾಗವನ್ನು ಮುಗಿಸಲಿಕ್ಕೆ, ನಮ್ಮ ಸನ್ಮಾನ್ಯ ಮದಕರಿನಾಯಕರಾಗಲಿ, ನಾಯಕರ ಬೇರೆ ವಂಶಜರಾಗಲಿ ನನಗೆ ತಕ್ಕ ಸಹಾಯಮಾಡಿದ ಶ್ರೇಯಸ್ಸಿಗೆ ಪಾಲುಗಾರರಾಗಬೇಕೆಂದು ವಿನಯದಿಂದ ಪ್ರಾರ್ಥಿಸುವೆನು; ಮತ್ತು ಈ ಒಂದನೆಯ ಭಾಗವು ಸಿದ್ಧವಾಗಲಿಕ್ಕೆ ಮಾಡಿದ ಪ್ರೇರಣೆ–ಗೌರವದ ಸಹಾಯಗಳಿಗಾಗಿಯಾದರೂ, ನಾನು ಶ್ರೀಯುತ ಮದಕರಿ ನಾಯಕರಿಗೆ ಅತ್ಯಂತ ಕೃತಜ್ಞನಾಗಿರುವೆನು.

ಈ ಕಾದಂಬರಿಯ ವಿಷಯದ ಸಂಗತಿಗಳ ಸಂಗ್ರಹದ ವಿಷಯದಲ್ಲಿ ನನ್ನನ್ನು ಅನುಗ್ರಹಿಸುವ ಕೃಪೆಯಾಗಬೇಕೆಂದು, ಚಿತ್ರದುರ್ಗದ ಜಗದ್ಗುರುಪೀಠದ ಪ್ರಕೃತದ ಶ್ರೀಮನ್ನಿರಂಜನ ಶ್ರೀಜಯದೇವ ಮುರಘಾರಾಜೇಂದ್ರ ಮಹಾಸ್ವಾಮಿಗಳ ಚರಣಸನ್ನಿಧಿಯಲ್ಲಿ, ದಾವಣಗೇರಿ ಮುಕ್ಕಾಮಿನೊಳಗೆ ಸಾಷ್ಟಾಂಗ ಪ್ರಣಾಮಪೂರ್ವಕವಾಗಿ ನಾನು ಪ್ರಾರ್ಥಿಸಿದೆನು. ಆಗ ಆ ಮಹಾಸ್ವಾಮಿಗಳ ಸನ್ನಿಧಿಯು—''ನಮ್ಮ ಸರ್ವಾಧಿಕಾರಿಗಳಿಂದ ನಿಮಗೆ ಬೇಕಾದ ಮಾಹಿತಿಯನ್ನು ಕೊಡಿಸುವೆವು'' ಎಂದು ವರಪ್ರದಾನ ಮಾಡಿದ್ದಕ್ಕಾಗಿ ಧನ್ಯನಾಗಿ, ಅದರ ಬಲದಿಂದಲೇ ಕಾದಂಬರಿಯ ಈ ಒಂದನೆಯ ಭಾಗವನ್ನು ಬರೆದು

ಪ್ರಸಿದ್ಧಪಡಿಸಿರುವೆನು. ಇನ್ನು ಬೇಗನೆ ಕಾದಂಬರಿಯ ಎರಡನೆಯ ಭಾಗವು ಬರೆದು ಸಿದ್ಧವಾಗಿ, ಇಡಿಯ ಕಾದಂಬರಿಯು, ಶ್ರೀಮಜ್ಜಗದ್ಗುರು ಶ್ರೀಜಯದೇವ ಮುರಘಾರಾಜೇಂದ್ರ ಮಹಾಸ್ವಾಮಿಗಳ ಮಹತ್ಸನ್ನಿಧಿಗೆ ಅರ್ಪಿಸಲು ತಕ್ಕ ಕಾಣಿಕೆಯಾಗುವಂತೆ ಕರುಣಿಸಲು, ಆ ಮಹಾಸನ್ನಿಧಿಯೇ ಸಮರ್ಥವಾಗಿರುವದೆಂದು ನಾನು ತಿಳಿದಿರುವೆನು! ಒಟ್ಟಿಗೆ, ಇಡಿಯ ಕಾದಂಬರಿಯು ತುಷ್ಟಿಕರವೂ, ಪುಷ್ಟಿಕರವೂ ಆಗುವಂತೆ ಮಾಡುವ ಎಲ್ಲ ಆರ–ಭಾರಗಳನ್ನೂ ಶ್ರೀಮಜ್ಜಗದ್ಗುರು ಮುರಗೀಶಗುರುವರನಮುಂದಿರಿಸಿ, ಆತನ ಚರಣಗಳಲ್ಲಿ ದೃಷ್ಟಿಯನ್ನಿಟ್ಟು ಕೈಜೋಡಿಸಿ ನಿಂತುಕೊಳ್ಳುವದಷ್ಟು ನನ್ನ ಕೆಲಸವೆಂದು ನಾನು ತಿಳಿದಿದ್ದೇನೆ! ಈ ವರೆಗೆ ಆ ಮಹಾತ್ಮನು ನನ್ನನ್ನು ಪ್ರೇರಿಸಿ ನನ್ನ ಅಂತರಾತ್ಮನನ್ನು ಪರಿಶುದ್ಧಗೊಳಿಸುತ್ತ ಬಂದ ಮಹಾಮಹಿಮೆಯ ಅನುಭವವನ್ನು, ಪಾಮರನು ನಾನು ಇಲ್ಲಿ ಏನೆಂದು ಉಲ್ಲೇಖಿಸಲಿ? ನಿಜವಾಗಿಯೆಂದರೆ, ಆ ಮಹಾಮಹಿಮನನ್ನು ಶ್ರದ್ಧಾಭಕ್ತಿಪೂರ್ವಕವಾಗಿ ನಮಸ್ಕರಿಸುವ ಯೋಗ್ಯತೆಯು ನನಗಿರುವುದಿಲ್ಲವೆಂದು ಹೇಳುವರೂ ಔದ್ಧತ್ಯವೇ ಆಗಿರುವದು!

ನನ್ನ ''ಮಾಧವಕರುಣಾವಿಲಾಸ''ವೆಂಬ ಸ್ವತಂತ್ರವಾದ ದೊಡ್ಡ ಐತಿಹಾಸಿಕ ಕಾದಂಬರಿಯ ತರುವಾಯದಲ್ಲಿ ಬರೆದಿರುವ ದೊಡ್ಡ ಸ್ವತಂತ್ರ ಐತಿಹಾಸಿಕ ಕಾದಂಬರಿಯೆಂದರೆ, ಈ ''ದುರ್ಗದ ಬಿಚ್ಚುಗತ್ತಿ'' ಎಂಬ ಕಾದಂಬರಿಯೆಂದು ಹೇಳಬಹುದು. ''ಮಾಧವಕರುಣಾ ವಿಲಾಸ''ವನ್ನು ಶ್ರೀ ಮಾಧವಾಚಾರ್ಯರು ಪ್ರೇರಿಸಿ ಬರೆಸಿರುವಂತೆ, ಈ ''ದುರ್ಗದ ಬಿಚ್ಚುಗತ್ತಿ'' ಎಂಬ ಕಾದಂಬರಿಯನ್ನು ''ಶ್ರೀ ಮುರುಗೀಶ ಗುರುವರರು'' ಪ್ರೇರಿಸಿ ಬರೆಸಿರುವರು. ಆ ಇಬ್ಬರು ಮಹಾಪುರುಷರ ಪ್ರೇರಣೆಯಿಂದ ಬರೆದಿರುವ ಕಾದಂಬರಿಗಳೆರಡೂ, ಅತ್ಯಂತ ಗೌರವದ ಶೀಲಸಂವರ್ಧಕ ಸಾಹಿತ್ಯದಲ್ಲಿ ಪರಿಗಣಿಸಲ್ಪಡುವವೆಂದು ನನ್ನ ತಿಳುವಳಿಕೆಯಿರುವದು; ಆದ್ದರಿಂದ, ಇಲ್ಲಿ ಸಾಹಿತ್ಯದ ವಿಷಯವಾಗಿ ಎರಡು ಮಾತು ಬರೆಯಬೇಕಾಗುವದು. ಸಾಹಿತ್ಯವೆಂದರೆ, ಅಂತಃಕರಣ ಪ್ರವೃತ್ತಿ ಘಟನಾತ್ಮಕವಾದ ಮುಖಪಠಿತ, ಅಥವಾ ಲಿಪಿಲಿಖಿತ ವಾಙ್ಮಯವೆಂದು, ನಾನು ಹೇಳುವೆನು. ಅನ್ನ ಮಾಡಲಿಕ್ಕೆ ಅಕ್ಕಿ, ನೀರು, ಕಟ್ಟಿಗೆ, ಬೆಂಕಿ, ಒಲಿ ಇವು ಸಾಹಿತ್ಯಗಳಾಗಿರುವಂತೆ, ವಾಙ್ಮಯಾತ್ಮ್ಯಕವಾದ ಸಾಹಿತ್ಯವು, ಮನುಷ್ಯನ ಜೀವನಯಾತ್ರೆ ಸಾಗಿಸುವ ಸಾಹಿತ್ಯವಾಗಿರುವದೆಂತಲೂ ನಾನು ನಿರ್ಧರಿಸಿರುವೆನು. ನನ್ನ ಈ ನಿರ್ಧಾರದ ದೃಷ್ಟಿಯಿಂದ ಸಾಹಿತ್ಯದಲ್ಲಿ–1 ಶರೀರ ಸಂರಕ್ಷಕ ಸಾಹಿತ್ಯ, 2. ಶೀಲ ಸಂವರ್ಧಕ ಸಾಹಿತ್ಯ, 3. ವೈರಾಗ್ಯೋತ್ಪಾದಕ ಸಾಹಿತ್ಯ ಎಂಬ ಮೂರು ಬಗೆಯ ಸಾಹಿತ್ಯಗಳ ಸೇರ್ಪಡೆಯಾಗುವದು. ಈ ಮೂರು ಬಗೆಯ ಸಾಹಿತ್ಯಗಳಲ್ಲಿ ಶೀಲಸಂವರ್ಧಕ ಸಾಹಿತ್ಯವು, ಸಾಹಿತ್ಯ ಪುರುಷನಿಗೆ ನಾಭಿಸ್ವರೂಪವಾಗಿರುವದರಿಂದ, ಅದು ಅತ್ಯಂತ ಮಹತ್ವದ್ದಾಗಿರುವದು.

ನಮ್ಮ ಪ್ರಾಚೀನವಾಙ್ಮಯದಲ್ಲಿಯ ಶ್ರುತಿ–ಸ್ಮೃತಿಗಳೂ, ಪುರಾಣಗಳೂ, ಧರ್ಮ–ನೀತಿ ಸಮ್ಮತಗಳಾದ ನಾಟಕ–ಕಾದಂಬರಿ–ಪ್ರಬಂಧಾದಿಗಳೂ ಪ್ರಾಮುಖ್ಯವಾಗಿ ಶೀಲಸಂವರ್ಧಕ ಸಾಹಿತ್ಯಗಳಾಗಿರುವವು. ಪ್ರಾಚೀನಕಾಲದಿಂದ ಲೋಕಹಿತೇಚ್ಛುಗಳಾದ ಜ್ಞಾನಿಗಳು, ಜಗತ್ತಿನ ಸರ್ವಸಾಮಾನ್ಯಗಳಾದ ಸುಖಶಾಂತಿಗಳು ಹೆಚ್ಚುವದಕ್ಕಾಗಿ, ಈ ಶೀಲಸಂವರ್ಧಕ ಸಾಹಿತ್ಯವನ್ನೇ

ಪುರಸ್ಕರಿಸಿ, ಹಲವು ವಿಧದ ಗ್ರಂಥಗಳನ್ನು ಬರೆಯುವದರಲ್ಲಿ ತಮ್ಮ ಆಯುಷ್ಯವನ್ನು ವೆಚ್ಚಮಾಡುತ್ತ ತಾವು ಶಾಂತರಾಗುತ್ತ ಬಂದಿರುವರು; ಯಾಕಂದರೆ, ''ಹುಟ್ಟಿಸಿದ ದೇವರು ಹುಲ್ಲುಮೇಸುವದಿಲ್ಲ.'' ಎಂಬ ಸಾತ್ವಿಕ ಭಾವದಂತೆ, ಆಯಾ ಪ್ರಾಣಿಗಳಿಗೆ ತಕ್ಕ ಆಯಾ ಆಹಾರಗಳನ್ನು ಸೃಷ್ಟಿಕರ್ತಾರನೇ ನಿರ್ಧರಿಸಿ ನಿರ್ಮಿಸಿಬಿಟ್ಟಿರುವದರಿಂದ, ಅಶಾಶ್ವತವಾದ ಶರೀರ ಸಂರಕ್ಷಣದ ವಿಷಯದಲ್ಲಿ ಶಾಶ್ವತವಾಗಿದ್ದ ಆತ್ಮದಲ್ಲಿ ನಿಷ್ಠೆಯುಳ್ಳ ಸಾತ್ವಿಕರಿಗೆ, ಅಷ್ಟು ಆಯಾಸಪಡುವ ಅಗತ್ಯತೋರದ್ದರಿಂದ, ಶರೀರರಕ್ಷಕ ಸಾಹಿತ್ಯದ ಬೆಳವಣಿಗೆಯ ವಿಷಯದಲ್ಲಿ ಅವರು ಅಷ್ಟು ಮನಸ್ಸು ಹಾಕಿರುವದಿಲ್ಲ; ಮತ್ತು ಅಂಥ ತಾಪವರ್ಧಕ ಸಾಹಿತ್ಯದ ಅಭಿವೃದ್ಧಿಯ ಮಿತಿಯನ್ನು ಮೀರಿಸುತ್ತ ಆ ಮಾನದಿಂದ ಜಗತ್ತಿನ ವಿಷಯಾಸಕ್ತಿಯನ್ನು ಹೆಚ್ಚಿಸುತ್ತ, ಜಗತ್ತನ್ನು ಆತ್ಮ ವಿಮುಖವಾಗಿಮಾಡುತ್ತ ನಾಶವಂತವಾದ ಶರೀರಸಂರಕ್ಷಣದ ವಿಷಯದ ಗ್ರಂಥಗಳನ್ನು ಬರೆಯುವದರಲ್ಲಿ ಸತ್ತು ಸುಣ್ಣವಾಗುವ ರಾಜಸಗುಣದವರ ಕೃತಿಗಳನ್ನು, ಅನಾದಿಕಾಲದಿಂದಲೂ ಆ ಸಾತ್ವಿಕವೃತ್ತಿಯ ಆತ್ಮನಿಷ್ಠರು ತಿರಸ್ಕರಿಸುತ್ತಲೇ ಬಂದಿರುವದು ವಿಚಾರಮಾಡತಕ್ಕ ಮಾತಾಗಿರುವದು; ಯಾಕಂದರೆ, ಎಲ್ಲ ತನಗೇ ಆಗಬೇಕೆಂಬ ಲೋಭದಿಂದ ಒಂದೇಉಸಲಿನಿಂದ ಸಾವಿರಾರು ಪ್ರಾಣಿಗಳ ಹಿಂಸೆಮಾಡಿಸುವಂತಹ ರಾಜಸೀ– ತಾಮಸೀ ಸಾಹಿತ್ಯವು, ಅರ್ಥಾತ್ ಆಸುರಿಸಾಹಿತ್ಯವು ಜಗತ್ ಹಿತೇಚ್ಛುಗಳಾದ ಆತ್ಮನಿಷ್ಠ ಸಾತ್ವಿಕರಿಗೆ ಹೇಗೆ ಮಾನ್ಯವಾಗಬೇಕು? ಅದರಂತೆ, ವಿಷಯ ವೈರಾಗ್ಯವು ಪ್ರಾಣಿಗಳಿಗೆ ಕೃತ್ರಿಮವಾಗಿರುವದರಿಂದ, 3 ನೆಯದಾದ ವೈರಾಗ್ಯೋತ್ಪಾದಕ ಸಾಹಿತ್ಯದ ಬೆಳವಣಿಗೆಯ ಮಿತಿಯು ಮೀರುವದಾದರೂ ಲೋಕದಸಾಮಾನ್ಯ ಹಿತದ ಬೆಳವಣಿಗೆಗೆ ಅಷ್ಟು ಸಹಾಯಕ ವಾಗಲಾರದು; ಆದರೆ ಮೇಲೆ ಹೇಳಿದಂತೆ ಅತಿ ಮಹತ್ವದ್ದೆನಿಸುವ ಎರಡನೆಯದಾದ ಶೀಲಸಂವರ್ಧಕವಾಙ್ಮಯದ ಬೆಳವಣಿಗೆಯಾದ ಮಾನದಿಂದ, ಜಗತ್ತಿನ ಸಾಮಾನ್ಯ ಸುಖ–ಶಾಂತಿಗಳು ಹೆಚ್ಚುತ್ತ ಹೋಗುವದರಿಂದ, ಅದರ ಬೆಳವಣಿಗೆಯು ಅನಿರ್ಬಂಧವಾಗಿ ಆದರೂ ಜಗತ್ತಿಗೆ ಸರ್ವಥಾ ಹಾನಿಯಿಲ್ಲವು.

ಲೋಕಹಿತಕಾರಕವಾದ ಶೀಲಸಂವರ್ಧಕ ಸಾಹಿತ್ಯದವಿಷಯವಾಗಿ ಇನ್ನೆರಡು ಮಾತು ಹೇಳುವದು ಅವಶ್ಯವಾಗಿ ತೋರುವದು. ಈ ಶೀಲ ಸಂವರ್ಧಕ ಸಾಹಿತ್ಯವು ಸಾಹಿತ್ಯಪುರುಷರಿಗೆ ನಾಭಿಸ್ವರೂಪವಾಗಿರುತ್ತದೆಂದು ಮೇಲೆ ಹೇಳಿರುತ್ತದೆ. ಶೀಲವೆಂದರೆ, ಧರ್ಮ–ನೀತಿಗಳಿಂದ ಸುಸಂಸ್ಕೃತವಾದ ಅಂತಃಕರಣಪ್ರವೃತ್ತಿಯು. ನಾಭಿಸ್ಥಾನಾಪನ್ನವಾದ ಈ ಶೀಲಸಂವರ್ಧ ಸಾಹಿತ್ಯವು, ತನಗೆ, ಅಂದರೆ ಧರ್ಮನೀತಿಗಳಿಂದ ಸುಸಂಸ್ಕೃತವಾದ ಮನೋವೃತ್ತಿಗೆ ಸಮ್ಮತ ವಾದ ಭೋಗಗಳ ಸಂಪಾದನದ ವಿಷಯದಲ್ಲಿ ಮಾತ್ರ ಆಸಕ್ತಿಯನ್ನೂ, ಶೀಲಸಮ್ಮತವಲ್ಲದ ಭೋಗಗಳ ಸಂಪಾದನದ ವಿಷಯದಲ್ಲಿ ಮಾತ್ರ ಅನಾಸಕ್ತಿಯನ್ನೂ, ಅಂದರೆ ವೈರಾಗ್ಯವನ್ನೂ ಉತ್ಪನ್ನ ಮಾಡಿ, ಮನುಷ್ಯನ ಲೋಕಯಾತ್ರೆಯ ಸಮತೆಯನ್ನು ಕಾಯ್ದುಕೊಳ್ಳುವದು. ಈ ಶೀಲಸಂವರ್ಧಕ ಸಾಹಿತ್ಯದ ಬೆಳವಣಿಗೆಯು ಕುಗ್ಗಿ, ಶರೀರಸಂರಕ್ಷಕ ಸಾಹಿತ್ಯದ ಬೆಳವಣಿಗೆಯ ಅತಿರೇಕವಾಗುತ್ತ ಹೋದರೆ, ಆ ಸಾಹಿತ್ಯವಿಷಯಕ ಪ್ರಾವಿಣ್ಯದ ಸಬಲತೆಯಿಂದ, ಬಲಹೀನರ

ರಕ್ತಶೋಷಣವಾಗಿ, ಬಲಾಬಲಗಳ ವಿಷಮತೆಯು ಹೆಚ್ಚಿ ಆ ಮಾನದಿಂದ ಮಾನವೀ ಪ್ರಾಣಿಯ ಜೀವನಯಾತ್ರೆಯು ನಿಶ್ಚಯವಾಗಿ ತಾಪದಾಯಕವಾಗುವದು. ಇದಕ್ಕೆ ಒಡೆದು ಕಾಣುವ ಉದಾಹರಣವೆಂದರೆ, ನಮ್ಮ ಹಿಂದುಸ್ಥಾನದ ಈಗಿನ ತಾಪದಾಯಕ ಜೀವನ ಯಾತ್ರೆಯು! ಪಾಶ್ಚಿಮಾತ್ಯರ ಯಾಂತ್ರಿಕ, ರಾಸಾಯನಿಕ ಮೊದಲಾದ ಶರೀರಸಂರಕ್ಷ ಸಾಹಿತ್ಯದ ಬೆಳವಣಿಗೆಯಿಂದ, ನಮ್ಮ ಹಿಂದುಸ್ಥಾನದಂಥ ಪರತಂತ್ರ ದುರ್ಬಲರಾಷ್ಟ್ರಗಳ ರಕ್ತಶೋಷಣವಾಗುತ್ತ ಅಲ್ಲಿ ಉಂಟಾಗಿರುವ ಬಲಾಬಲಗಳ ವಿಷಮತೆಯಿಂದ ಅಲ್ಲಿಯವರ ಜೀವನಯಾತ್ರೆಯು ದಿನದಿನಕ್ಕೆ ತಾಪದಾಯಕವಾಗುತ್ತ ನಡೆದಿರುವದು. ಇಂತಹ ಅನರ್ಥವು ಜಗತ್ತಿನಲ್ಲಿ ಉಂಟಾಗಬಾರ ದೆಂತಲೇ, ಪ್ರಾಚೀನಕಾಲದ ಪರಹಿತೇಚ್ಛು ಬುದ್ಧಿಶಾಲಿಗಳು, ಆದಷ್ಟು ಜಗತ್ತಿನ ವಿಷಮತೆಗೆ, ಅಂದರೆ ಕೃತ್ರಿಮತೆಗೆ ಬಾಧೆಬಾರದಂತಹ ಯಾಂತ್ರಿಕ-ರಾಸಾಯನಿಕ ಮೊದಲಾದವುಗಳ ಸಾತ್ವಿಕ ಶೋಧಗಳನ್ನು ಮಾಡಿ, ತಮ್ಮ ಬುದ್ಧಿಯ ಸದುಪಯೋಗದಿಂದ ಜಗತ್ತಿನ ಶಾಂತಿಯನ್ನು ಕಾಯ್ದುಕೊಳ್ಳಲು ಯತ್ನಿಸಿದರಲ್ಲದೆ, ಈಗಿನ ಪರರಕ್ತಶೋಷಕ ರಾಷ್ಟ್ರಗಳಂತೆ, ರಾಜಸ-ತಾಮಸ ಶೋಧಗಳನ್ನು ಮಾಡಿ, ಬುದ್ಧಿಯ ದುರುಪಯೋಗದಿಂದ ಜಗತ್ತಿನ ತಾಪವನ್ನು ಹೆಚ್ಚಿಸಲಿಲ್ಲ. ಮೊದಲು ಮನೆಮನೆಗೆ ಇರುತ್ತಿದ್ದ ಬೀಸುವಕಲ್ಲುಗಳು, ಕೈಮುಗ್ಗಗಳು, ಚಕ್ಕಡಿಗಳು ಮುಂತಾದವುಗಳು ಯಂತ್ರಗಳೇ ಆಗಿದ್ದರೂ, ಈಗಿನ ಗಿರಣಿ, ಉಗಿಬಂಡಿ, ಮೋಟಾರು, ವಿಮಾನ, ಮೊದಲಾದ ರಾಜಸೀ ಶೋಧಗಳಂತೆ ನೂರಾರುಜನರನ್ನು ಬಡವರಾಗಮಾಡಿ, ಒಬ್ಬನನ್ನು ಶ್ರೀಮಂತನನ್ನು ಮಾಡದೆ, ಆದಷ್ಟು ಸಮತೆಯನ್ನು ಕಾಯ್ದುಕೊಳ್ಳತಕ್ಕವಾಗಿದ್ದವು. ಸಮತೆಯೇ ಸುಖಶಾಂತಿಗಳ ಮೂಲವಾದ ದ್ದರಿಂದ, ಆಗಿನ ಕಾಲದಲ್ಲಿ ಈಗಿನ ಸುಧಾರಣಾ ಕಾಲಕ್ಕಿಂತ ಸಾರ್ವತ್ರಿಕ ಸುಖ-ಶಾಂತಿಗಳು ಹೆಚ್ಚಾಗಿದ್ದವೆಂದು ಹೇಳಬೇಕಾಗುವದು.

ಹೀಗೆ ಅನರ್ಥಪರಂಪರೆಯು ಈಗ ಹೆಚ್ಚುತ್ತ ನಡೆದಿರುವದಕ್ಕೆ, ರಾಷ್ಟ್ರದಲ್ಲಿ ಶೀಲ ಸಂವರ್ಧಕಸಾಹಿತ್ಯದ ವಿಷಯಕ್ಕೆ ದಿನದಿನಕ್ಕೆ ಅನಾದರವೂ, ತಿರಸ್ಕಾರವೂ ಹೆಚ್ಚುತ್ತ ಕೇವಲ ಶರೀರಸಂರಕ್ಷಕ ಸಾಹಿತ್ಯಕ್ಕೆ, ಅಂದರೆ ಆಹಾರ-ವಿಹಾರ-ವ್ಯವಹಾರಗಳ ಕೃತ್ರಿಮತೆಯ ಸಾಹಿತ್ಯಕ್ಕೆ ದಿನದಿನಕ್ಕೆ ಆದರವೂ, ಪುರಸ್ಕಾರವೂ ಉಂಟಾಗುತ್ತ ನಡೆದಿರುವದೇ ಕಾರಣವಾಗಿರುವದು. ಒಟ್ಟಿಗೆ, ಈಗಿನ ಕಾಲದಲ್ಲಿ ನೆಲಕ್ಕೆ ಬಿದ್ದವರನ್ನು ಮೇಲಕ್ಕೆಬ್ಬಿಸುವ ಅನುಕಂಪಕ್ಕಿಂತ, ನೆಲಕ್ಕೆ ಬಿದ್ದವರ ಲಕ್ಷವಿಲ್ಲದೆ ಅವರನ್ನು ನೆಲಕ್ಕೆ ತಿಕ್ಕಿ ಒರಿಸುತ್ತ ಹೋಗುವ ಆಸುರೀಕ್ರೂರತನಕ್ಕೆ ಪ್ರಾಶಸ್ತ್ಯವು ದೊರೆಯುತ್ತ ನಡೆದಿರುವದು; ಆದ್ದರಿಂದ ಈಗಿನಕಾಲದಲ್ಲಿ ಶೀಲಸಂವರ್ಧಕ ಸಾಹಿತ್ಯಗಳೆನಿಸುವ ಧರ್ಮಗ್ರಂಥಗಳಿಗೂ, ನೈತಿಕಗ್ರಂಥಗಳಿಗೂ ಮತ್ತು ದೇವರು, ಹಿರಿಯರು, ಗುರುಗಳು ಎಂಬ ಪೂಜ್ಯಭಾವ ವಹಿಸಬೇಕೆಂದು ಬೋಧಿಸುವ ಗ್ರಂಥಗಳಿಗೂ, ಪಾಪ- ಪುಣ್ಯಗಳೆಂಬ ದುಷ್ಟ ಸುಷ್ಟ ಭಾವಗಳ ವಿಷಯದಲ್ಲಿ ಎಚ್ಚರಪಡ ಬೇಕೆಂದು ಬೋಧಿಸುವ ಗ್ರಂಥಗಳಿಗೂ ಮಾನವು ಕಡಿಮೆಯಾಗುತ್ತ ನಡೆದು, ಎಲ್ಲಬಗೆಯ ಸ್ವೇಚ್ಛಾಚರಣೆಗೆ ಉತ್ತೇಜನಕೊಡುವ ಗ್ರಂಥಗಳಿಗೆ ಮಾನವು ಹೆಚ್ಚುತ್ತ ನಡೆದಿರುವದು;

ಆದ್ದರಿಂದ ಈ ಸ್ಥಿತಿಯು ಪರಮ ಅನರ್ಥಕಾರಕವೆಂಬದನ್ನು ವಿವೇಕಿಗಳು ಲಕ್ಷದಲ್ಲಿಟ್ಟು, ಶೀಲಸಂವರ್ಧಕ ಸಾಹಿತ್ಯದ ವಿಷಯದಲ್ಲಿ ಆದರಭಾವವುಳ್ಳವರಾಗಿ, ಶೀಲವು ದೇವರಿಗೂ, ಸಜ್ಜನರಿಗೂ ಪ್ರಿಯವಾಗಿದ್ದು ಇಹ–ಪರ–ಪ್ರಗತಿಕಾರಕವೆಂಬ ಮಾತನ್ನೂ, ಶೀಲವಿದ್ದಲ್ಲಿ ಎಲ್ಲ ಬಗೆಯ ಶುಭಗಳೂ, ಶೀಲವಿಲ್ಲದಲ್ಲಿ ಎಲ್ಲಬಗೆಯ ಅಶುಭಗಳೂ ಇರುವವೆಂಬ ಸಿದ್ಧಾಂತವನ್ನೂ ನಂಬಿ, ಶೀಲವೇ ತಮ್ಮ ಜೀವನವೆಂದು ತಿಳಿದು, ಅದನ್ನು ಜತನಮಾಡತಕ್ಕದ್ದು.

ಈ ಕಾದಂಬರಿಯಲ್ಲಿಯ ಶ್ರೀಮುರಗೀಶಗುರುವರನ ಶೀಲಸಂವರ್ಧಕ ಬೋಧಗಳ ಅನುಸರಣಮಾಡುವದು, ಎಂತಹ ಕಲ್ಯಾಣಕಾರಕವೆಂಬದನ್ನು ನಾವು ಬರೆಯುವ ಕಾರಣವಿಲ್ಲ. ಈ ಕಾದಂಬರಿಯನ್ನು ಓದಿದವರು ತಮ್ಮ ಅಂತಃಕರಣಪ್ರವೃತ್ತಿಯಲ್ಲಿ ಆಗಿರುವ ಕಲಕುಮಲಕುಗಳ ಅನುಭವದಿಂದಲೇ ಅದನ್ನು ತಿಳಿದುಕೊಳ್ಳತಕ್ಕದ್ದು. ಈ ಕಾದಂಬರಿಯ ಎರಡನೆಯ ಭಾಗವು, ಶ್ರೀಜಗದ್ಗುರು ಮುರಗೀಶಗುರುವರನ ಪ್ರೇರಣೆಯಿಂದಲೂ, ಆ ಜಗದ್ಗುರುಪೀಠಸ್ಥ ಪ್ರಕೃತದ ಶ್ರೀಜಗದ್ಗುರು ಜಯದೇವ ಮುರಘಾರಾಜೇಂದ್ರ ಮಹಾಸ್ವಾಮಿಗಳ ಲೋಕಹಿತೈಕ ತತ್ಪರತೆಯಿಂದಲೂ, ಉಳಿದ ಉದಾರ ಚರಿತರ ವಿವಿಧ ಸಹಾಯ ಸಂಪತ್ತಿನಿಂದಲೂ ಬೇಗನೆ ಬರೆದು ಮುಗಿದು ಪ್ರಸಿದ್ಧವಾಗಿ, ಇಡಿಯ ಕಾದಂಬರಿಯು ಶ್ರೇಷ್ಠವಾದ ಶೀಲಸಂವರ್ಧಕ ಸಾಹಿತ್ಯವೆನಿಸಿ, ನಮ್ಮನ್ನೂ, ಎಲ್ಲ ವಿವೇಕಿಗಳನ್ನೂ, ಕನ್ನಡಸಾಹಿತ್ಯ ಭಾಂಡಾರವನ್ನೂ ಪವಿತ್ರೀಕರಿಸೀತೆಂದು ನಂಬಿ, ಅಂಥ ಸುಯೋಗವನ್ನು ಬೇಗನೆ ಒದಗಿಸಿಕೊಡಲು, ಮೂಲಕರ್ತಾರರಾದ ಶ್ರೀಮುರಗೀಶಗುರುವರರನ್ನು ಅನನ್ಯಭಾವದಿಂದ ಪ್ರಾರ್ಥಿಸುವೆನು!

ನಾನು ಆಗಡಿಯ ಆನಂದವನವನ್ನು ಬಿಟ್ಟು ಹಾವೇರಿಗೆ ಬಂದಬಳಿಕ ನನಗಾಗಿದ್ದ ಹದಿನಾಲ್ಕು ಸಾವಿರರೂಪಾಯಿ ಸಾಲದಲ್ಲಿ, ಈಗ ಎಂಟು ಒಂಬತ್ತು ಸಾವಿರರೂಪಾಯಿಗಳ ಸಾಲವು ಉಳಿದಿದ್ದು, ಆ ಸಾಲವನ್ನು ಮುಟ್ಟಿಸಿಕೊಳ್ಳುವದಕ್ಕಾಗಿ ಉದಾರರಾದ ನಮ್ಮ ಧನಕೋಜನರನ್ನು ಪ್ರಾರ್ಥಿಸಲು, ಅವರು ಇನ್ನು ಮುಂದೆ ಬಡ್ಡಿಯತಕ್ಕೊಳ್ಳುವದನ್ನು ನಿಲ್ಲಿಸಿ ಬಿಟ್ಟು, ವರ್ಷಾ ಹದಿಮೂರು ನೂರುರೂಪಾಯಿಗಳ ಕಂತದಂತೆ ಏಳು ಕಂತಗಳಲ್ಲಿ ತಮ್ಮ ಹಣ ಮುಟ್ಟಿಸಿಕೊಳ್ಳುವಂತೆ ಕೋರ್ಟಿನಲ್ಲಿ ಅವಾರ್ಡು ಮಾಡಿಕೊಂಡಿರುತ್ತಾರೆ. ಅವರ ಆ ಕಂತದ ರೂಪಾಯಿಗಳನ್ನು ಮುಟ್ಟಿಸುವದಕ್ಕಾಗಿ, ಪುಸ್ತಕಜೀವಿಯಾದ ನಾನು, ಸಾಲತೀರಿಸುವ ಐದು ಹೊಸ ಪುಸ್ತಕಗಳನ್ನು ಬರೆದು ಅವುಗಳ ಪ್ರಸಾರಕ್ಕಾಗಿ ಕರ್ನಾಟಕದಲ್ಲಿ ಸಂಚರಿಸಬೇಕೆಂದು ಈಗ ಐದು ತಿಂಗಳಹಿಂದೆ ಸಂಕಲ್ಪಮಾಡಿದೆನು. ನನ್ನ ಆ ಸಂಕಲ್ಪವು ಶ್ರೀಮುರಗೀಶಗುರುವರನ, ಹಾಗು ಲೋಕಾಪುರದ ಶ್ರೀಪರಮಹಂಸರ ಕೃಪಾದೃಷ್ಟಿಯಿಂದ ಸತ್ಯಸಂಕಲ್ಪವಾಗಿ, ಈಗ

| | | |
|---|---|---|
| 1. | ಸ್ವರಾಜ್ಯಸುಗಂಧ | ೧–೦–೦ |
| 2. | ಕಲಿಕುಠಾರ ೨ನೇ ಭಾಗ | ೧–೦–೦ |
| 3. | ಕಲಿಬಾಧಾನಿವಾರಕ ನಳಚರಿತ್ರೆ | ೦–೮–೦ |
| 4. | ಸದ್ಗುಣ–ಸಂಭ್ರಮ | ೦–೬–೦ |
| 5. | ದುರ್ಗದ ಬಿಚ್ಚುಗತ್ತಿ ೧ನೇ ಭಾಗ | ೦–೨–೦ |

ಎಂಬ ಐದು ಹೊಸ ಪುಸ್ತಕಗಳು ಬರೆದು ಮುದ್ರಿಸಿ ಸಿದ್ಧವಾಗಿರುವವು. ಇಂತಹ ಹೊಸ ಪುಸ್ತಕಗಳ ಪ್ರಸಾರದಿಂದಲೇ ನಾನು ಬೇಗನೆ ಋಣಮುಕ್ತನಾಗುವಂತೆ ಅನುಗ್ರಹಿಸಲು, ನಮ್ಮ ಶ್ರೀಶೇಷಸದ್ಗುರು–ಸ್ವರೂಪರಾದ ಲೋಕಾಪುರದ ಶ್ರೀಪರಮಹಂಸರೂ, ಚಿತ್ರದುರ್ಗದ ಜಗದ್ಗುರುಪೀಠ ಸಂಸ್ಥಾಪಕರಾದ ಶ್ರೀಮುರಗೀಶಗುರುವರರೂ ಸಮರ್ಥರಿರುವರೆಂದು ಪ್ರಿಯ ಕನ್ನಡಿಗರಲ್ಲಿ ನಾನು ಅರಿಕೆ ಮಾಡಿಕೊಳ್ಳುವೆನು. ನಮ್ಮ ಹಳೆಯ ಪುಸ್ತಕಗಳಲ್ಲಿ ಬಹಳ ಪುಸ್ತಕಗಳು ತೀರಿದ್ದರೂ, ಈ ಪುಸ್ತಕದ ಕಡೆಯ ಪಾನಿನಲ್ಲಿ ಕೊಟ್ಟಿರುವ ಯಾದಿಯಂತೆ, ಕೆಲವು ಪುಸ್ತಕಗಳು ಸಿಲಕು ಇರುವವು. ನಮ್ಮ ಅಭಿಮಾನಿಗಳಾದ ಕನ್ನಡಿಗರು ಅವನ್ನು ಕೊಂಡರೂ, ನಮ್ಮ ಸಾಲ ತೀರಲಿಕ್ಕೆ ಸಹಾಯವಾಗುವದು.

ಕನ್ನಡಿಗರ ಸೇವಕ
**ವೇ. ತಿ. ಕುಲಕರಣಿ**
ಗಳಗನಾಥ

ಸದ್ಗುರುಕಾರ್ಯಾಲಯ
ಹಾವೇರಿ
ತಾರೀಖು ೫–೧೨–೩೮ ಇಸ್ವಿ

# ನಾಯಕರ ಮೂಲಪೀಠಿಕೆ

ನಮ್ಮ ಈ ಕಾದಂಬರಿಯು ಮೈಸೂರ ಸಂಸ್ಥಾನದಲ್ಲಿಯ ಚಿತ್ರದುರ್ಗದ ಶೂರ ನಾಯಕರ ಮನೆತನಕ್ಕೆ ಸಂಬಂಧಿಸಿದ್ದಾಗಿರುವದು. ಆ ನಾಯಕರ ಆಡಳಿತಕ್ಕೆ ಸೇರಿದ ಅವರ ಪ್ರಜೆಗಳು,ಅವರನ್ನು ದೊರೆಗಳು, ಅಥವಾ ರಾಜರು ಎಂದು ಕರೆಯುತ್ತಿದ್ದರು; ಆದರೆ ರಾಜ್ಯದಾಡಳಿತದಲ್ಲಿ ಆ ನಾಯಕರ ಸ್ಥಾನವು ಯಾವದು? ಅವರ ಅಧಿಕಾರವೆಷ್ಟು? ಅವರ ಕರ್ತವ್ಯಗಳು ಯಾವವು? ಎಂಬದನ್ನು ಕುರಿತು ಸ್ವಲ್ಪದರಲ್ಲಿ ಬರೆಯುವದಲ್ಲದೆ, ಆ ನಾಯಕರ ಮನೆತನದ ವೃತ್ತಾಂತವನ್ನು, ಅವರ ಮೂಲಪುರುಷನಿಂದ ಆರಂಭಿಸಿ, ಈ ಕಾದಂಬರಿಯಲ್ಲಿ ಮುಖ್ಯನಾಗಿರುವ ಬಿಚ್ಚುಗತ್ತಿಯ ಭರಮನಾಯಕನೆಂಬವನವರೆಗೆ ತಾಂತ್ರಿಕವಾಗಿ ಬರೆದರೆ, ಕಥಾಸಂದರ್ಭವು ಚನ್ನಾಗಿ ತಿಳಿಯುವದು.

ಯಾವದೊಂದು ಕುಟುಂಬದಲ್ಲಿ ಯಜಮಾನನೂ, ಅವನ ಪರಿವಾರವೂ ಇರುತ್ತಿರುವಂತೆ, ರಾಜ್ಯರೂಪವಾದ ಕುಟುಂಬದಲ್ಲಿ ರಾಜನೆಂಬ ಯಜಮಾನನೂ, ಪ್ರಜೆಗಳೆಂಬ ಅವನ ಪರಿವಾರವೂ ಇರುವರು. ರಾಜ್ಯದ ಆಡಳಿತಗಾರರಲ್ಲಿಯೂ ಯೋಗ್ಯತೆಯ ತಾರತಮ್ಯದಂತೆ—ಸಾರ್ವಭೌಮರು, ಅಧಿರಾಜರು, ಮಾಂಡಲಿಕರು, ನಾಯಕರು, ದೇಸಾಯರು, ನಾಡಿಗರು, ನಾಡಗೌಡರು, ಗೌಡರು ಎಂಬ ಪ್ರಭೇದಗಳುಂಟು. ಇವರಲ್ಲಿ ಸಾರ್ವಭೌಮರು, ಅಧಿರಾಜರು ಇವರಿಬ್ಬರು ಮಾತ್ರ ಸ್ವತಂತ್ರರು; ಉಳಿದ ಮಾಂಡಲಿಕರೇ ಮೊದಲಾದವರು ಬರಬರುತ್ತ ಕಡಮೆಕಡಿಮೆ ಯೋಗ್ಯತೆಯವರಾಗಿದ್ದು ಅವರು ತಮ್ಮ ತಮ್ಮ ಸಾರ್ವಭೌಮರಿಗೆ, ಅಥವಾ ಅಧಿರಾಜರಿಗೆ ಅಧೀನರಾಗಿರುವರು. ಅವರು ತಮ್ಮ ಅಧಿಕಾರವನ್ನು ಮೀರಿ ನಡೆದಲ್ಲಿ ಅಥವಾ ತಪ್ಪಿನಡೆದಲ್ಲಿ ಅವರನ್ನು ಅವರ ಸಾರ್ವಭೌಮರಾಗಲಿ, ಅಧಿರಾಜರಾಗಲಿ ದಂಡಿಸಬಹುದು; ಅಥವಾ ಅವರ ಒಡೆತನವನ್ನು ಕಸಿದುಕೊಳ್ಳಲೂಬಹುದು.

ಈ ಮಾಂಡಲಿಕರೇ ಮೊದಲಾದವರು ತಮ್ಮ ಪ್ರದೇಶದಲ್ಲಿಯ ಜನರಿಂದ ತೆರಿಗೆ ಮೊದಲಾದ ಬಾಬುಗಳ ಹಣವನ್ನು ಎತ್ತಿ ಪ್ರಜೆಗಳನ್ನು ನ್ಯಾಯದಿಂದ ಆಳುತ್ತ ನಿಯಮಿತ ಸೈನ್ಯವನ್ನು ಇಟ್ಟುಕೊಂಡು, ತಮ್ಮ ಪರಾಕ್ರಮವನ್ನು ಕಾಯ್ದುಕೊಂಡು ಪ್ರಸಂಗವಶಾತ್ ತಮ್ಮ ಸಾರ್ವಭೌಮರಿಗೆ, ಅಥವಾ ಅಧಿರಾಜರಿಗೆ ಸೈನ್ಯದೊಡನೆ ಸಹಾಯಮಾಡುತ್ತ ಅವರಿಗೆ ನಿಯಮಿತ ಕಪ್ಪಕಾಣಿಕೆಕೊಡುತ್ತ ಸ್ವಾಮಿಭಕ್ತಿಯಿಂದ ನಡಕೊಳ್ಳಬೇಕಾಗುವದು. ಅಧಿರಾಜ–ಅಧಿರಾಜರಲ್ಲಿ ಯುದ್ಧಪ್ರಸಂಗಗಳು ಮೇಲೆ ಮೇಲೆ ಒದಗುವ ಸಂಭವವಿದ್ದಲ್ಲಿ, ಅವರು ತಮ್ಮ

ರಾಜ್ಯಗಳಲ್ಲಿರುವ ಮಾಂಡಲಿಕರು, ನಾಯಕರೇ ಮೊದಲಾದವರ ಶೌರ್ಯಾಭಿವೃದ್ಧಿಗೆ ಉತ್ತೇಜನ ಕೊಟ್ಟು, ಅವರ ಶೌರ್ಯವನ್ನು ಹೆಚ್ಚಿಸಿ ತಮ್ಮ ಸಹಾಯ ಸಂಪತ್ತನ್ನು ಅಭಿವೃದ್ಧಿಗೊಳಿಸಿಕೊಳ್ಳ ಬೇಕಾಗುತ್ತಿತ್ತು. ಒಂದು ಊರಿನಲ್ಲಿಯ ಜನರಲ್ಲಿ ಶಕ್ತಿಯನ್ನು ಹೆಚ್ಚಿಸಲಿಕ್ಕೆ ಗರಡಿಯ ಮನೆಗಳು ಇರುವಂತೆ, ರಾಜ್ಯದಲ್ಲಿಯ ಶಕ್ತಿ ಶೌರ್ಯಗಳನ್ನು ಹೆಚ್ಚಿಸಲಿಕ್ಕೆ ಈ ಮಾಂಡಲಿಕರು, ನಾಯಕರು, ದೇಸಾಯರು, ನಾಡಿಗರು, ನಾಡಗೌಡರು, ಗೌಡರು ಮೊದಲಾದ ಸಣ್ಣದೊಡ್ಡ ರಾಜಕೀಯ ಸಂಸ್ಥೆಗಳು ಇದ್ದವೆಂದು ತಿಳಿಯತಕ್ಕದ್ದು. ಇದರಿಂದ ಇಡಿಯ ರಾಜ್ಯದಲ್ಲಿ ವ್ಯಕ್ತಿಶಃ ಶೌರ್ಯ–ಶಕ್ತಿಗಳು ಹೆಚ್ಚಿದ ಮಾನದಿಂದ ರಾಜ್ಯವು ಪೌರುಷವುಳ್ಳದ್ದಾಗುತ್ತಿತ್ತು.

ವಿಜಯನಗರದ ಸಾಮ್ರಾಜ್ಯವಿದ್ದ ಕಾಲದಲ್ಲಿ, ವಿಜಾಪುರ–ಗೋವಳಕೊಂಡಗಳ ಮುಸಲ್ಮಾನ ಅಧಿರಾಜರು, ಆ ವಿಜಯನಗರದ ರಾಯರಿಗೆ ಮೇಲೆ ಮೇಲೆ ತೊಂದರೆಕೊಡುತ್ತ ಬಂದದ್ದರಿಂದ, ಆ ಹಿಂದೂ ಅಧಿರಾಜರು ಈ ನಾಯಕರೇ ಮೊದಲಾದವರಿಗೆ ಅಲ್ಲಲ್ಲಿ ರಾಜ್ಯ ಭಾಗಗಳನ್ನು ಕೊಟ್ಟು, ಯುದ್ಧ ವ್ಯಾಪಾರದಲ್ಲಿ ಯಾವಾಗಲೂ ನಿಪುಣರಾಗಿರುವಂತೆ ಅವರಿಗೆ ಉತ್ತೇಜನಕೊಡುತ್ತಿದ್ದರು. ಪ್ರಾಮುಖ್ಯವಾಗಿ ವಿಜಯನಗರದ ಅರಸರ ಆಳ್ವಿಕೆಯಲ್ಲಿಯೇ ಈ ನಾಯಕರ ವ್ಯಾಪ್ತಿಯೂ, ಪ್ರಾಬಲ್ಯವೂ ವಿಶೇಷವಾಗಿ ಆಯಿತೆಂದು ಹೇಳಬಹುದು. ಈ ನಾಯಕರೇ ಮೊದಲಾದ ಅಧೀನ ಸಂಸ್ಥಾನಿಕರು, ತಮ್ಮ ನೆರೆಹೊರೆಯ ಸಂಸ್ಥಾನಿಕರೊಡನೆ ಸ್ನೇಹ–ದ್ವೇಷಗಳನ್ನು ಬಳಸುತ್ತ ಕಾರಣಾಂತರದಿಂದ ಯುದ್ಧಮಾಡುತ್ತ ತಮ್ಮ ಗಡಿದುರ್ಗ ಗಳನ್ನು ಹೆಚ್ಚಿಸಿಕೊಳ್ಳುತ್ತಿದ್ದರು. ಇದೂ ಅಲ್ಲದೆ, ಆಗಿನ ಕಾಲದಲ್ಲಿ ಅಲ್ಲಲ್ಲಿ ಕಾದಿಡುತ್ತಿದ್ದ ಅರಣ್ಯಗಳಲ್ಲಿ ಅವರು ಬೇಟೆಯಾಡುವ ನೆವದಿಂದಲೂ ತಮ್ಮ ಶಕ್ತಿ–ಶೌರ್ಯ–ಸಾಹಸಗಳನ್ನು ಹೆಚ್ಚಿಸಿಕೊಳ್ಳುತ್ತಿದ್ದರು. ಆಗ ಪ್ರಜೆಗಳು ನಿರ್ಬಾಧವಾಗಿ ಶಸ್ತ್ರಾಸ್ತ್ರಗಳನ್ನು ಬಳಸಬಹುದಾದ್ದ ರಿಂದ, ಮೇಲೆ ಹೇಳಿರುವ ಯಾವದೊಂದು ರಾಜಕೀಯ ಸಂಸ್ಥೆಯು ಸ್ವಾತಂತ್ರ್ಯದ ಒಗರಿನಿಂದ ಶೋಭಿಸುತ್ತಲಿತ್ತು, ಅಲ್ಲದೆ, ಮೇಲೆ ಹೇಳಿದ ಯಾವದೊಂದು ರಾಜಕೀಯ ಸಂಸ್ಥೆಗೆ ತನ್ನ ಯೋಗ್ಯತೆಯಂತೆ ಆಡಳಿತದ ಆಂತರ್ಯಸ್ವಾತಂತ್ರ್ಯವು ಇರುತ್ತಿದ್ದದ್ದರಿಂದ ಆಯಾಸಂಸ್ಥೆಗಳು ಪ್ರಗಮನಶೀಲಗಳಾಗಿರುತ್ತಿದ್ದವು; ಆದರೆ ಅವು ಮಿತಿಮೀರಿ ಪ್ರಬಲ ವಾಗುವ ಪ್ರಸಂಗದಲ್ಲಿ ಮಾತ್ರ ಅವರ ಅಧಿರಾಜರು ಅವನ್ನು ನಿರ್ಬಂಧಿಸುತ್ತಿದ್ದರು.

ಇಂತಹ ನಾಯಕರೆಂಬ ಸಂಸ್ಥಾನಿಕರಲ್ಲಿ ಚಿತ್ರದುರ್ಗದ ನಾಯಕರು ಅತ್ಯಂತ ಪ್ರಬಲರಾಗಿದ್ದರು. ಇವರು ತಮ್ಮ ಅಧಿರಾಜರಾದ ವಿಜಯನಗರದ ರಾಯರೊಡನೆ ಸ್ವಾಮಿನಿಷ್ಠೆಯಿಂದ ನಡೆದುಕೊಳ್ಳುತ್ತಿದ್ದರೂ, ತಮ್ಮ ಆ ಅಧಿರಾಜರು ದುರ್ಬಲರಾಗಿದ್ದ ಪ್ರಸಂಗದಲ್ಲಿ ತಾವು ಸ್ವತಂತ್ರರಾಗಲು ಯತ್ನಿಸುತ್ತಿದ್ದರು. ಮುಂದೆ ವಿಜಯನಗರದ ರಾಜ್ಯವು ಮುರಕಳಿಗೆ ಬಂದಬಳಿಕಂತು, ಇವರು ಮುಂದೆ ಹೈದರಾಲಿಯ ಕಾಲದವರೆಗೆ ಅಧಿರಾಜ ರಂತೆ ಸ್ವತಂತ್ರವಾಗಿ ಆಳಿದರು. ಹೀಗೆ ಈ ಚಿತ್ರದುರ್ಗದ ನಾಯಕರು ತಮ್ಮ ಅಧಿರಾಜರಿಗೆ ಕೆಲಕಾಲ ಅಧೀನರಾಗಿ, ಕೆಲವು ಕಾಲ ಸ್ವತಂತ್ರರಂತೆ ಆಳಿದರೂ, ಮತ್ತು ನಾಯಕ

ನಾಯಕರಲ್ಲಿಯ ಅಂತಃಕಲಹಗಳಿಂದ ತಮ್ಮ ನೆರೆಹೊರೆಯ ನಾಯಕರೊಡನೆ ಯಾವಾಗಲೂ ಕಾದುತ್ತಲಿದ್ದರೂ, ಅವರು ಈಗಿನ ಹಲವು ಕೆಲವು ಸಾರ್ವಭೌಮರಿಂದ, ಅಥವಾ ಅಧಿರಾಜರಿಂದ ಆಗದಷ್ಟು ಪ್ರಜಾಕಲ್ಯಾಣವನ್ನೂ, ಪ್ರಜಾಹಿತದ ಕಾರ್ಯಗಳನ್ನೂ ಮಮಕಾರ ವಹಿಸಿ ಮಾಡಿಸುತ್ತಲಿದ್ದದ್ದು ನೆನಪಿನಲ್ಲಿಡತಕ್ಕ ಸಂಗತಿಯಾಗಿದೆ. ಈ ಮೈಸೂರ ಪ್ರಾಂತದಲ್ಲಿಯ ಎಷ್ಟೋ ಕೆರೆಕಟ್ಟೆಗಳೂ, ಗುಡಿಗುಂಡಾರಗಳೂ, ಮಠಮಾನ್ಯಗಳೂ, ಕೋಟೆಕೊತ್ತಲಗಳೂ, ಹಳ್ಳಿಪಟ್ಟಣಗಳೂ ಈ ಚಿತ್ರದುರ್ಗದ ನಾಯಕರ ಸ್ಮಾರಕಗಳಂತೆ ಈಗಲೂ ಇರುತ್ತವೆ! ಒಟ್ಟಿಗೆ, ಈ ನಾಯಕರು ತಮ್ಮ ಪ್ರಜೆಗಳ ಹಿತವನ್ನೂ, ತಮ್ಮ ಸಂಸ್ಥಾನದ ಉತ್ಕರ್ಷವನ್ನೂ, ತಮ್ಮ ಪರಾಕ್ರಮ–ಶೌರ್ಯಗಳ ಅಭಿವೃದ್ಧಿಯನ್ನೂ, ಧರ್ಮನಿಷ್ಠೆಯ ಹೆಚ್ಚಳವನ್ನೂ ಮಾಡುವದು ತಮ್ಮ ಕರ್ತವ್ಯವೆಂದು ತಿಳಿಯುತ್ತಿದ್ದರು.

ಹೀಗೆ ಅತ್ಯಂತ ಗೌರವಶಾಲಿಗಳಾಗಿದ್ದ ಚಿತ್ರದುರ್ಗದ ನಾಯಕರು ಪ್ರಾಮುಖ್ಯವಾಗಿ ಬ್ರಾಹ್ಮಣ ಮತಾವಲಂಬಿಗಳು. ನೃಸಿಂಹದೇವರೂ, ಉತ್ಸವಾಂಬೆಯೂ ಇವರ ಕುಲದೈವತಗಳು; ಆದರೂ ಇವರು ತಮ್ಮ ಪ್ರಜೆಗಳ ಮತಮತಾಂತರಗಳನ್ನು ಮನ್ನಿಸುತ್ತ ತಮ್ಮ ರಾಜಧರ್ಮಕ್ಕನುಸರಿಸಿ ಭೇದಭಾವವಿಲ್ಲದೆ ಎಲ್ಲ ಮತಗಳನ್ನೂ ಆದರಿಸುತ್ತ ಎಲ್ಲ ಮತದವರಿಗಾಗಿಯೂ ದೇವಸ್ಥಾನ, ಸ್ವಾಸ್ಥ್ಯವೃತ್ತಿ ಮಠಮಾನ್ಯತೆ ಮೊದಲಾದವುಗಳ ಅನುಕೂಲತೆ ಮಾಡಿಕೊಡುತ್ತ ಪ್ರಜಾರಂಜಕರಾಗಿ ಇದ್ದರು. ಇವರು ವಾಲ್ಮೀಕಿ ಕ್ಷತ್ರಿಯರು. ಇವರು ಬೇಡಜಾತಿಗೆ ಸೇರಿದವರಾಗಿದ್ದರೂ, ಊರಬೇಡರಾಗಿರದೆ ಕ್ಷತ್ರಿಯ ಬೇಡರಾಗಿರುವರು. ಇವರು ಈಚಲು ಮುಟ್ಟುವದಿಲ್ಲ, ಈಚಲ ಚಾಪಿಯ ಮೇಲೆ ಕುಳಿತುಕೊಳ್ಳುವದಿಲ್ಲ, ಈಚಲ ಹೆಂಡ ಕುಡಿಯುವದಿಲ್ಲ. ಇವರು ಶೈವ, ವೈಷ್ಣವ, ಶಾಕ್ತೇಯ ಸಾಂಪ್ರದಾಯಸ್ಥರು. ಆರನೆಯ ದೊರೆ ಚಿಕ್ಕಣ್ಣನಾಯಕನ ಕಾಲದಲ್ಲಿ ಅರಮನೆಯವರೆಲ್ಲರೂ ಲಿಂಗಧಾರಿಗಳಾದರು; ಆದರೆ ಆ ಲಿಂಗವಂತ ಮತವು ತಮ್ಮ ವೀರವೃತ್ತಿಗೆ ಸರಿದೋರದ್ದರಿಂದ, ಅವರು ಕೂಡಲೆ ಲಿಂಗಗಳನ್ನು ತ್ಯಜಿಸಿ, ತಮ್ಮ ಪೂರ್ವ ಸಾಂಪ್ರದಾಯಗಳನ್ನು ಅನುಸರಿಸಿದರು; ಆದರೂ ಲಿಂಗವಂತ ಗುರುಗಳಲ್ಲಿ ಇವರ ವಿಶ್ವಾಸವು ಕಡಮೆಯಾಗಲಿಲ್ಲ. ಈ ಕಾದಂಬರಿಯ ಪ್ರಧಾನಪಾತ್ರನಾದ ಬಿಚ್ಚುಗತ್ತಿಯ ಭರಮನಾಯಕನಂತು, ಶ್ರೀ ಮುರುಗೀಶ ಗುರುವರನ ಕೇವಲ ಅನುಗ್ರಹಕ್ಕೆ ಪಾತ್ರನೂ, ಶಿಷ್ಯನೂ ಆದದ್ದರಿಂದಲೇ ಈ ಕಾದಂಬರಿಗೆ "ಶ್ರೀ ಮುರುಗೀಶ ಗುರುಮಹಿಮೆ" ಎಂಬ ಎರಡನೆಯ ಹೆಸರು ಇಡಲಾಗಿದೆ. ಹೀಗೆ ಇವರು ವೈದಿಕ ಮತಮತಾಂತರಗಳಲ್ಲಿ ಮಾತ್ರವೇ ಭಕ್ತಿ–ವಿಶ್ವಾಸಗಳುಳ್ಳವರಾಗಿದ್ದರೆಂತಲ್ಲ ಆ ಕಾಲದ ಮುಸಲ್ಮಾನರಲ್ಲಿಯೂ, ಫಿರಂಗಿ ಜನರಲ್ಲಿಯೂ ವಿಶ್ವಾಸ–ಕೃತಜ್ಞತೆಗಳುಳ್ಳವರಾಗಿದ್ದರೆಂಬ ಬಗ್ಗೆ ಆಧಾರಗಳುಂಟು. ಒಟ್ಟಿಗೆ, ಚಿತ್ರದುರ್ಗದ ನಾಯಕರು ಸ್ವಧರ್ಮ ನಿಷ್ಠರೂ, ಪರಧರ್ಮ ಸಹಿಷ್ಣುಗಳೂ ಆಗಿದ್ದು ಪ್ರಜೆಗಳ ಭಿನ್ನ ಭಿನ್ನ ಮತಮತಾಂತರಗಳನ್ನು ಭಕ್ತಿಯಿಂದ ಆದರಿಸುವವರಾದದ್ದರಿಂದ, ವೈದಿಕ ಧರ್ಮದ ಮುಖ್ಯ ಲಕ್ಷಣವಾದ ಧರ್ಮೌದಾರ್ಯವು ಇವರಲ್ಲಿ ವಿಶೇಷವಾಗಿ ಇದ್ದಿತು.

ಇಂತಹ ಮಹಾ ಪ್ರಸಿದ್ಧರೂ ಧರ್ಮಿಷ್ಠರೂ, ಶೂರರೂ, ಪ್ರಜಾಹಿತದಕ್ಷರೂ ಆಗಿದ್ದ ಚಿತ್ರದುರ್ಗದ ನಾಯಕರ ಮೂಲಪುರುಷನು, ಚಿತ್ರನಾಯಕನೆಂಬವನು. ಈತನು ದಿಲ್ಲಿಯ ಬಾದಶಹನ ಪ್ರಬಲರೂ ಬಲಿಷ್ಠರೂ ಆದ ಅರವತ್ತು ಜನ ಸರದಾರರಲ್ಲಿ ಒಬ್ಬ ಸರದಾರನಾಗಿದ್ದನು. ಒಂದಾನೊಂದು ಕಾಲದಲ್ಲಿ ಬಾದಶಹನ ಪಟ್ಟದಾನೆಗೆ ಮದವೇರಿ, ಅದು ಒಬ್ಬರನ್ನೂ ಸನಿಯಕ್ಕೆ ಬರಗೊಡದಾಯಿತು. ಆಗ ಬಾದಶಹನು— ''ನನ್ನ ಈ ಆನೆಯನ್ನು ತನ್ನ ಶಕ್ತಿಯಿಂದ ಹಣ್ಣು ಮಾಡಿ ಸಾದು ಮಾಡಿದವನಿಗೆ ದೊಡ್ಡ ಇನಾಮು ಕೊಡವೆನೆಂ''ದು ಪ್ರಸಿದ್ಧ ಮಾಡಿದನು. ಅದನ್ನು ಕೇಳಿ ಚಿತ್ರನಾಯಕನು, ಮಂಗಲಸ್ನಾನಮಾಡಿ, ತ್ರಿಪುಂಡ್ರಗಳನ್ನು ಧರಿಸಿ, ತನ್ನ ಕುಲಸ್ವಾಮಿಯಾದ ಶ್ರೀ ಅಹೋಬಲ ನೃಸಿಂಹನನ್ನು ಧ್ಯಾನಿಸಿ, ಆತನ ಪ್ರಸಾದವಾದ ತುಲಸೀಮಾಲೆಯನ್ನು ಕಂಠದಲ್ಲಿ ಧರಿಸಿಕೊಂಡು, ಆ ಆನೆಯಿದ್ದೆಡೆಗೆ ಹೋದನು. ಆಗ ಆ ಮದ್ದಾನೆಯು ರಭಸದಿಂದ ಚಿತ್ರನಾಯಕನ ಮೈಮೇಲೆ ಬರಲು, ಆತನು ಆ ಮದ್ದಾನೆಯ ಸೊಂಡಿಲು ಹಿಡಿದು ಹಣಿದು ಸಾದುಮಾಡಿ ನಾಯಿಯಂತೆ ಅದನ್ನು ಬಾದಶಹನ ಬಳಿಗೆ ಎಳತಂದನು! ಅದನ್ನು ನೋಡಿ ಬಾದಶಹನು ಸಂತುಷ್ಟನಾಗಿ, ಚಿತ್ರನಾಯಕನಿಗೆ ದೊಡ್ಡ ಇನಾಮನ್ನೂ ಬಿರುದು ಮೊದಲಾದವನ್ನೂ ಕೊಟ್ಟು, ಬಹುಮಾನ ಮಾಡಿದನು; ಆದರೆ ಚಿತ್ರನಾಯಕನ ಈ ಉತ್ಕರ್ಷವನ್ನು ನೋಡಿ ಉಳಿದ ಸರದಾರರು ಸಹಿಸದೆ, ಹೊಟ್ಟೆಯ ಕಿಚ್ಚಿನಿಂದ ಬಾದಶಹನ ಮುಂದೆ ಇಲ್ಲದ ಚಾಡಿಯನ್ನು ಹೇಳಿ ಆತನ ಮನಸ್ಸು ಕೆಡಿಸಿದರು. ಅದನ್ನು ನೋಡಿ ತೇಜಸ್ವಿಯಾದ ಚಿತ್ರನಾಯಕನು, ದಿಲ್ಲಿಯಲ್ಲಿ ನಿಲ್ಲಲಾರದೆ, ಬಾದಶಹನು ಕೊಟ್ಟಿದ್ದ ಬಿರುದನ್ನೂ, ಉಚಿತಗಳನ್ನೂ, ಮಾನಮರ್ಯಾದೆಗಳನ್ನೂ ಆದರದಿಂದ ಸ್ವೀಕರಿಸಿ, ಆತನ ಅನುಮತಿಯಿಂದ ದಿಲ್ಲಿಯನ್ನು ತ್ಯಜಿಸಿ, ದಕ್ಷಿಣ ಹಿಂದುಸ್ಥಾನದಲ್ಲಿರುವ ವಿಜಯನಗರದ ರಾಯರ ಆಶ್ರಯಕ್ಕೆ ಬಂದನು.

ಈ ಚಿತ್ರನಾಯಕನಿಗೆ ವಿಜಯನಗರದ ರಾಯರ ಆಶ್ರಯದಲ್ಲಿರುವ ಯೋಗವಿದ್ದಿಲ್ಲ; ಯಾಕಂದರೆ, ಆತನ ವಂಶಜರು ಚಿತ್ರದುರ್ಗದಲ್ಲಿ ಮಹಾಪ್ರಸಿದ್ಧ ದೊರೆಗಳಾಗಿ ಆಳುವ ಯೋಗವಿದ್ದಿತು; ಆದ್ದರಿಂದ ಆತನು ವಿಜಯನಗರದಲ್ಲಿರದೆ, ರಾಯರ ಅನುಮತಿ ಪಡೆದು, ತನ್ನ ದೇವರು, ಸಕಲ ಪರಿವಾರ, ಆಕಳ ಹಿಂಡು ಇವನ್ನು ಕಟ್ಟಿಕೊಂಡು ಅಲ್ಲಿಂದ ಹೊರಟು, ಹಂಪೆಯ ಶ್ರೀವಿರೂಪಾಕ್ಷನದರ್ಶನ ಮಾಡಿಕೊಂಡು ಮುಂದಕ್ಕೆ ಸಾಗಿದನು. ಆಗ ಶ್ರೀ ವಿರೂಪಾಕ್ಷನಲ್ಲಿ ಮಂತ್ರಪುಷ್ಪ ಸಮರ್ಪಿಸುವ ಕೆಲಸದಲ್ಲಿದ್ದ ವಿರೂಪಾಕ್ಷ ಜೋಯಿಸ, ಕರಿಯ ಜೋಯಿಸ ಎಂಬ ಇಬ್ಬರು ಬ್ರಾಹ್ಮಣರ ಹುಡುಗರು— ''ನಾವೂ ನಿನ್ನ ಸಂಗಡ ಬರುತ್ತೇವೆ'' ಎಂದು ಚಿತ್ರ ನಾಯಕನಿಗೆ ಹೇಳಲು, ಗೋಬ್ರಾಹ್ಮಣ ಪ್ರತಿಪಾಲಕನಾದ ಆ ಚಿತ್ರನಾಯಕನು ಸಂತೋಷಪಟ್ಟು, ಅವರನ್ನು ಬಹು ವಿಶ್ವಾಸದಿಂದ ಸಂಗಡ ಕರಕೊಂಡು ಚಿತ್ರದುರ್ಗದ ಪ್ರದೇಶಕ್ಕೆ ಬಂದನು. ಅಲ್ಲಿ ಆ ತೇಜಸ್ವಿಗೆ ಸರ್ವಾನುಕೂಲತೆಗಳುಂಟಾಗಿ ಆತನು ಕೋಟೆ ಕೊತ್ತಳು ಕಟ್ಟಿಸಿ ಪ್ರತಿಷ್ಠೆಯಿಂದ ಇರಹತ್ತಿದನು. ಹೀಗಿರುವಾಗ ಚಿತ್ರನಾಯಕನ

ಮರಿಮಗನಾದ ತಿಮ್ಮನಾಯಕನೆಂಬವನಿಗೆ, ವಿರೂಪಾಕ್ಷ ಜೋಯಿಸನ ಭವಿಷ್ಯದಂತೆ ವಿಜಯನಗರದ ರಾಯರಿಂದ ದುರ್ಗದ ನಾಯಕತನವು ದೊರೆಯಿತು.

## ೧ನೇ ದೊರೆ

**ಮತ್ತಿ ತಿಮ್ಮನಾಯಕ**— ಈ ತಿಮ್ಮನಾಯಕನೇ ಚಿತ್ರದುರ್ಗದ ನಾಯಕರ ಮೂಲ ಪುರುಷನು. ಈತನು ಮತ್ತಿ ಎಂಬ ಗ್ರಾಮದಲ್ಲಿ ಇರುತ್ತಿದ್ದದ್ದರಿಂದ, ಈತನಿಗೆ ಮತ್ತಿಯ ತಿಮ್ಮನಾಯಕನೆನ್ನುವರು. ತಿಮ್ಮನಾಯಕನು ಮಹಾಸಮರ್ಥನೂ, ಅತ್ಯಂತವಾದ ದೈವಭಕ್ತಿಯುಳ್ಳವನೂ ಆಗಿದ್ದನು. ಈತನು ಚಿತ್ರದುರ್ಗದ ನಾಯಕನಾದ ಬಳಿಕ ದುರ್ಗದ ಮೇಲುಕೋಟೆಯನ್ನು ಕಟ್ಟಿಸತೊಡಗಲು, ಬೆಳಗಾಗುತ್ತಲೆ ಕಟ್ಟಿದ್ದು ಮತ್ತೂ ಮತ್ತೂ ಬೀಳಹತ್ತಿತ್ತು. ಆಗ ಭಾವಿಕನಾದ ಆ ನಾಯಕನು ಹೀಗೆ ಕೋಟೆ ಬೀಳಲಿಕ್ಕೆ ಕಾರಣವೇನಿರಬಹುದೆಂದು ಆಲೋಚಿಸುತ್ತಿರಲು, ಹಳೇಪೈಕದ ಗಿರಿಯನೆಂಬ ದಂಡಿಗೆಯ ದಾಸಯ್ಯನ ಮೈಯಲ್ಲಿ ಶ್ರೀ ಏಕನಾಥೇಶ್ವರಿಯ ಆವೇಶವಾಗಿ,ಆ ದೇವಿಯು ಆ ದಾಸಯ್ಯನ ಮುಖಾಂತರವಾಗಿ ತಿಮ್ಮನಾಯಕನಿಗೆ—"ನಾಯಕಾ, ನಾನು ಈ ಸ್ಥಳದ ಅಧಿದೈವತವಾಗಿದ್ದು, ನನ್ನ ಹಂಗಿಲ್ಲದೆ ನೀನು ಕೋಟೆ ಕಟ್ಟಿಸುತ್ತಿರುವದರಿಂದ ಅದು ನಿಲ್ಲಲಾರದು" ಎಂದು ಹೇಳಿಸಿದ್ದಲ್ಲದೆ, ತಾನು ಒಡ ಮೂಡಿದ್ದ ಬಂಡೆಯನ್ನು ಅದೇ ದಾಸಯ್ಯನ ಮುಖಾಂತರ, ತಿಮ್ಮನಾಯಕನಿಗೆ ತೋರಿಸಿದಳು! ಆಗ ತಿಮ್ಮನಾಯಕನು ದೇವಿಗೆ ಸಾಷ್ಟಾಂಗವೆರಗಿ ಕೈಜೋಡಿಸಿ— "ತಾಯಿ, ಇನ್ನು ಮೂರು ವರ್ಷಕ್ಕೆ ಗುಡಿಯನ್ನು ಕಟ್ಟಿಸಿ, ನಿನ್ನ ಉತ್ಸವವನ್ನು ಮಾಡುತ್ತೇನೆ" ಎಂದು ಪ್ರಾರ್ಥಿಸಲು, ಮೇಲುಕೋಟೆಯ ಕಟ್ಟಡವು ನಿರ್ವಿಘ್ನದಿಂದ ಪೂರ್ಣವಾಯಿತು!

ತಿಮ್ಮನಾಯಕನ ದೈವಭಕ್ತಿಯು ಅತ್ಯುತ್ಕಟವಾದದ್ದು. ಆತನ ಭಕ್ತಿಗೆ ಇನ್ನೊಂದು ಮಹತ್ಫಲವು ದೊರೆಯಿತು. ತಿಮ್ಮನಾಯಕನ ಆಕಳ ದೊಡ್ಡ ಹಿಂಡಿನೊಳಗಿನದೊಂದು ಪರಿಪುಷ್ಟ ಆಕಳು, ಆ ದುರ್ಗದಲ್ಲಿಯ ಮಹಾತಪಸ್ವಿಗಳಾದ ಒಬ್ಬ ಸಿದ್ಧಪುರುಷರ ಕಮಂಡಲುವಿನಲ್ಲಿ ನಿತ್ಯವೂ ಹಾಲುಕರೆಯುತ್ತಿದ್ದದ್ದರಿಂದ, ಮನೆಯಲ್ಲಿ ಅದು ಹಾಲು ಕರೆಯದೆ ಇರುತ್ತಿತ್ತು. ಇದರ ರಹಸ್ಯವು ಯಾರಿಗೂ ಗೊತ್ತಾಗದ್ದರಿಂದ, ಸ್ವತಃ ತಿಮ್ಮನಾಯಕನೇ ಅದನ್ನು ಕಂಡುಹಿಡಿಯುವದಕ್ಕಾಗಿ ಆ ಆಕಳನ್ನು ಹಿಂಬಾಲಿಸಿಹೋಗಲು, ಆತನಿಗೆ ಒಬ್ಬ ಸಿದ್ಧಪುರುಷರ ದರ್ಶನವಾಯಿತು! ಆಗ ಭಾವಿಕನಾದ ತಿಮ್ಮನಾಯಕನು ಸಿದ್ಧಪುರುಷರಿಗೆ ಸಾಷ್ಟಾಂಗವಾಗಿ ಎರಗಿ ಕೈಜೋಡಿಸಿ ನಿಂತುಕೊಳ್ಳಲು, ಆ ತಪಸ್ವಿಗಳು ತಮ್ಮ ಜ್ಞಾನದೃಷ್ಟಿಯಿಂದ ಎಲ್ಲವನ್ನು ಅರಿತು ನಾಯಕನನ್ನು ಕುರಿತು ವಾತ್ಸಲ್ಯದಿಂದ— ತಿಮ್ಮನಾಯಕಾ, ನಿನ್ನನ್ನು ನೋಡಿ ನಮಗೆ ಬಹಳ ಸಂತೋಷವಾಯಿತು. ನಿನ್ನ ಪೂರ್ವಜನಾದ ಚಿತ್ರನಾಯಕನು ದಿಲ್ಲಿಯ ಬಾದಶಹನ ಮದ್ದಾನೆಯ ಮದವಿಳಿಸಿ ಸಾದುಮಾಡಿದ್ದರಿಂದ, ನಿನಗೆ ನಾವು ಮದಕರಿನಾಯಕನೆಂದು ಕರೆಯುವೆವು. ಇಗೋ, ಈ ದೆಸೆಕಟ್ಟಿನ ವಿಭೂತಿ, ಕೇವೆಯ ಶಾಟಿ, ಸಿದ್ಧಮೂಲಿಕೆ, ಕೈಅಂಬು, ಬಿಲ್ಲು ಇವನ್ನು ನಿನಗೆ ಪ್ರಸಾದವಾಗಿ ಕೊಡುವೆವು ಹಿಡಿ. ಇವುಗಳ ಪ್ರಭಾವದಿಂದ ನೀನು ಮಹಾಜಯಶಾಲಿ

ಯಾಗುವೆಯಲ್ಲದೆ, ನಿನ್ನ ವಂಶಜರು, ಸುಪ್ರಸಿದ್ಧರಾಗಿ ಈ ಚಿತ್ರದುರ್ಗದ ಪ್ರದೇಶದಲ್ಲಿ ಆಳುವರು. ದಿನಾಲು ನಿನಗೆ ನಮ್ಮ ದರ್ಶನವಾಗಲಾರದು. ನಮ್ಮಲ್ಲಿ ನಿನ್ನ ವಿಶ್ವಾಸವಿದ್ದರೆ, ನಮ್ಮ ಮಾತು ನಡಿಸು; ಇಗೋ, ಇಲ್ಲಿ ಈ ರಹಸ್ಯಸ್ಥಳದಲ್ಲಿ ಒಂದು ದಿವ್ಯಲಿಂಗ ವಿದೆ. ಅದನ್ನು ಪೂಜಿಸುತ್ತಹೋದರೆ, ನಿನ್ನ ಕಲ್ಯಾಣವಾಗುವದು. ಇದು ಅಲ್ಲದೆ, ನಿನಗೆ ನಾವು ಒಂದು ರಸಬಾವಿಯನ್ನು ತೋರಿಸುತ್ತೇವೆ. ಅದೊಂದು ಅಕ್ಷಯ ದ್ರವ್ಯನಿಧಿಯಾಗಿರುವದು. ಅದರಲ್ಲಿಯ ದ್ರವ್ಯವನ್ನು ನೀನು ಎಷ್ಟು ಬಳಿಸಿದರೂ ದ್ರವ್ಯದ ಕೊರತೆಯಾಗಲಾರದು'' ಎಂದು ಅನುಗ್ರಹಿಸಿ, ಹುಲಿಗೊಂದಿ ಎಂಬಲ್ಲಿಗೆ ಹೊರಟು ಹೋದರು. ಆಗ ತಿಮ್ಮನಾಯಕನು ಆ ಲಿಂಗಕ್ಕೆ ಸಿದ್ಧೇಶ್ವರನೆಂದು ಹೆಸರಿಟ್ಟು ಭಕ್ತಿಯಿಂದ ಪೂಜಿಸುತ್ತ ಅದಕ್ಕೆ ಗುಡಿಯನ್ನು ಕಟ್ಟಿಸಿದನು. ಆ ಸ್ಥಳದಲ್ಲಿ ಚಂಪಕವೃಕ್ಷಗಳು ಇದ್ದದ್ದರಿಂದ, ಆ ಲಿಂಗಕ್ಕೆ ಚಂಪಕಸಿದ್ಧೇಶ್ವರ ನೆಂತಲೂ ಹೆಸರು ಉಂಟಾಯಿತು.

ಹೀಗೆ ಸಿದ್ಧಮಹಾಪುರುಷರಿಂದ ಅನುಗ್ರಹೀತನಾದ ತಿಮ್ಮನಾಯಕನು, ತನಗೆ ಆ ಮಹಾಪುರುಷರ ಕೃಪೆಯಿಂದ ದೊರೆತಿದ್ದ ದ್ರವ್ಯನಿಧಿಯಿಂದ ಮೇಲಕೋಟೆ, ಶ್ರೀಸಿದ್ಧೇಶ್ವರ ದೇವಸ್ಥಾನವೇ ಮೊದಲಾದ ಹತ್ತು ಹನ್ನೆರಡು ದೇವಸ್ಥಾನಗಳು, ಕೆರೆಗಳು ಮೊದಲಾದ ಲೋಕಹಿತದ ಕೆಲಸಗಳನ್ನು ಮಾಡಿಸಿ, ದಿನದಿನಕ್ಕೆ ಪ್ರಬಲನಾಗತೊಡಗಿದನು. ಈ ಸುದ್ದಿಯು ವಿಜಯನಗರದ ರಾಯರ ಕಿವಿಗೆ ಮುಟ್ಟಿದ್ದಲ್ಲದೆ ಕೆಲವು ಕುಹಕರು ರಾಯರಮುಂದೆ— ''ತಿಮ್ಮನಾಯಕನು ಪ್ರಬಲಿಸಿ ಸ್ವತಂತ್ರನಾಗಲು ಯತ್ನಿಸುತ್ತಿರುವನೆಂ''ದು ಸುಳ್ಳೇ ಚಾಡಿಯ ಹೇಳಿದರು. ರಾಯರು ಅದನ್ನು ನಿಜವೆಂದು ತಿಳಿದು, ಸಾಳ್ವನರಸಿಂಹನೆಂಬ ತಮ್ಮ ಸೇನಾಪತಿ ಯನ್ನು ಸೈನ್ಯದೊಡನೆ ತಿಮ್ಮನಾಯಕನ ಮೇಲೆ ಕಳಿಸಲು, ಆತನು ಚಿತ್ರದುರ್ಗದ ಕೋಟೆಯನ್ನು ಮುತ್ತಿದನು; ಆದರೆ ತಿಮ್ಮನಾಯಕನ ಮನಸ್ಸಿನಲ್ಲಿ ರಾಜದ್ರೋಹದ ಗಾಳಿಯು ಕೂಡ ಸುಳಿದಿದ್ದಿಲ್ಲ ಆದ್ದರಿಂದ ಆತನು ಬಹಳ ಅಸಮಾಧಾನಪಟ್ಟು, ತನ್ನ ಸ್ವಾಮಿಯ ಸೈನ್ಯದೊಡನೆ ಕಾದಿ ಸ್ವಾಮಿದ್ರೋಹೀಯಾಗಲಿಚ್ಛಿಸದೆ, ತನ್ನ ಸಾಮರ್ಥ್ಯವನ್ನೂ, ಶೌರ್ಯ– ಪರಾಕ್ರಮ ಗಳನ್ನೂ ಕಾರ್ಯತಃ ತನ್ನ ಸ್ವಾಮಿಗೆ ಅರುಹಬೇಕೆಂದು ನಿಶ್ಚಯಿಸಿದನು.

ಒಂದು ದಿನ ಕಗ್ಗತ್ತಲೆಯ ರಾತ್ರಿಯಲ್ಲಿ ತಿಮ್ಮನಾಯಕನು ಸಾಳ್ವನರಸಿಂಹನ ಕುದುರೆಯನ್ನು ಅಪಹರಿಸುವದಕ್ಕಾಗಿ ಆತನ ಪಾಳಯವನ್ನು ಒಬ್ಬನೇ ಹೊಕ್ಕನು; ಆದರೆ ಸಿದ್ಧಪುರುಷರು ಕೊಟ್ಟಿದ್ದ ವಿಭೂತಿಯ ಪ್ರಭಾವದಿಂದ ಆತನನ್ನು ಯಾರೂ ತಡವಲಿಲ್ಲ! ಆದರೆ ಆ ಸ್ವಾಮಿನಿಷ್ಠನು ನರಸಿಂಹನ ಕುದುರೆಯ ಹಗ್ಗಗಳನ್ನು ಉಚ್ಚುತ್ತಿರುವಾಗ, ಕುದುರೆಯು ಹೇಕರಿಸುತ್ತ ಕಾಲುಕೆದರ ಹತ್ತಲು, ತಿಮ್ಮನಾಯಕನ ಯೋಗ್ಯತೆಯು ಪ್ರಕಟವಾಗ ಬೇಕಾಗಿದ್ದದ್ದರಿಂದ, ಆ ಕುದುರೆಯ ಚಾಕರನು ಎಚ್ಚತ್ತು ನಿದ್ದೆಗಣ್ಣಲ್ಲಿ ತಡವರಿಸುತ್ತ ಕುದುರೆಯ ಬಳಿಗೆ ಬಂದನು! ಅಷ್ಟರಲ್ಲಿ ತಿಮ್ಮನಾಯಕನು ಕುದುರೆಯ ಗೋದಲಿಯಲ್ಲಿ ಮೈಮೇಲೆ ಹುಲ್ಲು ಎಳೆದುಕೊಂಡು ಮಲಗಿ ಬಿಟ್ಟಿದ್ದನು. ಆಗ ಚಾಕರನು ಸೈಲಾಗಿದ್ದ ಕುದುರೆಯ ಗೂಟವನ್ನು ಕಿತ್ತು ಮತ್ತೊಂದು ಕಡೆಗೆ ಬಡೆಯತೊಡಗಲು, ಆಕಸ್ಮಾತ್ತಾಗಿ ಆ ಗೂಟವು

ತಿಮ್ಮನಾಯಕನ ಬಲ ಅಂಗೈಯಲ್ಲಿ ನಟ್ಟು ಪಾರಾಗಿ ನೆಲದಲ್ಲಿ ಇಳಿಯಿತು! ಆದರೂ ಸತ್ವಶಾಲಿ ಕ್ಷತ್ರಿಯನಾದ ತಿಮ್ಮನಾಯಕನು ಹಾಯಗುಟ್ಟಲಿಲ್ಲ, ಮಿಸುಕಾಡಲಿಲ್ಲ! ಕುದುರೆಯ ಚಾಕರನು ನಿದ್ದೆಗಣ್ಣಿಲ್ಲಿ ಒಟಗುಟ್ಟುತ್ತ ಪುನಃ ತನ್ನ ಸ್ಥಳಕ್ಕೆ ಹೋಗಿ ಮಲಗಿಕೊಳ್ಳಲು, ಕೂಡಲೆ ಆತನಿಗೆ ಗಾಢನಿದ್ದೆಯು ಹತ್ತಿತು. ಆಗ ಮಹಾಧೈರ್ಯಶಾಲಿಯಾದ ತಿಮ್ಮನಾಯಕನು, ತನ್ನ ಗುರುದತ್ತವಾದ ಕೈಅಂಬಿನಿಂದ ತನ್ನ ಬಲಗೈಯ ಮಣಿಕಟ್ಟನ್ನೇ ಕೊಯ್ದುಕೊಂಡು, ತನ್ನ ಆ ಮೊಂಡಗೈಗೆ ಮುಂಡಾಸ ಸುತ್ತಿ ಕುದುರೆಯನ್ನು ಅಪಹರಿಸಿ ಸುರಕ್ಷಿತ ದುರ್ಗವೇರಿ ಹೋದನು!

ಮರುದಿವಸ ಸಾಳ್ವನರಸಿಂಹನು ತಿಮ್ಮನಾಯಕನ ಈ ಧೈರ್ಯ–ಪರಾಕ್ರಮ–ಸಾಹಸಗಳನ್ನು ಮನಸ್ಸಿನಲ್ಲಿ ತರುತ್ತಿರುವಾಗ, ಆತನ ಹೃದಯವು ಕಂಪಿಸಿತು! ಇಂಥ ಮಹಾವೀರನಿಂದ ನಾನು ದುರ್ಗಮವಾದ ಚಿತ್ರದುರ್ಗವನ್ನು ಹೇಗೆ ತಕ್ಕೊಳ್ಳುವುದು ಎಂದು ಆತನು ಚಿಂತಿಸತೊಡಗಿದನು. ಹೀಗಿರುವಾಗ ಒಂದು ದಿನ ಸಾಳ್ವನರಸಿಂಹನ ಆನೆಯು ದುರ್ಗದ ಕೆರೆಗೆ ನೀರುಕುಡಿಯುವದಕ್ಕೆ ಹೋಯಿತು. ಅದನ್ನು ನೋಡಿ ತಿಮ್ಮನಾಯಕನು ತನ್ನ ಎಡಗೈಯಿಂದ ತನ್ನ ಧನುಸ್ಸಿಗೆ ಹೆದೆ ಏರಿಸಿ, ಕಾಲಲ್ಲಿ ಧನುಸ್ಸು ಮೆಟ್ಟಿ, ಎಡಗೈಯಿಂದಲೇ ಹೆದೆಯನ್ನು ಸೆಳೆದು ಆ ಆನೆಯ ಹಣೆಗೆ ಗುರಿಯಿಟ್ಟು ಬಾಣಹೊಡೆದು ಅದನ್ನು ನೆಲಕ್ಕೆ ಉರುಳಿಸಿದನು! ತಿಮ್ಮ ನಾಯಕನ ಈ ಮಹಾಬಲವನ್ನು ನೋಡಿ ಸಾಳ್ವನರಸಿಂಹನು ತೀರಾ ಕೈಕಾಲುಗೆಟ್ಟನು! ''ಈ ಸ್ಥಿತಿಯಲ್ಲಿ ಹೀಗೆ ನಾನು ಎಷ್ಟುದಿವಸ ಮುತ್ತಿಗೆ ಹಾಕಿದರೂ ಚಿತ್ರದುರ್ಗವು ವಶವಾಗುವದು ಅಶಕ್ಯವೆಂ''ದು ಆತನು ಭಾವಿಸಿದನು. ಅಷ್ಟರಲ್ಲಿ ವಿಜಯ ನಗರದ ರಾಯರಿಂದ ಆತನಿಗೆ—''ನೀನು ಚಿತ್ರದುರ್ಗದ ಮುತ್ತಿಗೆಯನ್ನು ಎಬ್ಬಿಸಿ ಕೊಂಡು ಬಂದು, ಕಲಬುರ್ಗಿಯ ಕೋಟೆಯನ್ನು ಮೊದಲು ಸ್ವಾಧೀನ ಪಡಿಸಿಕೊಳ್ಳಬೇಕು ಎಂದು ಆಜ್ಞಾಪತ್ರವು ಬಂದಿತು. ಆಗ ಸಾಳ್ವನರಸಿಂಹನು ಬದುಕಿದವನಂತೆ ಸಮಾಧಾನಪಟ್ಟು, ಕಲಬುರ್ಗಿಗೆ ಹೋಗಿ ಅದಕ್ಕೆ ಮುತ್ತಿಗೆ ಹಾಕಿದನು; ಆದರೆ ಆರು ತಿಂಗಳು ಮುತ್ತಿಗೆ ಹಾಕಿದರೂ ಆ ಕೋಟೆಯು ಆತನ ಕೈಸೇರಲಿಲ್ಲ, ಇದನ್ನು ನೋಡಿ ವಿಜಯನಗರದ ರಾಯರು ತಿಮ್ಮ ನಾಯಕನಿಗೆ—''ನಿಮ್ಮ ಶೌರ್ಯ–ಸಾಹಸ–ಮಹಾಬಲಗಳ ಸುದ್ದಿಯನ್ನು ಕೇಳಿ ನಾವು ಸಂತುಷ್ಟರಾಗಿರುತ್ತೇವೆ; ಆದರೆ ನಿಮ್ಮ ಮೊಂಡಗೈಯನ್ನು ನೋಡುವ ಇಚ್ಛೆಯು ನಮಗೆ ಆಗಿರುವದರಿಂದ, ನೀವು ನಮ್ಮನ್ನು ಕಾಣಲಿಕ್ಕೆ ಬರಬೇಕು'' ಎಂದು ಆಜ್ಞಾಪತ್ರವನ್ನು ಕಳಿಸಿದರು! ಅದಕ್ಕೆ ತಿಮ್ಮ ನಾಯಕನು ರಾಯರಿಗೆ—''ಮಹಾಪ್ರಭೋ, ಸನ್ನಿಧಿಯ ಆಜ್ಞಾಪತ್ರ ರೂಪ ಪ್ರಸಾದವು ತಲುಪಿ ನಾನು ಧನ್ಯನಾದೆನು; ಆದರೆ ಸಾಳ್ವನರಸಿಂಹ ಸೇನಾಪತಿಗಳು ಕಲಬುರ್ಗಿಯನ್ನು ಮುತ್ತಿ ಆರುತಿಂಗಳಾಯಿತೆಂದು ಕೇಳುತ್ತೇನೆ. ಈ ಪ್ರಸಂಗದಲ್ಲಿ ಈ ಸೇವಕನಿಗೆ ಸನ್ನಿಧಿಯ ಅಪ್ಪಣೆಯಾದರೆ, ಕಲಬುರ್ಗಿಯನ್ನು ಚರಣಕ್ಕೆ ಅರ್ಪಿಸುವದಕ್ಕಾಗಿ ಸನ್ನಿಧಿಗೆ ಬಂದು ಕೃತಾರ್ಥನಾಗಬೇಕೆಂದಿರುವೆನು'' ಎಂದು ಅರಿಕೆಮಾಡಿಕೊಳ್ಳಲು ರಾಯರು ಅದಕ್ಕೆ ಸಂತೋಷದಿಂದ ಒಪ್ಪಿಗೆಯಿತ್ತರು. ಆಗ ತಿಮ್ಮನಾಯಕನು ಕಲಬುರ್ಗಿಗೆ ಹೋಗಿ, ಸಾಳ್ವನರಸಿಂಹನ ಒಪ್ಪಿಗೆಯಿಂದ ಆತನ ಮುತ್ತಿಗೆಯನ್ನು ಎಬ್ಬಿಸಿ, ತನ್ನ ಸೈನ್ಯದೊಡನೆ ಆ ಕೋಟೆಯನ್ನು ಮುತ್ತಿದನು.

ತಿಮ್ಮನಾಯಕನು ಸರ್ವಸಾಮಾನ್ಯ ದೊರೆಯಲ್ಲ; ಆತನು ಮಹಾ ಭಗವದ್ಭಕ್ತನು, ಸತ್ವಶಾಲಿಯು, ಕ್ರಿಯಾವಂತನು, ಗುರುಕೃಪೆಪಡೆದವನು, ಅಲ್ಲದೆ ಅತ್ಯಂತ ಸ್ವಾಮಿನಿಷ್ಠನು! ಆತನು ರಾಜದ್ರೋಹವನ್ನು ಮನಸ್ಸಿನಲ್ಲಿಯೂ ತಂದವನಲ್ಲ; ಆದ್ದರಿಂದ ತನ್ನ ಅಧಿರಾಜರಾದ ವಿಜಯನಗರದ ರಾಯರ ಮನಸ್ಸಿನ ಕಿಲ್ಮಿಷವನ್ನು ತೆಗೆದುಹಾಕಬೇಕೆಂಬ ಸದ್ಭಾವದಿಂದ, ಜೀವದ ಹಂಗುದೊರೆದು, ಕಲಬುರ್ಗೆಯ ಅಗಳತಕ್ಕೆ ಎರಡುಸಾವಿರ ಅರಳೆಯ ಅಂಡಿಗೆಗಳನ್ನು ಹಾಕಿಸಿ ತುಂಬಿಸಿದನು. ಬಳಿಕ ಕೋಟೆಯ ಎರಡು ನಿಟ್ಟುಗಳಿಂದ ಲಗ್ಗೆ ಹತ್ತಿ ಸೂರ್ಯೋದ ಯವಾದ ಆರುಗಳಿಗೆಗೆ ಸಾಕಿದ ಉಡ ನೂಲವಿಣೆ ಇವುಗಳ ಸಹಾಯದಿಂದ ಕೋಟೆಯನ್ನು ಏರಿಹೋಗಿ ಅದನ್ನು ಸ್ವಾಧೀನಪಡಿಸಿಕೊಂಡನು! ಆ ಕಾಲದಲ್ಲಿ ವೀರ ತಿಮ್ಮನಾಯಕನ ಯುದ್ಧಾವೇಶವು ಹೊರಸೂಸಿತ್ತು, ಕ್ಷಾತ್ರತೇಜಸ್ಸು ಉಗ್ರವಾಗಿತ್ತು! ಹೀಗಿರುವಾಗ ರಕ್ತದರ್ಶನದಿಂದ ಆ ವೀರಪುಂಗವನನ್ನು ತಮೋವೃತ್ತಿಯು ಸ್ವಾಭಾವಿಕವಾಗಿಯೇ ಆವರಿಸಲು, ''ದುಶ್ಶಾಸನನ ರಕ್ತಪಾನಮಾಡಿದ ಭೀಮನಂತೆ'' ''ಹಿರಣ್ಯಕಶಿಪುವಿನ ರಕ್ತಪಾನ ಮಾಡಿದ ಶ್ರೀನರಸಿಂಹನಂತೆ'' ಆ ವೀರನು ಎದುರಾದವರನ್ನು ತುಂಡರಿಸಹತ್ತಿದನು!

ಆ ಕಾಲದಲ್ಲಿ ವೀರ್ಯಮದದಿಂದ ಮತ್ತನಾದ ಆ ತಿಮ್ಮನಾಯಕನಿಗೂ, ಆತನ ಸೈನ್ಯದ ವರಿಗೂ ದಯಾದಾಕ್ಷಿಣ್ಯಗಳ ಹಂಗಾಗಲಿ, ಯೋಗ್ಯಾಯೋಗ್ಯಗಳ ವಿಚಾರವಾಗಲಿ ಉಳಿಯಲಿಲ್ಲ! ತನ್ನ ಕುಲಸ್ವಾಮಿನಿ ಏಕನಾಥೇಶ್ವರಿಯ ರಕ್ತಪಾನದ ತೃಷೆಯನ್ನು ಪೂರ್ಣ ಮಾಡುತ್ತಿರುವಂತೆ, ತಿಮ್ಮನಾಯಕನಿಂದ ಭಯಂಕರ ಕೊಲೆಯು ಕಲಬುರ್ಗೆಯ ಕೋಟೆಯಲ್ಲಿ ನಡೆಯಲು, ರಕ್ತಪ್ರವಾಹವು ಊರಬಾಗಿಲಿಗೆ ಹರಿಯಿತು! ವೀರರ ಯುದ್ಧಾವೇಶವೇ ಅಷ್ಟು ಕರ್ಕಶವಾದದ್ದು! ಸಾಳ್ವನರಸಿಂಗನು, ಈ ಕೊಲೆಯನ್ನು ನಿಲ್ಲಿಸಬೇಕೆಂದು ತಿಮ್ಮ ನಾಯಕನಿಂದ ಆತನ ಸೈನ್ಯಕ್ಕೆ ಅಪ್ಪಣೆಕೊಡಿಸುವವರೆಗೆ, ಕೊಲೆಯು ಒಂದೇಸವನೆ ನಡದೇ ಇತ್ತು! ಕಡೆಗ ತಿಮ್ಮನಾಯಕನ ಅಪ್ಪಣೆಯಿಂದ ಧರ್ಮಕಾಳಿಯು ಊದಲು, ಕೊಲೆಯು ನಿಂತಿತು! ಈ ಸಂಗತಿಯನ್ನು ನರಸಿಂಗ ರಾಯನು ವಿಜಯನಗರದ ರಾಯರಿಗೆ ಬಿನ್ನಹಮಾಡಲು, ರಾಯರು ತಿಮ್ಮನಾಯಕನನ್ನು ವಿಜಯನಗರಕ್ಕೆ ಬರಮಾಡಿಕೊಂಡು, ಮೂರು ತಿಂಗಳವರೆಗೂ ಆತನನ್ನು ಪ್ರೀತಿಯಿಂದ ಇಟ್ಟುಕೊಂಡು, ಹೋಗುವ ಕಾಲದಲ್ಲಿ ಆತನಿಗೆ–ಒಂದು ಚಿನ್ನದ ಮುಲಾಮಿನ ಶಂಖ, ಒಂದು ಛತ್ರದ ಜೊತೆ, ಒಂದು ಅಂದಣ, ಒಂದು ಜೋಡು ಮೊಸಳೆಯ ಬಾಯಿ, ಒಂದು ಫಿರಂಗಿ, ಒಂದು ಶ್ವೇತ ಛತ್ರ, ಒಂದು ಚಿನ್ನದ ಹಸ್ತ ಹಗಲದೀವಟಿಗೆ ಇವನ್ನು ವಸ್ತ್ರಾಭರಣಗಳೊಡನೆ ಕೊಟ್ಟು, ''ಹಗಲಕಗ್ಗೊಲೆ ಮಾನ್ಯ'' ಎಂದು ಹೊಗಳಲು, ಭಟ್ಟಂಗಿಗಳನ್ನೂ ವೀರತಿಮ್ಮನಾಯಕನೊಡನೆ ದುರ್ಗಕ್ಕೆ ಕಳಿಸಿದರು!

ಹೀಗೆ ತಿಮ್ಮಣ್ಣನಾಯಕನು ಜಯಶಾಲಿಯಾಗಿ ದುರ್ಗಕ್ಕೆ ಬಂದ ಬಳಿಕ, ತನ್ನ ಭುಜಬಲ ಪರಾಕ್ರಮದಿಂದ ದಿನದಿನಕ್ಕೆ ಅಭಿವೃದ್ಧಿಯನ್ನು ಹೊಂದಹತ್ತಿದನು. ಆತನ ಈ ಉತ್ಕರ್ಷವು ವೈರಿಗಳಿಗೆ ಸಹನವಾಗದೆ, ಅವರು ವಿಜಯನಗರದ ರಾಯರ ಮುಂದೆ ''ತಿಮ್ಮನಾಯಕನನ್ನು ಸರ್ವಥಾ ಪ್ರಬಲಿಸಕೂಡದು'' ಎಂದು ಮತ್ತೆ ಇಲ್ಲದ ಹಲವು ಚಾಡಿಗಳನ್ನು ಚುಚ್ಚಿದರು!

ಆಗಿನ ವಿಜಯನಗರದ ದುರ್ಬಲರಾಯರಿಗೂ ತಿಮ್ಮನಾಯಕನ ವಿಷಯದಲ್ಲಿ ಭಯವು ಉತ್ಪನ್ನವಾಗಿ, ತಿಮ್ಮನಾಯಕನನ್ನು ಉಪಾಯಾಂತರದಿಂದ ತಮ್ಮಲ್ಲಿಗೆ ಬರಮಾಡಿಕೊಂಡು, ಆತನನ್ನು ಸಪರಿವಾರ ಸೆರೆಯಲ್ಲಿರಿಸಿದರು! ಆದರೂ ರಾಜನಿಷ್ಠನಾದ ತಿಮ್ಮನಾಯಕನು ತನ್ನ ರಾಜನಿಷ್ಠೆಗೆ ಭಂಗತಂದುಕೊಳ್ಳಲಿಲ್ಲ. ಆತನು ತನ್ನ ಅಣ್ಣನಾದ ಓಬನಾಯಕನ ಕೈಯಲ್ಲಿ ತನ್ನ ಗುರುದತ್ತ ದಿವ್ಯವಸ್ತುಗಳನ್ನು ಅಂದರೆ, ದೆಸೆಗಟ್ಟಿನ ವಿಭೂತಿ, ಕೇವಿಯಸೇಟಿ, ಬಿಲ್ಲು ಕೈಅಂಬು ಇವನ್ನು ಕೊಟ್ಟು ಗುಪ್ತರೀತಿಯಿಂದ ದುರ್ಗಕ್ಕೆ ಕಳಿಸಿ, ತನ್ನ ಮಗ ಓಬಣ್ಣನಾಯಕನನ್ನು ತನ್ನ ಹತ್ತರ ಇಟ್ಟುಕೊಂಡನು! ಹೀಗೆ ರಾಜನಿಷ್ಠನಾದ ತಿಮ್ಮನಾಯಕನು ರಾಜಾಜ್ಞೆಯನ್ನು ಮೀರಲಾರದೆ, ಮಗನೊಡನೆ ಕಾರಾಗೃಹದಲ್ಲಿಯೇ ಉಳಿದನು. ಮುಂದೆ ಆ ರಾಜನಿಷ್ಠನು ಕೆಲ ವರ್ಷಗಳಲ್ಲಿ ವಿಜಯನಗರದ ಕಾರಾಗೃಹದಲ್ಲಿಯೇ ತೀರಿಕೊಳ್ಳಲು, ಆತನ ಮಗ ಓಬಣ್ಣ ನಾಯಕನು, ತನ್ನ ತಂದೆಯ ಶವವನ್ನು ದಹನಮಾಡಿ, ಬೂದಿಯನ್ನು ತುಂಗಭದ್ರಾನದಿಗೆ ಕಾಣಿಸಿ, ಅಸ್ಥಿಗಳನ್ನು ಜಂತಾಓಬಯ್ಯನಿಂದ ತೆಗೆಸಿಕೊಂಡು, ಯಾರೂ ಅರಿಯದಂತೆ ದುರ್ಗಕ್ಕೆ ಬರುತ್ತ ದಾರಿಯಲ್ಲಿ ಮತ್ತಿಗ್ರಾಮದೊಳಗೆ ಆ ಅಸ್ಥಿಗಳ ಸಮಾಧಿಮಾಡಿಸಿದನು.

## ನಾಯಕರ ಉತ್ಕರ್ಷ

### ೨ನೇ ದೊರೆ

**ತೇಜಸ್ವಿ ಓಬಣ್ಣನಾಯಕ**—ಈ ದೊರೆಯಾದರೂ ತನ್ನ ತಂದೆ ತಿಮ್ಮನಾಯಕನಂತೆ ಮಹಾ ಸಮರ್ಥನೂ, ಭಾವಿಕನೂ ಆಗಿದ್ದನು. ಶ್ರೀ ಚಂಪಕ ಸಿದ್ಧೇಶ್ವರನ ಗುಡಿಯಲ್ಲಿ ಈತನಿಗೆ ಪಟ್ಟಾಭಿಷೇಕವಾಯಿತು. ತಾಳೀಕೋಟೆಯ ಕಾಳಗದ ಅನಂತರದ ವಿಜಯನಗರದ ರಾಯರು ದುರ್ಬಲರಾಗಿದ್ದರು; ಆದ್ದರಿಂದಲೇ ಅವರು ಮೇಲೆ ಹೇಳಿದಂತೆ ತಿಮ್ಮನಾಯಕನ ಭಯದಿಂದ ಆತನನ್ನು ಕರೆಸಿಕೊಂಡು ಸ ಪರಿವಾರ ಸೆರೆಯಲ್ಲಿರಿಸಿದರು; ಇದರಿಂದ ದುರ್ಗದ ನಾಯಕರ ಮೇಲಿನ ವಿಜಯನಗರದವರ ಅಧಿರಾಜತ್ವವು ತಪ್ಪಿದಂತಾಗಲು, ಈ ಓಬಣ್ಣನಾಯಕನೂ, ಆತನ ಮುಂದಿನ ನಾಯಕರೂ ವಿಜಯನಗರದ ರಾಯರ ಹಂಗು ಇಲ್ಲದೆ, ಸ್ವತಂತ್ರರಾಗಿ ತಮ್ಮ ರಾಜ್ಯವನ್ನು ಆಳಿದರೆಂದು ಹೇಳಬಹುದು. ಈ ಓಬಣ್ಣನಾಯಕನಿಗೆ ಕನಕಗಿರಿಯ ದೊರೆ ರಂಗಪ್ಪನಾಯಕನ ಮಗಳಾದ ಕನಕಮ್ಮ ನಾಗತಿಯನ್ನು ಕೊಟ್ಟು, ಲಗ್ನವಾಯಿತು. ಋತುಶಾಂತಿಗಾಗಿ ಓಬಣ್ಣನಾಯಕರು ಏಕಾಂತಗೃಹಕ್ಕೆ ಹೋಗಲು, ಕನಕಮ್ಮನಾಗತಿಯು ಮಹಾ ಕೋಪದಿಂದ ತನ್ನ ಆ ಪತಿಯನ್ನು ಕುರಿತು—''ನಾಯಕಾ, ನಾನು ನಿನಗೆ ದಕ್ಕುವವಳಲ್ಲ; ನಾನು ದುರ್ಗಾದೇವತೆ! ಶ್ರೀ ಏಕನಾಥ ಅಮ್ಮನವರ ದೀಪಮಾಲೆಯ ಕಂಬದಲ್ಲಿ ನನ್ನ ಆಕಾರದಂತೆ ಪ್ರತಿಮೆಯನ್ನು ಕೆತ್ತಿಸಿ, ನಿಯಮದಿಂದ ವರುಷ ವರುಷಕ್ಕೂ ೧೦೧

ಕುರಿ, ೧೦೧ ಕೋಣಗಳನ್ನು ಬಲಿಕೊಡಿಸಿ, ಕ್ರಮದಿಂದ ನನ್ನ ಆರಾಧನೆ ಮಾಡಿಸಿದಲ್ಲಿ ನಿನ್ನ ದೌಲತ್ತು ವೃದ್ಧಿಯಾಗುತ್ತದೆ; ಇಲ್ಲವಾದರೆ ನಾಶವಾದೀತು,'' ಎಂದು ಹೇಳಿ, ತತ್‌ಕ್ಷಣ ದೇಹತ್ಯಾಗ ಮಾಡಿದಳು!

ಮುಂದೆ ಓಬನಾಯಕನು ದೊಡ್ಡದೊಂದು ದೀಪಸ್ತಂಭವನ್ನು ಮಾಡಿಸಿ, ಅದರಲ್ಲಿ ಪೂರ್ವಾಭಿಮುಖವಾಗಿ ಕನಕಮ್ಮನಾಗತಿ ಪ್ರತಿಮೆಯನ್ನೂ, ಶ್ರೀ ಏಕನಾಥ ಅಮ್ಮನಿಗೆ ಸಮ್ಮುಖವಾಗಿ ತನ್ನ ಪ್ರತಿಮೆಯನ್ನೂ ಕೆತ್ತಿಸಿ, ಅದನ್ನು ಶ್ರೀ ಏಕನಾಥೇಶ್ವರಿಯ ಮುಂದೆ ನಿಲ್ಲಿಸಹೋಗಲು, ಅದು ಏನು ಮಾಡಿದರೂ ನಿಲ್ಲದಾಯಿತು. ಆಗ ದೊರೆಯು ಚಿಂತಾಕ್ರಾಂತ ನಾಗಿರಲು, ದೇವಿಯು ಸ್ವಪ್ನದಲ್ಲಿ ಬಂದು—''ನಾಯಕಾ ಪತಿವ್ರತೆಯಾದ ಒಬ್ಬ ಗರ್ಭಿಣೀ ಸ್ತ್ರೀಯು ನನಗೆ ಬಲಿಯಾದರೆ, ಕಂಬವು ನಿಲ್ಲುವದು'' ಎಂದು ಹೇಳಲು, ಈ ಸಂಗತಿಯನ್ನು ದೊರೆಯು ಡಂಗುರದಿಂದ ಸಾರಿಸಿದನು. ಆಗ ದುರ್ಗದಲ್ಲಿದ್ದ ಪತಿವ್ರತೆಯಾದ ಒಬ್ಬ ಗಾಣಿಗರ ಸ್ತ್ರೀಯು,''ತನ್ನ ಕೀರ್ತಿಯು ಶಾಶ್ವತವಾಗಲೆಂ''ದು ತನ್ನ ಗಂಡನಿಗೂ, ತನ್ನ ತಾಯಿತಂದೆ ಗಳಿಗೂ ಹೇಳಿ ಪ್ರಾರ್ಥಿಸಿ, ಅವರ ಒಪ್ಪಿಗೆ ಪಡೆದು ದೊರೆಯಬಳಿಗೆ ಹೋಗಿ, ನಾನು ಬಲಿಯಾಗುವೆನೆಂದು ಹೇಳಿದಳು! ಆಗ ದೊರೆಯು ಆಕೆಯನ್ನು ವಸ್ತ್ರಾಭರಣಗಳಿಂದ ಅಲಂಕರಿಸಿ, ಹೊನ್ನುಗಳಿಂದ ಆಕೆಯ ಉಡಿತುಂಬಿಸಿದನು. ಆಗ ಆ ಸಾಧ್ವಿಯು ಕಂಬದ ಬಳಿಗೆಹೋಗಿ ನಮಸ್ಕಾರಮಾಡಿ ಅದನ್ನು ಮುಟ್ಟಲು, ಆಕೆಯು ಭೂಮಿಯಲ್ಲಿ ಸೇರಿ, ಕಂಬವು ಮೇಲಕ್ಕೆದ್ದಿತು! ಈಕೆಯ ವಂಶದವರು ಈಗಲೂ ಚಿತ್ರದುರ್ಗದ ಕರುವಿನ ಕಟ್ಟೆಯಲ್ಲಿ ಇರುತ್ತಾರಂತೆ! ಆ ಪತಿವ್ರತೆಯ ಪುಣ್ಯದಿಂದಲೇ ಆ ಉನ್ನತ ಕಂಬವು ಈಗಲೂ ನಿಂತಿದೆ! ಅರಸನು ಆ ಪತಿವ್ರತೆಯ ಗಂಡನ ಮನೆಯವರಿಗೆ ಎರಡು ಗಡಿಗೆ ವರಹಗಳನ್ನು ಕೊಡಿಸಿದನು. ಬಳಿಕ ದೇವಿಯ ಅಪ್ಪಣೆಯಾದಂತೆ ಕಂಬದಮ್ಮನ ಆರಾಧನೆಯನ್ನು ವರ್ಷ ವರ್ಷ ಮಾಡುತ್ತ ಹೋಗಲು, ದೊರೆಯ ವೈಭವವೂ ದಿನದಿನಕ್ಕೆ ಹೆಚ್ಚುತ್ತ ಹೋಯಿತು! ಈ ಓಬನಾಯಕನಿಗೆ ಸಿದ್ಧ ಮಹಾ ಪುರುಷರ ದರ್ಶನವು ಪ್ರತ್ಯಕ್ಷವಾಗಿ ಆಯಿತು! ಮುಂದೆ ಕೆಲವರ್ಷಗಳ ಮೇಲೆ ಈ ದೊರೆಯು ಸ್ವರ್ಗಸ್ಥನಾಗಲು, ಹಡುವನ ಹಾಳದಲ್ಲಿ ಈತನ ಅಸ್ಥಿಗಳ ಮೇಲೆ ಸಮಾಧಿಯನ್ನು ಕಟ್ಟಿಸಿದರು. ಈ ದೊರೆಯ ನಾಗತಿಯರಲ್ಲಿ ಐದು ಜನರು ಸಹಗಮನ ಮಾಡಿದರು!

## ೩ನೇ ದೊರೆ

**ಕೀರ್ತಿಶಾಲಿ ಕಸ್ತೂರಿ ರಂಗಪ್ಪನಾಯಕ**–ಓಬನಾಯಕನ ಮಗನಾದ ಕಸ್ತೂರಿ ರಂಗಪ್ಪನಾಯಕನಿಗೆ ಶ್ರೀಚಂಪಕ ಸಿದ್ಧೇಶ್ವರನ ಗುಡಿಯಲ್ಲಿ ಪಟ್ಟಾಭಿಷೇಕವಾಯಿತು. ಈತನಾದರೂ ತಂದೆಯಂತೆ ಶೂರನೂ, ಆಶ್ರಯ ಬೇಡಬಂದವರಿಗೆ ಆಶ್ರಯ ಕೊಡುವವನೂ ಆಗಿ, ಕಸ್ತೂರಿಯ ವಾಸನೆಯಂತೆ ತನ್ನ ಕೀರ್ತಿಯನ್ನು ಪಸರಿಸಿದನು. ಈತನ ಕಾಲದಲ್ಲಿ ದುರ್ಗದ ರಾಜ್ಯವು ವಿಸ್ತಾರವಾಯಿತು. ಗಾದ್ರಿ ಗುಡ್ಡದಲ್ಲಿ ಭಾರಿ ಹೆಬ್ಬುಲಿ

ಸೇರಿಕೊಂಡು, ಅನೇಕ ಜನರನ್ನೂ, ದನ-ಕರುಗಳನ್ನೂ ಕೊಂದು ಮಲೆತು ಇರುವಾಗ, ಈ ಸುದ್ದಿಯನ್ನು ಕೇಳಿ, ದೊರೆಯು ಪರಿವಾರ ದೊಡನೆ ಗಾದ್ರಿ ಗುಡ್ಡಕ್ಕೆ ಹೋದನು. ಜನರನ್ನು ಕಂಡಕೂಡಲೆ ಹೆಬ್ಬುಲಿಯು ಮೈಮೇಲೆ ಬಂದಿತು. ಆಗ ದೊರೆಯು ತನ್ನ ಮೈಮೇಲೆ ಬಂದ ಹುಲಿಯನ್ನು ಎರಡು ಭಾಗವಾಗಿ ಸೀಳಿಬಿಟ್ಟನು! ಅಂದಿನಿಂದ ದೊರೆಗೆ ''ಗಾದ್ರಿಮಾಲೆ ಹೆಬ್ಬುಲಿ'' ಎಂಬ ಬಿರುದು ಉಂಟಾಯಿತು! ಈತನ ಕಾಲದಲ್ಲಿ ಚಿತ್ರದುರ್ಗದ ನಾಯಕರಿಗೆ ಕಪ್ಪಕಾಣಿಕೆ ಕೊಡುವ ಸಾಮಂತರು, ಪಾಳ್ಯಗಾರರು ಇದ್ದರು. ಅವರಿಗೆ ಕಸ್ತೂರಿ ರಂಗಪ್ಪ ನಾಯಕನು ಪತ್ರ ಬರೆಯುವಾಗ—''ಶ್ರೀಮಾನ್ ಮಹಾ ನಾಯಕಾಚಾರ್ಯ, ನಾಯಕ ಶಿರೋಮಣಿ, ಹಗಲಕಗ್ಗೊಲೆಮಾನ್ಯ, ಗಾದ್ರಿಮಾಲೆ ಹೆಬ್ಬುಲಿ, ಗಂಡಗೊಡಲಿಯ ಸರ್ಜ, ಚಿತ್ರದುರ್ಗ ಸಂಸ್ಥಾನದ ರಾಜಾ ಕಸ್ತೂರಿ ರಂಗನಾಯಕರು'' ಎಂದು ಒಕ್ಕಣಿಕೆಯನ್ನು ಬರೆಸುತ್ತಿದ್ದನು. ಈ ದೊರೆಯು ಮಹಾಧರ್ಮಿಷ್ಠನಾಗಿ ಮರಣ ಹೊಂದಿದನು. ಈ ಸುಪ್ರಸಿದ್ಧ ನಾಯಕನ ಶವವನ್ನು ಅರಮನೆಯಲ್ಲಿಯೇ ದಹನಮಾಡಿದರು. ಈತನ ಹನ್ನೊಂದು ಜನ ನಾಗತಿಯರಲ್ಲಿ ಏಳುಜನ ನಾಗತಿಯರು ಸಹಗಮನ ಮಾಡಿದರು!

## ೪ನೇ ದೊರೆ

ಗಡ್ಡದ ಮದಕರಿ ನಾಯಕರು—ಕಸ್ತೂರಿ ರಂಗಪ್ಪನಾಯಕನ ಮಗನಾದ ಗಡ್ಡದ ಮದಕರಿ ನಾಯಕನಿಗೆ, ಶ್ರಿಚಂಪಕ ಸಿದ್ದೇಶ್ವರನ ಗುಡಿಯಲ್ಲಿ ಪಟ್ಟಾಭಿಷೇಕವಾಯಿತು. ಈತನು ತನ್ನ ತಂದೆಯ ಆಳಿಕೆಯಲ್ಲಿಯೇ ಒಂದು ಕಠಿಣ ಪ್ರಸಂಗದಲ್ಲಿ ತನ್ನ ಕೈಯೊಳಗಿನ ಗಂಡುಗೊಡಲಿ ಯಿಂದ ಹಲವು ವೈರಿಗಳ ಚಂಡುಗಳನ್ನು ತುಂಡರಿಸಿ ಚಿತ್ರದುರ್ಗವನ್ನು ಉಳಿಸಿದ್ದರಿಂದ, ಈತನಿಗೆ ''ಗಂಡುಗೊಡಲಿಯ ಸರ್ಜ'' ಎಂಬ ಬಿರುದು ಉಂಟಾಯಿತು. ಈತನು ಮಹಾ ಶೂರನಿದ್ದಂತೆ, ಅತ್ಯಂತ ಭಾವಿಕನೂ, ಧರ್ಮಿಷ್ಠನೂ ಆಗಿದ್ದನು. ಈತನ ಕಾಲದಲ್ಲಿ ಚಿತ್ರದುರ್ಗದ ಸಂಸ್ಥಾನವು ಅತ್ಯಂತ ಘನತೆಗೇರಿತು. ಈತನ ಭಕ್ತಿಗೂ, ಧರ್ಮ ನಿಷ್ಠೆಗೂ ಮೆಚ್ಚಿ ಉಚ್ಚಂಗಿ ದುರ್ಗದ ಉತ್ಸವಾಂಬೆಯು (ಉಚ್ಚಂಗಿ ಎಲ್ಲಮ್ಮನು) ಉಚ್ಚಂಗಿ ದುರ್ಗದಿಂದ ಚಿತ್ರದುರ್ಗಕ್ಕೆ ಬಂದ ವೃತ್ತಾಂತವು ಬಹು ಆಶ್ಚರ್ಯಕರವಾಗಿರುವದು; ಆದರೆ ಸ್ಥಳಸಂಕೋಚದ ಮೂಲಕ ಅದನ್ನು ಇಲ್ಲಿ ಸ್ವಲ್ಪದರಲ್ಲಿ ಕೊಡುವೆವು.

ಈ ಗಡ್ಡದ ಮದಕರಿನಾಯಕನ ಮೂಲಪುರುಷನಾದ ಚಿತ್ರನಾಯಕನು, ದಿಲ್ಲಿಯ ಬಾದಶಹನ ಅನುಮತಿಯಿಂದ ದಕ್ಷಿಣಕ್ಕೆ ಬಂದನೆಂದು ಹಿಂದೆ ಹೇಳಿದೆಯಷ್ಟೆ? ಆತನು ಈಗ ಉಚ್ಚಂಗಿದುರ್ಗವಿರುವ ಪ್ರದೇಶದಲ್ಲಿ ತನ್ನ ಪರಿವಾರ-ದನಕರುಗಳೊಡನೆ ಇಳಿದುಕೊಂಡನು. ಆ ಗುಡ್ಡ ಗಾಡ ಪ್ರದೇಶದಲ್ಲಿ ದನಗಳಿಗೆ ಹುಲ್ಲು ನೀರುಗಳ ಅನುಕೂಲತೆಯಿದ್ದದ್ದರಿಂದ, ಅಲ್ಲಿ ಮತ್ತೆ ನಾಲ್ಕು ದಿನ ವಿಶ್ರಾಂತಿ ತಕ್ಕೊಂಡು ಮುಂದಕ್ಕೆ ಸಾಗಬೇಕೆಂದು ಆತನ ಮನಸ್ಸಿನಲ್ಲಿ ಇದ್ದಿತು; ಆದರೆ ಆತನ ಪರಿವಾರಕ್ಕೂ, ದನ ಕರುಗಳಿಗೂ ವ್ಯಾಧಿಯುಂಟಾಗಲು, ಆತನು ಚಿಂತೆಗೊಳಗಾದನು. ಆಗ ಉಚ್ಚಂಗಿ ಎಲ್ಲಮ್ಮನು ಒಬ್ಬರ ಮೈಯಲ್ಲಿ ಆವೇಶಗೊಂಡು

ಚಿತ್ರನಾಯಕನಿಗೆ—''ನಾಯಕಾ, ನಾನು ಈ ಪ್ರದೇಶದ ಅಧಿದೇವತೆಯು. ನನ್ನ ಹೆಸರು ಉಚ್ಚಂಗಿ ಎಲ್ಲಮ್ಮ. ನಾನೇ ಈ ವ್ಯಾಧಿಯನ್ನುಂಟುಮಾಡಿರುತ್ತೇನೆ. ನಿನ್ನ ಹೆಚ್ಚಳಕ್ಕಾಗಿ ನಾನು ನಿನಗೊಂದು ದ್ರವ್ಯದ ನಿಧಿಯನ್ನು ತೋರಿಸುವೆನು. ಆ ನಿಧಿಯಿಂದ ನೀನು ಈ ಗುಡ್ಡದಮೇಲೊಂದು ಕೋಟೆಯನ್ನು ಕಟ್ಟಿಸಿ ಆದರಲ್ಲಿ ನನಗಾಗಿ ಒಂದು ಗುಡಿಯನ್ನು ಕಟ್ಟಿಸಿ ಅಲ್ಲಿ ನನ್ನನ್ನು ಸ್ಥಾಪಿಸು'' ಎಂದು ಹೇಳಿದಳು! ಅದರಂತೆ ಚಿತ್ರನಾಯಕನು ಕೋಟೆ ಗುಡಿಗಳನ್ನು ಕಟ್ಟಿಸಿ, ದೇವಿಯನ್ನು ಸ್ಥಾಪಿಸಿ, ಆ ದುರ್ಗಕ್ಕೆ ಉಚ್ಚಂಗಿದುರ್ಗವೆಂಬ ಹೆಸರನ್ನು ಇಟ್ಟನು. ಈ ಉಚ್ಚಂಗಿ ಎಲ್ಲಮ್ಮನನ್ನೇ ಮುಂದೆ ಚಿತ್ರದುರ್ಗದ ನಾಯಕರು ''ಉತ್ಸವಾಂಬೆ'' ಎಂದು ಕರೆಯಹತ್ತಿದರು; ಯಾಕಂದರೆ, ಈ ದೇವಿಯು ಉತ್ಸವ ಪ್ರಿಯಳು! ಈಕೆಯೇ ದುರ್ಗದ ನಾಯಕರ ಮನೆಯದೇವತೆಯಾದಳು. ಆ ಮನೆತನದವರು ಪ್ರತಿ ಭಾರತಹುಣ್ಣಿಮೆಗೂ ಚಿತ್ರದುರ್ಗದಿಂದ ಉಚ್ಚಂಗಿ ದುರ್ಗಕ್ಕೆ ಹೋಗಿ, ಆದಿನ ಎಲ್ಲರೂ ಉಪವಾಸವಿದ್ದು ದೇವಿಯ ಸೇವೆಮಾಡಿಕೊಂಡು ಬರುತ್ತಿದ್ದರು!

ಮುಂದೆ ತಿಮ್ಮಣ್ಣನಾಯಕನ ಮಗಳು ಹೊನ್ನಮ್ಮನಾಗತಿಯನ್ನು ಹರಪನಹಳ್ಳಿಯ ದೊರೆಗೆ ಕೊಟ್ಟು, ಆಕೆಗೆ ಬಳುವಳಿಯಾಗಿ ಉಚ್ಚಂಗಿದುರ್ಗದ ಕೋಟೆಯನ್ನೂ, ಕೆಲವು ಊರುಗಳನ್ನೂ ಕೊಟ್ಟದ್ದರಿಂದ, ಉಚ್ಚಂಗಿದುರ್ಗವು ಹರಪನಹಳ್ಳಿಯವರ ಕೈಸೇರಿತು. ಮುಂದೆ ಹರಪನಹಳ್ಳಿಯವರು ಚಿತ್ರದುರ್ಗದ ನಾಯಕರಿಗೆ ಉಚ್ಚಂಗಿದುರ್ಗಕ್ಕೆ ಬರಲಾಗದೆಂದು ನಿರ್ಬಂಧಿಸಲು, ಆ ಸಂಬಂಧದಿಂದ ಹೊನ್ನಮ್ಮನಾಗತಿಗೂ, ಆಕೆಯ ಗಂಡನಿಗೂ ವಾಗ್ವಾದವಾಗಿ, ಗಂಡನು ಹೊನ್ನಮ್ಮನಾಗತಿಯನ್ನು ಉಪಾಯದಿಂದ ದುರ್ಗದಮೇಲೆ ಕರಕೊಂಡು ಹೋಗಿ, ಆಕೆಯನ್ನು ನೀಚತನದಿಂದ ಗುಡ್ಡದ ಕೆಳಕ್ಕೆ ನೂಕಿಬಿಟ್ಟನು! ಅಂದಿನಿಂದ ಚಿತ್ರದುರ್ಗದ ನಾಯಕರು ಉಚ್ಚಂಗಿದುರ್ಗಕ್ಕೆ ಹೋಗುವದನ್ನು ಬಿಟ್ಟುಬಿಟ್ಟರು; ಆದರೆ ಹರಪನಹಳ್ಳಿಯ ದೊರೆಯ ಈ ಅಧರ್ಮಾಚರಣೆಗಾಗಿ ದೇವಿಯು ಆತನು ಸ್ವಪ್ನದಲ್ಲಿಬಂದು ಆತನನ್ನು ಕುರಿತು—''ನಾಯಕಾ, ನಿನ್ನಲ್ಲಿ ಧರ್ಮವಿಲ್ಲ; ಚಿತ್ರದುರ್ಗದ ನಾಯಕರು ಧರ್ಮಿಷ್ಠರು; ಆದ್ದರಿಂದ ನಾನು ಅವರ ರಾಜ್ಯಕ್ಕೆ ಹೋಗುತ್ತೇನೆ'' ಎಂದು ಹೇಳಿದಳು! ಆದರಿಂದ ದೊರೆಯು ಬೆದರಿ ದೇವಿಯ ಉತ್ಸವಮೂರ್ತಿಯನ್ನು ಜಾಗ್ರತೆಯಿಂದ ಕಾಯಬೇಕೆಂದು ತನ್ನ ಕಾವಲುಗಾರರಿಗೆ ಅಪ್ಪಣೆ ಮಾಡಿದನು. ಅದರಂತೆ ಕಾವಲುಗಾರರು ಎಚ್ಚರದಿಂದ ಕಾಯುತ್ತಿರಲು, ಇತ್ತ ದೇವಿಯು ಚಿತ್ರದುರ್ಗದ ಗಡ್ಡದ ಮದಕರಿನಾಯಕರ ಸ್ವಪ್ನದಲ್ಲಿ ಬಂದು—''ನಾನು ನಿನ್ನ ಬಳಿಗೆ ಬರುತ್ತೇನೆ. ನೀನು ಅಣಜಿಯ ಕೋಟೆಯ ಹತ್ತರ ಸೈನ್ಯದೊಡನೆ ನನ್ನನ್ನು ಕಾದಿರು'' ಎಂದು ಅಪ್ಪಣೆಕೊಡಿಸಿದಳು!

ಹೀಗಿರುವಾಗ ಇತ್ತ ಉಚ್ಚಂಗಿದುರ್ಗದಲ್ಲಿ ದೇವಿಯು ತನ್ನ ಪೂಜಾರಿಯಾದ ಕೆಂಚಯ್ಯನೆಂಬವನನ್ನು ಪ್ರೇರಿಸಲು, ಆತನು ದೇವಿಯ ಉತ್ಸವಮೂರ್ತಿಯನ್ನು ಬೆನ್ನಿಗೆ ಕಟ್ಟಿಕೊಂಡು ಹೊರಟನು. ಆಗ ವೈಯಾಳಿ ಜೋಗಪ್ಪನಾದ ಸಿದ್ದಪ್ಪನೆಂಬವನು ಚೌಟಿಕೆಯೆಂಬ ವಾದ್ಯವನ್ನು ಬಾರಿಸುತ್ತ ''ಉದೋ ಉದೋ'' ಎಂದು ಘೋಷಮಾಡುತ್ತ ದೇವಿಯ ಮುಂದೆ ಹೊರಟನು!

ಹೀಗೆ ಅವರು ಗುಡಿಯಿಂದ ಹೊರಟುಹೋಗುತ್ತಿರುವಾಗ, ಎಡಬಲದ ಬಿಚ್ಚು ಗತ್ತಿಯ ಕಾವಲುಗಾರರು ಅವರನ್ನು ತಡೆಯದೆ, ಮಂಕುಬಡೆದವರಂತೆ ನಿಂತಲ್ಲಿ ಸುಮ್ಮನೆ ನಿಂತು ಬಿಟ್ಟರು! ಆಗ ಪೂಜಾರಿ ಕೆಂಚಯ್ಯನು ಉತ್ಸವಮೂರ್ತಿಯನ್ನು ಬೆನ್ನಿಗೆ ಕಟ್ಟಿಕೊಂಡು ಸುರಕ್ಷಿತವಾಗಿ ಅಣಜಿಯ ಕೋಟೆಯ ಬಳಿಗೆ ಬರಲು, ಅಲ್ಲಿ ಕಾದಿದ್ದ ಗಡ್ಡದ ಮದಕರಿ ನಾಯಕನು ಕುಶಾಲುತೋಪು ಹಾರಿಸಿ ದೇವಿಯನ್ನು ಇದಿರುಗೊಂಡು ಭಕ್ತಿಯಿಂದ ಬರಮಾಡಿ ಕೊಂಡನು! ಹೀಗೆ ಗಡ್ಡದ ಮದಕರಿನಾಯಕನು ದೇವಿಯನ್ನು ಪೂಜಿಸುತ್ತ ಅಣಜಿಯಲ್ಲಿರು ವಾಗ, ಈ ಸುದ್ದಿಯು ಹರಪನಹಳ್ಳಿಯ ದೊರೆಗೆ ಮುಟ್ಟಲು, ಆತನು ಮೋಸವಾಯಿತೆಂದು ತಿಳಿದು ದಂಡಿನೊಡನೆ ಅಣಜಿಯ ಕೋಟೆಯನ್ನು ಮುತ್ತಿದನು.

ಬಳಿಕ ಉಭಯ ಸೈನಿಕರಿಗೂ ಅಲ್ಲಿ ಘೋರ ಕಾಳಗವಾಯಿತು. ಹರಪನಹಳ್ಳಿಯ ದೊರೆಯು—''ಅಣಜಿಯ ಕೋಟೆಯನ್ನು ಸ್ವಾಧೀನಪಡಿಸಿಕೊಳ್ಳಬೇಕು, ಇಲ್ಲವೆ ಕೋಟೆಗೆ ತಲೆ ಕೊಡಬೇಕು'' ಎಂಬ ರೊಚ್ಚಿನಿಂದ ಕಾದಿದ್ದನು; ಆದರೂ ದೇವಿಯ ಕೃಪೆಯಿಂದ ಗಡ್ಡದ ಮದಕರಿ ನಾಯಕನಿಗೇ ಜಯವಾಯಿತು! ಆಗ ಆತನು ಸಂತೋಷದಿಂದ ದೇವಿಯನ್ನು ಚಿತ್ರದುರ್ಗಕ್ಕೆ ಕರತಂದು ಕಟ್ಟಿಗೆಯ ಗುಡಿಯಲ್ಲಿ ಆಕೆಯನ್ನು ಸ್ಥಾಪಿಸಿ, ಮುಂದೆ ಮೂರು ತಿಂಗಳಲ್ಲಿ ಸುಂದರವೂ, ಭವ್ಯವೂ ಆದ ಒಂದು ಶಿಲಾಮಯ ಗುಡಿಯನ್ನೂ, ವಿಸ್ತಾರವಾದ ಸುಂದರ ಪ್ರಾಕಾರವನ್ನೂ, ಏಳಂತಸ್ತುಗಳುಳ್ಳ ಭವ್ಯವಾದ ಮಹಾದ್ವಾರವನ್ನೂ ಕಟ್ಟಿಸಿದನು; ಆದರೆ ಮೂಲಮೂರ್ತಿಯ ವಿಷಯವಾಗಿ ಏನು ವ್ಯವಸ್ಥೆ ಮಾಡಬೇಕೆಂದು ದೇವಿಯನ್ನು ಪ್ರಾರ್ಥಿಸಲು, ದೇವಿಯು—''ನಾಯಕನಹಟ್ಟಿಯ ಕೆರೆಯಲ್ಲಿ ಹನ್ನೆರಡು ಆಳಿನ ಕೆಳಗೆ ನಾನಿದ್ದೇನೆ, ನನ್ನನ್ನು ಕರತಂದು ಗುಡಿಯಲ್ಲಿ ಸ್ಥಾಪಿಸು'' ಎಂದು ಅಪ್ಪಣೆಕೊಡಿಸಿ, ತಾನಿರುವ ಗುರುತು ಹೇಳಿದಳು. ಅದರಂತೆ ಗಡ್ಡದ ಮದಕರಿನಾಯಕನು ಆ ಕೆರೆಯಲ್ಲಿ ದೇವಿಯು ಗುರುತುಹೇಳಿದ ಸ್ಥಳದಲ್ಲಿ ಅಗಿಸಲು, ಅಲ್ಲಿ ಒಂದು ದೇವಾಲಯುವಿದ್ದು, ಅದರಲ್ಲಿ ಎಲ್ಲಮ್ಮನ ಸುಂದರ ಪ್ರತಿಮೆಯೂ, ಪರಶುರಾಮದೇವರ ಪ್ರತಿಮೆಯೂ, ಒಂದು ನಾಗಪ್ಪನ ಪ್ರತಿಮೆಯೂ ಇದ್ದವು! ಅದನ್ನು ನೋಡಿ ನಾಯಕನು ಪರಮಾನಂದಪಟ್ಟು, ಆ ಮೂರೂ ಪ್ರತಿಮೆಗಳನ್ನು ಸಮಾರಂಭದಿಂದ ಚಿತ್ರದುರ್ಗಕ್ಕೆ ಕರತಂದು, ಮೇಲೆ ಹೇಳಿದಂತೆ ಒಂದು ಭವ್ಯವೂ ಸುಂದರವೂ ಆದ ಗುಡಿಯನ್ನು ಕಟ್ಟಿಸಿ ಅಲ್ಲಿ ಸ್ಥಾಪಿಸಿದನು. ಅವೇ ಮೂರು ಪ್ರತಿಮೆಗಳೇ ಈಗಲೂ ಆ ಗುಡಿಯಲ್ಲಿರುವವು! ಗಡ್ಡದ ಮದಕರಿನಾಯಕನು ಆ ದೇವಸ್ಥಾನಕ್ಕೆ ಮೇಲೆ ಹೇಳಿದಂತೆ ವಿಸ್ತಾರವಾದ ಪ್ರಾಕಾರವನ್ನು ಕಟ್ಟಿಸಿ, ಮಹಾದ್ವಾರದ ಮೇಲೆ ಏಳಂತಸ್ತಿನ ಗೋಪುರವನ್ನು ಕಟ್ಟಿಸಿದನು. ಆ ಗೋಪುರಕ್ಕೆ ಬಂಗಾರದ ಕಳಸಗಳಿದ್ದವು. ಮುಂದೆ ಟಿಪ್ಪು ಸುಲ್ತಾನನು ಈ ಬಂಗಾರದ ಕಳಸಗಳನ್ನು ನೋಡಿ, ಅದೇ ನಾಯಕರ ಅರಮನೆಯೆಂದು ತಿಳಿದು, ತೋಪುಹಚ್ಚಿ ಹೊಡೆದದ್ದರಿಂದ ಆ ಗುಡಿಯು ಕೆಲವು ಕಡೆಯಲ್ಲಿ ಶಿಥಿಲವಾಯಿತು. ಮುಂದೆ ಚಿತ್ರದುರ್ಗವು ಟಿಪ್ಪುವಿನ ವಶವಾದ ಬಳಿಕ ಆತನು ಮಹಾದ್ವಾರದ ಮೇಲಿನ ಏಳು ಅಂತಸ್ತುಗಳಲ್ಲಿ ಆರು ಅಂತಸ್ತುಗಳನ್ನು ಕೆಡವಿ, ಅದರಿಂದ ಜುಮ್ಮಾ ಮಸೀದೆಯನ್ನು ಕಟ್ಟಿಸಿದನು! ಅಮ್ಮನವರ ಆ ಸುಂದರ ದೇವಸ್ಥಾನವು ಪಟ್ಟಣದ

ಮುಖ್ಯಬೀದಿಯಲ್ಲಿ ಪಟ್ಟಣಕ್ಕೆ ಅಲಂಕಾರಭೂತವಾಗಿ ಈಗಲೂ ಇರುತ್ತದಲ್ಲದೆ, ಟಿಪ್ಪುವು ಕಟ್ಟಿಸಿದ ಆ ಸುಂದರ ಮಸೀದೆಯೂ ಈಗ ಚಿತ್ರದುರ್ಗದಲ್ಲಿರುತ್ತದೆ! ಇರಲಿ.

ಈ ದೊರೆ ಗಡ್ಡದ ಮದಕರಿನಾಯಕನು ಚಿತ್ರದುರ್ಗದಲ್ಲಿಯ ಶೃಂಗೇರಿ ಮಠವನ್ನು ವಿಸ್ತಾರ ವಾಗಿ ಕಟ್ಟಿಸಿ, ಜಗದ್ಗುರು ನರಸಿಂಹಭಾರತೀ ಮಹಾಸ್ವಾಮಿಗಳನ್ನು ಸಂಸ್ಥಾನಕ್ಕೆ ಬರಮಾಡಿ ಕೊಂಡು ಭಿಕ್ಷೆ, ಪಾದಪೂಜೆಗಳನ್ನು ಮಾಡಿಸಿ ವಿವಿಧ ರತ್ನಾಭರಣಗಳನ್ನು ಮಹಾಪಾದಕ್ಕೆ ಅರ್ಪಿಸಿದ್ದಲ್ಲದೆ, ಹನುಮನಹಳ್ಳಿ ಗ್ರಾಮವನ್ನು ಅವರಿಗೆ ಜಹಗೀರು ಹಾಕಿ ಕೊಟ್ಟನು! ಇದರಂತೆ ಶ್ರೀ ವ್ಯಾಸರಾಯ ಸ್ವಾಮಿಗಳನ್ನೂ, ಶ್ರೀ ಉತ್ತರಾದಿ ಮಠದ ಸ್ವಾಮಿಗಳನ್ನೂ, ದಿಗ್ವಿಜಯ ಮಾಡಿಸಿಕೊಂಡು, ಆಯಾ ಮಹಾಸ್ವಾಮಿಗಳವರಿಗೆ ಮಠಗಳನ್ನು ಕಟ್ಟಿಸಿ, ಜಹಗೀರು ಹಾಕಿಕೊಟ್ಟು ವಿವಿಧ ಸೇವೆಗಳನ್ನು ಮಾಡಿದನು. ಈ ದೊರೆಯ ಕಾಲದಲ್ಲಿ ಜಗಳೂರ ಸಾಧು ಲಿಂಗಾಯತ ಮತದ ಅಡಿಕೆಲೋರ ಮೂಲಪುರುಷ ಸಂತಪ್ಪನೇ ಮೊದಲಾದವರು ಆಶ್ರಯಪಡೆದು ಸ್ವಾಸ್ಥ್ಯಗಳನ್ನು ಸಂಪಾದಿಸಿದರು. ಹೀಗೆ ಸರ್ವಮತ ದವರನ್ನೂ ಸಮಾನವಾಗಿ ನೋಡಿದ ಈ ಘನವಂತನಾದ ದೊರೆಯು, ಮಹಾಕೀರ್ತಿ ಶಾಲಿಯಾಗಿ ಆಳಿ ಮರಣಹೊಂದಿದನು. ಈತನ ಶವವನ್ನು ಅರಮನೆಯಲ್ಲಿಯೇ ದಹನ ಮಾಡಿದರು. ಈತನ ಜೊತೆಯಲ್ಲಿ ಈತನ ೨೭ ಜನ ಹೆಂಡಿರು ಸಹಗಮನಮಾಡಿ, ಮೂವರು ಜನ ನಾಗತಿಯರು ಜೀವಂತವಾಗಿ ಉಳಿದರು!

**ಸೇನಾಪತಿಗಳ ಹಾವಳಿ**–ಹೀಗೆ ದುರ್ಗದ ನಾಯಕರು ಒಬ್ಬರಿಗಿಂತ ಒಬ್ಬರು ಶೂರರಾಗಿ ರಾಜ್ಯದ ವೈಭವವನ್ನು ಹೆಚ್ಚಿಸುತ್ತಿರಲು, ದುರ್ಗದ ಸೇನಾಪತಿಗಳ ಹಾವಳಿಯು ಎದ್ದಿತು. ಈ ಜಗತ್ತಿನ ಯಾವ ವ್ಯವಹಾರಗಳಾದರೂ ಉತ್ಕರ್ಷ ಸ್ಥಿತಿಯಲ್ಲಿ ಅವಿಚ್ಛಿನ್ನವಾಗಿ ನಡೆಯುವದಿಲ್ಲವೆಂಬುದೇ ಸಿದ್ಧಾಂತವು! ಅಂತೇ, ಈ ವರೆಗೆ ಎಷ್ಟೋ ಮಹಾ ಮಹಾ ರಾಜವಂಶಗಳೂ ಅನಾದಿಕಾಲದಿಂದ ಮಣ್ಣುಗೂಡುತ್ತ ಬಂದಿವೆ. ಅಂದಬಳಿಕ ಚಿತ್ರದುರ್ಗದ ಸಂಸ್ಥಾನವಾದರೂ ಈ ನಿಯಮಕ್ಕೆ ಹೇಗೆ ಹೊರಗಾದೀತು? ಮೇಲೆ ಹೇಳಿದ ಗಡ್ಡದ ಮದಕರಿ ನಾಯಕರ ಮಗ 5ನೇ ದೊರೆಯಾದ ಓಬಣ್ಣನಾಯಕನು ಚಿತ್ರದುರ್ಗದ ಪಟ್ಟಕ್ಕೆ ಬರಲು, ಹಿಂದಿನಿಂದ ನಡೆದುಬಂದಂತೆ ದಂಡಿನವರಿಗೆ ಒಂದು ತಿಂಗಳ ಸಂಬಳವನ್ನು ಉಚಿತವಾಗಿ ಕೊಡಲಿಲ್ಲ; ಆದ್ದರಿಂದ ಆ ನೆವವನ್ನು ಮುಂದೆ ಮಾಡಿ, ದಂಡಿನವರು, ದಳವಾಯಿ ಪಂಚಮ ಮುದ್ದನನ್ನು ತಮ್ಮ ಮುಖ್ಯನನ್ನಾಗಿ ಮಾಡಿಕೊಂಡು ದೊರೆಯನ್ನು ಕೊಂದುಹಾಕಿದರು! ಆಗ ಆ ದೊರೆಯ ಹಿರೇ ಕುಮಾರನಾದ ಚಿಕ್ಕಣ್ಣನಾಯಕನು ಹರಪನಹಳ್ಳಿಗೆ ಓಡಿಹೋಗಿ, ಅಲ್ಲಿಂದ ಕಣಗುಪ್ಪೆಗೆ ಸಾಗಿ ಅಲ್ಲಿ ವಾಸಿಸಿದನು. ಆಗ ಕೆಲವು ಮುಖ್ಯ ದಳವಾಯಿಗಳು ಅಲ್ಲಿಗೆ ಹೋಗಿ, ಚಿಕ್ಕಣ್ಣನಾಯಕನಿಗೆ ಧೈರ್ಯಹೇಳಿ ಕರಕೊಂಡು ಬಂದು ದುರ್ಗದ ಪಟ್ಟಕ್ಕೆ ಕುಳ್ಳಿರಿಸಿದರು. ಆಗ ದೊರೆಯು ಸೈನಿಕರಿಗೆ ಕೊಡತಕ್ಕ ಉಚಿತವನ್ನು ಕೊಟ್ಟನು. ಈ ಆರನೆಯ ದೊರೆ ಚಿಕ್ಕಣ್ಣನಾಯಕನು ಸಮರ್ಥನಾಗಿ ಸುಸೂತ್ರ ರಾಜ್ಯಭಾರ ಮಾಡಿದನು. ಆತನು ಮರಣ

ಹೊಂದಿದ ಬಳಿಕ, ಮತ್ತೆ ಪಟ್ಟದ ಸಲುವಾಗಿ ಸೇನಾಪತಿಗಳಲ್ಲಿ ಮತ ಭೇದ ವುಂಟಾಯಿತು. ಚಿಕ್ಕಣ್ಣನಾಯಕನ ಹಿರಿಯ ಮಗ ಮದಕರಿನಾಯಕನನ್ನು ಪಟ್ಟಕ್ಕೆ ಕುಳ್ಳಿರಿಸಬೇಕೆಂದು ಕೆಲವರು, ಚಿಕ್ಕಣ್ಣನಾಯಕನ ತಮ್ಮನಾದ ಮದಕರಿನಾಯಕನನ್ನು ಪಟ್ಟಕ್ಕೆ ಕುಳ್ಳಿರಿಸಬೇಕೆಂದು ಕೆಲವರು, ವಾದಿಸಹತ್ತಿದರು; ಆದರೆ ದಳವಾಯಿ ಭರಮಪ್ಪನ ಪಕ್ಷದವರು, ಹಿರಿಯ ಕುಮಾರನಿಗೇ ಪಟ್ಟವಾಗುವುದು ನ್ಯಾಯವೆಂದು ಚಿಕ್ಕಣ್ಣನಾಯಕರು ಹಿರಿಯಮಗ ಮದಕರಿನಾಯಕನನ್ನು ೭ನೆಯ ದೊರೆಯಾಗಿ ಪಟ್ಟಕ್ಕೆ ಕುಳ್ಳಿರಿಸಿದರು; ಆದರೆ ಅದು ದಳವಾಯಿ ಪಂಚಮ ಮುದ್ದಣ್ಣನ ಮನಸ್ಸಿಗೆ ಬರಲಿಲ್ಲ, ಆತನು ಪಟ್ಟವೇರಿದ ಆ ಏಳನೆಯ ದೊರೆ ಮದಕರಿ ನಾಯಕನನ್ನು ಸೆರೆಹಿಡಿದುಕೊಂಡು, ಆತನ ಮಗ ದೊಣ್ಣೆರಂಗಪ್ಪ ನಾಯಕನನ್ನು 8ನೇ ದೊರೆಯೆಂದು ಹೆಸರಿಗೆ ಪಟ್ಟಕ್ಕೆ ಕುಳ್ಳಿರಿಸಿ, ಆ ಮುದ್ದನು ತಾನೇ ರಾಜ್ಯದ ಯಾವತ್ತೂ ಆಡಳಿತವನ್ನು ಸಾಗಿಸತೊಡಗಿದನು.

ಇದು ದಳವಾಯಿ ಭರಮಪ್ಪನ ಮನಸ್ಸಿಗೆ ಬರಲಿಲ್ಲ; ಯಾಕಂದರೆ ದೊಣ್ಣೆ ರಂಗಪ್ಪ ನಾಯಕನಿಗೆ ಗಂಡು ಸಂತತಿಯು ಇರದೆ, ಆತನಿಗೆ ಒಬ್ಬ ಹೆಣ್ಣುಮಗಳು ಮಾತ್ರ ಇದ್ದಳು. ಇದನ್ನು ತಿಳಿದು ದಳವಾಯಿ ಭರಮಪ್ಪನು '' ಪಟ್ಟಕ್ಕೆ ಯೋಗ್ಯರು ಬಾರದಿದ್ದರೆ ಸಂಸ್ಥಾನಕ್ಕೆ ಕೇಡು ಒದಗುವದೆಂ''ಬ ವಿವೇಕದಿಂದ, ಯೋಗ್ಯ ಹಕ್ಕುದಾರನನ್ನು ಪಟ್ಟಕ್ಕೆ ಕುಳ್ಳಿರಿಸ ಬೇಕೆಂತಲೂ, ಅರಸನ ತಲೆಗೆ ಪ್ರತಿಯಾಗಿ ಮುದ್ದನ ತಲೆ ತಕ್ಕೊಳ್ಳದೆ ಬಿಡಲಾಗದೆಂತಲೂ ಒಳಸಂಚು ನಡೆಸಹತ್ತಿದನು. ಒಟ್ಟಿಗೆ ಈಗ ಚಿತ್ರದುರ್ಗದ ದಳವಾಯಿಗಳು ಮಹಾ ಪ್ರಬಲರಾಗಿದ್ದರು; ಯಾಕಂದರೆ, ಈವರೆಗಿನ ಬೇರೆ ಬೇರೆ ನಾಯಕರ ಕಾಲದಲ್ಲಿ ಯುದ್ಧ ಪ್ರಸಂಗಗಳು ಮೇಲೆ ಮೇಲೆ ಒದಗಿ ಬಂದದ್ದರಿಂದ, ನಾಯಕರು ದಳವಾಯಿಗಳಿಗೆ ಉಚಿತ ಮೊದಲಾದವನ್ನು ವಿಶೇಷವಾಗಿ ಕೊಟ್ಟು, ಅವರನ್ನು ತಲೆಯಮೇಲೇರಿಸಿ ಕುಳ್ಳಿರಿಸಿ ಕೊಂಡಂತಾಗಿತ್ತು; ಆದ್ದರಿಂದ ಅವರಲ್ಲಿ ಪಕ್ಷಗಳುಂಟಾಗಿ ಆ ಸೇನಾಪತಿಗಳು ಸಿಕ್ಕ ಹಾಗೆ ಗೊಂದಲಹಾಕಹತ್ತಿದರು. ಅವರಲ್ಲಿ ಭರಮಪ್ಪ ದಳವಾಯಿಯೇ ವಿವೇಕಿಯಾಗಿ ತನ್ನ ಪಕ್ಷವನ್ನು ಪ್ರಬಲ ಮಾಡಿಕೊಂಡು, ಗಂಡು ಸಂತತಿಯಿಲ್ಲದ ದೊಣ್ಣೆ ರಂಗಪ್ಪನಾಯಕನನ್ನು ಸೆರೆ ಹಿಡಿದು, ಯೋಗ್ಯ ಹಕ್ಕುದಾರನಾದ ಚಿಕ್ಕಣ್ಣನಾಯಕನ ತಮ್ಮ ಮದಕರಿನಾಯಕನ ಮಗ ಬಿಚ್ಚುಗತ್ತಿ ಭರಮನಾಯಕನನ್ನು ಪಟ್ಟಕ್ಕೆ ಕುಳ್ಳಿರಿಸಿದನು. ಹೀಗೆ ಯೋಗ್ಯ ಹಕ್ಕುದಾರನಾಗಿದ್ದ ಬಿಚ್ಚುಗತ್ತಿ ಭರಮನಾಯಕನಿಗೆ ಪಟ್ಟವು ಹೇಗೆ ದೊರೆಯಿತೆಂಬ ವಿಷಯವನ್ನೇ ಪ್ರಾಮುಖ್ಯವಾಗಿ ಪ್ರಕೃತದ ಕಾದಂಬರಿಯಲ್ಲಿ ವಿವರಿಸಿರುತ್ತದೆ.

# ಎಲ! ಇದೇನು?

ಚಿತ್ರದುರ್ಗದ ಪಶ್ಚಿಮದಿಕ್ಕಿನ ಅರಣ್ಯದೊಳಗಿನದೊಂದು ಗವಿಯು; ಸರಿರಾತ್ರಿಯಾಗಿದೆ. ವಸಂತಋತುವಿನ ವದ್ಯ ಅಷ್ಟಮಿಯ ತಿಥಿಯಾದದ್ದರಿಂದ, ಅರಣ್ಯದಲ್ಲಿ ಕಗ್ಗತ್ತಲು ಮುಸುಕಿದೆ. ನಿರಭ್ರವಾದ ಆಕಾಶಮಂಡಲದಲ್ಲಿ ನಕ್ಷತ್ರಗಳು ಪಳಪಳನೆ ಹೊಳೆಯುತ್ತ ತಮ್ಮ ಪತಿಯಾದ ಚಂದ್ರಮನ ಕತ್ತಲೆಕಳೆಯುವ ಕೆಲಸವನ್ನು ಆತನಿಲ್ಲದಾಗಲೂ ಯಥಾಶಕ್ತಿ ಕೈಕೊಂಡು ತಮ್ಮ ಪವಿತ್ರವಾದ ಸಹಚಾರಿಣೀ ಧರ್ಮವನ್ನು ವ್ಯಕ್ತಮಾಡುತ್ತಲಿವೆ. ಹಗಲ ವ್ಯವಹಾರದ ಪ್ರಾಣಿಗಳು, ತಮ್ಮ ತಮ್ಮ ವ್ಯವಹಾರಮಗ್ನತೆಯಿಂದ ದಣಿದು ನಿದ್ದೆ ಹೋಗಿ, ಶಾಂತತೆಯ ಸಾಮ್ರಾಜ್ಯಕ್ಕೆ ಆಸ್ಪದವನ್ನುಂಟುಮಾಡಿವೆ; ಆದರೆ ರಾತ್ರಿಂಚರಗಳಾದ ಪಶು–ಪಕ್ಷಿ–ಮೃಗ– ಕೀಟಾದಿಗಳ ವ್ಯವಹಾರಗಳಿಂದ ಶಾಂತತೆಯ ಭಂಗವಾಗುತ್ತಿರಲು, "ಹೇಗಿದ್ದರೂ ಸೃಷ್ಟಿಯು ಒಂದಿಲ್ಲೊಂದು ಬಗೆಯಿಂದ ಅಶಾಂತಿಕಾರಕವೇ" ಎಂಬ ತತ್ವವು ವ್ಯಕ್ತವಾಗುತ್ತಲಿದೆ. ಚಿತ್ರದುರ್ಗದ ದುರ್ಗಮವಾದ ಕೋಟೆಯ ಗುಡ್ಡಗಳ ಸಾಲು ಕತ್ತಲೆಯೊಳಗಿನ ಕಾಡಿಗೆಯ ಗುಡ್ಡಗಳ ಸಾಲಿನಂತೆ, ಕಪ್ಪಿನಲ್ಲಿ ಕಪ್ಪಾಗಿ ತೋರುತ್ತಲಿದೆ; ಆದರೂ ಆ ಗುಡ್ಡದ ಸಾಲು, ತನ್ನ ನಾಯಕರ ಕೀರ್ತಿಯ ಹೊಳಪನ್ನು, "ಅಗೋ ಆ ನಕ್ಷತ್ರಗಳ ಹೊಳಪಿನಂತೆ ನಮ್ಮ ನಾಯಕರ ಕೀರ್ತಿಯ ಹೊಳಪು ಜಾಜ್ವಲ್ಯವಾಗಿರುತ್ತದೆ ನೋಡಿರಿ" ಎಂದು ತನ್ನ ಕೋಡಗಲ್ಲ ಕೈಗಳನ್ನೆತ್ತಿ ಲೋಕಕ್ಕೆ ತೋರಿಸುತ್ತಿರುವಂತೆ ಭಾಸವಾಗುತ್ತಲಿದೆ. ವಸಂತಋತುವಿನ ಆ ರಾತ್ರಿಯಲ್ಲಿ ಅತ್ತಿತ್ತ ಸುಳಿಯುತ್ತಿರುವ ನಸುಗಾಳಿಯ ತಂಪು, ಘಮಘಮಿಸುವ ವನಪುಷ್ಪಗಳ ಕಂಪು, ನಿದ್ರಾದೇವಿಯ ಸಾಮ್ರಾಜ್ಯದ ಇಂಪು ಯಥೇಚ್ಛ ಉಂಟಾಗಿರಲು, ಆ ಕಾಳರಾತ್ರಿಯು ಕೂಡ ಪ್ರಾಣಿಗಳಿಗೆ ಸುಖದಾಯಕವೇ ಆಗುತ್ತಲಿದೆ!

ಇಂತಹ ರಾತ್ರಿಯಲ್ಲಿ ಒಬ್ಬ ತರುಣನು ಕಗ್ಗತ್ತಲೆಯ ಒಂದು ಗವಿಯಲ್ಲಿ ಕಂಬಳಿಚಲ್ಲಿಕೊಂಡು ಬಿದ್ದುಕೊಂಡಿದ್ದನು. ತನ್ನ ಮನಸ್ತಾಪದ ಮೂಲಕ ಏನುಮಾಡಿದರೂ ಆತನಿಗೆ ನಿದ್ದೆಯು ಬರಲೊಲ್ಲದು. ವಿಚಾರಗಳ ಗಲಬಿಲಿಯಿಂದ ಆತನ ಮನಸ್ಸು ವ್ಯಗ್ರವಾಗಿತ್ತು. ಆತನು ಒಮ್ಮೆ ಈ ಮಗ್ಗಲಾಗುವನು, ಒಮ್ಮೆ ಆ ಮಗ್ಗಲಾಗುವನು. ಒಮ್ಮೆ ತನ್ನ ಬಳಿಯಲ್ಲಿದ್ದ ಖಡ್ಗವನ್ನು ಹತ್ತರ ತಕ್ಕೊಳ್ಳುವನು, ಒಮ್ಮೆ ದೂರ ಸರಿಸುವನು; ಆತನು ತನ್ನ ಮನಸ್ಸಿನಲ್ಲಿ ಏನೇನೋ ಮನೋರಥಗಳನ್ನು ಕಲ್ಪಿಸುವಾಗ, ಒಮ್ಮೆ ಆತನ ಆ ಮನೋರಥಗಳು ಪೂರ್ಣವಾಗುವಂತೆ ತೋರುವವು, ಒಮ್ಮೆ ಅಶಕ್ಯವಾಗಿ ತೋರುವವು. ಒಮ್ಮೆ ಆತನು ವೀರಾವೇಶದಿಂದ ಅವಡುಗಚ್ಚುವನು, ಒಮ್ಮೆ ನಿರಾಶೆಯಿಂದ ಉಸುರ್ಗರೆಯುವನು. ಹೀಗೆ ಮನಸ್ಸಿನ ವಿವಿಧ ಚೇಷ್ಟೆಗಳಿಂದ ವ್ಯಥಿತನಾಗಿದ್ದ ಆ ತರುಣನು ಚಟ್ಟನೆ ಎದ್ದು ಚಿತ್ರದುರ್ಗದ ಕಡೆಗೆ ಮೋರೆಮಾಡಿ ಕುಳಿತು, ತಡೆಯಲಾರದ ತಾಪದಿಂದ ತನ್ನ ಕುಲಸ್ವಾಮಿನಿಯಾದ ಉತ್ಸವಾಂಬೆಯನ್ನು ಕುರಿತು ನುಡಿದನೇನಂದರೆ–ಉತ್ಸವಾಂಬೇ, ಎಲ್ಲೈ ಆದಿಮಾಯೆಯೇ, ನೀನು ನನ್ನ ಕುಲದೈವತವಲ್ಲವೆ? ನೀನು ನಮ್ಮ ಮೂಲಪುರುಷನಾದ ಕಡುಗಲಿ ಚಿತ್ರನಾಯಕನಿಗೊಲಿದು ಆತನಿಗಾಗಿ ಮೊದಲು

ಉಚ್ಚಂಗಿದುರ್ಗದಲ್ಲಿ ಮೈದೋರಿ, ನಮ್ಮ ಪೂರ್ವಜರಿಂದ ಸೇವೆಗೊಳ್ಳುತ್ತ ಬರಲಿಲ್ಲವೆ? ತಾಯೇ, ನಿನ್ನ ಭಕ್ತವಾತ್ಸಲ್ಯವನ್ನೂ, ಕರುಣಾಶಾಲಿತ್ವವನ್ನೂ ಏನೆಂದು ವರ್ಣಿಸಲಿ? ಮುಂದೆ ನಮ್ಮ ಪೂರ್ವಜರಿಗೆ ನಿನ್ನ ಸೇವೆಗಾಗಿ ಉಚ್ಚಂಗಿದುರ್ಗಕ್ಕೆ ಹೋಗಲಿಕ್ಕೆ ಹರಪನಹಳ್ಳಿಯ ನಾಯಕರಿಂದ ಪ್ರತಿಬಂಧ ಉಂಟಾಗಲು ನಮ್ಮ ಪೂರ್ವಜರಾದ ಗಡ್ಡದ ಮದಕರಿನಾಯಕ ರೆಂಬವರ ಸದ್ಭಾವಕ್ಕೆ ಮೆಚ್ಚಿ, ನೀನು ಅಕ್ಕರೆಯ ಹಡೆದ ತಾಯಿಯಂತೆ ಅವರ ಬೆನ್ನು ಹತ್ತಿ ಚಿತ್ರದುರ್ಗಕ್ಕೆ ಬಂದುಬಿಟ್ಟೆ! ಅಮ್ಮಾ, ಇಂತಹದು ನಿನ್ನ ಭಕ್ತವಾತ್ಸಲ್ಯ! ಇಂತಹದು ನಿನ್ನ ಕರುಣಾಶಾಲಿತ್ವ! ಆದರೆ ತಾಯಿ, ಇಂತಹ ಘನವಂತಳು ನೀನು ಕೆಲಸಕ್ಕೆ ಬಾರದ ನನ್ನನ್ನು, ನಿನ್ನ ಭಕ್ತರಾದ ವೀರನಾಯಕರ ಕುಲದಲ್ಲಿ ಯಾಕೆ ಹುಟ್ಟಿಸಿದೆ ಎಲೈ ದೇವೀ, ನೀನು ರಣಹುಚ್ಚಿ, ನಿನ್ನ ಆ ಭಕ್ತರೂ ರಣಹುಚ್ಚರೇ; ಆದರೆ ಅವರ ವಂಶದ ನಾನು ಮಾತ್ರ ರಣಹೇಡಿಯು! ಛೀ ಛೀ ತಾಯೇ, ಇದು ಸರ್ವಥಾ ಸರಿಯಲ್ಲ ಸರಿಯಲ್ಲ! ನಿನ್ನ ವೀರಭಕ್ತರಾದ ನಾಯಕರ ಕುಲವು ನನ್ನ ಮೂಲಕ ಹೇಡಿಯೆನಿಸಿಕೊಳ್ಳುವದು ನಿನಗೆ ಸಮ್ಮತವೆ–ಭೂಷಣವೆ? ನೀನೇ ಹೇಳು.

ಎಲೈ ರಣರಂಗದಲ್ಲಿ ರಕ್ತದ ಓಕಳಿಯಾಡುವ ರಣರಕ್ಕಸಿಯೇ, ದೇವೀ, ನನ್ನ ಪೂರ್ವಜರು ಒಬ್ಬೊಬ್ಬರು ಎಂತ ಎಂತಹ ಪರಾಕ್ರಮಿಗಳು, ಎಂತ ಎಂತಹ ಬಲಿಷ್ಠರು. ಎಂತ ಎಂತಹ ಸತ್ವಶಾಲಿಗಳು! ನಮ್ಮ ಮೂಲಪುರುಷರಾದ ಚಿತ್ರನಾಯಕರು ದಿಲ್ಲಿಯ ಬಾದಶಹ ನಲ್ಲಿಯ ಮದ್ದಾನೆಯ ಸೊಂಡಿಲು ಹಿಡಿದು ಹಣಿದು ಅದರ ಮದವಿಳಿಸಿ ಅದನ್ನು ನಾಯಿಯಾಗ ಮಾಡಿದರು! ಅವರ ಮೊಮ್ಮಗ ತಿಮ್ಮನಾಯಕರಂತು, ಅಭಿಮನ್ಯುವಿಗೆ ಸಮಾನವಾದ ಪರಾಕ್ರಮ ವುಳ್ಳವರು! ತಾಯಿ, ಆ ವೀರಪುಂಗವ ತಿಮ್ಮನಾಯಕನು ತನ್ನ ಬಲ ಅಂಗೈಯಲ್ಲಿ ತನ್ನ ಶತ್ರುವಾದ ಸಾಳ್ವ ನರಸಿಂಹನ ಕುದುರೆಯ ಗೂಟವು ನಟ್ಟು ಪಾರಾಗಿ ನೆಲದಲ್ಲಿ ಸೇರಿರಲು, ತನ್ನ ಟೊಂಕದಲ್ಲಿಯ ಕಿರಿಗತ್ತಿಯಿಂದ ತನ್ನ ಆ ಬಲ ಅಂಗೈಯ ಮಣಿಕಟ್ಟನ್ನೇ ಸದ್ದಿಲ್ಲದೆ ಎಡಗೈಯಿಂದ ಕೊಯ್ದು ಕೊಂಡು, ತನ್ನ ಆ ಮುಂಡಕೈಗೆ ತಲೆಯ ಮುಂಡಾಸ ಸುತ್ತಿ, ಆ ವೈರಿಯ ಕುದುರೆಯನ್ನು ಬಿಚ್ಚಿಕೊಂಡು ದುರ್ಗವನ್ನು ಸೇರಿದನು! ಜಗನ್ಮಾತೇ, ಮುಂದೆ ಅದೇ ಸಾಳ್ವ ನರಸಿಂಹನ ಆನೆಯು ನಮ್ಮ ಚಿತ್ರದುರ್ಗದ ಕೆರೆಯಲ್ಲಿ ನೀರು ಕುಡಿಯುತ್ತಿರಲು, ಆ ನಮ್ಮ ತಿಮ್ಮನಾಯಕನು ಕಾಲಲ್ಲಿ ಧನುಸ್ಸನ್ನು ಮೆಟ್ಟಿ, ಎಡಗೈಯಿಂದ ಅದರ ಹೆದೆಯನ್ನು ಕಿವಿಯವರೆಗೆ ಜಗ್ಗಿ, ಆನೆಯ ಹಣೆಗೆ ಗುರಿಯಿಟ್ಟು ಬಾಣಬಿಟ್ಟು ಆನೆಯನ್ನು ನೆಲಕ್ಕುರುಳಿ ಸಲಿಲ್ಲವೆ?! ಅಹಹ! ತಾಯಿ, ನಿನ್ನ ಆ ವೀರಭಕ್ತನ ಸಹನಗುಣವೇನು, ಆತನ ಸಾಹಸವೇನು, ಆತನ ಬಲವೇನು! ಅಂಥವನ ವಂಶದಲ್ಲಿ ನನ್ನಂಥ ಹೇಡಿಯು ಹುಟ್ಟಬೇಕೇ?

ಎಲೈ ಸರ್ವಾಧಾರಳೇ, ತಾಯಿ, ಇದರಂತೆ ನಮ್ಮ ದುರ್ಗದ ಎರಡನೆಯ ದೊರೆ ಓಬಣ್ಣನಾಯಕರು, ಶ್ರೀ ಸಿದ್ಧಪುರುಷರ ಕೃಪೆಗೆ ಪಾತ್ರರಾಗಿ, ತಮ್ಮ ಪ್ರತಾಪದಿಂದ ವಿಜಯನಗರದ ರಾಯರ ಅನ್ಯಾಯದ ಆಧಿಪತ್ಯವನ್ನು ಬದಿಗೊತ್ತಿ ಸ್ವತಂತ್ರರಾದರು. ಅವರ ಮಗ ಮೂರನೆಯ ದೊರೆ ಕಸ್ತೂರಿ ರಂಗಪ್ಪನಾಯಕರು, ನೆರೆಹೊರೆಯ ನಾಯಕರನ್ನು ಬಗ್ಗು ಬಡಿದು ಆಶ್ರಯಬೇಡಬಂದವರಿಗೆ ಮಹದಾಶ್ರಯವಿತ್ತು ಕಸ್ತೂರಿಯ ವಾಸನೆಯಂತೆ ತಮ್ಮ

ಕೀರ್ತಿಯನ್ನು ಪಸರಿಸಿ ಪ್ರತಾಪಶಾಲಿಯೂ, ಧರ್ಮಮೂರ್ತಿಯೂ, ಆಶ್ರಯದಾತೃವೂ ಎನಿಸಿಕೊಳ್ಳಲಿಲ್ಲವೆ? ಅದರಂತೆ ನಾಲ್ಕನೆ ದೊರೆ ಗಡ್ಡದ ಮದಕರಿನಾಯಕರ ಪ್ರತಾಪ, ಧರ್ಮನಿಷ್ಠೆ, ಮಹದಾಶ್ರಯ ಇವುಗಳ ಬಣತಿಗೆ ಮೆಚ್ಚಿಯೇ ನೀನು ಉಚ್ಚಂಗಿದುರ್ಗದಿಂದ ಚಿತ್ರದುರ್ಗಕ್ಕೆ ಬಂದದ್ದು! ಈ ದಾನಶೌಂಡ ನಾಯಕನೇ ಸ್ಮಾರ್ತವೈಷ್ಣವ ಸ್ವಾಮಿಗಳೆಲ್ಲರನ್ನು ಭಕ್ತಿಯಿಂದ ತನ್ನ ಸಂಸ್ಥಾನಕ್ಕೆ ಬರಮಾಡಿಕೊಂಡು, ಅವರ ಆದರ ಸತ್ಕಾರ ಪೂಜಾದಿಗಳನ್ನು ಮಾಡಿ ಅವರಿಗೆ ಮಠಗಳನ್ನು ಕಟ್ಟಿಸಿಕೊಟ್ಟು ಸ್ವಾಸ್ತಿ–ವೃತ್ತಿಗಳನ್ನು ಹಾಕಿಕೊಟ್ಟನು. ಲೋಕಮಾತೇ, ಮತ್ತಿಯ ಮನೆತನದ ನಿನ್ನ ಈ ಭಕ್ತರು ಇಂತಹ ವೀರಶಿರೋಮಣಿಗಳು, ಇಂತಹ ಬಲಿಷ್ಠರು, ಇಂತಹ ದಾನಶೌಂಡರು, ಇಂತಹ ಧರ್ಮಿಷ್ಠರು! ಆದರೆ ಅದೇ ವಂಶದ ನಾನು ಮಾತ್ರ ಯಾವ ಕೆಲಸಕ್ಕೂ ಬಾರದ ಅಧಮಾಧಮನು!

ತಾಯೇ, ನಾನು ಅಧಮಾಧಮನಲ್ಲದೆ ಮತ್ತೇನು? ನಮ್ಮ ಸೇನಾನಾಯಕರಲ್ಲಿ ಈಗ ಪ್ರಮುಖನೆನಿಸಿರುವ ಪಂಚಮ ಮುದ್ದನೆಂಬ ದಳವಾಯಿಯು, ನನ್ನ ಅಜ್ಜಂದಿರಾದ ಐದನೆಯ ದೊರೆ ಓಬಣ್ಣನಾಯಕರನ್ನು ಸ್ವಾರ್ಥದ ಮೂಲಕ ಕೊಲ್ಲಿಸಿದನು! ಮುಂದೆ ಆರನೆಯ ದೊರೆ ಚಿಕ್ಕನಾಯಕನ ಮಗ ಏಳನೆಯ ದೊರೆ ಮದಕರಿನಾಯಕನನ್ನು ಸೆರೆಯಲ್ಲಿಟ್ಟು ಕೊಲ್ಲಿಸಿ ತನಗೆ ಬೇಕಾದವನಾಗಿದ್ದ ಗಂಡು ಸಂತತಿಯಿಲ್ಲದ ದೊಣ್ಣೆ ರಂಗಪ್ಪನಾಯಕನನ್ನು ಪಟ್ಟಕ್ಕೆ ಕುಳ್ಳಿರಿಸಿ ಈಗ ತಾನೇ ನಾಯಕತನವನ್ನು ಆಕ್ರಮಿಸಿರುವನು! ಎಲೈ ಜನನೀ, ಆ ದುಷ್ಟ ದಳವಾಯಿ ಮುದ್ದನು ಇಷ್ಟಕ್ಕೇ ಸುಮ್ಮನಿರದೆ, ನಿಜವಾದ ಹಕ್ಕುದಾರನಾಗಿರುವ ನನ್ನೊಬ್ಬನನ್ನು ಕೊಲ್ಲಿಸಿ, ತಾನು ನಿಷ್ಕಂಟಕನಾಗಬೇಕೆನ್ನುತ್ತಿರುವನು! ಆದರೆ ತಾಯಿ, ಚಿತ್ರನಾಯಕನ ವಂಶಜನೆನಿಸುವ ನಾನು, ಮುದ್ದನನ್ನು ಹಿಂಡಿ ಅವನ ರಕ್ತವ ಜೋರಿಕ್ಕಿಸದೆ ಹೇಡಿಯಂತೆ ತಲೆತಪ್ಪಿಸಿಕೊಂಡು ಬಂದು ಈ ಕತ್ತಲೆಯ ಗುಪ್ತಗವಿಯಲ್ಲಿ ತಳಮಳಿಸುತ್ತ ಕುಳಿತಿರುವೆನಲ್ಲ! ಜಗದಂಬೇ, ಈ ಹೇಡಿತನದ ಬಾಳು ನಾಯಿಯ ಬಾಳಲ್ಲವೆ? ಹಾಹಾ! ಏನು ಮಾಡಲಿ? ಆ ಮುದ್ದನ ಅನ್ಯಾಯದ ನಡತೆಯನ್ನು ನೆನಿಸಿದರೆ, ನನ್ನ ಸರ್ವಾಂಗವು ತಪ್ತವಾಗಿ, ಇಗೋ, ''ಈ ಬಿಚ್ಚು ಗತ್ತಿಯಿಂದ ಅವನ ರುಂಡವನ್ನು ಈಗಲೇ ತುಂಡರಿಸಲಾ,'' ಅನ್ನುವಹಾಗೆ ಆಗುತ್ತದೆ; ಆದರೆ ಉಪಾಯವೇನು? ಹೊಟ್ಟೆಯಲ್ಲಿಯ ಸಿಟ್ಟು ರಟ್ಟೆಯಲ್ಲಿ ಇಲ್ಲದಾಗಿದೆ! ತಾಯಿ, ನನ್ನ ಪಾಲಿಗೆ ನನ್ನ ಈ ಬಿಚ್ಚುಗತ್ತಿಯೊಂದೇ ಸಹಾಯಕವಾಗಿದ್ದು, ನನ್ನ ಆ ವೈರಿ ಮುದ್ದನ ಪಾಲಿಗೆ ಆತನ ಪಂಗಡದ ಸಹಸ್ರಾವಧಿ ಬಿಚ್ಚುಗತ್ತಿಗಳು ಸಹಾಯಕವಾಗಿರುತ್ತವೆ. ಅಹಹ! ಎಲೈ ಭವಾನೀ, ನನ್ನ ಈ ವಿಪತ್ಕಾಲದಲ್ಲಿ ನನ್ನ ಪೂರ್ವಜ ನಾಯಕರ ಆ ಪ್ರತಾಪಶಾಲಿಯಾದ ಪ್ರಚಂಡ ಸೈನ್ಯವು ಎತ್ತ ಅಡಗಿರಬಹುದು? ಮತ್ತು ದುರ್ಗಮವಾದ ನಮ್ಮ ಆ ಪ್ರಚಂಡ ಚಿತ್ರದುರ್ಗವು ಎತ್ತ ಮಾಯವಾಗಿರಬಹುದು? ಆದರೆ ತಾಯಿ, ಇಲ್ಲ ಆ ನಮ್ಮ ಪ್ರಚಂಡ ಸೈನ್ಯವು ಅಡಗಿಯೂ ಇರುವದಿಲ್ಲ; ಅವು ಇದ್ದಲ್ಲಿ ಇದ್ದ ಹಾಗೆಯೇ ಇರುತ್ತಿದ್ದು, ಹತಭಾಗ್ಯನು ನಾನು ಮಾತ್ರ ಅವಕ್ಕೆ ಎರವಾಗಿರುತ್ತೇನೆ! ಅಂದಬಳಿಕ ನನ್ನ ಈ ಬಿಚ್ಚುಗತ್ತಿಯಿಂದ ಈಗಾಗುವ ಪ್ರಯೋಜನವೇನು

ಈ ಮೇರೆಗೆ ನುಡಿದು ಆ ವೀರನಾಯಕನು ತನ್ನ ಬಿಚ್ಚುಗತ್ತಿಯನ್ನು ವಿಷಾದದಿಂದ ಬಿಸುಟುವಾಗ ಆತನ ಕಣ್ಣೀರು ಉದುರಿದವು! ಆತನು ದೈನ್ಯದಿಂದ ಮುಖವೆತ್ತಿ ಮತ್ತೆ ತನ್ನ ಆ ಕುಲಸ್ವಾಮಿನಿಯನ್ನು ಕುರಿತು–ತಾಯೇ, ಉತ್ಸವಾಂಬೇ, ನೀನು ಈ ಪಾಮರ ಭಕ್ತನನ್ನು ಹೀಗೆ ಉಪೇಕ್ಷಿಸಬಹುದೆ? ನಿನ್ನ ಕರುಣಾಕಟಾಕ್ಷಕ್ಕೆ ಯಾವದು ತಾನೆ ಅಸಾಧ್ಯವು? ಜಗಜ್ಜನನೀ, ನೀನು ಆದಿಶಕ್ತಿಯಲ್ಲವೆ? ಸೃಷ್ಟಿ ಸ್ಥಿತಿ ಲಯ ಕರ್ತೃಗಳಾದ ಬ್ರಹ್ಮ–ವಿಷ್ಣು–ಮಹೇಶ್ವರರು ಕೂಡ, ನಿನ್ನ ಸಹಾಯವಿಲ್ಲದೆ ತಮ್ಮ ತಮ್ಮ ಸೃಷ್ಟಿ–ಸ್ಥಿತಿ–ಲಯ ಕಾರ್ಯಗಳನ್ನು ಮಾಡಲಾರರು. ಅಂತೇ ಅವರು ನಿನ್ನ ಅನುವರ್ತನಮಾಡಿ ನಿನ್ನ ಆಶ್ರಯ ಪಡೆದಿರಲು, ನೀನು ಸರಸ್ವತೀ ನಾಮದಿಂದ ಬ್ರಾಹ್ಮೀಶಕ್ತಿಯಾಗಿಯೂ, ಲಕ್ಷ್ಮೀನಾಮದಿಂದ ವೈಷ್ಣವೀಶಕ್ತಿಯಾಗಿಯೂ, ಪಾರ್ವತೀನಾಮ ದಿಂದ ಶೈವೀಶಕ್ತಿ ಯಾಗಿಯೂ ಪರಿಣಮಿಸಿ, ಅವರವರನ್ನು ಆಶ್ರಯಿಸಿರುವೆ. ಎಲೈ ಆದಿಮಾಯೆಯೇ, ನಿನ್ನ ಆಶ್ರಯವಿಲ್ಲದೆ ಈ ಜಗತ್ತಿನಲ್ಲಿ ಯಾವ ಜೀವಿಯು ತಾನೆ ಕಾಲೂರಿ ನಿಂತು ಜೀವಿಸೀತು? ಹೀಗೆ ಸರ್ವಾಧಾರೆಯೂ, ಸರ್ವಪೋಷಕಳೂ, ಸರ್ವರಕ್ಷಕಳೂ ಆದ ನೀನು, ನನ್ನ ವಿಷಯವಾಗಿ ಉದಾಸೀನಭಾವತಾಳಿದರೆ ನನ್ನ ಗತಿಯೇನು? ತಾಯಿ, ಗತಿವಿಹೀನರಿಗೆ ನೀನೇ ಗತಿಯಲ್ಲವೆ? ನನ್ನ ವಿಷಯದ ನಿನ್ನ ಉದಾಸೀನತೆಯಿಂದ ನನ್ನ ದೇಹಶಕ್ತಿಯು ಕುಗ್ಗಿರುವದು, ನನ್ನ ಬುದ್ಧಿಶಕ್ತಿಯು ಮುಸುಕಿಸಿರುವದು,ನನ್ನ ವಿಚಾರಶಕ್ತಿಯು ಕುಂಠಿಸಿರುವದು! ಹೀಗೆ ಸರ್ವಶಕ್ತಿ ಹೀನನಾಗುತ್ತ ನಡೆದಿರುವ ನಾನು, ಭೂಮಿಗೆ ಭಾರವಾಗಿ ಬದುಕುವದಾದರೂ ಯಾತಕ್ಕೆ?

ಈ ಮೇರೆಗೆ ನುಡಿದು ಆ ವೀರನು ಏಕಾಗ್ರ ಮನಸ್ಸಿನಿಂದ ದೇವಿಯನ್ನು ಧ್ಯಾನಿಸುತ್ತ ಕಣ್ಣುಮುಚ್ಚಿಕೊಂಡು ಸುಮ್ಮನೆ ಕುಳಿತುಬಿಟ್ಟನು. ಹೀಗೆ ಕೆಲವು ಹೊತ್ತು ಕುಳಿತುಕೊಂಡಮೇಲೆ, ಆ ಭಕ್ತಶ್ರೇಷ್ಠನಲ್ಲಿ ದೇವಿಯ ಸಂಚಾರವಾದಂತಾಗಿ ಆತನು ಆವೇಶದಿಂದ ಮತ್ತೆ ತನ್ನ ಕುಲಸ್ವಾಮಿನಿಯನ್ನು ಕುರಿತು–ಏನು ಭಗವತೀ, ವೀರಾಗ್ರೇಸರ ತಿಮ್ಮನಾಯಕನ ವಂಶಜನು ನಾನು, ನಿನ್ನಂತಹ ರಣಹುಚ್ಚಿಸ್ವಾಮಿನಿಯ ಮುಂದೆ ಹೀಗೆ ಕಣ್ಣೀರು ಸುರಿಸುತ್ತ ಕುಳಿತು ಕೊಳ್ಳುವದು ಯೋಗ್ಯವೇ? ತಾಯೇ, ಕ್ಷಮಿಸು ಕ್ಷಮಿಸು! ನನ್ನ ಈ ಕಣ್ಣೀರು ನಮ್ಮ ಪೂರ್ವಜರ ಉಗ್ರ ಕ್ಷಾತ್ರ ತೇಜಸ್ಸಿಗೆ ಸರ್ವಥಾ ಒಪ್ಪುವುದಿಲ್ಲ. ವೀರಸ್ವರ್ಗದಲ್ಲಿ ಪ್ರಕಾಶಿಸುತ್ತಿರುವ ಆ ನಮ್ಮ ಪೂರ್ವಜರು, ನನ್ನ ಈ ಅಳಬುರಕತನಕ್ಕಾಗಿ ನನ್ನನ್ನು ತಿರಸ್ಕರಿಸುತ್ತಿರಬಹುದು; (ತನ್ನ ಬಿಚ್ಚುಗತ್ತಿಯನ್ನು ನೋಡಿ) ಆದ್ದರಿಂದ ಎಲೈ ಮಸೆದು ಹರತಾಗಿದ್ದ ನನ್ನ ಬಿಚ್ಚುಗತ್ತಿಯೇ, ಬಾ, ನನ್ನ ಕೈಯಲ್ಲಿ ಬಾ; ಅನಾಥನಂತೆ ಹೀಗೆ ಯಾಕೆ ಸಿಕ್ಕಲ್ಲಿ ಬಿದ್ದುಕೊಂಡಿರುತ್ತೀ? ಈ ವೀರಭರಮನಾಯಕನ ಬಿಚ್ಚುಗತ್ತಿಯು ನೀನು, ವೈರಿಗಳ ಬಿಸಿಬಿಸಿ ರಕ್ತವನ್ನು ಕುಡಿಯುವದಕ್ಕಾಗಿ ತಟ್ಟನೆ ನನ್ನ ಕೈಯಲ್ಲಿ ಬಂದುಬಿಡು! ಎಂದು ನುಡಿದು, ಆ ಕನ್ನಡವೀರನು ತನ್ನ ಕತ್ತಿಯನ್ನು ಕೈಯಲ್ಲಿ ತಕ್ಕೊಂಡು, ಅದನ್ನು ಮುಷ್ಟಿಯಲ್ಲಿ ಗಟ್ಟಿಯಾಗಿ ಹಿಡಿದು ಝಳಪಿಸುತ್ತ ಗವಿಯ ಹೊರಗೆ ಬಂದು ನಿಂತುಕೊಂಡನು. ಆಗ ಆತನ ಸುಂದರ ರೂಪವು ಉಗ್ರವಾಯಿತು. ಆತನ ಆ ಉಗ್ರತೆಯೊಡನೆ ಆತನ ಭವ್ಯವಾದ ಆಕಾರವನ್ನೂ ಮುಂಡೆದಿರುಗಿದ ಆತನ ನಿಡಿದೋಳು

ಗಳನ್ನೂ, ರಾಜಚಿಹ್ನಗಳು ಉಕ್ಕಿ ಹೊರ ಸೂಸುವ ಆತನ ಗಂಭೀರವಾದ ಚಲುವ ಮೋರೆಯನ್ನೂ, ಮೈಯಲ್ಲಿ ನಡುವಂತೆ ತೊಟ್ಟಿದ್ದ ಆತನ ಬಡತನದ ಬಿಗಿಯಾದ ಕಸಿಅಂಗಿಯನ್ನೂ, ಬಿಗಿದು ಏರಿಸಿ ಹಾಕಿದ ಆತನ ವೀರಕಾಸಿಯನ್ನೂ, ಹೆಗಲ ಮುಚ್ಚಿ ಅತ್ತಿತ್ತ ಹರವಿದ್ದ ಆತನ ರಣಗೂದಲುಗಳನ್ನೂ, ಅದೇ ಮೂಡಿರುವ ಆತನ ಮಕಮೀಸೆಯನ್ನೂ ನೋಡುವವರಿಗೆ, ಕೈಯಲ್ಲಿ ಹೊಳೆಯುತ್ತಿರುವ ಆತನ ಬಿಚ್ಚುಗತ್ತಿಯನ್ನು ನೋಡುವವರಿಗೆ, ಆ ತರುಣವೀರನು ಅಸಾಮಾನ್ಯ ಪುರುಷನೆಂದು ಒಡೆದುಕಾಣಬಹುದಾಗಿತ್ತು! ಆದರೆ ಆ ಕಗ್ಗತ್ತಲೆಯ ಮಧ್ಯರಾತ್ರಿಯ ಅರಣ್ಯದಲ್ಲಿ ಆತನನ್ನು ಯಾರು ನೋಡಬೇಕು?

ಹೀಗೆ ಗವಿಯಿಂದ ಹೊರಬಿದ್ದ ವೀರನಾದ ಬಿಚ್ಚುಗತ್ತಿಯ ಭರಮನಾಯಕನು, ನಿರ್ಮಲವಾದ ಆಕಾಶವನ್ನು ನೋಡಿ ಉಲ್ಲಾಸಗೊಂಡು—"ಎಲ! ನನ್ನಂತಹ ವೀರನು ಅನ್ಯರ ಸಹಾಯವನ್ನು ಇಚ್ಛಿಸಬಹುದೆ? ನನ್ನ ಕುಲಸ್ವಾಮಿನಿಯಾದ ಉತ್ಸವಾಂಬೆಯೊಬ್ಬಳು ನನ್ನ ಬೆನ್ನಲ್ಲಿರಲೆಂದರಾಯಿತು; ನಾನು ಬೇಕಾದಂಥ ಅಸಾಧ್ಯಕಾರ್ಯಗಳನ್ನಾದರೂ ಮಾಡುವೆನು! ಹಿಂದಕ್ಕೆ ಲೋಕೈಕವೀರನಾದ ಅರ್ಜುನನು ಉತ್ತರಗೋಗ್ರಹಣದಲ್ಲಿ ಒಬ್ಬನೇ ತನ್ನ ದೇವೀಶಕ್ತಿಯಿಂದ ಕೌರವ ಸೈನ್ಯದೊಡನೆ ಕಾದಿ ವಿಜಯಿಯಾಗಲಿಲ್ಲವೆ? ಅತುಲ ಬಲಶಾಲಿಯಾದ ಭೀಮಸೇನನು ರುದ್ರಾವೇಶದಿಂದ ಜಗತ್ತನ್ನೇ ತೃಣೀಕರಿಸಿ, ದುರುಳ ದುಃಶ್ಯಾಸನನ ಕರುಳನ್ನು ಒಬ್ಬನೇ ಬಗಿಯಲಿಲ್ಲವೆ? ವೀರ ಅಭಿಮನ್ಯುವು ಒಬ್ಬನೇ ದ್ರೋಣಕರ್ಣಾದಿ ಆರುಜನ ಅತಿರಥಿ–ಮಹಾರಥಿಗಳೊಡನೆ ಶ್ರೀಕಷ್ಣನ ಕೃಪೆಯ ಬಲದಿಂದ ಕಾದಿ ಅಂಜಿಕ್ಯನೆನಿಸಿಕೊಳ್ಳಲಿಲ್ಲವೆ? ಅಷ್ಟು ದೂರವೇಕೆ, ನಮ್ಮ ಪೂರ್ವಜರಾದ ಚಿತ್ರನಾಯಕ–ತಿಮ್ಮನಾಯಕರು ಕೂಡ ಒಬ್ಬೊಬ್ಬರೇ ತೋರಿಸಿದ ದೈವೀತೇಜಸ್ಸಿನ ಪರಾಕ್ರಮವು ಸರ್ವಸಾಮಾನ್ಯವಾದದ್ದೇ! ಅದರಂತೆ, ನಾನೂ ಈಗ ಒಬ್ಬನೇ ದೇವಿಯ ಕೃಪೆಯಿಂದ ಚಿತ್ರದುರ್ಗವನ್ನು ಹೊಕ್ಕು ಆ ದುಷ್ಟ ಮುದ್ದನ ಚಂಡನ್ನು ಈ ನನ್ನ ಬಿಚ್ಚುಗತ್ತಿಯಿಂದ ತುಂಡರಿಸಿ ಆತನ ಸೇಡು ಯಾಕೆ ತೀರಿಸಿಕೊಳ್ಳಲಾರೆನು? ಈ ಕೆಲಸವು ನನ್ನಿಂದ ಆಗಿಯೇ ಆಗುವದು; ಯಾಕಂದರೆ, ವೀರಕುಲದ ಈ ಬಿಚ್ಚುಗತ್ತಿಯ ಭರಮನಾಯಕನು ನಾನು, ಚಿತ್ರದುರ್ಗದ ಹಕ್ಕುದಾರನಾದ ದೊರೆಯು; ಆದರೆ ಮುದ್ದನು ನನ್ನ ಸೇವಕನಾದ ದಳವಾಯಿಯು; ಅಂದಬಳಿಕ ಅಪರಾಧಿಯಾದ ನನ್ನ ಆ ಸೇವಕನನ್ನು ಶಿಕ್ಷಿಸದಿದ್ದರೆ, ನಾನೆಂಥ ನಾಮಧಾರಿ ದೊರೆಯು!

ಹೀಗೆ ನುಡಿದು ಭರಮನಾಯಕನು ರಭಸದಿಂದ ದುರ್ಗದ ಕಡೆಗೆ ಸಾಗುತ್ತಿರಲು, ಆಗ ಜಗತ್ತಿನ ಹಂಗು ಆತನಿಗೆ ಇದ್ದಂತೆ ತೋರಲಿಲ್ಲ; ಆಗ ಆತನು ತಾನೇ ತಾನಾಗಿದ್ದನು; ಕಗ್ಗತ್ತಲೆಯಲ್ಲಿ ಆತನು ತಡವರಿಸಲಿಲ್ಲ; ಹುಳಹುಪ್ಪಡಿಗಳನ್ನು ಆತನು ಲಕ್ಷಿಸಲಿಲ್ಲ; ಕ್ರೂರಮೃಗಗಳಿಗೆ ಆತನು ಬೆದರಲಿಲ್ಲ; ಭೂತಪಿಶಾಚಗಳ ಲಕ್ಷವು ಆತನಿಗಿರಲಿಲ್ಲ! ಅಹಹ! ಚಿತ್ರದುರ್ಗದ ನಾಯಕರ ಎದೆಯೇ ಅಷ್ಟು ಕೆಚ್ಚುಗಟ್ಟಿದ್ದು! ಯಾತರ ಅಂಜಿಕೆಯೂ ಅವರ ಹೃದಯವನ್ನು ಸೋಂಕಲಾರದು. ಅವರ ಉಗ್ರ ಕ್ಷಾತ್ರತೇಜಸ್ಸಿನ ಒಗರು, ಅವರ ಎಣೆಯಿಲ್ಲದ ತೋಳಬಲದ ಹೆಮ್ಮೆ, ಅಪೂರ್ವವಾದ ಅವರ ಕಾದುವ ಕರಾಮತಿ–ಕೈಚಮತಗಳ ನಂಬಿಗೆ,

ಇವು ಅಚ್ಚಳಿಯದಂತಹವು! ಹೀಗೆ ಆ ಕನ್ನಡ ಕಲಿಯು ಮುಂದಕ್ಕೆ ಸಾಗಿಬರುತ್ತಿರಲು, ಆತನ ಮುಂದುಗಡೆಯಲ್ಲಿ ಯಾರೋ ಸುಳಿದಂತೆ ಆತನಿಗೆ ಭಾಸವಾಯಿತು. ಆಗ ಆತನು ಸ್ವಲ್ಪಹೊತ್ತು ನಿಂತು ನಾಲ್ಕೂಕಡೆಗೆ ದಿಟ್ಟಿಸಿ ನೋಡಿದನು. ಆದರೆ ಆತನಿಗೆ ಯಾರ ಸುಳಿವೂ ಹತ್ತಲಿಲ್ಲ! ಯಾವದಾದರೂ ಕಾಡಮೃಗವು ಸುಳಿದಿರಬಹುದೆಂದು ತಿಳಿದು,ಆತನು ಎಗ್ಗಿಲ್ಲದೆ ಹಾಗೆಯೇ ಮುಂದಕ್ಕೆ ಸಾಗಿದನು. ಹೀಗೆ ಸ್ವಲ್ಪದೂರ ಮುಂದಕ್ಕೆ ಹೋಗುತ್ತಿರಲು, ಆತನಿಗೆ ಒಂದು ಹಳ್ಳವು ಹತ್ತಿತು. ಆಗ ಆತನು ಹಳ್ಳವನ್ನು ಇಳಿಯುತ್ತಿರುವಾಗ, ಮನುಷ್ಯರ ಸಿಳ್ಳಿನ ಸಪ್ಪಳವು ಆತನಿಗೆ ಕೇಳಿಸಿತು.

ಆಗ ಎದೆಗಾರನಾದ ಭರಮನಾಯಕನು ನಡಹಳ್ಳದಲ್ಲಿ ನಿಂತು ಮುಷ್ಟಿಯಲ್ಲಿ ತನ್ನ ಬಿಚ್ಚುಗತ್ತಿಯನ್ನು ಒತ್ತಿಹಿಡಿದು ಗದ್ದರಿಸಿ— ''ಯಾವನವನು?'' ಎಂದು ಕೇಳಿದನು. ಅಷ್ಟರಲ್ಲಿ ಇಪ್ಪತ್ತು ಇಪ್ಪತ್ತೈದು ಜನರು ನಾಯಕನನ್ನು ಸುತ್ತುಗಟ್ಟಿದರು. ಆಗ ಅವರಲ್ಲಿಯ ಒಬ್ಬನು ನಾಯಕನನ್ನು ಕುರಿತು— ''ಇಷ್ಟು ರಾತ್ರಿಯಲ್ಲಿ ದುರ್ಗದಕಡೆಗೆ ಬರುತ್ತಿರುವವನು ನೀನು ಯಾರು? ಕಳ್ಳನಂತೆ ಗವಿಯಲ್ಲಿ ಅಡಗಿಕೊಂಡು ಇರಲಿಕ್ಕೆ ನಿನಗೆ ನಾಚಿಕೆ ಬರುವದಿಲ್ಲವೆ?'' ಎಂದು ಕೇಳಿದನು. ಆಗ ಭರಮನಾಯಕನು ದನಿಯ ಮೇಲಿಂದ, ''ಈತನು ದಳವಾಯಿ ಮುದ್ದನೇ''ಎಂದು ಗೊತ್ತುಹಿಡಿದು, ಆತನನ್ನು ಕುರಿತು ಸಂತಾಪದಿಂದ—''ಎಲೇ ಮುದ್ದಾ, ರಾಜದ್ರೋಹಿಯಾದ ದಳವಾಯಿ, ಇಂದು ನೀನು ಅನಾಯಾಸವಾಗಿ ನನ್ನ ಕೈಯಲ್ಲಿ ಸಿಕ್ಕೆ; ನಿನ್ನನ್ನು ಸಿಕ್ಕಲ್ಲಿ ತುಂಡರಿಸಬೇಕೆಂತಲೇ ನಾನು ಈಗ ದುರ್ಗಕ್ಕೆ ಬರುತ್ತಿದ್ದೆನು. ಆದರೆ ನೀನಂದಂತೆ ನಾನು ಕಳ್ಳತನದಿಂದ ಮಾತ್ರ ಗವಿಯಲ್ಲಿ ಅಡಗಿಕೊಂಡಿರುವದಿಲ್ಲ. ಹೊಂಚುಹಾಕಿ ನಿನ್ನನ್ನು ಕೊಂದು ಸೇಡುತೀರಿಸಿಕೊಳ್ಳಬೇಕೆಂಬ ರೊಚ್ಚಿನಿಂದಲೇ ನಾನು ಈವರೆಗೆ ಮೃಗರಾಜ ಸಿಂಹನಂತೆ ಜಪ್ಪು ಹಾಕಿ ಗವಿಯಲ್ಲಿ ಕುಳಿತುಕೊಂಡಿದ್ದೆನು; ಅಧಮಾ, ನಮ್ಮ ಉತ್ಸವಾಂಬೆಯು ಇಂದು ನಿನ್ನನ್ನು ನನ್ನ ಕೈಯಲ್ಲಿ ಹಿಡಿದುಕೊಟ್ಟಂತಾಗಿರುವದು.'' ಎಂದು ನುಡಿದು, ಆ ವೀರನು ಸಿಂಹನಂತೆ ಪುಟನೆಗೆದು ತನ್ನ ಆ ವೈರಿಗಳ ಮೇಲೆ ಬಿದ್ದು ತನ್ನ ಬಿಚ್ಚುಗತ್ತಿಯಿಂದ ಏಟಿನ ಮೇಲೆ ಏಟುಹಾಕಿ ನಾಲ್ವರನ್ನು ಒಮ್ಮೆಲೆ ನೆಲಕ್ಕೆ ಉರುಳಿಸಿದನು! ಆ ಕಡುಗಲಿಯು ಇನ್ನುಳಿದವರ ಸಮಾಚಾರವನ್ನು ತೆಗೆದುಕೊಳ್ಳಬೇಕನ್ನುತ್ತಿರುವಷ್ಟರಲ್ಲಿ, ಪ್ರತಿಕಕ್ಷಿಗಳೆಲ್ಲರೂ ಒಮ್ಮೆಲೆ ಆತನನ್ನು ಮುತ್ತಿ ಕಾದತೊಡಗಿದರು; ಆದರೆ ಮಹಾವೀರನೂ, ಯುದ್ಧಕಲಾ ನಿಪುಣನೂ, ಅತ್ಯಂತ ಬಲಶಾಲಿಯೂ ಆದ ಭರಮನಾಯಕನು, ಅವರ ಲಕ್ಷವಿಲ್ಲದೆ ಅವರೊಡನೆ ಕಾದತೊಡಗಿದನು. ಶ್ರೀಉತ್ಸವಾಂಬೆಯು ತನ್ನ ಬೆಂಗಾವಲಿಗಿರುವಳೆಂಬ ನಂಬಿಗೆಯುಳ್ಳ ಆ ವೀರನಿಗೆ, ಯಾತರ ಭಯವೂ ಇದ್ದಿಲ್ಲ; ಆದರೆ ಸ್ವಾಮಿದ್ರೋಹಿಯಾಗಿದ್ದ ಮುದ್ದನ ಎದೆಯು ಮಾತ್ರ ಭರಮನಾಯಕನ ಶೌರ್ಯವನ್ನು ನೋಡಿ ಕಂಪಿಸತೊಡಗಿತ್ತು! ಈ ಸ್ಥಿತಿಯಲ್ಲಿ ದಳವಾಯಿ ಮುದ್ದನು ಭರಮನಾಯಕನನ್ನು ಕುರಿತು— ''ನಾಯಕಾ, ಸುಮ್ಮನೆ ಯಾಕೆ ಹೆಣಗುವೆ? ಇಪ್ಪತ್ತು ಜನರಿಗೆ ನೀನು ಒಬ್ಬನು ಈಡೇ? ಕೆಳಗೆ ಖಡ್ಗವಿಟ್ಟು, ಶರಣು ಬಾ, ನಿನಗೆ ಜೀವದಾನ ಕೊಡುವೆನು'' ಎಂದು ನುಡಿಯಲು, ಅದಕ್ಕೆ ಭರಮನಾಯಕನು— ''ದುಷ್ಟಾ, ಮುದ್ದಾ ನಿನ್ನ ಕೊಲೆಗಡಕತನವು ಯಾರೂ ಅರಿಯದ್ದಲ್ಲ. ನೀನು ಒಬ್ಬನನ್ನಲ್ಲ ಇಬ್ಬರು

ದೊರೆಗಳನ್ನು ಕೊಂದಿರುವೆ! ಎಲೈ ಮುದ್ದಾ, ನೀನು ಶೂರನಲ್ಲ, ಕೊಲೆಗಡಕನು. ನಿನ್ನಂಥ ನೀಚನಿಗೆ ಕ್ಷತ್ರಿಯನು ನಾನು ಶರಣು ಬಂದು ನರಕಕ್ಕೆ ಇಳಿಯಲಾ? ನಿನಗೆ ಶರಣುಹೋಗಿ ಹೇಡಿತನದಿಂದ ಬದುಕುವದಕ್ಕಿಂತ, ನಿನ್ನನ್ನು ಕೊಂದು ರಾಜ್ಯವನ್ನಾಗಲಿ, ಯುದ್ಧದಲ್ಲಿ ಮಡಿದು ವೀರಸ್ವರ್ಗವನ್ನಾಗಲಿ ಪಡೆಯುವದು ಶ್ರೇಯಸ್ಕರವು! ಮುದ್ದಾ, ತಿಮ್ಮನಾಯಕರ ಪುಣ್ಯವು ತೀರಿದ್ದರೆ,ಯಾರು ಮಾಡುವದೇನು? ನಾನು ಯುದ್ಧದಲ್ಲಿ ಮಡಿದಮೇಲೆ, ನೀನು ಈಗ ನೆವಕ್ಕೆ ಕುಳ್ಳಿರಿಸಿರುವ ದೊರೆಯನ್ನು ಕೊಂದು, ನೀನೇ ಚಿತ್ರದುರ್ಗದ ನಾಯಕನಾಗುವೆಯಂತೆ!'' ಎಂದು ನುಡಿದು, ಮುದ್ದನಮೇಲೆ ಧುಮುಕಿ ಅವನನ್ನು ತುಂಡರಿಸಹೋದನು; ಆದರೆ ಎಲ್ಲರೂ ಭರಮನಾಯಕನ ಖಡ್ಗದ ಏಟಿಗೆ ಅಡ್ಡಬಂದದ್ದರಿಂದ ಮುದ್ದನು ಬದುಕಿದನು! ಆ ಪ್ರಸಂಗದಲ್ಲಿ ಮುದ್ದನ ಕಡೆಯ ನಾಲ್ಕು ಜನರು ನೆಲಕ್ಕೆ ಬಿದ್ದರು. ತರುಣ ವೀರನಾದ ಬಿಚ್ಚುಗತ್ತಿಯ ಭರಮನಾಯಕನು, ತನ್ನ ಪೂರ್ವಜರ ಹೆಸರಿಗೂ, ತನ್ನ ಪ್ರತಾಪಕ್ಕೂ ಕುಂದುಬಾರದಂತೆ, ಜೀವದ ಹಂಗುದೊರೆದು ಎಲ್ಲರೊಡನೆ ಒಬ್ಬನೇ ಕಾದತೊಡಗಿದ್ದನು. ಆತನಿಗೂ ಗಾಯಗಳಾಗಿ ದೇಹದಿಂದ ರಕ್ತಸ್ರಾವವು ಆಗುತ್ತಲಿತ್ತು; ಆದರೂ ಯುದ್ಧಾವೇಶದಿಂದ ಮೈಮರೆತಿದ್ದ ಆತನು ಮತ್ತೆ ಇಬ್ಬರನ್ನು ನೆಲಕ್ಕೆ ಉರುಳಿಸಿದನು.

ಆ ವೀರನಾಯಕನು, ಎಂತಹ ಶೂರನೂ, ಬಲಿಷ್ಠನೂ ಇದ್ದರೂ, ಆತನು ಎಂತಹ ಚಾತುರ್ಯದಿಂದ ಕಾದಿದರೂ ಕಡೆಗೆ ಆತನು ರಣಭೂಮಿಯಲ್ಲಿ ದೇಹವಿಡುವ ಸಂಭವವೇ ವಿಶೇಷವಾಗಿ ಇತ್ತು; ಯಾಕಂದರೆ, ಈಗ ಆತನ ಪ್ರತಿಕಕ್ಷಿಗಳೆಲ್ಲರೂ ಯುದ್ಧಾವೇಶಗೊಂಡು ಜೀವದಹಂಗುದೊರೆದು ಕಾದುತ್ತಲಿದ್ದರು; ಆದರೆ ಭರಮನಾಯಕನ ಮೇಲೆ ಆತನ ಕುಲಸ್ವಾಮಿನಿಯಾದ ಉತ್ಸವಾಂಬೆಯ ಕೃಪೆಯು ಇದ್ದದ್ದರಿಂದ, ಆತನಿಗೆ ಅಂದು ಮರಣ ಪ್ರಸಂಗವು ಒದಗಲಿಲ್ಲ! ಆತನು ಪರಾಕ್ರಮದಿಂದ ಕಾದುತ್ತಿರಲು, ದುರ್ಗದಕಡೆಯಿಂದ ಜನರ ಹೂಲಿಯು ಬಂದಿತು! ಎಂಟು ಹತ್ತು ಜನ ರಾವುತರು ತಮ್ಮ ಕುದುರೆಗಳನ್ನು ಓಡಿಸುತ್ತ ಕಾಳಗ ನಡೆದಲ್ಲಿಗೆ ಬಂದು, ಮುದ್ದನ ಜನರ ಮೇಲೆ ಬಿದ್ದರು. ಸ್ವಲ್ಪಹೊತ್ತು ಉಭಯ ಪಕ್ಷದವರ ಕಾಳಗವಾಗಿ, ಮುದ್ದನ ಪಕ್ಷದವರು ಹಿಂದಕ್ಕೆ ಸರಿಯಹತ್ತಿದರು. ಈ ಗದ್ದಲದಲ್ಲಿ ದಳವಾಯಿ ಮುದ್ದನು ಎತ್ತೋ ಜಾರಿಹೋಗಿ ಗಿಡಗಳ ಗುಂಪಿನಲ್ಲಿ ಮರೆಯಾದನು. ಅದನ್ನು ನೋಡಿ ಅವನ ಪಕ್ಷದವರೂ ಜೀವದಾಶೆಯಿಂದ ದಾರಿಸಿಕ್ಕತ್ತ ಓಡತೊಡಗಲು, ಅವರನ್ನು, ಮುಖ್ಯವಾಗಿ ಮುದ್ದನನ್ನು ಸೆರೆಹಿಡಿಯಬೇಕೆಂದು ರಾವುತರು ಅವರ ಮೇಲೆ ಕುದುರೆಗಳನ್ನು ಹಾಕಿದರು. ಆ ಪ್ರಸಂಗದಲ್ಲಿ ಭರಮನಾಯಕನೂ ಯುದ್ಧಾವೇಶದಿಂದ ಶತ್ರುಗಳನ್ನು ಬೆನ್ನಟ್ಟಿ ಹೋಗುತ್ತಿರಲು, ಒಬ್ಬ ವೀರ ತರುಣಿಯು ತನ್ನ ಕುದುರೆಯನ್ನು ಇಳಿದು ನಾಯಕನನ್ನು ಕುರಿತು—

''ಹಾ! ನಾಯಕಾ, ತಡೆ; ನೀನು ವೈರಿಗಳ ಬೆನ್ನಟ್ಟಿಹೋಗುವದು ಉಚಿತವಲ್ಲ, ನಿನ್ನ ವೈರಿಯ ಸಮಾಚಾರವನ್ನು ತಕ್ಕೊಳ್ಳುವದಕ್ಕಾಗಿಯೇ, ನಿನ್ನ ಪಕ್ಷದ ದಳವಾಯಿಯಾದ ಸ್ವಾಮಿನಿಷ್ಠ ಭರಮನಾಯಕನು ಧಾವಿಸಿ ಬಂದಿದ್ದಾನೆ'' ಎಂದು ನುಡಿದಳು. ಆಗ

ನಾಯಕನು— ''ಇದು ಹೆಂಗಸಿನ ದನಿಯು'' ಎಂದು ಗುರುತಿಸಿ ಆಶ್ಚರ್ಯದಿಂದ— ಹಾ! ಇದೇನು?'' ಎಂದು ನುಡಿದು ಆ ತರುಣಿಯ ಕಡೆಗೆ ನೋಡಲು, ಅದೇ ಉದಯ ವಾಗುತ್ತಿರುವ ಚಂದ್ರಮನ ಮಂದಪ್ರಕಾಶದಲ್ಲಿ ಸ್ತ್ರೀಯ ಮಸಮಸಕಾದ ರೂಪವು ಆತನ ಕಣ್ಣಿಗೆ ಬಿದ್ದಿತು!

## ರಣಹುಚ್ಚಿ !

ಭರಮನಾಯಕನು ಬೆರಗಾಗಿ ಆ ತರುಣಿಯ ಮುಖವನ್ನು ಎವೆಯಿಕ್ಕದೆ ನೋಡ ತೊಡಗಿರುವಾಗ, ಚಂದ್ರಮನು ಮೇಲಕ್ಕೆ ಏರಿಏರಿದಂತೆ, ಆ ತೇಜಸ್ವಿನಿ ಸುಂದರಿಯ ಮುಖದ ವರ್ಚಸ್ಸು ನಾಯಕನ ಕಣ್ಣುಗಳನ್ನು ಕುಕ್ಕತೊಡಗಿತು! ಮೊದಲೇ ಏಕಾಂತದ ಮಧ್ಯರಾತ್ರಿಯ ಸ್ತಬ್ಧತೆ ಮೇಲೆ ಬೆಳದಿಂಗಳ ಸೊಬಗಿನಲ್ಲಿ ಆ ಸುಂದರಿಯ ಸೌಂದರ್ಯದ ಆಕಸ್ಮಿಕ ಪ್ರದರ್ಶನ! ಅಂದಬಳಿಕ ಕೇಳುವದೇನು? ಸೌಂದರ್ಯ–ಲಾವಣ್ಯಗಳ ಆ ತರುಣಿಗೆ, ಅಪೂರ್ವತೆಯ ಸೊಗಸಿನ ಒಪ್ಪ ಉಂಟಾಗಿರಲು,ನಾಯಕನ ಚಿತ್ತವು ಆ ತರುಣೀಮಯವಾಗಿ ಹೋಯಿತು! ಚಲುವನಾದ ನಾಯಕನಲ್ಲಿ ತಾರುಣ್ಯವು ಅದೇ ಉದಯವಾಗಿರುವಾಗ, ಆ ತರುಣಿಯಲ್ಲಿ ತಾರುಣ್ಯವು ಅದೇ ಉದಯವಾಗುತ್ತಲಿತ್ತು! ಆಕೆಯ ಆಗಿನ ತಾರುಣ್ಯದ ಚಿಹ್ನಗಳ ನವನವಾಂಕುರಗಳನ್ನು ನೋಡುವವರಿಗೆ, ಇವಳೇನು ಸೌಂದರ್ಯಪುಷ್ಪದ ಅರಳ ಮೊಗ್ಗೆಯೋ, ಅಥವಾ ಉದಯೋನ್ಮುಖನಾದ ಲಲಿತ ಲಾವಣ್ಯಸೂರ್ಯನ ಮುಗ್ಧ ಮುಂಬೆಳಗೋ, ಅಥವಾ ನೇತ್ರಾನಂದದ ಸುಗ್ಗಿಯ ಸೊಗಸಿನ ಸೌರಣೆಯೋ ಅನ್ನುವ ಹಾಗೆ ಆಕೆ ತೋರುತ್ತಿದ್ದಳು! ಆಕೆಯ ಮೈಬಣ್ಣ ಸಾದುಗಪ್ಪು, ನಿಲುವಿಕೆ ತಕ್ಕಷ್ಟು, ಮೈಕಟ್ಟು ಬಿಗುವಿನದು; ಆ ವಿಶಾಲಾಕ್ಷಿಯ ಮುಖ ಮಂಡಲವು, ಮುಂಗುರುಳು—ನಿಡಿಮೂಗು,–ನುಣ್ಗಲ್ಲ–ನಸುನಗೆ ಸುಲಿಪಲ್ಲುಗಳಿಂದ ಮುದ್ದು ಸುರಿಯುತ್ತಿತ್ತು! ನಿರ್ಮಲಾಂತಃಕರಣದ ಆ ತರುಣಿಯು, ತನ್ನ ವೀರಕ್ಷತ್ರಿಯ ವೃತ್ತಿಗೆ ಒಪ್ಪುವಂತೆ, ಸೀರೆಯ ಅಡ್ಡಸೆರಗು ಬಿಗಿದು, ವೀರಕಾಸಿಯ ಹಾಕಿದ್ದಳು; ಆಕೆಯ ಮೈಯಲ್ಲಿ ನಟ್ಟುಹೋಗಿದ್ದ ಬಿಳಿಯ ಕುಪ್ಪಸದ ಬಲಗೈಯಲ್ಲಿದ್ದ ಆಕೆಯ ಬಿಚ್ಚುಗತ್ತಿಯು, ಬೆಳದಿಂಗಳ ಬೆಳಕಿನಲ್ಲಿ ಲಕಲಕನೆ ಹೊಳೆಯು ತ್ತಲಿತ್ತು, ಆ ಸುಂದರಿಯು, ದುಷ್ಟರ ಸಂಹಾರಕ್ಕಾಗಿ ಅವತರಿಸಿದ ಸಾಕ್ಷಾತ್ ಆದಿಶಕ್ತಿಯಂತೆ ತೋರುತ್ತಿದ್ದಳು! ಶೃಂಗಾರದ ಯಾವ ಸುದ್ದಿಯನ್ನೂ ಅರಿಯದ ಆ ನಿರ್ಮಲಾಂತಃಕರಣದ ತರುಣಿಯಲ್ಲಿ ಕೇವಲ ಸರಳಭಾವವು ಮಾತ್ರ ಒಡೆದು ಕಾಣುತ್ತಿತ್ತಲ್ಲದೆ, ಬೇರೆ ಯಾವ ಸ್ತ್ರೀಚೇಷ್ಟೆಗಳೂ ಆಕೆಯಲ್ಲಿ ತೋರುತ್ತಿದ್ದಿಲ್ಲ! ಬಹಳ ಹೇಳುವದೇನು? ಪರಸ್ಪರ ಸನ್ಮುಖರಾಗಿ ನಿಂತಿರುವ ಆ ವೀರಕ್ಷತ್ರಿಯ ತರುಣ–ತರುಣಿಯರು ಅಚ್ಚ ವೀರರಸದ ಎರಕಹೊಯ್ದು ಮಾಡಿದ್ದ ಸುಂದರ ಪುತ್ಥಳಿಗಳಂತೆ ತೋರುತ್ತಿದ್ದರು; ಶುದ್ಧಭಾವದ ಅವರು ಬೇರೆ ಯಾವ

ಕಾಮುಕ–ಕುಹಕ ವಿಕಾರಗಳಿಗೂ ಆಸ್ಪದಕೊಡುವವರಾಗಿದ್ದಿಲ್ಲ; ಯಾಕಂದರೆ, ತರುಣನಾದ ಬಿಚ್ಚುಗತ್ತಿಯ ಭರಮನಾಯಕನು, ಬ್ರಹ್ಮಚರ್ಯವ್ರತದ ಬಲಿಷ್ಠ ಜಟ್ಟಿಯಾಗಿದ್ದರೆ, ಆ ತರುಣೆಯು ತನ್ನ ತಂದೆಯನ್ನು ಕೊಂದಿದ್ದ ಮುದ್ದನ ಸೇಡುತೀರಿಸಿಕೊಳ್ಳಲು ಪ್ರತಿಜ್ಞೆ ಮಾಡಿದ್ದ ಕಠಿಣವ್ರತದ ತಪಸ್ವಿನಿಯಾಗಿದ್ದಳು!

ಹೀಗೆ ತರುಣ ಭರಮನಾಯಕನು ಎವೆಗೆ ಎವೆಹಾಕದೆ ಆಶ್ಚರ್ಯಚಕಿತನಾಗಿ ಆ ತರುಣಿಯನ್ನು ನೋಡುತ್ತ ನಿಂತು ಬಿಟ್ಟಿರುವಾಗ, ಆ ತರುಣಿಯು ಆತನನ್ನು ಕುರಿತು ಗಾಂಭೀರ್ಯದಿಂದ–

ತರುಣಿ—ಇದೇನು? ಕೆಚ್ಚೆದೆಯ ವೀರಾ, ಇಷ್ಟೇಕೆ ಬೆರಗಾಗಿ ನನ್ನನ್ನು ನೋಡುತ್ತ ನಿಂತಿರುವೆ? ಸರಿರಾತ್ರಿ ಮೀರಿ ಹೋಗಲಿಲ್ಲವೆ? ಮೊದಲು ನಿನ್ನ ಬಿಚ್ಚುಗತ್ತಿಯ ರಕ್ತವನ್ನು ಈ ಹಳ್ಳದಲ್ಲಿ ತೊಳೆದು, ಬೇಗನೆ ನೀನು ಈ ಭೀಕರ ಸ್ಥಳವನ್ನು ಬಿಟ್ಟು ಮರೆಯಾಗುವದು ನೆಟ್ಟಗೆ.

ನಾಯಕ—ವೀರತರುಣೀ, ಆ ಕೆಲಸವನ್ನು ನಾನು ಹಿಂದುಗಡೆ ಮಾಡುವೆನು; ಆದರೆ ಈ ಮಧ್ಯರಾತ್ರಿಯ ಕಾಳಗದಲ್ಲಿ ನೀನು ಯಾಕೆ? ನೀನು ಎಲ್ಲಿಂದ ಬಂದೆ? ನನ್ನ ಸಹಾಯಕ್ಕಾಗಿ ಬಂದಿದ್ದ ಆ ರಾವುತರು ಯಾರು? ಹೇಳು, ಮೊದಲು ಹೇಳು.

ತರುಣಿ—ವೀರನಾಯಕಾ, ನನ್ನ ವೈರಿ ದಳವಾಯಿ ಮುದ್ದನ ರಕ್ತ ಹಿಂಡುವದಕ್ಕಾಗಿ ಒಬ್ಬನೇ ಹೋಗುತ್ತಿರುವ ನಿನಗೆ ಸಹಾಯಮಾಡಬೇಕೆಂದು, ಆ ರಾವುತರ ಸಂಗಡ ನಾನು ಚಿತ್ರದುರ್ಗದಿಂದ ಇಲ್ಲಿಗೆ ಬಂದೆನು.

ನಾಯಕ—ನನ್ನ ಆ ಸುದ್ದಿ ನಿನಗೆ ಹೇಗೆ ಗೊತ್ತಾಯಿತು? ನೀನೇನು ಕನಸು ಗಿನಸು ಕಂಡೆಯಾ?

ತರುಣಿ—ನಾನು ಕನಸುಗಿನಸು ಕಂಡವಳಲ್ಲ; ಕಣ್ಣಲ್ಲಿ ಎಣ್ಣೆಹಾಕಿಕೊಂಡು ಮುದ್ದನ ಕಾರಸ್ಥಾನಗಳನ್ನು ನೋಡುತ್ತಲಿರುವ ನಾನು, ನನ್ನ ಚಾತುರ್ಯದಿಂದ ಅದನ್ನು ಕಂಡು ಹಿಡಿದು ಮಂದಿಯನ್ನು ಕೂಡಿಸಿಕೊಂಡು ಬಂದೆನು!

ನಾಯಕ—ಹೀಗೋ? ಒಟ್ಟಿಗೆ, ನಿನ್ನ ಸಾಹಸವು ಬಣ್ಣಿಸತಕ್ಕಂತಹದೇ ಸರಿ! ಆದರೆ ಎಲೈ ವೀರತರುಣೀ, ಇಂತಹ ಅನಿಮಿತ್ತ ಸಹಾಯಕ ಸಜ್ಜನಳು ನೀನು ಯಾರವಳು? ನಿನ್ನ ಹೆಸರೇನು?

ತರುಣಿ—ನಾನು ಚಿತ್ರದುರ್ಗದ ಒಬ್ಬ ವೀರ ಸರದಾರನ ಮಗಳು. ದಳವಾಯಿಗಳ ದಂಗೆಯಲ್ಲಿ ರಾಜಪಕ್ಷದವನಾದ ನನ್ನ ತಂದೆಯನ್ನು ಕೊಂದಿದ್ದ ಮುದ್ದನ ಗಂಟಲು ಹಿಚುಗುವದಕ್ಕಾಗಿ ಹೊಂಚುಹಾಕಿ ನಿಂತವಳು ನಾನು! ನನ್ನನ್ನು ನನ್ನ ಮನೆಯವರು ಹುಚ್ಚಿ ಹುಚ್ಚಿ ಎಂದು ಕರೆಯುತ್ತಾರೆ; ಆದರೆ ವೀರನಾಯಕಾ, ಬೇಕಾದರೆ ನೀನು ನನ್ನನ್ನು ರಣಹುಚ್ಚಿಯೆಂತಲೂ ಕರೆಯಬಹುದು!

ನಾಯಕ—ಹೌದು, ಹಾಗೆಯೇ ನಿನ್ನನ್ನು ನಾನು ಕರೆಯುವೆನು! ನೀನು ನಿಶ್ಚಯ ವಾಗಿಯೂ ರಣಹುಚ್ಚಿಯೇ; ಯಾಕಂದರೆ, ತಂದೆಯ ಕೊಂದ ಸೇಡು ತೀರಿಸಿಕೊಳ್ಳುವ

ಭರದಲ್ಲಿ ಸಾಧಕ-ಬಾಧಕ-ಕಾರಣಗಳನ್ನೆಲ್ಲ ಬದಿಗಿಟ್ಟು, ಗಂಡುಗಲಿಯಂತೆ ಗಂಡಸರ ಹಿಂಡಿನಲ್ಲಿ ಸೇರಿಬಂದು ಶಕ್ತಿಸ್ವರೂಪಳಾಗಿ ನಿನ್ನ ಕೈಖಡ್ಗದಿಂದ ವೈರಿಗಳನ್ನು ನೀನು ಸವರಿಸವರಿ ಚಲ್ಲಿದೆ; ಅಂದಬಳಿಕ ನೀನು ರಣಹುಚ್ಚಿಯಲ್ಲದೆ ಮತ್ತೇನು? ಎಲೈ ರಣಹುಚ್ಚೀ, ನಿನ್ನ ಸಾಹಸಕ್ಕೆ ನಾನು ಬಹಳವಾಗಿ ಮೆಚ್ಚಿದನು!

ರಣಹುಚ್ಚಿ—ಎಲೈ ವೀರನಾಯಕಾ,ನಿನ್ನ ಈ ವೀರಾಲಾಪಗಳಿಂದ ನನ್ನ ವೀರಾವೇಶವು ಮತ್ತಿಷ್ಟು ಹೆಚ್ಚಿ ನನ್ನ ಮೈ ಹೇಗೆ ಉಬ್ಬುತ್ತಲಿದೆ ನೋಡಿದೆಯಾ? ನನ್ನ ತಂದೆಯ ಈ ಹರಿತಾದ ಕತ್ತಿಯು ಇಂದು ವೈರಿಗಳ ರಕ್ತಪಾನ ಮಾಡಿದ ಬಗೆಯನ್ನು ನೀನು ನೋಡಿದೆಯಲ್ಲವೆ?

ನಾಯಕ—ಹೌದು, ನೋಡಿದೆನು; ಆದರೆ ಕಗ್ಗತ್ತಲೆಯ ಕಾಳಗದಲ್ಲಿ ನೀನು ಹೆಂಗಸೆಂಬ ದನ್ನು ಮಾತ್ರ ನಾನು ಗುರುತಿಸಲಿಲ್ಲ, ರಣಹುಚ್ಚಿ, ನಿನ್ನ ಖಡ್ಗದ ಏಟುಬಿದ್ದಾಗಲೇ ದುಷ್ಟ ಮುದ್ದನು ಜಾರಿಹೋದದ್ದು ನನ್ನ ಕಣ್ಣಿಗೆ ಕಟ್ಟಿದೆ! ಆಗಿನ ನಿನ್ನ ರಣಸಾಹಸವನ್ನು ನೋಡಿ ನನಗೆ, ಆ ಅರ್ಜುನ ಕುಮಾರ ವೀರ ಅಭಿಮನ್ಯುವಿನ ನೆನಪಾಯಿತು! ಆದ್ದರಿಂದ ವೀರಕುಮಾರೀ, ನಿನ್ನ ಆ ರಣಹುಚ್ಚಿ ಎಂಬ ಹೆಸರನ್ನು ನಾನು ಎಂದೂ ಮರೆಯಲಿಕ್ಕಿಲ್ಲ!

ರಣಹುಚ್ಚಿ—ಆಗಲಿ, ಬಹಳ ಸಂತೋಷವು! ಆದರೆ ವೀರ ನಾಯಕಾ, ನನ್ನ ಆ ಹೆಸರನ್ನು ನೀನು ಬರಿಯ ನೆನಪಿನಲ್ಲಿಯೇ ಇಡಬೇಡ; ಆ ಹೆಸರಿನಿಂದಲೇ ಬಾರಿಬಾರಿಗೆ ನೀನು ನನ್ನನ್ನು ಕರೆಯುತ್ತಲಿರುವೆಯಂತೆ; ಯಾಕಂದರೆ, ಚಿತ್ರದುರ್ಗದ ನಾಯಕರ ಪ್ರತಾಪ ಸೂರ್ಯನಿಗೆ, ಈಗ ಮರೆಯಾಗಿರುವ ದಳವಾಯಿ ಮುದ್ದನೆಂಬ ಕಿರಿಮೋಡವು, ನಿನ್ನ ಪ್ರತಾಪ ಸೂರ್ಯನ ಪ್ರಖರ ಕಿರಣಗಳಿಂದ ಉಗಿಯಾಗಿ ಕರಗಿ ಹೋಗುತ್ತಿರುವಾಗ, ಆ ಉಗಿಯನ್ನು ನಾಲ್ಕೂ ಕಡೆಗೆ ಚದರಿಸಿಬಿಡುವ ನಸುಗಾಳಿಯಂತೆ ನಿನಗೆ ನಾನು ಯಾವಾಗಲೂ ಸಹಾಯಕಳಾಗಿರುವೆನೆಂದು ತಿಳಿ! ನಾಯಕಾ, ಮುದ್ದನ ಚಂಡು ತುಂಡರಿಸುವವರೆಗೆ ಈ ರಣಹುಚ್ಚಿಯು ಹೊಟ್ಟೆತುಂಬ ಉಣ್ಣುವಹಾಗಿಲ್ಲ, ಕಣ್ಣುತುಂಬ ನಿದ್ರೆ ಮಾಡುವಹಾಗಿಲ್ಲ! ಇತ್ತ ನೋಡಿದೆಯೇನು? ಮುದ್ದನ ಹೆಸರು ಉಚ್ಚರಿಸಿದ ಕೂಡಲೆ ನನ್ನ ಮೈ ಹೇಗೆ ಚಿಲಿಚಿಲಿ ಉಕ್ಕುತ್ತಲಿದೆ!!

ನಾಯಕ—ಎಲೈ ವೀರ ತರುಣೀ, ವ್ಯಾಧಜಾತಿಯ ನಿನ್ನ ಉಗ್ರಕ್ಷಾತ್ರ ತೇಜಸ್ಸಿಗೆ, ನಿನ್ನ ಈ ಕರ್ಕಶ ಮಾತುಗಳು ಬಹಳವಾಗಿ ಒಪ್ಪುತ್ತಲಿವೆ; ಆದರೆ ನನಗೂ ವೈರಿಯಾಗಿರುವ ಆ ಮುದ್ದನನ್ನು ಹಿಂಡಿ ಹಿಚುಕುವ ಕೆಲಸದಲ್ಲಿ, ನಿನ್ನಂತಹ ಕೋಮಲವೃತ್ತಿಯ ತರುಣಿಗೆ ನಾನು ಆಯಾಸಕೊಡಬೇಕೇ? ಅದು ನಮ್ಮ ವೀರಕುಲಕ್ಕೆ ಭೂಷಣವಾಗಬಹುದೇನು?

ರಣಹುಚ್ಚಿ-ವೀರನಾಯಕಾ, ಅದರ ಚರ್ಚೆ ಈಗೇಕೆ? ಆ ನಚ್ಚಿನ ಪ್ರಸಂಗವಂತು ಬಂದೊದಗಲಿ! ಮುದ್ದನೆಂಬ ಮುಂಜಾವಿನ ಮಂಜನ್ನು ಮಾಯವಾಗಮಾಡಲು, ಬಾಲಸೂರ್ಯನ ಲಲಿತ ಕಿರಣಗಳೇ ಸಾಕಾಗಿರುವಾಗ, ನಡುವಗಲ ಮಾರ್ತಂಡನ ಪ್ರಖರ ಕಿರಣಗಳೇತಕ್ಕೆ? ಆದರೆ ನಾಯಕಾ, ಹೀಗೆ ಮಾತಿನಲ್ಲಿ ಕಾಲಹರಣಮಾಡುತ್ತ ಈ ಘಾತಕ ಸ್ಥಳದಲ್ಲಿರುವದು ನಿನಗೆ ಸರ್ವಥಾ ಹಿತಕರವಲ್ಲ, ಚಿತ್ರದುರ್ಗದ ವೀರತಿಮ್ಮ ನಾಯಕರ

ಮನೆತನದ ಆಗು–ಹೋಗುಗಳು, ಕೇವಲ ನಿನ್ನ ಒಬ್ಬನ ಜೀವವನ್ನೇ ಅವಲಂಬಿಸಿರುವದ ರಿಂದ, ನೀನು ನಿನ್ನ ಪ್ರತಾಪ ಪ್ರದರ್ಶನದಲ್ಲಿಯೇ ಮಗ್ನನಾಗಿ ಮೈಮರೆಯದೆ, ಕಾರ್ಯ ಸಾಧನದ ಕಡೆಗೆ ವಿಶೇಷವಾಗಿ ಲಕ್ಷಗೊಡುತ್ತ ಹೋಗು; ಯಾಕಂದರೆ, ತಿಮ್ಮನಾಯಕರ ವಂಶದ ನಾಯಕತನವನ್ನು ಮುಂದಕ್ಕೆ ಸಾಗಿಸುವದು ನಮ್ಮ ನಿನ್ನ ಮುಖ್ಯೋದ್ದೇಶವಾಗಿರುತ್ತದೆ. ಈ ದೃಷ್ಟಿಯಿಂದ ನೀನು ನಿನ್ನ ಪಕ್ಷೀಯರಾಗಿದ್ದ ನಮ್ಮೆಲ್ಲರ ಜೀವವೂ ಆಗಿರುತ್ತೀ; ಇನ್ನು ನೀನು ಆ ಗವಿಯಲ್ಲಿ ಸರ್ವಥಾ ಇರಬೇಡ; ಯಾಕಂದರೆ, ದಳವಾಯಿ ಮುದ್ದನಿಗೆ ನೀನು ಅಲ್ಲಿ ಇರುತ್ತಿರುವದು ಗೊತ್ತಾಗಿರುವದು. ಹೂ, ಹೋಗು, ಇದು ಮಾತಿನಲ್ಲಿ ಹೊತ್ತುಗಳೆಯುವ ಸಮಯವಲ್ಲ. ಹಳ್ಳದಲ್ಲಿ ನಿನ್ನ ಖಡ್ಗವನ್ನೂ, ಕೈಕಾಲು ಮೋರೆಗಳನ್ನೂ ತೊಳಕೊಂಡು ಬಂದು ಆ ಕುದುರೆಯನ್ನು ಬೇಗನೆ ಹತ್ತು, ಕುದುರೆಯ ತೋಬರಿಯಲ್ಲಿ ಶ್ರಮಪರಿಹಾರಕ ಔಷಧಿಯಪುಡಿಯ ಡಬ್ಬಿಯು ಇರುತ್ತದೆ; ಮತ್ತು ನೋವು ಕೊಲ್ಲುವ ಮತ್ತೊಂದು ಮುಲಾಮು ಮತ್ತೊಂದು ಡಬ್ಬಿಯಲ್ಲಿ ಇರುತ್ತದೆ. ಅವುಗಳ ಉಪಯೋಗವನ್ನು ತಪ್ಪದೆಮಾಡು! ನೀನು ಬಂದು ಈ ಕುದುರೆಯನ್ನು ಹತ್ತುವಷ್ಟರಲ್ಲಿ ನಾನು ಹಳ್ಳಕ್ಕೆ ಹೋಗಿಬಂದು ನಿನ್ನನ್ನು ಹಿಂಬಾಲಿಸುವೆನು. ವೀರಾ, ಬಿಚ್ಚುಗತ್ತಿಯ ಭರಮನಾಯಕಾ, ನನ್ನಾಣೆ, ಇನ್ನು ನೀನು ಈ ಸ್ಥಳದಲ್ಲಿ ಅದೇಕೆ, ಈ ಪ್ರದೇಶದಲ್ಲಿಯೇ ಹೆಚ್ಚುಕಾಲ ಸರ್ವಥಾ ಇರಬೇಡ; ಮತ್ತು ಯಾರ ಹಾದಿಯನ್ನೂ ನೋಡಬೇಡ; ಮನಬಂದತ್ತ ಬಹುದೂರ ಸಾಗಿಹೋಗಿ, ನಿನ್ನ ರೂಪವನ್ನು ಬದಲಿಸಿ ಹೇಗಾದರೂ ಕಾಲಹರಣ ಮಾಡುತ್ತಲಿರು. ನಿನ್ನ ಕುಲಸ್ವಾಮಿನಿ ಉತ್ಸವಾಂಬೆಯ ಕೃಪೆಯಿಂದ ನಿನ್ನ ಉದಯಕಾಲವು ಬೇಗನೆ ಒದಗಿಬರುವದು. ನನ್ನ ಈ ಮಾತು ಕೇವಲ ರಣಹುಚ್ಚಿಯ ಮಾತೆಂದು ತಿಳಿಯದೆ, ದೇವೀ ಉತ್ಸವಾಂಬೆಯೇ ನನ್ನ ಬಾಯಿಂದ ಹೀಗೆ ಆಡಿಸುತ್ತಿರುವಳೆಂದು ನಂಬು!

ಹೀಗೆ ನುಡಿದು ರಣಹುಚ್ಚಿಯು ತನ್ನ ಖಡ್ಗವನ್ನು ಹಳ್ಳದಲ್ಲಿ ತೊಳೆಯಹತ್ತಿದಳು. ಆಗ ನಾಯಕನೂ ವಿಚಾರಮಗ್ನನಾಗಿ ಹಳ್ಳದಲ್ಲಿ ಕಾಲಿಟ್ಟನು; ಆದರೆ ರಣಹುಚ್ಚಿಯ ಕೆಚ್ಚೆದೆಯನ್ನೂ, ಶೌರ್ಯಸಾರವನ್ನೂ, ಪಿತೃಭಕ್ತಿಯನ್ನೂ ನೋಡಿ ಆತನು ಬೆರಗಾಗಿ ಹೋಗಿದ್ದನು. ಹೀಗೆ ಇತ್ತ ಈತನು ವಿಚಾರಮಗ್ನನಾಗಿ ತನ್ನ ಕತ್ತಿಯ ರಕ್ತವನ್ನು ಸಾವಕಾಶವಾಗಿ ತೊಳೆಯುತ್ತಿರಲು, ಅತ್ತ ತನ್ನ ಕತ್ತಿಯ ರಕ್ತತೊಳೆಯುತ್ತಿದ್ದ ರಣಹುಚ್ಚಿಯು, ಕ್ಷಣದಲ್ಲಿ ಮಿಂಚಿನಂತೆ ಮಾಯವಾಗಿ ಎತ್ತೋ ಹೋಗಿಬಿಟ್ಟಳು!

ಇತ್ತ ನಾಯಕನು ತನ್ನ ಕತ್ತಿಯನ್ನೂ, ಕೈಕಾಲು ಮೋರೆಗಳನ್ನೂ ತೊಳಕೊಂಡು, ರಣಹುಚ್ಚಿಯಿದ್ದ ಕಡೆಗೆ ನೋಡಲು, ಆಕೆಯು ಅಲ್ಲಿ ಕಾಣಿಸಲಿಲ್ಲ! ಅದನ್ನು ನೋಡಿ ನಾಯಕನಿಗೆ ಬಹಳ ಆಶ್ಚರ್ಯವಾಯಿತು. ಆತನು ಆಕೆಯನ್ನು ಅತ್ತಿತ್ತ ಆತುರದಿಂದ ಹುಡುಕಿದನು; ಮತ್ತು ಆ ಅರಣ್ಯದಲ್ಲಿ ಪ್ರತಿಧ್ವನಿಯುಂಟಾಗುವಂತೆ ಗಟ್ಟಿಯಾಗಿ— ''ರಣಹುಚ್ಚೀ, ಅಮ್ಮಾ ರಣಹುಚ್ಚೀ'' ಎಂದು ಕೂಗಿಕೂಗಿ ಆಕೆಯನ್ನು ಹಲವು ಸಾರೆ ಕರೆದನು; ಆದರೆ ಆಕೆಯ ಸುಳಿವಿಲ್ಲ! ಆಕೆ ಹತ್ತಿಕೊಂಡು ಬಂದಿದ್ದ ಕುದುರೆ ಮಾತ್ರ, ಕಿವಿಸೆಟಿಸಿ, ಕಕ್ಕಾಬಿಕ್ಕಿಯಾಗಿ ಅತ್ತಿತ್ತ

ನೋಡುತ್ತ ತನ್ನ ಸ್ಥಳದಲ್ಲಿ ನಿಂತಿತ್ತು! ಆಗ ನಾಯಕನು ಮೂಢನಂತೆ ದಂಗುಬಡಿದು ನಿಂತುಕೊಂಡನು. ಆತನಿಗೆ ಏನೂ ತೋಚದಾಯಿತು. ಇದೇನು ಭೂತಚೇಷ್ಟೆಯೋ, ಅಥವಾ ಅಕಸ್ಮಾತ್ತಾಗಿ ತನಗೆ ಬಿದ್ದ ಕಳವಳಿಕೆಯ ಕನಸೋ, ಅಥವಾ ಕುಲಸ್ವಾಮಿನಿ ಉತ್ಸವಾಂಬೆಯು ಪ್ರಕಟಿಸಿದ ಮಾಯೆಯೋ ಎಂದು ಆತನು ಶಂಕಿಸತೊಡಗಿದನು. ಹೀಗೆ ಆತನು ಯೋಚಿಸುತ್ತ ಸ್ವಲ್ಪ ಹೊತ್ತು ಸುಮ್ಮನೆ ನಿಂತಬಳಿಕ ಆತನು ಮನಸ್ಸಿನಲ್ಲಿ—ಇದು ಬೂತ ಚೇಷ್ಟೆಯೂ ಅಲ್ಲ ಕನಸೂ ಅಲ್ಲ; ನನ್ನ ಕುಲಸ್ವಾಮಿನಿಯಾದ ಉತ್ಸವಾಂಬೆಯು ಇಂದಿನ ನನ್ನ ಪ್ರಾರ್ಥನೆಗಾಗಿ ಕರುಣಿಸಿ, ಆ ನಿರ್ಮಲಾಂತಃಕರಣದ ರಣಹುಚ್ಚಿಯ ದೇಹದಲ್ಲಿ ತಾನು ಪ್ರವೇಶಿಸಿ, ನನಗೆ ಸಹಾಯ ಮಾಡುವದಕ್ಕಾಗಿ ಬಂದಿರಬಹುದು! ಅಹುದು, ಇದೇ ಮಾತು ನಿಶ್ಚಯವು; ಹಾಗಲ್ಲದಿದ್ದರೆ, ಸರ್ವಸಾಧಾರಣಳಾದ ಒಬ್ಬ ತರುಣಿಯಿಂದ ಇಂತಹ ಅದ್ಭುತ ಕಾರ್ಯಗಳು ಆಗಬಹುದೆ? ಒಬ್ಬ ಅಪ್ರಬುದ್ಧ ತರುಣಿಯು ಮುದ್ದನ ಕಾರಸ್ಥಾನಗಳನ್ನು ಕಂಡುಹಿಡಿಯುವ ದೆಂದರೇನು? ಇಂತಹ ಮಧ್ಯರಾತ್ರಿಯಲ್ಲಿ ರಾವುತರೊಡನೆ ಅಕಸ್ಮಾತ್ತಾಗಿ ಇಲ್ಲಿಗೆ ಬರುವ ದೆಂದರೇನು? ಮತ್ತು ಮಹಾ ಮಹಾವೀರರಿಗೂ ಅಸಾಧ್ಯವಾದ ರಣಸಾಹಸವ ತೋರಿಸುವ ದೆಂದರೇನು? ಇವು ಒಬ್ಬ ಸರ್ವ ಸಾಧಾರಣಳಾದ ತರುಣಿಯ ಕೆಲಸಗಳು ಅಲ್ಲೇ ಅಲ್ಲವು! ಆ ತರುಣಿ ರಣಹುಚ್ಚಿಯು ರಣಕರ್ಕಶಿಯಾಗಿ ಯುದ್ಧದಲ್ಲಿ ಎತ್ತಿ ಹಣಿದ ಕತ್ತಿಯನ್ನು ಸಾಮಾನ್ಯ ಸ್ತ್ರೀಯರಿಂದ ಎತ್ತುವದಾದರೂ ಆಗಬಹುದೆ? ಇಂದು ಮುದ್ದನು ಆ ರಣಹುಚ್ಚಿಯ ಕೈಯಿಂದ ಪಾರಾಗಿಹೋದದ್ದು, ಅವನ ಸುದೈವವೇ ಸರಿ! ಮಲಿನ ಹೃದಯದ ಮನುಷ್ಯರಿಗೆ, ಅದರಲ್ಲಿಯೂ, ಕೋಮಲಹೃದಯದ ಹೆಂಗಸರಿಗೆ ಭೂತಾವೇಶವಾಗುವಂತೆ, ನಿರ್ಮಲ ಮನಸ್ಸಿನ ಭಕ್ತಜನರಿಗೆ ದೇವಾವೇಶವು ಆಗುತ್ತಿರುತ್ತದೆಂದು, ಕೇಳಿದ್ದೇನೆ. ಅದರಂತೆ, ನಮ್ಮ ರಣಹುಚ್ಚಿಯಲ್ಲಿ ನಿಶ್ಚಯವಾಗಿ ನಮ್ಮ ಕುಲಸ್ವಾಮಿನಿ ಉತ್ಸವಾಂಬೆಯ ಆವೇಶವು ಆಗಿರುವದು! ಇದರ ಮೇಲಿಂದ ನನ್ನ ಆ ಮಹಾತಾಯಿಗೆ, ಇಂದು ನಾನು ಮೊರೆಯಿಟ್ಟಿದ್ದರ ಅರಿಕೆಯು ನಿಶ್ಚಯವಾಗಿ ಆಯಿತೆಂದು ಅನ್ನಬೇಕಾಗುತ್ತದೆ; ಆದ್ದರಿಂದ ಎಲೇ ಮಹಾತಾಯಿಾ, ಉತ್ಸವಾಂಬೇ, ಹೀಗೆಯೇ ನೀನು ನಿನ್ನ ಭಕ್ತನಾದ ಈ ಭರಮನನ್ನು ಕರುಣಿಸುತ್ತಲಿರು ಕಂಡೆಯಾ?

ಹೀಗೆ ಭಾವಿಕನಾದ ಭರಮನಾಯಕನು ತನ್ನ ಕುಲಸ್ವಾಮಿನಿಯನ್ನು ಪ್ರಾರ್ಥಿಸುತ್ತಿರು ವಷ್ಟರಲ್ಲಿ ಆತನ ಮಾನವೀ ಸ್ವಭಾವಕ್ಕನುಸರಿಸಿ ಆತನ ಮನಸ್ಸು ಚಂಚಲವಾಗಿ ಆತನಲ್ಲಿ ವಿಕಲ್ಪ ಭಾವನೆಯುಂಟಾಯಿತು. ಆತನು ಮತ್ತೆ ಮನಸ್ಸಿನಲ್ಲಿ—ಇದು ನಿಜವಾಗಿಯೇ ದೈವೀ ಆವೇಶದ ಆಟವಾಗಿರಬಹುದೇನು? ಹಾಗಿದ್ದರೆ, ಮಹಾರಾಷ್ಟ್ರ ರಾಜ್ಯಸ್ಥಾಪಕನಾದ ಶಿವಾಜಿಗೆ ಶ್ರೀಭವಾನಿಯ ಆವೇಶವಾಗುತ್ತಿದ್ದಂತೆ, ನನಗೇ ಯಾಕೆ ಆ ಮಹಾತಾಯಿ ಶ್ರೀ ಉತ್ಸವಾಂಬೆಯ ಆವೇಶವಾಗಿ ಮಹಾಮಹಾ ಕಾರ್ಯಗಳು ನನ್ನಿಂದ ಜರುಗಬಾರದು? ನಡುವೆ ಆ ತರುಣಿ ರಣಹುಚ್ಚಿಯ ಮಧ್ಯಸ್ಥಿಯೇಕೆ ಬೇಕಾಗಿತ್ತು? ಅದೂ ಆಗಲಿ, ಆ ತರುಣಿಯಲ್ಲಿಯೇ ದೇವಿಯ ಆವೇಶವಾಗಿದ್ದರೆ, ಆಕೆಯೊಬ್ಬಳೇ ಕಾರ್ಯಮಾಡುವದನ್ನು ಬಿಟ್ಟು, ಇಷ್ಟು ಜನ ರಾವುತ ರೊಡನೆ ಬಂದು ಮನುಷ್ಯರಂತೆ ಸಂಘಶಕ್ತಿಯಿಂದ ಆಕೆಯು ಯಾಕೆ ಕಾರ್ಯಮಾಡಬೇಕು?

ದೇವಿಯೇನು ಮನುಷ್ಯರಂತೆ ಅಲ್ಲವೆ? ಒಟ್ಟಿಗೆ, ಇದರ ಗೂಢವೇ ನನಗೆ ತಿಳಿಯದಾಗಿದೆ. ಕೆಲವು ಸಂಗತಿಗಳಿಂದ ದೈವೀಶಕ್ತಿಯ ಮಹತ್ವವೂ, ಕೆಲವು ಸಂಗತಿಗಳಿಂದ ಮಾನವೀಯ ಶಕ್ತಿಯ ಅಲ್ಪತ್ವವೂ, ರಣಹುಚ್ಚಿಯಲ್ಲಿ ಕಂಡುಬರುವದರಿಂದ, ನನ್ನ ಮನಸ್ಸು ಸಂಶಯಗ್ರಸ್ತ ವಾಗಿರುವದು. ಏನೇ ಇರಲಿ, ನಮ್ಮ ರಣಹುಚ್ಚಿಯು ನನಗೆ ತನ್ನ ಆಣೆಯಿಟ್ಟು "ನೀನು ಇಲ್ಲಿ ಒಂದು ಕ್ಷಣವೂ ಇರಬೇಡವೆಂ"ದು ಹೇಳಿರುವದರಿಂದ, ನಾನು ಹೀಗೆ ತರ್ಕ–ವಿತರ್ಕಗಳನ್ನು ಮಾಡುತ್ತ ಇಲ್ಲಿ ನಿಂತುಕೊಳ್ಳುವದು ಯೋಗ್ಯವಲ್ಲ. ಆ ತರುಣಿಯು ಸೂಚಿಸಿದಂತೆ ಈ ಕುದುರೆಯನ್ನು ಹತ್ತಿಕೊಂಡು ದೇಶಾಂತರಕ್ಕೆ ಹೋಗಿಬಿಡುವದೇ ಯೋಗ್ಯವು; ಆದರೆ ಪಾಪ! ನಮ್ಮ ರಣ ಹುಚ್ಚಿಯನ್ನು ಬಿಟ್ಟು ನಾನು ಹೀಗೆ ಹೋಗಬಹುದೆ? ಆಕೆಯು ಎಲ್ಲಿಗೆ ಹೋಗಿರಬಹುದು? ಹೇಗೆ ಹೋಗಿರಬಹುದು? ಆಕೆಯು ಕಾಡುಮೃಗಗಳ ಬಾಯಿಗೆ ಬಿದ್ದಿರಲಿಕ್ಕಿಲ್ಲವಷ್ಟೆ? ಅಥವಾ ಯಾರಾದರೂ ದುಷ್ಟರು ಆಕೆಯನ್ನು ಎಳೆದು ಒಯ್ದಿರಬಹುದೊ? ನನಗಾಗಿ ತನ್ನ ಕುದುರೆಯನ್ನು ಬಿಟ್ಟು, ಆಕೆಯು ಕಾಲನಡಿಗೆಯಿಂದ ಕಷ್ಟಪಡುತ್ತ ತಿರುಗಿ ಚಿತ್ರದುರ್ಗಕ್ಕೇ ಹೋಗಿರಬಹುದೇನು? ಹಾಗೆ ಮಾಡಿದ್ದರೆ ನನ್ನ ವಿಷಯದಲ್ಲಿ ಆಕೆಯು ಪ್ರಕಟಿಸಿದ ಮಮಕಾರವು ಎಂತಹ ಗೌರವದ್ದು! ಇದೇ ಈಗ ನಾವಿಬ್ಬರೂ ಇದೇ ಹಳ್ಳದಲ್ಲಿ ಇಳಿದಿದ್ದೆವಲ್ಲವೆ? ಇಷ್ಟರಲ್ಲಿ ಆಕೆಯು ಹೇಗೆ ಮಾಯವಾಗಿರಬಹುದು? ಅಥವಾ ನನ್ನ ಸ್ಥಿತಿಯನ್ನು ನೋಡುವದಕ್ಕಾಗಿ ಇಲ್ಲಿಯೇ ಎಲ್ಲಿಯಾದರೂ ಮರೆಗೆ ಆಕೆಯು ನಿಂತುಕೊಂಡಿರ ಬಹುದೇನು? ಛಿ ಛೀ, ಆ ಗಂಭೀರಭಾವದ ತರುಣಿಯು ಇಂತಹ ಹುಡುಗಾಟಿಕೆ ಮಾಡತಕ್ಕವಳಲ್ಲ; ಇದು ಹುಡುಗಾಟಿಕೆ ಮಾಡುವ ಸಮಯವೂ ಅಲ್ಲ; ಆದ್ದರಿಂದ ಯಾವ ಕಾರಣದಿಂದಲೋ ಆಕೆಯು ಬುದ್ಧಿಪೂರ್ವಕವಾಗಿ ನನ್ನೊಬ್ಬನನ್ನೇ ಬಿಟ್ಟು ಹೋಗಿರಬಹುದು. ಇನ್ನೊಂದು ವಿಚಾರ, ಆ ತಂತ್ರಗಾರಳು ತನಗಾಗಿ ಒಂದು ಕುದುರೆಯನ್ನು ಕಾದಿಟ್ಟರಿಸಿರ ಲಿಕ್ಕಿಲ್ಲವೆಂದು ಯಾರು ಹೇಳಬೇಕು? ಒಟ್ಟಿಗೆ, ಆ ಕುಮಾರಿಯ ನಿಜವಾದ ಸ್ಥಿತಿಗತಿಗಳನ್ನು ಆ ಆದಿಮಾಯೆ ಉತ್ಸವಾಂಬೆಯೇ ಬಲ್ಲಳು! ಆದರೆ ನಾನು ಅಂಥ ಅಬಲೆಯನ್ನು ರಾತ್ರಿ ನಟ್ಟಡವಿಯಲ್ಲಿ ಬಿಟ್ಟು ಆಕೆಯ ಕುದುರೆಯನ್ನು ಹತ್ತಿಕೊಂಡು ದಯಾಹೀನನಾಗಿ ಪ್ರಾಣಭಯ ದಿಂದ ದೇಶಾಂತರಕ್ಕೆ ಹೋಗಿಬಿಡುವದು ಪರಮಕೃತಘ್ನತೆಯೇ ಅಲ್ಲ, ಹೇಡಿತನವೂ, ಜೀವಗಳ್ಳತನವೂ ಆಗಿರುತ್ತದೆಂಬದರಲ್ಲಿ ಮಾತ್ರ ಸಂಶಯವಿಲ್ಲ! ಏನೇ ಇರಲಿ, ಎಷ್ಟೇ ವಿಚಾರಮಾಡಲಿ ಆ ತರುಣಿಯು ಯಾರ ಹಾದಿಯನ್ನೂ ನೋಡಬೇಡವೆಂದು ತನ್ನ ಆಣೆಯಿಟ್ಟುಕೊಂಡು ಸ್ಪಷ್ಟವಾಗಿ ನನಗೆ ಹೇಳಿರುವದರಿಂದ, ಆಕೆಯ ಆ ಮಾತು, ಆಕೆಯೇ ನನಗೆ ಗಟ್ಟಿಮುಟ್ಟಿಯಾಗಿ ಹೇಳಿದಂತೆ, ಶ್ರೀಉತ್ಸವಾಂಬೆಯ ಆಜ್ಞೆಯೆಂದು ತಿಳಿದು ನಾನು ಈ ಕುದುರೆಯನ್ನು ಹತ್ತಿಕೊಂಡು ಇಲ್ಲಿಂದ ಹೊರಟು ಹೋಗುವದೇ ಯೋಗ್ಯವು; ಯಾಕಂದರೆ ನಾನು ಹೀಗೆ ಮಾಡುವದರಲ್ಲಿ, ನಮ್ಮ ಆ ರಣಹುಚ್ಚಿಯ ಹೇಳಿಕೆಯಂತೆ, ನಮ್ಮ ಮೂಲಪುರುಷರಾದ ಮತ್ತಿತಿಮ್ಮಣ್ಣನಾಯಕರ ವಂಶದ ಹಿತವಿದ್ದರೂ ಇರಬಹುದು!

ಹೀಗೆ ಅಂದುಕೊಂಡು ಭರಮನಾಯಕನು ಕುದುರೆಯನ್ನು ಹತ್ತಿದನು. ಆಗ ಬೆಳಗಾಗಲಿಕ್ಕೆ ಮೂರು ತಾಸು ರಾತ್ರಿಉಳಿದಿರಬಹುದು. ನಾಯಕನು ಆ ಸ್ವಚ್ಛವಾದ ಬೆಳದಿಂಗಳಲ್ಲಿ

ಕುದುರೆಯ ಕಡಿವಾಣವನ್ನು ಸಡಿಲುಬಿಟ್ಟು ವೇಗದಿಂದ ಸಾಗುವದಕ್ಕೆ ಸೂಚಿಸಲು,ಕೂಡಲೆ ಆ ಜಾತಿವಂತ ಚಪಲ ಕುದುರೆಯು ನಾಗಾಲೋಟದಿಂದ ಓಡಹತ್ತಿತು; ಆದರೆ ರಣಹುಚ್ಚಿಯ ವಿಷಯದ ನಾಯಕನ ಮನಸ್ಸಿನ ಚಡಪಡಿಕೆಯು ಮಾತ್ರ ಕಡಿಮೆಯಾಗಲೊಲ್ಲದು. ಆತನು ಹೋಗಹೋಗುತ್ತ ಮತ್ತೆ ಮನಸ್ಸಿನಲ್ಲಿ— "ಪಾಪ! ನಾನು ಆ ಸುಂದರ ತರುಣಿಯನ್ನು ಬಿಟ್ಟು ಹೀಗೆ ಬಂದೇ ಬಿಟ್ಟೆನಲ್ಲವೆ?" ಎಂದು ಕುದಿಯಹತ್ತಿದನು. ಹೀಗೆ ಕುದಿಯುವ ಮನಸ್ಸಿನಿಂದ ಆ ನಾಯಕನು ಅಡವಿಯ ದಾರಿಯ ಹಿಡಿದು ಬೆಳತನಕ ಹೋದದ್ದರಿಂದ, ಏಳೆಂಟು ಹರದಾರಿ ಅಂತರವನ್ನು ಆತನು ಕ್ರಮಿಸಿರಬಹುದು., ಅಷ್ಟರಲ್ಲಿ ಮೂಡಲು ಕೆಂಪು ಹರಿಯಿತು. ದಣಿದು ಬಂದಿದ್ದ ನಾಯಕನಿಗೆ ಮುಂಜಾವಿನ ತಂಪಾದ ನಸುಗಾಳಿಯ ಸುಳಿದಾಟದಿಂದ, ಅಂತಹ ಆತನ ಅಸಮಾಧಾನದ ಸ್ಥಿತಿಯಲ್ಲಿಯೂ ಆತನಿಗೆ ಸ್ವಲ್ಪ ಸಮಾಧಾನವು ಆಯಿತು.ಹಾದಿಯಲ್ಲಿ ಹತ್ತಿದ ಒಂದು ಜಲಾಶಯದ ದಂಡೆಯಲ್ಲಿ ಆತನು ಕುದುರೆಯನ್ನು ನಿಲ್ಲಿಸಿ ಕೆಳಗಿಳಿದು ಪ್ರಾತರ್ವಿಧಿಗಳನ್ನು ತೀರಿಸಿಕೊಳ್ಳಲು ನಿಶ್ಚಯಿಸಿದನು. ಬಳಿಕ ಆತನು ಒಂದು ಗಿಡಕ್ಕೆ ಕುದುರೆಯನ್ನು ಕಟ್ಟಿ ಶೌಚ–ಮುಖಮಾರ್ಜನಾದಿಗಳನ್ನು ಮಾಡಿಕೊಂಡು ಕುದುರೆಯ ಬಳಿಯಲ್ಲಿ ಬಂದು ಅದನ್ನು ಚಪ್ಪರಿಸಿ, ಉತ್ಸಾಹಗೊಳಿಸಿದನು. ಬಳಿಕ ಅದರ ಕೊರಳ ಹಗ್ಗದಿಂದ ಅದರ ಕಾಲುಕಟ್ಟಿ ಮೇಯುವದಕ್ಕಾಗಿ ಬಿಡಲು, ಅದು ಅಡವಿಯೊಳಗಿನ ಕರಿಕೆಯನ್ನು ಆರಿಸಿ ತಿನ್ನಹತ್ತಿತು. ಇತ್ತ ನಾಯಕನೂ ಕುದುರೆಯ ಮೇಲಿನ ಗಾಸೆಯನ್ನು ಚಲ್ಲಿಕೊಂಡು ವಿಶ್ರಮಿಸತೊಡಗಿದನು.

ನಾಯಕನಿಗೆ ಆ ರಾತ್ರಿ ಅಖಂಡ ನಿದ್ದೆಯಿದ್ದಿಲ್ಲ ಮತ್ತು ಆ ರಾತ್ರಿಯಲ್ಲಿ ಒದಗಿದ ಹಲವು ಅದ್ಭುತ ಪ್ರಸಂಗಗಳಿಂದ ಆತನ ಚಿತ್ತವೃತ್ತಿಯು ಉದಾಸವಾಗಿತ್ತು, ನಾನು ಇನ್ನು ಎಲ್ಲಿಗೆ ಹೋಗಬೇಕು? ಏನುಮಾಡಬೇಕು ಎಂದು ಆತನು ಆಲೋಚಿಸತೊಡಗಿದನು. ಅಷ್ಟರಲ್ಲಿ ಬೆಳ್ಳಗೆ ಬೆಳಗಾಗಿ, ಸಮೀಪದಲ್ಲಿ ಒಂದು ಹಳ್ಳಿಯಿರುವದನ್ನು ಆತನು ನೋಡಿದನು. ರಣಹುಚ್ಚಿಯ ಸೂಚನೆಯಂತೆ ವೇಷಾಂತರವಾದಿ ಕಾಲಹರಣಮಾಡುವದು ಆತನಿಗೆ ಸಮ್ಮತವಾಯಿತು; ಆದರೆ ಯಾವ ವೇಷದಿಂದ ಕಾಲಹರಣ ಮಾಡಬೇಕೆಂಬುದರ ನಿರ್ಧಾರವನ್ನು ಆತನು ಮಾಡಬೇಕಾಯಿತು. ವಿಚಾರಾಂತರದಲ್ಲಿ ಆತನಿಗೆ ದನಕಾಯುವ ಕೆಲಸವು ಯೋಗ್ಯವಾಗಿ ತೋರಿತು. ಆ ಹೀನ ಕೆಲಸ ಮಾಡುವವರಿಗೆ ಎರಡನೆಯವರ ಗುರುತು ಪರಿಚಯವಾಗುವ ಸಂಭವವು ಕಡಿಮೆ; ಮತ್ತು ಗೋಸೇವೆಯಿಂದ ದೇಹವು ಪವಿತ್ರವಾಗುವದಲ್ಲದೆ, ಮೇಲೆ ಪುಣ್ಯಪ್ರಾಪ್ತಿಯೂ ಆಗುವದು. ಈ ಲಾಭವನ್ನು ನಾಯಕನು ಮನಸ್ಸಿನಲ್ಲಿ ತಂದನು. ಬಳಿಕ ಆತನು ಇನ್ನಿಷ್ಟು ಮಾರ್ಗವನ್ನು ಕ್ರಮಿಸಿ ಮತ್ತಿಷ್ಟು ದೂರಹೋಗಬೇಕೆಂದು ನಿಶ್ಚಯಿಸಿ, ಮತ್ತೆ ಕುದುರೆಯನ್ನು ಹತ್ತಿದನು. ಆತನು ನಾಲ್ಕುತಾಸು ಹೊತ್ತು ಏರುವವರೆಗೆ ಹಾದಿಯನ್ನು ನಡೆದುಹೋಗಲು, ಒಂದು ಅಡವಿಯಲ್ಲಿ ಆಕಳುಗಳ ವಿಶಾಲವಾದದ್ದೊಂದು ಹಟ್ಟಿಯು ಆತನ ಕಣ್ಣಿಗೆ ಬಿದ್ದಿತು. ಆ ಅರಣ್ಯ ಪ್ರದೇಶವು ಹುಲ್ಲು ನೀರುಳ್ಳದ್ದಾಗಿ ದಟ್ಟವಾದ ದೊಡ್ಡದೊಡ್ಡ ಗಿಡಗಳಿಂದ ಅದು ಬಹು ರಮ್ಯವಾಗಿ ತೋರುತ್ತಿತ್ತು, ಅಲ್ಲಿ ವಿಶಾಲವಾದದ್ದೊಂದು ಕೆರೆಯೂ, ಆ ಕೆರೆಯಿಂದ ಹೊರಬಿದ್ದು ಹರಿಯುತ್ತಿದ್ದ ಒಂದು ಹಳ್ಳವೂ ಆತನ ಮನಸ್ಸನ್ನು ಚೆನ್ನಾಗಿ ರಮಿಸಿದವು; ಆದ್ದರಿಂದ ಈ ಹಟ್ಟಿಯ ಯಜಮಾನನ ಬಳಿಯಲ್ಲಿಯೇ

ತಾನು ದನಗಾಹಿಯಾಗಿ ಕಾಲಹರಣ ಮಾಡಬೇಕೆಂದು ನಿಶ್ಚಯಿಸಿ ಆ ಸ್ವಚ್ಛನೀರಿನ ಹಳ್ಳದಲ್ಲಿ ಸ್ನಾನಮಾಡಿ,ತನ್ನ ರಕ್ತಮುಣುಗಿದ್ದ ಉಡಿಗೆ–ತೊಡಿಗೆಗಳನ್ನು ಒಗೆದು ಒಣಗಿಸಿಕೊಂಡು ಧರಿಸಿ, ತನಗಾಗಿದ್ದ ಗಾಯಗಳಿಗೆ ರಣಹುಚ್ಚಿಯು ಹೇಳಿದ್ದ ಔಷಧವನ್ನು ಹಚ್ಚಿ, ಆಕೆಯ ಶ್ರಮಪರಿಹಾರಕ ಔಷಧವನ್ನೂ ಸೇವಿಸಿದನು. ಅತ್ತ ಆತನ ಹಸಿದಿದ್ದ ಕುದುರೆಯು ಅಲ್ಲಿ ಹಳ್ಳದ ದಂಡೆಯಲ್ಲಿ ಯಥೇಚ್ಛವಾಗಿದ್ದ ಎಳೆಕರಿಕೆಯನ್ನು ಪರಪರ ಹರಿದು ಮೇಯತೊಡಗಿತು. ಅದನ್ನು ನೋಡಿ ಭರಮನಾಯಕನು ಸಂತೋಷಪಟ್ಟು, ತಾನು ಒಂದು ದಟ್ಟವಾದ ನೆಳಲಿನ ಗಿಡದ ಬುಡದಲ್ಲಿ ವಿಶ್ರಮಿಸಿದನು; ಆದರೆ ಆತನಿಗೆ ನಡನಡುವೆ ರಹಣಹುಚ್ಚಿಯ ನೆನಪು ಆಗಿ ಆತನ ಮನಸ್ಸು ಪಶ್ಚಾತ್ತಾಪ ಪಡುತ್ತಲೇ ಇದ್ದಿತು!

## ಜಯಲಕ್ಷ್ಮಿಯು

ಹೀಗೆ ಭರಮನಾಯಕನ ಮನಸ್ಸು ರಣಹುಚ್ಚಿಯ ಸ್ಮರಣದಿಂದ ಪಶ್ಚಾತ್ತಾಪ ಪಡುತ್ತಿತ್ತಲ್ಲದೆ, ತಾನು ಹತ್ತಿಕೊಂಡು ಬಂದಿದ್ದ ರಣಹುಚ್ಚಿಯ ಸುಲಕ್ಷಣ ಕುದುರೆಯ ವ್ಯವಸ್ಥೆಯನ್ನು ಹೇಗೆ ಮಾಡಬೇಕೆಂಬ ಬೇರೊಂದು ವಿಚಾರವು ಆತನ ಮನಸ್ಸನ್ನು ಕೊರೆಯಹತ್ತಿತು. ಪರರ ಸೊತ್ತಿನ ವ್ಯವಸ್ಥೆಯನ್ನು ಸ್ವಾತಂತ್ರ್ಯವಹಿಸಿ ಮಾಡುವದು ಸಂಪನ್ನರಿಗೆ ಪರಮ ಕಷ್ಟದಾಯಕವು; ಆದರೆ ಈಗ ಕುದುರೆಯ ವ್ಯವಸ್ಥೆಮಾಡದಿದ್ದರೆ ಗತಿಯಿದ್ದಿಲ್ಲ. ತಾನು ಚಿತ್ರದುರ್ಗದ ಹಕ್ಕುದಾರನಾದ ನಾಯಕನೇ ಇದ್ದು, ರಣಹುಚ್ಚಿಯು ತನ್ನ ಪಕ್ಷದವಳೇ ಆಗಿರುವದರಿಂದ, ಆಕೆಯು ಕುದುರೆಯನ್ನು ತನ್ನ ಕುದುರೆಯೆಂದು ಭಾವಿಸಿ, ಸ್ವತಂತ್ರದಿಂದ ತಾನು ಅದರ ವ್ಯವಸ್ಥೆಮಾಡಿದರೆ ಅನ್ಯಾಯವಾಗದೆಂದು ಆತನು ನಿರ್ಣಯಿಸಿಕೊಂಡನು; ಆದರೆ ಅಷ್ಟರಿಂದ ಆತನ ಸಮಾಧಾನವಾಗಲಿಲ್ಲ. ಕುದುರೆಯ ವ್ಯವಸ್ಥೆಯನ್ನು ಹೇಗೆ ಮಾಡಬೇಕೆಂಬ ಆಲೋಚನೆಯು ಆತನನ್ನು ಬಾಧಿಸುತ್ತಲೇ ಇತ್ತು. ತಾನಿದ್ದಲ್ಲಿ ತನ್ನ ಕುದುರೆಯಿರುವದು ಸ್ವಾಭಾವಿಕವಷ್ಟೆ? ಇಂತಹ ವಿಪನ್ನ ಸ್ಥಿತಿಯಲ್ಲಿಯೂ ಆತನು ತನ್ನ ಕುದುರೆಯನ್ನು ತಾನಿದ್ದಲ್ಲಿ ಹೇಗಾದರೂ ಕಷ್ಟಪಟ್ಟು ಅದರ ಸಂರಕ್ಷಣವನ್ನು ಮಾಡಿದರೂ ಮಾಡಬಹುದಾಗಿತ್ತು; ಆದರೆ ಹಾಗೆ ಮಾಡಿದರೆ, ದನಕಾಯುವವನಿಗೆ ಇಂತಹ ಕುದುರೆ ಎಲ್ಲಿಂದ ಬರಬೇಕು? ಇಂತಹ ಕುದುರೆಯವನು ದನಕಾಯಲಿಕ್ಕೆ ಯೋಗ್ಯನು ಹೇಗೆ? ಈತನು ಯಾವನೋ ಒಬ್ಬ ಘನವಂತನಿದ್ದು ಅಕಸ್ಮಾತ್ ಯಾವದೋ ಒಂದು ವಿಪತ್ತಿಗೆ ಗುರಿಯಾದದ್ದರಿಂದ, ಈತನು ಹೀಗೆ ದನಕಾಯಲು ಸಿದ್ಧನಾಗಿರಬಹುದು, ಎಂಬಿವೇ ಮೊದಲಾದ ಚರ್ಚೆಗಳಿಗೆ ಆಸ್ಪದ ಉಂಟಾಗಿ, ಆತನ ರೂಪಾಚ್ಛಾದನಕ್ಕೆ ತೊಂದರೆಯುಂಟಾಗಬಹುದಾಗಿತ್ತು; ಅದ್ದರಿಂದ ಆ ವಿಚಾರವನ್ನು ಆತನು ಬಿಟ್ಟುಬಿಟ್ಟನು. ಇನ್ನು ತನ್ನ ಆ ಕುದುರೆಯನ್ನು ತನ್ನ ನಂಬಿಗೆಯ ಯಾರಲ್ಲಿಯಾದರೂ ಆತನು ಇಡಬಹುದಾಗಿತ್ತು; ಆದರೆ ದುರ್ಗದ ಈಗಿನ ದಳವಾಯಿಗಳ

ಗೊಂದಲದ ಕಾಲದಲ್ಲಿ ಆತನಿಗೆ ನಂಬಿಗೆಯ ಜನರು ಸಿಗುವದೇ ಕಷ್ಟವಾಗಿತ್ತು ಅಲ್ಲದೆ, ಅನ್ಯರಲ್ಲಿ ಕುದುರೆಯನ್ನು ಇಡಲಿಕ್ಕೆ ಹೋದಾಗಲೇ ಅವರು ಸಂಶಯದಿಂದ ತನ್ನನ್ನು ಹಿಡಿದು ಮುದ್ದನಿಗೆ ಒಪ್ಪಿಸಿಬಿಟ್ಟರೆ ಮಾಡುವದೇನೆಂಬ ಸಂಶಯವು ಬಂದು, ಆ ವಿಚಾರವನ್ನು ಆತನು ಬಿಟ್ಟುಬಿಟ್ಟನು! ಇನ್ನು ಆತನು ಕುದುರೆಯ ವ್ಯಾಪಾರಿಯಂತೆ ತನ್ನ ಕುದುರೆಯನ್ನು ಯಾರಿಗಾದರೂ ಮಾರಿಬಿಡಬಹುದಾಗಿತ್ತು ಆದರೆ ಕುದುರೆಯ ಗುಣಗಳಿಗೂ, ಅದರ ಉತ್ತಮ ಲಕ್ಷಣಗಳಿಗೂ ಲುಬ್ಧನಾಗಿ ಹೋಗಿದ್ದ ಆ ವೀರಾಗ್ರೇಸರನಿಗೆ ತನ್ನ ಆ ಕುದುರೆಯನ್ನು ಮಾರುವ ದೆಂದರೆ, ತನ್ನನ್ನೇ ಮಾರಿಕೊಂಡಂತೆ ಎಂಬ ಭಾವವು ಉಂಟಾಗಿ, ಆತನು ಆ ವಿಚಾರವನ್ನೂ ಬಿಟ್ಟುಬಿಟ್ಟನು. ಇನ್ನು ಕಟ್ಟಕಡೆಯ ಉಪಾಯವೆಂದರೆ, ಕುದುರೆಯ ಕಣ್ಣಿಯ ಒಡೆದು ಎತ್ತಾದರೂ ಹೋಗಲೆಂದು ಅದನ್ನು ಬಿಟ್ಟುಬಿಡುವದು; ಆದರೆ ಪ್ರಾಣಸಂಕಟದಿಂದ ತನ್ನನ್ನು ಇದೇ ಈಗ ಪಾರುಮಾಡಿರುವ ಆ ನಂಬಿಗೆಯ ಕುದುರೆಯನ್ನು ಕೃತಘ್ನನೂ, ದಯಾಶೂನ್ಯನೂ ಆಗಿ, ಇಂತಹ ಕಟ್ಟಡವಿಯಲ್ಲಿ ಅದನ್ನು ಬಿಟ್ಟುಬಿಡುವದೆಂದರೆ, ಹೊಟ್ಟೆಯಮಕ್ಕಳ ರಕ್ಷಣಮಾಡಲಾರದೆ ಅವರನ್ನು ಕ್ರೂರಮೃಗಗಳ ಬಾಯಿಗೆ ಕೊಟ್ಟಂತೆ ಆಗುವದೆಂಬ ವಿಚಾರ ವುಂಟಾಗಲು, ಕುದರೆಯನ್ನು ಬಿಟ್ಟ ಹೊಡೆಯಲಿಕ್ಕೆ ಆತನು ಹಿಂದೆ ಮುಂದೆ ನೋಡಹತ್ತಿದನು!

ಹೀಗೆ ಕುದುರೆಯ ಯೋಗಕ್ಷೇಮದ ವಿಚಾರದಲ್ಲಿ ಮಗ್ನನಾಗಿ ಹೋಗಿದ್ದ ಆ ನಾಯಕನು ಆ ನಾಲ್ಕು ವಿಚಾರಗಳಲ್ಲಿ ಯಾವ ವಿಚಾರವು ಯೋಗ್ಯವೆಂಬದನ್ನು ಕುರಿತು ಮತ್ತೆ ಆಲೋಚಿಸ ತೊಡಗಿದನು.ಈಗಿನ ಆತನ ಕುದುರೆಯ ವಿಷಯದ ವಿಚಾರವು, ಬಾಯೊಳಗಿನ ಬಿಸಿತುಪ್ಪದ ವಿಚಾರದಂತೆ ಆಯಿತು; ಯಾಕಂದರೆ, ಉಗುಳಿದರೆ ತುಪ್ಪ ಹೋಗುವದು, ಉಗುಳದಿದ್ದರೆ ಬಾಯಿ ಸುಡುವದು ಎಂಬಂತೆ, ಕುದುರೆಯನ್ನು ಇಟ್ಟುಕೊಂಡರೆ ತನ್ನ ಘಾತವಾಗುವ ಸಂಭವವಿರುವದು,ಕುದುರೆಯನ್ನು ಬಿಟ್ಟುಕೊಟ್ಟರೆ ತಾನು ಕೃತಘ್ನನೂ, ದಯಾಶೂನ್ಯನೂ, ಮಮತಾಹೀನನೂ ಆಗಬೇಕಾಗುತ್ತಿತ್ತು! ಅದರಲ್ಲಿ ಶೂರರಿಗೆ ಉತ್ತಮ ಕುದುರೆಯೆಂದರೆ, ಪ್ರಾಣಕ್ಕಿಂತಲೂ ಹೆಚ್ಚಿನದೆಂಬ ಮಾತನ್ನು ಆತನು ಅರಿತಿದ್ದನು. ಈ ಸ್ಥಿತಿಯಲ್ಲಿ ನಾಯಕನ ಯಾವ ವಿಚಾರದ ನಿರ್ಧಾರವೂ ಆಗದೆ, ಆತನು ಅತ್ಯಂತ ಕನಿಕರದಿಂದ ಕುದುರೆಯ ಕಡೆಗೆ ನೋಡಲಿಕ್ಕೂ, ಆ ಕುದುರೆಯ ಹುಲ್ಲು ಮೇಯುವದನ್ನು ಬಿಟ್ಟು, ಬಾಯಲ್ಲಿಯ ಹುಲ್ಲು ಬಾಯಲ್ಲಿಯೇ ಇರಲು, ಬಾಯಿ ಆಡಿಸದೆ ನಾಯಕನನ್ನು ದಿಟ್ಟಿಸಿ ನೋಡಲಿಕ್ಕೂ ಗಂಟೇ ಬಿದ್ದಿತು! ಆಗಂತು ನಾಯಕನಿಗೆ ಬಹಳ ಕಸಿವಿಸಿಯಾಯಿತು! "ನಿನ್ನನ್ನು ಹೊತ್ತುಕೊಂಡು ಬಂದು ದಣಿದು ಹಸಿವೆಯಿಂದ ಕಂಗಾಲಾಗಿದ್ದ ನನ್ನನ್ನು ಇಷ್ಟರಲ್ಲಿಯೇ ನೀನು ಬಿಟ್ಟು ಬಿಡುವೆಯಾ?" ಎಂದು ತನ್ನ ಕುದುರೆಯು ತನ್ನನು ಕನಿಕರದಿಂದ ಕೇಳುವದೆಂಬ ಭಾವವು ನಾಯಕನಲ್ಲಿ ಉಂಟಾಗಲು, ಆತನು ಕುಳಿತಿದ್ದ ಸ್ಥಳದಿಂದ ತಟ್ಟನೆ ಎದ್ದು, ಕುದುರೆಯಬಳಿಗೆ ಹೋದನು. ಆಗ ಕುದುರೆಯ ಬೆನ್ನ ಮೇಲಿನ ಜೀನು ಬೆನ್ನಮೇಲೆಯೇ ಇತ್ತು! ಆಗ ಅದರ ಬೆವತಿದ್ದ ಮೈಯು ದೂಳಡರಿ ಮಲಿನವಾಗಿ ತೋರುತ್ತಿತ್ತು ಆ ಜಾತಿವಂತ ಚಪಲ ಕುದುರೆಯು, ತನ್ನ ಒಡೆಯನು ತನ್ನ ಬಳಿಗೆ ಬಂದದ್ದನ್ನು ನೋಡಿ, ಬಾಯಲ್ಲಿಯ ಹುಲ್ಲನ್ನು ಅನುಸರಿಸಿ ನುಂಗುತ್ತ

ನಾಗಾಲುಗಳನ್ನು ಎತ್ತಿ ಎತ್ತಿ ಇಡುತ್ತ ಪ್ರೇಮಾತಿಶಯದಿಂದ ಬಾಲಕೊಡುವುತ್ತ ಗೋಣನ್ನು ಕೆಳಗೆ ಮೇಲೆ ಮಾಡುತ್ತ ನಾಯಕನನ್ನು ಮೂಸಿನೋಡತೊಡಗಿತು!

ಈ ಸ್ಥಿತಿಯಲ್ಲಿ ನಾಯಕನ ಹೃದಯವೂ ಪ್ರೇಮಪೂರ್ಣವಾಗಲು, ಆತನು ಅತ್ಯಂತ ವಾತ್ಸಲ್ಯದಿಂದ ತನ್ನ ಆ ಕುದರೆಯ ಆಯಾಲದ ಕೂದಲ ದೂಳು ಜಾಡಿಸುತ್ತ ಅದರ ಮುಖವನ್ನು ಚುಂಬಿಸಿ ಪಶ್ಚಾತ್ತಾಪದಿಂದ ಅದನ್ನು ಕುರಿತು— ''ಪ್ರೇಮಲಮಿತ್ರಾ, ನನ್ನ ಹಾಳು ಚಿಂತೆಯಲ್ಲಿ ಈವರೆಗೆ ನಾನು ನಿನ್ನ ಬೆನ್ನಮೇಲಿನ ಜೀನನ್ನು ಕೂಡ ಇಳಿಸಲಿಲ್ಲ, ನಿನ್ನ ಬಾಯೊಳಗಿನ ಲಗಾಮವನ್ನೂ ತೆಗೆಯಲಿಲ್ಲ! ಎಂತಹ ನಿರ್ದಯನು ನಾನು! ನನ್ನ ನೀಚಸ್ವಾರ್ಥಕ್ಕೆ ಬೆಂಕಿಹಚ್ಚಿತು; ಎಂದು ನುಡಿಯುತ್ತಿರಲು ತನ್ನ ಒಡೆಯನು ತನ್ನನ್ನು ರಮಿಸಿದ್ದಕ್ಕಾಗಿ ಆತನನ್ನು ಕೃತಜ್ಞತೆಯಿಂದ ಅಭಿನಂದಿಸುತ್ತಿರುವಂತೆ, ಆ ಕುದರೆಯು ತನ್ನ ಬಾಯೊಳಗಿನ ಲಗಾಮವನ್ನು ಕಟಕಟ ಕಡಿಯಹತ್ತಿಗೋಣು ಅಲ್ಲಾಡಿಸಹತ್ತಿತು! ಅದನ್ನು ನೋಡಿ ನಾಯಕನು ಪ್ರೇಮಭರದಿಂದ ಪರವಶನಾದನು! ತನ್ನ ಇಂತಹ ಕೃತಜ್ಞಕುದುರೆಯ ಯೋಗಕ್ಷೇಮವನ್ನು ಮೊದಲು ವಿಚಾರಿಸದೆ, ತಾನು ಮಾತ್ರ ಮೊದಲು ಸ್ನಾನಮಾಡಿ ಝುಳಝುಳ ಆಗಿ ವಿಶ್ರಮಿಸತೊಡಗಿದನೆಂದು ಆತನು ಪಶ್ಚಾತ್ತಾಪಪಡುತ್ತ ಮೊದಲು ಕುದುರೆಯ ಮೈತೊಳೆಯಬೇಕೆಂದು ನಿಶ್ಚಯಿಸಿ, ತನ್ನ ಉಡಿಗೆ-ತೊಡಿಗೆಗಳನ್ನು ತೆಗೆದಿಡ ಹೋಗಲು, ಇತ್ತ ಕುದುರೆಯು ಯಥೇಚ್ಛ ನೆಲದ ಮೇಲೆ ಹೊರಳಾಡಿಶ್ರಮ ಪರಿಹರಿಸಿಕೊಂಡು ಎದ್ದು ಮೈಕೊಡವುತ್ತ ಭುರುಗುಟ್ಟಹತ್ತಿತು! ಅಷ್ಟರಲ್ಲಿ ನಾಯಕನು ತನ್ನ ಗುಡಗಿಯ ಚಣ್ಣವನ್ನು ಬಿಗಿದುಕೊಂಡು, ಬರಿಯ ಮೈಯಿಂದ ಕುದುರೆಯ ಬಳಿಗೆ ಬರಲು,''ಮಣ್ಣಲ್ಲಿ ಆಡಿ ಮಗುವು ತನ್ನ ತಂದೆಯನ್ನು ಅಪ್ಪಿಕೊಂಡು ಆತನ ಮೈಯನ್ನೂ ಮಣ್ಣುಮಾಡುವಂತೆ'' ನೆಲದಮೇಲೆ ಹೊರಳಾಡಿದ್ದರಿಂದ ಮಣ್ಣುಮೆತ್ತಿದ ಆ ಕುದುರೆಯು, ಪ್ರೇಮಭರದಲ್ಲಿ ತನ್ನ ಕತ್ತಿನಿಂದ ನಾಯಕನ ಮೆಯ್ಯನ್ನು ತಿಕ್ಕಿತಿಕ್ಕಿಆತನ ಮೈಯನ್ನೂ ಮಣ್ಣುಮಾಡಿತು!

ಹೀಗಿರುವಾಗ ಆ ಗುಣಾಢ್ಯಕುದುರೆಯ ಮಮತೆಯ ಈ ಕೃತಿಯಿಂದ ಧನ್ಯನಾಗಿ ಆ ನಾಯಕನು ಅದರ ಸೋಟೆಗೆ ಕಾಡಣಿಯ ಹಗ್ಗ ಹಚ್ಚಿ ಅದನ್ನು ಆ ದೊಡ್ಡ ಕೆರೆಯಲ್ಲಿ ಈಸು ಹೊಡೆದು, ಅದರ ಕಾಡಣಿಯ ಹಗ್ಗಹಿಡಿದು ತಾನೂ ಅದರ ಹಿಂದೆ ಈಸುಬಿದ್ದು ಅದರ ಮೋರೆಯಮೇಲೆ ನೀರು ಉಗ್ಗಹತ್ತಿದನು. ಆಗಿನ ಆ ನೆಚ್ಚಿನ ಗೆಳೆಯರ ಜಲಕ್ರೀಡೆಯು ಪ್ರೇಕ್ಷಣೀಯವಾಗಿತ್ತು, ಕುದರೆಯು ಭರದಿಂದ ಈಸುತ್ತ ಭುರುಗುಟ್ಟುತ್ತ ಮುಂದಕ್ಕೆ ಹೋಗುತ್ತಿರುವಾಗ,ತರುಣನಾದ ಬಲಿಷ್ಠನಾಯಕನು ಕಾಡಣಿಯ ಹಗ್ಗಬಿಡದೆ ಕಸುವಿನಿಂದ ಮಾರಗೈಹಾಕುತ್ತಕುದುರೆಯ ಮುಂದೆ ಹೋಗಿ ಅದರ ಮೋರೆಯ ಮೇಲೆ ನೀರು ಉಗ್ಗಲು, ಆ ಕುದುರೆಯು ಮೋರೆ ತಿರುವಿ ತಿರುವಿ, ಹೊರಳಿ ಹೊರಳಿ, ಮತ್ತೊಂದು ದಿಕ್ಕಿಗೆ ಈಸತೊಡಗುವದು! ನಾಯಕನು ಗರಡಿಯಮನೆಯಾಡಿಯಾಡಿ ದಮ್ಮುಕಟ್ಟಿದ ಗರಡಿಯಾಗಿದ್ದರೆ, ಕುದುರೆಯು ಒಂದೇ ಸವನೆ ವೇಗದ ಸವಾರಿ ಮಾಡಿ ಮಾಡಿ ದಮ್ಮುಕಟ್ಟಿದ ಬಲಿಷ್ಠ ಪ್ರಾಣಿಯಾಗಿತ್ತು! ಹೀಗೆ ಎಷ್ಟು ಈಸಿದರೂ ದಮ್ಮುಹತ್ತದ ಆ ಸ್ನೇಹಿತರಿಬ್ಬರ ಯಥೇಚ್ಛವಾದ

ಜಲಕ್ರೀಡೆ ನಡೆದಿರಲು ನಾಯಕನು ಕುದುರೆಯನ್ನು ದಂಡೆಗೆ ತಂದು ಅತ್ಯಂತ ಆಸ್ಥೆಯಿಂದ ಅದರ ಮೈ ಝುಳಝುಳ ತೊಳೆದು ಕರಾರಿಮಾಡಿ, ಹಳ್ಳದ ದಂಡೆಯಲ್ಲಿ ಯಥೇಚ್ಛವಾಗಿ ಬೆಳೆದಿದ್ದ ಕರಿಕೆಯಲ್ಲಿ ಅದನ್ನು ಮೇಯಲಿಕ್ಕೆ ಬಿಟ್ಟನು. ಬಳಿಕ ಆತನು ತನ್ನ ನೆಚ್ಚಿನ ಕುದುರೆಯನ್ನು ಕೌತುಕದಿಂದ ನೋಡುತ್ತ ತನ್ನ ಮೊದಲಿನ ವಿಶ್ರಾಂತಿಯ ಸ್ಥಳಕ್ಕೆ ಬಂದು ಕುಳಿತುಕೊಳ್ಳಲು, ಮತ್ತೂ ಮತ್ತೂ ತನ್ನ ಆ ಕುದುರೆಯನ್ನೇ ನೋಡುವ ಹಾಗೆ ಆತನಿಗೆ ಆಗುತಿತ್ತು! ಹೀಗೆ ನಾಯಕನು ಪ್ರೇಮಾತಿಶಯದಿಂದ ಮತ್ತೂ ಮತ್ತೂ ತನ್ನ ಕುದುರೆಯನ್ನು ನೋಡುತ್ತಿರುವಾಗ, ಆತನ ಮನಸ್ತಾಪಗಳೆಲ್ಲ ಮರೆತುಹೋಗಿದ್ದವು, ಆತನಿಗೆ ನಿನ್ನೆಯ ಕಾಳಗದಲ್ಲಾಗಿದ್ದ ಗಾಯಗಳ ನೋವೂ ಆತನ ಗಣನೆಗೆ ಬಾರದಾಗಿತ್ತು!

ಝುಳಝುಳ ಮೈತೊಳೆದಿದ್ದ ಸಲಕ್ಷಣವಾದ ನಾಯಕನ ಆ ಹೆಣ್ಣು ಕುದುರೆಯು, ಮೈ ಆರಿ ಮಿರಿಮಿರಿ ಮಿಂಚಹತ್ತಿದ್ದರಿಂದ, ಅದು ನಾಯಕನ ಕಣ್ಣಿಗೆ ಬಹು ಮನೋಹರವಾಗಿ ತೋರಹತ್ತಿತು. ಅದನ್ನು ನೋಡಿ ನಾಯಕನು ಹಿರಿಹಿರಿ ಹಿಗ್ಗಿದನು. ಆತನು ಈವರೆಗೆ ಎಷ್ಟೋ ಕುದುರೆಗಳನ್ನು ನೋಡಿದ್ದರೂ, ಇಂದಿನ ಆ ಹೆಣ್ಣು ಕುದುರೆಯು ಆತನ ಮನಸ್ಸನ್ನು ಎಳಕೊಂಡಷ್ಟು ಬೇರೆ ಯಾವ ಕುದುರೆಗಳೂ ಎಳಕೊಂಡಿದ್ದಿಲ್ಲ. ಆ ಮನೋಹರವಾದ ಕುದುರೆಯ ಮೈಬಣ್ಣವು ಕಪ್ಪು ಇದ್ದು ಅದರ ಹಣೆಯಲ್ಲಿ ಬಿಳಿಯ ನಾಮವು ಇದ್ದಿತು. ಅದರ ನಾಲ್ಕೂ ಕಾಲುಗಳ ತುದಿಗಳು ಬಿಳುಪಾಗಿದ್ದದ್ದರಿಂದ, ಅದರ ಪಂಚಕಲ್ಯಾಣತ್ವವು ನೋಡುವವರ ಮನಸ್ಸಿಗೆ ಉಲ್ಲಾಸವನ್ನುಂಟುಮಾಡುತ್ತಿತ್ತು. ಇಂತಹ ಸಲಕ್ಷಣ ಕುದುರೆಯು ಎತ್ತರದಲ್ಲಿ ನಮ್ಮ ಬಿಚ್ಚುಗತ್ತಿಯ ಭರಮನಾಯಕನ ಎದೆಗೆ ಬರುವಷ್ಟು ಎತ್ತರವಾಗಿತ್ತು.ಅದು ಇಂದು ಹಸಿದದ್ದರಿಂದ ಅದರ ಹೊಟ್ಟೆ ಬೆನ್ನಿಗೆ ಹತ್ತಿದಂತಾಗಿದ್ದರೂ, ಒಟ್ಟಿನಲ್ಲಿ ಅದು ದಷ್ಟ ಪುಷ್ಟ ಕುದುರೆಯೆಂದು ಯಾರಿಗಾದರೂ ಸ್ಪಷ್ಟ ಕಾಣುವಹಾಗಿತ್ತು. ಅದು ತನ್ನ ನೆಟ್ಟನ್ನ ಕಿವಿಗಳನ್ನು ಹೊರಳಿಸುತ್ತ ಹೊರಳಿಸುತ್ತ,ಬಾಲವನ್ನು ಜಾಡಿಸುತ್ತ ಜಾಡಿಸುತ್ತ ಗಪಗಪಹುಲ್ಲು ತಿನ್ನುತ್ತ,ಬೇಗಬೇಗನೆ ಮುಂಬರಿದು ಸಾಗುತ್ತಿರುವದನ್ನು ನೋಡಲು, ಉಪವಾಸ ಕುಳಿತಿರುವ ತನ್ನ ಒಡೆಯನು ಬೇಗನೆ ಸವಾರಿಮಾಡಲೆಳಿಸಿದರೆ, ಅಷ್ಟರಲ್ಲಿ ತಾನುಬೇಗನೆ ಹಸಿವೆ ಯಾಗದಷ್ಟು ಹೊಟ್ಟೆತುಂಬ ಹುಲ್ಲು ಮೇದು, ಗಟ್ಟಿಮುಟ್ಟಿಯಾಗಿ ಜಾಗ್ರತೆ ಸಿದ್ಧವಾಗಿ ನಿಲ್ಲಬೇಕೆಂ''ಬ ಆತುರದಿಂದ, ಆ ಹಳ್ಳದ ದಂಡೆಗೆ ದಂಡೆಯನ್ನೇ ತಿನ್ನಲು ಹೆಣಗುತ್ತಿರುವಂತೆ ತೋರುತ್ತಿತ್ತು! ಇದೂ ಅಲ್ಲದೆ, ತನ್ನ ಒಡೆಯನು ಸವಾರಿಮಾಡಲು ತನ್ನನ್ನು ಕರೆಯಗಿರಿ ಯುವನೋ ಎಂಬದನ್ನು ಆಗಾಗ ಎದುರುನೋಡುತ್ತಿರುವಂತೆ, ಅದು ಮೇಯುತ್ತ ಮೇಯುತ್ತ ಆಗಾಗ್ಗೆ ತಲೆಯೆತ್ತಿ ಹುಲ್ಲು ತಿನ್ನುತ್ತ ನಾಯಕನ ಕಡೆಗೆ ತಿರುತಿರುಗಿ ಮಮತೆಯಿಂದ ನೋಡುತ್ತಲಿತ್ತು! ಭಕ್ತಿ-ವಿಶ್ವಾಸಗಳ ಸ್ವಭಾವದ ಪ್ರಾಣಿಗಳ ರೀತಿಯು ಹೀಗೆಯೇ ಸರಿ! ತನ್ನ ಒಡೆಯನನ್ನು ಪ್ರಾಣಕ್ಕಿಂತಲೂ ಹೆಚ್ಚೆಂದು ತಿಳಿದು ಜತನಮಾಡುವ ಸ್ವಭಾವದ ಆ ಜಾತಿವಂತ ಕುದುರೆಯು, ತನ್ನ ಒಡೆಯನಿಗೆ ಯಾವ ಕಡೆಯಿಂದಲೂ ಸಂಕಟಗಳು ಒದಗಿರುವದಿಲ್ಲವಷ್ಟೆ, ಎಂಬುದನ್ನು ಪರೀಕ್ಷಿಸಿ ಮನಗಾಣುತ್ತಿರುವದೋ ಎನ್ನುವಂತೆ, ನಡುನಡುವೆ ಅದು

ಮೇಯುವದನ್ನು ಬಿಟ್ಟು ಕಣ್ಣುಕೆಕ್ಕರಿಸಿ ನಾಲ್ಕೂ ಕಡೆಗೆ ನೋಡುತ್ತಲೂ, ಉಲ್ಲಾಸ ಉಂಟಾದರೆ ನಡನಡುವೆ ಹೇಕರಿಸುತ್ತಲು ಇದ್ದಿತು.!

ಇಂತಹ ಅಪರೂಪದ ಕುದುರೆಯನ್ನು ಕೌತುಕದಿಂದ ನೋಡುತ್ತಿರುವ ನಾಯಕನ ಮನಸ್ಸಿನಲ್ಲಿ ಹಲವು ವಿಚಾರಗಳು ಬರುತ್ತಿರುವಾಗ ಆತನಿಗೆ ಛತ್ರಪತಿ ಶಿವಾಜಿ ಮಹಾರಾಜನ ಕುದುರೆಯ ನೆನಪು ಆಯಿತು. ಆ ಮಹಾರಾಷ್ಟ್ರವೀರನ ಭವಾನೀಖಡ್ಗದ,ಹಾಗು ಭವಾನೀ ಕುದುರೆಯ ಜಯಶಾಲಿತ್ವದ ಎಷ್ಟೋ ಗಂಭೀರ ಪ್ರಸಂಗಗಳನ್ನು ಆ ವೀರ ನಾಯಕನು ಕೇಳಿ ಅರಿತಿದ್ದನು. ಪ್ರಸಂಗದಲ್ಲಿ ವೀರರ ವೀರ್ಯೋದ್ರೇಕವು, ವೀರರ ವೀರ್ಯಪ್ರದರ್ಶಕ ಪ್ರಸಂಗಗಳ ಶ್ರವಣದಿಂದಲೇ ಆಗುತ್ತಿರುವದಲ್ಲವೆ? ಭರಮನಾಯಕನು ತನ್ನ ಕ್ಷಾತ್ರವೃತ್ತಿ ಪೋಷಕರಾದ ಪ್ರವಚನಕಾರರಿಂದ, ಅರ್ಜುನ, ಕರ್ಣ, ಭೀಮ ಮೊದಲಾದ ಪ್ರಾಚೀನ ಭಾರತೀಯ ವೀರರ ಪ್ರತಾಪಯುಕ್ತ ಚರಿತ್ರೆಗಳ ಶ್ರವಣಮಾಡಿರುವಂತೆ, ಪೃಥ್ವೀರಾಜ ಚಹ್ವಾಣ,ರಾಣಾ ಪ್ರತಾಪಸಿಂಗ, ರಾಣಾರಾಜಸಿಂಹ, ಛತ್ರಪತಿಶಿವಾಜಿ, ಛತ್ರ ಪತಿಸಂಭಾಜಿ ಮೊದಲಾದ ಆಧುನಿಕ ಭಾರತೀಯ ವೀರರ ಚರಿತ್ರಗಳ ಶ್ರವಣವನ್ನೂ ಮಾಡಿದ್ದನು. ಮೇಲಾಗಿ ತಾನು ಚಿತ್ರದುರ್ಗದ ವೀರನಾಯಕರ ನಾಯಕತನಕ್ಕೆ ಹಕ್ಕುದಾರನಾಗಿರುವೆನೆಂಬ ಉಚ್ಚತರದ ಭಾವನೆಯಿಂದ ಆತನು ಈಗ ಉತ್ತೇಜಿತನಾಗಿದ್ದನು; ಆದ್ದರಿಂದ ಶಿವಾಜಿಯ ಕುದುರೆಯನ್ನು ಹೋಲುತ್ತಿದ್ದ ಕುದುರೆಯು, ತನಗೆ ರಣಹುಚ್ಚಿಯಿಂದ ಅನಾಯಾಸವಾಗಿ ಲಭಿಸಿರಲು, ತಾನೂ ಶ್ರೀಉತ್ಸವಾಂಬೆಯ ಕೃಪೆಯಿಂದ ಶಿವಾಜಿಯಂತೆ ರಾಜವೈಭವವನ್ನು ನಿಶ್ಚಯವಾಗಿ ಪಡೆಯುವೆನೆಂಬ ಉತ್ಸಾಹವು ಆತನ ಅಂತರಂಗದಲ್ಲಿ ಉತ್ಪನ್ನವಾಗಿ, ಆತನ ಮೈ ಉಬ್ಬುತ್ತಲಿತ್ತು!

ಹೀಗೆ ಆವೇಶಗೊಂಡಿದ್ದ ನಾಯಕನು ತನ್ನ ಕತ್ತಿಯನ್ನು ಒರೆಯಿಂದ ಹಿರಿದು— ''ಏನು? ನನ್ನ ದೊರೆತನಕ್ಕೆ ವಿಘ್ನಕಾರಿಯೆಂದರೆ, ದಳವಾಯಿ ಮುದ್ದನಲ್ಲವೆ? ಅಹ! ಅವನೇನು ಕಃಪದಾರ್ಥವು! ಮಾತೇ, ಉತ್ಸವಾಂಬೇ, ಶಿವಛತ್ರಪತಿಯ ಕುಲಸ್ವಾಮಿನಿಯು ತುಳಜಾಪುರದ ಶ್ರೀತುಳಜಾಭವಾನಿಯಾಗಿದ್ದರೆ, ನನ್ನ ಕುಲಸ್ವಾಮಿನಿಯು ನೀನು ಉಚ್ಚಂಗಿ ದುರ್ಗದ ಶ್ರೀಉತ್ಸವಾಂಬೆಯಾಗಿರುತ್ತೀ! ಇದುನೋಡು, ಈ ಖಡ್ಗವು ನಿನ್ನ ಶ್ರೇಷ್ಠ ಭಕ್ತನಾಗಿದ್ದ ತಿಮ್ಮನಾಯಕನು ಧರಿಸಿದ್ದು! ಆತನು ಕಲಬುರ್ಗೆಯ ಕೋಟೆಯೊಳಗಿನವರ ಕೊಲೆಯಿಂದ ರಕ್ತದ ಕೋಡಿಯಹರಿಸಿ ''ಹಗಲಕಗ್ಗೊಲೆಮಾನ್ಯ''ಎಂಬ ಬಿರುದನ್ನು ವಿಜಯನಗರದ ರಾಯರಿಂದ ಸಂಪಾದಿಸಿದ್ದು ಇದೇ ಖಡ್ಗದಿಂದಲೇ! ಅಂದಬಳಿಕ ದೇವೀ, ಶಿವರಾಯನ ಭವಾನೀ ಖಡ್ಗಕ್ಕೆ, ನಮ್ಮ ವೀರತಿಮ್ಮನಾಯಕನ ಈ ವಿಜಯಶಾಲಿಖಡ್ಗವು ಹಿಂದಾದೀತೇನು? ಅದರಂತೆ ನಮ್ಮ ರಣಹುಚ್ಚಿಯು ನನಗೆ ಕೊಟ್ಟಿರುವ ಈದಿವ್ಯಾಶ್ವವು, ಶಿವಾಜಿಯ ಭವಾನೀ ಅಶ್ವವನ್ನು ನಿಶ್ಚಯವಾಗಿ ಮೀರುವ ಹಾಗಿರುವದು; ಆದ್ದರಿಂದ ನನ್ನ ಈ ದಿವ್ಯಾಶ್ವವನ್ನು ಇಂದಿನಿಂದ ನಾನು ಜಯಲಕ್ಷ್ಮಿಯೆಂದು ಕರೆಯುವೆನು; ಯಾಕಂದರೆ ನಿನ್ನಿನ ಯುದ್ಧದಲ್ಲಿ ಈ ದಿವ್ಯಾಶ್ವವನ್ನು ಹತ್ತಿಕೊಂಡು ಬಂದದ್ದರಿಂದಲೇ,ಆ ರಣಹುಚ್ಚಿಯು ಚಿಕ್ಕ ಅಬಲೆಯಾಗಿದ್ದರೂ ಮುದ್ದನನ್ನು

ಓಡಿಸಿ ಜಯಶಾಲಿನಿಯಾದಳು! ನಾನು ನನ್ನ ಈ ಜಯಲಕ್ಷ್ಮಿಯನ್ನು ಏರಿ ಈ ವೀರತಿಮ್ಮನ ವಿಜಯಖಡ್ಗವನ್ನು ಕೈಯಲ್ಲಿ ಹಿಡಿದು ದಂಡಯಾತ್ರೆಗೆ ಹೊರಟೆನೆಂದರೆ, ಅದಾವ ವೀರನು ನನಗೆ ಇದಿರಾಗುವನು? ಯಾಕೆ ಜಯಲಕ್ಷ್ಮೀ, ನನ್ನ ಮಾತು ನಿಜವಲ್ಲವೆ? ಎಂದು ನುಡಿದು ಆವೇಶಗೊಂಡ ನಾಯಕನು ತನ್ನ ಕುದುರೆಯ ಕಡೆಗೆ ನೋಡುವದಕ್ಕೂ,ಮೇಯುತ್ತಿದ್ದ ಆ ಕುದುರೆಯು ಅಕಸ್ಮಾತ್‌ಮುಖವೆತ್ತಿನಾಯಕನನ್ನು ನೋಡಿ ಹೇಕರಿಸಲಿಕ್ಕೂ ಗಂಟೇ ಬಿದ್ದಿತು!

ಹೀಗೆ ಭರಮನಾಯಕನು ಉಚ್ಚ ಮನೋರಾಜ್ಯದಲ್ಲಿ ಮಗ್ನನಾಗಿರುವಾಗ,ಮಧ್ಯಾಹ್ನವು ಮೀರಿಹೋಗಿ ಎಂಟು ತಾಸಿನ ಮನೆಗೆ ಬಂದಿತ್ತು; ಆದರೂ ಆ ತರುಣವೀರನಿಗೆ ಹಸಿವೆ ನೀರಡಿಕೆಗಳ ಪರಿವೆಯಿದ್ದಿಲ್ಲ! ಮಹತ್ವಾಕಾಂಕ್ಷೆಯಿಂದ ಮತ್ತನಾಗಿರುವ ಆತನಿಗೆ, ಜಗತ್ತಿನ ಲಕ್ಷವೇ ಇಲ್ಲದಿರುವಾಗ, ಹಸಿವೆನೀರಡಿಕೆಗಳ ಪರಿವೆಯಾದರೂ ಹೇಗೆ ಉಳಿಯಬೇಕು? ಆಗ ಆ ಭರಮನಾಯಕನು ಉಚ್ಚತರ ಮನೋರಾಜ್ಯದ ಶಿಖರವನ್ನೇರಿ ಕುಳಿತಿದ್ದನು. ಆತನು ತನ್ನ ನಿಡಿದೋಳಬಲದ ವೈಭವ, ತನ್ನ ಬಿಚ್ಚುಗತ್ತಿಯ ಬಿರುಹೊಯ್ಲದ ವೈಭವ, ತನ್ನ ಜಯಲಕ್ಷ್ಮಿಯ ಸಲ್ಲಕ್ಷಣ ವೈಭವ ಎಂಬ ಈ ವೈಭವತ್ರಯಿಗಳ ಮುಪ್ಪುರಿಯೇ ತಾನಾದಂತಾಗಿರಲು, ತನ್ನ ಬಿಚ್ಚುಗತ್ತಿಯನ್ನು ಝಳಪಿಸಿ ತನ್ನ ಜಯಲಕ್ಷ್ಮಿಯ ಕಡೆಗೆ ನೋಡಿ— ''ಇಲ್ಲಿ ಆ ದ್ರೋಹಿಯಾದ ದಳವಾಯಿ ಮುದ್ದನು ಬಂದಿರುವನೋ''ಎಂದು ಹಿಂದಕ್ಕೆ ತಿರುಗಿ ನೋಡಲು, ನಗೆಮೊಗದ ರಣಹುಬ್ಬೆಯು ನಾಯಕನ ಕಣ್ಣಿಗೆ ಬಿದ್ದಳು! ಆಗಿನ ರಣಹುಬ್ಬೆಯ ಶಾಂತಮೂರ್ತಿಯನ್ನು ನೋಡಿದ ಕೂಡಲೆ, ನಮ್ಮ ಭರಮನಾಯಕನ ಬಿಚ್ಚುಗತ್ತಿಯು ಒರೆಗಂಡು, ಆತನ ರಜೋಗುಣದ ರೂಪಾಂತರವು ಸತ್ವಗುಣದಲ್ಲಿ ಆಗುತ್ತಿರಲು, ಆತನ ಕುದುರೆಯ ವ್ಯವಸ್ಥೆಯ ಚಿಂತೆಯು ತಟ್ಟನೆ ದೂರವಾಗಿ ಆತನದೊಂದು ದೊಡ್ಡಭಾರವು ಇಳಿದಂತಾಯಿತು! ಆಗ ಆತನು ಉತ್ಸಾಹದಿಂದ ರಣಹುಬ್ಬೆಯನ್ನು ಕುರಿತು ನುಡಿದನೇ ನಂದರೆ— ಅಮ್ಮಾ ರಣಹುಬ್ಬೇ, ನೀನು ನನ್ನನ್ನು ಹಳ್ಳಕ್ಕೆ ಕಳಿಸಿ ಕ್ಷಣದಲ್ಲಿ ಮಾಯವಾಗಿ ಬಿಟ್ಟೆಯಲ್ಲ! ನೀನು ಹೋದದ್ದಾದರೂ ಎಲ್ಲಿಗೆ? ನಾನು ಎಷ್ಟು ಹುಡುಕಿದರೂ, ಎಷ್ಟು ಕೂಗಿದರೂ ನಿನ್ನ ಗೊತ್ತೇಹತ್ತದ್ದರಿಂದ, ನೀನು ಆಣೆಯಿಟ್ಟು ಹೇಳಿದಂತೆ. ನಾನು ನಿನ್ನ ಕುದುರೆಯನ್ನು ಹತ್ತಿಕೊಂಡು ಇಲ್ಲಿಗೆ ಬಂದುಬಿಟ್ಟು, ನಿಶ್ಚಯವಾಗಿ ನಿನ್ನ ದ್ರೋಹಿಯಾದೆನು; ಇದಕ್ಕಾಗಿ ನೀನು ನನ್ನನ್ನು ಕ್ಷಮಿಸಿಬೇಕು! ಈದಿನವಾದರೂ ಅಕಸ್ಮಾತ್ತಾಗಿ ನೀನು ಇಲ್ಲಿಗೆ ಬಂದದ್ದು ಪರಮಾಶ್ಚರ್ಯಕರವೇ ಸರಿ. ಒಟ್ಟಿಗೆ, ನಿನ್ನ ಚರಿತ್ರೆಯು ಬಹು ಗೂಢವಾದ ದ್ದೆಂಬದರಲ್ಲಿ ಸಂಶಯವಿಲ್ಲ, ನಿನ್ನ ಆಶ್ಚರ್ಯಕಾರಕ ನಡತೆಯಿಂದ ನಾನು ಮೂಢನಾಗಿ ಹೋಗಿರುವೆನು. ನಾನು ಇಲ್ಲಿಗೆ ಬಂದಿರುವದಾದರೂ ನಿನಗೆ ಹೇಗೆ ಗೊತ್ತಾಗಿರಬಹುದು! ನೀನು ಎಲ್ಲ ಗೂಢವನ್ನು ಬೈಲಿಗಿಟ್ಟ ಹೊರತು ನನ್ನ ಮನಸ್ಸಿನ ತೊಡಕು ಬಿಡಲಾರದು.

ಭರಮನಾಯಕನ ಈ ಮಾತುಗಳನ್ನು ಕೇಳಿ ರಣಹುಬ್ಬೆಯು— ನಾಯಕಾ, ನನ್ನ ಚರಿತ್ರೆಯಲ್ಲಿ ಯಾವ ಗೂಢವೂ ಇರುವದಿಲ್ಲ,ನನಗಾಗಿ ಸಿದ್ಧಪಡಿಸಿ ಇಟ್ಟಿದ್ದ ಕುದುರೆಯು ಅಕಸ್ಮಾತ್ ಎತ್ತೋಹೋಗಿಬಿಟ್ಟಿದ್ದರಿಂದ,ನಾನು ಮತ್ತೊಂದು ಕುದುರೆಯನ್ನು ತರಹೋಗಲು,

ಇಷ್ಟೆಲ್ಲ ಗೊಂದಲವಾಯಿತು. ಕುದುರೆಯಿಲ್ಲದೆ ಕಾಲನಡಿಗೆಯಿಂದ ನಿನ್ನನ್ನು ಹಿಂಬಾಲಿಸಿ ನಾನು ಬರುವ ಸಂಭವವಿದ್ದಿಲ್ಲ. ನಿನಗುಂಟಾಗಬಹುದಾಗಿದ್ದ ತೊಂದರೆಗಳ ಕಲ್ಪನೆಯಿಂದ ನಾನೂ ಬಹಳವಾಗಿ ಚಡಪಡಿಸಿದೆನು; ಆದರೆ ವೀರಭರಮನಾಯಕಾ, ನನ್ನ ಮಾತಿನಂತೆ ನೀನು ತಟ್ಟನೆ ಹೊರಟುಬಂದದ್ದೇ ಬಹಳ ನೆಟ್ಟಗಾಯಿತು. ಇಲ್ಲದಿದ್ದರೆ ನೀನು ದುಷ್ಟಮುದ್ದನ ಕೈಯಲ್ಲಿ ಸಿಕ್ಕುಬಿಡುತ್ತಿದ್ದೆ! ಆತನು ತನ್ನ ಜನರ ಸಹಾಯದಿಂದ ಆ ಅಡವಿಯಲ್ಲೆಲ್ಲ ನಿನ್ನನ್ನು ಮುತ್ತುಮಾಡಿ ಹುಡುಕಿ ನಿರಾಶೆಪಟ್ಟನು. ಆಗಲಿ ಕಾಲಕ್ಕನುಸರಿಸಿ ಆಗುವದು ಆಗಿ ಹೋಗುತ್ತದೆ.ನಿನ್ನ ಈ ಸಲಕ್ಷಣ ಕುದುರೆಯ ಸಲುವಾಗಿಯೇ ನಾನು ಇಲ್ಲಿಗೆ ಬರಬೇಕಾಯಿತು. ನಿನ್ನ ಈ ಕುದುರೆಯು ಸಾಮಾನ್ಯವಾದದ್ದೆಂದು ತಿಳಿಯಬೇಡ. ಇದರ ಲಕ್ಷಣಗಳು ಅತ್ಯುತ್ತಮಗಳಾದವು. ಇದನ್ನು ಹತ್ತಿದವರಿಗೆ ಸೋಲಿನ ಭಯವಿಲ್ಲ. ಈ ಮಾತು ನಿನ್ನಿನ ಕಾಳಗದಲ್ಲಿ ನನ್ನ ಅನುಭವಕ್ಕೆ ಬಂದದ್ದು ನಿನಗಾದರೂ ಗೊತ್ತಿದೆ. ನಾನು ಬೆಳಗಾದ ಬಳಿಕ ಮತ್ತೊಂದು ಕುದುರೆ ತಕ್ಕೊಂಡು, ತರುಣಸರದಾರನ ವೇಷದಿಂದ ಹೊರಟು, ನಿನ್ನ ಕುದುರೆಯ ಹೆಜ್ಜೆಹಿಡಿದು ಜನರನ್ನು ಕೇಳುತ್ತ ಪ್ರಯಾಸದಿಂದ ಇಲ್ಲಿಗೆ ಬಂದೆನು! ಒಟ್ಟಿಗೆ, ದೇವರೇ ನನ್ನನ್ನು ಇಲ್ಲಿಗೆ ಕರತಂದನೆಂದು ತಿಳಿಯತಕ್ಕದ್ದು.ಮೊದಲೇ ಗೊಂದಲದಲ್ಲಿ ಬಿದ್ದಿರಬಹುದಾದ ನಿನ್ನನ್ನು ಮತ್ತೆ ಗೊಂದಲದಲ್ಲಿ ಹಾಕಬಾರದೆಂದು, ನನ್ನ ಕುದುರೆಯನ್ನು ಆ ಹಟ್ಟಿಯಲ್ಲಿ ಬಿಟ್ಟು, ನನ್ನ ನಿಜವಾದ ರೂಪದಿಂದ ನಿನ್ನ ಬಳಿಗೆ ಬಂದಿದ್ದೇನೆ. ಆ ಹಟ್ಟಿಯ ಯಜಮಾನನು ನನಗೆ ಆಪ್ತನಾಗಬೇಕು.ಅಕಸ್ಮಾತ್ ನೀನು ಈ ಸುರಕ್ಷಿತ ಸ್ಥಳಕ್ಕೆ ಬಂದುಬಿಟ್ಟಿದ್ದರಿಂದ, ನೀನು ನಿಶ್ಚಯವಾಗಿ ಮುಂದೆ ಶ್ರೇಯೋವಂತನಾಗುವೆಯೆಂದು ನಾನು ಭಾವಿಸುವೆನು. ನಡೆ, ನಾವು ಇನ್ನು ಆ ಹಟ್ಟಿಗೆ ಹೋಗೋಣ. ಅಲ್ಲಿಗೆ ಹೋದಬಳಿಕ ನಿನಗೆ ಎಲ್ಲ ಸಂಗತಿ ಗೊತ್ತಾಗುವದು. ನಮ್ಮ ರಾಜನಿಷ್ಠನಾದ ದಳವಾಯಿ ಭರಮಪ್ಪನ ಸಹಾಯದಿಂದ ನಾನು ಮುದ್ದನನ್ನು ಗೊತ್ತಿಗೆ ಹಚ್ಚಿದೆನೆಂದರೆ, ಚಿತ್ರದುರ್ಗದ ನಿನ್ನ ದೊರೆತನವು ನಿನ್ನದಾಗುವದು!'' ಎಂದು ಹೇಳಿ, ರಣಹುಚ್ಚಿಯು ಭರಮನಾಯಕನನ್ನು ಕರಕೊಂಡು ಹಟ್ಟಿಗೆ ಹೋದಳು. ಇಂದಿನಿಂದ ಭರಮನಾಯಕನ ಜಯಲಕ್ಷ್ಮೀಕುದುರೆಯು ಭರಮನಾಯಕನ ಬಳಿಯಲ್ಲಿಯೇ ಉಳಿಯಿತೆಂದು ಬೇರೆ ಹೇಳುವ ಕಾರಣವಿಲ್ಲ!

## ಅಶಾಂತನಿಗೆ ಸುಖವೆಲ್ಲಿ?

ದುರ್ಗದ ಅರಮನೆಯೊಳಗಿನ ಸುಂದರವಾದ ಶಯನ ಮಂದಿರ; ಏಳು ತಾಸು ರಾತ್ರಿ ಮೀರಿಹೋಗಿದೆ; ಆ ಮಂದಿರದೊಳಗಿನ ದೀಪಜ್ಯೋತಿಗಳು, ಹಚ್ಚಿದ್ದವು ಹಚ್ಚಿದ ಹಾಗೆ ನಿಚ್ಚಳವಾಗಿ ಉರಿಯುತ್ತಲಿವೆ; ಗೋಡೆಗಳಲ್ಲಿ ಪ್ರಯತ್ನಪೂರ್ವಕ ಸ್ಥಿರಗೊಳಿಸಿದ್ದ ಕನ್ನಡಿಗಳಲ್ಲಿಯ ಪ್ರತಿಬಿಂಬಿತ ದೀಪಜ್ಯೋತಿಗಳಿಂದ, ಆ ಮಂದಿರವು ದೀಪಮಯವಾಗಿ

ಹೋಗಿದೆ; ಆ ಮಂದಿರದ ಗೋಡೆಗಳಲ್ಲಿ ಬರೆದಿದ್ದ ದೇವಾದಿಕರ,ಹಾಗು ವೀರಾಧಿವೀರರ ವಿವಿಧ ಬಣ್ಣಗಳ ಸುಂದರ ಚಿತ್ರಗಳು, ತಮ್ಮನ್ನು ನೋಡುವವರ ಮನಸ್ಸಿನಲ್ಲಿ ಸದ್ಭಾವ-ಶೌರ್ಯಾದಿಗಳ ಸ್ಫೂರ್ತಿಯನ್ನುಂಟು ಮಾಡುವದಕ್ಕಾಗಿ ಚಲಿಸದೆ ಇದ್ದಲ್ಲಿ ಇದ್ದುಬಿಟ್ಟಿರುವಂತೆ ತೋರುತ್ತಲಿವೆ; ಅಲ್ಲಲ್ಲಿ ಒಪ್ಪುತ್ತಿರುವ ವಿವಿಧ ಶಸ್ತ್ರಾಸ್ತ್ರಗಳು, ''ಶೂರರು ಶಸ್ತ್ರಜೀವಿಗಳು'' ಎಂಬ ಸಂಗತಿಯನ್ನು ವ್ಯಕ್ತಗೊಳಿಸುತ್ತಲಿವೆ; ಆ ಮಂದಿರದ ನೆಲಕ್ಕೆ ಹಾಸಿದ್ದ ವಿವಿಧ ಬಣ್ಣಗಳ ರತ್ನಗಂಬಳಿ, ಮಂದಿರದ ಮೇಲ್ಗಡೆಯಲ್ಲಿ ಶೋಭಿಸುವ ಮುತ್ತುರತ್ನಗಳ ಹೊಳಪಿನ ಸುಂದರ ಛತ್ತು ಸುತ್ತುಮುತ್ತಲಿನ ಅಲಂಕೃತಗೋಡೆಗಳು, ಇವುಗಳ ಮಧ್ಯದ ಅವಕಾಶವನ್ನು ತುಂಬಿ ಹೊರಸೂಸುವ ಪುಷ್ಪ-ಧೂಪಾದಿಗಳ ಮಿಶ್ರ ಸುಂಗಧವು, ಕೀರ್ತಿಶಾಲಿಗಳ ಕೀರ್ತಿಯಂತೆ, ನಾಲ್ಕೂ ಕಡೆಗೆ ಪಸರಿಸುತ್ತಲಿದೆ; ''ವಿಷಯೋಪಭೋಗಿಗಳ ವಿಷಯ ತೃಷ್ಣೆಯು ಭೋಗಿ ಭೋಗಿಸಿದಂತೆ ಹೆಚ್ಚುತ್ತಲೇ ಹೋಗುವದೆಂ''ಬ-ಸಿದ್ಧಾಂತವನ್ನು ಕಣ್ಣಿಗೆ ಕಟ್ಟುತ್ತಿರುವಂತೆ, ಆ ಮಂದಿರದಲ್ಲಿ ಹಾಸಿದ್ದ ಮೆತ್ತನ್ನ ರತ್ನಗಂಬಳಿಯೊಂದು ಮಲಗಲಿಕ್ಕೆ ಸಾಲದೆ, ಆ ರತ್ನಗಂಬಳಿಯ ಮೇಲೊಂದು ಚಿನ್ನದ ಸುಳವುಗಳ ಸುಂದರ ಪಲ್ಲಂಗ, ಆ ಪಲ್ಲಂಗದ ಮೇಲೊಂದು ಜಮಖಾನಿ, ಆ ಜಮಖಾನಿಯ ಮೇಲೆ ಮತ್ತೊಂದು ಬೆಲೆಯುಳ್ಳ ರತ್ನಗಂಬಳಿ, ಆ ರತ್ನಗಂಬಳಿಯ ಮೇಲೊಂದು ಮೆತ್ತನ್ನ ಕುತ್ತನಿಯ ಗಾದಿ, ಆ ಗಾದಿಯ ಮೇಲೊಂದು ಸ್ವಚ್ಛವಾದ ಬಿಳಿಯ ಮಗ್ಗಲಹಾಸಿಗೆ, ಆ ಮಗ್ಗಲಹಾಸಿಗೆಯ ಮೇಲೊಂದು ಬೆಚ್ಚಗಿನ ಉಣ್ಣೆಯ ತಿಳುವಾದ ಆಚ್ಛಾದನ ಇವುಗಳ ಸಮುಚ್ಚಯವು ಆ ಮಂದಿರಕ್ಕೆ ಅಲಂಕಾರಪ್ರಾಯವಾಗಿ ಒಪ್ಪುತ್ತಿರಲು, ಪಲ್ಲಂಗದ ಮೇಲಿನ ಜರದಂಚಿನ ಸೂಕ್ಷ್ಮರೇಶಿಮೆಯ ಹೆಣಿಕೆಯ ಹೂಗಳ ಮೇಲ್ಮುಸುಗು, ದೀಪಗಳ ಬೆಳಕಿನಲ್ಲಿ ಝುಗಝುಗ ಹೊಳೆಯುತ್ತಲಿತ್ತು ಇಂತಹ ರಾಜಭೋಗದ ವಸ್ತುಗಳುಳ್ಳ ಮನೋಹರವಾದ ಶಯನಮಂದಿರದಲ್ಲಿ, ಪಲ್ಲಂಗದಮೇಲೆ ಮಲಗಿಕೊಂಡಿದ್ದ ಒಬ್ಬ ವೈಭವೇಚ್ಛು ವೀರ ಪುರುಷನು ಚಿಂತಾಮಗ್ನನಾಗಿದ್ದದ್ದರಿಂದ, ಅಲ್ಲಿಯ ವಿಲಾಸದ ಯಾವ ಸಾಧನಗಳಿಂದಲೂ ಆಗ ಆತನಿಗೆ ಸುಖವಾಗುತ್ತಿರಲಿಲ್ಲ; ಮತ್ತು ಅಷ್ಟು ರಾತ್ರಿಯಾಗಿದ್ದರೂ ಆತನ ಕಣ್ಣಿಗೆ ಕಣ್ಣು ಹತ್ತಿದ್ದಿಲ್ಲ!

ಆ ಚಿಂತಾಮಗ್ನ ಪುರುಷನ ಹೆಸರು ದಳವಾಯಿ ಪಂಚಮ ಮುದ್ದಣ್ಣ. ಆತನು ಮೂವತ್ತು ಮೂವತ್ತೈದು ವರ್ಷಗಳ ವಯಸ್ಸಿನವನಾಗಿದ್ದನು. ಆತನು ರೂಪದಲ್ಲಿ ಚಲುವ, ಯುದ್ಧದಲ್ಲಿ ಹಿಂಜರಿಯದವ, ಸ್ವಭಾವದಿಂದ ಮಹಾತ್ವಾಕಾಂಕ್ಷಿಯೂ-ವಿಲಾಸಿಯೂ ಆಗಿದ್ದನು. ಆತನ ಮುಖದಲ್ಲಿ ಉಕ್ಕುತ್ತಿದ್ದ ವೀರಕಳೆಯು, ಆತನಿಂದೊದಗಿದ್ದ ರಾಜದ್ರೋಹದ ಕಲಂಕದಿಂದ ಮಬ್ಬುಗವಿದಿತ್ತು; ನೀಚಸ್ವಾರ್ಥದ ಬಲಿಗೆಬಿದ್ದು, ದ್ರೋಹದಮೇಲೆ ದ್ರೋಹಮಾಡುತ್ತ ಎಚ್ಚರಗೆಟ್ಟು ಭರದಿಂದ ಸಾಗಿದ್ದ ಆತನು, ಮೊನ್ನಿನದಿನ ಅಕಸ್ಮಾತ್ ರಣಹುಚ್ಚಿಯ ಯುದ್ಧಾವೇಶಕ್ಕೆ ಅಂಜಿ, ರಣಭೂಮಿಯಿಂದ ಜಾರಬಂದ ಅಪಮಾನದ ಚಿಂತೆಯಿಂದ ಒಂದೇ ಸವನೆ ತಳಮಳಿಸುತ್ತಲಿದ್ದನು. ಚಿತ್ರದುರ್ಗದ ಶೂರ ದಳವಾಯಿಯಾಗಿದ್ದ ಆತನು, ಈವರೆಗೆ ಸೋಲಿನ ಸುದ್ದಿಯನ್ನು ಅರಿಯದದವನಾಗಿದ್ದನು. ಆತನು

ನಾಯಕರ ಯಾವತ್ತು ದಳವಾಯಿಗಳಲ್ಲಿ ಅಗ್ರಗಣ್ಯ, ಎಲ್ಲರಿಗಿಂತಲೂ ಹೆಚ್ಚು ವೈಭವಶಾಲಿ; ಗೌರವದಲ್ಲಂತು ತನ್ನ ಒಡೆಯರಿಗಿಂತಲೂ ಆತನು ಮಿಗಿಲು; ಆದರೆ ತಾನು ಅಷ್ಟರಿಂದ ತೃಪ್ತನಾಗದೆ, ತಾನು ಚಿತ್ರದುರ್ಗದ ನಾಯಕನೇ ಆಗಬೇಕೆಂಬ ದುರಾಶೆಯಿಂದ, ಹಿಂದಿನ ಒಂದನೆಯ ಪ್ರಕರಣದಲ್ಲಿ ಹೇಳಿರುವಂತೆ, ಪೆಟ್ಟಿನಮೇಲೆ ಪೆಟ್ಟಾಗಿ ತನ್ನ ಇಬ್ಬರು ಒಡೆಯರನ್ನು ಕೊಂದು, ರಾಜದ್ರೋಹದ ಘೋರಪಾತಕದಿಂದ ಕಲಂಕಿತನಾಗಿ ನಾಶದ ಪಂಥವನ್ನು ಹಿಡಿದಿದ್ದನು.

ದ್ರೋಹಿಗಳ ಗತಿಯು ಕಡೆಗೆ ಹೀಗಾಗುವದೇ ಸರಿ! ದ್ರೋಹವೆಂದರೆ, ಅನ್ಯರೊಡನೆ ಧರ್ಮತಪ್ಪಿ ನಡೆಯುವದು ದ್ರೋಹಗಳಲ್ಲಿ ದೈವದ್ರೋಹ, ಧರ್ಮದ್ರೋಹ, ಮಾತೃದ್ರೋಹ, ಪಿತೃದ್ರೋಹ, ರಾಜದ್ರೋಹ, ಪ್ರಜಾದ್ರೋಹ ಇತ್ಯಾದಿ ಒಂದಲ್ಲ-ಎರಡಲ್ಲ ಹಲವು ಪ್ರಕಾರಗಳಿರುವವು; ಮತ್ತು ಆ ದ್ರೋಹಗಳು ದ್ರೋಹಿಯ ದ್ರೋಹ ಚಿಂತನದೊಡನೆ ಆತನ ಹೃದಯದಲ್ಲಿಯೇ ಗೂಢವಾದ ಕಿಚ್ಚನ್ನು ಉಂಟುಮಾಡುತ್ತಿರುವವು! ಇನ್ನು ವಿಷಯಾಸಕ್ತನಾದ ಪಾಮರ ಜೀವಿಯು, ಅರಿತೂ ಅರಿಯದವನಂತೆ ಸ್ವಾರ್ಥಮೋಹಿತನಾಗಿ ಅನ್ಯರ ದ್ರೋಹವನ್ನು ಚಿಂತಿಸಿ, ತನ್ನ ಆ ಎದೆಗಿಚ್ಚಿನಿಂದಲೇ ತಾನು ಬೆಂದು ಬಸವಳಿ ಯುತ್ತಿರುವನು! ಅಲ್ಲದೆ, ಸರ್ವಸಾಕ್ಷಿಯಾಗಿರುವ ದೇವರ ಕ್ಷೋಭದಿಂದ ಆ ದ್ರೋಹಿಯ ಅಂತಃಸತ್ವವೂ ದಿನದಿನಕ್ಕೆ ನಷ್ಟವಾಗುತ್ತಲಿರುತ್ತದೆ! ಅದರಂತೆ ಈಗ ರಾಜದ್ರೋಹಿಯಾಗಿದ್ದ ದಳವಾಯಿ ಮುದ್ದನು, ತನ್ನ ರಾಜದ್ರೋಹವೆಂಬ ಎದೆಗಿಚ್ಚಿನಿಂದ ತಳಮಳಿಸುತ್ತಿದ್ದನಲ್ಲದೆ, ಈಶ್ವರೀ ಕ್ಷೋಭದಿಂದ ಆತನ ಅಂತಃಸತ್ವವೂ ದಿನ ದಿನಕ್ಕೆ ನಷ್ಟವಾಗುತ್ತಲಿತ್ತು; ಆದರೂ ದೀಪದ ಮೇಲೆ ಬಿದ್ದು ಮೈಸುಟ್ಟುಕೊಂಡಿದ್ದ ಪತಂಗವು, ಭ್ರಾಂತಿಯಿಂದ ಮತ್ತೆ ಮತ್ತೆ ದೀಪದ ಮೇಲೆಯೇ ಬೀಳುತ್ತ ಮೈಸುಟ್ಟುಕೊಳ್ಳುತ್ತಿರುವಂತೆ, ದಳವಾಯಿ ಮುದ್ದನು, ದುರ್ಗದ ನಾಯಕತನದ ಹಕ್ಕುದಾರನಾಗಿದ್ದ ಭರಮನಾಯಕನನ್ನು ಕೊಲ್ಲಲು ಮತ್ತೆ ಮತ್ತೆ ಹೆಣಗುತ್ತ ತನ್ನ ರಾಜದ್ರೋಹದ ಎದೆಗಿಚ್ಚಿನಿಂದ ಮತ್ತೆಮತ್ತೆ ಬೇಯುತ್ತಲೇ ಇದ್ದನು! ಈ ಪ್ರಸಂಗದಲ್ಲಿ ನಾವು ಕುರುಕುಲಾಧಮನಾದ ದುರ್ಯೋಧನನ ದ್ರೋಹಚಿಂತನದ ದುಷ್ಪರಿಣಾಮವನ್ನು ನೆನಪಿಗೆ ತಂದುಕೊಳ್ಳಬಹುದು. ಆ ವೈಭವಶಾಲಿಯಾದ ಭಾರತೀಯ ವೀರನ ಅಲೌಕಿಕವಾದ ವಜ್ರದೇಹವು ಕೂಡ, ಆತನ ದೈವದ್ರೋಹ, ಧರ್ಮದ್ರೋಹ, ಮಾತೃದ್ರೋಹ, ಪಿತೃದ್ರೋಹ, ಗುರುದ್ರೋಹ, ಬಂಧುದ್ರೋಹ, ಸತಿದ್ರೋಹ ಮೊದಲಾದ ದ್ರೋಹಗಳ ಗೂಢಾಗ್ನಿಗಳ ಸಮುಚ್ಚಯದಿಂದ ಬೇಯುತ್ತ ಬೇಯುತ್ತ ಕಡೆಗೆ ನಾಶಹೊಂದಿ ಮಣ್ಣುಗೂಡಿ ಹೋಗಲಿಲ್ಲವೆ? ಅಂದಬಳಿಕ, ಮುದ್ದನಂತಹವನ ಲೌಕಿಕಮಾನವ ದೇಹವು ನಾಶವಾಗಿ ಮಣ್ಣುಗೂಡಲಿಕ್ಕೆ ಆತನ ರಾಜದ್ರೋಹದ ಒಂದೇ ಅಗ್ನಿಯು ಸಾಕಾದರೆ ಅದರಲ್ಲಿ ಆಶ್ಚರ್ಯವಾದರೂ ಏನು?

ಹೀಗೆ ಮುದ್ದನ ರಾಜದ್ರೋಹ ಚಿಂತನವು ದಿನದಿನಕ್ಕೆ ಹೆಚ್ಚುತ್ತಿರುವಂತೆ, ಆತನ ನಾಶದ ಕಾರಣವೂ ದೈವಸಂಕಲ್ಪದಿಂದ ದಿನದಿನಕ್ಕೆ ಪ್ರಬಲಿಸುತ್ತ ನಡೆದಿತ್ತು! ಭರಮಪ್ಪನೆಂಬ

ಹೆಸರಿನ ಇನ್ನೊಬ್ಬ ರಾಜನಿಷ್ಠ ದಳವಾಯಿಯು, ಮುದ್ದನನ್ನು ನಾಶಗೊಳಿಸುವದಕ್ಕಾಗಿ ಯತ್ನನಡೆಸಿದ್ದನು. ದಳವಾಯಿ ಮುದ್ದನು ಬಿಚ್ಚುಗತ್ತಿ ಭರಮನಾಯಕನ ನಾಶಮಾಡಲು ಹೊಂಚುಹಾಕಿರುವಂತೆ, ದಳವಾಯಿ ಭರಮಪ್ಪನು, ತನ್ನ ಒಡೆಯನಾದ ಬಿಚ್ಚುಗತ್ತಿ ಭರಮನಾಯಕನನ್ನು ರಕ್ಷಿಸಿ, ದಳವಾಯಿ ಮುದ್ದನನ್ನು ನಾಶಗೊಳಿಸುವದಕ್ಕಾಗಿ ತನ್ನ ಜನರ ಸಹಾಯದಿಂದ ಜೀವದ ಹಂಗುದೊರೆದು ಹೊಂಚುಹಾಕಿದ್ದನು. ಆತನ ಆ ಸಹಾಯಕರಲ್ಲಿಯೇ ರಣಹುಚ್ಚಿಯೆಂಬ ಹೆಸರಿನ ಸರದಾರ ಕುವರಿಯು ಒಬ್ಬಳಾಗಿದ್ದಳು. ಗುಹೆಯಲ್ಲಿ ಅಡಗಿಕೊಂಡಿರುತ್ತಿದ್ದ ಭರಮನಾಯಕನನ್ನು ಕೊಲ್ಲಬೇಕೆಂದು ಮುದ್ದನು ಹೆಣಗುತ್ತಿರಲು, ಈ ರಾಜನಿಷ್ಠ ಭರಮಪ್ಪ ದಳವಾಯಿಯು, ಆತನ ಆ ಹೆಣಗಾಟವನ್ನು ಹಳ್ಳದ ರಾತ್ರಿಯ ಚಿಕ್ಕಕಾಳಗದಲ್ಲಿ ಹೇಗೆ ವಿಫಲಗೊಳಿಸಿದನೆಂಬುದು ವಾಚಕರ ಸ್ಮರಣದಲ್ಲಿರಬಹುದು. ಆ ಪ್ರಸಂಗದಲ್ಲಿಯೇ ''ಕೊಲ್ಲುವವರಿಗಿಂತ ಕಾಯುವವರು ಹೆಚ್ಚೆಂ''ಬ ಲೋಕೋಕ್ತಿಯಂತೆ, ಆ ರಣಹುಚ್ಚಿಯು ತನ್ನ ಪಿತೃಭಕ್ತಿ–ರಾಜಭಕ್ತಿಗಳ ಪಾವಿತ್ರ್ಯದ ಮೂಲಕ ಸಾಕ್ಷಾತ್ ಆದಿಶಕ್ತಿಯು ಆವೇಶಗೊಂಡು, ತನಗೆ ಇದಿರಾದವರನ್ನು ರೊಚ್ಚಿನಿಂದ ಕೊಚ್ಚುತ್ತ ಮುದ್ದನ ಮೇಲೆಯೂ ಏರಿಹೋಗಲು, ಆ ದ್ರೋಹಿ ಮುದ್ದನು, ಮಂತ್ರಮುಗ್ಧ ಸರ್ಪದಂತೆ ಮುಂದುಗಾಣದೆ, ಹೇಡಿಯೆನಿಸಿ, ಕಾಳಗದ ಕಣದಿಂದ ಓಡಿಬಂದಿದ್ದನು. ಆ ಸೋಲಿನ ಪಶ್ಚಾತ್ತಾಪವೇ ಈಗ ಆತನ ಹೃದಯವನ್ನು ಸುಡುತ್ತಿದ್ದದ್ದರಿಂದ, ಅಂತಹ ರಾಜವೈಭವವಿದ್ದರೂ ಆತನಿಗೆ ಆ ರಾತ್ರಿ ನಿದ್ರೆಬಾರದಾಗಿತ್ತು!

ಹೀಗೆ ನಿದ್ದೆಬಾರದೆ ತಳಮಳಿಸುತ್ತ ಮಂಚದ ಮೇಲೆ ಮಲಗಿದ್ದ ಪಂಚಮಮುದ್ದನು, ತನ್ನ ಮನಸ್ಸಿನಲ್ಲಿ— ''ನಿನ್ನಿನ ನನ್ನ ಸೋಲು ಎಷ್ಟು ಅಪಮಾನಕರವು! ನನ್ನ ಆ ಸೋಲಿನಿಂದ ನನ್ನ ಶತ್ರುಗಳ ಕಾರ್ಯೋತ್ಸಾಹವು ಎಷ್ಟು ಹೆಚ್ಚಿರಬಹುದಲ್ಲ! ಒಬ್ಬ ಯಃಕಶ್ಚಿತ ತರುಣೆಗೆ ಹೆದರಿಬಂದ ನಾನು, ಶತ್ರುಗಳನ್ನು ನಾಶಗೊಳಿಸಿ ಚಿತ್ರದುರ್ಗದ ನಾಯಕನಾಗಲು ಹೇಗೆ ಸಮರ್ಥನಾದೇನು? ಅಷ್ಟು ರಾತ್ರಿಯಲ್ಲಿ ಒಬ್ಬ ಸ್ತ್ರೀಯು ಬರುವದೆಂದರೇನು? ಆಕೆಯಿಂದ ನಾನು ಸೋಲುವದೆಂದರೇನು? ಇದಕ್ಕೆಲ್ಲ ನನ್ನ ದ್ರೋಹಬುದ್ಧಿಯೇ ಕಾರಣವಾಗಿರಬಹುದೆ? ನಾನು ಉಂಡಮನೆಯ ಗಳ ಎಣಿಸಿ ರಾಜದ್ರೋಹಿಯಾದದ್ದು ಒಳಿತಾಗಲಿಲ್ಲ! ಈಗ ನಾನು ಏನು ಮಾಡಿದರೆ ನನ್ನ ಹಿತವಾದೀತು? ಈಗ ನನ್ನ ಮನಸ್ಸು ಚಂಚಲವಾಗಿ ಹೋಗಿರುವದ ರಿಂದ, ಹೀಗೆಯೇ ಮಾಡಬೇಕೆಂದು ನಿರ್ಧರಿಸಲು ನಾನು ಸಮರ್ಥನಾಗಲಾರೆನು. ಈಗ ನನ್ನ ವಿಷಯದಲ್ಲಿಯೇ ನನ್ನ ನಂಬಿಗೆಯು ಇಲ್ಲದಂತಾಗಿದೆ; ಅಂದಬಳಿಕ ನಾನು ಮಂದಿಯನ್ನು ನಂಬುವ ಬಗೆ ಹೇಗೆ? ದ್ರೋಹಚಿಂತನದ ನನ್ನ ದುರ್ಬಲ ಹೃದಯಕ್ಕೆ, ಈಗ ನಾಲ್ಕೂಕಡೆಗೆ ಶತ್ರುಗಳೇ ಕಾಣುತ್ತಿರುವರಲ್ಲ! ನಾನು ಈಗ ಯಾರನ್ನು ನಂಬಲಿ? ನಾನು ನನ್ನವರೆಂದು ನಂಬಿರುವವರೇ ಒಳಗಿಂದೊಳಗೆ ನನ್ನ ಕುತ್ತಿಗೆಯನ್ನು ಕೊಯ್ಯುತ್ತಿರಲಿಕ್ಕಿಲ್ಲವೆಂದು ಯಾರು ಹೇಳಬೇಕು? ಹಾಗೆ ಅವರು ಕುತ್ತಿಗೆ ಕೊಯ್ಯದಿದ್ದರೆ, ಭರಮನಾಯಕನನ್ನು ಕೊಲ್ಲುವ ನನ್ನ ಒಳಸಂಚು ದಳವಾಯಿ ಭರಮನಿಗೆ ಹೇಗೆ ಗೊತ್ತಾಗುತ್ತಿತ್ತು?ಹಾಗೆ ಗೊತ್ತಾಗದಿದ್ದರೆ, ನಿನ್ನೆ ಭರಮನಾಯಕನು ಜೀವದಿಂದೆಲ್ಲಿ ಉಳಿಯುತ್ತಿದ್ದನು? ನಾನು ಈ ಸೋಲಿನ ತಾಪಕ್ಕಾದರೂ

ಎಲ್ಲಿ ಗುರಿಯಾಗುತ್ತಿದ್ದೆನು! ಅಹಹ! ನನ್ನ ನಂಬಿಗೆಯವರೇ ನನ್ನ ದ್ರೋಹವನ್ನು ಚಿಂತಿಸಿದ್ದರಿಂದ,ಎಂತಹ ಅನರ್ಥವುಂಟಾಯಿತಲ್ಲ! ಇನ್ನುಮೇಲೆ ನಾನು ಆ ಜಯಶಾಲಿಯಾಗಿದ್ದ ದಳವಾಯಿ ಭರಮನಿಗೆ ಮೋರೆಯನ್ನು ತೋರಿಸುವದಾದರೂ ಹೇಗೆ? ಅಥವಾ ಈಗ ನಾಯಕತನದ ಅಧಿಕಾರ ನಡಿಸತೊಡಗಿರುವ ನಾನು, ಆ ನನ್ನ ವೈರಿಯ ಮೇಲೆ ಅಧಿಕಾರ ನಡಿಸುವದಾದರು ಹೇಗೆ?

ಹೀಗೆ ಯೋಚಿಸುತ್ತಲಿದ್ದ ಮುದ್ದನು ತನ್ನ ಹಾಸಿಗೆ ಮೇಲೆ ಎದ್ದು ಕುಳಿತು ಗೋಡೆಗಳ ಮೇಲಿನ ಚಿತ್ರಗಳನ್ನು ಔದಾಸೀನ್ಯದಿಂದ ನೋಡುತ್ತಿರುವಾಗ, ದುರ್ಯೋಧನನ ಚಿತ್ರವು ಆತನ ಕಣ್ಣಿಗೆ ಬೀಳಲು, "ಮುಂಡೆಗೆ ಮುಂಡೆಯನ್ನು ಕಂಡರೆ ಉಂಡಷ್ಟು ಸಂತೋಷ" ಎಂಬ ನಾಣ್ಣುಡಿಯಂತೆ, ಆ ದ್ರೋಹಿ ಮುದ್ದನಿಗೆ ಸಮಾಧಾನವಾಗಿ, ಈ ಮೊದಲೆ ಆತನಿಗಾಗಿದ್ದ ರಾಜದ್ರೋಹದ ಪಶ್ಚಾತ್ತಾಪದ ಕಸುವು ಬಹುಮಟ್ಟಿಗೆ ಕಡಿಮೆಯಾಯಿತು! ಚಿತ್ರದಲ್ಲಿ ಧುರ್ಯೋಧನನು, ತಾನು ಹಾಕಿದ ವಿಷದಿಂದ ಮೈಮರೆತು ಬಿದ್ದಿದ್ದ ಭೀಮನ ಹೆಡಮುರಿಗೆ ಕಟ್ಟಿ ಮಡುವಿನಲ್ಲಿ ದೂಡತ್ತಲಿದ್ದನು. ಹೀಗೆ ದುರ್ಯೋಧನನು ತನ್ನ ಕೈಯಲ್ಲಿ ಸಿಕ್ಕಿದ್ದ ರಾಜ್ಯವನ್ನು ದಕ್ಕಿಸಿಕೊಳ್ಳುವದಕ್ಕಾಗಿ ಮಾಡಿದ ಒಂದೊಂದೇ ದ್ರೋಹಗಳು ಮುದ್ದನ ಕಣ್ಣಮುಂದೆ ಕ್ರಮವಾಗಿ ಬಂದುನಿಂತಂತಾದ್ದರಿಂದ "ನಾನೇನು ಅಂತಹ ಮಹಾಪ ರಾಧಿಯಲ್ಲೆಂ"ಬ ಭಾವವು ಆತನಲ್ಲಿ ಉತ್ಪನ್ನವಾಗಿ ಆ ಭಾವವು ದೃಢವಾಗುತ್ತ ಹೋಯಿತು! ಸಹವಾಸವು ಒಳ್ಳೆಯದೇ ಇರಲಿ–ಕೆಟ್ಟದೇ ಇರಲಿ, ಸಹವಾಸದ ಮಹಿಮೆಯೇ ಅಂತಹದು! ಮನುಷ್ಯನಲ್ಲಿ ವಿವೇಕವು ಅಥವಾ ಅವಿವೇಕವು ಹೆಚ್ಚಲಿಕ್ಕೆ ಕ್ರಮವಾಗಿ ಸತ್ಸಮಾಗಮವು ಅಥವಾ ದುಷ್ಟಸಮಾಗಮವು ಕಾರಣವಾಗಿರುವವು! ಈಗ ಮುದ್ದನಿಗೆ ದುಷ್ಟನಾದ ದುರ್ಯೋಧನನ ಪ್ರತ್ಯಕ್ಷ ಸಮಾಗಮ ವಾಗದೆ ಆತನ ಚಿತ್ರದ ಸಮಾಗಮವಾಗಿದ್ದರೂ, ಅಷ್ಟರಿಂದಲೇ ಮುದ್ದನ ವಿವೇಕಶಕ್ತಿಯು ಕುಗ್ಗಿ ಅವಿವೇಕ ಶಕ್ತಿಯು ಹೆಚ್ಚಿದ್ದನ್ನು ಮನಸ್ಸಿನಲ್ಲಿ ತಂದರೆ, ಕಲ್ಯಾಣೇಚ್ಛುವು ತನಗೆ ದುಷ್ಟ ಸಹವಾಸವಾಗದಂತೆ ಎಷ್ಟು ಎಚ್ಚರವಡಬೇಕಾಗುವ ದೆಂಬದು ಮನಸ್ಸಿನಲ್ಲಿ ಬರುವದು; ಆದ್ದರಿಂದ ವಾಚಕರ ಕಲ್ಯಾಣಕ್ಕಾಗಿ ವಿವೇಕಾ ವಿವೇಕಶಕ್ತಿಗಳ ಸ್ವರೂಪಗಳನ್ನು ಸ್ವಲ್ಪದರಲ್ಲಿ ಯಥಾಶಕ್ತಿ ಇಲ್ಲಿ ವರ್ಣಿಸುವೆವು.

ದೇವರು ಮನುಷ್ಯನ ಹೃದಯದಲ್ಲಿ ವಿವೇಕ, ಅವಿವೇಕ ಎಂಬ ಎರಡು ಶಕ್ತಿಗಳ ಅಂಕುರಗಳನ್ನು, ಆತನ ಪ್ರಾಚೀನ ಪುಣ್ಯ–ಪಾಪಗಳ ಪ್ರಮಾಣದಂತೆ ಜನ್ಮತಃ ಮೊಳೆ ದೋರಿರುವನು. ಅವುಗಳಲ್ಲಿ ವಿವೇಕಾಂಕುರವು ಮನುಷ್ಯನ ಪುಣ್ಯಮೂಲಕ ಉಂಟಾಗಿದ್ದು ಅವಿವೇಕಾಂಕುರವು ಆತನ ಪಾಪಮೂಲಕ ಉಂಟಾಗಿರುವದು. ಎಂಥ ಮನುಷ್ಯನೇ ಆಗಿರಲಿ, ಪಾಪ–ಪುಣ್ಯ–ಕರ್ಮಗಳೆರಡನ್ನೂ ಮಾಡುವನಲ್ಲದೆ, ಕೇವಲ ಪುಣ್ಯಕರ್ಮವನ್ನಾಗಲಿ, ಕೇವಲ ಪಾಪಕರ್ಮವನ್ನಾಗಲಿ ಮಾಡುವದಿಲ್ಲ; ಯಾಕಂದರೆ ಈ ಸೃಷ್ಟಿಯ ಘಟಕಗಳು ಗುಣದೋಷ ಗಳೆಂಬವೆರಡೂ ಇರುವದರಿಂದ, ಹಾಗೆ ಕೇವಲ ಪುಣ್ಯಕರ್ಮವನ್ನು, ಅಥವಾ ಕೇವಲ ಪಾಪಕರ್ಮವನ್ನು ಮಾಡಲು ಶಕ್ಯವೂ ಇಲ್ಲ; ಆದರೆ ವಿವೇಕಿಯು ಪುಣ್ಯಕರ್ಮಗಳನ್ನು

ಹೆಚ್ಚುಮಾಡಬಹುದು, ಅವಿವೇಕಿಯು ಪಾಪಕರ್ಮಗಳನ್ನು ಹೆಚ್ಚು ಮಾಡಬಹುದು; ಮತ್ತು ದೇಹಾಭಿಮಾನವಿಲ್ಲದ ಜ್ಞಾನಿಗೆ, ಪುಣ್ಯ-ಪಾಪಕರ್ಮಗಳೆರಡರ ಲೇಪವೂ ಆಗಲಿಕ್ಕಿಲ್ಲ ಎಂಬ ಮಾತೂ ನಿಜವು; ಆದ್ದರಿಂದ ವಿವೇಕ, ಅವಿವೇಕ ಇವೆರಡರ ಅಂಕುರಗಳೂ ಪ್ರತಿ ಒಬ್ಬನ ಹೃದಯದಲ್ಲಿ ಜನ್ಮತಃ ಇರುತ್ತವೆಂದು ಸಾಧಾರಣವಾಗಿ ಹೇಳಬಹುದು. ವಿವೇಕದ ಅಂಕುರದ ಬೆಳವಣಿಗೆಗೆ ಧಾರ್ಮಿಕವಾದ ನಿರ್ಮಲ ದೈವೀ ಭಕ್ತಿಯೇ ಜಲವು, ಸತ್ಸಮಾಗಮವೇ ಸಾರವತ್ತಾದ ಗೊಬ್ಬರವು, ವಿವಿಧ ಸದ್ಗುಣ ಸದಾಚಾರಗಳೇ ಗೆಯ್ಮೆದ ಸಾಧನಗಳು; ಅದರಂತೆ ಅವಿವೇಕದ ಅಂಕುರದ ಬೆಳವಣಿಗೆಗೆ, ಅಧಾರ್ಮಿಕ ಅಹಂಭಾವವೇ ಜಲವು, ದುಷ್ಟಸಹವಾಸವೇ ಸಾರವತ್ತಾದ ಗೊಬ್ಬರವು, ವಿವಿಧ ದುರ್ಗುಣ-ದುರಾಚಾರಗಳೇ ಗೆಯ್ಮೆದ ಸಾಧನಗಳು. ಮನುಷ್ಯನು ದೈವೀ ಸಂಕಲ್ಪದಂತೆ ಆಯಾ ಅಂಕುರಗಳ ಬೆಳವಣಿಗೆಗೆ ತಕ್ಕ ಸಾಧನಗಳನ್ನು ಪಡೆದು, ಈ ಎರಡೂ ಬಗೆಯ ವ್ಯವಸಾಯಗಳನ್ನು ಮಾಡುತ್ತಿರುವಾಗ, ಮೊದಲನೆಯ ವಿವೇಕದ ವ್ಯವಸಾಯಕ್ಕೆ ಪುಣ್ಯರೂಪ ಫಲವೂ, ಎರಡನೆಯ ಅವಿವೇಕದ ವ್ಯವಸಾಯಕ್ಕೆ ಪಾಪರೂಪದ ಫಲವೂ ದೊರೆತು, ಆ ಮನುಷ್ಯನು ತನ್ನ ಅಧಿಕಾರವಿದ್ದಂತೆ ಈ ಲೋಕದಲ್ಲಿ ಸುಖ-ದುಃಖಗಳನ್ನು ಭೋಗಿಸುವನಲ್ಲದೆ, ದೇಹಪಾತಾನಂತರ ಊರ್ಧ್ವ ಲೋಕ-ಅಧೋಲೋಕಗಳಲ್ಲಿ ತನ್ನ ಪುಣ್ಯಪಾಪಗಳ ಸಂಚಯವಿದ್ದಮಾನದಿಂದ ಸುಖದುಃಖಗಳನ್ನು ಭೋಗಿಸಬೇಕಾಗುವದು!

ಈ ಈಶ್ವರಾರೋಪಿತವಾದ ವಿವೇಕಾವಿವೇಕಗಳ ಅಂಕುರಗಳನ್ನು ರಕ್ಷಿಸಿ ಬೆಳೆಸುವಾಗ, ಮೇಲೆ ಹೇಳಿರುವ ಒಂದರ ಬೆಳವಣಿಗೆಯ ಸಾಧನ ಸಂಪತ್ತು ಎರಡನೆಯದರ ಬೆಳವಣಿಗೆಗೆ ಒದಗಿಬಾರದಂತೆ ಎಚ್ಚರಪಡಬೇಕಾಗುವದು; ಯಾಕಂದರೆ, ಈ ವಿರುದ್ಧ ಧರ್ಮದ ಸಾಧನಗಳ ಉಪಯೋಗದಲ್ಲಿ ಅದಲು ಬದಲು ಆದ ಮಾನದಿಂದ, ಅಂದರೆ ಒಂದರ ಸಾಧನ ಗಳನ್ನು ಮತ್ತೊಂದಕ್ಕೆ ಉಪಯೋಗಿಸಿದ ಮಾನದಿಂದ ಆ ಅಂಕುರಗಳ ಬೆಳವಣಿಗೆಯು ಕುಗ್ಗಿ, ಪ್ರಸಂಗದಲ್ಲಿ ಆ ಅಂಕುರಗಳು ಕಮರಿಯೂ ಹೋಗಬಹುದು. ಆದ್ದರಿಂದ ತಮ್ಮ ವಿವೇಕಾಂಕುರವನ್ನು ಬೆಳೆಸಲಿಚ್ಛಿಸುವವರು, ಅಂದರೆ, ತಾವು ವಿವೇಕಿಗಳಾಗಬೇಕೆನ್ನುವವರು, ಅದರ ಬೆಳವಣಿಗೆಗೆ ತಕ್ಕ ಸಾಧನಗಳನ್ನು, ಅಂದರೆ ಸತ್ಸಮಾಗಮಾದಿಗಳನ್ನು ಹೆಚ್ಚಿಸುತ್ತ ಹೋಗಬೇಕಲ್ಲದೆ, ದುಷ್ಟ ಸಮಾಗಮಾದಿ ವಿರುದ್ಧ ಸಾಧನಗಳ ಗೊಡವಿಗೆ ಸರ್ವಥಾ ಹೋಗಬಾರದು. ಅದರಂತೆ, ಅವಿವೇಕದ ಅಂಕುರವನ್ನು ಬೆಳೆಸಲು ಇಚ್ಛಿಸುವವರು, ಅಂದರೆ ತಾವು ಅವಿವೇಕಿಗಳಾಗಬೇಕೆನ್ನುವವರು ಅದರ ಬೆಳವಣಿಗೆಗೆ ತಕ್ಕ ಸಾಧನಗಳನ್ನು, ಅಂದರೆ ದುಷ್ಟ ಸಮಾಗಮಾದಿಗಳನ್ನು ಹೆಚ್ಚಿಸುತ್ತ ಹೋಗಬೇಕಲ್ಲದೆ, ಸತ್ಸಮಾಗಮಾದಿ ವಿರುದ್ಧ ಸಾಧನಗಳ ಗೊಡವಿಗೆ ಸರ್ವಥಾ ಹೋಗಲಾಗದು! ಈ ದೃಷ್ಟಿಯಿಂದ ವಿಚಾರಿಸಿದರೆ, ದ್ರೋಹಿಯಾದ ಅವಿವೇಕಿ ದಳವಾಯಿ ಮುದ್ದನ ಅವಿವೇಕದ ಅಭಿವೃದ್ಧಿಗೆ, ದುರ್ಯೋಧನನ ಚಿತ್ರದ ಸಹವಾಸವು ಕಾರಣವಾದದ್ದು ಆಶ್ಚರ್ಯವಲ್ಲವೆಂದು ಹೇಳಬೇಕಾಗುವದು!

ಹೀಗೆ ಮುದ್ದನು ಒಮ್ಮೆ ತನ್ನ ರಾಜದ್ರೋಹಕ್ಕಾಗಿ ಪಶ್ಚಾತ್ತಾಪಪಡುವನು, ಒಮ್ಮೆ ದುರ್ಯೋಧನನಂತೆ ತಾನು ದ್ರೋಹವನ್ನೇಮಾಡುತ್ತ ಹೋಗಬೇಕೆಂದು ಹಟಿಯಾಗುವನು; ಆದರೆ ಯಾವ ವಿಚಾರದಿಂದಲೂ ಆತನಿಗೆ ಸಮಾಧಾನವಾಗಲೊಲ್ಲದು. ಹೀಗೆ ಹಲವು ಸಂಬದ್ಧಾ ಸಂಬದ್ಧ ವಿಚಾರಗಳ ಗಲಿಬಿಲಿಯಿಂದ ಕಡೆಗೆ ಆತನಿಗೆ ಏನೂ ತೋಚದಾಯಿತು. ಆತನು ಉಸುರ್ಗರೆದು ಮತ್ತೆ ತನ್ನ ಮನಸ್ಸಿನಲ್ಲಿ—"ಹಾಹಾ! ಈಗ ನಾನು ಏನು ಮಾಡಲಿ? ನನ್ನ ಮನಸ್ಸಿನ ಅಸಮಾಧಾನವು ಏನು ಮಾಡಿದರೂ ಕಡಿಮೆಯಾಗಲೊಲ್ಲದಲ್ಲ!" ಎಂದು ತಳಮಳಿಸಹತ್ತಿದನು. ಆತನಿಗೆ ತನ್ನ ಆ ರಾಜ ವಿಲಾಸಯೋಗ್ಯವಾದ ಸುಂದರ ಮಂದಿರವೂ ಶತ್ರುವಿನಂತೆ ತ್ಯಾಜ್ಯವಾಗಿ ತೋರಲು, ಆತನು ದಿಗ್ಗನೆ ಹಾಸಿಗೆಯ ಮೇಲಿಂದ ಎದ್ದು ಮಂದಿರದ ಹೊರಗೆಬಂದು ಅತ್ತಿತ್ತ ಸುತ್ತುತ್ತ ಏನೇನೋ ಆಲೋಚಿಸತೊಡಗಿದನು. ಹೀಗೆ ಆಲೋಚಿಸುತ್ತ ಆಲೋಚಿಸುತ್ತ ಒಮ್ಮೆ ಆತನು ಶೂನ್ಯದೃಷ್ಟಿಯಿಂದ ಆಕಾಶದ ಕಡೆಗೆ ನೋಡುವನು, ಒಮ್ಮೆ ಯೋಚಿಸುತ್ತ ಸುಮ್ಮನೆ ನಿಂತಲ್ಲಿ ನಿಂತುಕೊಳ್ಳುವನು, ಒಮ್ಮೆ ಹುಚ್ಚನಂತೆ ಬಾಯಿಂದ ಏನೇನೋ ಒಟಗುಟ್ಟುವನು, ಒಮ್ಮೆ ಸಂತಾಪದಿಂದ ಕೈಹೊಸೆಯುವನು, ಒಮ್ಮೆ ಮೇಲಕ್ಕೆ ಮುಖವೆತ್ತಿ "ಅಯ್ಯೊ" ಎಂದು ಉಸುರ್ಗರೆಯುವನು; ಆದರೆ ಆ ಸ್ಥಿತಿಯಲ್ಲಿ ಹೊರಗೂ ಆತನಿಗೆ ಸಮಾಧಾನವಾಗದಿರಲು, ಪುನಃ ಆತನು ಶಯನಮಂದಿರದೊಳಗೆ ಬಂದು ತನ್ನ ಹಾಸಿಗೆಯಮೇಲೆ ಬಿದ್ದುಕೊಳ್ಳುವನು. ಹೀಗೆ ಆತನು ಸಮಾಧಾನದ ಸಂಪಾದನಕ್ಕಾಗಿ, ಹೊರಗಿನಿಂದ ಒಳಗೂ, ಒಳಗಿನಿಂದ ಹೊರಗೂ ಎಡತಾಕಿದರೂ, ಆತನಿಗೆ ಸಮಾಧಾನದ ಲೇಶವೂ ದೊರೆಯಲಿಲ್ಲ! ಸಮಾಧಾನವೊಂದು ಇಲ್ಲದ್ದರಿಂದ ಆತನಿಗೆ ಯಾತರಿಂದಲೂ ಸುಖವಾಗಲಿಲ್ಲ! ಸಮಾಧಾನವು ತನ್ನ ವಾಸಸ್ಥಳವಾದ ಹೃದಯವನ್ನು ಬಿಟ್ಟು ಬೇರೆ ಎಲ್ಲಿಯಾದರೂ ಇರಬಹುದೆ? ರಾಜದ್ರೋಹ ರೂಪ ಕಿಚ್ಚಿನಿಂದ ತನ್ನ ಹೃದಯದಲ್ಲಿಯ ಸಮಾಧಾನವನ್ನು ತಾನೇ ತನ್ನ ಕೈಯಿಂದ ಸುಟ್ಟುಕೊಂಡುಬಿಟ್ಟಿದ್ದ ಆ ದ್ರೋಹಿ ಮುದ್ದನಿಗೆ, ಹೊರಗೊಳಗೆ ಎಲ್ಲಿ ಹುಡುಕಿದರೆ ಸಮಾಧಾನವು ಸಿಕ್ಕೀತು? ಹೀಗೆ ಮುದ್ದನು ತಳಮಳಿಸುತ್ತ ಎದುರಿಗೆ ನೋಡಲು, ಗೋಡೆಗೆ ತೂಗಹಾಕಿದ್ದ ಆತನ ಖಡ್ಗವು ಆತನ ಕಣ್ಣಿಗೆ ಬಿದ್ದಿತು. ಆಗ ಆತನು ಧೈರ್ಯಗೊಂಡು ತನ್ನೊಳಗೆ—"ಇನ್ನು ನಾನು ಹೀಗೆ ಕೈಕಾಲುಗೆಟ್ಟರೆ ಆಗುವದೇನು? ಮೊದಲೇ ನಾನು ರಾಜದ್ರೋಹದ ಗೊಡವಿಗೆ ಹೋಗತಕ್ಕದ್ದಿದ್ದಿಲ್ಲ; ಆದರೆ ಹೋದಬಳಿಕ ಮಿಡುಕಿದರೆ ಫಲವೇನು? ಇನ್ನು ನಾನು ಶತ್ರುವಿಗೆ ತಲೆಬಾಗಿಸುವದೆಂದರೆ ಮಾನಗೇಡಿತನವೇ ಸರಿ! ಆದ್ದರಿಂದ ಇನ್ನು ತೇಲಲಿ–ಮುಣುಗಲಿ, ಈಗ ಹಿಡಿದಿರುವ ಹಾದಿಯನ್ನೇ ಹಿಡಿದು ನಾನು ಮುಂದಕ್ಕೆ ಸಾಗುವದು ತಕ್ಕದ್ದು. ದುರ್ಯೋಧನನು ತನ್ನ ನಾಶವಾಗುತ್ತಲಿರುವದನ್ನು ಕಣ್ಣಿನಿಂದ ನೋಡುತ್ತಿದ್ದರೂ, ಪಾಂಡವ ದ್ರೋಹಬುದ್ಧಿಯ ತನ್ನ ಹಟವನ್ನು ಕಡೆಗೂಬಿಡಲಿಲ್ಲ! ಅದರಂತೆ ನಾನಾದರೂ ಈಗ ಹಟಮಾರಿಯೇ ಆಗಬೇಕಲ್ಲದೆ, ನನ್ನ ವೈರಿಗೆ ತಲೆಬಾಗಿಸಿ ಮಾನಗೇಡಿಯಾಗಲಾಗದು; ಆದರೆ ನನ್ನ ಈ ಹಟಮಾರಿತನದಿಂದ ಹಿತವಾಗಬಹುದೆ?"

ಹೀಗೆ ಯೋಚಿಸುವಾಗ, ಮುದ್ದನಿಗೆ ಪಕ್ಕನೆ ತನ್ನ ಹೆಂಡತಿಯ ನೆನಪಾಯಿತು.

# ಸಾಧ್ವೀ ಶ್ರೀಮತಿಯು

ದಳವಾಯಿ ಪಂಚಮಮುದ್ದನು ಮನಸ್ತಾಪದಿಂದ ತಳಮಳಿಸುತ್ತಿರುವಾಗ, ಆತನಿಗೆ ಪಕ್ಕನೆ ತನ್ನ ಹೆಂಡತಿಯ ನೆನಪಾಯಿತೆಂದು ಹಿಂದಿನ ಪ್ರಕರಣದ ಕೊನೆಯಲ್ಲಿ ಹೇಳಿದೆಯಷ್ಟೆ? ಏಕಜೀವರಾದ ಪತಿಪತ್ನಿಯರ ಸಂಬಂಧವೇ ಅಷ್ಟು ಗೌರವದ್ದು. ಅದರಲ್ಲಿ ಇಲ್ಲಿ ದಳವಾಯಿ ಪಂಚಮ ಮುದ್ದಣ್ಣನ ಹೆಂಡತಿಯು, ಸಾಧ್ವಿಯಾಗಿದ್ದದ್ದು ಆತನ ಸುದೈವವೇ ಸರಿ. ಆಕೆಯು ಚಿಕ್ಕವಳಿರುವಾಗಲೇ ಮಹಾಪುರುಷರ ಅನುಗ್ರಹ ಪಡೆದಿದ್ದಳು! ಈ ಲೋಕದಲ್ಲಿ ದೇವರ ಅನುಗ್ರಹಕ್ಕೆ ಕಾರಣಗಳಾದ–ಮನುಷ್ಯತ್ವ, ಮುಮುಕ್ಷುತ್ವ, ಮಹಾಪುರುಷರ ಸಹವಾಸ ಇವು ಮೂರು ದುರ್ಲಭಗಳಿರುವವೆಂದು ಜ್ಞಾನಿಗಳು ಹೇಳಿರುವರು. ಮನುಷ್ಯತ್ವವೆಂದರೆ, ಧರ್ಮದಲ್ಲಿ ಶ್ರದ್ಧೆಯಿಟ್ಟು ಅದರಂತೆ ನಡೆಯುವದು; ಮುಮುಕ್ಷುತ್ವವೆಂದರೆ, ಸಂಸಾರ ದುಃಖದಿಂದ ಹೇಗೆ ಮುಕ್ತನಾದೇನೆಂಬ ಆತುರತಾಳುವದು; ಮಹಾಪುರುಷರ ಸಹವಾಸವೆಂದರೆ, ದೇವರನ್ನು ಕಂಡ ಮಹಾಮಹಿಮರೊಡನೆ ಬಳಕೆ. ಈ ಮೂರರಲ್ಲಿಯೂ ಮಹಾಪುರುಷರ ಸಹವಾಸವು ಅತ್ಯಂತ ದುರ್ಲಭವೆಂದು ತಿಳಿಯತಕ್ಕದ್ದು. ಅಂಥ ದುರ್ಲಭಯೋಗವು ಮೇಲೆ ಹೇಳಿದಂತೆ ಮುದ್ದನ ಹೆಂಡತಿಗೆ, ಆಕೆ ಚಿಕ್ಕವಳಿರುವಾಗಲೇ ಒದಗಿದ್ದರಿಂದ, ಆಕೆಯು ಸಾಧ್ವೀಯೆಂಬ ಶ್ರೇಷ್ಠ ಪದವಿಯನ್ನು ಹೊಂದಿದಳು. ಈಗ ಚಿತ್ರದುರ್ಗದಲ್ಲಿ ಜಗದ್ಗುರುಗಳೆಂದು ಕರೆಯಲ್ಪಡುತ್ತಿರುವ ಮುರಗೀ ಸ್ವಾಮಿಗಳ ಪ್ರಸಿದ್ಧ ಮಠವಿರುವದಷ್ಟೆ? ಆ ಮಠದ ಮೂಲ ಕರ್ತೃಗಳಾದ ಮುರಗೀಶ ಗುರುವರರು, ಈ ಕಾದಂಬರಿಯ ಮುಖ್ಯ ನಾಯಕನಾದ ಬಿಚ್ಚುಗತ್ತಿಯ ಭರಮನಾಯಕನ ಕಾಲದಲ್ಲಿಯೇ ಆತನಿಗೆ ತಮ್ಮ ಮಹಾಮಹಿಮೆಯನ್ನು ತೋರಿಸಿ, ಭಕ್ತರನ್ನು ಉದ್ಧರಿಸಲು ದುರ್ಗದಲ್ಲಿ ವಾಸಿಸಿ ಅದನ್ನು ಪುಣ್ಯಕ್ಷೇತ್ರವಾಗಿಮಾಡಿದರು! ಆದರೆ ಅದಕ್ಕೂ ಮೊದಲು ಆ ಮಹಾಮಹಿಮರು ತಮ್ಮ ಮಹಿಮೆಯನ್ನು ಗುಪ್ತವಾಗಿ ಇಟ್ಟುಕೊಂಡು, ಕರ್ನಾಟಕದಲ್ಲಿ ಸಂಚರಿಸುತ್ತ ಭಾವಿಕರಾದ ಪುಣ್ಯವಂತರನ್ನು ಅನುಗ್ರಹಿಸುತ್ತಲಿದ್ದರು.

ಹೀಗಿರುವಾಗ ಆ ಮಹಾತ್ಮರು ಒಮ್ಮೆ ಚಿತ್ರದುರ್ಗದಲ್ಲಿಯ ಒಬ್ಬ ವೀರಶೈವ ಲಿಂಗಾಯತ ಭಕ್ತನ ಮನೆಗೆ ಹೋದರು. ಆಗ ಆ ಭಕ್ತನ ಒಬ್ಬ ಚಿಕ್ಕ ಮಗಳು ಕೇವಲ ಎಂಟು ವರ್ಷದವಳಾಗಿದ್ದಳು. ಆಗ ಆಕೆಯನ್ನು ''ಮಲ್ಲಮ್ಮ'' ಎಂಬ ಹೆಸರಿನಿಂದ ಎಲ್ಲರೂ ಕರೆಯುತ್ತಿದ್ದರು. ಚಿಕ್ಕವಳಾಗಿದ್ದ ಮಲ್ಲಮ್ಮನು ಎಲ್ಲರಂತೆ ಶ್ರೀ ಮುರಗೀಶ ಗುರುವರನ ಚರಣಕ್ಕೆ ಎರಗಲು, ತ್ರಿಕಾಲಜ್ಞಾನಿಯಾದ ಆ ಸದ್ಗುರುನಾಥನು ಆಕೆಯ ಮಸ್ತಕದ ಮೇಲೆ ತನ್ನ ವರದ ಹಸ್ತವಿಟ್ಟು ಆಕೆಯನ್ನು ಕುರಿತು—''ಏಳಮ್ಮಾ, ಸಾಧ್ವೀ ಶ್ರೀಮತೀ, ಏಳು. ನೀನು ಬಹು ಪುಣ್ಯವತಿಯು ಕಂಡೆಯಾ! ನೀನು ನಿನ್ನ ಉದಾತ್ತ ಪತಿಸೇವೆಯ ಪ್ರಭಾವದಿಂದ, ''ಸಾವಿತ್ರಿಯು ತನ್ನ ಪತಿಯಾದ ಸತ್ಯವಾನನನ್ನು ಉದ್ಧರಿಸಿದಂತೆ,'' ನೀನು ನಿನ್ನ ಪತಿಯನ್ನು ಉದ್ಧರಿಸುವೆಯಲ್ಲದೆ, ನಿನ್ನ ಹುಟ್ಟಿದ ಮನೆಯನ್ನೂ, ಕೊಟ್ಟ ಮನೆಯನ್ನೂ ಪವಿತ್ರವಾಗ ಮಾಡುವೆ.'' ಎಂದು ಆಶೀರ್ವದಿಸಿದರು! ಅಂದಿನಿಂದ ಎಲ್ಲರೂ ಆಕೆಯನ್ನು ''ಸಾಧ್ವೀ ಶ್ರೀಮತಿ'' ಎಂತಲೇ ಕರೆಯತೊಡಗಲು, ಆಕೆಯ ಮೊದಲಿನ ಮಲ್ಲಮ್ಮನೆಂಬ ಹೆಸರು ಹಿಂದೆ ಬಿದ್ದು ಹೋಯಿತು!

ಸಾಧ್ವೀ ಶ್ರೀಮತಿಯು ದೊಡ್ಡವಳಾಗುತ್ತ ಹೋದಂತೆ, ಆಕೆಯಲ್ಲಿಯ ಪವಿತ್ರವಾದ ಶೈವೀ ತೇಜಸ್ಸು ಹೆಚ್ಚುತ್ತ ಹೋಗಲು, ಆಕೆಯ ಅಪ್ರತಿಮ ಸೌಂದರ್ಯ ಜಲಕ್ಕೆ ಸುಗಂಧದಯೋಗವು ಒದಗುತ್ತ ಹೋದಂತಾಯಿತು! ಆ ಧರ್ಮನಿಷ್ಠ ಸುಂದರಿಯು ಉಪವರಳಾಗಲು, ಆಕೆಯನ್ನು ಲಗ್ನವಾಗುವದಕ್ಕಾಗಿ ಬಹುಜನ ಘನವಂತ ವೀರಶೈವ ತರುಣರು ಇಚ್ಛಿಸತೊಡಗಿದ್ದು ಆಶ್ಚರ್ಯವಲ್ಲ; ಆದರೆ ಚಿತ್ರದುರ್ಗದ ನಾಯಕರ ದಂಡಿನಲ್ಲಿ ದಿನದಿನಕ್ಕೆ ಉತ್ಕರ್ಷ ಹೊಂದುತ್ತಲಿದ್ದ ಪಂಚಮ ಮುದ್ದಣ್ಣನಿಗೇ ಆಕೆಯು ದೈವಸಂಕಲ್ಪದಿಂದ ಮಾಲೆ ಹಿಡಕೊಂಡು ನಿಂತದ್ದರಿಂದ, ಬಹುಜನ ತರುಣರ ನಿರಾಶೆಯಾಗಿ ಆಕೆಯು ತರುಣ ಮುದ್ದಣ್ಣನ ಹೆಂಡತಿ ಯಾಗಿದ್ದಳು, ದಳವಾಯಿ ಮುದ್ದಣ್ಣನು ವೀರಶೈವ ಲಿಂಗಾಯತನಿದ್ದನೆಂಬದಕ್ಕೆ, ಆತನ "ಪಂಚಮ ಮುದ್ದಣ್ಣ" ಎಂಬ ಹೆಸರೇ ಸಾಕ್ಷಿಯಾಗಿರುತ್ತದೆ. "ಪಂಚಮ" "ಪಂಚಮಸಾಲಿ" ಎಂಬ ಶಬ್ದಗಳು ಸಮಾನಾರ್ಥದವೆಂದು ಹೇಳಬಹುದು. ಮುದ್ದಣ್ಣನು ಚಲುವನೂ, ಶೂರನೂ, ವಿಲಾಸಪ್ರಿಯನೂ, ಮಹತ್ವಾಕಾಂಕ್ಷಿಯೂ ಆಗಿದ್ದನೆಂದು ಹಿಂದೆ ಹೇಳಿದೆಯಷ್ಟೆ? ಆದರೆ ಆತನ ಮಹತ್ವಾಕಾಂಕ್ಷೆಯ ಅತಿರೇಕದ ಮೂಲಕ ಆತನಲ್ಲಿ ಸ್ವಚ್ಛಂದವೃತ್ತಿ ಔದ್ಧತ್ಯ, ದ್ರೋಹಬುದ್ಧಿ ಮೊದಲಾದ ಕೆಲವು ದುರ್ಗುಣಗಳು ಸೇರುತ್ತ ಬಂದಿದ್ದರೂ, ತನ್ನ ಪ್ರಿಯಪತ್ನಿ ಯಾದ ಸಾಧ್ವೀ ಶ್ರೀಮತಿಯ ವಿಷಯದಲ್ಲಿಯ ಆತನ ಅಕೃತ್ರಿಮ ಪ್ರೇಮಕ್ಕೆ ಎಂದೂ ವ್ಯತ್ಯಯ ಉಂಟಾಗಲಿಲ್ಲ; ಯಾಕಂದರೆ ಸಾಧ್ವೀ ಶ್ರೀಮತಿಯ ಸ್ನೇಹಮಯೀ ಪಾತಿವ್ರತ್ಯದ ಯೋಗ್ಯತೆಯೇ ಅಷ್ಟು ಘನವಾದದ್ದು!

ಸಾಧ್ವೀ ಶ್ರೀಮತಿಯು ತನ್ನ ಪತಿಯನ್ನು, ಸಾಮಾನ್ಯ ಸ್ತ್ರೀಯರಂತೆ ತನ್ನ ವಿವಿಧ ವಿಷಯಸುಖಗಳ ಆಶ್ರಯಸ್ಥಾನವೆಂದು ತಿಳಿದು, ಆತನನ್ನು ತೋರಿಕೆಯ ಪ್ರೇಮದ ಕೃತ್ರಿಮ ಉಪಾಯಗಳಿಂದ ಮೋಹಿಸುವ ಗೊಡವಿಗೆ ಹೋಗುತ್ತಿದ್ದಿಲ್ಲ; ಆದರೆ ತನ್ನ ಪತಿಯು ತನ್ನ ಉದ್ಧಾರಕಾರಣವಾದ ಪರದೈವತವೆಂದು ಧರ್ಮತಃ ತಿಳಿದು, ಆತನ ಸಂತೋಷಕ್ಕಾಗಿಯೇ ತಾನು ವಿಷಯೋಪಭೋಗಿಯಾಗಿ, ಪತಿಯನ್ನು ಆತನ ನೆರಳಿನಂತೆ ಅನುಸರಿಸುವವಳು ಆಗಿದ್ದಳು. ಇಂತಹ ಸಾತ್ವಿಕ ವಿರಕ್ತವೃತ್ತಿಯ ಪರಿಶುದ್ಧ ಮನಸ್ಸಿನ ಧರ್ಮಿಷ್ಠ ಸಾಧ್ವಿಗೆ, ಪತಿಯ ದೋಷಗಳೂ ಗುಣಗಳೇ ಆಗಿ ತೋರುತ್ತಿರುವಾಗ, ಪತಿಯ ಗುಣಗಳು ಗುಣಗಳಾಗಿ ತೋರುತ್ತಿದ್ದರೆ ಆಶ್ಚರ್ಯವೇನು? ಹೀಗೆ ಆಕೆಯು ತನ್ನ ಪತಿಯನ್ನು ಸುಗುಣಪೂರ್ಣನೆಂದು ತಿಳಿದು, ಆತನಿಗೆ ಸಂತೋಷವಾಗುವಂತೆ ನಡೆದುಕೊಳ್ಳುವದೇ ತನ್ನ ಶ್ರೇಷ್ಠ ಕರ್ತವ್ಯವೆಂದು ಭಾವಿಸಿ ನಡೆಯುತ್ತಿದ್ದಳು. ಆಕೆಯು ತನ್ನ ಸರ್ವ ಬಳಗವೂ, ಸರ್ವಸ್ವವೂ ಪತಿಯೇ ಎಂದು ಭಾವಿಸುವಳು. ಪತಿಯ ಯೋಗಕ್ಷೇಮವ ವಹಿಸುವಾಗ ಆಕೆಯು ತನ್ನ ಯೋಗಕ್ಷೇಮವ ಮರೆಯುವಳು. ಪತಿಯು ಭೋಗಿಸಿದ ಸುಖಶೇಷವನ್ನು ಆಕೆಯು ಪತಿಯ ತಾರಕಪ್ರಸಾದ ವೆಂದು ಸೇವಿಸುವಳು. ಆಕೆಗೆ ಪತಿಯ ವಾಕ್ಯವು ಮಂತ್ರಮೂಲವಾಗಿಯೂ, ಪತಿಯ ರೂಪವು ಧ್ಯಾನಮೂಲವಾಗಿಯೂ, ಪತಿಯ ಕೃಪೆಯು ಮೋಕ್ಷಮೂಲವಾಗಿಯೂ ತೋರುವವು. ಆಕೆಯು ಪತಿಯ ಏಕಜೀವವಾದದ್ದರಿಂದ, ಪತಿಯ ಸಹವಾಸವು ಆಕೆಗೆ ಸ್ವರ್ಗಸುಖ

ವಾಗಿಯೂ, ಪತಿಯ ವಿಯೋಗವು ಆಕೆಗೆ ನರಕಯಾತನೆಯಾಗಿಯೂ ತೋರುತ್ತಿದ್ದವು. ಆ ಸಾಧ್ವಿಯು ತನ್ನ ಬುದ್ಧಿವೈಭವ, ಜ್ಞಾನ ವೈಭವ, ಧನವೈಭವ, ಅಧಿಕಾರ ವೈಭವಾದಿಗಳನ್ನು ತನ್ನ ಪತಿಯ ಚರಣಕ್ಕೆ ನಿವಾಳಿಸಿ ಚಲ್ಲಿಕೊಟ್ಟು, ಪತಿದೈವತದ ಭಾವಿಕ ಭಕ್ತಳಾಗಿದ್ದಳು! ಮಹಾ ಪತಿವ್ರತೆಯರ ಉದಾತ್ತವಾದ ಈ ಪತಿಸೇವೆಯ ಅರ್ಥವು, ಸಾಹಸಿಗಳಾದ ಸ್ತ್ರೀಯರಿಗೆ ಸರ್ವಥಾ ತಿಳಿಯಲಾರದು.

ಇಂತಹ ಉದಾತ್ತ ಪತಿಸೇವೆಯ ಸಾಧ್ವಿಯರು ತಮ್ಮ ಪತಿಯ ವಿಶ್ವಾಸದ ಸರ್ವಬಳಗ ವಾಗಿರುವಂತೆ, ಸಾಧ್ವೀ ಶ್ರೀಮತಿಯು ತನ್ನ ಪತಿಯಾದ ದಳವಾಯಿ ಮುದ್ದನ ಸರ್ವಬಳಗ ವಾಗಿದ್ದಳು; ಆದ್ದರಿಂದ ಮುದ್ದಣ್ಣನ ಹಿತಕಾರಿ ಆಪ್ತರೆಲ್ಲರೂ ಆ ಸಾಧ್ವಿಯೊಬ್ಬಳಲ್ಲಿಯೇ ಒಟ್ಟುಗೂಡಿದಂತೆ ಆಗಿತ್ತು; ಅಂದರೆ, ಮುದ್ದನ ಎಲ್ಲ ಕಾರ್ಯಕಲಾಪಗಳಲ್ಲಿ ಶ್ರೀಮತಿಯು ತನ್ನ ಆ ಪತಿಯ ಮನಸ್ಸು ನೋಯದಂತೆ ಮೃದು–ಮಧುರ–ವಚನಗಳಿಂದ ಆತನಿಗೆ ಆಲೋಚನೆ ಹೇಳುವ ಶ್ರೇಷ್ಠ ಮಂತ್ರಿಯಾಗಿದ್ದಳು; ಮತ್ತು ನಯ–ಭಯ–ಭಕ್ತಿ–ಕರುಣಾಯುಕ್ತ ಮಮತೆಗಳಿಂದ ಆತನ ಸೇವೆಮಾಡುವ ವಿಷಯದಲ್ಲಿ ಆಕೆಯು, ತನ್ನ ದೇಹದ ಶ್ರಮವನ್ನೂ, ಮನಸ್ಸಿನ ಬೇಸರವನ್ನೂ ಎಣಿಸದೆಯಿದ್ದ ಪ್ರೇಮಲದಾಸಿಯಾಗಿದ್ದಳು; ಅಂದರೆ ಆಕೆಯ ಎಷ್ಟೋ ಜನ ದಾಸಿಯರು ಆಕೆಯ ಆಜ್ಞೆಪಾಲಿಸಲು ಕೈಕಟ್ಟಿಕೊಂಡು ನಿಂತಿದ್ದರೂ, ಆಕೆಯು ತನ್ನ ಪತಿಯ ಪ್ರತಿಯೊಂದು ಸೇವೆಯನ್ನು ತಾನು ಕೈಮುಟ್ಟಿಮಾಡುತ್ತಿದ್ದಳು. ಅಲ್ಲದೆ, ಉತ್ಸುಕತೆಯಿಂದ ತನ್ನ ಪತಿಗೆ ಉಣಿಸುತಿನಿಸು ಗಳನ್ನೊದಗಿಸಿ ಕೊಡುವ ವಿಷಯದಲ್ಲಿ ಆಕೆಯು ತನ್ನನ್ನೇ ಮರೆತು ಬಿಡುವ ವಾತ್ಸಲ್ಯದ ತಾಯಿಯಾಗಿದ್ದಳು. ಅದರಂತೆ ಆಕೆಯು ತನ್ನ ಪತಿಯ ಶಯನ ಪ್ರಸಂಗದಲ್ಲಿ ವಿಲಾಸನಿಪುಣೆ ರಂಭೆಯೂ, ಪತಿಯ ಧರ್ಮಾಚರಣೆಯ ವಿಷಯದಲ್ಲಿ ಉತ್ತೇಜಕ ಧರ್ಮಮೂರ್ತಿಯಂತೆ ಅನುಕೂಲೆಯೂ ಆಗಿದ್ದಳು. ಹಾಗೆಯೇ ಆಕೆಯು ತನ್ನ ಪತಿಯನ್ನು ಕ್ಷಮಿಸುವ ವಿಷಯದಲ್ಲಿ ಸರ್ವಸಹನೆಯೆನಿಸುವ ಧರಿತ್ರಿಯು, ಅಂದರೆ ಭೂದೇವಿಯು ಆಗಿದ್ದಳು; ಅಂದರೆ ಪ್ರಸಂಗವಶಾತ್ ಪತಿಯು ತನ್ನನ್ನು ತಿರಸ್ಕರಿಸಲಿ, ಅಥವಾ ತನಗೆ ನಿಷ್ಠುರ ಮಾತುಗಳನ್ನು ಆಡಲಿ ಅವನ್ನು ಆಕೆಯು ಎಷ್ಟೂ ಮನಸ್ಸಿಗೆ ಹಚ್ಚಿಕೊಳ್ಳದೆ, ಅವು ತನ್ನ ಮೇಲೆ ಪತಿಯು ಮಾಡುವ ಸಖ್ಯದ ಲಕ್ಷಣಗಳೆಂದು ತಿಳಿದು, ಪತಿಯ ಸಂಗಡ ಸದಾ ಆನಂದ ವೃತ್ತಿಯಿಂದಲೇ ನಡೆದುಕೊಳ್ಳುತ್ತಿದ್ದಳು! ಅಂದಬಳಿಕ ಯಾವದರ ಕೊರತೆಯಿಂದ ದಳವಾಯಿ ಮುದ್ದಣ್ಣನು ಮತ್ತೊಬ್ಬರ ಮೋರೆಯನ್ನು ನೋಡಬೇಕು?

ಹೀಗೆ ಪತಿಯ ಆತ್ಮವೇ ತಾನಾಗಿ ನಡೆದುಕೊಳ್ಳುತ್ತಿದ್ದ ಸಾಧ್ವೀ ಶ್ರೀಮತಿಯು, ಸಹಸಾ ಪತಿಯನ್ನು ಅಗಲಿ ಇರುತ್ತಿದ್ದಿಲ್ಲ; ಯಾಕಂದರೆ, ಯಾವಾಗಲೂ ಪತಿಯ ಸೇವೆಯ ಹೊರತು ಹೆಚ್ಚಿನ ಯಾವ ಪುರುಷಾರ್ಥವನ್ನೂ ಆಕೆಯು ಸಾಧಿಸಲು ಇಚ್ಛಿಸುತ್ತಿದ್ದಿಲ್ಲ. ಅದರಲ್ಲಿ ಈಗಿನ ದಳವಾಯಿಗಳ ಪುಂಡಾಟಿಕೆಯ ಕಾಲದಲ್ಲಂತು, ತನ್ನ ಪತಿಯ ವಿರೋಧಿಗಳು ಬಹುಜನರಿದ್ದದ್ದರಿಂದ, ತನ್ನ ಆ ಸಂಕಟಗ್ರಸ್ತ ಪತಿಯನ್ನು ಬೆಂಗಾವಲ ಆಳಿನಂತೆ ಯಾವಾಗಲೂ ರಕ್ಷಿಸುತ್ತಲೇ ಇರುವದು ತನ್ನ ಕರ್ತವ್ಯವೆಂದು ಆ ಪತಿನಿಷ್ಠಳು ತಿಳಕೊಂಡಿದ್ದಳು! ಆದರೆ ತವರ

ಮನೆಯವರ ಅತ್ಯಾಗ್ರಹದ ಮೂಲಕ, ತನ್ನ ಪತಿಯೇ ಒತ್ತಾಯಮಾಡಿದ್ದರಿಂದ ವಿವಾಹ ನಿಮಿತ್ತವಾಗಿ ಎರಡೇ ದಿನಗಳ ಮಟ್ಟಿಗೆ ಆಕೆಯು ತನ್ನ ತವರ ಮನೆಗೆ ಹೋಗಿದ್ದಳು; ಆದರೂ ಆ ಪತಿಪ್ರಾಣಳ ಮನಸ್ಸು, ತನ್ನ ಪತಿ ಸ್ಮರಣದಲ್ಲಿಯೇ ಯಾವಾಗಲೂ ಆಸಕ್ತವಾಗಿತ್ತು. ಮೇಲೆ ಹೇಳಿದಂತೆ ಅತ್ತ ಮುದ್ದನು ಮನಸ್ತಾಪದಿಂದ ತಳಮಳಿಸುತ್ತ ನಿದ್ದೆಬಾರದೆ ತನ್ನ ಹೆಂಡತಿ ಶ್ರೀಮತಿಯನ್ನು ಸ್ಮರಿಸುತ್ತಿರಲು, ಇತ್ತ ತವರ ಮನೆಯಲ್ಲಿದ್ದ ಶ್ರೀಮತಿಯ ಮನಸ್ಸಿಗೂ ತಾಪವಾಗಿ, ಆಕೆಯ ಮನಸ್ಸು ಪತಿಯಬಳಿಗೆ ಹೋಗಬೇಕೆಂದು ಹಾತೊರೆಯಹತ್ತಿತ್ತು. ಆಗ ಶ್ರೀಮತಿಯು ಅಲ್ಲಿ ಒಂದು ಕ್ಷಣವೂ ಇರಲಾರದೆ, ಯಾರು ಏನು ಹೇಳಿದರೂ ಕೇಳದೆ ತನ್ನ ತಂದೆಯನ್ನು ಸಂಗಡ ಕರಕೊಂಡು ಮೇಣೆಯೊಳಗಿಂದ ಪತಿಯ ಬಳಿಗೆ ಹೊರಟುಬಿಟ್ಟು ದುರ್ಗವನ್ನು ಏರಹತ್ತಿದಳು. ಆಗ ಸರ್ವತಂತ್ರ ಸ್ವತಂತ್ರನಾದ ಮುದ್ದನ ಆ ಪ್ರಿಯಪತ್ನಿಯ ದುರ್ಗಾರೋಹಣಕ್ಕೆ ಯಾವ ಪ್ರತಿಬಂಧವುಂಟಾದೀತು? ಆದರೆ ಪತಿಯ ಸ್ಥಿತಿಗತಿಯ ವಿಷಯದಲ್ಲಿ ಅತ್ಯಂತ ಉದ್ವಿಗ್ನವಾಗಿದ್ದ ಆಕೆಯ ಮನಸ್ಸು, ಪತಿಯಬಳಿಗೆ ಯಾವಾಗ ಹೋದೇನೆಂದು ಚಡಪಡಿಸುತ್ತಿರುವಾಗ, ತಾನು ಹಕ್ಕಿಯಾಗಿದ್ದರೆ ಹಾರಿಹೋಗುತ್ತಿದ್ದೆನೆಂದು ಆಕೆಯು ಆತುರಪಡತೊಡಗಿದಳು!

ಹೀಗೆ ಶ್ರೀಮತಿಯು ಮೇಣೆಯಲ್ಲಿ ಕುಳಿತು ದುರ್ಗವೇರುತ್ತಿರುವಾಗ, ವಿವಿಧ ಕಲ್ಪನೆಗಳು ಆಕೆಯ ಮನಸ್ಸಿನಲ್ಲಿ ಬರತೊಡಗಿದವು. ಆಕೆಯು ತನ್ನ ಮನಸ್ಸಿನಲ್ಲಿ—''ಈಗ ನನ್ನ ಮನಸ್ಸಿಗೆ ಇಷ್ಟು ಚಡಪಡಿಕೆಯಾಕಾಗಿದ್ದೀತು? ನನ್ನ ಪತಿಯು ಸುರಕ್ಷಿತವಾಗಿರಬಹುದಷ್ಟೆ? ನಾನಿಲ್ಲದಾಗ ನಿನ್ನೆ ಆತನು ಭರಮನಾಯಕನನ್ನು ಹಿಡಿಯಹೋಗಿ ಒಬ್ಬ ಹೆಂಗಸಿನಿಂದ ಸೋತುಬಂದ ಅಪಕೀರ್ತಿಯು ಎಲ್ಲ ಕಡೆಗೆ ಹಬ್ಬಿರುತ್ತದೆ; ಮತ್ತು ದಳವಾಯಿ ಭರಮಪ್ಪನ ಪಕ್ಷದವರು ಉತ್ಸಾಹಶಾಲಿಗಳಾಗಿದ್ದಾರೆ. ಆದರೆ ನನ್ನ ಶೂರಪತಿಗೆ ಸೋಲೇ? ನನ್ನ ಆ ರಣಪಂಡಿತನಾದ ಪತಿಯು ಈವರೆಗೆ ಸೋಲಿನ ಸುದ್ದಿಯನ್ನು ಅರಿತವನಲ್ಲ! ಅಂದಬಳಿಕ ನಿನ್ನೆ ಆತನು ಸೋತದ್ದೇ ನಿಜವಾಗಿದ್ದರೆ, ಆ ಸೋಲಿನಿಂದ ಆತನ ಮನಸ್ಸು ಎಷ್ಟು ವ್ಯಥಿತವಾಗಿರಬಹುದಲ್ಲ! ದುಷ್ಟ ವೈರಿಗಳಿಂದ ನನ್ನ ಪತಿಗೆ ಯಾವ ಬಗೆಯ ಕೇಡೂ ಒದಗಿರಲಿಕ್ಕಿಲ್ಲವಷ್ಟೆ? ಯಾರಿಗೆ ಗೊತ್ತು ಆ ದುಷ್ಟ ವೈರಿಗಳು ಅಕಸ್ಮಾತ್ ನನ್ನ ಪತಿಯ ಶಯನಗೃಹಕ್ಕೆ ಮುತ್ತಿಗೆ ಹಾಕಿ ಒಳಗೆ ನುಗ್ಗಿ ಪತಿಯ ಜೀವಕ್ಕೆ ಕೇಡುಬಗೆದಿದ್ದರೆ ಮಾಡುವದೇನು? ಈಗ ನಾನು ಪತಿಯನ್ನಗಲಿ ತವರ ಮನೆಗೆ ಹೋದದ್ದು ದೊಡ್ಡ ತಪ್ಪಾಯಿತು! ನನ್ನ ಪತಿಯು ಸುರಕ್ಷಿತನಾಗಿದ್ದದ್ದನ್ನು ನಾನು ಯಾವಾಗ ನೋಡೇನು? ಅಹಾ! ನನ್ನ ವಲ್ಲಭನು ನನ್ನ ಮೇಲೆ ಎಷ್ಟು ಪ್ರಾಣ, ಎಷ್ಟು ಜೀವ! ಆತನು ನನ್ನನ್ನು ಒಂದು ಅರಗಳಿಗೆಯಾದರೂ ಅಗಲಿ ಇರತಕ್ಕವನಲ್ಲ, ಹೀಗಿದ್ದು ನಾನು ಮೂರ್ಖಳು ವಿಚಾರವಿಲ್ಲದೆ ತವರಮನೆಗೆ ಯಾಕೆ ಹೋಗಿದ್ದೆನು? ನನ್ನ ಪತಿಯಾದರೂ ಹೋಗಲು ನನಗೆ ಯಾಕೆ ಒತ್ತಾಯ ಮಾಡಿರಬಹುದು!

ಹೀಗೆ ಶ್ರೀಮತಿಯು ಒಂದೊಂದೇ ಕೆಟ್ಟಕಲ್ಪನೆಗಳನ್ನು ಮಾಡುತ್ತ, ಹಾಗು ಪತಿಯನ್ನು ಬಿಟ್ಟು ತವರಮನೆಗೆ ಹೋದದ್ದಕ್ಕಾಗಿ ತನ್ನನ್ನು ಜರೆದುಕೊಳ್ಳುತ್ತ ಚಿಂತಾಮಗ್ನಳಾಗಿ

ಮೇಣೆಯಲ್ಲಿ ಸಾಗಿರಲು, ಆಕೆಯ ತಂದೆಯು ಕುದುರೆಯ ಮೇಲಿಂದಲೇ ತನ್ನ ಆ ಮಗಳನ್ನು ಕುರಿತು—''ತಂಗೀ ಶ್ರೀಮತೀ, ನಿನ್ನ ಪತಿಯ ಶಯನಗೃಹವು ಸನಿಯಕ್ಕೆ ಬಂದಿತು; ಆದರೆ ಮಂದಿರದ ಬಾಗಿಲು ತೆರೆದಿದ್ದು, ಒಳಗಿನ ದೀಪಗಳು ಹಚ್ಚಿದವು ಹಚ್ಚಿದಹಾಗೆ ನಿಚ್ಚಳವಾಗಿ ಉರಿಯುತ್ತಲಿವೆ! ಇಷ್ಟು ರಾತ್ರಿಯಲ್ಲಿ ಶಯನಮಂದಿರದ ಬಾಗಿಲು ತೆರೆದಿರುವ ಕಾರಣವೇನಿರಬಹುದು! ಜನರ ದನಿಯೂ ಕೇಳಬರುವದಿಲ್ಲ, ಎಲ್ಲ ಕಡೆಗೆ ನಿಶ್ಯಬ್ದ'' ಎಂದು ನುಡಿಯಲು, ಶ್ರೀಮತಿಯ ಎದೆಯೊಡೆದು ನೀರಾಯಿತು! ಆಕೆಯ ಕುಕಲ್ಪನೆಗಳು ಮತ್ತಿಷ್ಟು ಉಕ್ಕಹತ್ತಿದವು. ಆಕೆಯು ತನ್ನ ಮೇಣೆಯನ್ನು ನಿಲ್ಲಿಸ ಹೇಳಿ ತನ್ನ ತಂದೆಯನ್ನು ಕುರಿತು — ''ಅಪ್ಪಾ, ನಿಶ್ಚಯವಾಗಿ ಏನೋ ಘಾತವಾಗಿರುವದು! ಹೀಗೆ ಬಾಗಿಲುತೆರೆದು ನಿರ್ಭಯದಿಂದ ಮಲಗಿಕೊಳ್ಳುವಷ್ಟು ಶಾಂತತೆಯು ದುರ್ಗದಲ್ಲಿ ಈಗ ಸರ್ವಥಾ ಇರುವದಿಲ್ಲ, ದುರ್ಗದ ದಳವಾಯಿಗಳಲ್ಲಿ ಇಬ್ಬಣಗಳಿದ್ದು, ದಳವಾಯಿ ಭರಮಪ್ಪನ ಬಣದವರು ನನ್ನ ಪತಿಯ ನಾಶಕ್ಕಾಗಿ ಹೊಂಚು ಹಾಕಿರುವರು; ಆದರೆ ನನ್ನ ಶೂರ ಪತಿಯು ಯಾರ ಗಂಟಲಲ್ಲಿಯೂ ಇಳಿಯುವವನಲ್ಲ! ಆದರೂ ಹೊತ್ತು ಹೀಗೇ ಇರುತ್ತದೆಂದು ಹೇಳಲಿಕ್ಕೆ ಬರುವದಿಲ್ಲ, ಅದರಲ್ಲಿ ರಾಜಕಾರಣದ ಗೊಂದಲವು; ಆದ್ದರಿಂದ ಇಂಥ ಸಂಕಟವೇ ಒದಗೀತೆಂದು ಹೇಳಲಾಗುವ ದಿಲ್ಲ! ಹೀಗೆ ಶಯನ ಮಂದಿರದ ಬಾಗಿಲು ಅಪರಾತ್ರಿಯಲ್ಲಿ ತೆರೆದಿರುವದು ನನ್ನ ಚಿಂತೆಗೆ ಕಾರಣವಾಗಿರುವದು; ಆದರೆ ನಾನು ಚಿಂತೆಮಾಡಿ ಮಾಡುವದೇನು? ನಮ್ಮ ಶ್ರೀಶಂಭು ಲಿಂಗೇಶ್ವರನೇ ನಮ್ಮನ್ನು ಕಾಯತಕ್ಕದ್ದು; ಆದ್ದರಿಂದ ನಾವು ಮೊದಲು ನಮ್ಮ ದೇವರಮನೆಗೆ ಹೋಗಿ, ದೇವರ ದರ್ಶನಮಾಡಿಕೊಳ್ಳೋಣ. ಆಮೇಲೆ ನಾನು ನನ್ನ ಪತಿಯ ಬಳಿಗೆ ಹೋಗಿಬರುವೆನು.

ಹೀಗೆ ನುಡಿದು ಶ್ರೀಮತಿಯು ಮೇಣೆಯಿಂದ ಕೆಳಗಿಳಿದು ಕಾಲನಡಿಗೆಯಿಂದಲೇ ತನ್ನ ದೇವರ ಮನೆಗೆ ಹೋದಳು. ಆಕೆಯು ಭಕ್ತಿಯಿಂದ ದೇವರನ್ನು ನಮಸ್ಕರಿಸಿ ಪ್ರಾರ್ಥಿಸಿ, ಬಳಿಕ ತಂದೆಗೆ ನಮಸ್ಕಾರಮಾಡಿ ಆತನ ಅಪ್ಪಣೆ ಪಡೆದಳು. ಆಮೇಲೆ ಆಕೆಯು ತನ್ನ ಟೊಂಕಕ್ಕೆ ಸುತ್ತಿಕೊಂಡಿದ್ದ ಖಡ್ಗವನ್ನು ಕೈಯಲ್ಲಿ ಹಿಡಕೊಂಡು ಪತಿಯ ಶಯನಗೃಹದ ಕಡೆಗೆ ಹೊರಡಲು, ಆ ಸತ್ವಶಾಲಿನಿಯ ಎದೆಯು ಕೆಚ್ಚುಗಟ್ಟಿತು! ಆಗ ಆಕೆಗೆ ಯಾತರ ಭಯವೂ ತೋರದಾಯಿತು. ಆಗ ಆ ವೀರಪತ್ನಿಯು ಒಬ್ಬಳೇ ಪತಿಯಬಳಿಗೆ ಸಾಗುತ್ತಿರಲು, ಅಲ್ಲಲ್ಲಿಯ ಕಾವಲುಗಾರರು ಆಶ್ಚರ್ಯದಿಂದ ಆಕೆಯನ್ನು ನೋಡುತ್ತ ವಿನಯದಿಂದ ಆಕೆಗೆ ಮುಜುರೆಮಾಡತೊಡಗಿದರು. ಆಗ ಶ್ರೀಮತಿಯು ತಲೆಯಲ್ಲಾಡಿಸಿ ಅವರ ಮುಜುರೆಗಳನ್ನು ಸ್ವೀಕರಿಸುತ್ತ, ತನ್ನ ಪತಿಯ ಅಪಘಾತದ ಪ್ರಸಂಗವೇನೂ ಇಲ್ಲೆಂದು ಸಮಾಧಾನಪಡುತ್ತ ಇಲ್ಲದ ಕುಕಲ್ಪನೆಗಳನ್ನು ಕಲ್ಪಿಸಿದ ತನ್ನ ಅಂಜುಬುರುಕತನಕ್ಕಾಗಿ ಮನಸ್ಸಿನಲ್ಲಿ ನಗುತ್ತ ಅತ್ಯಾತುರದಿಂದ ಪತಿಯ ಶಯನ ಮಂದಿರದ ಬಾಗಿಲಿಗೆ ಬಂದು ಮುಟ್ಟಿದಳು. ಆಗ ಮುದ್ದಣ್ಣನು ಬಾಗಿಲದ ಕಡೆಗೆ ಬೆನ್ನುಮಾಡಿ ತನ್ನ ಪಲ್ಲಂಗದಮೇಲೆ ಮಲಗಿಕೊಂಡಿದ್ದನು. ಅದನ್ನು ನೋಡಿ ಶ್ರೀಮತಿಯು, ತನ್ನ ಪತಿಯ ಪುನರ್ಜನ್ಮವಾದಂತೆ ಸಂತೋಷಪಟ್ಟಳು. ಆಗ ಆಕೆಯು ತನ್ನ ಕೈಯೊಳಗಿನ ಖಡ್ಗವನ್ನು ಪುನಃ

ಯಥಾಸ್ಥಿತವಾಗಿ ತನ್ನ ಟೊಂಕಕ್ಕೆ ಸುತ್ತಿಕೊಂಡು, ಸ್ವಾಭಾವಿಕವಾದ ತನ್ನ ಮದಗಜಗಮನದಿಂದ ಮಂದಿರವನ್ನು ಪ್ರವೇಶಿಸಿ, ಪತಿಯ ಚರಣದೆಡೆಗೆ ಹೋಗಿ ಪ್ರೇಮಾರ್ದ್ರಗಳಾದ ಸುಂದರ ಕಟಾಕ್ಷಗಳಿಂದ ಪತಿಯನ್ನು ಅವಲೋಕಿಸುತ್ತ ನಿಂತುಕೊಂಡಳು. ತನ್ನ ಆಶ್ರಯಸ್ಥಾನವನ್ನು ಬಿಟ್ಟು ಹೋಗಲಾರದೆ ಹೋಗಿದ್ದ ಆಕೆಗೆ, ಪುನಃ ತನ್ನ ಆಶ್ರಯಸ್ಥಾನವು ದೊರೆತದ್ದಕ್ಕಾಗಿ ಪರಮಾನಂದವಾಗಿತ್ತು! ಪತಿಯ ಚರಣಸ್ಪರ್ಶಮಾಡಿ ಆತನನ್ನು ತಟ್ಟನೆ ಎಬ್ಬಿಸಬೇಕೆಂದು ಆಕೆಯ ಕೋಮಲ ಮನಸ್ಸು ತವಕಿಸಿತು; ಆದರೆ ಆ ಭೀರುವು—''ಪತಿಗೆ ನಿದ್ದೆಗೇಡಾದರೆ ಪ್ರಕೃತಿ ಕೆಟ್ಟೀತಲ್ಲ! ಮೊದಲೇ ಜೀವಕ್ಕೆ ಸುಖವಿಲ್ಲ. ಇದೀಗ ನಿದ್ದೆಹತ್ತಿದ್ದರೂ ಹತ್ತಿರಬಹುದು; ಆದ್ದರಿಂದ ತಾನಾಗಿ ಎಚ್ಚರವಾಗುವವರೆಗೆ ನಾನು ಹೀಗೇ ನಿಂತುಕೊಂಡಿರುವದು ನೆಟ್ಟಗೆ'' ಎಂದು ಮನಸ್ಸಿನಲ್ಲಿ ಅಂದುಕೊಂಡು, ಆಕೆಯು ಪತಿಯ ಚರಣಗಳಲ್ಲಿ ದೃಷ್ಟಿಯಿಟ್ಟು ಸುಮ್ಮನೆ ನಿಂತುಬಿಟ್ಟಳು. ಅಷ್ಟರಲ್ಲಿ ಆಕೆಯ ಪತಿಯು ಒಮ್ಮೆ ನಿಟ್ಟುಸಿರುಬಿಟ್ಟು—''ಪ್ರಿಯೇ ಶ್ರೀಮತೀ, ನೀನು ಯಾವಾಗೂ ಇಲ್ಲದೆ ಈಗೇ ಏಕೆ ತವರಮನೆಗೆ ಹೋಗಿದ್ದೀ? ನಾನಾದರೂ ನಿನಗೆ ಹೋಗಲು ಅಷ್ಟೇಕೆ ಒತ್ತಾಯಮಾಡಿರಬಹುದು! ನೀನು ಬರುವವರೆಗೆ ನನ್ನ ಮನಸ್ಸಿಗೆ ಸಮಾಧಾನವಾಗುವಹಾಗಿಲ್ಲ; ಆದರೆ ಏನು ಮಾಡಲಿ? ನಿನ್ನನ್ನು ಕರೆಯಲಿಕ್ಕೆ ಯಾರನ್ನಾದರೂ ಈಗೇ ಕಳಿಸಿಬಿಡಲಾ?'' ಎಂದು ನುಡಿದು ಹಾಸಿಗೆಯಮೇಲೆ ಎದ್ದು ಕುಳಿತುಕೊಳ್ಳಲು, ಎದುರಿಗೇ ತನ್ನ ಚರಣಗಳಿಗೆರಗಿದ್ದ ಸಾಧ್ವೀ ಶ್ರೀಮತಿಯು! ಆಗ ಮುದ್ದಣ್ಣನು ಆಶ್ಚರ್ಯಚಕಿತನಾಗಿ—

ಮುದ್ದ—ಇದೇನು, ಪ್ರಿಯೇ ಶ್ರೀಮತೀ, ನೀನು ತವರಮನೆಗೆ ಹೋಗಲೇ ಇಲ್ಲವೆ?

ಶ್ರೀಮತಿ—ಹೋಗಿದ್ದೆನು ಮಹಾಸ್ವಾಮಿ; ಆದರೆ ಯಾಕೋ ಮನಸ್ಸಿಗೆ ಸಮಾಧಾನವಾಗದ್ದರಿಂದ ಅಪ್ಪನನ್ನು ಸಂಗಡ ಕರಕೊಂಡು ಬಂದುಬಿಟ್ಟೆನು!

ಮುದ್ದ—ಯಾವಾಗ ಬಂದೆ? ಏನು? ಈ ಕಗ್ಗತ್ತಲೆಯ ಮಧ್ಯರಾತ್ರಿಯಲ್ಲಿಯೇ ಬಂದು ಬಿಟ್ಟೆಯೇನು?

ಶ್ರೀಮತಿ—ಇಲ್ಲ, ನಿರಭ್ರವಾದ ಆಕಾಶದಲ್ಲಿ ನಕ್ಷತ್ರಗಳು ಸ್ವಚ್ಛವಾಗಿ ಹೊಳೆಯುತ್ತಿದ್ದದ್ದರಿಂದ, ಬೆಳಕು ಚನ್ನಾಗಿಬಿದ್ದಿದೆ; ಮೇಲಾಗಿ ಹಿಲಾಲಿನವರ ಹಿಲಾಲಬೆಳಕು ಯಥೇಚ್ಛವಾಗಿ ಇದ್ದಿತು!

ಮುದ್ದ (ಹೆಂಡತಿಯ ಕೈಹಿಡಿದು ಆದರದಿಂದ ಕುಳ್ಳಿರಿಸಿಕೊಳ್ಳುತ್ತ)— ಪ್ರಿಯೇ, ನಿನ್ನ ಕೋಮಲ ಮನಸ್ಸಿನ ನೆಲೆಯೇ ನನಗೆ ತಿಳಿಯದಾಗಿದೆ! ನಾನು ಮನಸ್ಸಿನಲ್ಲಿ ನೆನಿಸಿದಾಗ ನೀನು ಪ್ರತ್ಯಕ್ಷ ಎದುರಿಗೇ ಬರುವದೆಂದರೇನು! ಅಲ್ಲ, ನೀನು ಸರ್ವಥಾ ಮನುಷ್ಯಳಲ್ಲ. ಯಾವಳೋ ಒಬ್ಬ ಸುಂದರ ದೇವತೆಯು ನನ್ನ ಪುಣ್ಯಾತಿಶಯದಿಂದ ಮನುಷ್ಯಳಾಗಿ ಹುಟ್ಟಿಬಂದಿರುವಂತೆ ತೋರುತ್ತದೆ; ಆದರೆ ಪ್ರಾಣೇಶ್ವರೀ, ನೀನಿಲ್ಲದಿದ್ದರೆ ನನ್ನ ಅರ್ಧಾಂಗವು ಇಲ್ಲದ ಹಾಗೆಯೇ ಸರಿ!

ಶ್ರೀಮತಿ (ಆತುರದಿಂದ ಪತಿಯ ಮುಖನೋಡುತ್ತ)—ಇದೇನು? ಮಹಾಚಿಂತೆಯಲ್ಲಿ ಮಗ್ನವಾಗಿರುವಹಾಗೆ ತೋರುತ್ತದೆ!

ಮುದ್ದ—ನಿನ್ನೆ ನೀನಿಲ್ಲದಿರಲು, ನಿನ್ನನ್ನು ಕೇಳದೆ ನಾನೊಂದು ಕಾರ್ಯಮಾಡಹೋಗಿ ಒಬ್ಬ ಕುಮಾರಿಕೆಯಿಂದ ಸೋತು ಬಂದೆನು; ಆ ಅಪಮಾನಕಾರಕ ಸೋಲಿನ ತಾಪವು ನನ್ನ ಹೃದಯವನ್ನು ಸುಡುತ್ತಿರುವದು! ಪ್ರಿಯೇ, ಶೂರರಿಗೆ ಸೋಲು ಶೂಲವಲ್ಲವೆ?

ಶ್ರೀಮತಿ—ಏನು ವೀರವರ, ಅಜಿಂಕ್ಯರೆನಿಸಿಕೊಂಡಿದ್ದ ನಿಮಗೆ ಹೆಂಗಸಿನಿಂದ ಸೋಲೆ? ನಿಮ್ಮಂಥ ವೀರಶಿರೋಮಣಿಗಳಿಗೆ ಹೆಂಗಸಿನೊಡನೆ ಕಾದುವ ಮನಸ್ಸಾದರೂ ಆಗಬಹುದೆ? ನಿಮ್ಮಂಥ ರಣಧೀರರು ಹೆಂಗಸಿನಿಂದ ಸೋಲುವವರೂ ಅಲ್ಲ, ಹೆಂಗಸನ್ನು ಗೆಲ್ಲುವವರೂ ಅಲ್ಲ. ಯಾಕಂದರೆ, ಮಹಾಭಾರತದಲ್ಲಿಯ ವೀರಾಗ್ರಣಿ ಭೀಷ್ಮರ ಚರಿತ್ರವನ್ನು ನೀವು ಕೇಳಿಲ್ಲವೆ? ಆ ಧರ್ಮಾತ್ಮನು ಮೊದಲು ಒಮ್ಮೆ ಸ್ತ್ರೀಯಾಗಿದ್ದ ಶಿಖಂಡಿಯ ಮುಂದೆ ಶಸ್ತ್ರವಿಟ್ಟು ಸುಮ್ಮನೆ ಕುಳಿತು ಬಿಡಲಿಲ್ಲವೆ! ಅದರಿಂದ ಅವರ ಕೀರ್ತಿಗೆ ಹಾನಿಯುಂಟಾಯಿತೇನು?

ಮುದ್ದ (ವಿಷಾದದಿಂದ)—ಇಲ್ಲ ಶ್ರೀಮತೀ, ಮಹಾತ್ಮನಾದ ಭೀಷ್ಮನಂತೆ ನಾನು ಶಸ್ತ್ರತ್ಯಾಗಮಾಡಿಬಿಡಲಿಲ್ಲ; ಒಬ್ಬ ಕುಮಾರಿಕೆಯ ವೀರಾವೇಶಕ್ಕೆ ಅಂಜಿ ಹೇಡಿಯಂತೆ ರಣಭೂಮಿಯಿಂದ ಹಿಂದಿರುಗಿದೆನು. ಆ ಕುಮಾರಿಕೆಯು ನಿಶ್ಚಯವಾಗಿಯೂ ಹೆಂಗಸಲ್ಲ ಪ್ರತ್ಯಕ್ಷ ಆದಿ ಶಕ್ತಿಯು!

ಶ್ರೀಮತಿ—ಆದಿಶಕ್ತಿಯ ಮುಂದೆ ಅಲ್ಪಶಕ್ತರಾದ ಮಾನವರ ಪಾಡೇನು? ಅದಕ್ಕೇಕೆ ಇಷ್ಟು ಅಸಮಾಧಾನ!

ಮುದ್ದ (ಹೆಂಡತಿಯ ಹಸ್ತವಿಡಿದು)— ಶ್ರೀಮತೀ, ವೀರಪತ್ನಿಯೆನಿಸುವ ನೀನು ಹೀಗೆ ಹೇಳಬಹುದೆ? ಆಕೆಯು ಆದಿಶಕ್ತಿಯೇ ಇರಲಿ, ಅಲ್ಪಶಕ್ತಿಯ ಮಾನವಳೇ ಇರಲಿ, ನಾನು ಹೆಂಗಸಿನಮುಂದೆ ನಿಲ್ಲಲಾರದೆ ಅಂಜಿ ಓಡಿಬಂದದ್ದೇನು ಸುಳ್ಳೆ? ನಾನು ನನ್ನ ಶಸ್ತ್ರವನ್ನು ಚಲ್ಲಿಕೊಟ್ಟು ಆ ರಣಶೂರಳ ಖಡ್ಗಕ್ಕೆ ನನ್ನ ಶಿರಸ್ಸು ಒಡ್ಡಿದ್ದರೆ ಶ್ರೇಯಸ್ಸುಂಟಾಗುತ್ತಿತ್ತಲ್ಲವೆ? ಆದರೆ ಶ್ರೀಮತೀ, ಏನು ಮಾಡಲಿ? ಜಗತ್ತಿನಲ್ಲಿ ನನ್ನ ದುಷ್ಕೀರ್ತಿಯಾಯಿತು, ನಾನು ನನ್ನ ವೈರಿಗಳ ಮುಂದೆ ತಲೆ ಎತ್ತದ ಹಾಗಾಯಿತು! ಇನ್ನು ನಾನು ಬದುಕಿಯಾದರೂ ಮಾಡುವ ದೇನು? ನೋಡು, ಸರಿರಾತ್ರಿ ಮೀರಿಹೋಗಿದ್ದರೂ ಮನಸ್ತಾಪದಿಂದ ನನ್ನ ಕಣ್ಣಿಗೆ ಕಣ್ಣು ಹತ್ತಿರುವದಿಲ್ಲ.

ಶ್ರೀಮತಿ—ಅಪ್ಪಯ್ಯ! ಕಣ್ಣು ಎಷ್ಟು ಕೆಂಪಗಾಗಿವೆಯಲ್ಲ, ತಲೆಯಷ್ಟು ಕಾದಿದೆ? ಅಂತೇ ನನಗೆ ತವರಮನೆಯಲ್ಲಿ ನಿಲ್ಲುವಹಾಗೆ ಆಗಲಿಲ್ಲ! ಆದರೆ ನಾಥಾ, ಕಾರ್ಯಾರ್ಥಿಗಳು ಹೀಗೆ ಉದಾಸೀನರಾಗಬಹುದೆ? ನಡೆಯುವವರು ಎಡವುವದುಂಟು; ಅದಕ್ಕೇಕೆ ಅಷ್ಟು ಮಹತ್ವ! ಕಾರ್ಯಸಾಧಕರಿಗೆ ಕಾರ್ಯಸಾಧನದಲ್ಲಿ ಮಹತ್ವವಿರುವದಲ್ಲದೆ, ಅವರು ಸೋಲು ಗೆಲವು ಗಳಿಗೆ ಮಹತ್ವಕೊಡಲಾಗದು! ಶ್ರೀರಾಮನು ತಾಟಕಿಯನ್ನು ಕೊಲ್ಲುವಾಗ ಹಿಂದಕ್ಕೆ ಸರಿಯಲಿಲ್ಲವೆ? ಆ ಪ್ರಭುವು ವಾಲಿಯನ್ನು ಮರೆಗೆನಿಂತು ಕೊಲ್ಲಲಿಲ್ಲವೆ? ಪ್ರಿಯಾ, ಕಾರ್ಯಾರ್ಥಿಗಳು ಧರ್ಮಾಧರ್ಮ ವಿಚಾರಕ್ಕಿಂತ ಕಾರ್ಯಸಾಧನದಲ್ಲಿ ಹೆಚ್ಚು ಲಕ್ಷವಿಟ್ಟಿ ರುವರು; ದ್ರೋಣನ ಸಂಹಾರಕ್ಕಾಗಿ ಧರ್ಮರಾಜನು ಕೂಡ ಯುಕ್ತಿಯಿಂದ ಸುಳ್ಳು

ಹೇಳಲಿಲ್ಲವೆ? ಆದರೆ ಈಗ ಆ ಮಾತು ಬೇಡ. ಮೊದಲು ನಿಮಗೆ ನಿದ್ದೆಹತ್ತಲಿ! ನಿಮ್ಮ ತಲೆಗೆ ನಾನು ಉಷ್ಣಹಾರಕ ತೈಲವನ್ನು ತಿಕ್ಕುವೆನು, ಅಂದರೆ ನಿದ್ದೆ ಬರುವದು! ನಿದ್ದೇಗೇಡು ನಿಮಗೆ ಸರ್ವಥಾ ತಡೆಯುವದಿಲ್ಲ!

ಈ ಮೇರೆಗೆ ನುಡಿದು ಶ್ರೀಮತಿಯು ಉಷ್ಣಹಾರಕ ತೈಲವನ್ನು ತಕ್ಕೊಂಡು, ತನ್ನ ಕೋಮಲ ಹಸ್ತದಿಂದ ಪತಿಯ ತಲೆಗೆ ಮೆಲ್ಲಗೆ ತಿಕ್ಕಹತ್ತಿದಳು. ತನ್ನ ಪ್ರೇಮಮೂರ್ತಿಯ ಈ ಅಂತಃಕರಣದ ಕನಿಕರದ ಕೃತಿಯಿಂದ ಮುದ್ದನ ಹೃದಯಸ್ಥ ಶೋಕಾಗ್ನಿಯ ಮೇಲೆ ಪ್ರೇಮಜಲವೆರಚಿ ದಂತಾಗಲು, ಆತನ ಸಂತಾಪವು ಕಡಿಮೆಯಾಗಹತ್ತಿತು. ಅದೂ ಅಲ್ಲದೆ, ಸಾಧ್ವೀ ಶ್ರೀಮತಿಯ ಪ್ರೇಮಾರ್ದ್ರಹೃದಯವು, ಆಕೆಯ ಕೋಮಲ ಹಸ್ತದ ದ್ವಾರದಿಂದ ಮುದ್ದನ ಹೃದಯದಲ್ಲಿಯ ತಾಪವನ್ನು ಬಡಬಡ ಶೋಷಿಸಿಕೊಳ್ಳಹತ್ತಿದ್ದರಿಂದ, ಆತನ ಹೃದಯವು ತಾಪರಹಿತವಾಗುತ್ತಲೂ, ಶ್ರೀಮತಿಯ ಹೃದಯವು ತಾಪಭರಿತವಾಗುತ್ತಲೂ ಹೋದವು. ಹೀಗಾಗುತ್ತಾಗುತ್ತ ಮುಂದೆ ಸ್ವಲ್ಪಹೊತ್ತಿನಲ್ಲಿಯೇ ಶ್ರೀಮತಿ ಹೃದಯವು ಮುದ್ದನ ಹೃದಯದಲ್ಲಿಯ ತಾಪವನ್ನೆಲ್ಲ ಶೋಷಿಸಿಕೊಂಡು ತಾನು ತಾಪಭರಿತವಾಗಲು, ತಾಪರಹಿತ ಹೃದಯನಾಗಿ ಹೋದ ದಳವಾಯಿ ಪಂಚಮ ಮುದ್ದಣ್ಣನಿಗೆ ಗಾಢವಾದ ನಿದ್ರೆಯು ಹತ್ತಿತು! ಅಂತೇ, ''ಸತಿಯು ಪತಿಯ ಸುಖದುಃಖಗಳ ಪಾಲುಗಾರ್ತಿ'' ಎಂಬ ಮಾತು ಲೋಕದಲ್ಲಿ ರೂಢವಾಗಿರುವದು!

## ಶ್ರೀಮತಿಯ ಸೌಜನ್ಯ!

ಹೀಗೆ ನಿದ್ದೆಹತ್ತಿ ಮಲಗಿದ್ದ ಮುದ್ದನಿಗೆ, ಬೆಳಗಾಗಿ ಎರಡುತಾಸು ಹೊತ್ತು ಏರಿದರೂ ಎಚ್ಚರವಾಗಲಿಲ್ಲ. ಗಂಡನಿಗೆ ಹೇಗೆ ಕಣ್ಣುತುಂಬ ನಿದ್ದೆಬಂದೀತೆಂಬ ಆತುರದಿಂದ ಶ್ರೀಮತಿಯು, ಗಟ್ಟಿಯಾಗಿ ರೆಪ್ಪೆಬಡಿಯದೆ, ಒತ್ತಿ ಉಸುರಾಡಿಸದೆ—''ಒತ್ತಿ ಎಣ್ಣೆತಿಕ್ಕಿದರೆ ಎಲ್ಲಿ ಎಚ್ಚರಾಗುವದೋ'' ಎಂಬ ಭಯದಿಂದ ಮೆಲ್ಲನೆ ಎಣ್ಣೆ ತಿಕ್ಕುತ್ತ ತಿಕ್ಕುತ್ತ ಪತಿಯಲ್ಲಿಯೇ ದೃಷ್ಟಿಯಿಟ್ಟು ಆತನಿಗೆ ನಿದ್ದೆಹತ್ತಿದಹಾಗೆ ಕಂಡಕೂಡಲೆ ತಾನು ಅಲ್ಲಾಡದೆ ಮೆಲ್ಲನೆ ಕೈ ಹಿಂದಕ್ಕೆ ತಕ್ಕೊಂಡು, ಸ್ವಲ್ಪದೂರಸರಿದು ಕುಳಿತುಕೊಂಡಳು. ಆಗ ಪತಿಯು ಮಿಸಿಕಾಡದೆ ಗೊರಕೆ ಹೊಡೆ ಹೊಡೆದು ನಿದ್ದೆಮಾಡುವದನ್ನು ನೋಡಿ, ಆ ಸಾಧ್ವಿಯು ಕೃತಕೃತ್ಯಳಾದಂತೆ ಸಂತೋಷ ಪಡತೊಡಗಿದ್ದಳು. ಆದರೂ ''ಪತಿಗೆ ಪಕ್ಕನೆ ಎಚ್ಚರಾದರೆ ಹೇಗೆ?'' ಎಂಬ ಸಂಶಯದಿಂದ ಆಕೆಯು—''ದೇವರೇ, ಹೀಗೆಯೇ ಪತಿಗೆ ಗಡದ್ದು ನಿದ್ದೆಹತ್ತಲಿ'' ಎಂದು ತನ್ನ ಕುಲಸ್ವಾಮಿಯಾದ ಶ್ರೀ ಶಂಭುಲಿಂಗೇಶ್ವರನನ್ನು ಮನಸ್ಸಿನಲ್ಲಿ ಧ್ಯಾನಿಸುತ್ತ ''ನಾನು ಕೂಡಲೆ ಹೊರಟು ಬಂದದ್ದು ಬಹಳ ನೆಟ್ಟಗಾಯಿತಲ್ಲವೆ? ಬಾರದಿದ್ದರೆ ಈ ದಿನ ಪೂರಾ ನಿದ್ದೆಗೇಡಾಗುತ್ತಿತ್ತು'' ಎಂದು ತನ್ನ ಮನಸ್ಸಿನಲ್ಲಿ ತನ್ನ ವಿವೇಕಬುದ್ಧಿಗಾಗಿ ತಾನೇ ಸಂತೋಷಪಡತೊಡಗಿದಳು.

ನಿರಾಶ್ರಿತನಿಗೆ ಮಹಾದಾಶ್ರಯ ದೊರೆತಕೂಡಲೆ ಆತನಿಗೆ ನಿಶ್ಚಿಂತೆ ಯುಂಟಾಗುವಂತೆ, ಸನ್ಮಿತ್ರಳಾದ ಸಾಧ್ವೀ ಶ್ರೀಮತಿಯ ನಂಬಿಗೆಯ ಮಹದಾಶ್ರಯ ದೊರೆತಕೂಡಲೆ ಮುದ್ದಣ್ಣನು ನಿಶ್ಚಿಂತನಾಗಿಬಿಟ್ಟದ್ದರಿಂದ, ಆತನಿಗೆ ಗಡದ್ದು ನಿದ್ದೆ ಹತ್ತಿಹೋಯಿತು! ಅಖಂಡ ಆರುತಾಸು ನಿದ್ದೆ ಮಾಡಿದರೂ ಆತನು ಈ ಮಗ್ಗಲಿನಿಂದ ಆ ಮಗ್ಗಲು ಆಗಲಿಲ್ಲ. ಹೀಗೆ ತನ್ನ ಪತಿಯು ದಿನದ ವಾಡಿಕೆಯಂತೆ ನಿದ್ದೆಮಾಡಿದ್ದನ್ನು ನೋಡಿ ಶ್ರೀಮತಿಗಾದ ಆನಂದವು ಆಕೆಯ ಹೃದಯವನ್ನು ತುಂಬಿ, ಈ ಮೊದಲು ಅಲ್ಲಿ ವಾಸಮಾಡಿಕೊಂಡಿದ್ದ ಆಕೆಯ ತಾಪವನ್ನು ಹೊರದೂಡಲು, ಆ ತಾಪವು ಆನಂದಾಶ್ರು ರೂಪದಿಂದ ಬಳಬಳ ಪೂರಾಸೋರಿಹೋಗಿ ಶ್ರೀಮತಿಯ ಹೃದಯವೂ ತಾಪರಹಿತವಾಯಿತು! ಆಗ ತೂಕಡಿಸಹತ್ತಿದ ಆ ಸಾಧ್ವಿಯು ಹಾಗೆಯೇ ಗೋಡೆಗೆ ಆತುಕುಳಿತು ನಿದ್ದೆಮಾಡುತ್ತಿರುವಾಗ, ಆಕೆಗೊಂದು ಕನಸು ಬಿದ್ದಿತು.

ಕನಸಿನಲ್ಲಿ ಶ್ರೀಮತಿಯು ವನಭೋಜನಕ್ಕೆ ಹೋದಂತಾಗಿತ್ತು. ಆಗ ಆಕೆಯು ತನ್ನ ಪತಿಯ ಪ್ರೀತಿಯ ಪದಾರ್ಥಗಳನ್ನು ತನ್ನ ಕೈಮುಟ್ಟಿ ಮಾಡಿದ್ದಳು. ವನವೇನೋ ಪರಮ ಮನೋಹರ; ಆದರೆ ಅದು ಆಕೆಯ ಪರಿಚಯದ್ದಾಗಿದ್ದಿಲ್ಲ. ಅಲ್ಲಿಯ ವಿವಿಧ ಚಿತ್ರವಿಚಿತ್ರ ವೃಕ್ಷಗಳ ದಟ್ಟ ನೆರಳು ವನದಲ್ಲೆಲ್ಲ ಬಿದ್ದಿತ್ತು. ಹೂಗಳ ಸುಗಂಧವು ನಾಲ್ಕೂ ಕಡೆಗೆ ಇಡಿಗಿದ್ದು, ಫಲವೃಕ್ಷಗಳು ಅಲ್ಲಲ್ಲಿ ಫಲಭಾರದಿಂದ ಜಗ್ಗಿದ್ದವು. ಆ ಅಪೂರ್ವ ವನದಲ್ಲಿ ಸುಂದರವಾದ ಬೆಳ್ಳಿ ಬಂಗಾರದ ಗಿಡಗಳೂ ಇದ್ದಂತೆ ಆಕೆಗೆ ತೋರಿತು. ಆ ಗಿಡಗಳಿಗೆ ಮುತ್ತು ರತ್ನಗಳ ಕಾಯಾಗಿರುವದನ್ನು ನೋಡಿ, ಶ್ರೀಮತಿಯು ಬೆರಗಾದಳು; ಆದರೆ ಅಂತಹ ವಿಚಿತ್ರವನದಲ್ಲಿ ಜನರ ಸುಳಿವಿಲ್ಲ, ಹಕ್ಕಿ ಪಕ್ಷಿಗಳ ಗದ್ದಲವಿಲ್ಲ; ಏನೋ ಅಂಜಿಕೆ ಬರುವಂಥ ಸಪ್ಪಳವು ಮಾತ್ರ ಆಕೆಯ ಕಿವಿಗೆ ಬೀಳತೊಡಗಿತು! ಆಗ ಶ್ರೀಮತಿಯು ಅಂಜಿ ಮನಸ್ಸಿನಲ್ಲಿ—''ನಾವು ಇದಾವ ವನಕ್ಕೆ ಬಂದೆವು! ಇದು ನಮ್ಮ ಚಿತ್ರದುರ್ಗದ ಅರಮನೆಯ ಹತ್ತರದ ಶೃಂಗಾರ ತೋಟವಂತು ಅಲ್ಲ, ಇಂತಹ ಅಪರಿಚಿತವಾದ ಅಂಜಿಕೆ ಬರುವ ವನದಲ್ಲಿ ನಾವು ಇಬ್ಬರೇ ಇರುವೆವಲ್ಲ! ಇದೇತರ ಧ್ವನಿಯಾಗಿರಬಹುದು! ಈ ಪ್ರಸಂಗದಲ್ಲಿ ದಳವಾಯಿ ಭರಮನ ಜನರು ಬಂದು ನಮ್ಮನ್ನು ಮುತ್ತಿದರೆ ನಾವು ಏನುಮಾಡಬೇಕು? ನಾವು ಸಂಗಡ ಬೆಂಗಾವಲ ಜನರನ್ನು ಯಾಕೆ ಕರಕೊಂಡು ಬಂದಿರಲಿಕ್ಕಿಲ್ಲ! ಈಗ ನಾನು ಹೋಗಿ ಅವರನ್ನು ಕರಕೊಂಡು ಬರಲಾ! ಅಥವಾ ಇವರೊಬ್ಬರನ್ನೇ ಬಿಟ್ಟು ಹೋಗುವದಾದರೂ ಹೇಗೆ? ಛಿ ಛೀ, ನನಗೆ ಕಾಲು ಎತ್ತಿ ಇಡಲಿಕ್ಕೇ ಬರಲೊಲ್ಲದು.'' ಹೀಗೆ ಯೋಚಿಸುತ್ತಿರಲು, ಆಕೆಯ ತಂದೆಯು ಒಬ್ಬ ತೇಜಸ್ವಿ ವಿರಕ್ತಮೂರ್ತಿಯನ್ನು ಸಂಗಡ ಕರಕೊಂಡು ಅಲ್ಲಿಗೆ ಬಂದಂತಾಯಿತು! ಆಗ ಶ್ರೀಮತಿಯ ಭಯ ನಿವಾರಣವಾಗಿ, ಆಕೆಯ ಹೃದಯದ ಭಕ್ತಿರಸವು ಉಕ್ಕೇರುತ್ತಿರಲು, ಆಕೆಯು ತನ್ನ ಪತಿಯ ಬಳಿಗೆ ಧಾವಿಸಿಹೋಗಿ—''ನಾಥಾ, ಶ್ರೀ ಗುರುಮೂರ್ತಿಗಳು ದಯಮಾಡಿಸಿರುವರು, ಪ್ರಸಾದ ಪಡೆಯಬೇಕಲ್ಲವೆ?'' ಎಂದು ಆತನನ್ನು ಕೇಳಿದ ಹಾಗಾಯಿತು. ಅದಕ್ಕೆ ಮುದ್ದನು ತಿರಸ್ಕಾರದಿಂದ—''ಬರಲಿ ಹೋಗು, ನನಗೆ ನಿದ್ದೆ ಬಹಳ ಬಂದಿದೆ, ಕಣ್ಣು ಉರಿಯುತ್ತಲಿವೆ, ಬೇಕಾದರೆ ನೀನೇ ಪ್ರಸಾದಪಡೆ.'' ಎಂದು ಹೇಳಿ ಸುಮ್ಮನೆ ಮಲಗಿಕೊಂಡಂತಾಯಿತು.

ಅಷ್ಟರಲ್ಲಿ ಹಿಂಡಿಗೆ ಹಿಂಡು ಜನ ಬಂದು ತೋಟದಲ್ಲಿ ತುಂಬಹತ್ತಿತು. ಅದರಲ್ಲಿ ತನ್ನ ತವರ ಮನೆಯ ಜನರಿದ್ದದ್ದನ್ನು ಶ್ರೀಮತಿಯು ನೋಡಿದಳು; ಆಗ ದಳವಾಯಿ ಭರಮನೂ ಆಕೆಯ ಕಣ್ಣಿಗೆ ಬಿದ್ದನು; ಆದರೆ ಅವರಲ್ಲಿ ಒಬ್ಬರೂ ಪಿಟ್ಟೆಂದು ಮಾತಾಡುತ್ತಿದ್ದಿಲ್ಲ. ಅವರೆಲ್ಲ ಶ್ರೀಮತಿಯ ಕಡೆಗೆ ನೋಡಿ ನಗುತ್ತಿದ್ದರು ಮಾತ್ರ! ಆಗ ಶ್ರೀಮತಿಯು ಮನಸ್ಸಿನಲ್ಲಿ—''ಇದೆಷ್ಟು ಮಂದಿ ಬಂದಿತಲ್ಲ! ಇಷ್ಟು ಮಂದಿಗೆ ಈ ಅಡಿಗೆ ಹೇಗೆ ಸಾಲಬೇಕು?'' ಎನ್ನುತ್ತಿರಲು, ಬಂದ ಜನರೆಲ್ಲ ಬಡಬಡ ಹೋಗಹತ್ತಿದರು. ಅವರ ಸಂಗಡ ಅವರ ತಂದೆಯೂ ಶ್ರೀ ವಿರಕ್ತಮೂರ್ತಿಯೊಡನೆ ಹೊರಟುಹೋಗಿಬಿಟ್ಟನು; ಆದರೆ ದಳವಾಯಿ ಭರಮನು ಮಾತ್ರ ಹೋಗಲಿಲ್ಲ! ಆತನು ನೆಟ್ಟಗೆ ಮುದ್ದನ ಹತ್ತರ ಬಂದವನೇ ಆತನನ್ನು ಎತ್ತಿ ನೆಲಕ್ಕೆ ಒಗೆದು ಆತನ ಎದೆಯ ಮೇಲೆ ಕುಳಿತಂತಾಯಿತು! ಆಗ ಶ್ರೀಮತಿಯು ತ್ವೇಷದಿಂದ ತನ್ನ ಟೊಂಕದ ಕತ್ತಿಯನ್ನು ಸರಕ್ಕನೆ ಸೆಳೆದುಕೊಂಡು ಮುಂಬರಿದು ದಳವಾಯಿ ಭರಮನ ಮೇಲೆ ಧುಮುಕಿ—''ಎಲಾ ದುಷ್ಟಾ, ಭರಮಾ, ಇಲ್ಲಿ ನಾನಿದ್ದೇನೆ ನೋಡು!'' ಎಂದು ನುಡಿಯುತ್ತಿರಲು, ಆಕೆಗೆ ಪಕ್ಕನೆ ಎಚ್ಚರವಾಯಿತು!

ಆಗ ಶ್ರೀಮತಿಯು ನಿದ್ದೆಗಣ್ಣಿನಲ್ಲಿ ಅಡಬಡಿಸಿ ನಿಜವಾಗಿಯೇ ಎದ್ದುನಿಂತಿದ್ದಳು; ಆಗ ಆಕೆಯ ಸುಂದರ ಮುಖವು ತ್ವೇಷದಿಂದ ಕೆಂಪಾಗಿತ್ತು, ಆಕೆಯ ಕೆಳಚಂದುಟಿಯು ಕಂಪಿಸುತ್ತಲಿತ್ತು, ಆಗ ಆಕೆಯು ಕಣ್ದೆರದು ನೋಡಲು, ತೋಟವೂ ಇಲ್ಲ, ದಳವಾಯಿ ಭರಮನೂ ಇಲ್ಲ! ಎದುರಿಗೆ ಮಂಚದ ಮೇಲೆ ತನ್ನ ಪತಿಯು ಎದ್ದು ಕುಳಿತು ಮುಗುಳನಗೆಯಿಂದ ತನ್ನ ಕಡೆಗೆ ನೋಡುತ್ತಲಿದ್ದಾನೆ! ಆಗ ಶ್ರೀಮತಿಯ ಚಿತ್ತವೃತ್ತಿಯು ವಿಲಕ್ಷಣವಾಯಿತು. ದಳವಾಯಿ ಭರಮನನ್ನು ಹಣೆಯಲು ಧುಮುಕಿದ್ದ ಆ ವೀರ ಪತ್ನಿಯ ಚಿತ್ತಕ್ಷೋಭವು ಇನ್ನೂ ಕಡಿಮೆಯಾಗಿದ್ದಿಲ್ಲ; ಅಷ್ಟರಲ್ಲಿಯೇ ಪತಿಯ ಮುಗುಳು ನಗೆಯ ಮುದ್ದುಮೊಗವು ಕಣ್ಣಿಗೆ ಬಿದ್ದ ಆನಂದವು ಆಕೆಯ ಹೃದಯದಲ್ಲಿ ಹಿಡಿಸದೆ ಉಕ್ಕೇರಲು, ಆಕೆಯ ಸಂತಪ್ತ ಹೃದಯದ ಮೇಲೆ ಒಮ್ಮೆಲೆ ತಣ್ಣೀರೆರೆಚಿದಂತಾಗಿ ಆಕೆಯ ಮುಖದಿಂದ— ''ಅವ್ವಯ್ಯಾ! ಎಂತಹ ಕೆಟ್ಟಕನಸದು!'' ಎಂಬ ಉದ್ಗಾರವು ತಟ್ಟನೆ ಹೊರಬಿದ್ದಿತು! ಅದನ್ನು ನೋಡಿ ಮುದ್ದನು ಮಂಚದಿಂದೆದ್ದು ಪ್ರೇಮಭರದಿಂದ ಹೆಂಡತಿಯನ್ನು ಅಪ್ಪಿ— ''ಯಾಕೆ ಪ್ರಿಯೇ,ಇಷ್ಟೇಕೆ ಅಂಜಿದೆ? ಏನು ಕನಸು ಬಿದ್ದಿತ್ತು?'' ಎಂದು ಕೇಳಲು, ಶ್ರೀಮತಿಯು—''ಏನು? ನಾಥಾ ವೀರಪತ್ನಿಗೆ ನನಗೆ ಅಂಜಿಕೆಯೇ? ಆ ದುಷ್ಟ ಭರಮನನ್ನು ನಿನ್ನ ಖಡ್ಗದಿಂದ ಹಣೆಯುತ್ತಿದ್ದೆನು; ಆದರೆ ಎಚ್ಚರಾದದ್ದರಿಂದ ಆತನು ಉಳಿದುಕೊಂಡನು! ಇರಲಿ. ನೀವು ಕನಸಿನಲ್ಲಿ ಶ್ರೀಗುರುವಿನ ಕರುಣ ಪ್ರಸಾದ ಪಡೆಯಲಿಲ್ಲವಲ್ಲ! ನಾನೂ ಪಡೆಯಲಿಲ್ಲ!'' ಎಂದು ನುಡಿಯುತ್ತ ಪತಿಯೊಡನೆ ಮಂಚದ ಮೇಲೆ ಕುಳಿತುಕೊಂಡು, ತನಗೆ ಬಿದ್ದಿದ್ದ ಕನಸನ್ನೆಲ್ಲ ಒಂದುಳಿಯದಂತೆ ನೆನಪು ಮಾಡಿಕೊಂಡು ಆತನ ಮುಂದೆ ಹೇಳಲು, ಅದನ್ನು ಕೇಳಿ ಮುದ್ದನಿಗೂ ಸ್ವಲ್ಪ ಅಸಮಾಧಾನವಾಯಿತು. ಕನಸಿನಲ್ಲಿ ತಾವಿಬ್ಬರೂ ಗುರುಪ್ರಸಾದವ ಪಡೆಯದೆಯಿದ್ದದ್ದೂ ತಾನು ದಳವಾಯಿ ಭರಮನಿಂದ ನೆಲಕ್ಕೆ ಬಿದ್ದದ್ದೂ ಆತನಿಗೆ ಹಾನಿಕರವಾಗಿ ತೋರಿದವು;

ಆದರೆ ತಾವಿಬ್ಬರೂ ಕನಸಿನಲ್ಲಿ ಊಟ ಮಾಡದೆಯಿದ್ದದ್ದು ಕೇಡಲ್ಲವೆಂದು ಆತನು ತಿಳಿದನು; ಆದರೂ ಕನಸಿನ ಪರಿಣಾಮವು ಆತನ ಮನಸ್ಸಿನ ಮೇಲೆ ಅಷ್ಟು ಆಗಲಿಲ್ಲವೆಂತಲೇ ಹೇಳಬಹುದು. ಅಷ್ಟರಲ್ಲಿ ಹೊರಗೆ ಎರಡು ತಾಸು ಹೊತ್ತು ಏರಿತ್ತು ಆಗ ಆತನು ತನ್ನ ಹೆಂಡತಿಯನ್ನು ಕುರಿತು— "ಸಾಧ್ವೀ, ಇರಲಿ ಬಿಡು, ಕನಸಿಗೇಕೆ ಅಷ್ಟು ಮಹತ್ವ? "ಮನಸಿನಲ್ಲಿದ್ದದ್ದು ಕನಸಿನಲ್ಲಿ!" ಯಾವಾಗೂ ನಿನಗೆ ನನ್ನ ಯೋಗಕ್ಷೇಮದ ಚಿಂತೆ ಬಹಳ; ಅದೇ ನಿನ್ನ ಕನಸಿನಲ್ಲಿ ಬರುವದು; ಆದ್ದರಿಂದ ಅದನ್ನು ನೀನು ಅಷ್ಟು ಮನಸಿಗೆ ಹಚ್ಚಿಕೊಳ್ಳಬೇಡ. ಈಗ ನನಗೇನು ಅಂಥ ಪ್ರಸಂಗ ಬಂದಿದೆ? ಈಗ ಅದಾವ ಗಂಡಸು ನನ್ನ ಮೇಲೆ ಕೈಮಾಡುವ ಹಾಗಿದ್ದಾನೆ? ಏನೋ ವಿಷವೇಳೆಯಿದ್ದದ್ದರಿಂದ ಬರಬಾರದ ಸೋಲು ನಿನ್ನೆ ನನಗೆ ಒಮ್ಮೆ ಬಂದಿತು! ಆದರೆ ಯಾವಾಗಲೂ ಹೀಗೆಯೇ ಆಗುತ್ತದೆಯೇ? ಪ್ರಿಯೇ, ನನ್ನ ಪಕ್ಷವು ಅತ್ಯಂತ ಬಲಿಷ್ಠವಾಗಿರುವದು, ಚಿಕ್ಕಪ್ಪ ಚಿಕ್ಕಪ್ಪ ಎಂಬ ನನ್ನ ತಮ್ಮಂದಿರಿಬ್ಬರು ರಣಶೂರರಿರುತ್ತಾರೆ. ಮೇಲೆ ನಿನ್ನಂಥ ಸಾಧ್ವಿಯ ಪುಣ್ಯಬಲವು ನನಗೆ ಸಹಾಯಕವಾಗಿರುತ್ತದೆ; ಅಂದ ಬಳಿಕ ಚಿಂತೆಯೇಕೆ? ಆದರೆ ಸಾಧ್ವಿ, ನಿನ್ನ ಲಿಂಗಪೂಜೆಗೆ ಹೊತ್ತಾಯಿತಲ್ಲವೆ? ಪ್ರತಿದಿನ ನಸುಕಿನಲ್ಲಿಯೇ ನೀನು ಲಿಂಗಾರ್ಚನೆ ಮಾಡುವವಳು!

ಈ ಮೇರೆಗೆ ಪತಿಯು ನುಡಿಯಲು, ಶ್ರೀಮತಿಯು ಪತಿಯ ಪ್ರಾತಃಕಾಲದ ಸೇವೆಯ ಸಿದ್ಧತೆಗಾಗಿ ಶಯನಗೃಹದಿಂದ ಹೊರಟುಹೋದಳು. ಇತ್ತ ಮುದ್ದಣ್ಣನು ತನ್ನ ಪ್ರಿಯ ಪತ್ನಿಯ ಸೌಜನ್ಯ-ಸಹೃದಯತೆಗಳಿಗಾಗಿ ಸಂತೋಷಪಡುತ್ತ ಉತ್ಸಾಹದಿಂದ ತನ್ನ ರಾಜಕಾರಣದ ಸಂಗತಿಗಳನ್ನು ಕುರಿತು ಆಲೋಚಿಸತೊಡಗಿದನು. ಆತನು ಅಷ್ಟು ಧರ್ಮಶ್ರದ್ಧೆಯುಳ್ಳವ ನಾಗಿರದಿದ್ದರೂ, ತನ್ನ ಹೆಂಡತಿಯ ನಿತ್ಯದ ಏಕನಿಷ್ಠೆಯು ಲಿಂಗಾರ್ಚನೆಗೆ ಹೆಸರಿಡುವಂಥ ಧರ್ಮಲಂಡನು ಆತನು ಆಗಿದ್ದಿಲ್ಲ. ಆತನು ಧರ್ಮದ ವಿಷಯದಲ್ಲಿ ಉದಾಸೀನನಾಗಿದ್ದನಲ್ಲದೆ, ಧರ್ಮದ್ರೋಹಿಯಾಗಿದ್ದಿಲ್ಲ. "ನಮ್ಮ ಕೆಲಸದಲ್ಲಿ ಲಿಂಗಾರ್ಚನೆಗೆಲ್ಲಿ ಕೂಡುವದು?" ಎಂಬ ನಿರರ್ಥಕ ನೆವದಿಂದ ಆ ಅತಂತ್ರಮನುಷ್ಯನು ಕಾಲಕ್ಕನುಸರಿಸಿ ಲಿಂಗಾರ್ಚನೆ ಮಾಡುತ್ತಿರಲಿಲ್ಲ; ಮತ್ತು ತನ್ನ ಧರ್ಮದ ಯಾವ ಕಟ್ಟಳೆಯಲ್ಲಿಯೂ ಆತನ ದೃಢವಿಶ್ವಾಸವಿದ್ದಿಲ್ಲ. ಆತನು ಚಿತ್ರದುರ್ಗದ ನಾಯಕತನವನ್ನು ಅಪಹರಿಸುವ ವಿಚಾರದಲ್ಲಿ ಯಾವಾಗಲೂ ಮಗ್ನನಾಗಿರುತ್ತಿದ್ದನು. ನನಗೆ ಧರ್ಮವು ಬೇಡಾಗಿದ್ದರೆ, ಸುಮ್ಮನೆ ಮಂದಿಯ ಧರ್ಮದ ಗೊಡವಿಗೆ ಯಾಕೆ ಹೋಗಬೇಕು?" ಎಂಬ ನಿರ್ದುಷ್ಟ ವಿಚಾರವೂ ಶ್ರೀಮತಿಯ ಪುಣ್ಯದಿಂದ ಆತನ ಹೃದಯದಲ್ಲಿ ವಾಸಿಸುತ್ತಿತ್ತೆಂದು ಹೇಳಬಹುದು. ಆದ್ದರಿಂದ ದುರಹಂಕಾರಿಗಳು ಧರ್ಮದ ವಿಷಯದ ತಮ್ಮ ಅಜ್ಞಾನದ ಎಗ್ಗಿಲ್ಲದೆ, ಬೇಕುಬೇಕಾದ ಧರ್ಮದಲ್ಲಿ ಕೈಹಾಕಿ ಆಯಾ ಧರ್ಮದವರಿಗೂ, ಧರ್ಮಕ್ಕೂ ಹೆಸರಿಡುತ್ತ ಧರ್ಮವಿಧ್ವಂಸಮಾಡುವ ನೀಚತನದ ಸಾಹಸಕ್ಕೆ ಹೋಗುವಂತೆ ಆತನು ಸರ್ವಥಾ ಹೋಗುವ ಹಾಗಿದ್ದಿಲ್ಲ. ಮುದ್ದನ ಈ ವಿವೇಕದ ಧರ್ಮೋದ್ಧಾರಬುದ್ಧಿಗೆ, ನಾವು ಹಿಂದೆ ಒಂದನೆಯ ಪ್ರಕರಣದಲ್ಲಿ ಹೇಳಿರುವಂತೆ, ಚಿತ್ರದುರ್ಗದ ನಾಯಕರ ಕುಲಪರಂಪರಾಗತವಾದ ಧರ್ಮೌದಾರ್ಯದ ಆಳಿಕೆಯ ಪದ್ಧತಿಯ

ದೃಢಾನುಭವವೂ ಕಾರಣವಾಗಿರಬಹುದು. ಒಟ್ಟಿಗೆ, ನಮ್ಮ ಪಂಚಮ ದಳವಾಯಿ ಮುದ್ದಣ್ಣನು ತನ್ನ ಪರರಾಜ್ಯಾಪಹಾರಕ ವಿಷಯದ ಮಹತ್ವಾಕಾಂಕ್ಷೆಯ ಭರದಲ್ಲಿಧರ್ಮದ ವಿಷಯವಾಗಿ ಉದಾಸೀನಭಾವ ತಾಳಿದ್ದನಲ್ಲದೆ, ದುರಹಂಕಾರಿಗಳಂತೆ ಧರ್ಮವಿಧ್ವಂಸಕನು ಆಗಿದ್ದಿಲ್ಲ ಆದರೆ ಮುದ್ದನ ಈ ಧರ್ಮೌದಾಸೀನ್ಯವು ಕೂಡ ಸಾಧ್ವೀ ಶ್ರೀಮತಿಗೆ ಗೌಣವಾಗಿ ತೋರದೆಯಿದ್ದದ್ದು ಮಾತ್ರ ಸೋಜಿಗದ ಸಂಗತಿಯೇ ಸರಿ! ಆಕೆಯು ತನ್ನ ಪತಿಯನ್ನು ತನಗಿಂತ ಶ್ರೇಷ್ಠ ಲಿಂಗಾರ್ಚಕನೆಂತಲೇ ಭಾವಿಸುತ್ತಿದ್ದಳು. ಯಾಕಂದರೆ, ಸಾಧ್ವಿಯರಿಗೆ ಪತಿಸೇವೆಯೇ ಲಿಂಗಾರ್ಚನವಾಗಿರುವಂತೆ ಶೂರರಿಗೆ ರಣಪಾಂಡಿತ್ಯದ ತಮ್ಮ ಖಡ್ಗದ ಉಪಾಸನೆಯೇ ಶ್ರೇಷ್ಟ ಲಿಂಗಾರ್ಚನವಾಗಿರುವದೆಂಬ ಶ್ರೀನಿಜಗುಣಶಿವಯೋಗಿಗಳ ವ್ಯಾಪಕ ಸಿದ್ಧಾಂತದ ರಹಸ್ಯವನ್ನು ಆಕೆಯು ಚನ್ನಾಗಿ ಅರಿತವಳಾಗಿದ್ದಳು ಆದ್ದರಿಂದ ತನ್ನ ನಿತ್ಯದ ಲಿಂಗಾರ್ಚನತತ್ಪರತೆಯ ಅಹಂಕಾರಕ್ಕೆ ಆಕೆಯಲ್ಲಿ ಆಸ್ಪದವುಂಟಾಗಿದ್ದಿಲ್ಲ. ಒಟ್ಟಿಗೆ ಅವರವರು ತಮ್ಮ ತಮ್ಮ ಧರ್ಮಕ್ಕನುಸರಿಸಿ, ಮಂದಿಯ ಧರ್ಮಗಳಿಗೆ ಬಾಧೆ ಬಾರದಂತೆ ತಮ್ಮ ತಮ್ಮ ಕರ್ತವ್ಯಗಳಲ್ಲಿ ತತ್ಪರರಾಗಿರುವದೇ ಶ್ರೇಷ್ಠ ಲಿಂಗಪೂಜೆಯೆಂಬ ಸದ್ಭಾವವು ಆಕೆಯಲ್ಲಿ ಸ್ವಾಭಾವಿಕವಾಗಿಯೇ ಉಂಟಾಗಿತ್ತು; ಹೀಗೆ ಆಕೆಗೆ ಪತಿಯ ದೋಷಗಳೂ ಗುಣಗಳಾಗಿ, ಸ್ವಾಭಾವಿಕವಾಗಿಯೇ ತೋರುತ್ತಲಿದ್ದದ್ದರಿಂದ, ಆಕೆಯು ಎಲ್ಲ ಸಂಗತಿ ಗಳಲ್ಲಿಯೂ ತನ್ನ ಪತಿಗೆ ಅಡಿಯಾಳಾಗಿಯೇ ನಡೆದುಕೊಳ್ಳುತ್ತಿದ್ದಳಲ್ಲದೆ, ತನ್ನ ಪರದೈವವಾದ ಪತಿಯ ಮುಂದೆ ಯಾವ ವಿಷಯದಲ್ಲಿಯೂ ಆಕೆಯು ತನ್ನ ಮೂಗು ಮೇಲೆ ಮಾಡಿಕೊಂಡು ನಡೆಯುತ್ತಿದ್ದಿಲ್ಲ! ಇದೇ ಸಾಧ್ವಿಯರ ಸಾಧ್ವೀತ್ವದ ಸಾರವತ್ತಾದ ಗುಟ್ಟೆಂದು ವಿವೇಕಿಗಳು ಹೇಳದೆ ಇರಲಾರರು! ಅದಿರಲಿ, ಅತ್ತ ಭೋಜನಾನಂತರ ಅಂತಗೃಹದಲ್ಲಿದ್ದ ಶ್ರೀಮತಿಯು ಏನು ಮಾಡುತ್ತಿದ್ದಳೆಂಬುದನ್ನು ನೋಡುವಾ.

ಚಿತ್ರದುರ್ಗದ ಅರಮನೆಯೊಳಗಿನ ಅಂತರ್ಗೃಹವು; ಮಧ್ಯಾಹ್ನದ ಏಳುತಾಸಿನ ಸಮಯವಾಗಿದೆ ; ಶ್ರೀಮತಿಯು ಅದೇ ಊಟಮಾಡಿ ಉಲ್ಲಾಸದಿಂದ ಸುಖಶಯ್ಯೆಯಲ್ಲಿ ಪವಡಿಸಿದ್ದಾಳೆ. ನ್ನಿನ ದುಸ್ವಪ್ನದಿಂದ ಅಸಮಾಧಾನ ಹೊಂದಿದ್ದ ಆಕೆಯ ಮನಸ್ಸು, ಅಂದಿನ ಆಕೆಯ ಶುದ್ಧಭಾವದ ಅತ್ಯಾಸಕ್ತಿಯ ಲಿಂಗಾರ್ಚನೆಯಲ್ಲಿ, ಶ್ರೀಶಂಭುಲಿಂಗನು ಆಕೆಗೆ ದಯಪಾಲಿಸಿದ್ದ ಶುಭ ಪ್ರಸಾದದಿಂದ ಅತ್ಯಂತ ಸಮಾಧಾನ ಹೊಂದಿದೆ; ''ನಾನು ಚಿಂತಿಸಿ ಮಾಡುವದೇನು? ಎಲ್ಲವೂ ಶಂಭುಲಿಂಗಾಧೀನವು. ಆ ಶಂಭುಲಿಂಗನ ತಂತ್ರದಿಂದಲೇ ಜಗದ್ವ್ಯವಹಾರವು ನಡೆದಿದೆ; ಆದ್ದರಿಂದ ಆತನಿಗೇ ಶರಣುಹೋಗಿ ಸಮಾಧಾನದಿಂದ ನನ್ನ ಕರ್ತವ್ಯ ಮಾಡಿದರಾಯಿತು'' ಎಂಬ ಸತ್ಯತರವಾದ ಸುವಿಚಾರದಿಂದ ಆಕೆಯು ನಿಶ್ಚಿಂತಳಾಗಿದ್ದಾಳೆ. ಅಷ್ಟರಲ್ಲಿ ಆಕೆಯ ಪತಿಯಾದ ದಳವಾಯಿ ಮುದ್ದಣ್ಣನು ಉಲ್ಲಾಸ ದಿಂದ ಆಕೆಯ ಬಳಿಗೆ ಬಂದನು! ಹೀಗೆ ಅಕಾಲದಲ್ಲಿ ಪತಿಯ ಆಗಮನವಾದದ್ದಕ್ಕಾಗಿ ಶ್ರೀಮತಿಗೆ ಆಶ್ಚರ್ಯವಾಗಿದ್ದರೂ, ಅಂದಿನ ಆತನ ಉಲ್ಲಾಸ ವೃತ್ತಿಯನ್ನು ನೋಡಿ, ಏನೋ ಶುಭಚಿನ್ನವಿರುತ್ತದೆಂದು ಆಕೆಯು ತಿಳಿದುಕೊಂಡಳು. ಮುದ್ದನು ವಿಶ್ರಮಿಸುತ್ತ ಹೆಂಡತಿಗೂ

ಕುಳಿತುಕೊಳ್ಳಹೇಳಿ ಆಕೆಯನ್ನು ಕುರಿತು— "ಪ್ರಿಯೇ, ಶ್ರೀಮತೀ, ನಿನಗೆ ನಾನೊಂದು ಸಂತೋಷದ ಸುದ್ದಿಯನ್ನು ಹೇಳಲಿಕ್ಕೆ ಬಂದಿದ್ದೇನೆ. ಆ ಸುದ್ದಿಯನ್ನು ಕೇಳಿದೆಯೆಂದರೆ, ನಿನ್ನ ಕನಸಿನಿಂದ ನೊಂದಿರುವ ನಿನ್ನಮನಸ್ಸಿಗೆ ನಿಶ್ಚಯವಾಗಿ ಸಮಾಧಾನವಾಗುವದು. ನನ್ನ ಶೂರ ತಮ್ಮಂದಿರಾದ ಚುಕ್ಕಪ್ಪ,ಚಿಕ್ಕಪ್ಪ ಎಂಬವರಿಬ್ಬರು ನಮ್ಮ ವೈರಿಯಾದ ದಳವಾಯಿ ಭರಮನನ್ನು ಯುದ್ಧದಲ್ಲಿ ಪೂರ್ಣವಾಗಿ ಸೋಲಿಸಿ ಆತನನ್ನೂ, ಅಂದು ಕಾಳಗದಲ್ಲಿ ನನ್ನನ್ನು ಆಶ್ಚರ್ಯಮಗ್ನನನ್ನಾಗಿ ಮಾಡಿದ ಆ ಸಾಹಸೀ ಸ್ತ್ರೀಯನ್ನೂ ಸೆರೆಹಿಡಿದು ಬಿಗಿಯಾದ ಕಾವಲಿನಿಂದ ನಿನ್ನ ಬಳಿಗೆ ಕರೆತಂದಿದ್ದಾರೆ. ದಳವಾಯಿ ಭರಮನ ವಿಚಾರವನ್ನು ನಾನು ಹಿಂದುಗಡೆ ದರ್ಬಾರದಲ್ಲಿ ಮಾಡುವೆನು. ನನ್ನ ಸೋಲಿನ ಕಲಂಕಕ್ಕೆ ಕಾರಣಳಾದ ಆ ಸಾಹಸ ಸ್ತ್ರೀಯ ಶಾಸನವನ್ನು ಬೇಗನೆ ಮಾಡಬೇಕೆಂದು ನನ್ನ ತಮ್ಮಂದಿರು ಆತುರ ಪಡುತ್ತಿರುವರು. ನಾನು ಆ ವಿಲಕ್ಷಣ ಸ್ತ್ರೀಯನ್ನು ನೋಡುವ ಕುತೂಹಲದಿಂದ ಇಷ್ಟುಹೊತ್ತಿಗೆ ಆಕೆಯ ಬಳಿಗೆ ಹೋಗಿಬಿಡುತ್ತಿದ್ದೆನು; ಆದರೆ ನಿನಗೆ ಈ ಸಂತೋಷದ ಸುದ್ದಿಯನ್ನು ಹೇಳಿ, ನೊಂದ ಮನಸ್ಸಿನ ನಿನ್ನನ್ನು ಸಮಾಧಾನಪಡಿಸಬೇಕೆಂದು ಇಲ್ಲಿಗೆ ಬಂದಿದ್ದೇನೆ. ಇದೂ ಅಲ್ಲದೆ, ಆ ರಾತ್ರಿಯ ಕಾಳಗದಲ್ಲಿ ಆಕೆಯನ್ನು ನಾನೂ ಚನ್ನಾಗಿ ನೋಡಿರುವದಿಲ್ಲ. ಈಗ ನಿನ್ನ ಸಮಕ್ಷ ಆಕೆಯನ್ನು ನಾನು ನೋಡಬೇಕೆಂದಿದ್ದೇನೆ. ಆಕೆಗೆ ಯಾವ ಶಾಸನ ಮಾಡಬೇಕೆಂಬದನ್ನಾದರೂ ನೀನೇ ಹೇಳುವೆಯಂತೆ. ನಮಗಾಗಿದ್ದ ಇಂದಿನ ಜಯವು, ನಿಶ್ಚಯವಾಗಿ ಈ ದಿನ ನಿನ್ನ ಏಕನಿಷ್ಠೆಯ ಲಿಂಗಾರ್ಚನೆಯ ಫಲವಾಗಿರುವದೆಂದು ನಾನು ತಿಳಿಯುವೆನು. ಅಥವಾ ನಿನ್ನೆ ಸ್ವಪ್ನದಲ್ಲಿ ನಿನಗೆ ದರ್ಶನಕೊಟ್ಟಿದ್ದ ಆ ವಿರಕ್ತಮೂರ್ತಿಯ ದರ್ಶನದ ಫಲವೆಂದಾದರೂ ನೀನು ಭಾವಿಸ ಬಹುದು; ಯಾಕಂದರೆ ಆ ಸಾಹಸೀ ಸ್ತ್ರೀಯೊಡನೆ ನನ್ನ ಮುಖ್ಯ ವೈರಿಯಾದ ದಳವಾಯಿ ಭರಮನೂ ನಮ್ಮ ಕೈಸೇರಿದ್ದರಿಂದ, ನಮ್ಮ ಪ್ರತಿಕಕ್ಷಿಗಳ ಸಂಪೂರ್ಣ ನಾಶವೇ ಆದಂತಾಗಿರುವದು."

ಹೀಗೆ ನುಡಿದ ತನ್ನಪತಿಯ ಭಕ್ತಿಭಾವದ ಕಟ್ಟಕಡೆಯ ನುಡಿಗೆ ಶ್ರೀಮತಿಯು ಸಂತೋಷಪಟ್ಟು ಆತನನ್ನು ಕುರಿತು— "ಆಗಲಿ ಮಹಾಸ್ವಾಮಿ, ನಾನು ತಮ್ಮ ಇಚ್ಛೆಗೆ ಹೇಗೆ ಹೊರಗಾದೇನು? ನನ್ನ ಮೈದುನರು ತಮಗಾದ ಜಯದ ಆನಂದದ ಭರದಲ್ಲಿ ಸ್ತ್ರೀಯನ್ನು ಸೆರೆಹಿಡಿದಿರಬಹುದಾಗಿ ತೋರುತ್ತದೆ. ಅಂತೇ ಸ್ತ್ರೀಯರಿಗೆ, ಹಕ್ಕಿಗಳಿಗೆ, ಮುದುಕರಿಗೆ, ಹುಡುಗರಿಗೆ, ಆಕಳುಗಳಿಗೆ, ಬ್ರಾಹ್ಮಣರಿಗೆ, ದರಿದ್ರರಿಗೆ ಪ್ರತಿಬಂಧವು ಸಲ್ಲದೆಂಬ ದೊಡ್ಡವರ ಉಕ್ತಿಯ ಸ್ಮರಣವು ಅವರಿಗೆ ಆದಂತೆ ತೋರುವದಿಲ್ಲ; ಅಥವಾ ಸ್ತ್ರೀಯನ್ನು ಸೆರೆಹಿಡಿಯಲಿಕ್ಕೆ ಇನ್ನೊಂದು ಕಾರಣವು ಇರಬಹುದು. ಸ್ತ್ರೀಯರು ಸಾಹಸಿಗಳಾಗುವದು ಯೋಗ್ಯವಲ್ಲ; ಯಾಕಂದರೆ, ಅದರಿಂದ ಪುರುಷರ ಪೌರುಷಕ್ಕೆ ಹಾನಿತಟ್ಟುವ ಸಂಭವವಿರುತ್ತದೆ. ಈ ಮಾತನ್ನು ಆ ಸಾಹಸ ಸ್ತ್ರೀಗೆ ತಿಳಿಸುವದಕ್ಕಾಗಿ ನಮ್ಮ ಮೈದುನ ಚುಕ್ಕಣ್ಣನವರು ಆಕೆಯನ್ನು ಇಲ್ಲಿಗೆ ಕರತಂದಿರಬಹುದು. ಅಥವಾ ನಮ್ಮ ಆ ಜ್ಯೇಷ್ಠ ಭ್ರಾತೃಭಕ್ತ ಮೈದುನರಿಗೆ, ನಿಮ್ಮ ಅಸಮಾಧಾನಕ್ಕೆ ಕಾರಣಳಾದ ಆ ಸಾಹಸೀ ಸ್ತ್ರೀಯು

ದಂಡಾಳಾಗಿ ತೋರಿ ಸಿಟ್ಟಿನಿಂದ ಆಕೆಯನ್ನು ಅವರು ಹಿಡಿದು ತಂದಿದ್ದರೂ ತಂದಿರಬಹುದು. ಆಗಲಿ, ತಮ್ಮ ಇಚ್ಛೆಯಂತೆ ಆಕೆಯನ್ನು ಅವಶ್ಯವಾಗಿ ಒಳಗೆ ಕರೆಸಬಹುದು. ತಮಗೆ ತಾಪದಾಯಕಳಾಗಿರುವ ಆಕೆಯು ನನಗೂ ತಾಪದಾಯಕಳೇ ಸರಿ,'' ಎಂದು ನುಡಿಯಲು, ಮುದ್ದಣ್ಣನ ಸೂಚನೆಯಂತೆ ಆತನ ಬಂಧುಗಳು ದಳವಾಯಿ ಭರಮನನ್ನು ಕಾರಾಗೃಹಕ್ಕೆ ಕಳಿಸಿ, ಆ ಸಾಹಸ ಸ್ತ್ರೀಯನ್ನು ಮಾತ್ರ ತಮ್ಮ ಆ ಅತ್ತಿಗೆ-ಅಣ್ಣಂದಿರ ಮುಂದೆ ತಂದು ನಿಲ್ಲಿಸಿದರು; ಆದರೆ ಆಗ ಆ ಸಾಹಸ ಸ್ತ್ರೀಯು ಮೈತುಂಬ ಬುರುಕೆ ಹಾಕಿಕೊಂಡದ್ದರಿಂದ, ಆಕೆಯನ್ನು ಯಾವಾಗ ನೋಡೇವೆಂಬ ಶ್ರೀಮತೀ ಮುದ್ದರ ಕುತೂಹಲವು ಪೂರ್ಣವಾಗಲಿಲ್ಲ! ಹೀಗೆ ಆ ಗಂಡ-ಹೆಂಡಿರನ್ನು ಕುತೂಹಲ ಮಗ್ನರಾಗಿ ಮಾಡಿದ ಆ ಸಾಹಸ ಸ್ತ್ರೀಯು, ವಾಚಕರ ಗುರುತಿನ ರಣಹುಚ್ಚಿಯೇ ಆಗಿದ್ದಳು!

''ಹಂಗುಹರಿದವರಿಗೆ ಲಿಂಗದ ಪರಿವೆಯಿಲ್ಲೆಂಬಂ''ತೆ, ತನ್ನ ತಂದೆಯನ್ನು ಕೊಂದಿದ್ದ ದಳವಾಯಿ ಮುದ್ದನನ್ನು ಕೊಲ್ಲುವ ಪ್ರತಿಜ್ಞೆ ಮಾಡಿದ್ದ ರಣಹುಚ್ಚಿಗೆ, ಜಗತ್ತಿನ ಹಂಗು ಇದ್ದಿಲ್ಲವೆಂದು ಹೇಳಬಹುದು! ತಾನು ವೈರಿಗಳ ಸೆರೆಯಲ್ಲಿ ಸಿಕ್ಕಿರುವೆನೆಂಬ ಭಯವು ಆಕೆಗೆ ಸರ್ವಥಾ ಇದ್ದಿಲ್ಲ; ಆದ್ದರಿಂದ ಆಕೆಯು ಶ್ರೀಮತೀ-ಮುದ್ದರ ಮುಂದೆ ನಿರ್ಭಯದಿಂದ ನಿಂತುಬಿಟ್ಟಿದ್ದಳು. ಚಾರಿತ್ರ್ಯದಿಂದ ಮನುಷ್ಯನಿಗೆ ಗೌರವವು ಬರುವದಷ್ಟೆ? ಮುದ್ದನಂಥ ಪ್ರಮುಖ ವೀರನನ್ನು ಕಾಳಗದಿಂದ ಹಿಂದಕ್ಕೆ ಸರಿಸಿದ್ದರಿಂದ, ರಣಹುಚ್ಚಿಯು ಚಾರಿತ್ರ್ಯವತಿ ಯಾಗಿದ್ದಳು; ಆದ್ದರಿಂದ ಮುದ್ದನಂತೆ ಶ್ರೀಮತಿಗೂ ಆಕೆಯನ್ನು ನೋಡುವ ಕುತೂಹಲವು ಉಂಟಾದದ್ದು ಸ್ವಾಭಾವಿಕವು. ಮೈತುಂಬ ಬುರುಕೆ ಹಾಕಿಕೊಂಡಿದ್ದ ರಣಹುಚ್ಚಿಯ ಬುರುಕೆಯಲ್ಲಿ, ಆಕೆಯ ಎರಡು ಕಣ್ಣುಗಳು, ಎರಡು ಪಾದಗಳು, ಎರಡು ಹಸ್ತಗಳು ಮಾತ್ರ ಕಾಣುತ್ತಿದ್ದವು. ಅಷ್ಟರಮೇಲಿಂದಲೇ ಶ್ರೀಮತೀ-ಮುದ್ದರು ತಮ್ಮ ತಮ್ಮ ಭಾವನೆಯಂತೆ ಕೌತುಕದಿಂದ ರಣಹುಚ್ಚಿಯ ಬೇರೆಬೇರೆ ರೂಪಗಳನ್ನು ಕಲ್ಪಿಸತೊಡಗಿದ್ದರು. ಶ್ರೀಮತಿಯು ತನ್ನ ಸಾತ್ವಿಕಭಾವದಂತೆ ರಣಹುಚ್ಚಿಯ ಸಾತ್ವಿಕ ಸುಂದರರೂಪವನ್ನು ಕಲ್ಪಿಸಿ, ''ಇಂತಹ ಸುಕೋಮಲಳು ಇಷ್ಟು ದಿಟ್ಟೆಯು ಹೇಗಾಗಿರಬಹುದೆಂ''ದು ಆಶ್ಚರ್ಯಪಡತೊಡಗಿದಳು. ಮುದ್ದನು ತನ್ನ ರಜೋವೃತ್ತಿಯಂತೆ ರಣಹುಚ್ಚಿಯ ರಾಜಸ ಉಜ್ವಲವೀರರೂಪವನ್ನು ಕಲ್ಪಿಸಿ, ''ಏನೇ ಆಗಲಿ, ಈಕೆಯು ಹೆಂಗಸಲ್ಲವೆ? ಹೆಂಗಸಿಗೆ ನಾನು ಅಂಜಬೇಕೆ?'' ಎಂದು ಪಶ್ಚಾತ್ತಾಪಪಡತೊಡಗಿದನು. ಹೀಗೆ ತನ್ನ ಅತ್ತಿಗೆ- ಅಣ್ಣಂದಿರಿಬ್ಬರೂ ರಣಹುಚ್ಚಿಯನ್ನು ನೋಡುತ್ತ ಸುಮ್ಮನೆ ಕುಳಿತಿರುವದನ್ನು ನೋಡಿ ಚುಕ್ಕಪ್ಪನು ತನ್ನ ಅತ್ತಿಗೆಯನ್ನು ಕುರಿತು— ''ಅಮ್ಮಾಜೀ, ಸಾಧ್ವಿಯರು ನೀವು ಈ ಸಾಹಸ ಸ್ತ್ರೀಯ ಇರವನ್ನು ನೋಡುವ ಕೃಪೆಮಾಡಬೇಕು; ನೂರುಜನ ಗಂಡಸರನ್ನು ಮುರಿದು ಈ ರಕ್ಕಸಿಯನ್ನು ಬ್ರಹ್ಮದೇವನು ಮಾಡಿರುವನೆಂಬದರಲ್ಲಿ ಸಂಶಯವಿಲ್ಲ, ನಾವು ಬೇಕಾದಷ್ಟು ಹೇಳಿದೆವು; ಆದರೆ ಈಕೆಯು ಬುರುಕೆಯನ್ನು ತೆಗೆಯಲೊಲ್ಲಳು; ಆದರೆ ಹೆಂಗಸರ ಕೈ ಮೈಮುಟ್ಟುವದು ಯೋಗ್ಯವಲ್ಲೆಂದು

ನಾವು ಕೈಕಾದಿದ್ದೇವೆ. ಅಣ್ಣಂದಿರು ಈಕೆಗೆ ಯಾವ ಶಿಕ್ಷೆಯ ವಿಧಿಸುವರೆಂಬದರ ಹಾದಿಯನ್ನು ನಾವು ನೋಡುತ್ತಿರುವೆವು.

ಮುದ್ದ-ತಮ್ಮಾ ದಳವಾಯಿ ಭರಮನೊಡನೆ ಈ ಸಾಹಸೀ ಸ್ತ್ರೀಯು ನಿಮ್ಮ ಕೈಗೆ ಹೇಗೆ ಸಿಕ್ಕಳು?

ಚುಕ್ಕಪ್ಪ-ದಳವಾಯಿ ಭರಮನು ತನ್ನ ಸಂಗಡಿಗರೊಡನೆ ನಮ್ಮ ಅಂಕಲಿಯ ಗವಿಯಲ್ಲಿ ನಿನ್ನೆ ರಾತ್ರಿ ಗುಪ್ತಾಲೋಚನೆ ಮಾಡುತ್ತ ಕುಳಿತಿರುವದು ನಮ್ಮ ಗುಪ್ತಚಾರರ ಮುಖಾಂತರ ನಮಗೆ ಗೊತ್ತಾಯಿತು. ಕೂಡಲೆ ನಾವು ಆರಿಸಿದ ನೂರುಜನ ಶೂರ ದಂಡಾಳುಗಳೊಡನೆ ಆ ಗುಹೆಯನ್ನು ಮುತ್ತಿ ಎಲ್ಲರನ್ನೂ ಸೆರೆಹಿಡಿಯುತ್ತಿರುವಾಗ, ಅವರಲ್ಲಿ ಆ ಸಾಹಸೀ ಸ್ತ್ರೀಯು ಸಿಕ್ಕಳು.

ಮುದ್ದ-ಇಷ್ಟು ಸುಲಭವಾಗಿ ಇವರು ನಮ್ಮ ಕೈಸೇರಿದ್ದು ಪರಮಾಶ್ಚರ್ಯವೇ ಸರಿ! ರಕ್ತಪಾತವಾಗದೆ ಇವರು ನಿಮ್ಮ ಕೈಸೇರಿದರೆ?

ಚುಕ್ಕಪ್ಪ-ಹೌದು ಅಣ್ಣಾಜೀ, ರಕ್ತಪಾತವಾಗದೆಯೇ ಇವರು ನಮ್ಮ ಕೈಗೆ ಸಿಕ್ಕರು! ಹೀಗೆ ಸಿಗಲಿಕ್ಕೆ, ಈ ಸಾಹಸೀ ಸ್ತ್ರೀಯ ಹೊಯ್ಕಾಲಿತನವೇ ಕಾರಣವು.

ಮುದ್ದ-ಅದು ಹೇಗೆ? ಇವರು ನಿಃಶಸ್ತ್ರರಾಗಿದ್ದರೋ?

ಚುಕ್ಕಪ್ಪ-ಅಣ್ಣಾ ಇವರು ನಿಃಶಸ್ತ್ರರು ಹೇಗೆ ಇದ್ದಾರು? ಆದರೆ ಈ ಸಾಹಸೀ ಸ್ತ್ರೀಯು ತಮ್ಮವರಿಗೆ ಶಸ್ತ್ರವೆತ್ತಗೊಡಲಿಲ್ಲ. ಈಕೆಯು ದಳವಾಯಿ ಭರಮನಿಗೆ— "ಅಣ್ಣಾ ಇದು ಶಸ್ತ್ರವೆತ್ತಲು ಸಮಯವಲ್ಲ ವೈರಿಗಳ ಈ ನೂರಾರು ಜನರ ಮುಂದೆ ನಮ್ಮ ಸ್ವಲ್ಪ ಜನರ ಆಟವೇನು ಸಾಗುವದು? ಅಂದಬಳಿಕ ಕಾರ್ಯಸಾಧಕರಾದ ನಾವು ಸುಮ್ಮನೆ ದುಡುಕುವದು ಯೋಗ್ಯವಲ್ಲ, ಮಾಡಬಾರದ್ದನ್ನು ಮಾಡಿಯಾದರೂ ಸ್ವಾಮಿಕಾರ್ಯವನ್ನು ಸಾಧಿಸುವದು ಸ್ವಾಮಿಭಕ್ತರ ಕರ್ತವ್ಯವಾಗಿರುವದು. ಸದ್ಯಕ್ಕೆ ನಾವು ಶಸ್ತ್ರಗಳನ್ನು ಕೆಳಗೆ ಇಡೋಣ ಇವರು ಮಾಡುವದನ್ನು ಮಾಡಲಿ! ಕೇವಲ ನಮ್ಮ ಶೌರ್ಯವನ್ನೇ ಪ್ರಕಟಿಸಿ ಕೀರ್ತಿ ಸಂಪಾದಿಸುವದಿದ್ದರೆ, ನಾವು ಈ ನೂರಾರು ಜನರ ಮೇಲೆಯೂ ಬಿದ್ದು ಇವರನ್ನು ತುಂಡರಿಸಿ ಪಾರಾಗಿ ಹೋಗಬಹುದಾಗಿತ್ತು ಅಥವಾ ನಾವೆಲ್ಲರೂ ಕಾಳಗದಲ್ಲಿ ಕಾದುತ್ತ ಕಾದುತ್ತ ದೇಹವಿಟ್ಟು ವೀರಸ್ವರ್ಗವನ್ನಾದರೂ ಪಡೆಯಬಹುದಾಗಿತ್ತು; ಆದರೆ ನಾವು ನಮ್ಮ ಪ್ರತಿಜ್ಞಾಪೂರ್ವಕವಾಗಿ ನಮ್ಮ ಸ್ವಾಮಿಕಾರ್ಯವನ್ನು ಸಾಧಿಸಬೇಕಾಗಿದೆಯಲ್ಲವೆ? ಆದ್ದರಿಂದ ನಾವು ಈಗ ಹೊತ್ತು ಬಿದ್ದಂತೆ ಕೊಡೆಹಿಡಿದು ನಮ್ಮ ಕಾರ್ಯವನ್ನು ಸಾಧಿಸಬೇಕಲ್ಲದೆ, ಕ್ಷಾತ್ರವೃತ್ತಿಯ ಅಭಿಮಾನಕ್ಕೆ ಬಿದ್ದು ಕಾರ್ಯಘಾತ ಮಾಡಿಕೊಳ್ಳುವದು ಯೋಗ್ಯವಲ್ಲ! ಸ್ವಾರ್ಥಕ್ಕಿಂತಲೂ ಸ್ವಾಮಿಕಾರ್ಯವೇ ಮೇಲು!'' ಅನ್ನಲು, ದಳವಾಯಿ ಭರಮನ ಸೂಚನೆಯಂತೆ ಆತನ ಪಕ್ಷದ ಜನರೆಲ್ಲರೂ ತಮ್ಮ ಶಸ್ತ್ರಗಳನ್ನು ಒರೆಗಾಣಿಸಿದರು!

ಮುದ್ದ-ಆಗೂ ಈ ಸಾಹಸೀ ಸ್ತ್ರೀಯು ಹೀಗೆಯೇ ಬುರುಕೆಯನ್ನು ಹಾಕಿಕೊಂಡೇ ಇದ್ದಳೋ?

ಚುಕ್ಕಪ್ಪ–ಹೌದು, ಆಗೂ ಬುರುಕೆಯನ್ನು ಹಾಕಿಕೊಂಡೇ ಇದ್ದಳು. ಎಷ್ಟು ಹೇಳಿದರೂ ಈವರೆಗೂ ಈಕೆಯು ಬುರುಕೆಯನ್ನು ತೆಗೆದಿರುವದಿಲ್ಲ, ನಮ್ಮೊಡನೆ ಮಾತನ್ನೂ ಆಡಿರುವದಿಲ್ಲ!

ಮುದ್ದ–ಹಾಗಿದ್ದರೆ, ಮೊನ್ನಿನ ರಾತ್ರಿಯ ಕಾಳಗದಲ್ಲಿಯ ಆ ಸಾಹಸೀ ಸ್ತ್ರೀಯು ಈಕೆಯೇ ಎಂದು ನಿಮಗೆ ಹೇಗೆ ಗೊತ್ತಾಯಿತು? ಮತ್ತೆ ಯಾವಳಾದರೊಬ್ಬ ಸ್ತ್ರೀಯು ಇರಬಹುದು; ಯಾಕಂದರೆ ಮೊನ್ನಿನ ಕಾಳಗದಲ್ಲಿಯ ಸ್ತ್ರೀಯು ಬುರುಕೆಯನ್ನು ಹಾಕಿಕೊಂಡಿದ್ದಿಲ್ಲ; ಅದನ್ನು ನಾನು ಕಣ್ಣುಮುಟ್ಟ ನೋಡಿದ್ದೇನೆ. ಅಂಥವಳು ಗವಿಯಂಥ ಏಕಾಂತ ಗೃಹದಲ್ಲಿ ಬುರುಕೆ ಹಾಕಿಕೊಂಡಿರುವದು ಶಕ್ಯವೆ?

ಚುಕ್ಕಪ್ಪ—ಹೌದು ಅಣ್ಣಯ್ಯಾ, ನಿಶ್ಚಯವಾಗಿ ಈಕೆಯು ಆ ಸಾಹಸೀ ಸ್ತ್ರೀಯೇ ಇರುವಳು, ಬೇರೆ ಸ್ತ್ರೀಯಲ್ಲ. ಬೇರೆ ಯಾರೊಬ್ಬ ಕುಲೀನ ಸ್ತ್ರೀಯಾಗಿದ್ದರೆ, ಆಕೆಯಲ್ಲಿ ಇಷ್ಟು ಎಟ್ಟೆತನವು ಇರುತ್ತಿತ್ತೆ? ಸ್ತ್ರೀಯರ ಹುಟ್ಟುಗುಣಗಳಾದ ಲಜ್ಜಾ–ಭಯಗಳು ಈಕೆಯಲ್ಲಿ ಸರ್ವಥಾ ಇರುವದಿಲ್ಲ. ಮೇಲಾಗಿ, ಗವಿಯೊಳಗಿನ ಗುಪ್ತಾಲೋಚನೆಯನ್ನೆಲ್ಲ ನಾನು ಮರೆಗೆ ನಿಂತು ಕಿವಿಮುಟ್ಟಿ ಕೇಳಿದ್ದೇನೆ. ಆ ಆಲೋಚನೆಯಲ್ಲಿ ಮೊನ್ನಿನ ರಾತ್ರಿಯ ಕಾಳಗದ ಸುದ್ದಿಯೂ ಹೊರಟಿತ್ತು. ಆ ಕಾಳಗದ ಜಯದಿಂದ ಉಬ್ಬಿಹೋಗಿದ್ದ ಅವರು, ನಿರ್ಭಯದಿಂದ ಮಾತು ಕಥೆಗಳನ್ನು ಆಡುತ್ತಿದ್ದರು; ಆದ್ದರಿಂದ ಆ ಸಾಹಸೀ ಸ್ತ್ರೀಯು ಈಕೆಯೇ ಎಂದು ನನಗೆ ಗೊತ್ತಾಯಿತು. ಈಕೆಯ ಹೆಸರು ಹುಚ್ಚಿಯಂತೆ ಈಕೆಯೇ ಭರಮನಾಯಕನ ಮುಂದೆ ತನ್ನ ವೀರಾವೇಶದ ಭರದಲ್ಲಿ—''ವೀರನಾಯಕಾ, ನನ್ನ ಹೆಸರು ಹುಚ್ಚಿಯು. ಬೇಕಾದರೆ ನೀನು ನನ್ನನ್ನು ರಣಹುಚ್ಚಿಯೆಂತಲೂ ಕರೆಯಬಹುದು.'' ಎಂದು ಹೇಳಿದಳಂತೆ! ಈ ಮಾತನ್ನು ನಾನು ಕಿವಿಮುಟ್ಟಕೇಳಿದ್ದೇನೆ; ಆದ್ದರಿಂದ ಈಕೆಯೇ ಆ ಸಾಹಸೀ ಸ್ತ್ರೀಯೆಂಬದರಲ್ಲಿ ಸಂಶಯವಿಲ್ಲ. ಅಣ್ಣಾ, ಈಗ ನಮ್ಮ ಕೈಯಲ್ಲಿ ಸಿಕ್ಕಿದ್ದರೂ ಈಕೆಯ ಒಗರು ಎಷ್ಟಿರುತ್ತದೆ ನೋಡಬಾರದೆ?

ಚುಕ್ಕಪ್ಪನ ಈ ಮಾತು ಕೇಳಿ ಶ್ರೀಮತಿಗೂ, ಮುದ್ದನಿಗೂ ಆಶ್ಚರ್ಯವಾಯಿತು. ಈಕೆಯ ರಣಹುಚ್ಚಿಯೆಂಬ ಹೆಸರು ಸಾರ್ಥಕವೆಂದು ಮುದ್ದನು ತನ್ನ ಮನಸ್ಸಿನಲ್ಲಿ ಅಂದುಕೊಂಡನು. ಆಕೆಯನ್ನು ನೋಡುವ ಆತನ ಕುತೂಹಲವು ಮತ್ತಷ್ಟು ಹೆಚ್ಚಿತು; ಆದರೆ ಸಾಧ್ವೀ ಶ್ರೀಮತಿಯ ಮುಂದೆ ಹೆಂಗಸಿನೊಡನೆ ಹಾದಿಯ ಬಿಟ್ಟು ನಡೆಯುವದು ಆತನಿಗೆ ಯೋಗ್ಯವಾಗಿ ತೋರಲಿಲ್ಲ. ಆಗ ಆತನು ತನ್ನ ಹೆಂಡತಿಯಾದ ಶ್ರೀಮತಿಯನ್ನು ಕುರಿತು— ''ಸಾಧ್ವೀ, ಈ ದಿಟ್ಟ ಹೆಣ್ಣು ಮಗಳಿಗೆ ಏನು ಮಾಡಬೇಕು? ಸರಿರಾತ್ರಿಯ ಕಾಳಗದಲ್ಲಿ ಗಂಡರಾಮಿಯಂತೆ ಬುರುಕೆಯಿಲ್ಲದೆ ತಲೆಮಾಸಿ ಬಂದಿದ್ದ ಈಕೆಯು, ಈಗ ಇಲ್ಲದ ಸೋಗುಮಾಡಿ ಬುರುಕೆ ಹಾಕಿಕೊಂಡಿರುವಳಲ್ಲ! ನೀನಾದರೂ ಈಕೆಗೆ ಬುರುಕೆ ತೆಗೆಯಹೇಳು'' ಅನ್ನಲು, ಮೂರ್ತಿಮಂತ ವಿವೇಕವಾಗಿದ್ದ ಶ್ರೀಮತಿಯು, ಒಮ್ಮೆ ತನ್ನಪತಿಯಕಡೆಗೂ, ಒಮ್ಮೆ ತನ್ನ ಮೈದುನನ ಕಡೆಗೂ, ಒಮ್ಮೆ ರಣಹುಚ್ಚಿಯ ಕಡೆಗೂ ನೋಡಿ ತಾಳ್ಮೆಯಿಂದ ಆಲೋಚಿಸತೊಡಗಿದಳು. ಹೀಗೆ ಯಾವ ವಿಷಯದಲ್ಲಿಯೇ ಆಗಲಿ, ತಟ್ಟನೆ ದುಡುಕದೆ ತಾಳ್ಮೆಯಿಂದ ವಿಚಾರಮಾಡುವದು ಸೌಜನ್ಯದ ಲಕ್ಷಣವಾಗಿರುವದು.

# ಸದ್ಗುರು ಪ್ರಭಾವವೇ ಪ್ರಭಾವವು !

ಸಾಧ್ವೀ ಶ್ರೀಮತಿಯು ಹೀಗೆ ಸ್ವಲ್ಪಹೊತ್ತು ವಿಚಾರಮಾಡಿ ರಣಹುಚ್ಚಿಯನ್ನು ಕುರಿತು—

ಶ್ರೀಮತಿ—ಅಮ್ಮಾ ಹುಚ್ಚಮ್ಮಾ, ದಳವಾಯಿಗಳ ಮಾತಿನಂತೆ ಬುರುಕೆ ತೆಗೆಯಲಿಕ್ಕೆ ನಿನಗೆ ತೊಂದರೆಯೇನಿದೆ? ಮೊನ್ನಿನ ಕಾಳಗದಲ್ಲಿ ನೀನು ಬುರುಕೆಯನ್ನು ಹಾಕಿಕೊಂಡಿರದಿದ್ದರೆ, ಈಗಾದರೂ ಬುರುಕೆ ತೆಗೆಯಲಿಕ್ಕೆ ಸಂಕೋಚವೇಕೆ? ನಾನಿದ್ದೇನೆ, ನೀನು ಯಾವ ಮಾತಿಗೂ ಸಂಕೋಚ ಪಡಬೇಡ, ಬುರುಕೆಯನ್ನು ತೆಗೆ.

ರಣಹುಚ್ಚಿ (ಕೈ ಜೋಡಿಸಿ)— ಅಮ್ಮಾಜೀ, ನಿಮ್ಮ ಸಾಧ್ವೀತ್ವದ ಪವಿತ್ರ ಕೀರ್ತಿಯನ್ನು ನಾನು ಕೇಳಿಬಲ್ಲೆನು. ನೀವು ನನಗೆ ಪರಮವಂದ್ಯರಾಗಿರುವಿರಿ. ಅಹಲ್ಯೆ, ಸೀತೆ, ದ್ರೌಪದಿ ಇವರಂತೆ ನೀವು ಪ್ರಾತಃಕಾಲದಲ್ಲಿ ಸ್ಮರಿಸಲು ಯೋಗ್ಯರಿರುವಿರಿ. ನಿಮಗೆ ಗೌರವ ಕೊಡುವ ದಕ್ಕಾಗಿಯೇ ನಾನು ಹೀಗೆ ಬಾಯಿಬಿಚ್ಚಿ ಮಾತಾಡುವೆನಲ್ಲದೆ, ಈ ಶೂರಮಂಡಲಿಯು ನನ್ನ ಕುತ್ತಿಗೆ ಕೊಯ್ದಿದ್ದರೂ, ನಾನು ಅವರ ಮುಂದೆ ಒಂದು ತುಟಿ ಎರಡು ಮಾಡುತ್ತಿದ್ದಿಲ್ಲ; ಆದರೆ ಅಮ್ಮಾಜೀ, ಈಗ ನಾನು ಬುರುಕೆಯನ್ನು ಯಾಕೆ ತೆಗೆಯಬೇಕು? ನನ್ನನ್ನು ಯಾರು ನೋಡಿ ಏನು ಮಾಡುವದು? ಸ್ತ್ರೀಯರಿಗೆ ಬುರುಕೆಯೊಂದು ಗೌರವದ ಲಕ್ಷಣವಾಗಿರುವದಲ್ಲವೆ? ಅಮ್ಮಾಜೀ, ನಿಮ್ಮಂಥ ಸಾಧ್ವಿಯರ ಮುಂದೆ ಹೆಚ್ಚು ಮಾತಾಡುವ ಯೋಗ್ಯತೆಯು ನನ್ನದಲ್ಲ, ಇದು ಕೊಳ್ಳಿರಿ, ನಿಮ್ಮ ಮುಂದೆ ನನ್ನ ಶಿರಸ್ಸನ್ನು ಒಡ್ಡಿದ್ದೇನೆ, ಬೇಕಾದವರು ಇದನ್ನು ತುಂಡರಿಸಬಹುದು, ಅಥವಾ ತಮ್ಮ ಮನಸ್ಸಿಗೆ ಬಂದಂತೆ ನನಗೆ ಬೇರೆ ಯಾವ ಶಾಸನವನ್ನಾದರೂ ಮಾಡಬಹುದು; ಆದರೆ ವಿಚಾರವಿಲ್ಲದೆ ಬುರುಕೆ ತೆಗೆಯಲು ನನ್ನನ್ನು ಬಲಾತ್ಕರಿಸಿದರೆ, ನಾನೇನು ನನ್ನ ಕೈ ಮುಟ್ಟಿ ನನ್ನ ಬುರುಕೆಯನ್ನು ತೆಗೆಯುವದಿಲ್ಲ! ಬೇಕಾದವರು ಮುಂದಕ್ಕೆ ಬಂದು ನನ್ನ ಬುರುಕೆಯನ್ನು ತೆಗೆಯಬಹುದು, ಬೇಡಾದವರು ಬಿಡಬಹುದು! ಬುರುಕೆ ತೆಗೆದು ಇವರಿಗೆ ನನ್ನನ್ನು ತೋರಿಸುವದಕ್ಕಾಗಿಯೇನು ನಾನು ಇಲ್ಲಿಗೆ ಬಂದಿರುವದಿಲ್ಲ! ಸ್ವಾಮಿಕಾರ್ಯಾಸಕ್ತಳಾಗಿದ್ದ ನನ್ನನ್ನು ನಿಮ್ಮ ಶೂರ ಮೈದುನರು ಬಲಾತ್ಕಾರದಿಂದ ಸೆರೆಹಿಡಿದು ತಂದಿರುವರು; ಅಂದಬಳಿಕ ನನಗೆ ಏನು ಮಾಡಲಿಕ್ಕೂ ಅವರಿಗೆ ಬರುವಹಾಗಿದೆ; ಈಗ ನಾನು ಅವರಿಗೇನು ಪ್ರತಿಬಂಧ ಮಾಡುವ ಹಾಗಿದ್ದೇನೆ?

ಶ್ರೀಮತಿ–ಹಾಗಲ್ಲ ಹುಚ್ಚಮ್ಮಾ, ಗಂಡಸರು ಹೆಂಗಸರ ಮೇಲೆ ದುಡುಕುವದು ಸೌಜನ್ಯವಲ್ಲ; ಆದ್ದರಿಂದ ಅವರಿಗೆ ಏನು ಮಾಡಲಿಕ್ಕೂ ಬಾರದಾಗಿದೆ. ಅದಿರಲಿ, ಯುದ್ಧದಲ್ಲಿ ಬುರುಕೆ ಹಾಕಿಕೊಳ್ಳದ ನೀನು ಗುಹೆಯಂಥ ಗುಪ್ತಸ್ಥಾನದಲ್ಲಿ ಬುರುಕೆ ಹಾಕಿಕೊಳ್ಳುವದರ ಗುಟ್ಟೇನು?

ರಣಹುಚ್ಚಿ—ಅಮ್ಮಾಜಿ, ನೀವು ಕೇಳುವದರಿಂದ ನಾನು ಹೇಳಬೇಕಾಗುತ್ತದೆ. ಬುರುಕೆ ಹಾಕಿಕೊಂಡು ಯುದ್ಧಮಾಡಲಿಕ್ಕೆ ಬರುವದಿಲ್ಲ; ಮತ್ತು ಬೈಲಿಗೆ ಬಿದ್ದು ಗುಪ್ತಾಲೋಚನೆ

ಮಾಡಲಿಕ್ಕೆ ಬರುವದಿಲ್ಲ; ಆದ್ದರಿಂದ ಯುದ್ಧದಲ್ಲಿ ನಾನು ಬುರುಕೆ ಹಾಕಿಕೊಳ್ಳಲಿಲ್ಲ, ಗುಪ್ತಾಲೋಚನೆಯಲ್ಲಿ ಗವಿಯೊಳಗಿದ್ದರೂ ಬುರುಕೆ ಹಾಕಿಕೊಂಡೆನು; ಆದರೆ ತಾಯಿ, ತಮ್ಮಂಥ ಸರಳಭಾವದ ಸಾಧ್ವಿಯರಿಗೆ ನನ್ನಂಥ ಸಾಹಸೀ ಸ್ತ್ರೀಯರ ಹೊಯ್ಮಾಲಿತನವು ಹೇಗೆ ಗೊತ್ತಾಗಬೇಕು? ಆದರೂ ನಾನು ನಿಮ್ಮ ಅಪ್ಪಣೆಗೆ ಹೊರಗಿಲ್ಲ, ನಿಮ್ಮ ಮನಸ್ಸಿಗೆ ಬಂದರೆ, ನೀವೇ ನಿಮ್ಮ ಕೈಮುಟ್ಟಿ ನನ್ನ ಬುರುಕೆಯನ್ನು ತೆಗೆಯಬಹುದು, ನಾನು ನಿಮ್ಮ ಕೈಹಿಡಿಯುವದಿಲ್ಲ; ಅಥವಾ ನನ್ನಬುರುಕೆ ತೆಗೆಯಲಿಕ್ಕೆ ನೀವು ಬೇರೆ ಯಾರಿಗಾದರೂ ಅಪ್ಪಣೆಮಾಡಬಹುದು, ಅದಕ್ಕೂ ನನ್ನ ಪ್ರತಿಬಂಧವಿಲ್ಲ; ಆದರೆ ಅಮ್ಮಾಜಿ, ನನ್ನ ಎಟ್ಟಿತನಕ್ಕೆ ನೀವು ಸಿಟ್ಟುಮಾತ್ರ ಆಗಬೇಡಿರಿ ನಾನಾಗಿ ಮಾತ್ರ ಬುರುಕೆಯನ್ನು ಸರ್ವಥಾ ತೆಗೆಯುವದಿಲ್ಲ!

ರಣಹುಚ್ಚಿಯ ಈ ಖಂಡತುಂಡ ಮಾತಿನೊಳಗಿನ ಒಗರು ಮನಸ್ಸಿನಲ್ಲಿ ಬರಲು, ಶ್ರೀಮತಿಗಷ್ಟೇ ಅಲ್ಲ ದಳವಾಯಿ ಮುದ್ದಣ್ಣನಿಗೂ ಆಕೆಯ ವಿಷಯದಲ್ಲಿ ಒಂದುಬಗೆಯ ಆದರವು ಉತ್ಪನ್ನವಾಯಿತು! ಮೊನ್ನೆ ರಾತ್ರಿ ಈಕೆಯು ನನ್ನನ್ನು ಕಾಳಗದಲ್ಲಿ ಸೋಲಿಸಿ ಹಿಂದಕ್ಕೆ ಸರಿಸಿದಂತೆ, ಇಂದು ಸಾಧ್ವಿ ಶ್ರೀಮತಿಯನ್ನೂ ಮಾತಿನಲ್ಲಿ ಸೋಲಿಸಿ ಆಕೆಯನ್ನು ನಿರುತ್ತರಳಾಗಿ ಮಾಡಿದಳೆಂದು ಆತನು ಕೌತುಕಪಟ್ಟನು. ರಣಹುಚ್ಚಿಯಂಥ ಸ್ವಾರ್ಥರಹಿತರಾದ ಸತ್ವಶಾಲಿನಿ ತರುಣಿಯರ ರೀತಿಯು ಹೀಗೆಯೇ ಸರಿ; ಜಗತ್ತಿನ ಅನುಭವವಿಲ್ಲದ ಅವರಿಗೆ ಜಗತ್ತಿನ ಲಕ್ಷವಿರುತ್ತಿರುವದಿಲ್ಲ, ರಣಹುಚ್ಚಿಯ ಮಾತಿಗೆ ಶ್ರೀಮತಿಯು ತಟ್ಟನೆ ಉತ್ತರ ಕೊಡದಾದಳು. ಸರಳ ಹೃದಯದ ಆ ಸಾಧ್ವಿಯು ತನ್ನ ಮನಸ್ಸಿನಲ್ಲಿ— "ಈಗ ನಾನು ಏನು ಮಾಡಬೇಕಾದೀತು? ನಾನೇ ಈಕೆಯ ಬುರುಕೆಯನ್ನು ತೆಗೆಯಬೇಕೇ, ಅಥವಾ ಬೇರೆ ಯಾರಿಗಾದರೂ ತೆಗೆಯ ಹೇಳಬೇಕೆ? ನಾನೇ ಬುರುಕೆ ತೆಗೆಯುವದರಲ್ಲಿ ನನಗೆ ಗೌರವವಿಲ್ಲ; ಮಂದಿಗೆ ತೆಗೆಯ ಹೇಳುವದರಲ್ಲಿ ನನ್ನ ಸೌಜನ್ಯಕ್ಕೆ ಹಾನಿ; ಅಂದಬಳಿಕ ಈ ಪ್ರಸಂಗದಲ್ಲಿ ನಾನು ಏನು ಮಾಡಲಿ? ಅಥವಾ ಶಿರಸ್ಸು ಇದ್ದು ಮೊಣಕಾಲಿಗೆ ಪಟ್ಟವೇಕೆ? ಪತಿದೇವನ ಸನ್ನಿಧಿಯಲ್ಲಿದ್ದು ನನ್ನ ಹಿರಿಯತನವೆ? ಈಗ ನಾನು ಪತಿದೇವನ ಅಪ್ಪಣೆಯಂತೆ ನಡೆದರಾಯಿತು!' ಎಂದು ನಿಶ್ಚಯಿಸಲು, ತಟ್ಟನೆ ಆಕೆಯ ಚಿಂತೆಯು ಬಯಲಾಯಿತು. ಆಗ ಆ ಸಾಧ್ವಿಯು ತನ್ನ ಪತಿಯನ್ನು ಕುರಿತು—"ಮಹಾಸ್ವಾಮಿ, ತಾವು ಹುಚ್ಚಮ್ಮನ ಮಾತನ್ನಂತು ಕೇಳಿಯೇ ಇರುವಿರಿ; ಆದರೆ ಈ ಪ್ರಸಂಗದಲ್ಲಿ ನಾನು ಏನು ಮಾಡಲಿ? ಅಪ್ಪಣೆಯಂತೆ ನಡೆಯುವೆನು" ಎಂದು ಪ್ರಶ್ನೆಮಾಡಲು, ಆಕೆಯ ಚಿಂತೆಯು ಮುದ್ದಣ್ಣನನ್ನು ಆವರಿಸಿತು!

ಈಗ ಮುದ್ದಣ್ಣನನ್ನು ಆವರಿಸಿದ ಚಿಂತೆಯು ಶ್ರೀಮತಿಯ ಚಿಂತೆಯಂತಹದಲ್ಲ; ಯಾಕಂದರೆ, ಶ್ರೀಮತಿಗೆ ತನ್ನ ಚಿಂತೆಯ ಭಾರವನ್ನು ತನ್ನ ಗಂಡನಮೇಲೆ ಹಾಕಿ ತಾನು ಚಿಂತಾಮುಕ್ತಳಾಗಲಿಕ್ಕೆ ಬಂದಂತೆ, ಮುದ್ದಣ್ಣನಿಗೆ ತನ್ನ ಹೆಂಡತಿಯ ಪ್ರಶ್ನದಿಂದುಂಟಾದ ಚಿಂತೆಯ ಭಾರವನ್ನು, ತಾನು ಹೊತ್ತಲ್ಲದೆ, ಬೇರೆ ಯಾರೊಬ್ಬರ ಮೇಲೆ ಹಾಕಿ ತಾನು ಚಿಂತಾಮುಕ್ತನಾಗಲಿಕ್ಕೆ ಬರುವ ಹಾಗಿದ್ದಿಲ್ಲ; ಯಾಕಂದರೆ, ನಮ್ಮ ವೈದಿಕಧರ್ಮದಂತೆ ಗಂಡನು

ತನ್ನ ಹೆಂಡತಿಯ ಯೋಗಕ್ಷೇಮದ ಭಾರವನ್ನು ಸಂಪೂರ್ಣವಾಗಿ ಹೊರಬೇಕಾಗುವದು. ಈ ಸಂಬಂಧದಿಂದ ಗಂಡನು, ಜಗತ್ತಿನ ಸ್ವಾಮಿಯಾದ ದೇವರಿಗಿಂತಲೂ ಒಂದು ಬಗೆಯಿಂದ ಹೆಚ್ಚು ಉದಾರನೆಂದು ಒಪ್ಪಿಕೊಳ್ಳಬೇಕಾಗುತ್ತದೆ ಯಾಕಂದರೆ, ಜಗತ್ತಿನ ಸ್ವಾಮಿಯಾದ ದೇವರು, ಸರ್ವಧರ್ಮ ಪರಿತ್ಯಾಗಮಾಡಿ, ಅಂದರೆ ಜಗತ್ತನ್ನೇ ತೃಣೀಕರಿಸಿ ತನಗೆ ಶರಣುಬಂದಂಥ ತನ್ನ ಭಕ್ತರ ಪಾಪಗಳ ನಿವಾರಣಮಾಡಿ ಅವರಿಗೆ ಚಿರಶಾಂತಿಯನ್ನು ಕೊಡುವನಲ್ಲದೆ, ತನಗೆ ಶರಣು ಬಾರದವರ, ಅಥವಾ ತನ್ನನ್ನು ಅನನ್ಯವಾಗಿ ಚಿಂತಿಸದವರ ಪಾಪಗಳ ನಿವಾರಣಮಾಡಿ ಅವರಿಗೆ ಚಿರಶಾಂತಿಯನ್ನು ಕೊಡುವದಿಲ್ಲ! ಆದ್ದರಿಂದ ಇಂಥ ದೇವರ ಭಕ್ತರಲ್ಲದ ವಿಷಯಾಸಕ್ತ ಪ್ರಾಣಿಗಳು, ದೇವರ ಕೃಪೆಗೆ ಪಾತ್ರರಾಗದೆ ಆತನ ಸಂಕೇತದಂತೆ, ತಮ್ಮ ಪುಣ್ಯಕ್ಕೆ ತಕ್ಕ ಸ್ವರ್ಗಭೋಗವನ್ನೂ, ಪಾಪಕ್ಕೆ ತಕ್ಕ ನರಕಭೋಗವನ್ನೂ ತಾವೇ ಜವಾಬ್ದಾರಿಯಿಂದ ಭೋಗಿಸುತ್ತ ತಮ್ಮ ಯೋಗಕ್ಷೇಮಕ್ಕಾಗಿ ತಾವೇ ಅಭಿಮಾನವಹಿಸಿ ಯಾವಾಗಲೂ ಕರ್ಮಮಾಡುತ್ತ ಮತ್ತೆ ಮತ್ತೆ ಹುಟ್ಟುತ್ತ ಸಾಯುತ್ತ ಸಂಸಾರ ಚಕ್ರದಲ್ಲಿ ತೊಳಲಬೇಕಾಗುವದು! ಆದರೆ ಗಂಡನೆನಿಸಿಕೊಳ್ಳುವವನ ಮಾತು ಹಾಗಲ್ಲ; ಹೆಂಡತಿಯು ತನಗೆ ಶರಣು ಬರಲಿ–ಬಾರದಿರಲಿ ಅಥವಾ ಆಕೆಯು ತನ್ನನ್ನು ಅನನ್ಯವಾಗಿ ಚಿಂತಿಸಲಿ–ಚಿಂತಿಸದಿರಲಿ, ಅಥವಾ ಆಕೆಯು ವಿಷಯಾಸಕ್ತಳಾಗಿ ಪಾಪಕರ್ಮಗಳನ್ನು ಆಚರಿಸುತ್ತಲಾದರೂ ಇರಲಿ, ಗಂಡನು ಶಾಸ್ತ್ರತಃ ಹೆಂಡತಿಯ ಸಂಬಂಧ–ಬದ್ಧನಾಗಿರುವವರೆಗೆ, ತನ್ನ ಧರ್ಮದಂತೆ ಆಕೆಯ ಅರ್ಧಪಾಪಭೋಗಕ್ಕೆ ತಾನು ಗುರಿಯಾಗಿ, ತನ್ನ ಅರ್ಧಪುಣ್ಯವನ್ನು ಆಕೆಯ ಉಡಿಯಲ್ಲಿ ಹಕ್ಕಿನಿಂದ ಹಾಕಿ ಆಕೆಯ ಯೋಗಕ್ಷೇಮಕ್ಕಾಗಿ ತನ್ನ ಪ್ರಾಣವನ್ನಾದರೂ ಕೊಡಬೇಕಾಗುತ್ತದೆ! ವೈದಿಕಧರ್ಮದಲ್ಲಿ ಸ್ತ್ರೀವಿಷಯಕವಾದ ಇಂತಹ ವಿವಿಧ ಔದಾರ್ಯದ ವಿಚಾರಗಳು, ವೈದಿಕೇತರವಾದ ಬೇರೆ ಯಾವ ಧರ್ಮದಲ್ಲಿಯೂ ಇಲ್ಲವೆಂದು ಹೇಳಿದರೆ, ಸಾಹಸವಾಗಲಿಕ್ಕಿಲ್ಲ! ಹೀಗಿದ್ದು ವೈದಿಕಧರ್ಮವು ಸ್ತ್ರೀಯರ ವಿಷಯದಲ್ಲಿ ಅನುದಾರವಾದದ್ದೆಂದು ಈಗಿನ ಸ್ತ್ರೀಸ್ವಾತಂತ್ರ್ಯ ಪಕ್ಷಪಾತಿಗಳು ವಾದಿಸುತ್ತಿರುವದು, ಅವರ ಧಾರ್ಮಿಕ ಅಜ್ಞಾನದ, ಅಥವಾ ನಾಸ್ತಿಕತ್ವದ ಲಕ್ಷಣವಾಗಿರುತ್ತದೆಂದು ಹೇಳಬೇಕಾಗುತ್ತದೆ; ಯಾಕಂದರೆ, ಅವರು ಸ್ತ್ರೀಸ್ವಾತಂತ್ರ್ಯವೆಂದರೆ, ಸ್ತ್ರೀಯರ ಸ್ವೇಚ್ಛಾಚಾರವೆಂದು ತಿಳಿಯುವರು. ಈ ಘಾತಕವಾದ ಅವರ ತಿಳುವಳಿಕೆಯೇ ಅವರ ಅಜ್ಞಾನದ ಅಥವಾ ನಾಸ್ತಿಕತ್ವದ ಮೂಲವಾಗಿರುತ್ತದೆ. ಇರಲಿ, ಪ್ರಸಂಗವಶಾತ್ ಈಗಾಗಿರುವಷ್ಟು ವಿಷಯಾಂತರವು ಸಾಕು, ಇನ್ನು ಪ್ರಕೃತ ಕಾದಂಬರಿಯನ್ನು ಮುಂದಕ್ಕೆ ಸಾಗಿಸೋಣ.

ಶ್ರೀಮತಿಯು ತನ್ನ ಪತಿಗೆ ಪ್ರಶ್ನೆಮಾಡಿ ತಾನು ನಿಶ್ಚಿಂತಳಾದಳೆಂದು ಮೇಲೆ ಹೇಳಿದೆಯಷ್ಟೆ? ಆದರೆ ಆಕೆಯ ಆ ಒಂದು ಪ್ರಶ್ನವು, ಆಗ ಅಲ್ಲಿ ಇದ್ದ ನಾಲ್ವರಲ್ಲಿ ನಾಲ್ಕು ಬಗೆಯ ಚಿಂತೆಗಳನ್ನು ಉತ್ಪನ್ನಮಾಡಿತು. ಶ್ರೀಮತಿಗೆ, ಹಾಗು ಉಳಿದವರಿಗೆ ಧರ್ಮತಃ ಸಮ್ಮತವೂ, ಸಮಾಧಾನಕರವೂ ಆದ ಉತ್ತರ ಕೊಡಲು ಮುದ್ದನು ಅಸಮರ್ಥನಾಗಿ, ತನ್ನ ಹೆಂಡತಿಗೆ ಏನು ಹೇಳಬೇಕೆಂಬ ಚಿಂತೆಯಿಂದ ಆತನು ಆಲೋಚಿಸಹತ್ತಿದನು. ಅತ್ತ ಚುಕ್ಕಪ್ಪನು— ''ಧರ್ಮದ ಗೊಂದಲದಲ್ಲಿ ಬಿದ್ದು ಅಣ್ಣನು ರಣಹುಚ್ಚಿಯನ್ನು ಕ್ಷಮಿಸಿ

ಆಕೆಯನ್ನು ಎಲ್ಲಿ ಬಿಟ್ಟುಕೊಡುವನೋ'' ಎಂದು ಚಿಂತಿಸತೊಡಗಿದನು, ಇತ್ತ ರಣ ಹುಚ್ಚಿಯು ''ಆಗಲಿ, ದುಷ್ಟಮುದ್ದನ ಸ್ವರೂಪನಿರ್ಣಯವು ಚನ್ನಾಗಿ ಆಗಲಿ; ಆದರೆ ಈ ಕೊಲೆಗಡಕನು, ದ್ರೌಪದೀ ವಸ್ತ್ರಾಪಹರಣ ಪ್ರಸಂಗದಲ್ಲಿ ದುರ್ಯೋಧನನು ಔದಾರ್ಯದ ಸೋಗು ತೋರಿಸಿ ದಂತೆ ಸೋಗು ತೋರಿಸಿ, ಈತನು ತನ್ನ ಹೆಂಡತಿಗೆ— ''ಶ್ರೀಮತೀ, ಪರಸ್ತ್ರೀಯರ ಗೊಡಿವೆ ನವುಗೇಕೆ? ರಣಹುಚ್ಚಿಯನ್ನು ನೀನು ನಿನ್ನ ಪ್ರಿಯದಾಸಿಯನ್ನಾಗಿ ಮಾಡಿಕೊಂಡು ನಿನ್ನ ಜನಾನಖಾನೆಯಲ್ಲಿ ಸೇರಿಸಿಕೊಂಡುಬಿಡು. ಈಗ ನಾನು ನನ್ನ ಮುಖ್ಯ ವೈರಿಯಾದ ದಳವಾಯಿ ಭರಮನ ತಲೆಹೊಡಿಸಿ, ಈ ರಣರಕ್ಕಸಿಯ ಮನಸ್ಸಿಗೆ ಬರೆಕೊಡುವೆನು. ಎಂಬರ್ಥದ ಅನಿಷ್ಟ ವಿಚಾರಗಳನ್ನೆಲ್ಲಿ ಪ್ರಕಟಿಸುವನೋ'' ಎಂದು ಚಿಂತಿಸತೊಡಗಿದಳು. ಹೀಗೆ ಈ ಮೂವರು ಒಂದೊಂದು ಬಗೆಯ ಚಿಂತೆಯಲ್ಲಿ ಮಗ್ನರಾಗಿರುವಾಗ, ಪತಿಗೆ ಪ್ರಶ್ನಮಾಡಿ ನಿಶ್ಚಿಂತಳಾಗಿದ್ದ ಶ್ರೀಮತಿಯು ಕೂಡ ತನ್ನ ಪತಿಯ ಪೇಚಾಟವನ್ನು ನೋಡಿ ಹೃದಯಕರಗಿ ತನ್ನೊಳಗೆ— ''ಅಹ! ನಾನು ಪತಿಯನ್ನು ಇಲ್ಲದ ಚಿಂತೆಗೆ ಗುರಿಮಾಡಿದೆನಲ್ಲ! ಗುರುದೇವಾ, ನನ್ನ ಪತಿಗೆ ಯೋಗ್ಯವಿಚಾರ ತೋಚಿ ಆತನ ಚಿಂತೆಯು ಹೇಗೆ ದೂರವಾದೀತು'' ಎಂಬದೊಂದು ಹೊಸಚಿಂತೆಯಿಂದ ಕುದಿಯತೊಡಗಿದಳು. ಹೀಗೆ ಅಲ್ಲಿದ್ದವರೆಲ್ಲರೂ ತಮ್ಮ ತಮ್ಮ ಸ್ಥಿತಿ–ಗತಿಗಳಂತೆ ಚಿಂತಾಮಗ್ನರಾಗಿ ಪೇಚಾಡುತ್ತಿರುವಾಗ, ಆ ಸಮಸ್ತರ ಚಿಂತೆಯನ್ನು ಪರಿಹರಿಸುವದೊಂದು ದೈವಿಕಕಾರಣವು ಆಕಸ್ಮಿಕವಾಗಿ ಅಲ್ಲಿ ಉಂಟಾದಂತೆ, ಪ್ರಭಾವಶಾಲಿ ಯಾದ ಒಂದು ದಿವ್ಯವಿರಕ್ತ ಮೂರ್ತಿಯು ಶ್ರೀಮತಿಯ ತಂದೆಯಾದ ಗುರುಶಾಂತಪ್ಪನನ್ನು ಹಿಂಬಾಲಿಸಿ ಅಲ್ಲಿ ಪ್ರಕಟವಾಯಿತು! ಆಗ ಎಲ್ಲರ ಲಕ್ಷವೂ ಮೊದಲು ಗುರುಶಾಂತಪ್ಪನ ಕಡೆಗೆ ಹೋಗಿ, ಅವರೆಲ್ಲರ ಚಿಂತೆಗೆ ವಿಚ್ಛಿತ್ತಿಯುಂಟಾಯಿತು!

ಒಪ್ಪಿಗೆಯಿಲ್ಲದೆ ಹೀಗೆ ಅಂತರ್ಗೃಹದಲ್ಲಿ ಅಕಸ್ಮಾತ್ ಪ್ರವೇಶಮಾಡುವದು ಯಾರಿಗಾದರೂ ಅಶಕ್ಯವಾಗಿರಲು, ತನ್ನ ಮಾನವೇ ಆಗಲೊಲ್ಲನೇಕೆ, ತನಗೆ ತಿಳಿಸದೆ ಹೀಗೆ ಹೇಗೆ ಒಳಗೆ ಬಂದನೆಂಬ ಆಶ್ಚರ್ಯವು ಮುದ್ದನಿಗೊಬ್ಬನಿಗೇ ಅಲ್ಲ, ಶ್ರೀಮತಿಗೂ, ಉಳಿದವರಿಗೂ ಅದದ್ದು ಸ್ವಾಭಾವಿಕವು. ಮುದ್ದನು ತನ್ನ ದ್ವಾರರಕ್ಷಕರ ಕರ್ತವ್ಯ ದಕ್ಷತೆಯ ವಿಷಯದಲ್ಲಿ ಶಂಕಿತನಾಗಿ ಅವರ ಮೇಲೆ ಸಿಟ್ಟಾದನು. ಆದರೆ ಗುರಶಾಂತಪ್ಪನ ಹಿಂದೆಯಿದ್ದ ಆ ಪ್ರಭಾವಶಾಲಿಯಾದ ವಿರಕ್ತಮೂರ್ತಿಯ ಕಡೆಗೆ ಅವರೆಲ್ಲರ ದೃಷ್ಟಿಗಳು ಹೋದ ಕೂಡಲೆ,ಅವರ ಹೃದಯಗಳಲ್ಲಿ ಉಂಟಾದ ಭಯ–ಭಕ್ತಿಗಳ ಭರದಲ್ಲಿ ಅವರ ಆ ಲೌಕಿಕವಿಚಾರವು ಮಾಯವಾಯಿತು. ಎಲ್ಲರಲ್ಲಿ ಆ ದಿವ್ಯಮೂರ್ತಿಯ ವಿಷಯದಲ್ಲಿ ಪೂಜ್ಯಬುದ್ಧಿಯು ಉತ್ಪನ್ನವಾಯಿತು; ಆ ತೇಜಃಪುಂಜ ಮೂರ್ತಿಯ ಕಣ್ಣುಗಳು ಕೆಂಪಗಿದ್ದು, ದೇಹಕಾಂತಿಯು ಕಾದ ಬಂಗಾರದಂತೆ ಪ್ರಕಾಶಮಾನವಾಗಿತ್ತು, ಆ ಮೂರ್ತಿಯ ಕೇಶಗಳು ಸಾಕ್ಷಾತ್ ಪರಶಿವನ ಕೇಶಗಳಂತೆ ಊರ್ಧ್ವಮುಖವುಳ್ಳವಾಗಿ ಇದ್ದದ್ದರಿಂದ, ಆ ಮಹಾ ಸಿದ್ಧ ಪುರುಷನು ಊರ್ಧ್ವಕೇಶನಾದ ಶ್ರೀವಿರೂಪಾಕ್ಷನಂತೆ ತೋರುತ್ತಿದ್ದನು! ಆ ಲೀಲಾಮೂರ್ತಿಯ ಬಲಗೈಯಲ್ಲಿಯೊಂದು ಮುರಿಮುರಿಗೆಯ ದೊಣ್ಣೆ, ಎಡಗೈಯಲ್ಲೊಂದು ಮುರಿಮುರಿಗೆಯ

ಕಿನ್ನರಿ, ತಲೆಯ ಮೇಲೊಂದು ಮುರಿಮುರಿಗೆಯ ಪಂಚವರ್ಣದ ಮುಂಡಾಸ, ಹೆಗಲ ಮೇಲೊಂದು ಮುರಿಮುರಿಗೆಯ ಹಸರು ಶಾಲು ಇವು ಒಪ್ಪುತ್ತಿದ್ದವಲ್ಲದೆ, ಆ ಮಹಿಮನ ಮೈಯಲ್ಲಿ ಒಂದು ಕೇವಿಯ ಜುಬ್ಬ ವಿದ್ದಿತು. ಇವನ್ನೆಲ್ಲ ನೋಡುವ ಭಾವಿಕರಿಗೆ— ''ಈ ಮಹಾಪುರುಷನು ಜನನ ಮರಣದ ಈ ಸಂಸಾರದ ಸುಖ–ದುಃಖಗಳ ಮುರಿಗೆಯನ್ನು ಬಿಚ್ಚಿ ಮುಮುಕ್ಷುಗಳಿಗೆ ಸಚ್ಚಿದಾನಂದರಸದ ಅನುಭವವನ್ನುಂಟುಮಾಡಿ ಕೊಡಲು, ಸಿದ್ಧರೂಪದಿಂದ ಸಂಚರಿಸುತ್ತಿರುವ ಸಾಕ್ಷಾತ್ ಪರಶಿವನೇ'' ಎಂಬ ಭಾವನೆಯು ಉಂಟಾಗುತ್ತಿತ್ತು! ಈ ಘನತರವಾದ ಯೋಗ್ಯತೆಯ ಮೂಲಕವಾಗಿಯೇ ಆ ಮಹಾ ಪುರುಷನಿಗೆ— ''ಮುರಗೀಶ'' ''ಮುರುಘರಾಜೇಂದ್ರ'' ಎಂಬ ಹೆಸರುಗಳು ಬಂದಿದ್ದರೂ ಬಂದಿರಬಹುದು. ಈ ಮುರುಗೀಶನು ಎಂದಿನಿಂದ ಭಾವಿಕರ ಕಾಮಧೇನುವಾಗಿ ದೇಶದೇಶಗಳನ್ನು ಸಂಚರಿಸುತ್ತಿದ್ದನೆಂದು ಈ ಮೊದಲೆ ನಾವು ಹೇಳಿರುವದು ವಾಚಕರ ಸ್ಮರಣದಲ್ಲಿರಬಹುದು.

ಹೀಗೆ ಮುರಗೀಶ ಗುರುವರನು ಅಕಸ್ಮಾತ್ತಾಗಿ ಅಂತರ್ಗೃಹದಲ್ಲಿ ಬಂದು ಬಿಟ್ಟದ್ದರಿಂದ, ಅಲ್ಲಿದ್ದವರೆಲ್ಲರಲ್ಲಿಯೂ ಶ್ರದ್ಧಾ–ಭಕ್ತಿಗಳು ಉತ್ಪನ್ನವಾಗಿ, ಅವರ ಚಿಂತೆಗಳ ಪರಿಹಾರವಾಯಿತೆಂದು ಮೇಲೆ ಹೇಳಿದೆಯಷ್ಟೆ? ಆದರೆ ಅವರಲ್ಲಿಯ ಭಕ್ತಿಯು ಅವರವರ ಪ್ರಕೃತಿ ಗುಣಾಕ್ಕನುಸರಿಸಿ, ಅವರವರಲ್ಲಿ ಭಿನ್ನ ಭಿನ್ನ ಪ್ರಮಾಣದಿಂದ ಆವಿರ್ಭವಿಸಿ ಭಿನ್ನ ಭಿನ್ನ ಸ್ಥಿತಿಗಳಲ್ಲಿ ಪ್ರಕಟವಾದದ್ದು ವಿಚಾರಣೀಯ ಸಂಗತಿಯಾಗಿರುತ್ತದೆ! ''ಸತ್ವಾನುರೂಪ ಸರ್ವಸ್ಯ ಶ್ರದ್ಧಾಭವತಿ ಭಾರತ'' ಎಂಬ ಭಗವದ್ಗೀತೆಯ ಉಕ್ತಿಯಂತೆ, ಅವರವರಲ್ಲಿದ್ದ ಸತ್ವಗುಣದ ಮಾನದಿಂದ ಅವರವರಲ್ಲಿ ಮೊದಲು ಶ್ರದ್ಧೆ ಉಂಟಾಯಿತು. ಆ ಮೇಲೆ ಭಕ್ತಿಯು ಉಂಟಾಯಿತು. ಹೀಗೆ ಮನುಷ್ಯನಲ್ಲಿ ಮೊದಲು ಶ್ರದ್ಧೆ ಆಮೇಲೆ ಭಕ್ತಿಯು ಉಂಟಾಗುವದು ಸಿದ್ಧಾಂತವು. ಶ್ರದ್ಧೆಯೆಂದರೆ, ಪೂಜ್ಯವಸ್ತುವಿನ ವಿಷಯದ ಮನಃಪೂರ್ವಕವಾದ ಪೂಜ್ಯಭಾವವು. ಇಂತಹ ಈ ಪೂಜ್ಯಭಾವವೇ,ಅಂದರೆ ಶ್ರದ್ಧೆಯೇ ತ್ಯಾಗಯುಕ್ತವಾದರೆ ಭಕ್ತಿಯೆನಿಸುವದು. ಅಂದ ಬಳಿಕ ಭಕ್ತಿಯೆಂದರೆ, ಪೂಜ್ಯವಸ್ತುವಿನ ವಿಷಯದ ತ್ಯಾಗಯುಕ್ತವಾದ ಮನಃಪೂರ್ವಕ ಪೂಜ್ಯಭಾವವೆಂದು ವ್ಯಾಖ್ಯೆಮಾಡ ಬೇಕಾಗುವದು. ಭಗವದ್ಗೀತೆಯಲ್ಲಿ ಭಗವಂತನು''ಶ್ರದ್ಧಾಭಕ್ತಿಸಮನ್ವಿತಃ'' ಎಂದು ಹೇಳಿರುವನಲ್ಲದೆ, ಬರಿಯ ''ಶ್ರದ್ಧಾಸಮನ್ವಿತಃ'' ಎಂದಾಗಲಿ, ಬರಿಯ ''ಭಕ್ತಿಸಮನ್ವಿತಃ'' ಎಂದಾಗಲಿ ಹೇಳಿರುವದಿಲ್ಲ; ಯಾಕಂದರೆ ಭಗವಂತನು ಹಾಗೆ ''ಶ್ರದ್ಧಾಭಕ್ತಿಸಮನ್ವಿತಃ ಎಂದು ಹೇಳಿರುವದರಲ್ಲಿ ಒಂದು ಗೌರವದ ಗೂಢರಹಸ್ಯವಿರುವದು. ಭಕ್ತಿಯಿಲ್ಲದ ಬರಿಯ ಶ್ರದ್ಧೆಯು ತ್ಯಾಗರಹಿತವಾಗಿರುವದರಿಂದ, ಅದು ಮನಃಪೂರ್ವಕವಾಗಿರದಿದ್ದರೆ, ಔಪಚಾರಿಕವಾಗಿ ಅದು ನಿರರ್ಥಕವಾಗುವ ಸಂಭವವಿರುತ್ತದೆ. ಅದರಂತೆ, ಶ್ರದ್ಧೆಯಿಲ್ಲದ ಬರಿಯ ಭಕ್ತಿಯು ಮನಃಪೂರ್ವಕವಾಗಿರದಿದ್ದರೆ, ಅಂದರೆ ಶ್ರದ್ಧಾರಹಿತವಾಗಿದ್ದರೆ ಅದು ಡಾಂಭಿಕವಾಗಿ ಅದೂ ನಿರರ್ಥಕವಾಗುವ ಸಂಭವವಿರುತ್ತದೆ. ಆದರೆ ''ಶ್ರದ್ಧಾಭಕ್ತಿಸಮನ್ವಿತಃ'' ಎಂದು, ಅಂದರೆ ಶ್ರದ್ಧಾ ಭಕ್ತಿಗಳೆರಡೂ ಇರಬೇಕೆಂದು ಭಗವಂತನು ಹೇಳಿರುವದರಲ್ಲಿ ಯಾವ ದೋಷವೂ ಸೇರದೆ, ಮನುಷ್ಯನ ಅಂತಹ ದೋಷರಹಿತಗಳಾದ ಶ್ರದ್ಧಾಭಕ್ತಿಗಳೆರಡೂ ಸಾರ್ಥಕವಾಗುವವು. ಇಂತಹ

ಸೂಕ್ಷ್ಮದರ್ಶಿಕತ್ವದ ಮೂಲಕವಾಗಿಯೇ ಭಗವದ್ಗೀತೆಯು ಜಗನ್ಮಾನ್ಯ ಗ್ರಂಥವಾಗಿರುತ್ತದೆ. ಇರಲಿ.

ಅವರವರಲ್ಲಿಯ ಸತ್ವಗುಣಕ್ಕನುಸರಿಸಿ ಅವರವರಲ್ಲಿ ಶ್ರದ್ಧೆಯು ಉಂಟಾಗುವದೆಂದು ಭಗವಂತನು ಹೇಳಿರುವಂತೆ, ಅಲ್ಲಿರುವವರೆಲ್ಲರಿಗಿಂತ ಸತ್ವಗುಣವು ಅಧಿಕವಾಗಿದ್ದ ಸಾಧ್ವೀ ಶ್ರೀಮತಿಯಲ್ಲಿಯ ಶ್ರದ್ಧಾ—ಭಕ್ತಿಗಳು, ಉಳಿದವರಲ್ಲಿಯ ಶ್ರದ್ಧಾ—ಭಕ್ತಿಗಳಿಗಿಂತಲೂ ಅಧಿಕವಾಗಿದ್ದವೆಂಬದರಲ್ಲಿ ಸಂಶಯವಿಲ್ಲ; ಆದರೂ ಆ ಸತ್ವಶಾಲಿನಿಯು ತನ್ನ ಸತೀಧರ್ಮದಂತೆ ಪತಿಯ ಎದುರಿಗೆ ಆತನ ಅನುಮತಿಯಿಲ್ಲದೆ ಮುಂಬರಿದು ಗುರುವರನ ಚರಣಕ್ಕೆ ಎರಗಲಾರದೆ, ಅಥವಾ ತನ್ನ ಭಕ್ತಿಯ ಯಾವ ಉದ್ರೇಕವನ್ನೂ ಹೊರಗೆ ತೋರಿಸಲಾರದೆ ಗುರುವಿನ ಚರಣಗಳಲ್ಲಿ ದೃಷ್ಟಿಯನ್ನಿಟ್ಟು, ತಲೆಬಾಗಿ ಪತಿಯ ಮರೆಯಲ್ಲಿ ನಿಂತುಕೊಂಡಳು! ರಜೋಗುಣಾಧಿಕಳಾದ ರಣಹುಚ್ಚಿಯ ಭಕ್ತಿಯು, ಶ್ರಿಮತಿಯ ಭಕ್ತಿಗಿಂತ ಕಡಿಮೆ ಪ್ರಮಾಣದ್ದಾಗಿದ್ದರೂ, ಕುಮಾರಿಕೆಯಾಗಿದ್ದ ಆಕೆಯಲ್ಲಿಯ ರಜೋಗುಣದ ತೀವ್ರತೆಯ ಮೂಲಕ, ಸ್ತ್ರೀಸ್ವಭಾವಕ್ಕನುಸರಿಸಿ ಆಕೆಯ ಭಕ್ತಿಯು ತಟ್ಟನೆ ಹೊರಚಿಮ್ಮಲು, ಆಕೆಯು ತನ್ನ ಭಕ್ತಿಯ ಪರವಶತೆಯಿಂದ ತನ್ನ ಬುರುಕೆಯನ್ನು ಚಲ್ಲಿಕೊಟ್ಟು, ಆತುರದಿಂದ ತನ್ನ ಪರಿಚಿತಗುರುವಾದ ಶ್ರೀಮುರುಗೀಶನ ಚರಣಗಳಲ್ಲಿ ಮಸ್ತಕವಿಟ್ಟಳು! ಇತ್ತ ಕೇವಲ ರಜೋಗುಣಿಗಳಾದ ಅಹಂಭಾವದ ಮುದ್ದಣ್ಣ–ಚುಕ್ಕಪ್ಪರಲ್ಲಿಯ ಮಂದ ಭಕ್ತಿಯು, ಅಭಿಮಾನಿ ಪುರುಷರ ಸ್ವಭಾವದಂತೆ, ತಟ್ಟನೆ ಹೊರಬೀಳಲಾರದೆ, ಅಥವಾ ಸುಮ್ಮನೆ ಒಳಗಿರಲಾರದೆ ಹುದುಗಿಕೊಂಡಂತೆ ಇರಲು, ಅವರಿಬ್ಬರೂ ವಿಚಾರಪರರಾಗಿ ಶ್ರೀಮುರುಗೀಶನ ಮುಂದೆ ಕೈ ಜೋಡಿಸಿಯೂ ಜೋಡಿಸದವರಂತೆ ನಿಂತುಕೊಂಡರು! ಇತ್ತ ಭಾವಿಕನಾದ ಗುರಶಾಂತಪ್ಪನಲ್ಲಿಯ ಗುರುಭಕ್ತಿಯು ಯಾವ ಬಾಹ್ಯೋಪಾಧಿಗಳಿಂದಲೂ ಕುಗ್ಗದೆ–ಹಿಗ್ಗದೆ, ಯಾವಾಗಲೂ ಒಂದೇ ಸವನೆ ಇರತಕ್ಕದ್ದಾದ್ದರಿಂದ, ಆತನು, ಭಕ್ತರ ಈ ವಿವಿಧ ಸ್ಥಿತಿಗಳನ್ನು–ಕೌತುಕದಿಂದ ನೋಡುತ್ತ ಗುರುಧ್ಯಾನಾಸಕ್ತನಾಗಿ ಸುಮ್ಮನೆ ಕುಳಿತುಬಿಟ್ಟನು. ಹೀಗೆ ಆ ಅಂತರ್ಗೃಹದಲ್ಲಿ ಕ್ರಮವಾಗಿ, ಭಕ್ತಿಯ ಪ್ರೌಢ–ತರುಣ–ಬಾಲ–ವೃದ್ಧ ರೂಪಗಳ ಸಮುಚ್ಚಯವಾದದ್ದರಿಂದ, ಅಲ್ಲಿ ಭಕ್ತಿ–ವೈಚಿತ್ರ್ಯದ್ದೊಂದು ಚಿತ್ತಹಾರಕವಾದ ದಿವ್ಯನೋಟವೇ ಪ್ರಕಟವಾದಂತಾಗಿತ್ತು!

ಇಂತಹ ದಿವ್ಯನೋಟವನ್ನು ಕ್ಷಣಮಾತ್ರದಲ್ಲಿ ಉಂಟುಮಾಡಿದ ಶ್ರೀಮುರುಗೀಶ ಗುರುವರನು, ತನ್ನ ಚರಣಕ್ಕೆರಗಿದ್ದ ರಣಹುಚ್ಚಿಯನ್ನು ವಾತ್ಸಲ್ಯದಿಂದ ಎಬ್ಬಿಸುತ್ತ ಕೌತುಕದಿಂದ ಆಕೆಯನ್ನು ಕುರಿತು— ''ಇದೇನು ಹುಚ್ಚಮ್ಮಾ, ನೀನೇಕೆ ಇಲ್ಲಿ?'' ಎಂದು ಕೇಳಲು, ಹುಚ್ಚಮ್ಮನು—''ಮಹಾಸ್ವಾಮಿ, ಚರಣವಂದನದಿಂದ ಧನ್ಯಳಾಗಬೇಕೆಂದು ನನ್ನನ್ನು ಸನ್ನಿಧಿಯೇ ಇಲ್ಲಿಗೆ ಬರಮಾಡಿತೆಂದು ನಾನು ತಿಳಿಯುವೆನು. ಗುರುದೇವಾ, ಈಶ್ವರೀ ಸಂಕೇತದಂತೆ ಕಾಲಕ್ಕನುಸರಿಸಿ ಆಗುವದು ಆಗಿಯೇ ತೀರುತ್ತದಲ್ಲದೆ, ಮನುಷ್ಯರಿಗೆ ಸ್ವತಂತ್ರವಾದ ಯಾವ ಘಟನಾಸಾಮರ್ಥ್ಯವೂ ಇಲ್ಲವೆಂದು ಸನ್ನಿಧಿಯೇ ಒಮ್ಮೆ ಅಪ್ಪಣೆಕೊಡಿಸಿದ್ದು

ನನ್ನ ಸ್ಮರಣದಲ್ಲಿರುವದು! ಅಂದಬಳಿಕ ಪಾಮರಳಾದ ಈ ಹುಚ್ಚಿಗೆ ಇಲ್ಲಿಗೆ ಬರುವ ಸ್ವಾತಂತ್ರ್ಯವೆಲ್ಲಿದೆ?'' ಎಂದು ನುಡಿಯಲು, ಆಕೆಯ ವಿಷಯದಲ್ಲಿ ಅಲ್ಲಿದ್ದವರೆಲ್ಲರ ಹೊಸದಾದ ಒಂದು ಬಗೆಯ ಆದರ ಭಾವವು ಉಂಟಾಗಿ, ಎಲ್ಲರೂ ಆಶ್ಚರ್ಯದಿಂದ ಆಕೆಯನ್ನೊಮ್ಮೆ ಶ್ರೀಗುರುಮೂರ್ತಿಯನ್ನೊಮ್ಮೆ ನೋಡತೊಡಗಿದರು. ಶ್ರೀಮುರಗೇಶ ರೂಪವಾದ ಶ್ರೀಶಂಭು ಮೂರ್ತಿಯು, ಲೋಕಾನುಗ್ರಹಾರ್ಥವಾಗಿ ಬಹುದಿವಸಗಳಿಂದ ಕರ್ನಾಟಕದಲ್ಲಿ ಸಂಚರಿಸುತ್ತಿತ್ತೆಂಬ ವಿಚಾರವನ್ನು ಹಿಂದೆಯೊಮ್ಮೆ ನಾವು ಹೇಳಿರುವೆವಷ್ಟೆ? ಶ್ರೀಮತಿಯ ತಂದೆಯಾದ ಗುರುಶಾಂತಪ್ಪನು ಬಹು ದಿವಸದಿಂದ ಶ್ರೀಮುರಗೇಶನ ಅನುಗ್ರಹಕ್ಕೆ ಪಾತ್ರನಾಗಿದ್ದಂತೆ, ರಣಹುಚ್ಚಿಯ ತಂದೆಯಾದ ಚಿನ್ನ ಓಬಲನೂ ಆ ಮಹಾ ಮಹಿಮನ ಅನುಗ್ರಹಕ್ಕೆ ಪಾತ್ರನಾಗಿದ್ದನು. ಚಿನ್ನ ಓಬಲನು ಬೇಡಜಾತಿಯವನು. ಆತನು ಒಮ್ಮೆ ಗುರುಚರಣವನ್ನು ವಂದಿಸಿ, ವಿನೋದದಿಂದ ಮಾತು ಕಥೆಗಳನ್ನು ಆಡುತ್ತ ಕುಳಿತಿರುವಾಗ, ಆತನು ನಗುತ್ತ ತನ್ನ ಮಗಳಾದ ಹುಚ್ಚಮ್ಮನನ್ನು ನೋಡಿ ಶ್ರೀಗುರುನಾಥನನ್ನು ಕುರಿತು— ''ಸದ್ಗುರುನಾಥಾ, ನಮ್ಮ ಹುಚ್ಚಮ್ಮನು ಗಂಡಸಾಗಿ ಹುಟ್ಟಿದ್ದರೆ ನಿಶ್ಚಯವಾಗಿ ಚಿತ್ರದುರ್ಗದ ನಾಯಕರ ಶೂರ ದಳವಾಯಿಯಾಗುತ್ತಿದ್ದಳು. ಈಕೆಗೆ ಅಂಜಿಕೆಯಂದರೇ ನೆಂಬದು ಗೊತ್ತೇ ಇರುವದಿಲ್ಲ, ಕುದುರೆ ಹತ್ತುವಲ್ಲಿ ಈಕೆ ಒಳ್ಳೆಗಟ್ಟಿಗಳು; ಬೇಟೆಯಾಡುವಲ್ಲಿ ಒಳ್ಳೊಳ್ಳೆಯ ಗಂಡಸರೂ ಈಕೆಗೆ ಹತ್ತುವದಿಲ್ಲ, ಆದರೆ ಈಕೆಗೆ ಗಂಡನು ಮಾತ್ರ ಗಟ್ಟಿಗನು ಸಿಗಬೇಕು. ಗುರುನಾಥನು ಯಾವ ವೀರನಿಗೆ ಈಕೆಯನ್ನು ಗೊತ್ತುಮಾಡಿರುವನೋ ಏನೋ?''

ಹೀಗೆ ಹುಚ್ಚಮ್ಮನ ಸಮಕ್ಷ ಚಿನ್ನ ಓಬಲನು ನುಡಿಯಲು, ಶ್ರೀ ಮುರುಗೇಶನು ತಟ್ಟನೆ ಆತನನ್ನು ಕುರಿತು—''ಚಿನ್ನ ಓಬಲಾ, ನಿನ್ನ ಮಗಳು ಗಂಡಸಾಗಿದ್ದರೆ ದುರ್ಗದಶೂರ ದಳವಾಯಿಯಾಗಬಹುದಾಗಿತ್ತು ಸರಿ; ಆದರೆ ಈಗ ಹೆಂಗಸಾಗಿರುವದರಿಂದ ಆಕೆಯು ಚಿತ್ರದುರ್ಗದ ನಾಯಕನ ಹೆಂಡತಿಯಾಗುವಳು; ಆದರೆ ಅದನ್ನು ನೋಡುವ ಯೋಗವು ಮಾತ್ರ ನಿನಗೆ ಇರುವದಿಲ್ಲ'' ಎಂದು ನುಡಿಯಲು, ಓಬಲನಿಗೆ ಮಗಳ ಉತ್ಕರ್ಷವನ್ನು ಕೇಳಿ ಸಂತೋಷವಾದರೂ, ಶ್ರೀಗುರನಾಥನ ಭವಿಷ್ಯವಾಣಿಯಂತೆ ತನಗೆ ಏನೋ ಕೇಡು ಒದಗು ವದೆಂಬ ವಿಚಾರವು ಮನಸ್ಸಿನಲ್ಲಿ ಬರಲು, ಆತನಿಗೆ ಸ್ವಲ್ಪ ಅಸಮಾಧಾನವೂ ಆಯಿತು; ಆದರೆ ಶೂರರ ಶಿರಸ್ಸು ಕೈಯಲ್ಲಿ ಎಂಬ ನಿಯಮವಿರುವದರಿಂದ,ಆತನ ಆ ಅಸಮಾಧಾನವು ಬಹಳ ಹೊತ್ತು ಉಳಿಯದೆ, ಅದು ಆತನಿಗೆ ಮರೆತೂ ಹೋಯಿತೆಂದು ಹೇಳಬಹುದು. ಚಿನ್ನ ಓಬಲನು ಚಿತ್ರದುರ್ಗದ ಅತ್ಯಂತ ಶೂರ ಸರದಾರರಲ್ಲಿ ಒಬ್ಬನಾಗಿದ್ದನು. ಶ್ರೀಗುರುನಾಥನು ಹೀಗೆ ಭವಿಷ್ಯ ಹೇಳಿದ ನಾಲ್ಕು ವರ್ಷಗಳಲ್ಲಿಯೇ ಚಿತ್ರುದುರ್ಗದ ದಳವಾಯಿಗಳ ಪುಂಡಾಟಿಕೆಯೆದ್ದು, ದಳವಾಯಿ ಪಂಚಮಮುದ್ದಣ್ಣನು ತನ್ನ ವೈರಿಪಕ್ಷದ ಈ ಚಿನ್ನ ಓಬಲನನ್ನು ಮೋಸದಿಂದ ಕೊಲ್ಲಿಸಿದನು! ಇದನ್ನರಿತು ತೇಜಸ್ವಿನಿಯನಾದ ಹುಚ್ಚಮ್ಮನು ಬಾಲಭಾವದಿಂದ ''ಮುದ್ದನನ್ನು ಕೊಲ್ಲದೆ ಯಾರನ್ನೂ ಮದುವೆಯಾಗಲಿಕ್ಕಿಲ್ಲವೆಂ''ದು ಪ್ರತಿಜ್ಞೆಮಾಡಿದ್ದಳೆಂಬದು ಈ ಮೊದಲೆ ವಾಚಕರಿಗೆ ಗೊತ್ತಾಗಿರುವದು!

ಗುರುನಾಥನ ಭವಿಷ್ಯವಾಣಿಯಂತೆ ಚಿನ್ನ ಓಬಲನ ಕೊಲೆಯಾಗಿ ಹುಚ್ಚಮ್ಮನು ಅನಾಥಳಾಗಲು, ದಳವಾಯಿ ಭರಮಣ್ಣನೇ ಆಕೆಯನ್ನು ಹೊಟ್ಟೆಯ ಮಗಳಂತೆ ವಾತ್ಸಲ್ಯದಿಂದ ಸಂರಕ್ಷಣ ಮಾಡಿದ್ದನು. ರಣಹುಚ್ಚಿಯು ದಳವಾಯಿ ಭರಮಪ್ಪನನ್ನು ತಂದೆಯೆಂದು ತಿಳಿದು, ಆತನ ಸಂಗಡ ಪ್ರತಿ ಒಂದು ರಾಜಕಾರಣದಲ್ಲಿಯೂ ಇರುತ್ತಿದ್ದದ್ದರಿಂದ, ಆಕೆಯ ಅಂಜಿಕೆ ಮತ್ತಿಷ್ಟು ಮುರಿದುಹೋಗಿ, ಆಕೆಯು ದಿಟ್ಟರಲ್ಲಿ ದಿಟ್ಟೆಯಾಗಿದ್ದಳು. ಗುರುನಾಥನ ಈ ಭವಿಷ್ಯವಾಣಿಯ ಕೇಳಿದ ಬಳಿಕ ಆಕೆಗೆ ಆ ಮಹಾಮಹಿಮನ ದರ್ಶನವಾದದ್ದು ಇದೇ ಮೊದಲು; ಆದ್ದರಿಂದ ಆತನ ದರ್ಶನವಾದಕೂಡಲೆ ಕಿವಿಮುಟ್ಟ ಆತನ ಭವಿಷ್ಯ ಕೇಳಿದ್ದ ಆಕೆಯು, ಭಕ್ತಿಪರವಶಳಾಗಿ, ಈ ಮೊದಲು ಯಾರು ಹೇಳಿದರೂ ತೆಗೆಯದಿದ್ದ ತನ್ನ ಬುರುಕೆಯನ್ನು ಚಲ್ಲಿಕೊಟ್ಟು, ಗುರುಚರಣಗಳ ಮೇಲೆ ಮಸ್ತಕವಿಟ್ಟಿದ್ದಳು! ಅದನ್ನು ನೋಡಿ ಶಿಷ್ಯವತ್ಸಲನಾದ ಮುರುಗೀಶ ಗುರುವರನು ಆಕೆಯನ್ನು ಆತುರದಿಂದ ಎಬ್ಬಿಸಿ, ಮೇಲೆ ಹೇಳಿದಂತೆ ಪ್ರಶ್ನೆ ಮಾಡಿದ್ದನು. ಅದಕ್ಕೆ ಹುಚ್ಚಮ್ಮನು ಕೊಟ್ಟ ಸಮರ್ಪಕ ಉತ್ತರವನ್ನು ಕೇಳಿ, ಆ ಮಹಾಮಹಿಮನು ಆಕೆಯ ತೀವ್ರ ಸ್ಮರಣಶಕ್ತಿಗಾಗಿ ಕೌತುಕಪಡುತ್ತಿರಲು, ಮುದ್ದನೇ ಮೊದಲಾದವರು ಮುಂಬರಿದು ಆ ಮಹಾಮಹಿಮನ ಚರಣಗಳಿಗೆ ಸಾಷ್ಟಾಂಗವಾಗಿ ಎರಗಿ ಕೈಜೋಡಿಸಿ ನಿಂತುಕೊಂಡರು. ಆಗ ಅತ್ತ ಶ್ರೀಮತಿಯ ಸ್ಥಿತಿಯು ವಿಲಕ್ಷಣವಾಗಿತ್ತು. ಸನ್ಮುಖದಲ್ಲಿದ್ದ ಪ್ರಸನ್ನಮುಖದ ಆ ದಿವ್ಯಮೂರ್ತಿಯು ಆಕೆಯ ಚಿತ್ತಹರಣ ಮಾಡಿಮಾಡಿ ದಂತೆ, ಆಕೆಗೆ ಆ ಮಹಾಮಹಿಮನ ಗುರುತು ಮುಸಮುಸಕಾಗಿ ಹತ್ತತೊಡಗಿತು. ಆಕೆಯು ಎಂಟು ವರ್ಷದವಳಿದ್ದಾಗ ಅದೇ ಮೂರ್ತಿಯನ್ನು ನೋಡಿದ್ದು, ನಿನ್ನೆ ಕನಸಿನಲ್ಲಿ ಅದೇ ದಿವ್ಯ ಮೂರ್ತಿಯ ದರ್ಶನವು ಆಕೆಗೆ ಆಗಿತ್ತು. ಸಾಧ್ವೀಶಿರೋಮಣಿಯಾದ ಆಕೆಯು ಹೀಗೆ ಸಂಶಯಗ್ರಸ್ತಳಾಗಿ ''ನಾನು ಈ ದಿವ್ಯಮೂರ್ತಿಯನ್ನು ಎಲ್ಲಿಯೋ ನೋಡಿದ ಹಾಗಿದೆ'' ಎಂದು ಶ್ರೀಗುರುಚರಣದಲ್ಲಿ ದೃಷ್ಟಿಯನ್ನಿಟ್ಟು ಧ್ಯಾನಿಸುತ್ತಿರಲು, ''ನಿನ್ನೆ ಕನಸಿನಲ್ಲಿ ಅಪ್ಪನೊಡನೆ ಬಂದಿದ್ದ ದಿವ್ಯಮೂರ್ತಿಯು ಇದೇ'' ಎಂದು ಪಕ್ಕನೆ ಆಕೆಗೆ ಗುರುತು ಹತ್ತಿತು! ಆಗ ಆಕೆಗಾದ ಕೌತುಕಾನಂದವನ್ನು ವರ್ಣಿಸುವದು ಸಾಧ್ಯವಲ್ಲ. ಆ ಆನಂದದ ಭರದಲ್ಲಿ ಆಕೆಯು ತಟ್ಟನೆ ಗುರುವರನ ಚರಣಗಳನ್ನು ಗಟ್ಟಿಯಾಗಿ ಹಿಡಿದುಕೊಳ್ಳಬೇಕೆಂದು ತವಕಿಸಿದಳು; ಆದರೆ ಆಕೆಯಲ್ಲಿಯ ಸಹಜವಾಗಿದ್ದ ಪವಿತ್ರ ಸಾಧ್ವೀಧರ್ಮವು ಹಾಗೆ ಮಾಡಲಾಗದೆಂದು ಆಕೆಯನ್ನು ಪ್ರತಿಬಂಧಿಸಿತು! ತನ್ನ ಪತಿಯು ಶ್ರೀಗುರುಚರಣಗಳಿಗೆರಗಿ ಕೈಜೋಡಿಸಿ ನಿಂತುಕೊಂಡಿದ್ದರೂ, ಆಕೆಯು ತನ್ನ ದೃಷ್ಟಿಗಳನ್ನು ಬೇರೆಕಡೆಗೆ ಹೊರಳಿಸಲಿಲ್ಲ; ತನ್ನ ಸ್ಥಳಬಿಟ್ಟು ಕದಲಲಿಲ್ಲ! ಆಗ ಆ ತನ್ನ ಹೆಂಡತಿಯ ಸೂಕ್ಷ್ಮ ಧರ್ಮ ಬುದ್ಧಿಯನ್ನು ಎಂದಿನಿಂದಲೂ ಅರಿತಿದ್ದ ಮುದ್ದಣ್ಣನು, ಆಕೆಯೂ ಶ್ರೀಗುರುಚರಣಕ್ಕೆ ವಂದಿಸಬೇಕೆಂಬ ಭಾವದಿಂದ ತಾನು ಒತ್ತಟ್ಟಿಗಾಗಿ ಆಕೆಯ ಕಡೆಗೆ ನೋಡಲು, ಪತಿಯ ಭಾವವರಿತು ನಡೆಯುವ ಸಾಧ್ವೀ ಶ್ರೀಮತಿಯು, ಭಕ್ತಿಯಿಂದ ಶ್ರೀಗುರುಚರಣಗಳಿಗೆರಗಿ ಮತ್ತೆ ಪತಿಯ ಮರೆಗೆ ಹೋಗಿ ಮೊದಲಿನಂತೆ ನಿಂತುಕೊಂಡಳು!

ಹೀಗೆ ಶ್ರೀಮತಿಯು ಗುರುಚರಣವಂದದಲ್ಲಿ ವಿಲಂಬಮಾಡಿದ್ದು ಆಕೆಯ ತಂದೆಯಾದ ಗುರುಶಾಂತಪ್ಪನಿಗೆ ಸಮಾಧಾನಕರವಾಗಲಿಲ್ಲ; ಆದ್ದರಿಂದ ಆತನು ತನ್ನ ಮಗಳನ್ನು ಕುರಿತು— ''ತಂಗೀ ಶ್ರೀಮತೀ, ಗುರುಚರಣ ವಂದನದಲ್ಲಿಯೂ ನಿನಗೆ ಸಂಕೋಚವೃತ್ತಿಯೇ? ನೀನು ಮುರಗೀಶ ಗುರುವರನಿಗೆ ಹೊರಗಿನವಳಲ್ಲವಮ್ಮಾ! ನೀನು ಈ ಮಹಾಮಹಿಮನ ಅನುಗ್ರಹ ದಿಂದಲೇ ಹುಟ್ಟಿ, ಈ ಮಹಾಮಹಿಮನ ಅನುಗ್ರಹದಿಂದಲೇ ದೊಡ್ಡವಳಾದವಳು! ಅಮ್ಮಾ ನೀನು ಎಂಟು ವರ್ಷದವಳಿರುವಾಗ ಇದೇ ದಿವ್ಯಮೂರ್ತಿಯೇ ನಮ್ಮ ಮನೆಗೆ ದಯಮಾಡಿಸಿ, ಚರಣಕ್ಕೆರಗಿದ ನಿನ್ನ ತಲೆಯ ಮೇಲೆ ತನ್ನ ವರದ ಹಸ್ತವಿಟ್ಟು ಗಾಂಭೀರ್ಯದ ವರದ ವಾಣಿಯಿಂದ ನಿನ್ನನ್ನು ಅನುಗ್ರಹಿಸಿದ್ದು! ಮೊದಲು ನಿನ್ನನ್ನು ನಾವು ''ಮಲ್ಲಮ್ಮ'' ಎಂಬ ಹೆಸರಿನಿಂದ ಕರೆಯುತ್ತಿದ್ದೆವು; ಆದರೆ ಈ ಮುರುಗೀಶಗುರುವರನು ನಿನ್ನನ್ನು ''ಸಾಧ್ವೀ ಶ್ರೀಮತಿ'' ಎಂಬ ಹೆಸರಿನಿಂದ ಕರೆದದ್ದರಿಂದ, ನಾವೆಲ್ಲರೂ ನಿನ್ನನ್ನು ಶ್ರೀಮತಿಯೆಂತಲೇ ಕರೆಯ ತೊಡಗಲು,ಅದೇ ಹೆಸರು ನಿನಗೆ ರೂಢವಾಯಿತು! ಈ ಮಹಾಮಹಿಮನು ಈಗ್ಗೈದು ವರ್ಷಗಳ ಹಿಂದೆ ನಮ್ಮ ಮನೆಗೆ ದಯಮಾಡಿಸಿದ್ದನು; ಆದರೆ ಆಗ ನೀನು ಊರಲ್ಲಿ ಇದ್ದಿಲ್ಲ. ಆಗ ಶ್ರೀಗುರುನಾಥನು ಬುದ್ಧಿಪೂರ್ವಕವಾಗಿ ನಿನ್ನ ಯೋಗಕ್ಷೇಮವನ್ನು ವಿಚಾರಿಸಿದನು; ಆದರೆ ತಂಗೀ, ಇಂತಹ ಅನುಗ್ರಹಮೂರ್ತಿಯನ್ನು ತಟ್ಟನೆ ವಂದಿಸಲಿಕ್ಕೂ ನಿನಗೆ ಸಂಕೋಚ ವೇಕಾಗಬೇಕು?

ಹೀಗೆ ತನ್ನ ಅತ್ಯುತ್ಕಟವಾದ ಭಕ್ತಿಯ ಭರದಲ್ಲಿ ನುಡಿದ ಗುರುಶಾಂತಪ್ಪನ ಮಾತು, ನಮ್ಮ ದಳವಾಯಿ ಮುದ್ದಣ್ಣನಿಗೂ ಯೋಗ್ಯವಾಗಿ ತೋರಿತು. ತನ್ನ ಹೆಂಡತಿಯು ಗುರುಚರಣ ವಂದನದಲ್ಲಿ ಹೀಗೆ ವಿಲಂಬಮಾಡಿದ್ದು ಯೋಗ್ಯವಾಗಲಿಲ್ಲವೆಂದು ಆತನು ಭಾವಿಸಿದನು; ಮತ್ತು ಆತನು ತನ್ನ ಆಜ್ಞೆಯಿಲ್ಲದೆ ಯಾವ ಧರ್ಮಕಾರ್ಯವನ್ನೂ ಮಾಡದೆಯಿದ್ದ ತನ್ನ ಹೆಂಡತಿಯು, ತಾರತಮ್ಯ ಜ್ಞಾನವಿಲ್ಲದವಳೆಂದು ಮನಸ್ಸಿನಲ್ಲಿ ಆತನು ಅಂದುಕೊಂಡನು; ಆದರೆ ಆ ಪ್ರಸಂಗದಲ್ಲಿ ಶ್ರೀ ಗುರುವಿನ ಮುಖದ ಕಡೆಗೆ ಸಾಶಂಕಮುದ್ರೆಯಿಂದ ಒಮ್ಮೆ ನೋಡುವದರ ಹೊರತು, ಬೇರೆ ಏನು ಮಾಡಲಿಕ್ಕೂ ಆತನು ಸಮರ್ಥನಾಗಲಿಲ್ಲ. ಅತ್ತ ಶ್ರೀಮತಿಯು ಶ್ರೀಗುರುಚರಣದಲ್ಲಿ ದೃಷ್ಟಿಯನ್ನಿಟ್ಟು ನಿಂತಹಾಗೆ ನಿಂತುಬಿಟ್ಟಳು. ತನ್ನ ತಂದೆಯ ಮಾತಿನ ಪರಿಣಾಮವು ಆಕೆಯ ಮನಸ್ಸಿನ ಮೇಲೆ ಏನೂ ಆದಂತೆ ತೋರಲಿಲ್ಲ; ಯಾಕಂದರೆ, ಆಕೆಯ ಭಕ್ತಿಭಾವದ ಚಲುವ ಮುಖದ ಗಾಂಭೀರ್ಯವು ಅಚ್ಚಳಿದಿದ್ದಿಲ್ಲ ಈ ಸ್ಥಿತಿಯಲ್ಲಿ ಮುರಗೀಶ ಗುರುವರನು ಗುರುಶಾಂತಪ್ಪನನ್ನು ಕುರಿತು ಮುಗುಳು ನಗೆಯಿಂದ— ''ಭಕ್ತಶ್ರೇಷ್ಠಾ, ನಿನ್ನ ಮಾತುಗಳು ನಿನ್ನ ಉತ್ಕಟವಾದ ಗುರುಭಕ್ತಿಗೆ ಒಪ್ಪುತ್ತಿದ್ದರೂ, ಅವು ಸಾಧ್ವೀಯರ ಶ್ರೇಷ್ಠಧರ್ಮಕ್ಕೆ ಸಮ್ಮತ ವಾದವಲ್ಲವು! ಪತಿಯು ಬಳಿಯಲ್ಲಿರಲಿ ಇಲ್ಲದಿರಲಿ, ಆತನ ಆಜ್ಞೆಯಿಲ್ಲದೆ ಯಾವ ಧರ್ಮಮಾಡಲಿಕ್ಕೂ ಸಾಧ್ವಿಯರಿಗೆ ಅಧಿಕಾರವಿಲ್ಲವು! ಸಾಧ್ವಿಯರು ಕೇವಲ ಪತಿಪ್ರಾಣ ರಾಗಿರುವದರಿಂದ, ಏನು ಮಾಡುವದಾದರೂ ಪತಿಯ ಅಪ್ಪಣೆಯಿಂದಲೇ ಮಾಡುವದು ಅವರ ಸ್ವಭಾವಗುಣವಾಗಿ ಹೋಗಿರುತ್ತದೆ; ಯಾಕಂದರೆ, ಪತಿಯ ಅಪ್ಪಣೆ

ಪಾಲಿಸುವದರ ಹೊರತು ಸಾಧ್ವೀಯರಿಗೆ ಅನ್ಯಧರ್ಮವಿಲ್ಲವು. ಹೀಗೆ ಪತಿಶರಣರಾಗದೆ, ಪತಿಯನ್ನು ಅತಿಕ್ರಮಿಸಿ ಯಾವದೊಂದು ಕೆಲಸಕ್ಕೆ ದುಡುಕುವ ಸ್ತ್ರೀಯರು, ಪತಿಭಕ್ಷಕರಾದ ಸಾಹಸಿಗಳು, ಅವರು ಸಾಧ್ವಿಯರಲ್ಲವು! ಅಂತಹ ಸಾಹಸಿಗಳ ಕೃತಕಶೀಲಗಳನ್ನು ಸರ್ವಥಾ ನಂಬಲಾಗದು; ಮತ್ತು ಅವರಿಗೆ ಸ್ವಾತಂತ್ರ್ಯವನ್ನು ಕೊಡಲಾಗದು! ಗುರುಶಾಂತಪ್ಪಾ, ಮಗನಿಗೆ ತಂದೆಯೂ, ಶಿಷ್ಯನಿಗೆ ಗುರುವೂ ದೇವರಾಗಿರುವಂತೆ, ಸಾಧ್ವಿಯರಿಗೆ ಅವರ ಪತಿಯೇ ದೇವರಾಗಿರುವದರಿಂದ, ಆ ಸಾಧ್ವಿಯರಿಗೆ ತಮ್ಮ ಪತಿಯಲ್ಲಿಯೇ ಯಾವತ್ತು ದೇವತೆಗಳ, ಹಾಗು ಯಾವತ್ತು ಗುರುಹಿರಿಯರ ಸಮಾವೇಶವಾಗಿರುತ್ತದೆ; ಆದ್ದರಿಂದ ಪತಿಯ ಆಜ್ಞೆಯಿಲ್ಲದೆ, ಯಾವ ದೇವರನ್ನು ಪೂಜಿಸಲಿಕ್ಕೂ, ಯಾವ ಗುರುಹಿರಿಯರ ಸೇವೆ ಮಾಡಲಿಕ್ಕೂ ಸಾಧ್ವಿಯರಿಗೆ ಅಧಿಕಾರವಿಲ್ಲವು. ಸಾಧ್ವಿಯರು ಪತಿಯ ಮನಸ್ಸನ್ನು ಸಂತೋಷಪಡಿಸುವದರಿಂದ ಎಲ್ಲ ದೇವತೆಗಳೂ, ಗುರುಹಿರಿಯರೂ ಸಂತೋಷ ಪಡುವರು! ಆದ್ದರಿಂದ ಭಕ್ತಶ್ರೇಷ್ಠಾ, ಈಗ ನಿನ್ನ ಮಗಳು ನಿನ್ನ ವಿಚಾರದಂತೆ ತನ್ನ ಪತಿಯನ್ನು ಲಕ್ಷಿಸದೆ ದುಡುಕಿ ನನ್ನ ಚರಣವಂದನ ಮಾಡಿದ್ದರೆ, ಆಕೆಯು ಸಾಧ್ವಿಯೆನಿಸದೆ ಸಾಹಸಿ ಯೆನಿಸುತ್ತಿದ್ದಳು! ಆದರೆ ನಿನ್ನ ಮಗಳು ಪತಿಭಕ್ಷಕಳಾದ ಸಾಹಸಿಯಲ್ಲ, ಪತಿರಕ್ಷಕಳಾದ ಸಾಧ್ವಿಯು! ಆದ್ದರಿಂದ ನಾವು ಆಕೆಯ ಪತಿಪ್ರಾಣವೃತ್ತಿಯಿಂದ ಪರಮ ಸಂತುಷ್ಟರಾಗಿರುತ್ತೇವೆ! ನಿನ್ನ ಈ ಮಗಳ ಯೋಗ್ಯತೆಯು ಬಹುಘನವಾದದ್ದು. ಆಕೆಗೆ ಜನ್ಮಕೊಟ್ಟ ನೀನು ಪರಮಧನ್ಯನು, ಆಕೆಯ ಕೈಹಿಡಿದಿದ್ದ ದಳವಾಯಿಮುದ್ದಣ್ಣನು ಮಹಾಪುಣ್ಯಶಾಲಿಯು,ಆಕೆಯ ಗುರಗಳೆನಿಸುವ ನಾವೂ ಪರಮ ಕೃತಾರ್ಥರು! ಗುರುಶಾಂತಪ್ಪಾ, ಸಾಧ್ವಿಯರ ಪುಣ್ಯಬಲದಿಂದಲೇ ಬೇಗು–ಬೆಳಗುಗಳಾ ಗುತ್ತವೆಂದು ತಿಳಿ. ಈ ಮಾತು ನಿಮಗೆ ಗೊತ್ತಾಗುವದಕ್ಕಾಗಿಯೂ, ಈ ನಿನ್ನ ಮಗಳ ಸಂತೋಷಕ್ಕಾಗಿಯೂ, ಈ ನಮ್ಮ ಹುಚ್ಚಮ್ಮನ ತಿಳುವಳಿಕೆಗಾಗಿಯೂ ಸ್ತ್ರೀಯರಲ್ಲಿಯ ನಾಲ್ಕೂ ವರ್ಗಗಳನ್ನು, ಅವುಗಳ ಸ್ವರೂಪಗಳನ್ನೂ ಅಚ್ಚುಕಟ್ಟಿನಲ್ಲಿ ಈಗ ಹೇಳುವೆವು; ಆದ್ದರಿಂದ ಎಲ್ಲರೂ ಕುಳಿತುಕೊಳ್ಳಿರಿ. ಅವ್ವಾ ಶ್ರೀಮತೀ,ನೀನೂ ಕುಳಿತುಕೊಳ್ಳವ್ವಾ! ಸಾಧ್ವೀ ಶಿರೋಮಣಿಯಾದ ನಿನ್ನ ಪತಿಯ ಪ್ರತಿನಿಧಿಯಾಗಿ ನಾವು ಹೀಗೆ ನಿನ್ನನ್ನು ಆಜ್ಞಾಪಿಸುವೆವೆಂದು ತಿಳಿ. ಅನ್ನಲು, ಮುದ್ದಣ್ಣನು—''ನಾನೇನು, ಶ್ರೀಗುರುಚರಣ ದಾಸನು'' ಎಂದು ನುಡಿಯುತ್ತಿರಲು, ಸಾಧ್ವೀ ಶ್ರೀಮತಿಯು ವಿನಯದಿಂದ ಪತಿಯ ಮರೆಗೆ ಕುಳಿತುಕೊಂಡಳು! ಅತ್ತ ರಣ ಹುಚ್ಚಿಯು, ಉಳಿದವರು ಶ್ರೀ ಗುರುನಾಥನ ಸಂಕೇತದಂತೆ ನಯ–ಭಯ–ಭಕ್ತಿಗಳಿಂದ ಕುಳಿತುಕೊಂಡರು! ಒಟ್ಟಿಗೆ, ಸದ್ಗುರು ಪ್ರಭಾವವೇ ಪ್ರಭಾವವೆಂಬ ಮಾತು ನಿಶ್ಚಯವು!

# ಪತಿರಕ್ಷಕ ಸ್ತ್ರೀವರ್ಗಗಳು

ಮಹಿಮಾಶಾಲಿಗಳಾದ ಸಜ್ಜನರ ಸಮಾಗಮವು ಸತ್ಪರಿಣಾಮಕಾರಿಯಾಗುವದರಲ್ಲಿ ಸಂಶಯವಿಲ್ಲ. ಅಧಾರ್ಮಿಕನಾದ ಮಹತ್ವಾಕಾಂಕ್ಷಿ ದಳವಾಯಿ ಮುದ್ದನ ಕೆಟ್ಟ ಮನಸ್ಸು, ಶ್ರೀಮುರುಗೀಶ ಗುರುವರನ ದರ್ಶನಮಾತ್ರದಿಂದ ಕೂಡಲೆ ಒಳ್ಳೆಯದಾಗತೊಡಗಿದ್ದು ಕೌತುಕದ ಸಂಗತಿಯೇ ಸರಿ! ''ದರ್ಶನಾದೇವ ಸಾಧವಃ'' ಎಂಬ ಉಕ್ತಿಯ ಅನುಭವವು ಮುದ್ದಣ್ಣನಿಗೆ ಆಗಿಹೋಯಿತು. ಈ ಮೊದಲು ತನಗಾಗಿದ್ದ ಯಾವ ಸಾಧು–ಸತ್ಪುರುಷರ ದರ್ಶನದಿಂದಲೂ ಹೀಗೆ ತನ್ನ ಮನಸ್ಸು ಒಳ್ಳೆಯ ಹಾದಿಯ ಕಡೆಗೆ ತಿರುಗದೆಯಿದ್ದದ್ದನ್ನು ನೆನೆದು, ಶ್ರೀಮುರುಗೀಶಗುರುವರನಲ್ಲಿ ಆತನ ಭಕ್ತಿಯು ಸ್ಥಿರವಾಯಿತು. ಕೆಟ್ಟ ಹಾದಿಯಿಂದ ಹೋಗುತ್ತಿದ್ದ ಆತನ ಮನಸ್ಸು, ಸಾಧ್ವೀ ಶ್ರೀಮತಿಯ ಸಹವಾಸದ ಮೂಲಕ ಮೊದಲಿನಿಂದಲೂ ಆಗಾಗ್ಗೆ ಮುಗ್ಗರಿಸುತ್ತಲೇ ಇದ್ದಿತು; ಆದರೆ ಈಗಂತು ಸಿದ್ಧ ಮಹಾಪುರುಷರ ತಪಃಪ್ರಭಾವವು ಆತನನ್ನು ಕೆಟ್ಟಹಾದಿಯಲ್ಲಿ ತಡೆದು ಗಕ್ಕನೆ ನಿಲ್ಲಿಸಿಬಿಟ್ಟಂತಾಯಿತು; ಆತನು ತನ್ನ ಪಾಪಾಚರಣೆಗಾಗಿ ಪಶ್ಚಾತ್ತಾಪಪಡತೊಡಗಿದನು. ''ನಾನು ಪುಣ್ಯಶಾಲಿಯೆಂದು ಸದ್ಗುರುನಾಥನು ಹೇಳಿದನಲ್ಲವೆ? ಪುಣ್ಯಶಾಲಿಗೆ ರಾಜದ್ರೋಹವು ಒಪ್ಪುವದೇ? ಸಾಧ್ವೀ ಶ್ರೀಮತಿಯ ಪತಿಯು ರಾಜದ್ರೋಹಿಯಾಗುವದು ನಾಚಿಕೆಗೇಡಿತನವಲ್ಲವೆ? ಇಬ್ಬರು ನಾಯಕರನ್ನು ಕೊಲ್ಲಿಸಿದ ನಾನು, ರಾಜದ್ರೋಹಿಯಲ್ಲದೆ ಮತ್ತೇನು?'' ಎಂದು ಆತನು ಮನಸ್ಸಿನಲ್ಲಿ ತನ್ನನ್ನು ತಿರಸ್ಕರಿಸಿ ಕೊಳ್ಳುತ್ತಿರುವಾಗ, ರಣಹುಚ್ಚಿಯ ಸ್ವಾಮಿನಿಷ್ಠೆಯ ನೆನಪು ಆತನಿಗೆ ಆಗಿ, ಆತನು ಅಲ್ಲಿ ಕುಳಿತಿದ್ದ ಆಕೆಯ ಕಡೆಗೆ ನೋಡಿದನು. ರಣಹುಚ್ಚಿಯಂಥ ಸ್ವಾಮಿನಿಷ್ಠ ರಣಶೂರ ಸ್ತ್ರೀಯನ್ನು ದಂಡಿಸಲಿಕ್ಕೆ ಆತನ ಮನಸ್ಸು ಒಪ್ಪದಾಯಿತು! ''ನನ್ನ ವಿರೋಧಿಯಾದ ದಳವಾಯಿ ಭರಮನನ್ನು ನಾನು ದಂಡಿಸಬೇಕಲ್ಲದೆ, ತನ್ನ ಸ್ವಾಮಿಯ ಹಿತಕ್ಕಾಗಿ ಉದಾರ ಮನಸ್ಸಿನಿಂದ ಮನಃಪೂರ್ವಕ ಹೆಣಗುತ್ತಿರುವ ರಣಹುಚ್ಚಿಯಂಥ ಸತ್ವಶಾಲಿನೀ ಸ್ತ್ರೀಯನ್ನು ದಂಡಿಸಿ ಕ್ಷುದ್ರತನವನ್ನು ತೋರಿಸುವದು ತನ್ನ ಕ್ಷಾತ್ರ ವೃತ್ತಿಗೆ ಸಲ್ಲದ್ದೆಂ''ದು ಆತನು ಭಾವಿಸಿದನು. ಇದಲ್ಲದೆ, ಇನ್ನು ತಾನು ಯಾವ ಕೆಲಸಮಾಡಬೇಕಾದರೂ ಅಡ್ಡಹಾದಿಯ ತುಳಿಯಲಿಕ್ಕಿಲ್ಲವೆಂತಲೂ, ಇನ್ನು ಈ ಸದ್ಗುರೋತ್ತಮನ ಅಪ್ಪಣೆಯನ್ನು ಎಂದೂ ಮೀರಲಿಕ್ಕಿಲ್ಲವೆಂತಲೂ ಆತನು ಮನಸ್ಸಿನಲ್ಲಿ ನಿಶ್ಚಯಿಸಿದನು!

ಹೀಗೆ ಮುದ್ದನು ಸದ್ಭಾವದಿಂದ ತನ್ನ ಮನಸ್ಸನ್ನು ಗುರುಚರಣದಲ್ಲಿ ಗಟ್ಟಿಮುಟ್ಟಿ ನಿಲ್ಲಿಸಿದ್ದರಿಂದ, ಆತನ ಆ ಮನಸ್ಸಿನ ಯತಾಯಾತವು ಅಳಿದು ಹೋಗಲು, ಆತನು ಮುರುಗೀಶಗುರುವರನ ಮುಂದೆ ಕೈಜೋಡಿಸಿಕೊಂಡು ಸದ್ಬೋಧಶ್ರವಣಾತುರನಾಗಿ ಸ್ವಸ್ಥ ಮನಸ್ಸಿನಿಂದ ಕುಳಿತುಬಿಟ್ಟನು! ಆತನ ವಿಷಯಾಸಕ್ತ ಚಂಚಲಮನಸ್ಸಿಗೆ ಮಹಾನುಭಾವನಾದ ಸದ್ಗುರುನಾಥನ ನಿರ್ಭಯಸ್ಥಾನದ ಆಶ್ರಯ ದೊರೆತದ್ದರಿಂದ,ಅದು ಅತ್ತಿತ್ತ ಚಲಿಸದಾಯಿತು! ಅತ್ತ ಶ್ರೀಮತಿಯ ತಂದೆಯಾದ ಗುರುಶಾಂತಪ್ಪನು, ಹೀಗೆ ತನ್ನ ಅಳಿಯನ ಮನಸ್ಸಿನ ಸ್ಥಿತಿಯು

ಬದಲಾದ ಲಕ್ಷಣವನ್ನರಿತು, ಸದ್ಗದಿತಕಂಠನಾಗಿ ತನ್ನ ಮಗಳ ಕಡೆಗೆ ನೋಡುತ್ತ ವಾತ್ಸಲ್ಯದಿಂದ ಮನಸ್ಸಿನಲ್ಲಿ— ''ಅಹಾ! ನಮ್ಮ ಈ ಕಂದಮ್ಮನು ನನ್ನ ಹೊಟ್ಟೆಯಲ್ಲಿ ಹುಟ್ಟಿಬಂದು ಕೀರ್ತಿತಂದಳು! ನನ್ನ ಈ ಮುದ್ದುಮಗುವು ಈವರೆಗೆ ನನಗೆ ಹಿತ್ತಲಲ್ಲಿಯ ಗಿಡವಾಗಿ ತೋರುತ್ತಿತ್ತು. ತಾಯಿ, ಶ್ರೀಮತೀ, ನೀನು ಬಹು ಗುಣವಂತೆಯಮ್ಮಾ! ನಿನ್ನ ಪುಣ್ಯದಿಂದ ಲೇಸದ್ಗುರುನಾಥನು ನನ್ನ ಮನೆಗೆ ದಯಮಾಡಿಸಿದನು. ನಿನ್ನ ಪುಣ್ಯದಿಂದಲೇ ಇಂದು ಸದ್ಗುರುಬೋಧಶ್ರವಣದ ಅಲಭ್ಯ ಸುಪ್ರಸಂಗವು ಬಂದೊದಗಿರುವದು; ನಿನ್ನ ಪುಣ್ಯದಿಂದಲೇ ನಿನ್ನ ಪತಿಯಲ್ಲಿ ಈಗ ಭಕ್ತಿಯು ಮೊಳೆದೋರಿರುವದು! ಹೀಗೆಯೇ ನಮ್ಮ ಮುದ್ದಣ್ಣನ ಮನಸ್ಸು ಕೆಟ್ಟ ಹಾದಿಯಿಂದ ತಿರುಗಿ ಆತನು ಒಳ್ಳೆಯಹಾದಿಗೆ ಹತ್ತಿದರೆ, ಎಷ್ಟು ನೆಟ್ಟಗಾದೀತಲ್ಲ! ರಾಜದ್ರೋಹವು ನರಕಸಾಧನವಲ್ಲವೆ? ಪಾಪ! ಈತನ ಕಾಲಲ್ಲಿಯೇ ನಮ್ಮ ಭರಮನಾಯಕನು ದೇಶಭ್ರಷ್ಟನಾಗಿ ಎತ್ತೋ ಹೋಗಿಬಿಟ್ಟಿದ್ದಾನೆ. ಆ ಹಕ್ಕುದಾರನಾದ ನಾಯಕನು ಇಲ್ಲದಂತಾದ್ದ ರಿಂದ, ಚಿತ್ರದುರ್ಗದ ಕಳೆಯೇ ಇಲ್ಲದಂತಾಗಿದೆ! ಈಗ ದುರ್ಗದ ಜನರು ತಾಳಗೆಟ್ಟಿರುವರು. ಅಲ್ಲಿ ಒಬ್ಬನ ಮೋರೆ ಅತ್ತಾದರೆ ಒಬ್ಬನ ಮೋರೆ ಇತ್ತ! ಎಲ್ಲಿ ನೋಡಿದರೂ ದ್ರೋಹ ಚಿಂತನ, ಎಲ್ಲಿ ನೋಡಿದರೂ ದುರಾಲೋಚನೆ. ಒಟ್ಟಿಗೆ, ದುರ್ಗದ ನಾಯಕರ ಪುಣ್ಯವೇ ಇಲ್ಲಿಗೆ ತೀರಿತೆಂದು ಹೇಳಬೇಕಾಗಿದೆ. ಇಂತಹ ಅವ್ಯವಸ್ಥೆಯ ಅಂತಃಕಲಹದ ಅನ್ಯಾಯದ ಸ್ಥಿತಿಯಲ್ಲಿ, ನಮ್ಮ ಶೂರನಾಯಕರ ಚಿತ್ರದುರ್ಗದ ಮೇಲೆ ಅವರ ಶತ್ರುಗಳು ಸಾಗಿಬಂದರೆ ಮಾಡುವದೇನು?

ಹೀಗೆ ಸಾಧುವಾದ ರಾಜನಿಷ್ಠ ಗುರುಶಾಂತಪ್ಪನು ತನ್ನ ದುರ್ಗದ ನಾಯಕರ ದುರವಸ್ಥೆಗಾಗಿ ಅಸಮಾಧಾನಪಡುತ್ತಿರಲು, ಇತ್ತ ಪತಿಪಕ್ಷಪಾತಿಯಾದ ಸಾಧ್ವೀ ಶ್ರೀಮತಿಯು ತನ್ನ ಪತಿಯ ಭಕ್ತಿಭಾವಕ್ಕಾಗಿ ಸಂತೋಷಪಡುತ್ತ ತನ್ನ ಪತಿಯ ಸಮಕ್ಷ ಸದ್ಗುರುನಾಥನು ತನ್ನನ್ನು ವರ್ಣಿಸಿದ್ದಕ್ಕಾಗಿ ಸಂಕೋಚಪಡುತ್ತ ಮನಸ್ಸಿನಲ್ಲಿ— ''ನಮ್ಮವರ ಕಡೆಗಾದರೂ ಏನು ತಪ್ಪು? ನಾಯಕರು ತಾವು ಪಟ್ಟವೇರುವಾಗ ದಂಡಾಳುಗಳ ಮಾಮೂಲಿನ ಉಚಿತದ ಹಣವನ್ನು ಕೊಡದೆಯಿದ್ದದ್ದೇ ಸರ್ವಾನರ್ಥ ಮೂಲವಾಯಿತು! ಒಂದು ಕೈಯಿಂದ ಚಪ್ಪಳೆಯಾಗುವದುಂಟೆ? ಶೂರರು ಸ್ವಾಭಿಮಾನಿಗಳೂ, ಹಟಮಾರಿಗಳೂ, ಸ್ವಪಕ್ಷಪಾತಿಗಳೂ ಎಂಬದು ಸುಪ್ರಸಿದ್ಧವು! ಅದರಂತೇ ನಮ್ಮವರು ಹಟಕ್ಕೆ ಬಿದ್ದಿರುವರು. ದಳವಾಯಿ ಭರಮಪ್ಪ ನಾದರೂ ದೊಡ್ಡ ಮನಸ್ಸು ಮಾಡಬಹುದಾಗಿತ್ತಲ್ಲ! ನಮ್ಮವರೇನು ತಾವೇ ದುರ್ಗದ ಪಟ್ಟವೇರಿರುವರೆಯೆ? ನಾಯಕರ ವಂಶಜರನ್ನೇ ಪಟ್ಟಕೆ ಕುಳ್ಳಿರಿಸಿ, ತಾವು ರಾಜ್ಯಕಾರಭಾರ ಮಾಡುತ್ತಿರುವರು. ಭರಮನಾಯಕನೇ ಹಕ್ಕುದಾರನೆಂದು ಆತನ ಪಕ್ಷಕಟ್ಟಿ ಹೋರಾಡುತ್ತಿರುವ ದಳವಾಯಿ ಭರಮಪ್ಪನ ಮನಸ್ಸಾದರೂ ಶುದ್ಧವಿರುತ್ತದೆಂದು ಯಾರು ಹೇಳಬೇಕು? ಮುಂದೆ ಆತನು ಜಯಶಾಲಿಯಾದಲ್ಲಿ ಹೇಗೆ ನಡೆಯುವನೋ ಯಾರಿಗೆ ಗೊತ್ತು? ಆತನು ಅಂತಹ ಶುದ್ಧಮನಸ್ಸಿನವನೂ, ನ್ಯಾಯಪಕ್ಷಪಾತಿಯೂ ಆಗಿದ್ದರೆ, ತನ್ನ ಪಕ್ಷವನ್ನು ಬಲಪಡಿಸಿಕೊಳ್ಳ ಬೇಕೆಂದು ರಣಹುಚ್ಚಿಯಂಥ ಹೆಂಗಸಿನ ಸಹಾಯವನ್ನು ಯಾಕೆ ಪಡೆಯುತ್ತಿದ್ದನು? ಹೀಗೆ

ಮಾಡಿದ್ದರಲ್ಲಿ ಆತನ ಪೌರುಷವಾದರೂ ಏನಿರವದು? ಅಂಥ ಸಮಯವಂತು ಬರಲಿ, ಆ ಸ್ತ್ರೀಪಕ್ಷಪಾತಿ ಭರಮಪ್ಪನಿಗೆ ನನ್ನ ಕೈ ತೋರಿಸುತ್ತೇನೆ. ಇರಲಿ, ಅದು ಮುಂದಿನ ಮಾತಾಯಿತು. ಈಗ ಶ್ರೀಗುರುವಿನ ನಿಸ್ಪೃಹದ ಬೋಧಪ್ರಸಂಗದಲ್ಲಿ ನಮ್ಮವರ ಮನಸ್ಸು ಎಲ್ಲಿ ನೋಯುವದೋ ಏನೋ! ಅವರಿಗೆ ಅಪಮಾನವು ಸ್ವಲ್ಪವೂ ತಡೆಯುವದಿಲ್ಲ, ಸರ್ವಕ್ಕೂ ಶ್ರೀಸದ್ಗುರುನಾಥನೇ ಹೊಣೆಯು, ಆತನ ಚಿತ್ತಕ್ಕೆ ಬಂದಂತಾಗಲಿ!

ಹೀಗೆ ಸಾಧ್ವೀ ಶ್ರೀಮತಿಯು ಪತಿಪಕ್ಷಪಾತಿಯಾಗಿ ತನ್ನ ಪತಿಯ ಮನಸ್ಸು ಅಸಮಾಧಾನಪಡಬಾರದೆಂಬ ಕನಿಕರದಿಂದ ಶ್ರೀಮುರುಗೀಶ ಗುರುವರನ ಕಡೆಗೆ ನೋಡಲು ಆ ಕರುಣಾಘನನು ಆ ಸತಿಯ ಹೃದ್ಗತವನ್ನು ಅರಿತು ವಾತ್ಸಲ್ಯದಿಂದ ಆಕೆಯನ್ನು ಕುರಿತು— "ಮಗೂ ಶ್ರೀಮತಿ ನಿನ್ನ ಮನಸ್ಸು ಎಷ್ಟು ಕೋಮಲವಮ್ಮಾ! ಸ್ತ್ರೀಯರಲ್ಲಿ ನೀನು ರತ್ನ ಪ್ರಾಯಳು! ನಿನ್ನಂಥ ಸಾಧ್ವಿಯರಿಂದಲೇ ಸ್ತ್ರೀವರ್ಗದ ಗೌರವವು ಹೆಚ್ಚುತ್ತಿರುವದು. ನಿನ್ನನ್ನು ಶ್ರೀರಾಮಪತ್ನಿಯಾದ ಜಾನಕೀಮಾತೆಗೆ ಹೋಲಿಸತಕ್ಕದ್ದು. ಆ ಲೋಕವಂದ್ಯ ಸೀತೆಯು ಸದಾ ಶ್ರೀರಾಮನ ಹಿತವನ್ನು ಚಿಂತಿಸುತ್ತಿದ್ದಂತೆ ನೀನು ನಿನ್ನ ಪತಿಯ ಹಿತವನ್ನು ಯಾವಾಗಲೂ ತ್ರಿಕರಣಪೂರ್ವಕ ಚಿಂತಿಸುತ್ತಿರುವೆ. ಗುರುಶಾಂತಪ್ಪಾ, ಚಿಕ್ಕವಳಿರುವಾಗಲೇ ನಾವು ನಿನ್ನ ಮಗಳನ್ನು "ಸಾಧ್ವಿ ಶ್ರೀಮತಿ" ಎಂದು ಕರೆದ ಕಾರಣವನ್ನು ಹೇಳುವೆವು ಕೇಳು. ಬೀಜಕ್ಕೆ ಬಿಡುವ ಕಾಯನ್ನು ಹೀಚಿನಲ್ಲಿಯೇ ನೋಡೆಂದು ಹೇಳಿರುವಂತೆ ಹೆಣ್ಣುಮಕ್ಕಳ ಸ್ವಭಾವವು ಅವರ ಬಾಲ್ಯದಲ್ಲಿಯೇ ಗೊತ್ತಾಗುವದು. ಜಗತ್ತಿನ ಸ್ತ್ರೀಯರೆಲ್ಲರೂ ನಿನ್ನ ಮಗಳಂತೆ ಸಾಧ್ವಿಯರೇ ಆದರೆ, ಈ ಭೂಲೋಕವೇ ಕೈಲಾಸವಾದೀತು! ಏಕಜೀವರಾದ ಪತಿಪತ್ನಿಯರ ಗೌರವವನ್ನು ಎಷ್ಟೆಂದು ವರ್ಣಿಸಬೇಕು? ಈ ಗೌರವವನ್ನು ಜಗತ್ತಿಗೆ ತೋರಿಸುವದಕ್ಕಾಗಿಯೇ ಸಾಕ್ಷಾತ್ ಕೈಲಾಸವಾಸಿ ಶ್ರೀಶಂಕರನು, ಏಕಜೀವಳಾದ ತನ್ನ ಹೆಂಡತಿ ಸಾಕ್ಷಾತ್ ಆದಿಮಾಯೆ ಪಾರ್ವತಿಗೆ, ತನ್ನ ಅರ್ಧ ದೇಹವನ್ನೇ ಕೊಟ್ಟು ಅರ್ಧನಾರೀಶ್ವರನೆಂದು ಲೋಕದಲ್ಲಿ ಪ್ರಸಿದ್ಧನೂ, ಲೋಕಪೂಜ್ಯನೂ ಆಗಿರುವನು! ಆದರೆ "ನಾರಿಯೇ ತಾಯಿ, ನಾರಿಯೇ ಮಾರಿ" ಎಂಬ ಲೋಕೋಕ್ತಿಯನ್ನಾದರೂ ಇಲ್ಲಿ ಲಕ್ಷದಲ್ಲಿಡುವದು ಅವಶ್ಯವಾಗಿರುತ್ತದೆ; ಯಾಕಂದರೆ ಭಗವತೀ ಪಾರ್ವತಿಯಂತೆ ಪತಿಪ್ರಾಣರಾದ ಸಾಧ್ವಿಸ್ತ್ರೀಯರು ಪತಿರಕ್ಷಕರಾಗಿದ್ದರೆ, ಪೌರಾಣಿಕ ಸ್ತ್ರೀಯಾದ ಸುಮಂತ ಪತ್ನಿ ಚಂಡಿಯಂತೆ ಪತಿವಿರೋಧಿಗಳಾದ ಸಾಹಸೀ ಸ್ತ್ರೀಯರು ಪತಿಭಕ್ಷಕರಾಗಿರುವರು! ಗುರುಶಾಂತಪ್ಪಾ, ಹೀಗೆ ಸ್ತ್ರೀಯರಲ್ಲಿ ಪತಿರಕ್ಷಕರು, ಪತಿಭಕ್ಷಕರು ಎಂಬ ಎರಡು ವರ್ಗಗಳಿರುವವು. ವಿರುದ್ಧಗುಣದ ಈ ಎರಡು ವರ್ಗಗಳಲ್ಲಿ ಮೊದಲು ಪತಿರಕ್ಷಕ ವರ್ಗದ ಸ್ತ್ರೀಯರ ಲಕ್ಷಣಗಳನ್ನು ಹೇಳುವೆವು, ನಿಮ್ಮೆಲರ ಲಕ್ಷವು ಬೋಧಶ್ರವಣದಲ್ಲಿರಲಿ.

**ಪತಿರಕ್ಷಕ ಸ್ತ್ರೀವರ್ಗಗಳು**—ಇವರಲ್ಲಿ ಸಾಧ್ವಿಯರು ; ಸುವಿಚಾರಿಗಳು ಎಂಬ ಎರಡು ಸೂಕ್ಷ್ಮಭೇದಗಳಿರುತ್ತವೆ. ಸಾಧ್ವಿಯರು ಶ್ರೇಷ್ಠತಮರಾಗಿದ್ದರೆ, ಸುವಿಚಾರಿಗಳು ಶ್ರೇಷ್ಠರಾಗಿ ರುವರೆಂದು ತಿಳಿಯತಕ್ಕದ್ದು. ಇವರಲ್ಲಿಯ ಈ ಸೂಕ್ಷ್ಮಭೇದವು ಮನಸ್ಸಿನಲ್ಲಿ ಬರುವದಕ್ಕಾಗಿ,

ಅವರವರ ಲಕ್ಷಣಗಳನ್ನು ಈಗ ವಿಶದವಾಗಿ ಹೇಳುವೆವು. ಇವರಿಬ್ಬರೂ ಉಭಯ ಕುಲೋದ್ಧಾರಕರೆಂಬ ಮುಖ್ಯಮಾತನ್ನು ಲಕ್ಷದಲ್ಲಿಡತಕ್ಕದ್ದು.

**ಸಾಧ್ವಿಯರ ಲಕ್ಷಣಗಳು**—ಈ ಲೋಕಪೂಜ್ಯರ ಸಂಪೂರ್ಣ ಲಕ್ಷಣಗಳನ್ನು ವರ್ಣಿಸುವದು ಈಗ ಶಕ್ಯವಲ್ಲದಿದ್ದರೂ, ಅವರ ಕೆಲವು ಲಕ್ಷಣಗಳನ್ನಾದರೂ ಇಲ್ಲಿಹೇಳಲು ಯತ್ನಿಸುತ್ತೇವೆ, ನೀವೆಲ್ಲರೂ ಲಕ್ಷಪೂರ್ವಕವಾಗಿ ಕೇಳತಕ್ಕದ್ದು.

**೧ನೆಯ ಲಕ್ಷಣ**—ತಮ್ಮ ಪತಿಯನ್ನು ದೇವರೆಂದು ತಿಳಿಯುವದು ಸಾಧ್ವೀತ್ವದ ಮೊದಲನೆಯ ಲಕ್ಷಣವಾಗಿರುತ್ತದೆ. ದೇವಭಕ್ತರಿಗೆ ತಮ್ಮ ದೇವರಿಗಿಂತ ಹೆಚ್ಚಿನದಿಲ್ಲದಿರುವಂತೆ, ಸಾಧ್ವಿಯರಿಗೆ ತಮ್ಮ ಪತಿಗಿಂತ ಹೆಚ್ಚಿನದು ಈ ಲೋಕದಲ್ಲಾಗಲಿ, ಪರಲೋಕದಲ್ಲಾಗಲಿ ಯಾವದೂ ಕಾಣುವದಿಲ್ಲ! ತಮ್ಮ ಪತಿಯು ಸುಂದರನೂ ಸುಗುಣಪೂರ್ಣನೂ, ಸಮರ್ಥನೂ ಇರಲಿ, ಅಥವಾ ಕುರೂಪಿಯೂ, ದುರ್ಗುಣಿಯೂ, ಮಹಾರೋಗಿಯೂ ಇರಲಿ, ಸಾಧ್ವಿಯರು ಇದನ್ನಾವದನ್ನೂ ಎಣಿಸದೆ, ಭಾವುಕರಾದ ದೇವಭಕ್ತರು, ತಮ್ಮ ಉಪಾಸ್ಯದೈವತದ ಮೂರ್ತಿಯು ಸುಂದರವಿರಲಿ, ಅಥವಾ ಅಂಕಡೊಂಕಕಲ್ಲು ಆಗಿರಲಿ ಅವೆರಡನ್ನೂ ಏಕನಿಷ್ಠೆಯಿಂದ ಪೂಜಿಸುತ್ತಿರುವಂತೆ, ಆ ಸಾಧ್ವಿಯರೂ ತಮ್ಮ ಪತಿಯನ್ನು ಆತನ ಆ ಗುಣದೋಷಗಳನ್ನೆಣಿಸದೆ, ಏಕನಿಷ್ಠೆಯಿಂದ ಪೂಜಿಸುವರು! ದೇವಭಕ್ತರು ತಾವು ಪೂಜಿಸುತ್ತಿರುವ ಕಲ್ಲುಮೂರ್ತಿಯನ್ನು ಕಲ್ಲು ಎಂದು ನೋಡದೆ ದೇವರೆಂದು ಭಾವಿಸುವದರಿಂದ, ಕಲ್ಲಿನ ಗುಣದೋಷಗಳೆರಡೂ ಅವರಿಗೆ ಕಾಣದಂತಾಗಿ, ದೇವರ ಷಡ್ಗುಣೈಶ್ವರ್ಯ ಸಂಪನ್ನತೆಯು ಮಾತ್ರಅವರ ಕಣ್ಣಿಗೆ ಕಟ್ಟುವದು. ಅದರಂತೆ ಸಾಧ್ವಿಯರು ತಮ್ಮ ಪತಿಯನ್ನು ಗುಣದೋಷಯುಕ್ತನಾದ ಮನುಷ್ಯನೆಂದು ನೋಡದೆ, ಷಡ್ಗುಣೈಶ್ವರ್ಯ ಸಂಪನ್ನನಾದ ಪರಮಾತ್ಮನೆಂದು ಭಾವಿಸುವದರಿಂದ, ಅವರಿಗೆ ಪತಿಯ ಗುಣದೋಷಗಳೆರಡೂ ಮರೆಯಾಗಿ ಪರಮಾತ್ಮನ ಪರಮತ್ವವು ಅವರ ಕಣ್ಣಿಗೆ ಕಟ್ಟುವದು! ಇಂತಹ ಗುಣದೋಷ ದೃಷ್ಟಿಯಿಲ್ಲದ ದೈವೀಭಾವದ ಉಪಾಸನೆಯೇ ಉದಾತ್ತತರ ಉಪಾಸನೆಯಾಗಿರುವದು; ಯಾಕಂದರೆ, ಇಂತಹ ಉಪಾಸಕರು ತಮ್ಮ ಉಪಾಸನೆಯನ್ನು ತಮ್ಮ ಕರ್ತವ್ಯವೆಂದು ಮಾಡುವರಲ್ಲದೆ, ಸ್ವಹಿತದ ಯಾವ ಹೇತುವಿನಿಂದಲೂ ಮಾಡುವದಿಲ್ಲ!

**೨ನೆಯ ಲಕ್ಷಣ**—ಪತಿಯ ಸಂತೋಷವೇ ಸಾಧ್ವಿಯರ ಸಂತೋಷವಾಗಿರುವದು, ಸಾಧ್ವಿಯರ ಸಾಧ್ವೀತ್ವದ ಎರಡನೆಯ ಲಕ್ಷಣವಾಗಿರುತ್ತದೆ! ಇವರು ತಮಗೆ ಸೇವ್ಯನಾಗಿರುವ ಪತಿಗೆ ಸಂತೋಷವಾಗುವಂತೆ ತಾವು ನಡೆದುಕೊಳ್ಳುವದೇ ಪತಿಸೇವೆಯೆಂದು ತಿಳಿಯುವರು; ಆದ್ದರಿಂದ ಇವರು ಪತಿಯ ಮನಸ್ಸನ್ನು ಸರ್ವಥಾ ನೋಯಿಸುವದಿಲ್ಲ. ಅದಕ್ಕಾಗಿ ಇವರು ತಮ್ಮ ವಸ್ತ್ರಾಭರಣಗಳ ವಿಷಯದಲ್ಲಿ, ಅಥವಾ ಸಂಸಾರೋಪಯುಕ್ತ ವಸ್ತುಗಳ ತರಬರುವ ವಿಷಯದಲ್ಲಿ ಎಷ್ಟು ಮಾತ್ರವೂ ಪತಿಗೆ ತೊಂದರೆ ಕೊಡುವದಿಲ್ಲ. ಮನೆಯಲ್ಲಿಲ್ಲದ ಪದಾರ್ಥಗಳನ್ನು ತರಬೇಕೆಂದು ತಟ್ಟನೆ ಪತಿಯ ಮೋರೆಯ ಮುಂದೆ ಹೇಳುವದು ಉದ್ಧಟತನವೆಂದು ತಿಳಿದು, ಮಕ್ಕಳ ಮುಖಾಂತರವಾಗಿಯಾಗಲಿ, ಅಥವಾ ಬೇರೆಯಾವದೊಂದು ರೀತಿಯಿಂದಾಗಲಿ ಅವರು ಶಕ್ಯಾಶಕ್ಯತೆಯರಿತು, ಸಮಯ ನೋಡಿ ಮನೆತನದ

ಅನಿವಾರ್ಯಹಪಕ್ಷದ ಕೊರತೆಯು ಮಾತ್ರ ಪತಿಯ ಕಿವಿಗೆ ಮುಟ್ಟುವಂತೆ ಮಾಡುವರು. ಹೀಗೆಯೇ ಆಗಬೇಕೆಂದು ಇವರು ಯಾವ ವಿಷಯದಲ್ಲಿಯೂ ಆಗ್ರಹ ತಾಳುವದಿಲ್ಲ. ಪತಿಗೆ ನಿವೇದಿಸದೆ ಇವರು ಏನನ್ನೂ ಗ್ರಹಿಸುವದಿಲ್ಲ. ಪತಿಯ ಉಚ್ಛಿಷ್ಟವನ್ನೂ, ಪತಿಭುಕ್ತಶೇಷವನ್ನೂ ಭಕ್ತಿಯಿಂದ ಸೇವಿಸುವದೂ, ಪತಿಗೆ ಯಾವ ಬಗೆಯಿಂದಲೂ ತೊಂದರೆ ಕೊಡದಿರುವದೂ, ತಮಗಾಗುವ ಕಷ್ಟ–ನಷ್ಟಗಳನ್ನು ಸಹಿಸುವದೂ, ಸದಾ ಸಂತೋಷ ವೃತ್ತಿಯಲ್ಲಿರುವದೂ ಇವರ ಪವಿತ್ರ ವ್ರತಗಳಾಗಿರುವವು! ಇವರು ಪತಿಯ ಸಂತೋಷಕ್ಕಾಗಿ ಪತಿಯ ಆಪ್ತೇಷ್ಟರೊಡನೆ ಭಕ್ತಿವಿಶ್ವಾಸದಿಂದಲೂ, ಪತಿಯ ವಿರೋಧಿಗಳೊಡನೆ ವಿರೋಧದಿಂದಲ್ಲ, ಉದಾಸೀನಭಾವ ದಿಂದಲೂ ನಡೆದುಕೊಳ್ಳುವರು. ಪ್ರತ್ಯಕ್ಷ ಪತಿಯಲ್ಲಿ ಭಕ್ತಿವಿಶ್ವಾಸ ತಾಳುವದಕ್ಕಿಂತ, ಪತಿಯ ಅಲ್ಪ ಸ್ವಲ್ಪ ಸಂಬಂಧವುಳ್ಳವರಲ್ಲಿಕೂಡ, ಭಕ್ತಿವಿಶ್ವಾಸ ತಾಳುವದು ಪತಿಗೆ ಹೆಚ್ಚು ಸಂತೋಷ ಕರವೆಂಬ ಗಂಭೀರ ವಿಚಾರವು ಇವರ ಮೈ ಉಂಡು ಹೋಗಿರುವದು. ಏಕ ದೇವತಾ ಪೂಜೆಗಿಂತ ಸಪರಿವಾರದ ಪಂಚಾಯತನ–ದೇವತಾಪೂಜೆಯು, ಭಕ್ತರ ಮಾತ್ಸರ್ಯಾದಿ ವಿಕಾರನಾಶಕ್ಕೆ, ಅರ್ಥಾತ್ ಸಮತಾದೃಷ್ಟಿಯ ಉತ್ಪತ್ತಿಗೆ ಹೆಚ್ಚು ಸಹಾಯಕವಾಗಿರುವದೆಂಬ ಉಪಾಸನೆಯ ಉದಾತ್ತ ತತ್ವವು ಸಾಧ್ವಿಯರ ಬಳಕೆಯಲ್ಲಿ ಬಂದುಹೋಗಿರುವದು; ಮತ್ತು ಅನ್ಯರ ನಿಂದಾಸ್ತುತಿಗಳಿಂದ ತಮ್ಮ ಸಾಧ್ವೀತ್ವಕ್ಕೆ ಹಾನಿಯುಂಟಾಗುವದೆಂಬ ಮಾತು ಇವರಿಗೆ ಗೊತ್ತಿರುವದರಿಂದ, ಇವರು ಒಬ್ಬರನ್ನು ನಿಂದಿಸುವದೂ ಇಲ್ಲ ಸ್ತುತಿಸುವದೂ ಇಲ್ಲ! ಸಾಧ್ವಿಯರ ಈ ಉದಾತ್ತವಾದ ಆಚರಣೆಯಿಂದ ಅವರ ಮನೆಯು ಸುಖಶಾಂತಿಗಳ ಉತ್ಪತ್ತಿ ಸ್ಥಾನವು, ಅರ್ಥಾತ್ ದೇವತಾವಾಸವು ಆಗುವದು! ''ಯತ್ರನಾರ್ಯಸ್ತು ಪೂಜ್ಯಂತೇ ರಮಂತೇ ತತ್ರದೇವತಾಃ'' ಎಂಬ ಮನೂಕ್ತಿಯು, ಈ ಸಾಧ್ವಿಯರ ಮನೆಗೇ ಹತ್ತುವದು. ಇಲ್ಲಿ ''ಸುಪೂಜ್ಯಂತೇ'' ಇದರ ಅರ್ಥವು ''ಸುಶೀಲಾ ವರ್ತಂತೇ'' ಎಂದು ಇರುವದು.

**೩ನೆಯ ಲಕ್ಷಣ**—ಪತಿವಾಕ್ಯವು ಮಂತ್ರಮೂಲವಾಗಿಯೂ, ಪತಿಯರೂಪವು ಧ್ಯಾನಮೂಲವಾಗಿಯೂ, ಪತಿಯ ಕೃಪೆಯು ಮೋಕ್ಷಮೂಲವಾಗಿಯೂ ತೋರುತ್ತಿರುವದು ಸಾಧ್ವಿಯರ ಮೂರನೆಯ ಲಕ್ಷಣವಾಗಿರುತ್ತದೆ. ಈ ಲಕ್ಷಣದ ಮೂಲಕ ಸಾಧ್ವಿಯರು, ತಮ್ಮ ಎಲ್ಲ ವ್ರತಗಳೂ, ಎಲ್ಲ ಉಪೋಷಣಗಳೂ, ಎಲ್ಲ ತೀರ್ಥಯಾತ್ರೆಗಳೂ ಪತಿಸೇವೆಯಲ್ಲಿಯೇ ಬರುವವೆಂದು ತಿಳಿಯುವರು. ಪತಿಯ ಅಪ್ಪಣೆಯ ಹೊರತು ಇವರು ಯಾವ ಧರ್ಮಕಾರ್ಯ ಗಳನ್ನೂ ಮಾಡುವದಿಲ್ಲ ಮತ್ತು ಪತಿಯ ಮುಂದೆ ಇವರು ತಮ್ಮ ಸತ್ಕರ್ಮ–ಸದಾಚಾರ– ಸದ್ಗುಣಗಳ ಆಡಂಬರವನ್ನು ಸರ್ವಥಾ ತೋರಿಸುವದಿಲ್ಲ. ಗೃಹಕೃತ್ಯಗಳಲ್ಲಿ ಸದಾ ಮಗ್ನರಾಗಿರುವಾಗ, ಅತಿಥ್ಯಭ್ಯಾಗತರನ್ನು ಸತ್ಕರಿಸುವಾಗ, ದೇವಪಿತೃಕಾರ್ಯಗಳಲ್ಲಿ ಭಕ್ತಿ ಯಿಂದ ಪತಿಯನ್ನು ಸಹಚರಿಸುವಾಗ ಇವರು ಮಾಡಬೇಕಾದ ಇಂದ್ರಿಯ ನಿಗ್ರಹವು, ಇವರ ಸಹಜವಾದ ತಪಶ್ಚರ್ಯವಾಗಿರುವದು. ಈ ತಪಶ್ಚರ್ಯಕ್ಕೆ ತಮ್ಮ ಪತಿಯು ಸಪರಿವಾರ ಸಂತೋಷದಲ್ಲಿರುವದೇ ಉಚ್ಚತರ ಫಲವೆಂದು ಇವರು ಭಾವಿಸುವರು!

**೪ನೆಯ ಲಕ್ಷಣ** – ಪತಿಯ ದೋಷಗಳೂ ಗುಣಗಳಾಗಿ ತೋರುವಷ್ಟು ಸಾಧ್ವಿಯರ ಮನಸ್ಸು ಪವಿತ್ರವಾಗಿ ಅಂದರೆ ವಿಕಾರರಹಿತವಾಗಿ ಇರುವದು, ಅವರ ಸಾಧ್ವೀತ್ವದ ನಾಲ್ಕನೆಯ ಲಕ್ಷಣವಾಗಿರುತ್ತದೆ. ಅನ್ಯರ ದೋಷಗಳನ್ನೂ ಗುಣಗಳಾಗಿಯೇ ಭಾವಿಸುವವರನ್ನು ಶ್ರೇಷ್ಠರೆಂದು ಭಗವತೀ ದಾಕ್ಷಾಯಣಿಯು ತನ್ನ ತಂದೆಯಾದ ದಕ್ಷನ ಮುಂದೆ ಹೇಳಿದ್ದನ್ನು ಶ್ರೀಮದ್ಭಾಗವತದ ದಕ್ಷಯಜ್ಞಧ್ವಂಸದ ಪ್ರಸಂಗದಲ್ಲಿ ನೋಡಬಹುದು. ಸಾಧ್ವಿಯರು ತಾವು ತ್ರಿಕರಣ ಪೂರ್ವಕ ಪರಿಶುದ್ಧರಾಗಿರುವ ವಿಷಯದಲ್ಲಿ ಅತ್ಯಂತ ದಕ್ಷರಾಗಿರುವರು. ಆದಕ್ಕಾಗಿ ಇವರು ಪರಪುರುಷರ ಸ್ಪರ್ಶಮಾಡುವದಂತು ಇರಲಿ, ಅವರೊಡನೆ ಸಂಭಾಷಣಮಾಡುವದಿಲ್ಲ, ಅವರನ್ನು ಕಣ್ಣೆತ್ತಿ ನೋಡುವದೂ ಇಲ್ಲ.ತಮ್ಮ ಮನೆಬಿಟ್ಟು ಎರಡನೆಯವರ ಮನೆಗೆ ಹೋಗುವದೆಂದರೆ, ಇವರಿಗೆ ಕೃಷ್ಣಸರ್ಪದ ಹೆಡೆಯಮೇಲೆ ಕಾಲಿಟ್ಟ ಹಾಗೆ ಆಗುತ್ತದೆ. ಇವರು ಒಂಟಿಗರಾಗಿ ಸರ್ವಥಾ ಮನೆಬಿಟ್ಟು ಹೊರಬೀಳರು. ಈ ಸುಜನರು ಗಟ್ಟಿಯಾಗಿ ಮಾತಾಡುವದಿಲ್ಲ, ಗಟ್ಟಿಯಾಗಿ ನಗುವದಿಲ್ಲ, ಕೆಟ್ಟಮಾತು ಆಡುವದಿಲ್ಲ, ಕೆಟ್ಟವಿಚಾರ ಮಾಡುವದಿಲ್ಲ, ಪತಿಯು ಊರಲ್ಲಿ ಇಲ್ಲದಾಗ, ಇವರು ಎರಕೊಳ್ಳುವದಿಲ್ಲ ವಸ್ತ್ರಾಲಂಕಾರ ಗಳಿಂದ ಅಲಂಕೃತರಾಗುವದಿಲ್ಲ. ಆಗ ಸದಾ ಪತಿಧ್ಯಾನತತ್ಪರರಾಗಿರುವದು ಇವರಿಗೆ ಇಷ್ಟವಾಗಿರುವದು, ಈ ಮಾತಿಗೆ ಜಾನಕಿಯ ರಾವಣಗೃಹವಾಸದ ಸ್ಥಿತಿಯೇ ಸಾಕ್ಷಿಯಾಗಿದೆ.

**೫ನೆಯ ಲಕ್ಷಣ**–ತಮ್ಮ ಬುದ್ಧಿ ವೈಭವ, ಜ್ಞಾನವೈಭವ, ಧನವೈಭವ,ಅಧಿಕಾರ ವೈಭವ, ಮೊದಲಾದವನ್ನು ತಮ್ಮ ಪತಿಯ ಚರಣಕ್ಕೆ ನಿವಾಳಿ–ತೆಗೆದು ಚಲ್ಲಿಕೊಟ್ಟು, ನಿಸ್ಪೃಹತೆಯಿಂದ ಪತಿದೈವತದ ಭೋಲೇ ಭಾವಿಕಭಕ್ತರಾಗಿರುವದು ಇವರ ಐದನೆಯ ಲಕ್ಷಣವಾಗಿರುತ್ತದೆ! ಈ ಲಕ್ಷಣದ ಮೂಲಕ ಇವರು ಯಾವ ಕಾರಣದಿಂದಲೇ ಆಗಲಿ, ಪತಿಯನ್ನು ಅತಿಕ್ರಮಿಸುವದು, ಅಥವಾ ಆತನ ತೇಜೋಭಂಗಮಾಡುವದು ತಮ್ಮ ಅಧಃಪತನ ಹೇತುವಾದ ಪತಿದ್ರೋಹ ವೆಂದು ತಿಳಿಯುವರು; ಆದ್ದರಿಂದ ಸಾಧ್ವಿಯರು ಪತಿದೈವತದ ಮುಂದೆ ಸ್ವಾರ್ಥದೃಷ್ಟಿಯಿಂದ ಕಣ್ಣಿದ್ದು ಕುರುಡರು, ಕಿವಿಯಿದ್ದು ಕಿವುಡರು, ಬಾಯಿಯಿದ್ದು ಮೂಕರು, ಬುದ್ಧಿಯಿದ್ದು ಬುದ್ಧಿಗೇಡಿಗಳು, ಜ್ಞಾನವಿದ್ದು ಅಜ್ಞಾನಿಗಳು ಆಗಿರುವದು ಪರಮಾಶ್ಚರ್ಯವೇಸರಿ! ಆದರೆ ಪತಿಯ ಆಜ್ಞೆಯೆಂದು, ಅಥವಾ ಪತಿಯ ಹಿತಕ್ಕಾಗಿ, ತಮ್ಮ ಪ್ರಾಣವನ್ನಾದರೂ ಇವರು ಅರ್ಪಿಸಲಿಕ್ಕೆ ಹಿಂದೆ ಮುಂದೆ ನೋಡರು!

**೬ನೆಯ ಲಕ್ಷಣ**–ಪತಿಯ ವಿಶ್ವಾಸದ ಸರ್ವ ಬಳಗವಾಗಿರುವದು ಸಾಧ್ವೀತ್ವದ ಆರನೆಯ ಲಕ್ಷಣವಾಗಿರುತ್ತದೆ. ಪತಿಯ ಯಾವತ್ತೂ ಕಾರ್ಯಕಲಾಪಗಳಲ್ಲಿ ಆತನು ಕೇಳಿದರೆ, ಆತನ ಮನಸ್ಸು ನೋಯದಂತೆ ವಿನಯದ ಮೃದುಮಧುರ ವಚನಗಳಿಂದ ತಮಗೆ ತಿಳಿದಮಟ್ಟಿಗೆ ಆತನಿಗೆ ಹಿತದ ಆಲೋಚನೆ ಹೇಳುವ ವಿಷಯದಲ್ಲಿ ಇವರು ಶ್ರೇಷ್ಠ ಮಂತ್ರಿಗಳಾಗಿರುವರು; ಮತ್ತು ಪತಿಸೇವೆ ಮಾಡುವ ವಿಷಯದಲ್ಲಿ ನಯ–ಭಯ–ಭಕ್ತಿಗಳುಳ್ಳ ಹಾಗು ದೇಹಶ್ರಮವನ್ನೂ, ಮನಸ್ಸಿನ ಬೇಸರವನ್ನೂ ಎಣಿಸದೆ ಕೈಮುಟ್ಟಿ ಸೇವೆಮಾಡುವ ಪ್ರೇಮಲದಾಸಿಯಾಗಿರುವರು; ಅದರಂತೆ ಪತಿಗೆ ಉತ್ಸುಕತೆಯಿಂದ ಉಣಿಸು–ತಿನಸು

ಗಳನ್ನೊದಗಿಸಿ ಕೊಡುವ ವಿಷಯದಲ್ಲಿ, ಅವರು ತಮ್ಮನ್ನೇ ಮರೆತುಬಿಡುವ ವಾಸ್ತಲ್ಯದ ತಾಯಂದಿರಾಗಿರುವರು; ಹಾಗು ಅವರು ವಿಲಾಸ ನಿಪುಣೆ ರಂಭೆಯಂತೆ ಪತಿಗೆ ಭೋಗಪ್ರದರೂ,ಕೇವಲ ಧರ್ಮದೇವತೆಯಂತೆ ಪತಿಯ ಧರ್ಮ ಕಾರ್ಯಾನುಕೂಲಿಗಳೂ, ಸರ್ವಸಹೆಯೆನಿಸುವ ಭೂದೇವಿಯಂತೆ ಅನ್ಯರ ಅಪರಾಧಗಳನ್ನು ಕ್ಷಮಿಸುವವರೂ ಆಗಿರುವರು!

**೬ನೆಯ ಲಕ್ಷಣ**- ತಾವು ವಿಷಯ ವಿರಾಗಿಗಳಿದ್ದು, ಪತಿಯ ಸಲುವಾಗಿ ವಿಷಯರಾಗಿ ಗಳಾಗುವದು ಇವರ ಸಾಧ್ವೀತ್ವದ ಆರನೆಯ ಲಕ್ಷಣವಾಗಿರುತ್ತದೆ. ಇವರ ಯಾವ ಕೃತಿಗಳೇ ಆಗಲಿ, ಯಾವ ಭೋಗಗಳೇ ಆಗಲಿ ಪತಿಯ ಸಂತೋಷಕ್ಕಾಗಿಯೆ ಇರುವವು. ಒಟ್ಟಿಗೆ, ಸಾಧ್ವಿಯರು ಪತಿಯ ಸಲುವಾಗಿ ಸರ್ವಧರ್ಮ ಪರಿತ್ಯಾಗಿಗಳೂ, ಪತ್ಯೈಕ ಶರಣರೂ ಆದ ಮಹಾ ನಿಷ್ಕಾಮ ತಪಸ್ವಿಗಳಾಗಿರುವರೆಂದು ತಿಳಿಯತಕ್ಕದ್ದು. ಈ ಪತಿಪ್ರಾಣರ ಪ್ರಾರಬ್ಧವ ಶಾತ್ ಅವರ ಪತಿಯು ಮರಣ ಹೊಂದಿದರೆ, ಅವರು ತಮ್ಮ ಸಾಧ್ವೀತ್ವದ ಯೋಗ್ಯತೆ ಯಿದ್ದಂತೆ ಸಹಜ ದೇಹತ್ಯಾಗಿಗಳು, ಅಥವಾ ಸಹಗಮನಿಗಳು, ಅಥವಾ ಕಠಿಣತರ ವ್ರತಾವಲಂಬಿಗಳು ಆಗುವರು.

ಇಂತಹ ಸುಲಕ್ಷಣ ಸಂಪನ್ನ ಸಾಧ್ವಿಯರ ಉದಯವು, ಸ್ವತಃ ಆ ಸಾಧ್ವಿಯರ ಹಾಗು ಸಾಧ್ವೀಪತಿಯ, ಹಾಗು ಆ ಸಾಧ್ವೀ ಕುಟುಂಬದ, ಹಾಗು ಆ ಸಾಧ್ವೀ ಸಮಾಜದ ಹಾಗು ಆ ಸಾಧ್ವಿಯ ದೇಶದ ಮಹದ್ಭಾಗ್ಯವೆಂದು ತಿಳಿಯಬೇಕು. ನಮ್ಮ ಭರತಭೂಮಿಯಲ್ಲಿ ಅನಾದಿಕಾಲ ದಿಂದ ಇಂಥ ಮಹಾ ಮಹಾಸಾಧ್ವಿಯರ ಉದಯವಾಗುತ್ತ ಬಂದಿರುವದರಿಂದಲೇ,ಅದು ಪವಿತ್ರತರವಾದ ಪುಣ್ಯಭೂಮಿಯೆನಿಸಿರುವದು! ಈ ಸಾಧ್ವಿಯರ ಪ್ರಭಾವವು ಸಾಮಾನ್ಯ ವಾದದ್ದಲ್ಲ, ಅವರ ಅಲೌಕಿಕ ಪ್ರಭಾವವನ್ನು ತ್ರಿಮೂರ್ತಿಗಳು ಅಭಿನಂದಿಸುವರು; ಅವರ ಆ ಪ್ರಭಾವದ ಮಾನ್ಯತೆಗಾಗಿ, ಅಥವಾ ಅಂಜಿಕೆಗಾಗಿ ಸೂರ್ಯನು ಮಂದವಾಗಿ ತಪಿಸುವನು; ಅಗ್ನಿಯು ತನ್ನ ದಾಹಕ ಶಕ್ತಿಯನ್ನು ಕುಗ್ಗಿಸುವನು; ಭೂದೇವಿಯು ಮೃದುಸ್ಪರ್ಶಳಾಗುವಳು! ಸಾಧ್ವಿಯರ ಪವಿತ್ರ ನಾಮಸ್ಮರಣವು ಪಾಪನಾಶಕವಾಗಿರುವದರಿಂದಲೇ, ಅಹಲ್ಯಾ, ದ್ರೌಪದೀ, ಸೀತಾ, ತಾರಾ, ಮಂಡೋದರೀ, ಮುಂತಾದವರು ಪ್ರಾತಃಸ್ಮರಣೀಯ ರಾಗಿರುವರು. ಇವರ ಪವಿತ್ರಾಚರಣೆಯ ಯೋಗ್ಯತೆಯು, ಹಾಗು ಇವರಿಗೆ ಪ್ರಾಪ್ತವಾಗುವ ಶ್ರೇಷ್ಠಫಲದ ಸ್ವರೂಪವು, ಹಾಗು ಅವರಿಂದಾಗುವ ಲೋಕಕಲ್ಯಾಣವು ಕ್ಷುದ್ರವಿಷಯ ಸುಖಾಸಕ್ತರಾದ ಸ್ವೇಚ್ಛಾಚರಣೆಯ ಸಾಹಸೀ ಸ್ತ್ರೀಯರಿಗೆ ಸರ್ವಥಾ ತಿಳಿಯದು. ತಮ್ಮ ಪತಿಯನ್ನು ಷಡ್ಗುಣೈಶ್ವರ್ಯಸಂಪನ್ನನಾದ ಪರಮೇಶ್ವರನೆಂದು ತಿಳಿದು ಆತನ ನಿಷ್ಕಾಮ ಉಪಾಸನೆ ಮಾಡುವದರಿಂದ, ಅವರಿಗೆ ಫಲಕೊಡಲು ಸರ್ವಸಾಕ್ಷಿಯಾದ ಪರಮೇಶ್ವರನೇ ಹೊಣೆಯಾಗಿರುವನು; ಯಾಕಂದರೆ ಉಪಾಸಕರು ಸ್ವತಃ ಪರಮೇಶ್ವರನ ಉಪಾಸನೆ ಮಾಡುವದಕ್ಕಿಂತ, ಪರಮೇಶ್ವರನ ಸೃಷ್ಟಿಯಲ್ಲಿಯ ಆತನ ಸಂಬಂಧಿಗಳೆಂದು, ಅಥವಾ ಆತನ ಸ್ವರೂಪಗಳೆಂದು ತಿಳಿದು ಅವುಗಳಲ್ಲಿಯ ಆತನ ಅಂತರ್ಗತತೆಯನ್ನು ಅರಿತು, ಭೂತದಯಾ–

ಪಶ್ಚಾತ್ತಾಪ ಪ್ರೇರಿತರಾಗಿ ಅವುಗಳ ಉಪಾಸನೆ ಮಾಡುವವರಿಗೆ, ಆತನು ಬೇಗನೆ ಕೈವಶವಾಗುವನು! ಪೂರ್ಣಕಾಮನಾದ ಆ ಭಗವಂತನಿಗೆ, ತನ್ನ ಭಕ್ತರ ಈ ಸರ್ವತ್ರ ದಾಸಭಾವದ ಉಪಾಸನೆಯ ವೈಭವವನ್ನು ನೋಡಿ ನಲಿಯುವದಕ್ಕಿಂತ ಹೆಚ್ಚಿನದೇನು ಬೇಕಾಗಿರಬಹುದು? ಈ ಸಾಧ್ವೀ ವರ್ಗದಲ್ಲಿ ''ಸೀತೆ, ಅರುಂಧತಿ, ಅನಸೂಯೆ, ಲೋಪಾ ಮುದ್ರೆ ಮುಂತಾದವರು ಬರುವರು!

**ಸುವಿಚಾರಿಗಳು–** ಇವರು ಸಾಧ್ವಿಯರಂತೆ ತಮ್ಮ ಪತಿಯನ್ನು ಪರಮೇಶ್ವರ ಸ್ವರೂಪವ ವೆಂದು ತಿಳಿಯದಿದ್ದರೂ, ತಮ್ಮ ಪತಿಯು ತಮ್ಮ ಪಾತಿವ್ರತ್ಯ ಧರ್ಮಾಚರಣೆಯ ಆಧಾರವೆಂದು ತಿಳಿಯುವರು! ಪರಮೇಶ್ವರನಿಗಿಂತ ಪರಮೇಶ್ವರ ಪ್ರಣೀತ ಧರ್ಮವು ಕಡಮೆ ಯೋಗ್ಯತೆ ಯದಾದ್ದರಿಂದ, ಸುವಿಚಾರಿಗಳ ಯೋಗ್ಯತೆಯಾದರೂ ಸಾಧ್ವಿಯರ ಯೋಗ್ಯತೆಗಿಂತ ಕಡಿಮೆಯಾಗಿರುವದು; ಆದರೂ ಸುವಿಚಾರಿಗಳ ಗಣನೆಯು ಸಾಧ್ವಿಯಲ್ಲಿಯೇ ಆಗುತ್ತದೆ; ಯಾಕಂದರೆ ಸಾಧ್ವಿಯರು ಪತಿಯ ಸಂತೋಷಕ್ಕಾಗಿ ಸರ್ವಸಂಗಪರಿತ್ಯಾಗಿಗಳಾಗಿರುವಂತೆ, ಸುವಿಚಾರಿಗಳು ತಮ್ಮ ಪಾತಿವ್ರತ್ಯ ಧರ್ಮಾಚರಣೆಗಾಗಿ ಧರ್ಮವಿರುದ್ಧ ಸಂಗತಿಗಳ ಪರಿತ್ಯಾಗಿ ಗಳಾಗಿರುವರು! ಹೀಗೆ ತಾರತಮ್ಯದಿಂದಲೇ ಆಗಲೊಲ್ಲದೇಕೆ, ತ್ಯಾಗೈಕಲಕ್ಷಣರಾದ ಸಾಧ್ವಿಯರ, ಹಾಗು ಸುವಿಚಾರಿಗಳ ಲಕ್ಷಣಗಳಲ್ಲಿಯೂ, ಆಚರಣೆಯಲ್ಲಿಯೂ ವಿಶೇಷ ಹೆಚ್ಚುಕಡಿಮೆ ಇರುವುದಿಲ್ಲ. ಆದ್ದರಿಂದ ನಾವು ಈ ಮೊದಲೆ ಹೇಳಿರುವ ಸಾಧ್ವಿಯರ ಲಕ್ಷಣಗಳೂ, ಆಚರಣೆಗಳೂ ಈ ಸುವಿಚಾರಿಗಳಿಗೂ ಬಹು ಮಟ್ಟಿಗೆ ಸಂಬಂಧಿಸುವವೆಂದು ತಿಳಿಯತಕ್ಕದ್ದು; ಆದರೂ ಅವುಗಳಲ್ಲಿಯ ಸೂಕ್ಷ್ಮ ಭೇದವನ್ನು ಅರಿತುಕೊಳ್ಳುವದು ಅವಶ್ಯವಾಗಿರುತ್ತದೆ.

**೧ನೆಯ ಲಕ್ಷಣ––** ಈ ಮೊದಲೆ ನಾವು ಸಾಧ್ವಿಯರ ಏಳು ಲಕ್ಷಣಗಳನ್ನು ಹೇಳಿರುವೆವಷ್ಟೇ? ಅವುಗಳಲ್ಲಿ ಮೊದಲನೆಯ ಲಕ್ಷಣವೆಂದರೆ, ಸಾಧ್ವಿಯರು ತಮ್ಮ ಪತಿಯನ್ನು ದೇವರೆಂದು ತಿಳಿಯುವದು. ಆದರೆ ಮೇಲೆ ಹೇಳಿದಂತೆ ಸುವಿಚಾರಿಗಳು ತಮ್ಮ ಪತಿಯನ್ನು ದೇವರೆಂದು ತಿಳಿಯದೆ, ತಮ್ಮ ಪಾತಿವ್ರತ್ಯ ಧರ್ಮಾಚರಣೆಯ ಆಧಾರವೆಂದು ತಿಳಿಯುವದ ರಿಂದ, ಪತಿಯು ಧರ್ಮಕ್ಕೆ ಅಡ್ಡ ಬಂದಲ್ಲಿ, ಅಥವಾ ಸ್ವತಃ ಆತನು ತನ್ನ ಧರ್ಮವನ್ನು ಅತಿಕ್ರಮಿಸಿದಲ್ಲಿ ಸುವಿಚಾರಿಗಳು ಪತಿಯನ್ನು ಬೋಧಿಸಿ ಆತನನ್ನು ಹಾದಿಗೆ ತರಲು ಯತ್ನಿಸುವರು. ಇದರಿಂದ ಸುವಿಚಾರಿಗಳು ಸಾಧ್ವಿಯರಂತೆ ಸರ್ವಧರ್ಮ ಪರಿತ್ಯಾಗಿಗಳಾಗಿ ಪತಿಗೆ ಶರಣು ಹೋಗದೆ, ಪತಿಯ ಆಚರಣೆಯ ಯುಕ್ತಾಯುಕ್ತತೆಯ ಪರೀಕ್ಷಕರಾಗಿರುವದ ರಿಂದ, ಸಾಧ್ವಿಯರಂತೆ ಇವರ ಅಹಂಕಾರವು ಪೂರ್ಣ ನಷ್ಟವಾಗಿರುವುದಿಲ್ಲ.

**೨ನೆಯ ಲಕ್ಷಣ––**ಇನ್ನು ಸಾಧ್ವಿಯರ ಎರಡನೆಯ ಲಕ್ಷಣವು, ಪತಿಯ ಸಂತೋಷವೇ ಸಾಧ್ವಿಯರ ಸಂತೋಷವಾಗಿರುತ್ತದೆಂಬದು. ಈ ಲಕ್ಷಣದ ಸಂಬಂಧದ ಸುವಿಚಾರಿಗಳ ಆಚರಣೆಯು ಬಹುತರ ಸಾಧ್ವಿಯರ ಆಚರಣೆಯಂತೆಯೇ ಇರುವದು; ಆದರೆ ಧರ್ಮದ ಕಡೆಗೆ ಪತಿಯ ಮನಸ್ಸನ್ನು ತಿರುಗಿಸುವ ಯತ್ನದಲ್ಲಿ ಪತಿಯ ಮನಸ್ಸು ಅಸಮಾಧಾನಪಟ್ಟರೆ,

ಇವರು ನಿರುಪಾಯವೆಂದು ತಿಳಿಯುವರು. ಸಂಸಾರದೊಳಗಿನ ಧರ್ಮ ಸಮ್ಮತ ಕೊರತೆಗಳನ್ನು ಇವರು ಪ್ರಸಂಗವಶಾತ್ ಪತಿಗೆ ಪ್ರತ್ಯಕ್ಷವಾಗಿಯಾದರೂ ತಿಳಿಸಬಹುದು; ಪತಿಯು ಅದನ್ನು ತಿರಸ್ಕರಿಸಿದರೆ ಆತನನ್ನು ಬೋಧಿಸಲೂಬಹುದು. ಧರ್ಮಸಾಧನದ ವಿಷಯದಲ್ಲಿ ಇವರೂ ಸಾಧ್ವಿಯರಂತೆ ಕಷ್ಟಸಹಿಷ್ಣುಗಳೇ ಆಗಿರುವರು. ಒಟ್ಟಿಗೆ, ಯಾವ ವಿಷಯದಲ್ಲಿಯೇ ಆಗಲಿ, ಧರ್ಮಕ್ಕೆ ಅಸಮ್ಮತವಾಗಿ ಪತಿಯೇ ಆಗಲಿ, ಪತಿಯ ಪರಿವಾರವೇ ಆಗಲಿ ನಡೆದರೆ, ಅವರನ್ನು ಎಚ್ಚರಗೊಳಿಸುವದು ತಮ್ಮ ಕರ್ತವ್ಯವೆಂದು ಸುವಿಚಾರಿಗಳು ತಿಳಿಯುವರಲ್ಲದೆ, ಧರ್ಮ ಸಮ್ಮತ–ಸುಖ ಪ್ರಾಪ್ತಿಗಾಗಿ ಇವರು ಮನಃಪೂರ್ವಕವಾಗಿ ಯತ್ನಿಸುವರು! ಸುವಿಚಾರಿಗಳ ಈ ಉತ್ಕಟವಾದ ಧಾರ್ಮಿಕ ವೃತ್ತಿಯ ಮೂಲಕ, ಅವರ ಮನೆಯು ಪ್ರಸಂಗವಶಾತ್ ಅಶಾಂತವಾಗುತ್ತಿದ್ದರೂ, ಅದು ಧರ್ಮದ ವಾಸಸ್ಥಾನವಾಗಿರುವದರಲ್ಲಿ ಸಂಶಯವಿಲ್ಲ.

**೩ನೆಯ ಲಕ್ಷಣ**—ಪತಿವಾಕ್ಯವು ಮಂತ್ರಮೂಲವಾಗಿಯೂ, ಪತಿಯ ರೂಪವು ಧ್ಯಾನಮೂಲವಾಗಿಯೂ, ಪತಿಯ ಕೃಪೆಯು ಮೋಕ್ಷಮೂಲವಾಗಿಯೂ ತೋರುತ್ತಿರುವದು ಸಾಧ್ವೀತ್ವದ ಮೂರನೆಯ ಲಕ್ಷಣವೆಂದು ಹೇಳಿದೆಯಷ್ಟೇ? ಆದರೆ ಧರ್ಮಕ್ಕೆ ಅಸಮ್ಮತವಾದ ಪತಿಯ ವಾಕ್ಯವನ್ನು ಪಾಲಿಸಲು ಸುವಿಚಾರಿಗಳು ಹಿಂದೆ ಮುಂದೆ ನೋಡುವರು; ಆದರೆ ಪತಿಯ ರೂಪವು ಇವರಿಗೂ ಸಾಧ್ವಿಯರಂತೆ ಧ್ಯಾನಮೂಲವಾಗಿರುವದು; ಇವರು ಪತಿಯ ಕೃಪೆಯು ಮೋಕ್ಷಸಾಧನವೆಂದು ತಿಳಿಯದೆ ತಮ್ಮ ಪಾತಿವ್ರತ್ಯ ಧರ್ಮಪಾಲವು ತಮ್ಮ ಪರಗತಿಗೆ (ಲೋಕಾಂತರ ಪ್ರಾಪ್ತಿಗೆ) ಕಾರಣವೆಂದು ತಿಳಿಯುವರು.

**೪ನೆಯ ಲಕ್ಷಣ**— ಪತಿಯ ದೋಷವನ್ನು ಗುಣವಾಗಿ ತಿಳಿಯುವದು ಸಾಧ್ವಿಯರ ನಾಲ್ಕನೆಯ ಲಕ್ಷಣವೆಂದು ಹೇಳಿದೆ; ಆದರೆ ಸುವಿಚಾರಿಗಳು ಪತಿಯ ಗುಣಗಳನ್ನು ಗುಣಗಳನ್ನಾಗಿಯೂ, ದೋಷಗಳನ್ನು ದೋಷಗಳನ್ನಾಗಿಯೂ ಎಣಿಸಿ, ಶಕ್ಯವಿದ್ದ ಮಟ್ಟಿಗೆ ಪತಿಯ ದೋಷ ನಿವಾರಣಕ್ಕಾಗಿ ಯತ್ನಿಸುವರು; ಅದು ಸಾಧಿಸದಿದ್ದರೆ ಪತಿಯ ದೋಷಗಳನ್ನು ದುರ್ಲಕ್ಷಿಸಿ, ಆತನ ಗುಣಲೇಶದ ಅಭಿನಂದನದಿಂದಲಾದರೂ ತಮ್ಮ ಪತಿಭಕ್ತಿಯನ್ನು ಅಚ್ಚಳಿಯದಂತೆ ಕಾಯ್ದುಕೊಳ್ಳುವರಲ್ಲದೆ, ಪತಿಯನ್ನು ತಿರಸ್ಕರಿಸುವದಿಲ್ಲ! ಹೀಗೆ ಅನ್ಯರ ದೋಷಪರಿತ್ಯಾಗ ಮಾಡಿ ಗುಣಗ್ರಹಣ ಮಾಡವವರನ್ನು ಸಾಧುಗಳೆಂದು ಕರೆಯಬೇಕೆಂದು ಭಗವತೀ ದಾಕ್ಷಾಯಣಿಯು ತನ್ನ ತಂದೆಯಾದ ದಕ್ಷನಿಗೆ ಹೇಳಿದ್ದನ್ನು ಶ್ರೀಮದ್ಭಾಗವತದ ದಕ್ಷಯಜ್ಞಧ್ವಂಸ ಪ್ರಸಂಗದಲ್ಲಿ ನೋಡಬಹುದು.

**೫ನೆಯ ಲಕ್ಷಣ**— ಸಾಧ್ವಿಯರು ತಮ್ಮ ಬುದ್ಧಿವೈಭವ, ಜ್ಞಾನ ವೈಭವ, ಧನ ವೈಭವಾದಿಗಳನ್ನೆಲ್ಲ ತಮ್ಮ ಪತಿಯ ಚರಣಕ್ಕೆ ನಿವಾಳಿಸಿ ಚಲ್ಲಿ ಕೊಡುವಂತೆ, ಸುವಿಚಾರಿಗಳು ಚಲ್ಲಿ ಕೊಡುವದಿಲ್ಲ, ಅವನ್ನು ಪತಿಯ ಧರ್ಮಸಮ್ಮತ ಸುಖ ವೃದ್ಧಿ ಮುಖಾಂತರ ತಮ್ಮ ಧರ್ಮಸಮ್ಮತ ಸುಖವನ್ನು ಅಭಿವೃದ್ಧಿಗೊಳಿಸಲಿಕ್ಕೆ ಉಪಯೋಗಿಸುವರು. ಇನ್ನು, ಸಾಧ್ವಿಯರಂತೆ ಸುವಿಚಾರಿಗಳು ಪತಿಯ ವಿಶ್ವಾಸದ ಸರ್ವ ಬಳಗವಾಗಿರುವದರಲ್ಲಿ ಮಾತ್ರ ಆಕ್ಷೇಪವಿಲ್ಲ.

ಆದರೆ ಇಲ್ಲಿಯೂ ಅವರ ಧರ್ಮದೃಷ್ಟಿಯು ತೆರದಿರುತ್ತದೆಂಬದನ್ನು ಮರೆಯಲಾಗದು. ಇನ್ನು ಸಾಧ್ವಿಯರು ಸ್ವತಃ ವಿಷಯ ವಿರಾಗಿಗಳಾಗಿದ್ದು ಪತಿಯ ಸಲುವಾಗಿ ವಿಷಯರಾಗಿಗಳಾಗಿರುವಂತೆ, ಸುವಿಚಾರಿಗಳ ಸ್ಥಿತಿಯು ಇರುವದಿಲ್ಲ. ಅವರು ಧರ್ಮವಿರುದ್ಧವಾದ ವಿಷಯ ಸುಖಭೋಗದಲ್ಲಿ ಮಾತ್ರ ವಿರಾಗಿಗಳಾಗಿದ್ದು, ಧರ್ಮಸಮ್ಮತ ವಿಷಯ ಭೋಗದಲ್ಲಿ ಅವರು ರಾಗಿಗಳಾಗಿರುವರು; ಆದರೆ ಧರ್ಮಕ್ಕೆ ವಿರುದ್ಧವಲ್ಲದ ಆ ವಿಷಯರಾಗವು ಪತಿಗೆ ಬೇಡಾಗಿದ್ದರೆ ಸುವಿಚಾರಿಗಳು ಅದನ್ನು ಪರಿತ್ಯಜಿಸುವರು; ಮತ್ತು ದುರ್ದೈವದಿಂದ ತಮ್ಮ ಪತಿಯು ಮರಣ ಹೊಂದಿದರೆ, ಸಾಧ್ವಿಯರಂತೆ ಸುವಿಚಾರಿಗಳಾದರೂ ತಮ ಯೋಗ್ಯತೆಗನುಸರಿಸಿ, ಪತಿಯ ಸಹಗಮನಿಗಳು. ಅಥವಾ ಕಠಿಣತರ ವ್ರತಾವಲಂಬಿಗಳು ಆಗಬಹುದಲ್ಲದೆ ಸಹಜ ದೇಹತ್ಯಾಗಿಗಳಾಗುವದು ಅಪರೂಪವು.

**೬ನೆಯ ಲಕ್ಷಣ**— ಪತಿಯ ವಿಶ್ವಾಸದ ಸರ್ವ ಬಳಗವಾಗುವದು ಸಾಧ್ವೀತ್ವದ ಆರನೆಯ ಲಕ್ಷಣವೆಂದು ಹೇಳಿರುತ್ತದೆ. ಪತಿಯು ಯಾವದೊಂದು ಕಾರ್ಯದ ವಿಷಯದ ಆಲೋಚನೆ ಯನ್ನು ಕೇಳಿದರೆ ಮಾತ್ರ ಸಾಧ್ವಿಯರು ಪತಿಯ ಮನಸ್ಸು ನೋಯದಂತೆ ವಿಯನದಿಂದ ಆಲೋಚನೆ ಹೇಳುವರು; ಆದರೆ ಸುವಿಚಾರಿಗಳು, ಪತಿಯು ಕೇಳಲಿ, ಕೇಳದಿರಲಿ, ತಮಗೆ ಸರಿದೋರಿದ ಆಲೋಚನೆಯನ್ನು ಪತಿಯ ಮನಸ್ಸು ನೊಂದರೂ ಹೇಳಿಲಿಕ್ಕೆ ಹಿಂದೆ ಮುಂದೆ ನೋಡುವದಿಲ್ಲ. ಇವರು ಪತಿಯ ಅಥವಾ ಅನ್ಯರ ಯಾವ ಅಪರಾಧಗಳನ್ನಾದರೂ ಅವರ ಮುಂದೆ ಇಡಲು ಹಿಂದೆ ಮುಂದೆ ನೋಡುವದಿಲ್ಲ. ಉಳಿದ ಮಾತುಗಳಲ್ಲಿ ಇವರ ಆಚರಣೆಯು ಸಾಧ್ವಿಯರಂತೆಯೇ ಇರುವದು.

**೭ನೆಯ ಲಕ್ಷಣ**— ಸ್ವತಃ ವಿಷಯ ವಿರಾಗಿಗಳಾಗಿದ್ದು, ಪತಿಯ ಸಲುವಾಗಿ ವಿಷಯ ರಾಗಿಗಳಾಗಿರುವದು ಸಾಧ್ವೀತ್ವದ 7ನೆಯ ಲಕ್ಷಣವೆಂದು ಹೇಳಿದೆ. ಆದರೆ ಸುವಿಚಾರಿಗಳು ಅಧರ್ಮತ್ಯಾಗಿಗಳಲ್ಲದೆ ಸಾಧ್ವಿಯರಂತೆ ಸರ್ವ ಧರ್ಮ ತ್ಯಾಗಿಗಳಲ್ಲ. ಇವರು ಸಕಾಮ ತಪಸ್ವಿಗಳಾಗಿರುವರು.

ನಾವು ಸಾಧ್ವಿಯರ ಹಾಗು ಸುವಿಚಾರಿಗಳ ಆಚಾರ ವಿಚಾರಗಳಲ್ಲಿಯ ಕೆಲವು ಸೂಕ್ಷ್ಮಭೇದವ ಸೂಚಿಸಿದ್ದನ್ನು ವಾಚಕರು ಮನಸ್ಸಿನಲ್ಲಿ ತೂಗಿ ನೋಡತಕ್ಕದ್ದು. ಈ ಸುವಿಚಾರಿಗಳ ಮೇಲು ಪಂಗ್ತಿಯಲ್ಲಿ ಪಾಂಡವ ಪತ್ನಿಯಾದ ದ್ರೌಪದಿಯನ್ನು ಇಟ್ಟುಕೊಂಡು, ಮಹಾಭಾರತದಲ್ಲಿಯ ಆಕೆಯ ಆಚಾರ ವಿಚಾರಗಳನ್ನು ಪರ್ಯಾಲೋಚಿಸಿ ನೋಡಿದರೆ, ಸುವಿಚಾರಿಗಳ ಯೋಗ್ಯತೆಯೂ ಸಾಮಾನ್ಯವಾದದ್ದಿರದೆ, ಅವರೂ ಸಾಧ್ವಿಯರಂತೆ ಸ್ವಪರೋದ್ಧಾರಕ ರಾಗಿರುವರೆಂಬ ಮಾತು ಗೊತ್ತಾಗಬಹುದು. ಸುವಿಚಾರಿಗಳು ಶಾಸ್ತ್ರೋಕ್ತವಾದ ತಮ್ಮ ಪಾತಿವ್ರತ್ಯ ಧರ್ಮವನ್ನು ಯಥಾರ್ಥವಾಗಿ ಪಾಲಿಸಿದ ಮಾನದಿಂದ, ಅವರಿಗೆ ಶಾಸ್ತ್ರೋಕ್ತವಾದ ಪತಿಲೋಕಾದಿ ಉಚ್ಚ ಲೋಕಗಳ ಪ್ರಾಪ್ತಿಯಾಗುವದೆಂದು ತಿಳಿಯತಕ್ಕದ್ದು; ಆದರೆ ನಿಷ್ಕಾಮ ತಪಸ್ವಿಗಳಾದ ಸಾಧ್ವಿಯರಂತೆ, ಇವರಿಗೆ ಈಶ್ವರ ಕೃಪಾಲಬ್ಧ ಮೋಕ್ಷಪ್ರಾಪ್ತಿಯು ಆಗಲಾರದು.

ಈ ಸುವಿಚಾರಿ ವರ್ಗದಲ್ಲಿ ದ್ರೌಪದಿಯಂತೆ, ಅಹಲ್ಯಾ, ತಾರಾ, ಮಂಡೋದರೀ ಮೊದಲಾದ ಪ್ರಾತಸ್ಮರಣೀಯ ಸ್ತ್ರೀಯರು ಬರುವರು.

ಈ ಮೇರೆಗೆ ಬೋಧಿಸಿ ಶ್ರೀ ಮುರಗೀಶ ಗುರವರನು ಗುರು ಶಾಂತಪ್ಪನನ್ನು ಕುರಿತು— ಗುರುಶಾಂತಪ್ಪಾ, ಇಂದು ಲೋಕವಂದ್ಯರಾದ ಸಾಧ್ವಿಯರ, ಹಾಗು ಸುವಿಚಾರಿಗಳ ಗುಣವರ್ಣನದಿಂದ ಆನಂದಿತವಾದ ನಮ್ಮ ಮನಸ್ಸನ್ನು, ಲೋಕನಿಂದ್ಯರಾದ ಸುಖಲೋಪವರ, ಹಾಗು ಸಾಹಸಿಗಳ ಗುಣಕಥನದಿಂದ ಕಲುಷಿತವಾಗಿ ಮಾಡುವದು ಬೇಡ; ಆದ್ದರಿಂದ ಇಂದಿನ ಪ್ರವಚನವನ್ನು ನಿಲ್ಲಿಸಿಬಿಡೋಣ. ಮೇಲಾಗಿ ಲಿಂಗಪೂಜೆಯ ಕಾಲವೂ ಸಮೀಪಿಸಿತು. ಇಂದಿನ ಸಾಯಂಕಾಲದ ಲಿಂಗಪೂಜೆಯು ನಮ್ಮ ಮುದ್ದಣ್ಣನ ಮನೆಯಲ್ಲಿಯೇ ಆಗಲಿ, ಯಾಕಂದರೆ, ನಿನ್ನಿನ ರಾತ್ರಿಯ ಸ್ವಪ್ನದಲ್ಲಿ ಮುದ್ದಣ್ಣನಿಗೂ, ಸಾಧ್ವೀ ಶ್ರೀಮತಿಗೂ ಕರುಣಾ ಪ್ರಸಾದವು ದೊರೆಯದಿದ್ದದ್ದರಿಂದ, ಅವರಿಬ್ಬರಿಗೂ ಬಹಳ ಅಸಮಾಧಾನವಾಗಿದೆ. ಅದಕ್ಕಾಗಿ ಇಂದು ಪ್ರಸಾದವಿತ್ತು ಅವರನ್ನು ಸಮಾಧಾನಗೊಳಿಸುವದು ಅವಶ್ಯವಾಗಿರುವದು. ಅನ್ನಲು, ಸಾಧ್ವೀ ಶ್ರೀಮತಿಯು ಆನಂದಪರವಶಳಾಗಿ ತನ್ನ ಪತಿಯ ಕಡೆಗೆ ನೋಡುವದಕ್ಕೂ, ಮುದ್ದಣ್ಣನ ದೃಷ್ಟಿಗಳು ಆ ಸಾಧ್ವಿಯ ದೃಷ್ಟಿಗಳ ಸ್ವಾಗ ಮಾಡುವಂತೆ ಆತನು ಶ್ರೀಮತಿಯ ಕಡೆಗೆ ನೋಡಲಿಕ್ಕೂ ಗಂಟೇ ಬಿದ್ದಿತು; ಆಗ ಮುದ್ದನು ಪರಮಾನಂದದಿಂದ ಶ್ರೀ ಗುರುವರನಿಗೆ ಸಾಷ್ಟಾಂಗವಾಗಿ ಎರಗಿ ಕೈಜೋಡಿಸಿ ನಿಂತುಕೊಂಡನು. ಆದರೆ ಗುರುಮಹಿಮೆಯ ದರ್ಪದಿಂದ ನಮ್ರವಾಗಿ ಹೋಗಿದ್ದ ಆತನ ಮುಖದಿಂದ, ಶಬ್ದಗಳು ಹೊರಡುವದು ಅಶಕ್ಯವಾಗಿರಲು, ಆತನು ಸುಮ್ಮನೆ ಕೈಜೋಡಿಸಿ ನಿಂತವನು ನಿಂತುಬಿಟ್ಟನು. ಸ್ವಪ್ನದ ಸಂಗತಿಯನ್ನು ಕೇಳಿ ಸಾಧ್ವೀ ಶ್ರೀಮತಿಯೂ, ಮುದ್ದನೂ, ಗುರುಶಾಂತಪ್ಪನೂ, ರಣಹುಚ್ಚಿಯೂ, ಚುಕ್ಕಪ್ಪನೂ ಪರಮಾಶ್ಚರ್ಯಪಟ್ಟರು. ಆದರೆ ಅವರ ಆಶ್ಚರ್ಯದ ಬೇರೆ ಬೇರೆ ಕಾರಣಗಳನ್ನು ನಾವು ಹೇಳುವದಕ್ಕಿಂತ, ಅವನ್ನು ತರ್ಕಿಸುವ ಕೆಲಸವನ್ನು ವಾಚಕರಿಗೆ ಒಪ್ಪಿಸುವದರಲ್ಲಿಯೇ ಸ್ವಾರಸ್ಯವಿರುವದು.

## ಪತಿ ಭಕ್ಷಕ ಸ್ತ್ರೀವರ್ಗಗಳು!

ಸಂತರ ವಿಭೂತಿಯು ಜಗತ್ಕಲ್ಯಾಣಕ್ಕಾಗಿ ಇರುತ್ತದೆಂಬ ಮಾತು ಸುಳ್ಳಲ್ಲ, ಈ ಜಗತ್ತಿನಲ್ಲಿ ಸಂತರು, ಸಾಧುಗಳು ಸತ್ಪುಷರು, ಸದ್ಗುರುಗಳು ಎಂಬು ಕರೆಸಿಕೊಳ್ಳುವವರು ಬಹು ಜನರು ಇರಬಹುದು. ಅವರಲ್ಲಿ ಕೆಲವರು ಕಲ್ಲುಕೊಟ್ಟು ಬಂಗಾರವಮಾಡಬಹುದು, ಕೆಲವರು ಸತ್ತವರನ್ನು ಬದುಕಿಸಬಹುದು, ಕೆಲವರು ಬಂಜೆಗೆ ಮಕ್ಕಳು ಕೊಡಬಹುದು, ಕೆಲವರು ನೀರಮೇಲೆ ನೆಡೆಯಬಹುದು, ಕೆಲವರು ಭೂತ ಭವಿಷ್ಯದ್ವರ್ತಮಾನಗಳನ್ನು ತಿಳಿಯಬಹುದು, ಕೆಲವರು ಇನ್ನೇನೇನೋ ಇಂಥ ಅದ್ಭುತ ಕಾರ್ಯಗಳನ್ನು ಮಾಡಬಹುದು; ಆದರೆ ಅವರು

ತಮ್ಮ ಇಂತಹ ಕೇವಲ ವಿವಿಧ ಕ್ಷುದ್ರ ಸಿದ್ಧಿಗಳಿಂದ ಜಗತ್ತಿನ ಜನರ ಮೋಹವನ್ನು ಹೆಚ್ಚಿಸಿ, ಅವರ ವಿವಿಧ ವಾಸನಾಗಳನ್ನು ಬೆಳಸಬಹುದಲ್ಲದೆ, ಅಡ್ಡ ಹಾದಿಯಿಂದ ಹೋಗುವವರನ್ನು ಒಳ್ಳೆಯ ಹಾದಿಗೆ ಹಚ್ಚಲಾರರು! ಆದರೆ ನಿಜವಾದ ಸದ್ಗುರುಗಳ ಮಾತು ಹಾಗಲ್ಲ. ನಿಜವಾದ ಸದ್ಗುರುಗಳು, ತಮ್ಮ ಕಾಲಮೇಲೆ ಉರುಳಾಡುತ್ತಿರುವ ಇಂತಹ ವಿವಿಧ ಕ್ಷುದ್ರಸಿದ್ಧಿಗಳಿಗೆ ಬೆಲೆಕೊಡದೆ, ತಮಗೆ ಶರಣು ಬಂದವರ ದುರ್ಗುಣ–ದುರಾಚಾರಗಳ ಕೆಟ್ಟ ಹಾದಿಯನ್ನು ಬಿಡಿಸಿ, ಅವರನ್ನು ಸದ್ಗುಣ– ಸದಾಚಾರಗಳ ಒಳ್ಳೆಯ ಹಾದಿಗೆ ಹಚ್ಚುತ್ತ ಅವರ ಅಭಿಮಾನ ವಾಸನಾಗಳ ನಾಶ ಮಾಡುತ್ತ ಕಡೆಗೆ ಪರಮಾತ್ಮನ ದರ್ಶನದಿಂದ ಅವರಿಗೆ ಸದಾನಂದದ ಅನುಭವವನ್ನುಂಟುಮಾಡಿ ಕೊಡುವರು ಆದ್ದರಿಂದ ತಮಗೆ ಶರಣು ಬಂದವರ ಅಡ್ಡ ಹಾದಿಯನ್ನು ಬಿಡಿಸಿ, ಅವರನ್ನು ಒಳ್ಳೆಯ ಹಾದಿಗೆ ಹಚ್ಚುವದೇ ನಿಜವಾದ ಸದ್ಗುರುಗಳ ಮುಖ್ಯವಾದ ಪ್ರಥಮ ಲಕ್ಷಣವೆಂದು ತಿಳಿಯತಕ್ಕದ್ದು. ನಿಜವಾದ ಸದ್ಗುರುಗಳು ಕಸ್ತೂರಿಯಿದ್ದ ಹಾಗೆ; ಉಳಿದವರು ಕಸ್ತೂರಿಯ ವಾಸನೆಯಿದ್ದ ಎರಿಯಮಣ್ಣು ಇದ್ದ ಹಾಗೆ!

ನಮ್ಮ ಮುರಗೀಶ ಗುರವರನು ನಿಜವಾದ ಸದ್ಗುರುನಾಥನಾಗಿದ್ದನೆಂಬದನ್ನು ಈಗ ಪ್ರತ್ಯಕ್ಷ ಮನಗಾಣಬಹುದು; ಯಾಕಂದರೆ ಅಡ್ಡಹಾದಿಯನ್ನು ಹಿಡಿದಿದ್ದ ದಳವಾಯಿ ಮುದ್ದಣ್ಣನು, ಮಹಾಮಹಿಮನ ದರ್ಶನಮಾತ್ರದಿಂದ ನಮ್ರನಾದದ್ದಲ್ಲದೆ, ಆ ಗುರುವರನ ಅಲ್ಪಕಾಲದ ಬೋಧದ ಶ್ರವಣಮಾತ್ರದಿಂದ ತಾನು ಹಿಡಿದಿದ್ದ ಕೆಟ್ಟಹಾದಿಗೆ ಹೇಸಿದನು. ಇತ್ತ ತರುಣಿಯಾಗಿದ್ದ ರಣಹುಚ್ಚಿಯು, ಕಿವಿಯಲ್ಲಿ ಗಾಳಿತುಂಬಿದ ಎಳೆಗರವು ಎಚ್ಚರಗೆಟ್ಟು ಓಡುವಂತೆ, ಅಭಿಮಾನದ ಗಾಳಿತುಂಬಿ ಮನಸ್ಸಿಗೆ ಬಂದಂತೆ ಎತ್ತೋ ಸಾಗಿಬಿಟ್ಟಿದ್ದ ತನ್ನಲ್ಲಿ ಸಾಧ್ವಿಯರ ಅಥವಾ ಸುವಿಚಾರಿಗಳ ಲಕ್ಷಣಗಳು ಇರುವದಿಲ್ಲವಲ್ಲ; ತಾನೆಲ್ಲಿ ಪತಿಭಕ್ತಿಕ ಸ್ತ್ರೀಯಾಗಿರುವೆನೋ ಏನೊ'' ಎಂದು ಪಶ್ಚಾತ್ತಾಪ ಪಡುತ್ತ ಮುಂದಿನ ಗುರುಬೋಧದ ಶ್ರವಣದ ವಿಷಯದಲ್ಲಿ ಅತ್ಯಾತುರಳಾಗಿದ್ದಳು. ಅದರಂತೆ, ಸಾಧ್ವೀ ಶ್ರೀಮತಿಯು— ''ನಾನು ಈವರೆಗೆಬದುಕಿ ಬಾಳಿದ್ದು ಸಾರ್ಥಕವಾಯಿತು. ಸದ್ಗುರುನಾಥನು ಈವರೆಗೆ ನನ್ನನ್ನು ಚೆನ್ನಾಗಿ ನಡಿಸಿಕೊಂಡು ಬಂದನು. ಮುಂದೆಯೂ ಹೀಗೆಯೇ ನಡಿಸಿಕೊಡಲು ಆತನು ಸಮರ್ಥ ನಿರುವನು! ನನಗೆ ಇದಕ್ಕೂ ಹೆಚ್ಚಿನದು ಏನು ಬೇಕಾಗಿದೆ?'' ಎಂದು ಅತ್ಯಂತ ಸಮಾಧಾನವನ್ನು ತಾಳಿದಳು. ಅತ್ತ ಸಾಧುಸ್ವಭಾವದ ಗುರುಶಾಂತಪ್ಪನು— ''ತನಗಾದ ಇಂದಿನ ಲಾಭವು ಅಲಭ್ಯವೆಂ''ದು ಸಮಾಧಾನ ಪಡುತ್ತಿದ್ದರೆ, ಇತ್ತ ರಣಹುಚ್ಚಿಯ ಮೇಲಿನ ಚುಕ್ಕಪ್ಪನ ಸಿಟ್ಟು ಝುರ್ರನೆ ಇಳಿದು ಹೋಯಿತು! ಹೀಗೆ ಅಲ್ಲಿರುವವರೆಲ್ಲರ ಮನಸ್ಸುಗಳನ್ನು ಆಕರ್ಷಿಸಿಕೊಂಡು ಅವುಗಳ ಸ್ಥಿತಿಗತಿಗಳಿಗೆ ತಕ್ಕಷ್ಟು ಅವವುಗಳ ಮೇಲೆ ಸತ್ಪರಿಣಾಮವನ್ನುಂಟು ಮಾಡಿದ ಮಹಾತ್ಮನು, ಮಾಯಾಮೋಹನಿವಾರಕ ಸದ್ಗುರುವೆಂಬದರಲ್ಲಿ ಸಂಶಯವೇನು? ಆ ಸದ್ಗುರುನಾಥನ ಅಂದಿನ ಪ್ರದೋಷಕಾಲದ ಲಿಂಗಪೂಜೆಯ ದರ್ಶನದಿಂದ ಆ ಪುಣ್ಯವಂತರ ದೇಹಗಳು ಆನಂದ ಪುಳಕಿತಗಳಾಗಿ ಜುಮ್ಮೆಂದು ಕಂಪಿಸುತ್ತಿರುವಾಗ, ಅವರ ದೇಹದಲ್ಲಿಯ ಪಾಪಗಳು ದಗ್ಧವಾಗಿ ಅವರ ದೇಹಗಳು ಪವಿತ್ರವಾದವು; ಮತ್ತು ಅಂದಿನ

ಮಹಿಮನ ಪ್ರಸಾದ ಗ್ರಹಣದಿಂದ ಅವರಲ್ಲಿಯ ದುರ್ಗುಣ– ದುರಾಚಾರಗಳ ಬೇರು ಸಡಿಲಿ, ಅವರಲ್ಲಿ ಧರ್ಮವಾಸನೆಯು ಬೇರು ಬಿಟ್ಟು ಬೆಳೆಯಿತು; ಅಲ್ಲದೆ ಈ ಮಹಾ ಮಹಿಮನು ನಿಶ್ಚಯವಾಗಿ ನಮ್ಮನ್ನು ಉದ್ಧರಿಸುವನೆಂಬ ನಂಬಿಗೆಯು ಉಂಟಾಗಲು, ಅವರ ಮನಸ್ಸು ಶಾಂತವಾಗಿ, ಅವರು ಮುಂದಿನ ಬೋಧ ಶ್ರವಣಕ್ಕಾಗಿ ಆತುರಪಡ ತೊಡಗಿದರು; ಇಂತಹ ವೃತ್ತಿ—ಸತ್ಪರಿವರ್ತನವು ಸಾಮಾನ್ಯರಿಂದ ಆಗಬಹುದೆ? ಆದ್ದರಿಂದ ಈ ಪ್ರಸಂಗದಲ್ಲಿ ನಮಗೆ ತಟ್ಟನೆ ನೆನಪಾದ—''ಗುರುವೋ ಬಹವಃ ಸಂತಿ ಶಿಷ್ಯವಿತ್ತಾಪ ಹಾರಾಕಾಃ ಗುರುವೋವಿರಲಾಸ್ಸಂತಿ ಶಿಷ್ಯ ಚಿತ್ತಾಪಹಾರಕಾಃ'' ಎಂಬ ಸಾಧೂಕ್ತಿಯನ್ನು ಇಲ್ಲಿ ಉಲ್ಲೇಖಿಸುವದು ಅವಶ್ಯವಾಗಿರುವದು.

''ಸೆಟ್ಟಿ ಇಳಿದಲ್ಲಿ ಪಟ್ಟಣವೆಂ''ಬಂತೆ ಸದ್ಗುರುಗಳ ವಾಸಸ್ಥಳವು ಸುವಿಚಾರಗಳ ತವರುಮನೆಯಾಗುವಲ್ಲಿ ಸಂಶಯವಿಲ್ಲ, ಅದರಂತೆ, ಮನಸ್ಸಿನ ವಿವಿಧ ವಿಕಾರಗಳಿಗೆ ಆಸ್ಪದವಾಗಿದ್ದ ಮುದ್ದಣ್ಣನ ಆ ಅಂತರ್ಗೃಹವು, ಅಂದು ಸುವಿಚಾರಾಸ್ಪದವಾದ ಸದ್ಗುರುವಿನ ಪ್ರವಚನದ ಶಾಂತವಾದ ಮಂದಿರವಾಯಿತು! ಮರುದಿನದ ಮಧ್ಯಾಹ್ನ ಊಟವಾದ ಕೂಡಲೆ, ಸದ್ಗುರುವಿನ ಅಂದಿನ ಬೋಧಶ್ರವಣದ ಆತುರತೆಯಿಂದ ಮುದ್ದಣ್ಣನೇ ಮೊದಲಾದ ಆ ನಾಲ್ವರೂ ವಿಶ್ರಮಿಸದೆ ಆ ಅಂತಗೃರ್ಹದಲ್ಲಿ ಬಂದು ಕೂಡಿದರು. ಬೀಳುಭೂಮಿಯಲ್ಲಿ ಬೆಳೆಯು ಭರದಿಂದ ಬರುವಂತೆ, ಮುದ್ದಣ್ಣ–ಚುಕ್ಕಪ್ಪಗಳ ಮನಸ್ಸುಗಳೆಂಬ ಭಕ್ತಿಹೀನವಾದ ಬೀಳುಭೂಮಿಯಲ್ಲಿ ಶ್ರೀಮುರಗೀಶ ಗುರುವರನು ಬಿತ್ತಿದ ಭಕ್ತಿಯ ಮೊಳೆಕೆಯು ಭರದಿಂದ ಬೆಳೆಯತೊಡಗಲು, ಅವರು, ನಮ್ಮ ಸದ್ಗುರುನಾಥನನ್ನು ಯಾವ ಬಗೆಯಿಂದ ಸತ್ಕರಿಸಬೇಕೆಂಬ ಲೌಕಿಕ ವಿಚಾರದಲ್ಲಿ ಮಗ್ನರಾಗಿದ್ದರು. ಮುದ್ದಣ್ಣನ ಸೂಚನೆಯಂತೆ ಶ್ರೀಮತಿಯು ತನ್ನ ತಂದೆಯ ಸಹಾಯದಿಂದ ಸದ್ಗುರುನಾಥನಿಗಾಗಿ ಉಚ್ಚಪೀಠವನ್ನು ರಚಿಸಿ, ಅದನ್ನು ಮನಃ ಪೂರ್ವಕವಾಗಿ ಅಲಂಕರಿಸುತ್ತಿರಲು ಆಕೆಗೆ ಹೊತ್ತೇ ಸಾಲದಾಯಿತು! ನಿನ್ನೆ ಸೆರೆಯಾಳಾಗಿದ್ದ ರಣಹುಚ್ಚಿಯು, ಇಂದು ಶ್ರೀಮತಿಯ ಆದರದ ಅತಿಥಿಯಾಗಿ, ಆ ಸಾಧ್ವಿಯ ಗುರು ಪೀಠಾಲಂಕರಣದ ಕೆಲಸದಲ್ಲಿ ಪರಮ ಆಪ್ತಳಂತೆ ಸಾತ್ವಿಕಭಾವದಿಂದ ದುಡಿಯುತ್ತಲಿದ್ದಳು; ಆಗ ಚುಕ್ಕಪ್ಪನು ಅವಶ್ಯದ ವಸ್ತುಗಳನ್ನು ಭಕ್ತಿಯಿಂದ ಅತ್ತಿಗೆಗೆ ಒದಗಿಸಿಕೊಡುತ್ತಿರುವಾಗ, ತನ್ನ ಸೇನಾಪತಿಯ ಒಗರನ್ನು ಮರೆತುಬಿಟ್ಟಿದ್ದನು. ಅತ್ತ ಮುದ್ದಣ್ಣನು ಪೀಠಾಲಂಕರಣದ ಕಾರ್ಯವನ್ನು ಮುಂಬರಿದು ಆಸಕ್ತಿಯಿಂದ ನೋಡುತ್ತ ತನಗೆ ತೋಚಿದ ವಿಚಾರಗಳನ್ನು ಸೂಚಿಸುತ್ತ ತನ್ನ ಹೆಂಡತಿಯ ಭಕ್ತಿಭಾವದ ಕಾರ್ಯಾಸಕ್ತಿಗಾಗಿ ಸಂತೋಷಪಡುತ್ತಲಿದ್ದನು.

ಹೀಗಿರುವಾಗ, ಶ್ರೀಗುರುನಾಥನು ವಿಶ್ರಮಿಸಿ ಕುಳಿತಿರುವದು ಗೊತ್ತಾಗಲು, ಗುರು ಶಾಂತಪ್ಪನು ಶ್ರೀಗುರು ಸನ್ನಿಧಿಗೆ ಹೋಗಿ ಸಾಷ್ಟಾಂಗವೆರಗಿ ಕೈಜೋಡಿಸಿಕೊಂಡು, ಶ್ರೀಗುರು ಚರಣಗಳಲ್ಲಿ ದೃಷ್ಟಿಯನ್ನಿಟ್ಟು ಸುಮ್ಮನೆ ಕುಳಿತುಕೊಂಡನು. ಆಗ ಸದ್ಗುರುನಾಥನು ಆ ಭಾವಿಕ ಭಕ್ತನನ್ನು ಗಂಭೀರಭಾವದಿಂದ ನೋಡುತ್ತ, ಕೆಲವು ಕಾಲ ಸುಮ್ಮನೆ ಕುಳಿತುಕೊಂಡಿದ್ದು ಆಮೇಲೆ ಆತನನ್ನು ಕುರಿತು— ಗುರುಶಾಂತಪ್ಪಾ, ಇನ್ನು ಬರಬರುತ್ತ ಕಾಲಗಳು ಕಠಿಣ

ಬರುವವು. ಇನ್ನು ಉಂಟಾಗುವ ಅನರ್ಥ ಪರಂಪರೆಗಳಿಗೆ ಜಗತ್ತೇ ನಡಗುವಾಗ, ಜಗತ್ತಿನೊಳಗಿನ ಕ್ಷುದ್ರಪ್ರಾಣಿಗಳಾದ ಮನುಷ್ಯರು ನಾವು ನಡುಗುವದೇನಾಶ್ಚರ್ಯವು! ಇನ್ನು ಹಿರಿಯರು ಕಿರಿಯರು ಎಂಬ ಬೇದವು ಉಳಿಯುವದಿಲ್ಲ, ಜ್ಞಾನಿಗಳೂ, ಅಜ್ಞಾನಿಗಳೂ ಸಮಾನಯೋಗ್ಯತೆಯವರಾಗುವರು. ತಗ್ಗು-ದಿನ್ನೆಗಳೆಂಬ ಭೇದ ಉಳಿಯಬಾರದೆಂದು ಘಾತಕವಾದ ಕೃತ್ರಿಮ ಸಮತಾಭಾವದಿಂದ ಸ್ವೇಚ್ಛಾಚಾರವು ಹೆಚ್ಚುವದರಿಂದ, ಧರ್ಮ-ನೀತಿ -ಶಾಸ್ತ್ರ- ಪುರಾಣ ಮೊದಲಾದವು ಮೂಲೆಗೆ ಬೀಳುವವು. ಗಂಡನ ಹಂಗು ಹೆಂಡತಿಗೆ ಉಳಿಯುವದಿಲ್ಲ, ತಂದೆಯ ಹಂಗು ಮಕ್ಕಳಿಗೆ ಉಳಿಯುವದಿಲ್ಲ. ಇಂಥ ಕಾಲದಲ್ಲಿ ವಿವೇಕಿಗಳಾದವರು ಅನ್ಯರನ್ನು ಬೋಧಿಸುವ ಗೊಡವಿಗೆ ಹೋಗದೆ, ಜ್ಞಾನಿಗಳ ಭವಿಷ್ಯದಂತೆ ಆಗುತ್ತಿರುವದನ್ನು ನೋಡುತ್ತ ಕಾಲಮಹಿಮೆಯಿಂದಾಗುವ ಅನರ್ಥಗಳ ಪರಂಪೆರಗಳಿಗಾಗಿ ಒಂದು ಬಗೆಯಿಂದ ಸಮಾಧಾನಪಡುತ್ತ ಸುಮ್ಮನಿರವುದೇ ಲೇಸು! ಯಾಕೆ ಗುರುಶಾಂತಪ್ಪಾ, ನಾವು ಹೇಳುವದು ನಿಜವಲ್ಲವೆ?'' ಎಂದು ಕೇಳಲು, ಗುರುಶಾಂತಪ್ಪನು— ''ಹೌದು ಮಹಾಸ್ವಾಮಿ, ಅಪ್ಪಣೆ ಕೊಡಿಸಿದ್ದು ಯಥಾಸ್ಥಿತವು; ಆದರೆ ಸದ್ಗುರು ಬೋಧವಿಲ್ಲವಾದರೆ ಜಗತ್ತಿನ ಕಣ್ಣೇ ಹೋದಹಾಗಾದೀತಲ್ಲ! ಹತಭಾಗ್ಯರು ಗುರುಬೋಧದಂತೆ ನಡೆಯದಿದ್ದರೆ ಅದಕ್ಕೇಕೆ ಮಹತ್ವ? ಅವರು ತಮ್ಮ ಕರ್ಮಫಲವನ್ನು ತಾವು, ಉಣ್ಣುವರು; ಆದರೆ ವಿವೇಕಿಗಳಾದವರಿಗೆ ಹಾದಿ ಗೊತ್ತಾಗಬೇಕಲ್ಲವೆ?'' ಅನ್ನಲು, ಮುರಗೀಶ ಗುರವರನು ಮುಗುಳುನಗೆ ನಗುತ್ತ— ''ಸರಿ, ನಿನ್ನ ಮಾತು ನಿಜವು! ಅವರವರು ತಮ್ಮ ತಮ್ಮ ಕರ್ತವ್ಯಗಳನ್ನು ಮಾಡಲೇಬೇಕು; ದ್ರೋಣ-ಭೀಷ್ಮಾದಿ ಜ್ಞಾನಿಗಳು ಕಡೆತನಕ ದುರ್ಯೋಧನನಿಗೆ ತಮ್ಮ ಕರ್ತವ್ಯವೆಂದು ಹಿತದ ಮಾತುಗಳನ್ನು ಹೇಳಲಿಲ್ಲವೆ? ನಡೆ, ನಾವು ಪ್ರವಚನಕ್ಕಾಗಿ ಅಂತರ್ಗೃಹಕ್ಕೆ ಹೋಗುವಾ.''

ಈ ಮೇರೆಗೆ ನುಡಿದು ಶ್ರೀಮುರುಗೀಶ ಗುರವರನು ಗುರುಶಾಂತಪ್ಪನೊಡನೆ ಶ್ರೀಮತಿಯ ಅಂತರ್ಗೃಹಕ್ಕೆ ಬರಲು ಎಲ್ಲರೂ ಸಾಷ್ಟಾಂಗವೆರಗಿ ಕೈಜೋಡಿಸಿ ನಿಂತುಕೊಂಡರು. ಆಗ ಗುರುಶಾಂತಪ್ಪನು ನಯ-ಭಯ-ಭಕ್ತಿಯಿಂದ ಗುರುವರನನ್ನು ಕುರಿತು— ''ಪೀಠವ ಅಲಂಕರಿಸುವದಾಗಬೇಕು'' ಎಂದು ಪ್ರಾರ್ಥಿಸಲು, ಅದಕ್ಕೆ ಶ್ರೀ ಮುರುಗೀಶನು ಮೃದುಹಾಸದಿಂದ ''ವಿರಕ್ತರಿಗೇಕೆ ಈ ರಾಜವೈಭವ ಪೀಠವು? ಆಗಲಿ, ಭಕ್ತರ ಸಂತೋಷವು'' ಎಂದು ನುಡಿಯುತ್ತ, ಗುರುಶಾಂತಪ್ಪನು ಕೈಕೊಡಲು, ಪೀಠದಲ್ಲಿ ಮುಹೂರ್ತಮಾಡಿದನು. ಅದನ್ನು ನೋಡಿ ಆ ಭಕ್ತರ ಕೌತುಕಾನಂದವು ಅವರ ಹೃದಯದಲ್ಲಿ ಉಕ್ಕೇರಿತು! ಆಗ ಎಲ್ಲರ ಮನಸ್ಸುಗಳೂ ಬೋಧ ಶ್ರವಣದ ಆತುರತೆಯಿಂದ ಏಕಾಗ್ರಗಳಾಗಿದ್ದವು. ಆಗ ಅವರು— ''ಪತಿಭಕ್ಷಕ ಸ್ತ್ರೀವರ್ಗವು ಎಂತಹದಿರಬಹುದೆಂ''ಬದನ್ನು ತಿಳಿಯುವದಕ್ಕಾಗಿ ವಿಶೇಷ ಆತುರರಾಗಿದ್ದರು! ಆ ಪತಿಭಕ್ಷಕವೆಂಬ ಹೆಸರೇ ಅವರ ಮನಸ್ಸನ್ನು ಆಕರ್ಷಿಸಿಬಿಟ್ಟಿತ್ತು! ಹೀಗಿರುವಾಗ ಗುರುವರನು ಎಲ್ಲರನ್ನು ಕೃಪಾದೃಷ್ಟಿಯಿಂದ ನೋಡಿ ರಣಹುಚ್ಚಿಯನ್ನು ಕುರಿತು ''ಹುಚ್ಚಮ್ಮಾ ಇಂದಿನ ಬೋಧವನ್ನು ನನಗಿಂತ ನೀನು ಚನ್ನಾಗಿ ಮಾಡುವೆ; ಆದ್ದರಿಂದ ನೀನು ಇತ್ತ ಈ

ಪೀಠದ ಬಳಿಯಲ್ಲಿ ಕುಳಿತು ಬೋಧಮಾಡು,'' ಎಂದು ನುಡಿಯಲು, ಅದನ್ನು ಕೇಳಿ ರಣಹುಚ್ಚಿಗೊಬ್ಬಳಿಗೇ ಅಲ್ಲ ಎಲ್ಲರಿಗೂ ಪರಮಾಶ್ಚರ್ಯವಾಯಿತು. ಗುರುವರನು ಹೀಗೆ ವಿನೋದಕ್ಕಾಗಿ ಹೇಳುತ್ತಿರಬಹುದೆಂದು ಅವರು ತಿಳಿದರು. ಆಗ ರಣಹುಚ್ಚಿಯು ಎದ್ದುನಿಂತು ಕೈಜೋಡಿಸಿ ಗುರುವರನಿಗೆ—

ರಣಹುಚ್ಚಿ—ಮಹಾಸ್ವಾಮಿ, ನಿನ್ನ ಮುಖದಿಂದ ವ್ಯರ್ಥಮಾತುಗಳು ಹೊರಡವು. ಸದ್ಗುರು ಕೃಪೆಯಿಂದ ಮೂಕನೂ ಮಾತಾಡಬಹುದಾಗಿರಲು, ಬಾಯಿದ್ದ ನಾನು ಯಾಕೆ ಬೋಧಮಾಡಲಿಕ್ಕಿಲ್ಲ! ಆದರೆ ಗುರುದೇವಾ, ಅನಧಿಕಾರಿಯಾದ ನಾನು ಬೋಧಿಸಿದರೆ ಒಪ್ಪಬಹುದೆ? ನನ್ನನ್ನು ವೇಷಧಾರಿ ಬೋಧಕಳನ್ನಾಗಿ ಮಾತ್ರ ಮಾಡಬೇಡಕಂಡೆಯಾ? ಸಾಹಸಿಯಾಗಿದ್ದ ನಾನು ಸಾಧ್ವಿಯಾದರೆ ಮಾತ್ರ ನೀನು ಸದ್ಗುರುವು! ನಾನು ಮೊದಲೇ ಎಟ್ಟಿ ಹೆಣ್ಣುಮಗಳೆಂದು ಪ್ರಸಿದ್ಧಳಾಗಿರುವೆನು; ಆದರೆ ನಿನ್ನ ಮುಂದೆಯಾದರೂ ನನ್ನ ಆ ಎಟ್ಟಿತನವು ಬೈಲಿಗೆ ಬೀಳದಿರಲಿ!

ಗುರುವರ—(ಗಾಂಭೀರ್ಯದಿಂದ)—ತಂಗೀ, ಹುಚ್ಚಮ್ಮಾ ನುಡಿಯುವವನೂ, ನುಡಿಸುವವನೂ ಶಿವನೇ ಅಲ್ಲವೆ? ನನ್ನಲ್ಲಿದ್ದು ನಿನಗೆ ಹೀಗೆ ಹೇಳುವ ಆ ಪರಬ್ರಹ್ಮ ಶಿವಮೂರ್ತಿಯೇ , ನಿನ್ನಲ್ಲಿದ್ದು ಇವರೆಲ್ಲರಿಗೆ ಈಗ ಬೋಧವನ್ನು ಮಾಡಿಸುವನೆಂದು ತಿಳಿ. ನೀನು ಬರಿಯ ಸಾಧ್ವಿಯೇ ಏಕೆ, ದುರ್ಗದ ನಾಯಕನ ಹೆಂಡತಿಯೂ ಆಗುವೆ, ಅದಕ್ಕಾಗಿ ನೀನೇಕೆ ಶಂಕಿಸುವೆ?

ಗುರುವರನ ಈ ಮಾತುಗಳನ್ನು ಕೇಳಿ ಎಲ್ಲರೂ ಆಶ್ಚರ್ಯಪಡುತ್ತಿರಲು, ಸರಳಭಾವದ ರಣಹುಚ್ಚಿಯ ಮುಖದಿಂದ ಮಾತುಗಳು ಹೊರಡದಾದವು. ಆಕೆಯು ಕೈಜೋಡಿಸಿ ದೈನ್ಯದಿಂದ ಗುರುವರನ ಕಡೆಗೆ ನೋಡುತ್ತ ನಿಂತುಬಿಟ್ಟಳು. ಆಗ ಸದ್ಗುರುನಾಥನು ಆಕೆಯನ್ನು ಮುಂದಕ್ಕೆ ಕರೆದು, ಒಂದು ಚಿಮುಟಿಗೆ ವಿಭೂತಿಯನ್ನು ಆಕೆಯ ಕೈಯಲ್ಲಿ ಹಾಕಿ— ''ಇದನ್ನು ಬಾಯಿಯಲ್ಲಿ ಹಾಕಿಕೊಳ್ಳಮ್ಮಾ'' ಎಂದು ಹೇಳಲು, ಹುಚ್ಚಮ್ಮನು ಭಕ್ತಿಪರವಶಳಾಗಿ ಆ ಗುರುಪ್ರಸಾದವನ್ನು ಬಾಯಲ್ಲಿ ಹಾಕಿಕೊಂಡು ಗುರುವರನ ಚರಣಗಳ ಮೇಲೆ ಮಸ್ತಕವಿಟ್ಟಳು! ಆಗ ಆ ಸದ್ಗುರುನಾಥನು ತನ್ನ ವರದ ಹಸ್ತವನ್ನು ಆಕೆಯ ಮಸ್ತಕದ ಮೇಲಿಟ್ಟು— ''ಏಳಮ್ಮಾ ಮೇಲಕ್ಕೇಳು, ನಮ್ಮೆಲ್ಲರನ್ನು, ಬೋಧಿಸು'' ಎಂದು ನುಡಿಯಲು, ಹುಚ್ಚಮ್ಮನು ಮೇಲಕ್ಕೆದ್ದು ಗುರುವರನ ಅಪ್ಪಣೆಯಂತೆ ಆತನ ಪೀಠದ ಬಳಿಯಲ್ಲಿ ಕುಳಿತು, ಅಲ್ಲಿ ಕುಳಿತಿದ್ದವರ ಕಡೆಗೆ ನೋಡುವಾಗ, ಆಕೆಯ ಮುಖದ ವರ್ಚಸ್ಸೇ ಬದಲು ಆಗಿ ಹೋಗಿತ್ತು! ಆಕೆಯ ದಿವ್ಯವರ್ಚಸ್ಸನ್ನು ನೋಡಿ, ಈಕೆಯೇನು ಸಾಕ್ಷಾತ್ ವಾಗ್ದೇವತೆಯೋ ಎಂಬ ಭಾವವು ಅವರಲ್ಲಿ ಉತ್ಪನ್ನವಾಯಿತು! ಅತ್ತ ಗುರುವರನು ಪೀಠದಲ್ಲಿ ಧ್ಯಾನಸ್ಥನಾದ ಸಾಕ್ಷಾತ್ ಪರಶಿವನಂತೆ ತೇಜೋವಿಶೇಷದಿಂದ ವಿರಾಜಮಾನನಾಗಿದ್ದನು. ಆಗಿನ ಆ ದಿವ್ಯವಾದ ಅದ್ಭುತ ನೋಟವು ಅಲ್ಲಿ ಕುಳಿತವರನ್ನು ದಂಗು ಬಡಿಸಿತು! ಅವರು ಮನಸ್ಸಿನಲ್ಲಿ—''ಇದೇನು ಆಶ್ಚರ್ಯವು? ಸಾಕ್ಷಾತ್ ಪರಶಿವನೇ ಕೈಲಾಸದಿಂದ ಇಲ್ಲಿಗೆ ಇಳಿದುಬಂದು, ನಮ್ಮನ್ನು ಬೋಧಿಸುವದಕ್ಕಾಗಿ ಪ್ರತ್ಯಕ್ಷ ಶ್ರೀ ಶಾರದಾಂಬೆಯನ್ನು ಕರೆಸಿರಬಹುದೆ?'' ಎಂದು ಮುಂತಾಗಿ ತಮ್ಮೊಳಗೆ

ಅಂದುಕೊಳ್ಳಹತ್ತಿದರು. ಮುದ್ದಣ್ಣನಂತು, ''ಇಂತಹ ದಿವ್ಯಮೂರ್ತಿ ರಣಹುಚ್ಚಿಯಿಂದ ನಾನು ಅಂದು ಕಾಳಗದಲ್ಲಿ ಸೋತದ್ದೇನು ಆಶ್ಚರ್ಯವಲ್ಲವೆಂ''ದು ಸಮಾಧಾನಪಡತೊಡಗಿದನು; ಆದರೆ ಒಬ್ಬರೂ ಮಿಸುಕದೆ, ಕಣ್ಣುರೆಪ್ಪೆ ಬಡಿಯದೆ, ಪಿಟ್ಟೆಂದು ಮಾತಾಡದೆ ಪರವಶರಾಗಿ ಆ ದಿವ್ಯ ನೋಟವನ್ನು ನೋಡುತ್ತ ಕುಳಿತುಬಿಟ್ಟರು!

ಹೀಗೆ ಅಲ್ಲಿ ಕುಳಿತಿರುವವರೆಲ್ಲರೂ ಆಶ್ಚರ್ಯಮಗ್ನರಾಗಿ ಮುಂದುಗಾಣದೆ ಏನೇನೋ ತರ್ಕಿಸುತ್ತಿರಲು, ಗುರುವರನ ಆವೇಶಹೊಂದಿದ್ದ ರಣಹುಚ್ಚಮ್ಮನು, ಗುರುವರನೇ ಆಗಿ ಗಂಭೀರವಾಣಿಯಿಂದ ಗುರುಶಾಂತಪ್ಪನ ಕಡೆಗೆ ನೋಡಿ— ''ಗುರುಶಾಂತಪ್ಪಾ, ನಾವು ನಿನ್ನೆ ಪತಿರಕ್ಷಕ ಸ್ತ್ರೀವರ್ಗದ ನಡತೆ–ನಡಾವಳಿಗಳನ್ನು ಹೇಳಿದೆವಷ್ಟೆ? ಇಂದು ಪತಿಭಕ್ಷಕ ಸ್ತ್ರೀ ವರ್ಗದ ನಡತೆ–ನಡಾವಳಿಗಳನ್ನು ಹೇಳುವೆವು ಕೇಳಿರಿ ಯುಗಾರಂಭದಿಂದ ಈಗಿನ ಕಲಿಯುಗದವರೆಗೆ ಈ ಪತಿಭಕ್ಷಕ ಸ್ತ್ರೀವರ್ಗವು ಈಶ್ವರೀ ಸಂಕೇತದಂತೆ ಕ್ರಮವಾಗಿ ಹೆಚ್ಚುತ್ತ ಹೆಚ್ಚುತ್ತ ಬಂದಿದ್ದು ಇನ್ನು ಬರಬರುತ್ತ ಈ ಹೀನ ವರ್ಗದಿಂದಲೇ ಜಗತ್ತು ತುಂಬಿಹೋಗುವ ಸಂಕೇತವು ದೇವರ ದಿರುವದು! ಆದ್ದರಿಂದ ಈ ಮೊದಲೆ ನಾವು ಹೇಳಿರುವ ಪತಿರಕ್ಷಕ ಸ್ತ್ರೀಯರ, ಅಂದರೆ ಸಾಧ್ವಿಯರ, ಹಾಗು ಸುವಿಚಾರಿಗಳ ನಡತೆ ನಡಾವಳಿಗಳು,ಇನ್ನು ಬರಬರುತ್ತ ಜನರಿಗೆ ಅಶಕ್ಯಗಳಾಗಿ ತೋರುವವಲ್ಲದೆ, ಈ ಪತಿರಕ್ಷಕ ಸ್ತ್ರೀ ವರ್ಗವು ಕೇವಲ ಕಾಲ್ಪನಿಕವೆಂದು ಜನರು ವಾದಿಸಹತ್ತಿ ಪತಿಭಕ್ಷಕ ಸ್ತ್ರೀವರ್ಗದ ಬೆಳವಣಿಗೆಗೆ ಉತ್ತೇಜನ ಕೊಡಹತ್ತಿದರೆ ಆಶ್ಚರ್ಯವಲ್ಲವು! ಇನ್ನು ಮೇಲೆ ಈ ಪತಿಭಕ್ಷಕ ಸ್ತ್ರೀವರ್ಗದಲ್ಲಿ ಪಾಂಡಿತ್ಯ ತೇಜಸ್ವಿತೆಗಳಿಂದ ಪ್ರಮುಖರಾದವರೇ ರಾಷ್ಟ್ರಮುಖಂಡರೂ, ರಾಷ್ಟ್ರಕ್ಕೆ ಮಾರ್ಗದರ್ಶಕರೂ ಆಗಿ ''ಯದ್ಯದಾಚರತಿ ಶ್ರೇಷ್ಠ ಸ್ತತ್ತದೇವೇತರೋಜನಃ'' ಎಂಬ ಭಗವದುಕ್ತಿಯಂತೆ ನಮ್ಮ ಭರತ ಭೂಮಿಯ ಧರ್ಮಿಷ್ಠ ಸ್ತ್ರೀಸಮಾಜವೆಲ್ಲ ಆ ಮುಖಂಡ ಸ್ತ್ರೀಯರ ಅನುಕರಣಮಾಡಿ, ತಮ್ಮ ಸೌಜನ್ಯ–ಸೌಹಾರ್ದತೆ–ಸಹಿಷ್ಣುತೆ–ಸತ್ವಸಂಭ್ರಮಗಳನ್ನೆಲ್ಲ ಕಳೆದುಕೊಂಡು ಸ್ವೇಚ್ಛಾಚಾರಕ್ಕೆ ಬೀಳಲು, ಅದರ ದುಷ್ಪರಿಣಾಮವನ್ನು ಭರತ ಭೂಮಿಯು ನಿಶ್ಚಯವಾಗಿ ಭೋಗಿಸಬೇಕಾಗುವದು! ಆದರೆ ಗುರುಶಾಂತಪ್ಪಾ, ಈಶ್ವರೀ ಸಂಕೇತದ ಮುಂದೆ ಯಾರ ಆಟವೇನು ನಡೆಯುವದು? ಆದ್ದರಿಂದ ವಿವೇಕಿಗಳಾದ ಸ್ತ್ರೀಯರು ಎಚ್ಚರಪಡುವದಕ್ಕಾಗಿ ಇನ್ನು ಪತಿಭಕ್ಷಕ ಸ್ತ್ರೀಯರ ಲಕ್ಷಣಗಳನ್ನು ನಾವು ಹೇಳತೊಡಗುವೆವು. ಅಂತಹ ಲಕ್ಷಣ ಗಳಿಗೆ ಆಸ್ಪದವಾಗದಂತೆ ಅವರು ಎಚ್ಚರ ಪಡತಕ್ಕದ್ದು'' ಅನ್ನಲು, ಆ ಶ್ರೋತೃಗಳು ಆಶ್ಚರ್ಯಪರವಶರಾಗಿ ಶ್ರೀಮುರುಗೀಶ ಗುರುವರನೇ ಬೋಧಿಸುವನೆಂದು ತಿಳಿದು ಕೊಂಡರು.

**ಪತಿಭಕ್ಷಕ ಸ್ತ್ರೀವರ್ಗಗಳು**—ಹೀಗಿರುವಾಗ ಶ್ರೀಗುರುವು ಅಂತಃಪ್ರೇರಕನಾಗಿ ಹುಚ್ಚಮ್ಮನ ಮುಖದಿಂದ ಪತಿಭಕ್ಷಕ ಸ್ತ್ರೀವರ್ಗದ ಲಕ್ಷಣಗಳನ್ನು ಹೇಳಿಸತೊಡಗುವನು. ಹುಚ್ಚಮ್ಮನ ರೂಪದಿಂದ ಗುರುವರನು ಗುರುಶಾಂತಪ್ಪನನ್ನು ಕುರಿತು— ಗುರುಶಾಂತಪ್ಪಾ, ಪುರಾತನ ಕಾಲದಿಂದ ಲೋಕನಿಂದ್ಯರಾಗಿದ್ದು ಈಗ ಮಾತ್ರ ಲೋಕಮಾನ್ಯರಾಗುತ್ತ

ನಡೆದಿರುವ ಈ ವರ್ಗದ ಸ್ತ್ರೀಯರ ಲಕ್ಷಣಗಳನ್ನು ಇನ್ನು ಹೇಳುವೆವು. ಪತಿಭಕ್ಷಕ ಸ್ತ್ರೀವರ್ಗವೆಂದರೆ, ತಮ್ಮ ಪತಿಗಳು ತಮ್ಮ ವಿಷಯೋಪಭೋಗದ ಸಾಧನಗಳೆಂದು ತಿಳಿಯುವ, ಅಥವಾ ಪತಿಗಳು ತಮ್ಮ ಯಥೇಚ್ಛ ವಿಷಯ ಸುಖಭೋಗಕ್ಕೆ ಪ್ರತಿಬಂಧಕರೆಂದು ತಿಳಿಯುವ ಸ್ತ್ರೀಯರ ವರ್ಗವೆಂದು ತಿಳಿಯತಕ್ಕದ್ದು. ಈ ಮೊದಲೆ ಪತಿರಕ್ಷಕ ಸ್ತ್ರೀವರ್ಗದಲ್ಲಿ— ೧. ಸಾಧ್ವಿಯರು, ೨. ಸುವಿಚಾರಿಗಳು, ಎಂಬ ಎರಡು ಉಪವರ್ಗಗಳಿರುವವೆಂದು ಹೇಳಿರುವೆವಷ್ಟೇ? ಅದರಂತೆ ಈ ಪತಿಭಕ್ಷಕ ಸ್ತ್ರೀಯರಲ್ಲಿಯೂ, ೧. ಸುಖಲೋಲುಪರು ೨. ಸಾಹಸಿಗಳು ಎಂಬ ಎರಡು ಉಪವರ್ಗಗಳು ಇರುವವು. ತಮ್ಮ ಪತಿಗಳು ತಮ್ಮ ವಿಷಯ ಸುಖಭೋಗದ ಸಾಧನವೆಂದು ತಿಳಿಯುವವರು ಸುಖಲೋಲುಪರು; ತಮ್ಮ ಪತಿಗಳು ತಮ್ಮ ಯಥೇಚ್ಛ ವಿಷಯ ಸುಖಭೋಗಕ್ಕೆ ಪ್ರತಿಬಂಧಕರೆಂದು ತಿಳಿಯುವವರು ಸಾಹಿಸಿಗಳು; ಅಂತು ಒಟ್ಟಿಗೆ ಸ್ತ್ರೀಯರಲ್ಲಿ—೧. ಸಾಧ್ವಿಯರು, ೨. ಸುವಿಚಾರಿಗಳು, ೩. ಸುಖಲೋಲುಪರು, ೪. ಸಾಹಸಿಗಳು ಎಂಬ ನಾಲ್ಕು ವರ್ಗಗಳು ಇದ್ದಂತಾಯಿತು. ಇವುಗಳಲ್ಲಿ ಪತಿರಕ್ಷಕ ಸ್ತ್ರೀವರ್ಗವು ಆಸ್ತಿಕವಾಗಿದ್ದು, ಅದು ದೇವರು–ಧರ್ಮ– ಪಾಪಪುಣ್ಯ– ಗುರುಹಿರಿಯರು– ಶಾಸ್ತ್ರ–ಪುರಾಣ ಮೊದಲಾದ ಮನೋನಿಗ್ರಹಕಾರಿ ಬಂಧನಗಳಿಗೆ ಒಳಗಾಗಿರುವದರಿಂದ, ಆ ವರ್ಗದ ಸ್ತ್ರೀಯರಲ್ಲಿ ಮನೋನಿಗ್ರಹವೂ ನಯ–ಭಯ– ಭಕ್ತಿಗಳೂ ತೋರುತ್ತಿರುವವು; ಆದರೆ ಪತಿಭಕ್ಷಕ ಸ್ತ್ರೀವರ್ಗವು ನಾಸ್ತಿಕವಾಗಿದ್ದು, ಆ ವರ್ಗದಲ್ಲಿ ಐಹಿಕ ಸುಖಾಸಕ್ತಿಯು ಪ್ರಬಲವಾಗಿರುವದರಿಂದ, ಆ ವರ್ಗದ ಸ್ತ್ರೀಯರಲ್ಲಿ ಸ್ವಚ್ಛಂದವೃತ್ತಿ ಅಹಂ ಮನ್ಯತೆ, ಜಗತ್ತು ಚ್ಚೀಕರಣ, ನಿರ್ಲಕ್ಷ್ಯ ಇವು ತೋರುತ್ತಿರುವವು. ಇಂತಹ ಉದ್ದಾಮವೃತ್ತಿಯ ಪತಿಭಕ್ಷಕ ಸ್ತ್ರೀಯರ ಲಕ್ಷಣಗಳು, ವಿನಮ್ರವೃತ್ತಿಯ ಪತಿರಕ್ಷಕ ಸ್ತ್ರೀಯರ ಲಕ್ಷಣಗಳಿಂದ ಭಿನ್ನವಾಗಿರುವದು ಸ್ವಾಭಾವಿಕವು. ಈ ಪತಿಭಕ್ಷಕ ಸ್ತ್ರೀವರ್ಗದಲ್ಲಿಯ ಸುಖಲೋಲುಪ ಸ್ತ್ರೀಯರು ನೀಚರಾಗಿದ್ದರೆ, ಸಾಹಸೀ ಸ್ತ್ರೀಯರು ನೀಚತಮರಾಗಿರುವರು! ಇವರಲ್ಲಿಯ ಸೂಕ್ಷ್ಮಭೇದವು ಮನಸ್ಸಿನಲ್ಲಿ ಬರುವದಕ್ಕಾಗಿ ಇವರ ಲಕ್ಷಣಗಳನ್ನು ವಿಶದವಾಗಿ ಹೇಳುವೆವು. ಇವರಿಬ್ಬರೂ ಉಭಯಕುಲ ವಿಘಾತಕರೆಂಬ ಮಾತನ್ನು ಲಕ್ಷದಲ್ಲಿಡತಕ್ಕದ್ದು. ಈಗ ಮೊದಲು ನಾವು ಸುಖಲೋಲುಪರ ಲಕ್ಷಣಗಳನ್ನು ಹೇಳುತ್ತೇವೆ. ಅತ್ತಕಡೆಗೆ ಎಲ್ಲರ ಲಕ್ಷವಿರಲಿ.

**ಸುಖಲೋಲುಪ ಸ್ತ್ರೀಯರ ಲಕ್ಷಣಗಳು—** ಧರ್ಮಹೀನರಾದ ಈ ಲೋಕನಿಂದ್ಯ ಸ್ತ್ರೀಯರ ಎಲ್ಲ ಲಕ್ಷಣಗಳನ್ನು ವರ್ಣಿಸುವದು ಈಗ ಶಕ್ಯವಲ್ಲದಿದ್ದರೂ, ಈ ಮೊದಲೆ ನಾವು ಹೇಳಿರುವ ಪತಿರಕ್ಷಕ ಸ್ತ್ರೀಯರ, ವಿಶೇಷವಾಗಿ ಸಾಧ್ವಿಯರ ಏಳು ಲಕ್ಷಣಗಳಿಗೆ ವಿರುದ್ಧ ವಾಗಿರುವ ಏಳು ಲಕ್ಷಣಗಳು ಇವರಲ್ಲಿ ಹೇಗೆ ಇರುತ್ತವೆಂಬದನ್ನು ಹೇಳಲು ಈಗ ಯತ್ನಿಸುತ್ತೇವೆ!

**೧ನೆಯ ಲಕ್ಷಣ—** ನಾವು ಈ ಮೊದಲೆ "ಪತಿಯೇ ದೇವರೆಂ"ದು ತಿಳಿಯುವದು ಸಾಧ್ವಿಯರ ಪ್ರಧಾನವಾದ ಪ್ರಥಮ ಲಕ್ಷಣವೆಂದು ಹೇಳಿರುವೆವಷ್ಟೆ? ಆದರೆ ಅದಕ್ಕೆ ವಿರುದ್ಧವಾಗಿ "ಸ್ತ್ರೀದೇವಾಃ ಕಾಮಕಿಂಕರಾಃ" ಎಂಬಂತೆ ತಾವೇ ಪತಿಗೆ ದೇವರಾಗಿರಬೇಕೆಂದು,

ಅರ್ಥಾತ್ ಪತಿಯು ತಮ್ಮ ಕಿಂಕರನಾಗಿರಬೇಕೆಂದು ತಿಳಿಯುವದು, ಈ ಸುಖಲೋಲುಪ ಸ್ತ್ರೀಯರ ಮುಖ್ಯವಾದ ಒಂದನೆಯ ಲಕ್ಷಣವಾಗಿರುತ್ತದೆ. ತರಬರುವದಕ್ಕಾಗಿ, ಮನೆಗೆಲಸ ಮಾಡುವದಕ್ಕಾಗಿ, ತಾವು ಹೇಳಿದಂತೆ ಕೇಳುವದಕ್ಕಾಗಿ, ತಮ್ಮ ಅನುವು ಆಪತ್ತುಗಳ ನಿವಾರಣ ಕ್ಕಾಗಿ ತಾವು ಹೆಮ್ಮೆ ಪಡುವದಕ್ಕಾಗಿ ಅಥವಾ ಇಂತಹ ಬೇರೆ ಸ್ವಾರ್ಥಕ್ಕಾಗಿ, ಅರ್ಥಾತ್ ಕತ್ತೆಯಂತೆ ದುಡಿಯುವದಕ್ಕಾಗಿ ಈ ಸುಖಲೋಲ ಸ್ತ್ರೀಯರಿಗೆ ಪತಿಯು ಬೇಕು; ಆದರೆ ಇಂತಹ ಸ್ವಾರ್ಥಕ್ಕೆ ಉಪಯೋಗವಿಲ್ಲದ ಪತಿಯು ಇವರಿಗೆ ಬೇಡ. ಅಂತಹ ನಿರುಪಯೋಗಿ ಪತಿಯನ್ನು ಇವರು ತಿರಿಸ್ಕರಿಸುವರು; ಆದರೆ ತಮ್ಮ ಸುಖಲೋಲಪತೆಗೆ ಅವಶ್ಯವಾಗಿರುವ ತಮ್ಮ ಸೌಭಾಗ್ಯರಕ್ಷಣಕ್ಕಾಗಿ ಇವರು ಅಂತಹ ಪತಿಯ ನಾಶವನ್ನು ಇಚ್ಛಿಸದಿರುವದೊಂದು ಪತಿಯ ಪುಣ್ಯವೇ ಸರಿ; ಇವರ ಈ ನಡತೆಗೆ ಒಂದು ಬಗೆಯ ಕ್ಷುದ್ರ ಕೀಟಕದ ನಡತೆಯನ್ನು ಉದಾಹರಿಸಬಹುದು. ಆ ಒಂದು ಕ್ಷುದ್ರ ಕೀಟಕವು ಬೇರೊಂದು ಹುಳದ ಮೈಯಲ್ಲಿದ್ದು ಅದರ ಮೈಯನ್ನೇ ಮೇದು ಜೀವಿಸುತ್ತಿರುವದು; ಆದರೆ ಈ ಕೀಟಕವು ತನ್ನ ಆಹಾರವಾಗಿದ್ದ ಆ ಹುಳದ ಮೈಯನ್ನು ಪೂರಾ ಮೇದುಬಿಟ್ಟು ಅದನ್ನು ಒಮ್ಮೆಲೆ ಕೊಂದುಬಿಡುವದಿಲ್ಲ. ಆ ಹುಳವು ತನ್ನ ಆಹಾರವಾಗಿ ಬಹು ದಿವಸವಿದ್ದು, ಆತನು ಚಿರಕಾಲ ಚಕ್ಕಂದಿಂದ ಬದುಕಬೇಕೆಂಬ ಆಶೆಯಿಂದ ಆ ಕೀಟಕವು ಆ ಹುಳವನ್ನು ಒಮ್ಮೆಲೆ ಕೊಂದು ಬಿಡದೆ ಅದನ್ನು ಮೇದು ಪುಷ್ಟವಾಗಗೊಟ್ಟು, ಅದರ ಮೈಯನ್ನು ಕ್ರಮವಾಗಿ ಮೇದು ತಾನು ಸುಖಿಸುವದು! ಇದೇ ರೀತಿಯು ಸುಖಲೋಲುಪ ಸ್ತ್ರೀಯರಿಗೆ ಹತ್ತುವದು! ಇವರು ತಮ್ಮ ಚಕ್ಕಂದಕ್ಕಾಗಿ ಪರಿ ಪರಿಯಿಂದ ಪತಿಯ ರಕ್ತಶೋಷಣ ಮಾಡುವರು ಸರಿ; ಆದರೆ ಆತನು ಕ್ಷೀಣನಾಗಿ ನಾಶವಾಗ ದಂತೆ ಮಾನಭಾವೀತನದಿಂದ ಬಗೆ ಬಗೆಯ ಮೋಹಜಾಲ ಬೀಸಿ ಆತನನ್ನು ರಮಿಸುವರು! ಆದರೂ ಇವರು ತಮ್ಮ ಪತಿಯ ಕುರೂಪ, ಗುಣಹೀನತೆ, ದೌರ್ಬಲ್ಯ ಮೊದಲಾದ ಕೊರತೆಗಳಿಗಾಗಿ ಮೂಗು ಮುರಿಯುವರಲ್ಲದೆ, ಪ್ರಸಂಗವಶಾತ್ ತಮ್ಮ ಆ ತಿರಸ್ಕಾರವನ್ನು ಪತಿಯ ಮುಂದೆ ವ್ಯಕ್ತಮಾಡಿ ಆತನ ಮನಸ್ಸಿಗೆ ಗಾಯಮಾಡುತ್ತಿರುವದು ಇವರ ಖೋಡಿಚಾಳಿಯಾಗಿರುತ್ತದೆ!

೨ನೆಯ ಲಕ್ಷಣ—ಪತಿಯ ಸಂತೋಷವೇ ತಮ್ಮ ಸಂತೋಷವೆಂದು ತಿಳಿಯುವದು ಪತಿರಕ್ಷಕ ಸ್ತ್ರೀವರ್ಗದ ಎರಡನೆಯ ಲಕ್ಷಣವೆಂದು ನಾವು ಈ ಮೊದಲೆ ಹೇಳಿರುವೆವಷ್ಟೇ? ಆದರೆ ಇದಕ್ಕೆ ವಿರುದ್ಧವಾಗಿ, ತಮ್ಮ ಸಂತೋಷವೇ ಪತಿಯ ಸಂತೋಷವಾಗಿರಬೇಕೆಂದು ಇಚ್ಛಿಸುವದು, ಅರ್ಥಾತ್, ತಮ್ಮ ಸಂತೋಷಕ್ಕೆ ಬಾಧೆ ಬಾರದಂತೆ ತಮ್ಮ ಪತಿಯು ನಡೆದು ಕೊಳ್ಳಬೇಕೆಂದು ಹಟ ಹಿಡಿಯುವದು ಈ ಸುಖಲೋಲುಪ ಸ್ತ್ರೀಯರ ಎರಡನೆಯ ಲಕ್ಷಣ ವಾಗಿರುತ್ತದೆ. ತಮ್ಮ ಸೇವಕನಾದ ಪತಿಯು ತಮಗೆ ಸಂತೋಷವಾಗುವಂತೆ ತಮ್ಮ ಅಪ್ಪಣೆ ಕೇಳುವದೇ ತಮ್ಮ ಪತಿಯ ಹಿತಚಿಂತನದ ಮೂಲವೆಂದು ಇವರು ತಿಳಿಯುವರು. ತಮ್ಮ ಅಂತಹ ಆಜ್ಞಾಧಾರಕ ಪತಿಯ ಸೇವೆಗೆ ಪ್ರತಿಯಾಗಿ ಇವರು ಆತನ ಸೇವೆ ಮಾಡುವದು ತಮಗೆ ಅಪಮಾನಾಸ್ಪದವಾದದ್ದರಿಂದ, ಆತನ ಸೇವೆ ಮಾಡದೆ ಆತನ ಯೋಗಕ್ಷೇಮದ

ವಿಚಾರವನ್ನು ತಮ್ಮ ಲಹರಿಗೆ ಬಂದಂತೆ ಮಾಡುವರು. ಮಂದಿಯಂತೆ ತಾವು ವಸ್ತ್ರಾಭರಣಗಳನ್ನು ಧರಿಸಿ ಮೆರೆಯಬೇಕೆಂತಲೂ, ಮಂದಿಯಂತೆ ತಾವು ಸವಿ ಸವಿಯಾದ ಉಣಿಸು–ತಿನಿಸುಗಳಿಂದ ನಲಿಯಬೇಕೆಂತಲೂ, ಮಂದಿಯಂತೆ ತಾವು ಸೊಗಸಿನ ಮನೆ ಕಟ್ಟಿಸಿ ಡೌಲಿನಂತೆ ವಾಸಿಸಬೇಕೆಂತಲೂ ಇವರು ಪತಿಗೆ ಆಗಾಗ ತೊಂದರೆ ಕೊಡುವರು. ಈ ಉದ್ಧಟರು ರೇಗಿಸಿದಾಗ ಮನೆಯಲ್ಲಿಲ್ಲದ ಸಂಸಾರೋಪಯುಕ್ತ ಪದಾರ್ಥ ಗಳನ್ನು ಪತಿಯ ಮೋರೆಯ ಮುಂದೆಯಿಷ್ಟೇ ಅಲ್ಲ ನಾಲ್ಕು ಜನರ ಮುಂದೆ ನಿಷ್ಠುರವಾಗಿ ತರಹೇಳಿ, ಬುದ್ಧಿ ಪೂರ್ವಕ ಆತನ ಮನಸ್ಸು ನೋಯಿಸಲಿಕ್ಕೆ ಹಿಂದೆ–ಮುಂದೆ ನೋಡುವದಿಲ್ಲ. ಯಾವಾಗಲೂ ತಮಗೆ ಸಾಲುವಷ್ಟು ಇಟ್ಟುಕೊಂಡು ಪತಿಗೆ ಉಣಬಡಿಸಲು ಇವರು ಬಹು ಜಾಗರೂಕರು; ಅಥವಾ ತಮ್ಮ ಹಸಿವೆಯ ಹೊತ್ತಿಗೆ ಪತಿಯು ಬಾರದಿದ್ದರೆ, ಆತನಿಗಿಂತ ಮೊದಲೇ ಉಂಡುಬಿಟ್ಟು, ಉಳಿದದ್ದನ್ನು ಪತಿಗೆ ಬಡಿಸುವಷ್ಟು, ಅಥವಾ ತಮ್ಮ ಆ ಹೇಡಿ ಪತಿಗೇ ಬಡಿಸಿಕೊಳ್ಳ ಹೇಳುವಷ್ಟು ಇವರು ನಿರ್ಲಜ್ಜರು ಇರುವರು! ಪತಿಯ ಎಂಜಲು ಉಣ್ಣಲಿಕ್ಕೆ ಇವರು ಹೇಸುವರಲ್ಲದೆ, ಹಾಗೆ ಮಾಡುವದು ತಮಗೆ ಅಪಮಾನಕರವೆಂದು ತಿಳಿಯುವರು. ತಮಗೆ ಯಾವ ಬಗೆಯಿಂದಲೂ ಅಪಮಾನ ವಾಗಗೊಡದಿರುವದು, ಅದಕ್ಕಾಗಿ ಪತಿಗೆ ಕಷ್ಟ–ನಷ್ಟಗಳನ್ನುಂಟು ಮಾಡುವದು, ಸದಾ ಅಸಂತುಷ್ಟರಾಗಿರುವದು ಇವರ ಶೀಲವಾಗಿರುವದು. ಇವರು ಪತಿಯ ಆಪ್ತೇಷ್ಟರ ಗೊಂದಲ ಹಚ್ಚಿಕೊಳ್ಳಲು ಸಮ್ಮತಿಸುವದಿಲ್ಲ. ಪತಿಯನ್ನೇ ಲಕ್ಷಿಸದ ಇವರು ಪತಿಯ ಪರಿವಾರವನ್ನು ಸನಿಯಕ್ಕೆ ಸುಳಿಯಗೊಡದಿದ್ದರೆ ಆಶ್ಚರ್ಯವೇನು? ಪತಿಯ ವಿರೋಧಿಗಳು ತಮಗೆ ಬೇಕಾದವರಿದ್ದರೆ, ಅವರೊಡನೆ ಈ ಸುಖಲೋಲುಪರು ಸ್ನೇಹಬಳಸುವರು. ಅನ್ಯರ ನಿಂದಾಸ್ತುತಿಗಳು, ವಿಶೇಷವಾಗಿ ಪರನಿಂದೆಯು ಇವರ ಪ್ರೀತಿಯ ವ್ಯವಹಾರಗಳಾಗಿರುವವು. ಸುಖಲೋಲುಪರ ಈ ಹೀನ ಆಚರಣೆಗಳ ಮೂಲಕ, ಅವರ ಮನೆಯು ಅಶಾಂತಿ–ದುಃಖಗಳ ಉತ್ಪತ್ತಿಸ್ಥಾನವು, ಅರ್ಥಾತ್ ರಾಕ್ಷಸಾವಾಸವು, ಆಗಿರುವದು.

**೩ನೆಯ ಲಕ್ಷಣ**— ಪತಿಯ ವಾಕ್ಯವು ಮಂತ್ರಮೂಲವಾಗಿಯೂ, ಪತಿಯ ರೂಪವು ಧ್ಯಾನಮೂಲವಾಗಿಯೂ, ಪತಿಯ ಕೃಪೆಯು ಮೋಕ್ಷ ಮೂಲವಾಗಿಯೂ ತೋರುತ್ತಿರುವದು ಸಾಧ್ವಿಯರ ಮೂರನೆಯ ಲಕ್ಷಣವಾಗಿರುತ್ತದೆಂದು ನಾವು ನಿನ್ನೆ ಹೇಳಿರುವೆವು; ಆದರೆ ಇದಕ್ಕೆ ವಿರುದ್ಧವಾಗಿ ಯಾರ ಅಥವಾ ಯಾತರ ಹಂಗೂ ಇಲ್ಲದೆ, ತಮ್ಮ ಮನಸ್ಸಿಗೆ ಬಂದಂತೆ ನಡೆಯುವದು ಸುಖಲೋಲುಪರ ಮೂರನೆಯ ಲಕ್ಷಣವಾಗಿರುವದು. ತಾವು ಧರ್ಮಿಷ್ಠರಲ್ಲಿ ಬಹು ಶ್ರೇಷ್ಠರೆಂಬ ಹೆಮ್ಮೆಯನ್ನು ತೋರಿಸುವದಕ್ಕಾಗಿ ಇವರು ತಮ್ಮ ಮನಸ್ಸಿಗೆ ಬಂದ ವ್ರತಗಳನ್ನೂ, ಉಪೋಷಣಗಳನ್ನೂ, ತೀರ್ಥ–ಯಾತ್ರೆಗಳನ್ನೂ ಪತಿಯ ಹಂಗು ಇಲ್ಲದೆ, ಆತನಿಗೆ ತೊಂದರೆ ಕೊಟ್ಟಾದರೂ, ಅಥವಾ ಆತನ ತೇಜೋಭಂಗ ಮಾಡಿಯಾದರೂ ಇವರು ಮಹಾ ತಾಮಸಿಗಳಾಗಿ ಡಾಂಭಿಕತನದಿಂದ ಮಾಡುವರು! ಇವರು ಮನೆಗೆಲಸಗಳಲ್ಲಿ ಮೈಮುರಿದು ಆಸಕ್ತಿಯಿಂದ ದುಡಿಯುವದಿಲ್ಲ; ಆತಿಥ್ಯಭ್ಯಾಗತರನ್ನು ಸ್ವಾರ್ಥರಹಿತರಾಗಿ ದೇವ

ಭಾವನೆಯಿಂದ ಸತ್ಕರಿಸುವದಿಲ್ಲ; ದೇವ ಪಿತೃಕಾರ್ಯಗಳನ್ನು ಹೌಸಿನಿಂದಲ್ಲದೆ ಶ್ರದ್ಧೆಯಿಂದ ಮಾಡುವದಿಲ್ಲ; ಎಲ್ಲ ಕೆಲಸಗಳಲ್ಲಿಯೂ ಇವರು ಪ್ರೇಮ–ವಿಶ್ವಾಸಗಳಿಂದ ಪತಿಯನ್ನು ಸಹಕರಿಸುವದಿಲ್ಲ; ಆದ್ದರಿಂದ ಇಂದ್ರಿಯ ನಿಗ್ರಹರೂಪವಾದ ತಪಶ್ಚರ್ಯಕ್ಕೆ ಇವರಿಗೆ ಆಸ್ಪದವೇ ಇಲ್ಲದಾಗುವದು; ಯಾಕಂದರೆ ಇವರ ನಾಸ್ತಿಕತ್ವವು, ಇವರ ಸುಖಲೋಲುಪತೆಗೆ ವಿಘ್ನವನ್ನುಂಟುಮಾಡುವ ಯಾವ ಬಗೆಯ ಮನೋನಿಗ್ರಹವನ್ನೂ ಇವರಿಂದ ಮಾಡಗೊಡುವದಿಲ್ಲ!

**೪ನೆಯ ಲಕ್ಷಣ**—ಪತಿಯ ದೋಷಗಳೂ ಗುಣಗಳಾಗಿ ತೋರುವಷ್ಟು ಮನಸ್ಸು ಪವಿತ್ರವಾಗಿ, ಅಂದರೆ ವಿಕಾರರಹಿತವಾಗಿ ಇರುವದು, ಸಾಧ್ವಿಯರ ನಾಲ್ಕನೆಯ ಲಕ್ಷಣ ವಾಗಿರುತ್ತದೆಂದು ಈ ಮೊದಲೆ ಹೇಳಿರುತ್ತೇವೆ; ಆದರೆ ಇದಕ್ಕೆ ವಿರುದ್ಧವಾಗಿ, ಪ್ರಸಂಗವಶಾತ್ ಪತಿಯ ಗುಣಗಳನ್ನು ಕೂಡ ದೋಷಗಳಾಗಿ ಎಣಿಸುವಷ್ಟು ಮನಸ್ಸು ಅಪವಿತ್ರವಾಗಿ, ಅಂದರೆ ವಿಕಾರವಶವಾಗಿರುವದು, ಈ ಸುಖಲೋಲುಪರ ನಾಲ್ಕನೆಯ ಲಕ್ಷಣವಾಗಿರುತ್ತದೆ! ಇಂಥ ಲಕ್ಷಣದವರನ್ನು ಅಧಮರೆಂದು ಭಗವತೀ ದಾಕ್ಷಾಯಣಿಯು ಹೇಳಿದ್ದನ್ನು ಶ್ರೀಮದ್ಭಾಗವತದ ದಕ್ಷಯಜ್ಞ ಧ್ವಂಸ ಪ್ರಸಂಗದಲ್ಲಿ ನೋಡಬಹುದು. ಈ ಸುಖಲೋಲುಪರು ತಮ್ಮ ಸುಖಾಭಿವೃದ್ಧಿಯ ದುರಾಶೆಗೆ ಬಿದ್ದು ಪ್ರಸಂಗದಲ್ಲಿ ಏನು ಮಾಡಲಿಕ್ಕೂ ಹೇಸುವದಿಲ್ಲ! ಇವರು ಪರಪುರುಷರೊಡನೆ ನಿರ್ಭಯದಿಂದ ಬೆರೆತು ವ್ಯವಹರಿಸಲಿಕ್ಕೂ ನಿರ್ಭಯದಿಂದ ಒಂಟಿಗರಾಗಿ ಬೇಕಾದಲ್ಲಿಗೆ ಹೋಗಲಿಕ್ಕೂ ಹಿಂದೆ ಮುಂದೆ ನೋಡುವದಿಲ್ಲ. ತಾವಾಯಿತು, ತಮ್ಮ ಮನೆಯಾಯಿತು, ಎಂದು ಸಾತ್ವಿಕವೃತ್ತಿಯಿಂದ ತಮ್ಮ ಮನೆಯಲ್ಲಿರುವದು ಇವರಿಗೆ ಬೇಡ. ಸ್ವತಂತ್ರದಿಂದ ಸಂಚರಿಸಲಿಕ್ಕೆ ಇವರಿಗೆ ಆಸ್ಪದಬೇಕು. ಎಲ್ಲದರಲ್ಲಿಯೂ ಇವರಿಗೆ ಹಿರಿಯತನವಿದ್ದರೆಯೇ ಇವರಿಗೆ ಸಮಾಧಾನ ಮನಸ್ಸಿಗೆ ಬಂದಂತೆ ಕುಣಿಯಲಿಕ್ಕೆ ಉತ್ತೇಜನ ಕೊಡುವವರು ಇವರಿಗೆ ಪ್ರೀತ್ಯಾಸ್ಪದರು. ನಿಃಶಂಕೆಯಿಂದ ಗಟ್ಟಿಸಿಗಟ್ಟಿಸಿ ಮಾತಾಡುವದು, ಸ್ವಚ್ಛಂದವಾಗಿ ನಗುವದು ಕಲೆಯುವದು ಇವರ ಸ್ವಭಾವಗಳಾಗಿರುವವು. ಹೀಗೆ ನಡೆಯುವದು ಸರಳತನದ ಲಕ್ಷವೆಂತಲೂ, ಪುರುಷರ ಸಭೆಯಲ್ಲಿ ಮಾತಾಡುವದೂ, ಪುರುಷರಂತೆ ಸ್ವತಂತ್ರವಾಗಿ ವ್ಯವಹರಿಸುವದೂ ತಮ್ಮ ಗೌರವದ, ಹಾಗು ಪಾಂಡಿತ್ಯದ ಲಕ್ಷಣಗಳೆಂತಲೂ ಇವರು ವಾದಿಸುವರು! ಸದಾ ವಿಷಯಚಿಂತನವೂ, ವಿವಿಧ ವಿಷಯಸುಖಸಾಧನಗಳ ಸಂಪಾದನವೂ, ವಿಷಯ ಭೋಗಾಸಕ್ತಿಯೂ ಇವರ ಪರಮ ಪುರುಷಾರ್ಥಗಳಾಗಿರುವವು.

**೫ನೆಯ ಲಕ್ಷಣ**—ತಮ್ಮ ಬುದ್ಧಿವೈಭವ, ಜ್ಞಾನವೈಭವ, ಧನವೈಭವ, ಅಧಿಕಾರವೈಭವ ಮೊದಲಾದವನ್ನು ತಮ್ಮ ಪತಿಯ ಚರಣಕ್ಕೆ ನಿವಾಳಿತೆಗೆದು ಚಲ್ಲಿಕೊಟ್ಟು, ನಿಸ್ಪೃಹತೆಯಿಂದ ಪತಿದೈವತದ ಭೋಳೆ ಭಾವಿಕ ಭಕ್ತರಾಗಿರುವದು ಸಾಧ್ವಿಯರ ಐದನೆಯ ಲಕ್ಷಣ ವಾಗಿರುತ್ತದೆಂದು ಈ ಮೊದಲೆ ನಾವು ಹೇಳಿರುವೆವು; ಅದಕ್ಕೆ ವಿರುದ್ಧವಾಗಿ ಸುಖ ಲೋಲುಪರು, ತಮ್ಮಲ್ಲಿ ನಿಜವಾದ ಯಾವದೊಂದು ವೈಭವವು ಇದ್ದರಂತು ಸರಿಯೆ, ಒಂದು ಪಕ್ಷದಲ್ಲಿ ತಾವು ವೈಭವಹೀನರಾಗಿದ್ದರೂ ತಾವು ವೈಭವ ಶಾಲಿಗಳೆಂಬ ಅಹಂಕಾರದಿಂದ ತಮ್ಮ

ಕೃತ್ರಿಮ ವೈಭವದ ಪ್ರದರ್ಶನವನ್ನು ಅಟ್ಟಹಾಸದಿಂದ ಜನರೊಳಗೆ ಮಾತಾಡುತ್ತ ಎಗ್ಗಿಲ್ಲದೆ ತಮ್ಮ ಮೂಗು ಮೇಲೆ ಮಾಡಿಕೊಂಡು ತಮ್ಮ ಪತಿಯ ತೇಜೋಭಂಗ ಮಾಡುವರು. ತಮ್ಮಂತಹ ತೇಜಸ್ವಿ ಗುಣಾಢ್ಯ ಹೆಂಡಿರ ಗಂಡರಾದದ್ದರಲ್ಲಿ ತಮ್ಮ ಗಂಡಂದಿರಿಗೆ ಧನ್ಯತೆ ಯುಂಟೆಂತಲೂ, ಅಂತಹ ಅವರ ಧನ್ಯತೆಯನ್ನು ಹೆಚ್ಚಿಸಿದ ಮಾನದಿಂದ ತಮ್ಮ ಹಾಗು ತಮ್ಮ ಗಂಡಂದಿರ, ಅದೇಕೆ ತಮ್ಮ ದೇಶದ ಉತ್ಕರ್ಷವಾಗುವದೆಂತಲೂ ಇವರು ತಿಳಿಯುವರು. ಇಂತಹ ಇವರ ತಿಳುವಳಿಕೆಯ ಕೃತಿಗಳಿಂದ ಇವರ ಗಂಡಂದಿರು ಪೌರುಷಹೀನರಾಗಿ ಮೂಲೆಗುಂಪಾಗುವದರಲ್ಲಿ ಆಶ್ಚರ್ಯವಿಲ್ಲ!

೬ನೆಯ ಲಕ್ಷಣ—ಪತಿಯ ವಿಶ್ವಾಸದ ಸರ್ವ ಬಳಗವಾಗಿರುವದು ಸಾಧ್ವಿಯರ ಆರನೆಯ ಲಕ್ಷಣವಾಗಿರುತ್ತದೆಂದು ಈ ಮೊದಲೆ ನಾವು ಹೇಳಿರುವೆವಷ್ಟೆ? ಆದರೆ ಇದಕ್ಕೆ ವಿರುದ್ಧವಾಗಿ, ಕೃಪಣನಾದ ಧನಿಕನು ಬಾಡಿಗೆಯ ಎತ್ತನ್ನು ದಯಾದಾಕ್ಷಿಣ್ಯಹೀನನಾಗಿ ದುಡಿಸಿಕೊಳ್ಳುತ್ತಿರುವಂತೆ, ತಮ್ಮ ಗಂಡಂದಿರನ್ನು ದಯಾದಾಕ್ಷಿಣ್ಯಗಳಿಲ್ಲದೆ ದುಡಿಸಿಕೊಳ್ಳುವದು ಸುಖಲೋಲುಪ ಸ್ತ್ರೀಯರ ಆರನೆಯ ಲಕ್ಷಣವಾಗಿರುತ್ತದೆ. ಇವರ ಈ ಲಕ್ಷಣದ ಮೂಲಕ ಇವರ ಗಂಡಂದಿರು ಇವರ ಮೋರೆನೋಡಿ ಇವರಿಗೆ ಆಲೋಚನೆ ಹೇಳುವಾಗ ಶ್ವಪ್ರವೃತ್ತಿಯ ಮಂತ್ರಿಗಳೂ, ಅವರ ಸೇವೆ ಮಾಡುವ ವಿಷಯದಲ್ಲಿ ಅವರ ಜೀತದ ಆಳುಗಳೂ, ಅವರಿಗೆ ಚಕ್ಕಂದದ ಉಣಿಸು–ತಿನಿಸುಗಳ ನೊದಗಿಸಿ ಕೊಡುವ ವಿಷಯದಲ್ಲಿ ಹೋಟಲಿನ ನೌಕರರೂ, ಅವರೊಡನೆ ವಿಲಾಸಮಾಡುವ ಪ್ರಸಂಗದಲ್ಲಿ ಅವಿಶ್ವಾಸದ ವಿಲಾಸಿಗಳೂ, ಅವರ ಡಾಂಭಿಕ ಧರ್ಮಕಾರ್ಯಗಳಿಗೆ ಅನುಕೂಲವಾಗುವ ಪ್ರಸಂಗದಲ್ಲಿ ಅವರ ಎಡಬಲದ ಸೇವಕರೂ, ಅವರ ತಪ್ಪುಗಳನ್ನು ಕ್ಷಮಿಸುವ ವಿಷಯದಲ್ಲಿ ಎಗ್ಗಿಲ್ಲದ ನಾಯಿಗಳೂ ಆಗಿರಬೇಕಾಗುವದು ಪರಮ ದುಃಖದ ಸಂಗತಿಯೇ ಸರಿ; ಇಂತಹ ರಾಕ್ಷಸಿ ಸ್ವಭಾವದ ಹೆಂಡಿರ ಹೇಡಿ ಗಂಡಂದಿರು, ತಮ್ಮ ಆ ಹೆಂಡಿರೊಡನೆ ಮನೆಯಲ್ಲಿದ್ದು ಸಂಸಾರಮಾಡಲಾರದೆ, ಮತ್ತು ವಿಷಯಸುಖ—ತೃಷ್ಣೆಯ ಮೂಲಕ ಹೆಂಡಿರನ್ನು ಬಿಡುವ ಧೈರ್ಯವಿಲ್ಲದ್ದರಿಂದ ವಿರಾಗಿಗಳಾಗಿ ಮನೆಬಿಟ್ಟು ಹೋಗಲಾರದೆ, ಸುಂಬಳದೊಳಗಿನ ಹುಳದಂತೆ ಮನೆಯಲ್ಲಿಯೇ ಇದ್ದು ಕಷ್ಟದಿಂದ ಕಾಲಹರಣ ಮಾಡಬೇಕಾಗುವದು.

೭ನೆಯ ಲಕ್ಷಣ—ಸ್ವತಃ ವಿಷಯವಿರಾಗಿಗಳಾಗಿದ್ದು ಪತಿಯ ಸಲುವಾಗಿ ವಿಷಯರಾಗಿಗಳಾಗಿರುವದು ಸಾಧ್ವಿಯರ ಏಳನೆಯ ಲಕ್ಷಣವಾಗಿರುತ್ತದೆಂದು ಈ ಮೊದಲೆ ನಾವು ಹೇಳಿರುವೆವು; ಆದರೆ ಇದಕ್ಕೆ ವಿರುದ್ಧವಾಗಿ, ತಾವು ವಿಷಯಾಸಕ್ತರಾಗಿರುವರಲ್ಲದೆ, ತಮ್ಮ ಗಂಡಂದಿರನ್ನು ಪ್ರಯತ್ನಪೂರ್ವಕ ವಿಷಯಸುಖದ ಕೀಟಕಗಳಾಗ ಮಾಡುವದು ಸುಖಲೋಲುಪ ಸ್ತ್ರೀಯರ ಏಳನೆಯ ಲಕ್ಷಣವಾಗಿರುತ್ತದೆ! ಈ ಲಕ್ಷಣದ ಮೂಲಕ ಈ ನರಕಭಾಜನ ಸ್ತ್ರೀಯರು, ವಿಷಯ ಸುಖಗಳಿಗಾಗಿ ಸರ್ವ ಧರ್ಮಗಳನ್ನು ಪರಿತ್ಯಜಿಸಿ, ಸ್ವೇಚ್ಛಾಚಾರಿಗಳಾಗಿ, ತಮ್ಮ ಪ್ರಾರಬ್ಧದಿಂದ ಪ್ರಾಪ್ತವಾದವಲ್ಲದೆ ಈ ಜನ್ಮದ ತಮ್ಮ ವಿವಿಧ ಪಾತಕರೂಪ ತೀಕ್ಷ್ಣಶಸ್ತ್ರಗಳಿಂದ ಪತಿಯ ಆಯುಷ್ಯವನ್ನು "ಛಿನ್ನವಿಚ್ಛಿನ್ನವಾಗಿ ಮಾಡಿ,

ಆತನಿಗೆ ಅಕಾಲ ಮರಣವನ್ನುಂಟುಮಾಡಿ ತಾವು ವಿಧವೆಯರಾಗುವರು! ಆದರೆ ಇವರಿಗೆ ತಮ್ಮ ಪತಿಯ ಈ ಅಕಾಲ ಮರಣದ ನಿಜವಾದ ದುಃಖವು ಆಗುವದಿಲ್ಲ. ಅಥವಾ, ತಮ್ಮ ಯಥೇಚ್ಛ ಸುಖಾನುಕೂಲತೆ ಇಲ್ಲದಾಯಿತೆಂಬ ಕಾರಣದಿಂದ ತತ್ಕಾಲಕ್ಕೆ ಇವರಿಗೆ ಅಲ್ಪ ಸ್ವಲ್ಪ ದುಃಖವಾದರೂ, ಅದು ಕಡೆತನಕ ನಿಲ್ಲದೆ, ಎಲ್ಲ ಹಿರಿಯತನವು ತಮ್ಮದೇ ಆಯಿತಲ್ಲ ಎಂದು ಇವರು ಬರಬರುತ್ತ ಮನಸ್ಸಿನಲ್ಲಿ ಹಿಗ್ಗತೊಡಗುವರು. ಆಗ ಇವರು, ಸಂಸಾರದ ಭಾರವೆಲ್ಲ ತಮ್ಮ ಮೇಲೆಯೇ ಬಿದ್ದಿತೆಂದು ತಿಳಿದು, ಅದನ್ನು ವಹಿಸುವದಕ್ಕಾಗಿ ಚತುರ್ಭುಜರಾಗುವರಲ್ಲದೆ, ಕೆಲಕೆಲವರು ದೇಶ ಹಿತೈಷಿಗಳ ಸೋಗಿನಿಂದ ತಮ್ಮ ಸ್ವೇಚ್ಛಾಚಾರಗಳಿಗೆ ಹೆಚ್ಚು ಆಸ್ಪದವನ್ನುಂಟುಮಾಡಿಕೊಳ್ಳುವರು! ಅಂದಬಳಿಕ ಇಂತಹ ಉಪದ್ವ್ಯಾಪಿ ಸ್ವೇಚ್ಛಾಚಾರಿ ಸ್ತ್ರೀಯರಿಗೆ ತಮ್ಮ ಪತಿಯು ಮರಣ ಹೊಂದಲು ವೈರಾಗ್ಯವು ಉತ್ಪನ್ನವಾಗುವದೆತ್ತ? ಪತಿಯ ಪಶ್ಚಾತ್ ಸಹಜಮರಣ ಸಹಗಮನಗಳ ಪ್ರಸಂಗಗಳಂತು ಇರಲಿ, ಕಠಿಣವ್ರತಾವ ಲಂಬನವನ್ನಾದರೂ ಇವರು ಹೇಗೆ ಮಾಡಬೇಕು? ಆದ್ದರಿಂದ ಪತಿಯ ಮರಣಾನಂತರ ಇವರ ಬಂಧನಗಳೆಲ್ಲ ಪೂರಾ ಹರಿದುಹೋದಂತಾಗಿ, ಇವರು ಹೆರೆಯುಚ್ಚಿದ ಹಾವಿನಂತೆ ಚಪಲರೂ, ಇರಕ ತುಡುಗ ದನದಂತೆ ಸ್ವೆಚ್ಛಾಚಾರಿಗಳೂ, ಪಂಜರದಿಂದ ತಪ್ಪಿಸಿಕೊಂಡ ಹುಲಿಯಂತೆ ಕ್ರೂರರೂ ಆಗಿ, ತಮಗೆ ಹಕ್ಕಿನಿಂದ ಬಂದಿದ್ದ ಪತಿಯ ಪುಣ್ಯಾರ್ಥವನ್ನು ಕ್ಷೀಣಮಾಡಿ ಕೊಳ್ಳುವದಕ್ಕಾಗಿ ಬಹುದಿವಸ ಬಾಳಿ, ಕಡೆಗೆ ತಮ್ಮ ಘೋರ ಪಾತಕದ ಯೋಗದಿಂದ ರೌರವಾದಿ ಘೋರ ನರಕಗಳಿಗಿಳಿಯುವರು! ಹೀಗೆ ತಮ್ಮ ಹಿತವನ್ನೇ ಸಾಧಿಸಿಕೊಳ್ಳಲಾರದೆ ಇವರಿಂದ ಸ್ವೇಚ್ಛಾಚರಣೆಯ ಪ್ರಸಾರವಲ್ಲದೆ ಬೇರೆ ನಿಜವಾದ ರಾಷ್ಟ್ರಹಿತವೇನಾಗುವದೋ ದೇವರೇ ಬಲ್ಲ!

## ಪತಿಭಕ್ಷಕ ಸ್ತ್ರೀವರ್ಗಗಳು

ಹೀಗೆ ಮುರಗೀಶ ಗುರುವರನ ಆವೇಶ ಹೊಂದಿದ್ದ ರಣಹುಚ್ಚಿಯು, ಸುಖಲೋಲುಪ ಸ್ತ್ರೀಯರ ಲಕ್ಷಣಗಳನ್ನು ಹೇಳಲು, ಅದನ್ನು ಕೇಳಿ ಗುರುಶಾಂತಪ್ಪನು ಆಶ್ಚರ್ಯಪಟ್ಟು ತನ್ನ ಮನಸ್ಸಿನಲ್ಲಿ—''ತಾನು ಎಟ್ಟಿಹೆಣ್ಣು ಮಗಳೆಂದು ಹೇಳಿಕೊಳ್ಳುವ ಈ ರಣಹುಚ್ಚಿಯು, ತನ್ನಂತೆಯೇ ಎಟ್ಟಿ ಹೆಣ್ಣುಮಕ್ಕಳಾದ ಸುಖಲೋಲುಪರ ಲಕ್ಷಣ ಹೇಳಲು ಯೋಗ್ಯಳೆಂದು ತಿಳಿದೇ, ಶ್ರೀ ಸದ್ಗುರುನಾಥನು ಈಕೆಯಿಂದ ಈ ಬೋಧವನ್ನು ಮಾಡಿಸಿರಬಹುದೇ? ಈಕೆಯ ವಿಷಯವಿವೇಚನವು ಎಷ್ಟು ಯಥಾರ್ಥವಾಗಿದೆಯಲ್ಲ! ನನಗಂತೂ ಶ್ರೀ ಸದ್ಗುರುನಾಥನೇ ನಮ್ಮನ್ನು ಬೋಧಿಸುತ್ತಿರುವಂತೆ ಭಾಸವಾಗುವದು; ಆದರೆ ಅತ್ತ ಸದ್ಗುರುನಾಥನು ಧ್ಯಾನಸ್ಥನಾಗಿ ಕುಳಿತಿದ್ದು ಪ್ರತ್ಯಕ್ಷ ರಣಹುಚ್ಚಿಯು ನಮ್ಮನ್ನು ಬೋಧಿಸುತ್ತಿರುವದನ್ನು ನಾವು ಕಣ್ಣುಮುಟ್ಟ ನೋಡುತ್ತಿರುವೆವು. ಇಂತಹ ಈ ಆಶ್ಚರ್ಯವನ್ನು ನನ್ನ ಆಯುಷ್ಯದಲ್ಲಿ ನಾನು ನೋಡಿದ್ದು ಇದೇ

ಮೊದಲು! ಇದರ ಗೂಢವು ಮಾತ್ರ ನನಗೆ ತಿಳಿಯಲೊಲ್ಲದು. ಆದರೆ ಈಗ ಬೋಧಕಳಾಗಿರುವ ರಣಹುಚ್ಚಮ್ಮನು ಈ ಗೂಢವನ್ನು ಬಿಚ್ಚಿ ಹೇಳಬಹುದೇನು? ಈಕೆಯನ್ನು ನಾನು ಕೇಳಿಬಿಡಲಾ? ಶಂಕಾನಿವಾರಣ ಮಾಡುವದು ಬೋಧಕರ ಕರ್ತವ್ಯವಾಗಿರಲು, ಕೇಳಲಿಕ್ಕೆ ನಾನೇಕೆ ಸಂಕೋಚ ಪಡಬೇಕು? ಮಧ್ಯರಾತ್ರಿಯ ಕಾಳಗದಲ್ಲಿ ಪುರುಷರ ಹಿಂಡಿನಲ್ಲಿ ನಿರ್ಭಯದಿಂದ ಬಂದಿದ್ದ, ಹಾಗು ಪರಪುರುಷರೊಡನೆ ನಿಃಶಂಕೆಯಿಂದ ವ್ಯವಹರಿಸುವ ಈ ರಣಹುಚ್ಚಿಯು, ನೀಚಳಾದ ಸುಖಲೋಲುಪ ಸ್ತ್ರೀಯೇ ಅಲ್ಲ; ನೀಚತಮಳಾದ ಸಾಹಸೀ ಸ್ತ್ರೀಯೂ ಇರುವ ಸಂಭವವಿದೆ. ಅಂದಬಳಿಕ ಸದ್ಗುರುನಾಥನು ಇಂತಹ ಗೌರವದ ಬೋಧವನ್ನು ಈಕೆಯಿಂದ ಮಾಡಿಸಿ ಈಕೆಯನ್ನು ಯಾಕೆ ಗೌರವಿಸಿರಬಹುದು'' ಎಂದು ಆಕ್ಷೇಪಿಸಿ, ರಣಹುಚ್ಚಿಯನ್ನು ಕುರಿತು ಪ್ರಶ್ನೆ ಮಾಡಬೇಕೆನ್ನುತ್ತಿರಲು. ಏನೋ ಆಲೋಚಿಸುತ್ತಿರುವವಳಂತೆ ಸುಮ್ಮನೆ ಕುಳಿತಿದ್ದ ರಣಹುಚ್ಚಿಯು, ಒಮ್ಮೆಲೆ ಗುರುಶಾಂತಪ್ಪನ ಕಡೆಗೆ ನೋಡಿ ಮುಗುಳುನಗೆ ನಗುತ್ತ ಆತನನ್ನು ಕುರಿತು—''ಗುರುಶಾಂತಪ್ಪಾ, ನಿನ್ನ ಆಕ್ಷೇಪಗಳು ವಿಚಾರಮಾಡತಕ್ಕವೆಂಬದರಲ್ಲಿ ಸಂಶಯವಿಲ್ಲ, ಅವುಗಳ ಸಮಾಧಾನವನ್ನು ನೀನು ನಮ್ಮಿಂದ ಮಾಡಿಕೊಳ್ಳಲೇಬೇಕು; ಆದರೆ ಅದಕ್ಕಾಗಿ ನೀನೇಕೆ ನಮಗೆ ಪ್ರಶ್ನಮಾಡುವೆ? ನಾವೇ ಅವುಗಳಿಗೆ ಸಮಾಧಾನ ಹೇಳುವೆವು ಕೇಳು'' ಅನ್ನಲು, ಗುರುಶಾಂತಪ್ಪನು ದಂಗುಬಡಿದು ತೆಪ್ಪಗಾದನು! ಆಗ ರಣಹುಚ್ಚಿಯು ಗುರುಶಾಂತಪ್ಪನನ್ನು ಕುರಿತು—

ರಣಹುಚ್ಚಿ—ಗುರುಶಾಂತಪ್ಪಾ, ಈಗ ನಿನ್ನ ಆಕ್ಷೇಪಗಳು ಎರಡು ಇರುತ್ತವೆ. ರಣಹುಚ್ಚಿಯು ಸದ್ಗುರುನಾಥನೇ ಆಗಿ, ಹೇಗೆ ಬೋಧೆ ಮಾಡುತ್ತಿರಬಹುದೆಂಬದು ನಿನ್ನ ಮೊದಲನೆಯ ಆಕ್ಷೇಪವು; ರಣಹುಚ್ಚಿಯು ಸುಖಲೋಲುಪಳೋ, ಅಥವಾ ಸಾಹಸಿಯೋ ಆಗಿರಲು, ಅಂಥ ಹೀನಳನ್ನು ಸದ್ಗುರುನಾಥನು ಬೋಧಕಳನ್ನು ಹೇಗೆ ಮಾಡಿರಬಹುದೆಂಬದು ನಿನ್ನ ಎರಡನೆಯ ಆಕ್ಷೇಪವು. ನಿನ್ನ ಈ ಎರಡೂ ಆಕ್ಷೇಪಗಳು, ನೀನು ಸೂಕ್ಷ್ಮ ವಿಚಾರ ಮಾಡದೆ ಯಿದ್ದದ್ದರಿಂದ ನಿನ್ನಲ್ಲಿ ಉಂಟಾಗಿರುವವು! ಗುರುಶಾಂತಪ್ಪಾ, ರಣಹುಚ್ಚಿಯು ವಿವಾಹಿತ ಸ್ತ್ರೀಯಾಗಿರದೆ, ಸರಳಭಾವದ ಕುಮಾರಿಕೆಯಾಗಿರುವಳು. ನಾವು ಈ ಮೊದಲೆ ಸ್ತ್ರೀಯರಲ್ಲಿ ಮಾಡಿರುವ ನಾಲ್ಕು ವರ್ಗಗಳು, ವಿವಾಹಿತ ಸ್ತ್ರೀಯರಲ್ಲಿಯವೆಂಬುದನ್ನು ನೀನು ಲಕ್ಷದಲ್ಲಿಡತಕ್ಕದ್ದು; ಅಂದಬಳಿಕ ಆ ಲಕ್ಷಣಗಳು ರಣಹುಚ್ಚಿಗೆ ಹೇಗೆ ಸಂಬಂಧಿಸುವವು? ಆ ನಿರ್ಮಲಾಂತಃಕರಣದ ರಣಹುಚ್ಚಿಯು ಸಾಧ್ವಿಯೂ ಅಲ್ಲ, ಸುವಿಚಾರಿಯೂ ಅಲ್ಲ, ಸುಖಲೋಲುಪಳೂ ಅಲ್ಲ, ಸಾಹಸಿಯೂ ಅಲ್ಲ! ತನ್ನ ತಂದೆಯನ್ನು ಕೊಂದಿದ್ದ ದಳವಾಯಿ ಮುದ್ದನನ್ನು ಕೊಂದ ಹೊರತು ತಾನು ಲಗ್ನವಾಗಲಿಕ್ಕಿಲ್ಲವೆಂದು ಆ ಕುಮಾರಿಕೆಯು ದುಃಖಾವೇಶದಲ್ಲಿ ಪ್ರತಿಜ್ಞೆ ಮಾಡಿ ತಪಸ್ವಿನಿಯಂತೆ ಈವರೆಗೆ ಕಾಲಹರಣ ಮಾಡುತ್ತ ಬಂದಿರುವಳು! ಅಂದಬಳಿಕ ಹಸುಗೂಸಿನ ಅಂತಃಕರಣದಂತೆ ನಿರ್ಮಲವಾಗಿದ್ದ ಆಕೆಯ ಅಂತಃಕರಣವು, ನಿರ್ಮಲಾಂತಃ ಕರಣದ ತಪೋಧನರಿಗೆ ಪ್ರಸಂಗವಶಾತ್ ಸ್ಪೃಶ್ಯವಾಗಿರುವದೆಂಬದನ್ನು ನೀನು ಲಕ್ಷ್ಯದಲ್ಲಿಡತಕ್ಕದ್ದು. ಮಲಿನಾಂತಃಕರಣದವರಲ್ಲಿ ಕಾರಣವಶಾತ್ ಭೂತಾವೇಶವು

ಆಗುತ್ತಿರುವಂತೆ, ಶುದ್ಧಾಂತಃಕರಣದವರಲ್ಲಿ ದೇವತೆಗಳೇ ಮೊದಲಾದವರ ಸದಾವೇಶಗಳೂ ಪ್ರಸಂಗವಶಾತ್ ಆಗುವದುಂಟು. ಹಿಂದಕ್ಕೆ ಬಹು ಪ್ರಾಚೀನ ಕಾಲದಲ್ಲಿ ಸುಲಭಾಯೆಂಬ ಸಚ್ಚಾರಿತ್ರ್ಯದ ಸ್ತ್ರೀಯು, ವಿದೇಹ ಜನಕನ ಅಂತಃಕರಣ ಪ್ರವೇಶ ಮಾಡಿದ್ದನ್ನು ಮಹಾ ಭಾರತದಲ್ಲಿ ಹೇಳಿರುವದು. ಅದರಂತೆ, ಇತ್ತ ಕಡೆಗೆ ಶ್ರೀ ಶಂಕರಾಚಾರ್ಯರು ಅನಿರ್ವಾಹ ಪ್ರಸಂಗದಲ್ಲಿ ಅಮರಕರಾಜನ ಮೃತದೇಹವ ಪ್ರವೇಶಿಸಿದ್ದನ್ನು ನೀನು ಕೇಳಿರಬಹುದು. ಅದರಂತೆ ಗುರುಶಾಂತಪ್ಪಾ, ಕೇವಲ ನಿನ್ನ ಮಗಳ ಘನವಾದ ಯೋಗ್ಯತೆಯನ್ನು ತಿಳಿಸುವ ನೆವದಿಂದ, ನಿಮ್ಮನ್ನು ಬೋಧಿಸುವ ತೊಡಕಿಗೆ ಸಿಕ್ಕಿದ್ದ ನಮಗೆ, ಪತಿ ಭಕ್ಷಕ ಸ್ತ್ರೀಯರ ಲಕ್ಷಣಗಳನ್ನು ಕುರಿತು ಬೋಧಿಸುವ ಪ್ರಸಂಗವು ಬಂದಿತು; ಆದರೆ ನಾವೇ ನಮ್ಮ ಮುಖದಿಂದ ಅದನ್ನು ಬೋಧಿಸುವದು ನಮಗೆ ಪ್ರಶಸ್ತವಾಗಿ ತೋರದ್ದರಿಂದ, ಈಗ ನಾವು ಅದನ್ನು ರಣಹುಚ್ಚಿಯ ಮುಖಾಂತರ ಬೋಧಮಾಡುತ್ತಿರುವೆವು! ಗುರುಶಾಂತಪ್ಪಾ, ಆತ್ಮನು ನಿರ್ಲಿಪ್ತನಾಗಿದ್ದರೂ ದೇಹಧಾರಿಗಳು ಯಾರೇ ಇರಲಿ, ದೇಹ ದೃಷ್ಟಿಯಿಂದ ಸೂಕ್ತಾ ಸೂಕ್ತಗಳ ವಿಚಾರ ಮಾಡಿ ಕೆಲಸಮಾಡಬೇಕಾಗುತ್ತದೆ! ಇರಲಿ, ಈಗಿನ ನಮ್ಮ ಬೋಧದಿಂದ ನಿನ್ನ ಎರಡೂ ಆಕ್ಷೇಪಗಳ ಸಮಾಧಾನವಾಗಿರಬಹುದು; ಆಗಿರದಿದ್ದರೆ, ಮತ್ತೆ ಯಾವಾಗಾದರೂ ಅವುಗಳ ಸಮಾಧಾನ ಮಾಡಿಕೊಳ್ಳಿವೆಯಂತೆ! ಸದ್ಯಕ್ಕೆ ನಾವು ಸಾಹಸೀ ಸ್ತ್ರೀಯರ ಲಕ್ಷಣಗಳನ್ನು ಹೇಳುವ ಮೊದಲು, ಈವರೆಗೆ ಹೇಳಿರುವ ಸ್ತ್ರೀಯರ ವರ್ಣನದ ಸಿಂಹಾವಲೋಕನವನ್ನು ಸ್ವಲ್ಪದರಲ್ಲಿ ಮಾಡುವೆವು.

ಸಿಂಹಾವಲೋಕನ—ಒಟ್ಟಿಗೆ, ಸ್ತ್ರೀಯರಲ್ಲಿ ನಾಲ್ಕು ವರ್ಗಗಳಿರುವವೆಂದು ನಾವು ಹೇಳಿದೆವು. ಅವರಲ್ಲಿ ಮೊದಲಿನ ಮೂವರು, ಅಂದರೆ, ಸಾಧ್ವಿಯರು, ಸುವಿಚಾರಿಗಳು, ಸುಖಲೋಲುಪರು ಒಂದಿಲ್ಲೊಂದು ಕಾರಣದಿಂದ ಪತಿಯನ್ನು ಇಚ್ಛಿಸುತ್ತಿರುವರು; ಅವರಲ್ಲಿ ಮೊದಲನೆಯ ಉತ್ತಮವರ್ಗದವರಾದ ಸಾಧ್ವಿಯರು, ತಮ್ಮನ್ನು ಉದ್ಧರಿಸುವ ದೇವರೆಂಬ ದೃಷ್ಟಿಯಿಂದ ಪತಿಯನ್ನು ಇಚ್ಛಿಸುವರು. ಅವರು ತಮ್ಮ ಪತಿದೈವತದ ಉಪಾಸನೆಯೆಂದು ತಿಳಿದು, ನೆರಳಿನಂತೆ ಪತಿಯನ್ನು ಅನುಸರಿಸಿ, ಆತನ ಸಂತೋಷಕ್ಕಾಗಿ ವಿಷಯಸುಖಗಳನ್ನು ಭೋಗಿಸುತ್ತ ಸ್ವತಃ ಸರ್ವಸಂಗ ಪರಿತ್ಯಾಗಿಗಳಾಗಿ ಪತಿಸೇವೆಯನ್ನು ಮಾಡಿ, ಬದುಕಿರುವತನಕ ಇಲ್ಲಿ ಲೋಕಪೂಜ್ಯತೆಯನ್ನೂ, ಮರಣಾನಂತರ ಮೋಕ್ಷವನ್ನೂ ಪಡೆಯುವರು! ಎರಡನೆಯ ಮಧ್ಯಮ ವರ್ಗದವರಾದ ಸುವಿಚಾರಿ ಸ್ತ್ರೀಯರು, ತಮ್ಮ ಪಾತಿವ್ರತ್ಯಧರ್ಮ ಪಾಲನಕ್ಕಾಗಿ ಪತಿಯನ್ನು ಇಚ್ಛಿಸುವರು. ಅವರು ತಮ್ಮ ಪಾತಿವ್ರತ್ಯ ಧರ್ಮವನ್ನು ಪಾಲಿಸುತ್ತ ಪತಿಯು ಧರ್ಮವಿರುದ್ಧವಾಗಿ ನಡೆದರೆ, ಅಥವಾ ತಮ್ಮ ಧರ್ಮಾಚರಣೆಗೆ ಆತನು ಬಾಧೆಯುಂಟು ಮಾಡಿದರೆ, ಆತನನ್ನು ಪ್ರೇಮಪೂರ್ವಕವಾಗಿ ಬೋಧಿಸಿ, ಆತನನ್ನು ಧರ್ಮಮಾರ್ಗಕ್ಕೆ ಹಚ್ಚಲು ಯತ್ನಿಸುತ್ತ ಒಂದು ಪಕ್ಷದಲ್ಲಿ ಪತಿಯು ಧರ್ಮವನ್ನು ಬಿಟ್ಟರೂ ತಾವು ಧರ್ಮವನ್ನು ಬಿಡದೆ, ಧರ್ಮಸಮ್ಮತ ವಿಷಯಸುಖಗಳನ್ನು ಪತಿಯು ಭೋಗಿಸಿದರೆ ಮಾತ್ರ ತಾವು ಭೋಗಿಸುತ್ತ ಧರ್ಮವಿರುದ್ಧ ಸಂಗತಿಗಳ ಪರಿತ್ಯಾಗಪೂರ್ವಕವಾಗಿ ಆತನನ್ನು ಸೇವಿಸುತ್ತ

ಪತ್ಯಧೀನರಾಗಿ ನಡೆದು, ಬದುಕಿರುವವರೆಗೆ ಲೋಕಮಾನ್ಯರಾಗಿ, ಮರಣಾನಂತರ ಉಚ್ಚ ಲೋಕಗಳನ್ನು ಪಡೆಯುವರು! ಮೂರನೆಯ ಅಧಮ ವರ್ಗದವರಾದ ಸುಖಲೋಲುಪರು, ತಮ್ಮ ಸೌಭಾಗ್ಯರಕ್ಷಣದ, ಹಾಗು ತಮ್ಮ ಯಥೇಚ್ಛ ಸುಖಭೋಗದ ಸಾಧನವೆಂಬ ದೃಷ್ಟಿಯಿಂದ ಪತಿಯನ್ನು ಇಚ್ಛಿಸುವರು. ಅವರು ತಮ್ಮ ಪತಿಯನ್ನು ತಮ್ಮ ವಿವಿಧ ಸುಖೋಪಭೋಗಗಳ ಸಾಧನವಾಗಿ ಉಪಯೋಗಿಸಿಕೊಳ್ಳುತ್ತ ಪತಿಯು ತಮ್ಮ ಇಚ್ಛೆಯಂತೆ ನಡೆಯದೆ ಇದ್ದಾಗ ಆತನನ್ನು ತಿರಸ್ಕರಿಸುತ್ತ ಆತನ ಹಂಗಿಲ್ಲದೆ ಯಥೇಚ್ಛ ವಿಷಯಭೋಗಿಗಳಾಗಿ, ತೋರಿಕೆಗಾಗಿ ಪತಿಯನ್ನು ಸೇವಿಸುವ ಸೋಗಿನಿಂದ ಇಲ್ಲಿ ಇರುವ ತನಕ ಅಯೋಗ್ಯರೆನಿಸಿಕೊಂಡು, ಮರಣಾನಂತರ ಅಧಃಪತನವನ್ನು ಹೊಂದುವರು. ಈ ಮೂರು ವರ್ಗಗಳಲ್ಲಿ ಸಾಧ್ವಿಯರ ಸಂಖ್ಯೆಯು ತೀರ ವಿರಲ, ಸುವಿಚಾರಿಗಳ ಸಂಖ್ಯೆಯು ಅದಕ್ಕೂ ಹೆಚ್ಚು, ಸುಖಲೋಲುಪರ ಸಂಖ್ಯೆಯು ವಿಪುಲ!

**ಸಾಹಸೀ ಸ್ತ್ರೀಯರ ಲಕ್ಷಣಗಳು**—ಹೀಗೆ ಪತಿಯನ್ನು ಇಚ್ಛಿಸುವ ಮೂರು ವರ್ಗದವರ ಲಕ್ಷಣಗಳನ್ನು ಮೇಲೆ ಹೇಳಿದೆಯಷ್ಟೆ? ಇನ್ನು ಮೇಲೆ ತಮಗೆ ಪತಿಯು ಬೇಡವೇ ಬೇಡವೆಂದು ಹೇಳುವ ನೀಚತಮರಾದ ಸಾಹಸೀ ಸ್ತ್ರೀಯರ ಲಕ್ಷಣಗಳನ್ನು ಅನಿರ್ವಾಹ ಪಕ್ಷ ಹೇಳತೊಡಗುವೆವು. ಈ ಮೊದಲೆ ನಾವು ಸ್ತ್ರೀಯರ ಮೂರು ವರ್ಗಗಳ ಏಳು ಲಕ್ಷಣಗಳನ್ನು ಹೇಳಿರುವೆವು; ಆದರೆ ಆ ಲಕ್ಷಣಗಳು ಪತಿಯನ್ನು ಇಚ್ಛಿಸುವವರಿಗೆ ಸಂಬಂಧಿಸಿದವಾಗಿರುವದರಿಂದ, ಪತಿಯನ್ನು ಇಚ್ಛಿಸದೆಯಿರುವ ಈ ಸಾಹಸೀ ಸ್ತ್ರೀಯರಿಗೆ ಅವು ಸಂಬಂಧಿಸಿರುವದಿಲ್ಲ; ಆದ್ದರಿಂದ ಹಿಂದಿನ ಮೂರು ವರ್ಗದ ಸ್ತ್ರೀಯರನ್ನು ಸಲಕ್ಷಣ ಸ್ತ್ರೀಯರೆಂದು ಕರೆದರೆ, ಈ ಸಾಹಸೀ ಸ್ತ್ರೀಯರನ್ನು ವಿಲಕ್ಷಣ ಸ್ತ್ರೀಯರೆಂದು ಕರೆಯಬೇಕಾಗುವದು! ಹಾಗೆ ಕರೆದರೆ, ಇವರ ಒಂದೇ ಒಂದು ಲಕ್ಷಣವಾದ ಅನಿರ್ಬಂಧ ಸ್ವೇಚ್ಛಾಚಾರವೆಂಬ ಲಕ್ಷಣವು, ಈ ಮೊದಲೆ ಹೇಳಿರುವ ಆ ಏಳು ಲಕ್ಷಣಗಳಿಂದ ವಿಲಕ್ಷಣವಾಗಿರುವದೆಂದು ತಿಳಿಯಬೇಕಾಗುವದು! ಈ ಸಾಹಸೀ ಸ್ತ್ರೀಯರು ತಮ್ಮ ಸ್ವೇಚ್ಛಾಚಾರಕ್ಕೆ ಎಷ್ಟೂ ಆತಂಕವಿರಬಾರದೆಂದು ತಿಳಿದು, ತಮ್ಮ ಇದ್ದ ಪತಿಯನ್ನು ಇಲ್ಲದಂತೆ ಭಾವಿಸಿ ತಾವು ಸ್ವೇಚ್ಛಾಚಾರಿಗಳಾಗುವರು; ಆತನು ಸತ್ತರೆ ಅರಿಷ್ಟ ಹೋಯಿತೆಂದು ಅನ್ನುವರು; ಆತನು ತಮ್ಮನ್ನು ತಿರಸ್ಕರಿಸಿ ತಮ್ಮ ಸ್ವೇಚ್ಛಾಚಾರಕ್ಕೆ ಪ್ರತಿಬಂಧಮಾಡಿದರೆ, ಆತನನ್ನು ಬಿಟ್ಟುಬಿಡುವರು; ಅಥವಾ ಉಪಾಯಾಂತರದಿಂದ ಆತನ ಪ್ರತಿಬಂಧವನ್ನು ಪರಿಹರಿಸಿಕೊಳ್ಳುವರು. ಅಥವಾ ಈ ಸಾಹಸೀ ಸ್ತ್ರೀಯರು ಮೂಲತಃ ಲಗ್ನವನ್ನೇ ಮಾಡಿಕೊಳ್ಳದೆ, ಕುಮಾರಿಕೆಯರಾಗಿಯೇ ಇದ್ದು ಸ್ವೇಚ್ಛಾಚಾರಿಗಳಾಗಲಿಕ್ಕೆ ಹಿಂದೆ ಮುಂದೆ ನೋಡುವದಿಲ್ಲ! ಇವರು ಲಗ್ನಮಾಡಿಕೊಳ್ಳುವದು ತಮ್ಮ ಪರಾಧೀನತೆಗೆ ಕಾರಣವೆಂತಲೂ, ತಮ್ಮ ಯಥೇಚ್ಛ ಸುಖಕ್ಕೆ ಅದು ಪ್ರತಿಬಂಧಕವೆಂತಲೂ, ತಮ್ಮ ಸರ್ವತಂತ್ರ ಸ್ವಾತಂತ್ರ್ಯದ ಜನ್ಮಸಿದ್ಧ ಹಕ್ಕಿಗೆ ಅದು ಅಪಮಾನಾಸ್ಪದವೆಂತಲೂ ತಿಳಿಯುವರು! ಇಂತಹ ಕಗ್ಗತನದ ತಿಳುವಳಿಕೆಯ ಮೂಲಕ, ಇನ್ನು ಮೇಲೆ ಬರಬರುತ್ತ ಎಂತಹ ಲೋಕವಿಲಕ್ಷಣಗಳಾದ ಅಸುರೀ ಉಪಾಯಗಳು ಸಾಹಸಿಗಳಿಂದ

ಯೋಜಿಸಲ್ಪಡುವವೆಂಬದನ್ನು ಹೇಳುವದು ಸುಲಭವಲ್ಲ. ಇವರು ತಮ್ಮ ಕೇವಲ ಅಶಾಸ್ತ್ರೀಯ ಶಬ್ದಪಾಂಡಿತ್ಯದಿಂದ ರಾಷ್ಟ್ರಧುರೀಣರಾಗಿ ರಾಷ್ಟ್ರವನ್ನು ಉತ್ತರೋತ್ತರ ಅಧಃಪತನದ ಗತಿಗೆ ಗುರಿಮಾಡುತ್ತ ಹೋಗುವಲ್ಲಿ ಸಂಶಯವಿಲ್ಲ! ಈ ದುರ್ವಿಷಯಾಸಕ್ತರು, ''ಹಡೆದ ಬಳಿಕ ಹರೆಯು ಹೋಗುವದು'' ಎಂದು ತಿಳಿದು, ತಾವು ಪ್ರಸವವೇದನೆಗೂ, ಮಕ್ಕಳ ಸಂರಕ್ಷಣದ ಕಷ್ಟಕ್ಕೂ ಗುರಿಯಾಗಬಾರದೆಂದು, ಸಂತತಿ ಪ್ರತಿಬಂಧಕ ಉಪಾಯಗಳನ್ನು ಬುದ್ಧಿಪೂರ್ವಕ ಮಾಡುವರು; ಅಥವಾ ತಮ್ಮ ಗರ್ಭಾಶಯವನ್ನೇ ನಷ್ಟಗೊಳಿಸುವದಕ್ಕೆ ಹಿಂದೆ ಮುಂದೆ ನೋಡುವದಿಲ್ಲ; ಪುರುಷರಷ್ಟೇ ಸ್ತ್ರೀಯರಿಗೆ ಸ್ವಾತಂತ್ರ್ಯವಿರಬೇಕೆಂತಲೂ, ಪುರುಷರಿಗೆ ಬಹುಜನ ಹೆಂಡಿರನ್ನು ಮಾಡಿಕೊಳ್ಳುವ ಅಧಿಕಾರವಿದ್ದು ಸ್ತ್ರೀಯರಿಗೆ ಮಾತ್ರ ಬಹುಜನ ಗಂಡಂದಿರನ್ನು ಮಾಡಿಕೊಳ್ಳುವ ಅಧಿಕಾರವಿಲ್ಲದಿರುವದು ಅನ್ಯಾಯವಷ್ಟೇ ಅಲ್ಲ, ಸ್ತ್ರೀ ಸಮಾಜಕ್ಕೆ ಅದು ಅಪಮಾನಾಸ್ಪದ ವೆಂತಲೂ, ಮನೆಗೆಲಸಗಳಲ್ಲಾಗಲಿ, ವ್ಯವಹಾರೋದ್ಯೋಗ ಗಳಲ್ಲಾಗಲಿ ತಮ್ಮ ಇಚ್ಛೆಯಂತೆ, ಹಾಗು ತಮ್ಮ ಯೋಗ್ಯತೆಯಂತೆ, ಹಾಗು ತಮ್ಮ ಅನುಕೂಲತೆ ಯಂತೆ ಬೇಕಾದ ಹಾಗೆ ನಡೆಯಲು ಸ್ತ್ರೀಪುರುಷರಿಬ್ಬರಿಗೂ ಸಮಾನ ಅಧಿಕಾರವಿರ ಬೇಕೆಂತಲೂ ಪ್ರತಿಪಾದಿಸುವರು. ಇವರು ತಮಗಿಂತ ಬಲ್ಲವರು ಈ ಜಗತ್ತಿನಲ್ಲಿ ಇನ್ನೊಬ್ಬರು ಇರುವದಿಲ್ಲ, ಹಿಂದೆ ಯಾರೂ ಆಗಿರುವದಿಲ್ಲ; ಇನ್ನು ಮುಂದೆ ಆಗುವದಿಲ್ಲ ಎಂಬ ಮೂರ್ಖತನದ ಅಹಂಭಾವವುಳ್ಳವರಾಗಿರುವರು. ಈವರೆಗೆ ಯಾರಿಗೂ ಗೊತ್ತಾಗದೆ ಇದ್ದ ಸ್ತ್ರೀಸ್ವಾತಂತ್ರ್ಯವೆಂಬ ಹೆಸರಿನ ಪಶು ವೃತ್ತಿಯ ಸ್ವೇಚ್ಛಾಚಾರದ ಶೋಧವನ್ನು ಮಾಡಿ ಅದರ ಪ್ರಸಾರ ಮಾಡಿದ ಶ್ರೇಯಸ್ಸಿಗೆ ತಾವೇ ಪಾತ್ರರೆಂತಲೂ ಇವರು ತಿಳಿಯುವರು. ಹಿಂದಿನವರೆಲ್ಲ ಸ್ತ್ರೀಯರನ್ನು ಪರಾಧೀನರಾಗಮಾಡಿ, ಸ್ತ್ರೀದ್ರೋಹಿಗಳಾದರೆಂದು ಇವರು ಆಡಿಕೊಳ್ಳುವರು. ತಮ್ಮ ಈ ಅಪೂರ್ವ ಶೋಧಕ್ಕೆ ವಿರುದ್ಧವಾದ ವಿಚಾರಗಳನ್ನು ಪ್ರತಿಪಾದಿಸುತ್ತಿರುವವರು, ಮನುಮಹಾರಾಜನಾಗಿರಲಿ, ವ್ಯಾಸಮಹರ್ಷಿಯಾಗಿರಲಿ ಅವರನ್ನು ನಿಃಶಂಕೆಯಿಂದ ಇವರು ಮೂರ್ಖರಲ್ಲಿ ಪರಿ ಗಣಿಸುವರು. ಧರ್ಮಶಾಸ್ತ್ರಕಾರರೆಲ್ಲ ಪುರುಷರೇ ಇರುವದರಿಂದ, ಅವರು ಸ್ವಾರ್ಥಪರತೆಯಿಂದ ಸ್ತ್ರೀಯರ ಯೋಗ್ಯತೆಯನ್ನು ಹೀನವಾಗಿ ಎಣಿಸಿ ಪ್ರಾಚೀನಕಾಲದಲ್ಲಿ ಅನ್ಯಾಯವಾಗಿ ಸ್ತ್ರೀಯರ ಉಪಮರ್ದಮಾಡಿರುವದರಿಂದ, ಆ ಸ್ತ್ರೀದ್ರೋಹಿ ಧರ್ಮಶಾಸ್ತ್ರ ಕಾರರ ಸ್ಮೃತ್ಯಾದಿ ಗ್ರಂಥಗಳನ್ನು ಸುಟ್ಟುಬಿಡಬೇಕೆಂದು ಹೇಳಲಿಕ್ಕೂ ಇವರು ಹಿಂದೆ ಮುಂದೆ ನೋಡುವದಿಲ್ಲ! ಪುರಾಣಾಂತರಗಳಲ್ಲಿ ವರ್ಣಿಸಿರುವ ಸೀತೆ, ಅರುಂಧತಿ ಮೊದಲಾದ ಪತಿವ್ರತಾ ಸ್ತ್ರೀಯರ ವರ್ಣನಗಳು ಅತಿಶಯೋಕ್ತಿಯವಾಗಿದ್ದು ಆ ವರ್ಣನಗಳು ಸ್ತ್ರೀಯರ ಯಥೇಚ್ಛ ಸುಖದ ನಾಶಕ್ಕಾಗಿ ಗಂಡಸರಿಂದ ಬುದ್ಧಿಪೂರ್ವಕವಾಗಿ ಯೋಜಿಸಲ್ಪಟ್ಟಿರು ವವೆಂದು ಇವರು ತಮ್ಮ ಸ್ತ್ರೀಸಮಾಜವನ್ನು ಬೋಧಿಸುವರು. ಇವರು ತಮ್ಮ ಕುಟುಂಬದಲ್ಲಿ, ಸಮಾಜದಲ್ಲಿ, ರಾಷ್ಟ್ರದಲ್ಲಿ ಪುರುಷರಿಗೆ ಎದುರಾಳುಗಳಾಗಿ ಹೋರಾಡುವರು. ಈ ಕಲಹಪ್ರಿಯರಲ್ಲಿ ನಯ–ಭಯ–ಭಕ್ತಿ– ಶೀಲ–ಸೌಭಾಗ್ಯ–ವಾತ್ಸಲ್ಯ–ಪ್ರೇಮಗಳ ಗಂಧವೂ ತೋರಿಬರಲಾರದು. ಜಗತ್ತಿನ ಹಂಗನ್ನೇ ಇವರು ತೊರೆದು ಬಿಟ್ಟಿರುವರು. ಹೀಗೆ ಈ ಸಾಹಸೀ

ಸ್ತ್ರೀಯರ ಅಗಾಧವಾದ ಚಾರಿತ್ರ್ಯವನ್ನು ವರ್ಣಿಸುವದು ನೀಗದವಮಾತೆಂತಲೇ ಹೇಳಬಹುದು! ಇವರ ಸ್ವೇಚ್ಛಾಚಾರದ ನಿರರ್ಥಕವಾದ ಕೃತ್ರಿಮ ಪೌರುಷದ ದುಷ್ಪರಿಣಾಮವು, ಪುರುಷಸಮಾಜದ ಮೇಲೆ ಆಗಿ, ಪುರುಷರ ಸ್ವಾಭಾವಿಕವಾದ ಪೌರುಷವು ನಷ್ಟವಾಗುತ್ತಾಗುತ್ತ ಕಡೆಗೆ ಪುರುಷರೂ ಪೌರುಷ ಹೀನರಾಗಿ ಇಡಿಯರಾಷ್ಟ್ರವೇ ಪೌರುಷ ಹೀನವಾಗುವ ಸಂಭವವಿರುತ್ತದೆ. ಇಂತಹ ಈ ಸಾಹಸೀ ಸ್ತ್ರೀಯರ ವರ್ಣನವನ್ನು ಇದಕ್ಕೂ ಹೆಚ್ಚುಮಾಡದೆ ಯಿರುವದೇ ಯೋಗ್ಯವಾಗಿ ತೋರುತ್ತದೆ.

ಈ ಮೇರೆಗೆ ನುಡಿದು ರಣಹುಚ್ಚಿಯು ಸುಮ್ಮನಾಗಿಬಿಟ್ಟಳು. ಆಕೆಯ ಮುಖದಲ್ಲಿಯ ದೈವೀತೇಜಸ್ಸು ಕ್ರಮಕ್ರಮವಾಗಿ ಕಡಿಮೆಯಾಗಿ ಹತ್ತಿ ಸ್ವಲ್ಪಹೊತ್ತಿನಲ್ಲಿ ಆಕೆಯು ಪೂರಾ ಎಚ್ಚತ್ತು ನಾಲ್ಕೂ ಕಡೆಗೆ ನೋಡಿ, ''ನಾನು ಎಲ್ಲಿ ಬಂದು ಕುಳಿತಿರುವೆನಲ್ಲ'' ಎಂದು ಸಂಕೋಚ ಪಡುತ್ತ ಚಟ್ಟನೆ ಎದ್ದು ಶ್ರೀಮುರಗೇಶ ಗುರುಚರಣಕ್ಕೆರಗಿದಳು. ಆಗ ಆ ಗುರುವರನು ಹುಚ್ಚಮ್ಮನನ್ನು ಕುರಿತು—''ಏಳವ್ವಾ ಹುಚ್ಚವ್ವಾ, ನೀನು ಸಾಹಸೀ ಸ್ತ್ರೀಯರ ಚಾರಿತ್ರ್ಯವನ್ನು ಬಹು ಸ್ವಾರಸ್ಯವಾಗಿ ವರ್ಣಿಸಿದೆ. ಹೋಗು, ನಿನ್ನ ಸ್ಥಳದಲ್ಲಿ ಕುಳಿತುಕೊಳ್ಳು. ನಾವೂ ಈಗ ಮುಖಪ್ರಕ್ಷಾಲನ ಮಾಡಿಕೊಂಡು ಬರುವೆವು.'' ಎಂದು ಹೇಳಿ, ಪೀಠದಿಂದ ಮೇಲಕ್ಕೆದ್ದರು. ಕೂಡಲೆ ಗುರುಶಾಂತಪ್ಪನು ಸದ್ಗುರುನಾಥನ ಕೈಹಿಡಿದು ಪೀಠದಿಂದ ಇಳಿಸಿ, ಒಳಗೆ ಕರೆದುಕೊಂಡು ಹೋದನು. ಇತ್ತ ಹುಚ್ಚಮ್ಮನು ಶ್ರೀಮತಿಯ ಬಳಿಯ ತನ್ನ ಸ್ಥಳದಲ್ಲಿ ಕುಳಿತು ಕೊಂಡಳು. ಆಕೆಯ ಬೋಧದ ಪರಿಣಾಮವು ಎಲ್ಲರಮೇಲೆ, ವಿಶೇಷವಾಗಿ ಪುರುಷರ ಮೇಲೆ ವಿಲಕ್ಷಣವಾಗಿ ಆಗಿತ್ತು, ತಮ್ಮ ಹೆಂಡಿರು ಯಾವ ವರ್ಗದಲ್ಲಿ ಸೇರುವರೆಂಬದನ್ನು ಕುರಿತು ಎಲ್ಲರೂ ಆಲೋಚಿಸ ತೊಡಗಿದರು. ಅರವತ್ತು ವರ್ಷಗಳ ವಯಸ್ಸಿನವನಾಗಿದ್ದ ಸಾಧು ಗುರುಶಾಂತಪ್ಪನು ಕೂಡ, ಈ ವಿಚಾರಕ್ಕೆ ಒಳಗಾಗದೆ ಇರಲಿಲ್ಲ. ಆತನು ಸುಮ್ಮನೆ ಗುರುನಾಥನನ್ನು ಮಜ್ಜನಗೃಹಕ್ಕೆ ಕರಕೊಂಡು ನಡೆದಿರುವಾಗ, ತನ್ನ ಹೆಂಡತಿಯ ವಿವಿಧ ಲಕ್ಷಣಗಳ ಸ್ಮರಣದಿಂದ, ಆಕೆಯೇನು ಸಾಧ್ವಿಯೋ, ಸುವಿಚಾರಿಯೋ, ಸುಖಲೋಲುಪಳೋ ಎಂಬದನ್ನು ನಿಶ್ಚಯಿಸದಾದನು; ಆದರೆ ತನ್ನ ಹೆಂಡತಿಯು ಮುದುಕಿಯಾಗಿಹೋಗಿದ್ದರೂ, ಈವರೆಗೆ ಆಕೆಯಲ್ಲಿ ಸಾಹಸೀ ಸ್ತ್ರೀಯರ ಲಕ್ಷಣಗಳು ಮಾತ್ರ ತೋರದೆಯಿದ್ದದ್ದಕ್ಕಾಗಿ ಆತನು ಸಮಾಧಾನಪಟ್ಟನು. ಇತ್ತ ಮುದ್ದಣ್ಣನೂ, ಚುಕ್ಕಪ್ಪನೂ ಇದೇ ವಿಚಾರದಲ್ಲಿ ಮಗ್ನರಾಗಿದ್ದರು. ಅವರಿಗೂ ತಮ್ಮತಮ್ಮ ಹೆಂಡಿರ ವಿವಿಧ ಲಕ್ಷಣಗಳು ಕಣ್ಣಿಗೆ ಕಟ್ಟಿ, ಅವರಿಬ್ಬರ ಮನಸ್ಸೂ, ವಿಶೇಷವಾಗಿ ಚುಕ್ಕಪ್ಪನ ಮನಸ್ಸು ಚಂಚಲವಾಯಿತು.

ಮುದ್ದನಿಗೆ ತನ್ನ ಹೆಂಡತಿಯಾದ ಸಾಧ್ವೀ ಶ್ರೀಮತಿಯಲ್ಲಿ ಸಾಧ್ವಿಯರ ಲಕ್ಷಣಗಳು ಇರುತ್ತಿದ್ದದ್ದನ್ನು ಸ್ಮರಿಸಿ ಸಮಾಧಾನವಾದರೂ, ತನ್ನ ಹೆಂಡತಿಯಲ್ಲಿ ಮೊದಮೊದಲು ಅಪರೂಪವಾಗಿ ಸುಖಲೋಲುಪರ ಲಕ್ಷಣಗಳು ಪ್ರಕಟವಾದದ್ದರ ನೆನಪಾಗಿ, ''ತನ್ನ ಹೆಂಡತಿಗೆ ಸಾಧ್ವೀ ಶ್ರೀಮತಿ ಎಂಬ ಹೆಸರು ಒಪ್ಪಬಹುದೇ?'' ಎಂಬ ಸಂಶಯವು ಉತ್ಪನ್ನವಾಯಿತು; ಆದರೆ ಪ್ರತ್ಯಕ್ಷ ಸದ್ಗುರುನಾಥನು ತನ್ನ ಹೆಂಡತಿಯನ್ನು ಸಾಧ್ವಿಯೆಂದು ಕರೆದಿರಲು, ತನ್ನ

ಸಂಶಯವು ನಿರರ್ಥಕವಾದದ್ದೆಂದು ಆತನು ಭಾವಿಸಿದನು. ಅತ್ತ ಕರ್ಕಶ ಸ್ತ್ರೀಯ ಗಂಡನಾದ ಚುಕ್ಕಪ್ಪನಂತು ಸಮ್ಮಿಶ್ರ ಲಕ್ಷಣದ ತನ್ನ ಹೆಂಡತಿಯು ಯಾವ ವರ್ಗದವಳೆಂಬದನ್ನು ನಿರ್ಣಯಿಸಲಿಕ್ಕೆ ಅಸಮರ್ಥನಾಗಿ, ದೀರ್ಘವಾದ ಆಲೋಚನೆಗೆ ಒಳಗಾಗಿದ್ದನು. ಅತ್ತ ಶ್ರೀಮತಿಯೂ, ತಾನು ಗಂಡನಮನೆಗೆ ಬಂದಂದಿನಿಂದ ತನ್ನ ನಡತೆಯಲ್ಲಿಯ ತಿಳಿಗೇಡಿತನದ ಕೊರತೆಗಳನ್ನು ಸ್ಮರಿಸಿ, ತನ್ನ ಆ ಸಾಸಿವೆ ಕಾಳಿನಷ್ಟು ಕೊರತೆಗಳನ್ನು ಗುಡ್ಡಗಳಾಗಿ ಎಣಿಸುತ್ತ ನಾಚಿಕೆಯಿಂದ ತಲೆಬಾಗಿಸಿ, ಎತ್ತಕಡೆಗೂ ಕಣ್ಣೆತ್ತಿ ನೋಡದಾದಳು. ಈ ಪ್ರಸಂಗದಲ್ಲಿ ತನ್ನ ಪ್ರಾಣನಾಥನಿಗೆ ನಾನು ಮಾಡಿರುವ ತಪ್ಪುಗಳು ನೆನಪಾಗಿ, ಆತನು ನನ್ನನ್ನು ಯಾವ ವರ್ಗದ ಸ್ತ್ರೀಯರಲ್ಲಿ ಸೇರಿಸಬಹುದೆಂದು ಆಕೆಯು ವ್ಯಸನಪಡತೊಡಗಿದಳು. ಸಂತರಾಗಲಿ, ಸಾಧ್ವಿಯರಾಗಲಿ ತಮ್ಮಲ್ಲಿಯ ಕಡ್ಡಿಯಷ್ಟು ದೋಷವನ್ನು ಗುಡ್ಡದಷ್ಟು ಎಣಿಸುತ್ತಿರುವದು ಅವರ ಸ್ವಭಾವವವೇ ಆಗಿರುವದು. ಆಗಿನ ಕಾಲದಲ್ಲಿ ಸಾಹಸೀ ಸ್ತ್ರೀಯರ ಸುಳಿದಾಟವು ಅಪರೂಪವಾಗಿದ್ದದ್ದರಿಂದ, ಅವರ ಹೀನಬಾಳಿಗಾಗಿ ಅವರು ಬಹಳವಾಗಿ ಹೇಸಿದರು.

ಇತ್ತ ಗುರುಶಾಂತಪ್ಪನನ್ನು ಹಿಂಬಾಲಿಸಿ ಸಾಗಿದ್ದ ಮುರಗೀಶ ಗುರುವರನು ಮಜ್ಜನಗೃಹಕ್ಕೆ ಹೋಗದೆ, ಗುರುಶಾಂತಪ್ಪನನ್ನು ಕುರಿತು—''ಗುರುಶಾಂತಪ್ಪಾ, ನಾವು ಹೀಗೆಯೇ ಸಚ್ಚೈಲ ಸ್ನಾನಮಾಡಬೇಕಾಗಿದೆ; ಆದ್ದರಿಂದ ಅರಮನೆಯ ಶೃಂಗಾರತೋಟದೊಳಗಿನ ಪುಷ್ಕರಣಿಗೆ ನಡೆ,'' ಅನ್ನಲು, ಗುರುಶಾಂತಪ್ಪನು—''ಮಹಾ ಪ್ರಸಾದ'' ಎಂದು ನುಡಿದು, ಗುರುನಾಥ ನನ್ನು ಪುಷ್ಕರಣಿಗೆ ಕರೆದುಕೊಂಡು ನಡೆದನು. ಆಗ ಗುರುಗಳು, ಧರಿಸಿದ ಬಟ್ಟೆಗಳೊಡನೆ ಪುಷ್ಕರಣಿಯಲ್ಲಿ ಪ್ರವೇಶಿಸಿ ಸ್ನಾನಮಾಡತೊಡಗಿದರು. ಅಷ್ಟರಲ್ಲಿ ಎಡಬಲಗಳ ಸೇವಕರು, ತಾವು ಸ್ನಾನಮಾಡಿ ಗುರುನಾಥನ ಮಡಿವಸ್ತ್ರಗಳನ್ನೂ, ಲಿಂಗಪೂಜೆಯ ಸಾಧನಗಳನ್ನೂ ತಂದರು. ಆಗ ಗುರುವರನು ಸ್ನಾನವಮಾಡಿ, ಮಡಿವಸ್ತ್ರಗಳನ್ನುಟ್ಟು, ವಿಭೂತಿಧರಿಸಿ ತಾಂತ್ರಿಕವಾಗಿ ಲಿಂಗಪೂಜೆಯನ್ನು ತೀರಿಸಿಕೊಂಡು, ಪುನಃ ಸಭಾಗೃಹಕ್ಕೆ ಬಂದು ಪೀಠದಲ್ಲಿ ಮೂಹೂರ್ತ ಮಾಡಿದನು. ಸದ್ಗುರುನಾಥನ ಆಗಿನ ಶಾಂತವಾದ ದಿವ್ಯಮೂರ್ತಿಯ ದರ್ಶನದಿಂದ ಎಲ್ಲರೂ ಧನ್ಯರಾದರು. ಶ್ರೀಗುರುನಾಥನು ಸ್ನಾನಮಾಡಿರುವದು ಎಲ್ಲರಿಗೂ ಗೊತ್ತಾಯಿತು; ಆದರೆ ಈ ಎಡಹೊತ್ತಿನಲ್ಲಿ ಸ್ನಾನವಮಾಡಿದ ಕಾರಣವು ಯಾರಿಗೂ ತಿಳಿಯಲಿಲ್ಲ. ಆಗ ಒಬ್ಬೊಬ್ಬರು ಒಂದೊಂದು ಕಾರಣವನ್ನು ತರ್ಕಿಸಿದರು. ''ಸಾಹಸೀ ಸ್ತ್ರೀಯರ ಹೇಸಿ ಗುಣಗಳ ಸ್ಮರಿಸಿದ್ದಕ್ಕಾಗಿ ಸ್ನಾನಮಾಡಿರಬಹುದೆಂ''ದು ಕೆಲವೊಬ್ಬರು ತರ್ಕಿಸಿದರು; ಮತ್ತೊಬ್ಬರು ''ರಣಹುಚ್ಚಿಯಲ್ಲಿ ಆವೇಶಗೊಂಡದ್ದಕ್ಕಾಗಿ ಸ್ನಾನ ಮಾಡಿರಬಹುದೆಂ''ದು ತರ್ಕಿಸಿದರು; ಇನ್ನೊಬ್ಬರು—''ನಾವು ಸಂಸಾರಿಗಳು ಕಶ್ಮಲರು; ನಮ್ಮ ಸಹವಾಸವು ವಿರಕ್ತರಿಗೆ ಯಾವಾಗ ಹೇಸಿಗೆ ಬಂದೀತೆಂಬದನ್ನು ಹೇಳಲಾಗುವದಿಲ್ಲ; ಅಂತೇ ಅವರು ಯಾವಾಗಲೂ ಅರಣ್ಯವಾಸಿಗಳಾಗಿರುವರು. ಈಗ ಈ ನಮ್ಮ ಹೇಸಿ ಸಂಸಾರಕರಲ್ಲಿಯ ಹೇಸಿತನಕ್ಕಾಗಿ ಹೇಸಿ ಶ್ರೀಗುರುಗಳು ಸ್ನಾನಮಾಡಿರ ಬಹುದೆಂ''ದು ತರ್ಕಿಸಿದರು. ಹೀಗೆ ಒಬ್ಬೊಬ್ಬರು ಒಂದೊಂದು ವಿಧವಾಗಿ ತರ್ಕಿಸುತ್ತಿರುವಾಗ, ಸದ್ಗುರುನಾಥನು ಗಾಂಭೀರ್ಯದಿಂದ ಎಲ್ಲರ ಕಡೆಗೆ

ನೋಡಿ— ಸದ್ಭಕ್ತರೇ, ಸ್ನಾನದಿಂದ ದೇಹವು ಪವಿತ್ರವಾಗುವದು; ಸದ್ಗುಣಗಳಿಂದ ಮನಸ್ಸು ಪವಿತ್ರವಾಗುವದು; ಶಿವಪೂಜೆಯಿಂದ ಜೀವನು ಪವಿತ್ರನಾಗುವನು; ಆದ್ದರಿಂದ ಎಷ್ಟು ಸಾರೆ ಸ್ನಾನಮಾಡಿದರೂ, ಎಷ್ಟು ಸಾರೆ ಗುಣಶೋಧನ ಮಾಡಿದರೂ, ಎಷ್ಟು ಸಾರೆ ಶಿವಪೂಜೆ ಮಾಡಿದರೂ ಲಾಭವೇ ಇರುವದು!'' ಎಂದು ನುಡಿಯಲು, ಎಲ್ಲರೂ ತಮ್ಮ ತರ್ಕವಿತರ್ಕಗಳಿಗೆ ಇದೊಂದು ಸಮರ್ಪಕ ಉತ್ತರವೆಂದು ತಿಳಿದು ಸಮಾಧಾನಪಟ್ಟರು; ಆದರೂ ತಮ್ಮ ತಮ್ಮ ಹೆಂಡಿರ ವರ್ಗೀಕರಣದ ಸಂಶಯದ ಬಾಧೆಯು ಮಾತ್ರ ನಡನಡುವೆ ಅವರನ್ನು ಬಾಧಿಸುತ್ತಲೇ ಇತ್ತು!

ಹೀಗಿರುವಾಗ ಮುರಗೀಶಗುರುವರನು ನಗೆಮೊಗದಿಂದ ಅವರೆಲ್ಲರನ್ನು ಕುರಿತು— ಸದ್ಭಕ್ತರೇ, ಇಲ್ಲಿ ಒಂದು ವಿಶೇಷ ಸಂಗತಿಯನ್ನು ನೀವು ಲಕ್ಷ್ಯದಲ್ಲಿಡತಕ್ಕದ್ದು. ಈ ಜಗತ್ತೇ, ಗುಣದೋಷಮಿಶ್ರವಾಗಿರುವದರಿಂದ, ಜಗತ್ತಿನೊಳಗಿನ ಎಲ್ಲ ವಿಷಯಗಳೂ, ಎಲ್ಲ ಪ್ರಾಣಿಗಳೂ ಗುಣದೋಷಮಿಶ್ರವಾಗಿಯೇ ಇರುವರು. ಆದ್ದರಿಂದ ಕೇವಲ ಗುಣಮಯ ವಸ್ತುವಾಗಲಿ, ಕೇವಲ ದೋಷಮಯ ವಸ್ತುವಾಗಲಿ ಜಗತ್ತಿನಲ್ಲಿ ದೊರೆಯಲಾರದು; ಅದರಂತೆ, ಸ್ತ್ರೀಯರಲ್ಲಾದರೂ, ಕೇವಲ ಸಾಧ್ವಿಯರಾಗಲಿ, ಕೇವಲ ಸುವಿಚಾರಿಗಳಾಗಲಿ, ಕೇವಲ ಸುಖ ಲೋಲುಪರಾಗಲಿ, ಕೇವಲ ಸಾಹಸಿಗಳಾಗಲಿ ದೊರೆಯಲಾರರು. ಪ್ರತಿ ಒಬ್ಬ ಸ್ತ್ರೀಯರಲ್ಲಿ ನಾಲ್ಕು ಜಗೆಯ ಸ್ತ್ರೀಯರ ಲಕ್ಷಣಗಳೂ ಪ್ರಸಂಗವಶಾತ್ ಕಿಂಚಿತ್ತಾಗಿಯಾದರೂ ತೋರಿಬರ ಬಹುದು. ಆದರೂ, ಒಬ್ಬಾನೊಬ್ಬ ಸ್ತ್ರೀಯಲ್ಲಿ ಯಾವ ಜಗೆಯ ಸ್ತ್ರೀಯರ ಲಕ್ಷಣಗಳು ವಿಶೇಷವಾಗಿರುವವೆಂಬದನ್ನು ನೋಡಿ, ಆಕೆಯನ್ನು ಆ ವರ್ಗದ ಸ್ತ್ರೀಯರಲ್ಲಿ ಎಣಿಸಬೇಕಾಗುವದು. ಲೋಕಮಾತೆಯಾದ ಜಾನಕಿಯು ಶ್ರೇಷ್ಠ ಸಾಧ್ವಿಯಾಗಿದ್ದರೂ, ಒಮ್ಮೆ ಪ್ರಮಾದದಿಂದ ಶ್ರೀ ರಾಮನಿಗಿಂತ ಮೊದಲು, ಒಂದು ಹೂ ಮೂಸಿನೋಡಿದ್ದರಿಂದ, ಆಕೆಯ ಅತಿ ಸೂಕ್ಷ್ಮವಾದ ಸಾಧ್ವೀಧರ್ಮಕ್ಕೆ ಬಾಧೆ ಬಂದದ್ದನ್ನು ಶ್ರೀಮದಾನಂದ ರಾಮಾಯಣದಲ್ಲಿ ಹೇಳಿದೆ. ಆಗ ಆಕೆಯಲ್ಲಿ ಸುಖಲೋಲುಪ ಸ್ತ್ರೀಯರ ಲಕ್ಷಣದ ಭಾಸವಾಯಿತು. ಆದ್ದರಿಂದ ಪ್ರಸಂಗವಶಾತ್ ಸ್ತ್ರೀಯರಲ್ಲಿ ಅಯೋಗ್ಯ ಸ್ತ್ರೀಯರ ಲಕ್ಷಣ ತೋರಿಬಂದರೂ, ಅಷ್ಟರಿಂದ ಅವರನ್ನು ತಿರಸ್ಕರಿಸಲಾಗದು. ಯಾವ ಸ್ತ್ರೀಯರಲ್ಲಿ ಯಾವ ವರ್ಗದ ಸ್ತ್ರೀಯರ ಲಕ್ಷಣಗಳು ವಿಶೇಷವಾಗಿರುವವೆಂಬದನ್ನು ಬಹು ವಿವೇಕದಿಂದ ಕಂಡುಹಿಡಿದು, ವಿವೇಕಿಗಳಾದ ಪುರುಷರು ಹೆಣ್ಣುಮಕ್ಕಳೊಡನೆ ದೊಡ್ಡ ಮನಸ್ಸಿನಿಂದ ನಡಕೊಳ್ಳುತ್ತ ಅವರನ್ನು ಒಳ್ಳೆಯ ಹಾದಿಯಿಂದ ನಡಿಸಿಕೊಳ್ಳಬೇಕಾಗುವದು!

ಹೀಗೆ ಕರುಣಿಸಿ ನುಡಿದ ಗುರುವರನ ಪ್ರಾಸಾದಿಕವಾಣಿಯನ್ನು ಕೇಳಿ, ಎಲ್ಲರ ಚಿತ್ತಗಳು ಸ್ವಸ್ಥವಾದವು. ''ಇಂದು ನಾವು ಒಂದು ಹೊಸ ಜ್ಞಾನಸಂಪಾದಿಸಿದೆವೆಂಬ'' ಭಾವವು ಅವರಲ್ಲಿ ಉತ್ಪನ್ನವಾಗಿ, ಅವರ ಬೋಧಶ್ರವಣ ಕುತೂಹಲವು ಮತ್ತಿಷ್ಟು ಹೆಚ್ಚಿತು. ಆಗ ಅವರು ಉತ್ಸಾಹದಿಂದ ಗುರುವರನ ಕಡೆಗೆ ನೋಡತೊಡಗಿದರು. ಆಗ ಗುರುಶಾಂತಪ್ಪನು ಎದ್ದುನಿಂತು ಕೈಜೋಡಿಸಿ ಶ್ರೀಮುರಗೀಶ ಸದ್ಗುರುನಾಥನನ್ನು ಕುರಿತು—''ಗುರುದೇವಾ, ಈವೊತ್ತಿನ ನಿನ್ನ

ಬೋಧದಿಂದ ನಾವು ನಿಶ್ಚಯವಾಗಿ ಧನ್ಯರಾದೆವು. ಧರ್ಮರಕ್ಷಣದ ವಿಷಯದಲ್ಲಿ ಹೆಣ್ಣುಮಕ್ಕಳು ಗಂಡಸರಿಗಿಂತ ಆದರಣೀಯರು; ಆದ್ದರಿಂದ ಅವರ ಗುಣದೋಷಗಳು ಇಂದು ಜಳಜಳ ತಿಳಿದದ್ದರಿಂದ, ತಮ್ಮ ಹೆಣ್ಣುಮಕ್ಕಳನ್ನು ಚಿಕ್ಕವರಿರುತ್ತಲೇ ತಿದ್ದಲಿಕ್ಕೆ ಅವರ ತಾಯಿತಂದೆಗಳಿಗೂ, ಪ್ರಾಯದಲ್ಲಿ ಜಾಗರೂಕತೆಯಿಂದ ಅವರನ್ನು ನಡಿಸಿಕೊಳ್ಳಲಿಕ್ಕೆ ಅವರ ಗಂಡಂದಿರಿಗೂ ಸ್ಪಷ್ಟವಾದ ಹಾದಿಯು ಗೊತ್ತಾದಂತಾಯಿತು. ಗುರುದೇವಾ, ಮನುಷ್ಯನ ಮನಸ್ಸಿನ ಹರ್ಷ–ಶೋಕಾದಿ ವಿಕಾರಗಳನ್ನು ಜಾಗೃತಗೊಳಿಸುವ ಬೋಧವನ್ನು ಮಾಡುವದು ಸುಲಭವಾಗಿದ್ದಷ್ಟು, ಮನುಷ್ಯನ ಸದ್ವಿಚಾರಗಳನ್ನು ಜಾಗ್ರತಗೊಳಿಸುವ ಬೋಧವನ್ನು ಮಾಡುವದು ಸುಲಭವಲ್ಲ. ಅಂತಹ ಅಲಭ್ಯಲಾಭವು ಇಂದು ಮಹತ್ಸನ್ನಿಧಿಯಿಂದ ನಮ್ಮೆಲ್ಲರಿಗೆ ಆಯಿತು. ಆದರೆ ಸದ್ಗುರುನಾಥಾ, ಹೆಣ್ಣುಮಕ್ಕಳ ವಿಷಯದ ಇನ್ನೆರಡು ಮಹತ್ವದ ಸಂಗತಿ ಗಳನ್ನು ಕುರಿತು ಕೇಳಿಕೊಳ್ಳುವದು ಅವಶ್ಯವಾಗಿರುತ್ತದೆ. ಆ ಎರಡು ವಿಷಯಗಳು ಜನರಲ್ಲಿ ವಾದಗ್ರಸ್ತ ವಿಷಯಗಳಾಗಿ ಕುಳಿತಿರುತ್ತವೆ. ಆ ವಾದಗಳ ನಿರ್ಣಯವು ಇಂದು ನಿನ್ನಿಂದ ಆಗಿಹೋಗುವದು! ಗುರುದೇವಾ, ಗಾಳಿಬಿಟ್ಟ ಕೈಯಲ್ಲಿ ತೂರಿಕೊಳ್ಳಬೇಕಾಗುವದು. ಆದ್ದರಿಂದ ಆ ಎರಡು ವಾದಗ್ರಸ್ತವಿಷಯಗಳನ್ನು ನಿಷ್ಕರ್ಷವಾಗಿ ಬೋಧಿಸಿ ನಮ್ಮನ್ನು ಕೃತಾರ್ಥರಾಗ ಮಾಡಬೇಕೆಂದು ಪ್ರಾರ್ಥಿಸುವೆನು. ರಾಜಪುರುಷರ ಜ್ಞಾನದ ಸ್ವರೂಪವಿದ್ದಂತೆ, ರಾಜ್ಯದಾಡಳಿತದ ಸ್ವರೂಪವು ಆಗುವದು ಸ್ವಾಭಾವಿಕವು. ಈಗ ಅಂತಹ ರಾಜಪುರುಷರ ಯೋಗವೂ ಇಲ್ಲಿ ಅನಾಯಾಸವಾಗಿ ಒದಗಿದೆ. ಮುದ್ದಣ್ಣ ಚುಕ್ಕಪ್ಪ ಇವರಿಬ್ಬರು ಸದ್ಯದ ನಮ್ಮ ಚಿತ್ರದುರ್ಗದ ನಾಡಿನ ರಾಜಕಾರಣ ಪುರುಷರಾಗಿರುವದರಿಂದ, ರಾಜ್ಯದ ಎಲ್ಲ ಆಗು–ಹೋಗುಗಳಿಗೆ ಮುಖ್ಯ ಕಾರಣರಾದ ಸ್ತ್ರೀಯರ ಸಂಬಂಧದ ಹಿತಕಾರಕ ಜ್ಞಾನವು ಅವರಿಗಿರುವದು ಅವಶ್ಯವಾಗಿರುತ್ತದೆ. ಈಗ ಅವರಿಗೆ ಸ್ತ್ರೀಯರಲ್ಲಿಯ ನಾಲ್ಕು ವರ್ಗಗಳ ಸ್ವರೂಪಜ್ಞಾನವು ಚನ್ನಾಗಿ ಆಗಿರುವದು. ಇನ್ನುಳಿದಿರುವ, ಹಾಗು ನಾನು ಮೇಲೆ ಹೇಳಿರುವಂತೆ ವಾದಗ್ರಸ್ತವಿಷಯಗಳಾಗಿರುವ ''ಸ್ತ್ರೀಸ್ವಾತಂತ್ರ್ಯ'' ''ಸ್ತ್ರೀಯರ ಬಾಲ–ಪ್ರೌಢ ವಿವಾಹಗಳು'' ಎಂಬ ಎರಡು ವಿಷಯುಗಳನ್ನು ಕುರಿತು ನಮ್ಮೆಲ್ಲರನ್ನು ಬೋಧಿಸುವ ಕೃಪೆಮಾಡಬೇಕು; ಅಂದರೆ ಸ್ತ್ರೀಯರ ವಿಷಯದ ತಿಳಿದುಕೊಳ್ಳತಕ್ಕ ಮುಖ್ಯ ಮಾತುಗಳನ್ನು ನಾವು ತಿಳಿದು ಕೊಂಡಂತಾಗುವದು.'' ಎಂದು ಪ್ರಾರ್ಥಿಸಲು, ಶ್ರೀ ಮುರಗೀಶ ಗುರುವರನು ''ಅವಶ್ಯವಾಗಿ ಆಗಲಿ'' ಎಂದು ಕರುಣಿಸಿ ಒಪ್ಪಿಕೊಂಡನು. ಆಗ ಸಂಧ್ಯಾ ಕಾಲವು ಸಮೀಪಿಸಿದ್ದರಿಂದ, ಗುರ್ವಾಜ್ಞೆಯಂತೆ ಅಂದಿನ ಉಪನ್ಯಾಸದ ಪರಿಸಮಾಪ್ತಿಯಾಯಿತು.

# ಸ್ತ್ರೀ ಸ್ವಾತಂತ್ರ್ಯ

ಮರುದಿನ ಶ್ರೀ ಗುರುವರನ ಬೆಳಗಿನ ಅನುಷ್ಠಾನವು ಮುಗಿದ ಬಳಿಕ ಮೂರು ತಾಸಿನೊಳಗೆ ಉಪನ್ಯಾಸಕ್ಕೆ ಆರಂಭವಾಯಿತು. ಎಲ್ಲರೂ ಬೋಧಶ್ರವಣದಲ್ಲಿ ಆತುರರಾಗಿ ಅಂತರ್ಗೃಹದಲ್ಲಿ ಕುಳಿತುಕೊಂಡಿದ್ದರು. ಗುರುಗಳ ಬೋಧದಶ್ರವಣ ಮಾಡಿಮಾಡಿದಂತೆ, ಶ್ರವಣ ಮಾಡುವವರ ಗುಣದೋಷಗಳು ಅವರ ಕಣ್ಣೆದುರಿಗೆ ತೆರೆದಿಟ್ಟಂತೆ ಆಗುತ್ತಿದ್ದದ್ದರಿಂದ, ಇಂದಿನ ಉಪನ್ಯಾಸದಲ್ಲಿ ನಮ್ಮ ಸ್ವರೂಪ ನಿರ್ಣಯವು ಯಾವ ಬಗೆಯದಾಗುವದೋ ಎಂದು ಎಲ್ಲರೂ ಕುತೂಹಲದಿಂದ ಉಪನ್ಯಾಸವು ಆರಂಭವಾಗುವ ಹಾದಿಯನ್ನು ನೋಡ ತೊಡಗಿದ್ದರು. ಎಲ್ಲರಿಗಿಂತ ರಣಹುಚ್ಚಿಯ ಮನಸ್ಸು ಇಂದಿನ "ಸ್ತ್ರೀ ಸ್ವಾತಂತ್ರ್ಯ" ಎಂಬ ವಿಷಯದ ಉಪನ್ಯಾಸವ ಕೇಳುವ ವಿಷಯದಲ್ಲಿ ಹೆಚ್ಚು ಚಂಚಲವಾಗಿತ್ತು ಶ್ರೀ ಸದ್ಗುರುನಾಥನ ಆವೇಶ ಹೊಂದಿ ತಾನು ಪರವಶತೆಯಲ್ಲಿ ಮಾತಾಡಿದ್ದ ಸಾಹಸೀ ಸ್ತ್ರೀಯರ ವಿಷಯವೆಲ್ಲ, ಆ ಗುರುನಾಥನ ಕೃಪೆಯಿಂದಲೇ ಹಿಂದಿನಿಂದ ಕ್ರಮವಾಗಿ ಆಕೆಯ ಹೃದಯದಲ್ಲಿ ಸ್ಫುರಿಸಲು, ಆಕೆಯು ತನ್ನೊಳಗೆ—"ನನ್ನ ಮನಸ್ಸು ಎಷ್ಟು ನಿರ್ಮಲವಿದ್ದರೂ, ಜನರು ನನ್ನನ್ನು ಸಾಹಸೀ ಸ್ತ್ರೀಯರಲ್ಲಿಯೇ ಎಣಿಸುವದು ನಿಶ್ಚಯವೆಂ"ದು ಭಾವಿಸಿ ಆಕೆಯು ಉದಾಸೀನಳಾಗಿದ್ದಳು. ಇಂಥ ಪ್ರಸಂಗದಲ್ಲಿ ಶ್ರೀ ಗುರುನಾಥನು ಇಂದು "ಸ್ತ್ರೀಸ್ವಾತಂತ್ರ್ಯ" ಎಂಬ ವಿಷಯವನ್ನು ಕುರಿತು ಪ್ರತಿಪಾದಿಸುವದರಿಂದ, ಯಾರ ಹಂಗೂ ಕಾಯದ ನನ್ನ ಎಟ್ಟಿತನದ ಆಚರಣೆಯ ತಿರಸ್ಕಾರದ ಟೀಕೆಯು, ನನ್ನನ್ನು ಕಂಡರೆ ಸೇರದ ಈ ಜನರಲ್ಲಿ ಚನ್ನಾಗಿ ಆಗುವದೆಂದು ಆಕೆಯು ನಿರ್ಧರಿಸಿದಳು; ಆದರೆ ನನ್ನನ್ನು ಯಾರು ತಿರಸ್ಕರಿಸಿ ಮಾಡುವದೇನು? ನನ್ನ ಹೃದಯದ ಗುರುತು ಶ್ರೀ ಸದ್ಗುರುನಾಥನಿಗಿರುತ್ತಿರುವದೊಂದು ನನಗೆ ದೊಡ್ಡ ಸಮಾಧಾನವು; ಆ ಮಹಾತ್ಮನೇ ನನ್ನ ಮನಸ್ಸಿನ ಸಾಕ್ಷಿಯಾಗಿರುವನು; ಅಂದ ಬಳಿಕ ಈ ಮಂದಿ ಯಾರು ಹೊಗಳಿದರೇನು, ಯಾರು ಬೊಗಳಿದರೇನು? ಅದರಂತೆ, ಇವರು ಯಾರು ಒಲಿದರೇನು ಯಾರು ಮುನಿದರೇನು? ಸದ್ಗುರುನಾಥಾ, ಶ್ರೀ ಮುರಿಗೀಶಾ, ನಿನ್ನ ಆವೇಶಕ್ಕೆ ಪಾತ್ರಳಾಗಿರುವ ನನ್ನ ಶೀಲವನ್ನು ಅದಾವನು ಎತ್ತಿ ಎಣಿಸುವನು? ತಿಳಿಗೇಡಿತನದಿಂದ ಎತ್ತಿ ಎಣಿಸಿದರೆ, ಅದಕ್ಕೆ ಸದ್ಗುರುನಾಥನು ನೀನೇ ಹೊಣೆಯು!"

ಹೀಗೆ ಪ್ರಬಲವಾದ ಆತ್ಮ ವಿಶ್ವಾಸವು ಪ್ರಕಟವಾದ ರಣಹುಚ್ಚಮ್ಮನು, ತನ್ನ ಮನಸ್ಸಿನ ಪಾವಿತ್ರ್ಯದಲ್ಲಿ ದೃಢವಿಶ್ವಾಸತಾಳಿ, ಪರಮೋತ್ಸಾಹ ಉಳ್ಳವಳಾಗುತ್ತಿರಲು, ಸದ್ಗುರುನಾಥನು ಎಲ್ಲರನ್ನು ಉದ್ದೇಶಿಸಿ—"ಸದ್ಭಕ್ತರೇ, ಗುರುಶಾಂತಪ್ಪನು ನಿನ್ನೆ ಮಾಡಿರುವ ಪ್ರಶ್ನವು ನಿಶ್ಚಯ ವಾಗಿ ಜಗತ್ಕಲ್ಯಾಣಕಾರಕವಾಗಿರುವದು. ಯಾಕಂದರೆ, ಜಗತ್ತಿನ ಕಲ್ಯಾಣರೂಪ ವೃಕ್ಷವು, ಸ್ತ್ರೀಯರ ಪಾವಿತ್ರ್ಯಜಲದಿಂದಲೇ ಪೋಷಿತವಾಗುತ್ತಿರುವದು; ಅಂತೇ ವ್ಯವಹಾರ ದಕ್ಷನಾದ ಧರ್ಮಿಷ್ಠ ಅರ್ಜುನನು ಭಗವದ್ಗೀತೆಯಲ್ಲಿ "ಸ್ತ್ರೀ ಷುದುಷ್ಟಾಸುವಾರ್ಷ್ಣೇಯ ಜಾಯತೇ ವರ್ಣಸಂಕರಃ" ಎಂದು ಹೇಳಿರುವನು. ಪುರುಷರ ದುಷ್ಟತನವು ದುಷ್ಟಪುರುಷರನ್ನಷ್ಟೇ ಹಾಳು

ಮಾಡಿದರೆ, ಸ್ತ್ರೀಯರ ದುಷ್ಟತನವು ವರ್ಣಸಂಕರ ಮಾಡಿ ಜಗತ್ತನ್ನೇ ಹಾಳು ಮಾಡುವದು. ಇನ್ನು, ಸ್ತ್ರೀಯರು ದುಷ್ಟರಾಗದೆ ಸುಷ್ಟರಾದರೆ, ದುಷ್ಟಪುರುಷರ ದುಷ್ಟತನವು ಆಸುಷ್ಟ ಸ್ತ್ರೀಯರ ಮೇಲೆ ಸರ್ವಥಾ ನಡೆಯದೆ, ಆ ದುಷ್ಟಪುರುಷರು ಮಾತ್ರ ನಾಶ ಹೊಂದುವರು. ಇದಕ್ಕೆ ಲೋಕಮಾತೆ ಜಾನಕಿಯ ಶೀಲದ ಪ್ರಭಾವವೇ ಸಾಕ್ಷಿಯಾಗಿರುವದು. ಆದರೆ ಸ್ತ್ರೀಯರು ದುಷ್ಟರಾದರೆ ಪುರುಷರ ದುಷ್ಟತನದ ಬೆಳವಣಿಗೆಗೆ ಪ್ರತಿಬಂಧವಿಲ್ಲದಾಗಿ, ಸ್ವೇಚ್ಛಾಚಾರವು ಬೆಳೆದು ಸ್ತ್ರೀಪುರುಷರಿಬ್ಬರೂ ದುಷ್ಟತನದ ಬೇಗೆಯನ್ನು ಜಗತ್ತಿನಲ್ಲಿ ಹಬ್ಬಿಸ ತೊಡಗಲು, ಜಗತ್ತಿನ ನಾಶವು ಆಗದೆ ಹೇಗೆ ಉಳಿದೀತು? ಆದ್ದರಿಂದ ಗುರುಶಾಂತಪ್ಪಾ, ಶ್ರೀ ಮನ್ವಾದಿ ರಾಜರ್ಷಿಗಳೂ, ಶ್ರೀ ವೇದವ್ಯಾಸಾದಿ ಬ್ರಹ್ಮರ್ಷಿಗಳೂ ಸ್ತ್ರೀಪಾವಿತ್ರ್ಯವನ್ನು ಯಾವಾಗಲೂ ಕಣ್ಣಲ್ಲಿ ಕಣ್ಣಿಟ್ಟು ರಕ್ಷಿಸಲು ಹೇಳಿರುವರು; ಶ್ರೀ ವೇದವ್ಯಾಸರು ತಮ್ಮ ಮಹಾಭಾರತ ಗ್ರಂಥದಲ್ಲಿ—''ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ! ಪುತ್ರೋರಕ್ಷತಿವಾರ್ಧಕ್ಯೇ ನಸ್ತ್ರೀ ಸ್ವಾತಂತ್ರ್ಯಮರ್ಹತಿ'' ಎಂದು ಸ್ಪಷ್ಟವಾಗಿ ಹೇಳಿರುವರು. ಆದ್ದರಿಂದ ಬಾಲ್ಯದಾರಭ್ಯ ವಾರ್ಧಕ್ಯದವರೆಗೆ, ತಂದೆ-ಗಂಡ-ಮಗ ಇವರು ದಕ್ಷತೆಯಿಂದ ಸ್ತ್ರೀಪಾವಿತ್ರ್ಯವನ್ನು ಕಾಯ್ದುಕೊಳ್ಳಬೇಕಾಗುವದು. ವೈದಿಕರ ಈ ಸ್ತ್ರೀಪಾವಿತ್ರ್ಯ ರಕ್ಷಣದ ವೈಭವದ ಮರ್ಮವರಿಯದ ಸ್ವೇಚ್ಛಾಚಾರಿ ಬಾಲಿಶ ಸ್ತ್ರೀಪುರುಷರು, ಆ ಪಾವಿತ್ರ್ಯ ರಕ್ಷಣದ ಸ್ಥಿತಿಯನ್ನು ಸ್ತ್ರೀಯರ ಪಾರತಂತ್ರ್ಯವೆಂದು ಕರೆದು, ಸ್ತ್ರೀ ಪುರುಷರಿಬ್ಬರ ಸ್ವೇಚ್ಛಾಚಾರಕ್ಕೂ ಆಸ್ಪದವನ್ನುಂಟುಮಾಡಿ, ಜಗತ್ತಿನ ನಾಳಿನ ನಾಶವನ್ನು ಇಂದೇ ಉಂಟುಮಾಡುವರು! ಗುರುಶಾಂತಪ್ಪಾ, ಸ್ವಸ್ವರೂಪ ಜ್ಞಾನವುಳ್ಳವರು ಮಾತ್ರ ಸ್ವತಂತ್ರರೆಂದು ಶ್ರೀಮದ್ಭಾಗವತದಲ್ಲಿ ಹೇಳಿರುವದು; ಅಂದ ಬಳಿಕ ಮಾಯಾಮೂಲವಾದ ಈ ಜಗತ್ತಿನೊಳಗಿನ ವಿವಿಧ ವಿಷಯ ಜಾಲಕ್ಕೆ ಮೋಹಿಸಿ, ಸ್ವಸ್ವರೂಪವನ್ನು ಮರೆತುಬಿಟ್ಟು, ಆ ಮಾಯಾಜಾಲದಲ್ಲಿ ಸ್ವೇಚ್ಛಾಚರಣೆ ಯಿಂದ ಹೆಚ್ಚು ಹೆಚ್ಚು ಸಿಕ್ಕು ಬೀಳುತ್ತ ನಡೆದಿರುವ ಸಂಸಾರಮೋಹದ ಈ ಮಾನವ ಕೀಟಕಗಳು, ಹೇಗೆ ಸ್ವತಂತ್ರರಾದಾರು? ಅವರು ಕೇವಲ ವಿಷಯತಂತ್ರರು, ಅಂದರೆ ವಿಷಯಗಳು ಕುಣಿಸಿದಂತೆ ಕುಣಿಯುವವರು ಆಗಿರುವರೆಂದು ತಿಳಿಯತಕ್ಕದು! ಆದ್ದರಿಂದ ಗುರುಶಾಂತಪ್ಪಾ, ನಿನಗೆ ''ಸ್ತ್ರೀಸ್ವಾತಂತ್ರ್ಯ'' ಎಂಬ ವಿಷಯದ ಸತ್ಯ ಸ್ವರೂಪವು ತಿಳಿಯುವದಕ್ಕಾಗಿ, ಈಗ ನಾವು ಆ ಮಹತ್ವದ ವಿಷಯವನ್ನು ಕುರಿತು ತತ್ವತಃ ಉಪದೇಶಿಸುವೆವು, ಇತ್ತ ಅವಧಾನವಿರಲಿ.

ಗುರುಶಾಂತಪ್ಪಾ, ಸ್ತ್ರೀಯರ ಪಾರತಂತ್ರ್ಯವು, ಅಂದರೆ, ಸ್ತ್ರೀಯರು ತಾವು ಸುರಕ್ಷಿತೆ ಯರಾಗಿರುವದಕ್ಕಾಗಿ ಯಾರೊಬ್ಬರ ಮೇಲ್ವಿಚಾರಣೆಗೆ ಒಳಗಾಗಿರುವದು ಸ್ವಾಭಾವಿಕ ವಾಗಿದ್ದು ಅದು ಅವರ ಕಲ್ಯಾಣಕ್ಕಾಗಿಯೇ ಇರುತ್ತದೆಂದು ತಿಳಿಯಬೇಕಾಗುತ್ತದೆ; ಆದರೆ ಅದು ಹೇಗೆಂಬದನ್ನು ಕುರಿತು ತತ್ವತಃ ಅತಿಸಂಕ್ಷೇಪದಲ್ಲಿ ವಿಚಾರಿಸೋಣ. ಈ ಜಗತ್ತಿನೊಳಗಿನ ವಸ್ತುಗಳು ಸಚೇತನವೆಂತಲೂ, ಅಚೇತನವೆಂತಲೂ ಎರಡು ವಿಧವಾಗಿರುವವಷ್ಟೆ? ಮೊದಲು ಅಚೇತನ ವಸ್ತುಗಳಲ್ಲಿ ಕೂಡ ಈ ಸ್ವಾತಂತ್ರ್ಯ-ಪಾರತಂತ್ರ್ಯಗಳು, ಸ್ವಯಂಸಿದ್ಧವಾಗಿ ಹೇಗೆ ಇರುತ್ತವೆಂಬ ದನ್ನು ಆಲೋಚಿಸೋಣ. ಸೂರ್ಯಗೋಲವು ಅಚೇತನ ವಸ್ತುವಾಗಿದ್ದು, ಅದು

ಪೃಥಿವ್ಯಾದಿ ಗ್ರಹಗಳಿಗಿಂತ ಬಹಳ ದೊಡ್ಡದಾಗಿರುತ್ತದೆ; ಅಂದರೆ, ಪೃಥಿವ್ಯಾದಿಗೋಲಗಳಿಗಿಂತ ಸೂರ್ಯ ಗೋಲದಲ್ಲಿ ಘಟಕದ್ರವ್ಯಗಳು ಹೆಚ್ಚು ಇರುತ್ತವೆ. ಆದ್ದರಿಂದ ಆ ಪೃಥ್ವಿಯೇ ಮೊದಲಾದ ಗ್ರಹಗಳು, ಸೂರ್ಯನ ಗುರುತ್ವಾಕರ್ಷಣದ ಮೂಲಕ ಆತನಿಗೆ ಅಧೀನಗಳಾಗಿ, ಪಾರತಂತ್ರ್ಯ ದಿಂದ ಆತನ ಸುತ್ತು ತಿರುಗುತ್ತವೆಂಬ ಮಾತು ಶಾಸ್ತ್ರದಿಂದ ಸಿದ್ಧವಾಗಿರುತ್ತದೆ. ಅದರಂತೆ, ಪೃಥ್ವಿಯ ಮೇಲಿನ ವಸ್ತುಗಳೆಲ್ಲ ಪೃಥ್ವಿಯ ಗುರುತ್ವದ ಆಕರ್ಷಣದ ಮೂಲಕ ಪರತಂತ್ರಗಳಾಗಿ, ಆ ಪೃಥ್ವಿಯನ್ನು ಅತಿಕ್ರಮಿಸಿ ಹೋಗಲಾರವೆಂಬ ಮಾತು ಅನುಭವಸಿದ್ಧ ವಾಗಿರುವದು. ಹೀಗೆ ಜಡಪದಾರ್ಥಗಳಲ್ಲಿ ಲಘುತ್ವ–ಗುರುತ್ವಗಳು ಉಂಟಾಗಲಿಕ್ಕೆ, ಅವುಗಳಲ್ಲಿರುವ ಘಟಕದ್ರವ್ಯಗಳ ನ್ಯೂನಾಧಿಕ್ಯಗಳೇ ಕಾರಣವೆಂದು ಶಾಸ್ತ್ರತಃ ಸಿದ್ಧವಾಗಿರುತ್ತದೆ.

ಇನ್ನು, ಸಚೇತನಪದಾರ್ಥಗಳ ಸ್ವಾತಂತ್ರ್ಯ–ಪಾರತಂತ್ರ್ಯಗಳನ್ನು ಕುರಿತು ವಿಚಾರ ಮಾಡೋಣ. ಸಚೇತನಪದಾರ್ಥಗಳೆಂದರೆ, ಚೇತನವುಳ್ಳ ಜಡಪದಾರ್ಥಗಳೆಂದು ತಿಳಿಯತಕ್ಕದ್ದು. ಜಗತ್ತು ಚೇತನಾಮಯವಾದದ್ದೆಂದು ಸಿದ್ಧಾಂತವಿರುವದರಿಂದ, ಅಚೇತನ ಪದಾರ್ಥಗಳಲ್ಲಿ ಚೇತನವು ಸುಪ್ತಾವಸ್ಥೆಯಲ್ಲಿರುತ್ತದೆಂತಲೂ, ಸಚೇತನಪದಾರ್ಥಗಳಲ್ಲಿ ಅದು ಜಾಗ್ರದವಸ್ಥೆಯಲ್ಲಿರುತ್ತದೆಂತಲೂ, ನಮ್ಮ ಅನುಭವದ ದೃಷ್ಟಿಯಿಂದ ಹೇಳಬೇಕಾಗುವದು. ಜಡಪದಾರ್ಥಗಳ ಲಘುತ್ವ–ಗುರುತ್ವಗಳಿಗೆ ಅವುಗಳ ಘಟಕದ್ರವ್ಯಗಳ ನ್ಯೂನಾಧಿಕ್ಯಗಳು ಕಾರಣವೆಂದು ಮೇಲೆ ಹೇಳಿದೆಯಷ್ಟೆ? ಸಚೇತನ ಪದಾರ್ಥಗಳಲ್ಲಿ ಜಡಗಳಾದ ಅವುಗಳ ದೇಹಗಳೇ ಪ್ರಾಮುಖ್ಯವಾಗಿ ದೃಶ್ಯವಾಗಿರುವದರಿಂದ, ಸಚೇತನ ಪದಾರ್ಥಗಳ ಲಘುತ್ವ–ಗುರುತ್ವಗಳಿಗೂ ಈ ಘಟಕದ್ರವ್ಯಗಳ ನ್ಯೂನಾಧಿಕ್ಯವು ಪ್ರಥಮ ಕಾರಣವಾಗಿರುತ್ತದೆಂದು ತಿಳಿಯತಕ್ಕದ್ದು.

ಹೀಗೆ ಸಚೇತನ ಪದಾರ್ಥಗಳ ಸ್ವಾತಂತ್ರ್ಯ ಪಾರತಂತ್ರ್ಯಗಳಿಗೆ, ಅವುಗಳ ದೇಹಗಳಲ್ಲಿಯ ಘಟಕದ್ರವ್ಯಗಳ ನ್ಯೂನಾಧಿಕ್ಯವು ಪ್ರಥಮ ಕಾರಣವಾಗಿರುವದಲ್ಲದೆ, ಚೇತನದ ಯೋಗದಿಂದ ಆ ಸಚೇತನ ಪದಾರ್ಥಗಳ ದೇಹಗಳ ದ್ವಾರದಿಂದ ಪ್ರಕಟವಾಗುವ ಶಾರೀರಬಲ,ಬುದ್ಧಿಬಲ, ವಿಕಾರವಶತೆ ಇವುಗಳ ನ್ಯೂನಾಧಿಕ್ಯಗಳು ಮುಖ್ಯ ಕಾರಣ ಗಳಾಗಿರುತ್ತವೆ. ಇವುಗಳ ಸ್ಪಷ್ಟೀ ಕರಣಕ್ಕಾಗಿ, ಆನೆ,–ಸಿಂಹಗಳೆಂಬ ಎರಡು ಸಚೇತನ ಪದಾರ್ಥಗಳನ್ನು ಉದಾಹರಣೆಗಾಗಿ ತಕ್ಕೊಳ್ಳೋಣ. ಸಿಂಹದ ದೇಹದಲ್ಲಿಗಿಂತ ಆನೆಯ ದೇಹದಲ್ಲಿ ಘಟಕದ್ರವ್ಯಗಳ ಮಾನವು ಹೆಚ್ಚು ಇರುವದರಿಂದಲೂ, ಸಿಂಹಕ್ಕಿಂತ ಆನೆಯು ಬಲಿಷ್ಠವಾಗಿರುವದರಿಂದಲೂ ಆನೆಯು ಸಿಂಹದ ಸಂಬಂಧದ ಗುರತ್ವವನ್ನು ಪಡೆಯಬಹುದಾಗಿತ್ತು; ಆದರೆ ಅತ್ಯಂತ ಮಹತ್ವದ ಬುದ್ಧಿಬಲದ ಪರಾಕ್ರಮ–ಶೌರ್ಯ– ಧೈರ್ಯಾದಿ ಗುಣಗಳು ಆನೆಗಿಂತ ಸಿಂಹದಲ್ಲಿ ಹೆಚ್ಚು ಇರುವವು; ಮತ್ತು ಆನೆಯು ಸಿಂಹವನ್ನು ಕಂಡು ಹೆದರಿ ಮಾನಸಿಕ–ದೈಹಿಕ ವಿಕಾರಗಳನ್ನು ಹೊಂದು ವಷ್ಟು, ಸಿಂಹವು ಹೊಂದುವದಿಲ್ಲ; ಅರ್ಥಾತ್ ಆನೆಗಿಂತ ಸಿಂಹದಲ್ಲಿ ವಿಕಾರವಶತೆಯು ಕಡಿಮೆ ಇದ್ದಂತಾಯಿತು. ಹೀಗೆ ಒಟ್ಟಿನೊಳಗೆ ಸಿಂಹದಲ್ಲಿ ಆನೆಗಿಂತ ಬುದ್ಧಿಬಲ, ವಿಕಾರರಾಹಿತ್ಯ ಇವು ಹೆಚ್ಚು ಇದ್ದಂತಾದವು; ಆದ್ದರಿಂದಲೇ ಆನೆಯ ಬದಲು ಸಿಂಹವು ಗುರುತ್ವವನ್ನು

ಹೊಂದಿರುವದು. ಸಾರಾಂಶ, ಸಚೇತನ ಪದಾರ್ಥಗಳ ಲಘುತ್ವ-ಗುರುತ್ವಗಳಿಗೆ, ಅವುಗಳ ೧. ಘಟಕದ್ರವ್ಯ ೨. ಶಾರೀರಬಲ ೩. ಬುದ್ಧಿಬಲ ೪. ವಿಕಾರವಶತೆ ಎಂಬ ನಾಲ್ಕರ ನ್ಯೂನಾಧಿಕ್ಯಗಳು ಕಾರಣವಾಗಿರುವವೆಂದು ತಿಳಿಯತಕ್ಕದ್ದು.

ಮೇಲೆ ಅತ್ಯಂತ ಮಹತ್ವದ್ದೆಂದು ಹೇಳಿರುವ ಬುದ್ಧಿಬಲದ ನ್ಯೂನಾಧಿಕ್ಯಗಳ ದೃಷ್ಟಿಯಿಂದ, ಸಚೇತನ ಪದಾರ್ಥಗಳಲ್ಲಿ ತಿರ್ಯಗ್‌ಯೋನಿಯೆಂತಲೂ, ಮನುಷ್ಯಯೋನಿಯೆಂತಲೂ, ದೇವಯೋನಿಯೆಂತಲೂ ಮೂರು ವರ್ಗಗಳನ್ನು ಮಾಡಬೇಕಾಗುವದು. ಇವು ಮೂರು ವರ್ಗಗಳು ಉತ್ತರೋತ್ತರ ಶ್ರೇಷ್ಠಕೋಟಿಯ ಯೋನಿಗಳವಾಗಿರುತ್ತವೆ; ಅಂದರೆ ಆನೆ-ಸಿಂಹ ಮೊದಲಾದ ತಿರ್ಯಗ್‌ಯೋನಿಗಿಂತ ಮನುಷ್ಯಯೋನಿಯು ಶ್ರೇಷ್ಠ, ಮನುಷ್ಯಯೋನಿಗಿಂತ ದೇವಯೋನಿಯು ಶ್ರೇಷ್ಠ! ಈ ಶ್ರೇಷ್ಠತ್ವದ ಸ್ಥಾಪನೆಗೆ ಪ್ರಾಮುಖ್ಯವಾಗಿ ಬುದ್ಧಿಬಲದ ಉತ್ತರೋತ್ತರ ಆಧಿಕ್ಯವು ಕಾರಣವಾಗಿದ್ದರೂ, ಆ ಬುದ್ಧಿಬಲದ ಪ್ರಭಾವರೂಪವಾದ ಧರ್ಮಾಚರಣೆಯ ನ್ಯೂನಾಧಿಕ್ಯಗಳೂ ಕಾರಣವಾಗಿರುವವು; ಅಂದರೆ ತಿರ್ಯಗ್‌ಯೋನಿಗೆ ಧರ್ಮಾಧರ್ಮ ವಿಚಾರವಿಲ್ಲದೆ, ಅದು ಕೇವಲ ಹುಟ್ಟುಗುಣದಂತೆ ನಡೆಯುವದರಿಂದ ಅದು ಎಲ್ಲಕ್ಕೂ ಹೀನ; ಮನುಷ್ಯಯೋನಿಯಲ್ಲಿ ಧರ್ಮಜ್ಞಾನವಿರುವದರಿಂದ ತಿರ್ಯಗ್‌ಯೋನಿಗಿಂತ ಅದು ಶ್ರೇಷ್ಠ; ದೇವಯೋನಿಯು ಧರ್ಮಮಯವಾಗಿರುವದರಿಂದ ಮನುಷ್ಯಯೋನಿಗಿಂತಲೂ ಅದು ಅತ್ಯಂತ ಶ್ರೇಷ್ಠ! ಈ ಎಲ್ಲ ವಿವೇಚನವನ್ನು ಮನಸ್ಸಿನಲ್ಲಿ ತಂದು, ಈಗ ನಾವು ನಿರ್ಣಯಿಸಬೇಕಾಗಿರುವ ಮನುಷ್ಯಯೋನಿ-ದೇವಯೋನಿಗಳ, ಪ್ರಾಮುಖ್ಯವಾಗಿ ಮನುಷ್ಯಯೋನಿಯ ಸ್ತ್ರೀ-ಪುರುಷರ ಲಘುತ್ವ-ಗುರುತ್ವಗಳಿಗೆ-೧. ಘಟಕ ದ್ರವ್ಯ ೨. ಶಾರೀರಬಲ ೩. ಬುದ್ಧಿಬಲ ೪. ವಿಕಾರವಶತೆ ೫. ಧರ್ಮಪಾಲನ ಈ ಐದರ ನ್ಯೂನಾಧಿಕ್ಯಗಳು ಕಾರಣವಾಗಿರುತ್ತದೆಂದು ತಿಳಿಯತಕ್ಕದ್ದು.

ಗುರುಶಾಂತಪ್ಪಾ, ಇನ್ನು, ಮೇಲಿನ ಐದು ಕಾರಣಗಳ ಯೋಜನೆಯಿಂದ ಮನುಷ್ಯಯೋನಿ-ದೇವಯೋನಿಗಳಲ್ಲಿಯ ಸ್ತ್ರೀಪುರುಷರಲ್ಲಿ, ಸೃಷ್ಟಿಕರ್ತನ ಸಂಕೇತದಂತೆ ಸ್ತ್ರೀಯರು ಪುರುಷರಿಗೆ ಅಧೀನರೋ, ಪುರುಷರು ಸ್ತ್ರೀಯರಿಗೆ ಅಧೀನರೋ ಎಂಬದನ್ನು ಕುರಿತು ವಿಚಾರಮಾಡೋಣ. ವಾಡಿಕೆಯಾಗಿ ಸ್ತ್ರೀ-ಪುರುಷರ ಶರೀರಯಷ್ಟಿಗಳ ಅವಲೋಕನ ಮಾಡಿದರೆ, ಹಲಕೆಲವು ಅಪವಾದಗಳನ್ನು ಬಿಟ್ಟು, ಒಟ್ಟಿನಲ್ಲಿ ಪುರುಷರು ದೃಢಕಾಯರೂ, ಸ್ತ್ರೀಯರೂ ಕೋಮಲಕಾಯರೂ ಇರುವರೆಂಬ ಮಾತು ಅನುಭವಸಿದ್ಧವಾಗಿರುವದು; ಆದ್ದರಿಂದ ಘಟಕ ದ್ರವ್ಯಗಳ ಆಧಿಕ್ಯವು, ಸ್ತ್ರೀಯರ ದೇಹಕ್ಕಿಂತ ಪುರುಷರ ದೇಹದಲ್ಲಿಯೇ ಹೆಚ್ಚು ಇರಬೇಕಾದದ್ದರಿಂದ ಒಂದನೆಯ ಕಾರಣದಂತೆ ಸ್ತ್ರೀಯರೇ ಪುರುಷರ ಅಧೀನರಾಗಿರಬೇಕಾಗುವದೆಂದು ತಿಳಿಯಬೇಕಾಗುವದು.

ಇನ್ನು, ಎರಡನೆಯ ಕಾರಣವಾದ ಶಾರೀರಬಲದ ದೃಷ್ಟಿಯಿಂದಲೂ ಇದೇ ಮಾತು ಸಿದ್ಧವಾಗುವದು. ಪುರುಷರು ಸ್ತ್ರೀಯರಿಗಿಂತಲೂ ಶಾರೀರಬಲದಲ್ಲಿ ವರಿಷ್ಠರಾಗಿರುವ ದಿಂದಲೇ, ಯುದ್ಧಾದಿ ಶಾರೀರಬಲದ ಕೆಲಸಗಳಲ್ಲಿ, ಅಲ್ಪಸ್ವಲ್ಪ ಅಪವಾದಗಳನ್ನು ಬಿಟ್ಟರೆ,

ರಣಶೂರರೂ ಪುರುಷರೇ ಎಂದು ಎಣಿಸಲ್ಪಟ್ಟಿರುವದರಿಂದ, ಅನಾದಿಕಾಲದಿಂದ ಪುರುಷರೇ ಸೈನ್ಯದಲ್ಲಿ ಸೇರುತ್ತ ಬಂದಿರುವರು. ಅದರಂತೆ, ಮಲ್ಲಯುದ್ಧಾದಿಗಳು ಪುರುಷರವೆಂದಲ್ಲದೆ ಸ್ತ್ರೀಯರವೆಂದು ತಿಳಿಯುತ್ತ ಬಂದಿರುವದಿಲ್ಲ. ಈ ಮಾತಿಗೆ ಅಲ್ಲೊಂದು ಇಲ್ಲೊಂದು ಅಪವಾದವಿದ್ದರೂ ಇರಬಹುದು; ಆದರೆ ಒಟ್ಟಿನಲ್ಲಿ ಪುರುಷರು ಬಲಿಷ್ಠರೂ, ಸ್ತ್ರೀಯರು ಅಬಲೆಯರೂ ಆಗಿರುವದರಿಂದ, ಈ ಎರಡನೆಯ ಶಾರೀರ ಬಲದ ಕಾರಣದಿಂದಲೂ ಸ್ತ್ರೀಯರು ಪುರುಷರಿಗೆ ಅಧೀನರಾಗಿರಬೇಕಾಗುವದು.

ಇನ್ನು ಮೂರನೆಯ ಕಾರಣವಾದ ಬುದ್ಧಿಬಲದ ಮಾತೂ ಹೀಗೆಯೇ ಸರಿ. ಓದುಬರಹ ಬರುವದು, ಅಥವಾ ವಾಕ್ಪಟುತ್ವವನ್ನು ತೋರಿಸುವದು, ಅಥವಾ ಲೇಖನ ಕಲಾನೈಪುಣ್ಯವನ್ನು ಸಂಪಾದಿಸುವದು ಬುದ್ಧಿಪ್ರಭಾವದ ಮುಖ್ಯ ಲಕ್ಷಣಗಳಲ್ಲ. ಜಗತ್ಕಲ್ಯಾಣಕಾರಕಗಳಾದ ಲೌಕಿಕ ಪಾರಮಾರ್ಥಿಕ ಶೋಧಗಳನ್ನು ಮಾಡುವದೂ, ವಿವಿಧ ಜಗೆಯ ಉದಾತ್ತತೆಗಳಿಂದ ಪರರನ್ನು ಆಕ್ರಮಿಸುವದೂ ಬುದ್ಧಿಪ್ರಭಾವದ ಮುಖ್ಯ ಲಕ್ಷಣಗಳಾಗಿರುತ್ತವೆ. ಈ ದೃಷ್ಟಿಯಿಂದ ನೋಡಿದರೆ, ಅನಾದಿಕಾಲದಿಂದ ಇಡಿಯ ಜಗತ್ತಿನೊಳಗಿನ ಯಾವತ್ತು ದೇಶಗಳಲ್ಲಿ ಅತ್ಯಲ್ಪ ಅಪವಾದಗಳನ್ನು ಬಿಟ್ಟರೆ, ಪುರುಷರೇ ಎರಡೂ ಜಗೆಯ ಶೋಧವಮಾಡುವಲ್ಲಿ, ಹಾಗು ಪರಾಕ್ರಮದಲ್ಲಿ ಮುಂದುವರಿದಿರುವರಲ್ಲದೆ, ಸ್ತ್ರೀಯರು ಮುಂದುವರಿದಿರುವದಿಲ್ಲವು; ಆದ್ದರಿಂದ ಬುದ್ಧಿಯ ಆಧಿಕ್ಯದಿಂದಲೂ ಸ್ತ್ರೀಯರು ಪುರುಷರಿಗೆ ಅಧೀನರಾಗಿರಬೇಕಾಗುವದು.

ಇನ್ನು ನಾಲ್ಕನೆಯ ಕಾರಣವಾದ ವಿಕಾರರಾಹಿತ್ಯದ ದೃಷ್ಟಿಯಿಂದ ವಿಚಾರ ಮಾಡೋಣ. ವಿಕಾರಗಳು ಮಾನಸಿಕ,ದೈಹಿಕ ಎಂದು ಎರಡು ವಿಧವಾಗಿರುವವು. ಮಾನಸಿಕ ವಿಕಾರವೆಂದರೆ, ಕ್ರೋಧ, ಭಯ, ದುಃಖ,ಆನಂದ, ಲಜ್ಜಾ ಮುಂತಾದವುಗಳ ಯೋಗದಿಂದಾಗುವ ಮಾನಸಿಕ ಸ್ವರೂಪ ಭೇದಗಳು. ದೈಹಿಕ ವಿಕಾರವೆಂದರೆ, ಬಾಲ್ಯ, ತಾರುಣ್ಯ, ವಾರ್ಧಕ್ಯ ಮುಂತಾದವುಗಳ ಯೋಗದಿಂದ ಆಗುವ ದೈಹಿಕ ಸ್ವರೂಪ ಭೇದಗಳು. ಇವೆರಡು ಬಗೆಯ ವಿಕಾರಗಳೂ ಪುರುಷರಿಗಿಂತ ಸ್ತ್ರೀಯರಿಗೇ ಹೆಚ್ಚು ಆಗುವವು. ಯಾಕಂದರೆ ಮೇಲೆ ಹೇಳಿದ ಕ್ರೋಧ, ಭಯ, ದುಃಖ, ಆನಂದ, ಲಜ್ಜಾ ಮೊದಲಾದವುಗಳ ಪರಿಣಾಮಗಳು ಸ್ತ್ರೀಯರ ಮನಸ್ಸಿನ ಮೇಲೆ ಅಲ್ಪಕಾರಣಗಳಿಂದ ತಟ್ಟನೆ ಆಗಿ, ಅಲ್ಪ ಕಾರಣಗಳಿಂದ ತಟ್ಟನೆ ಹೋಗುವವು. ಆದರೆ ಪುರುಷರಿಗೆ ಅಷ್ಟಕ್ಕಿಷ್ಟಕ್ಕೆ ಹಾಗೆ ವಿಕಾರಗಳಾಗುವದಿಲ್ಲ; ಆದ ವಿಕಾರಗಳು ತಟ್ಟನೆ ಹೋಗುವದೂ ಇಲ್ಲ. ಅದರಂತೆ, ಬಾಲ್ಯ, ತಾರುಣ್ಯ, ವಾರ್ಧಕ್ಯಗಳ ಮೂಲಕ ಆಗುವ ದೈಹಿಕ ವಿಕಾರಗಳು ಸ್ತ್ರೀಯರಿಗೂ, ಪುರುಷರಿಗೂ ಸಮಾನವಾಗಿದ್ದರೂ, ರಜೋದರ್ಶನ, ಗರ್ಭಧಾರಣ, ಪ್ರಸವ ಮೊದಲಾದ ದೈಹಿಕ ವಿಕಾರಗಳು ಪುರುಷರಿಗಿಂತ ಸ್ತ್ರೀಯರಿಗೆ ಹೆಚ್ಚಿನವಾಗಿರುವವು; ಆದ್ದರಿಂದ ವಿಕಾರರಾಹಿತ್ಯದ ಕೊರತೆಯಿಂದಲೂ, ಸ್ತ್ರೀಯರು ಪುರುಷರಿಗೆ ಅಧೀನರಾಗಿರಬೇಕಾಗುನದು.

ಈ ವಿಕಾರವಶತೆಯ ಸಂಬಂಧದಿಂದ, ಒಂದು ಗುಟ್ಟಿನ ಮಾತನ್ನು ಇಲ್ಲಿ ಹೇಳುವೆವು. ಈ ಜಗತ್ತು ಪ್ರಕೃತಿಪುರುಷಾತ್ಮಕವಾಗಿರುವದಷ್ಟೆ? ವಿಕಾರವಾಗುವದು, ಅಂದರೆ ರೂಪಾಂತರ

ವಾಗುವದು. ಪ್ರಕೃತಿಯ ಗುಣವು, ವಿಕಾರವಾಗದಿರುವದು, ಅಂದರೆ ರೂಪಾಂತರವಾಗದಿರುವದು ಪುರುಷನ ಗುಣವು. ಪ್ರಕೃತಿಯು ವಿಕಾರಿಯಾದದ್ದರಿಂದ ಅದು ಪುರುಷನಿಗೆ ಭೋಗ್ಯವು; ಪುರುಷನು ವಿಕಾರರಹಿತನಾದದ್ದರಿಂದ ಆತನು ಪ್ರಕೃತಿಗೆ ಭೋಕ್ತೃವು; ಇದೇ ಆಧಾರದಿಂದಲೇ ಮೇಲೆ ನಾವು ಭೋಕ್ತೃ ಭೋಗ್ಯರ ನಿರ್ಣಯವನ್ನು, ಅಂದರೆ ಸ್ತ್ರೀಯರು ಪುರುಷರ ಭ್ಯೋಗ್ಯರೆಂಬದನ್ನು ನಿರ್ಣಯಿಸಿರುತ್ತೇವೆ. ಪ್ರಕೃತಿಗೆ ಪುರುಷನು ಆಧಾರವಾಗಿರುವಂತೆ, ಪ್ರಕೃತಿಸ್ಥಾನಾಪನ್ನರಾದ ಸ್ತ್ರೀಯರಿಗೆ, ಪುರುಷಸ್ಥಾನಾಪನ್ನರಾದ ಪುರುಷರು ಆಧಾರವಾಗಿರುವರು. ಪುರುಷರು ತಮ್ಮ ಪೌರುಷದಿಂದ ಬಹುಜನ ಸ್ತ್ರೀಯರನ್ನು ಆಳುವ ಉದಾಹರಣೆಗಳನ್ನು, ಮನುಷ್ಯರಲ್ಲಿಯಂತೆ ಮನುಷ್ಯೇತರಗಳಾದ ತಿರ್ಯಗ್‌ಯೋನಿಯ ಹಲವು ಪ್ರಾಣಿಜಾತಿಗಳಲ್ಲಿ ಕಾಣಬಹುದು. ಟಗರೆಯ ಒಂದು ಹಿಂಡಿಗೆ ಗಂಡು ಟಗರೆ ಒಂದೇ ಇರುವದು; ವಾನರಜಾತಿಯ ಹೆಣ್ಣು ಮುಸವಗಳ ಹಿಂಡಿಗೆ ಒಂದೇ ಗಂಡು ಮುಸವವು ಇರುವದು; ಆಕಳ ಹಿಂಡಿಗೆ ಒಂದೇ ಗೂಳಿಯು ಸಾಕಾಗುವದು; ಇದರಂತೆ, ಹಲವು ಗಂಡುಗಳ ಹಿಂದೆ ಒಂದೇ ಹೆಣ್ಣು ಇರುವ ಉದಾಹರಣವು ತಿರ್ಯಗ್‌ಯೋನಿಯಲ್ಲಿ ನಮಗಂತು ಕಂಡಬಂದಿರುವದಿಲ್ಲ. ಮನುಷ್ಯರಲ್ಲಿ ಒಬ್ಬ ಗಂಡಸಿಗೆ ಬಹುಜನ ಹೆಂಡಿರು ಅನಾದಿಕಾಲದಿಂದ ಇರುತ್ತಿರುವರು; ಆದರೆ ಒಬ್ಬ ದ್ರೌಪದಿಗೆ ಐದು ಜನ ಗಂಡಂದಿರಿರುವದು ವ್ಯತ್ಯಾಸಕರವೂ, ತೊಡಕಿನದೂ ಆಗಿರುವದು. ಆ ತೊಡಕನ್ನು ನಾರದರಂಥ ಜ್ಞಾನಿಗಳು ಯುಕ್ತಿಯಿಂದ ಬಿಡಸಬೇಕಾಯಿತು. ತಾತ್ಪರ್ಯವಿಷ್ಟೆ, ಪುರುಷರು ಪೌರಿಷಿಗಳೇ, ಸ್ತ್ರೀಯರು ಪುರುಷರಕ್ಷಿತರಾದದ್ದರಿಂದ ಪುರುಷರಿಗೆ ಅಧೀನರೇ. ಈ ಲಕ್ಷಣವು ಮೇಲೆ ಹೇಳಿದಂತೆ ಮನುಷ್ಯೇತರ ಪ್ರಾಣಿಗಳಲ್ಲಿಯೂ ತೋರುತ್ತಿರುವದರಿಂದ, ಅದು ಸೃಷ್ಟಿಯ ನಿಯಮ ವಾಗಿರುತ್ತದೆ; ಹೀಗಿದ್ದು ಸ್ತ್ರೀಪುರುಷರ ಹಕ್ಕು ಸಮಾನವಿರುತ್ತದೆಂತಲೂ, ಸ್ತ್ರೀಪುರುಷರಿಬ್ಬರೂ ಸ್ವತಂತ್ರರೆಂತಲೂ ಪ್ರತಿಪಾದಿಸುವದೂ, ಅದರಂತೆ ನಡೆಯುವದೂ ಸೃಷ್ಟಿಯ ನಿಯಮದ ವಿರುದ್ಧವೇ ಸರಿ. ಸೃಷ್ಟಿಯ ನಿಯಮದ ವಿರುದ್ಧವಾಗಿ ನಡೆಯುವವರನ್ನು ಸೃಷ್ಟಿಯು ಶಿಕ್ಷಿಸುವದು ಅಪರಿಹಾರ್ಯ ವಾಗಿರುವದಲ್ಲದೆ, ಅಂಥವರನ್ನು ಶಿಕ್ಷಿಸಲು ಅರಸರ ಕಾಯದೆಯೂ ಇರುವದು; ಆದರೆ ಅರಸು ಕುಳಿತು ಸೃಷ್ಟಿಯ ನಿಯಮದ ವಿರುದ್ಧ ಕಾಯದೆ ಮಾಡುವದೂ, ಅಂಥ ಕಾಯದೆಯನ್ನು ಅಮಲಿನಲ್ಲಿ ತರಲು ಯತ್ನಿಸುವದೂ ಪರಮಸಾಹಸವೇ ಸರಿ! ಬೇಲಿಯೇ ಎದ್ದು ಹೊಲಮೇದರೆ ಮಾಡುವದೇನು? ಮುಂದೆ ಕಾಲಾಂತರದಿಂದ ತಪ್ಪದೆ ಒದಗುವ ಕಷ್ಟ–ನಷ್ಟಗಳಿಗೆ ಗುರಿ ಯಾಗಲು ಸಿದ್ಧವಾಗಿರುವದೊಂದೇ ಇದಕ್ಕೆ ಉಪಾಯ ವೆಂದು ಹೇಳಬೇಕಾಗುವದು!

ಇನ್ನು ೫ನೆಯ ಕಾರಣವಾದ ಧರ್ಮಪಾಲನದ ದೃಷ್ಟಿಯಿಂದ ವಿಚಾರಮಾಡೋಣ. ಈ ದೃಷ್ಟಿಯಿಂದ ಸ್ತ್ರೀಯರು ಪುರುಷರಿಗಿಂತಲೂ ಶ್ರೇಷ್ಠರೆಂದು ಒಡಂಬಡಬೇಕಾಗುತ್ತದೆ; ಯಾಕಂದರೆ, ಸ್ತ್ರೀಯರ ಕೋಮಲಾಂತಃಕರಣ, ದಯಾರ್ದ್ರ ಹೃದಯ, ಪ್ರೇಮಮಯ ಮನೋವೃತ್ತಿ ಪರೋಪಕಾರನಿರತತೆ ಮೊದಲಾದ ಪವಿತ್ರ ಸುಕುಮಾರ ಗುಣಗಳ ಮೂಲಕ,

ಅವರಲ್ಲಿ ಭಾವಿಕತನವು ಹೆಚ್ಚಿ, ಧರ್ಮತತ್ವಗಳು ಅವರ ಹೃದಯದಲ್ಲಿ ನೆಲೆಗೊಳ್ಳುವವು; ಆದ್ದರಿಂದ ಪುರುಷರಿಗಿಂತ ಸ್ತ್ರೀಯರು ಧರ್ಮಲಂಡರಾಗುವದು ಕಡಿಮೆ. ಇಂಥ ಹೀನಕಾಲದಲ್ಲಿಯೂ, ಭರತ ಭೂಮಿಯಲ್ಲಿ ಧರ್ಮವು ದೊಡ್ಡ ಪ್ರಮಾಣದಿಂದ ಸ್ತ್ರೀಯರಿಂದಲೇ ಉಳಿದದ್ದಾಗಿರುತ್ತದೆ; ಆದರೆ ಅವರ ಈ ಪವಿತ್ರ ಧರ್ಮಪಾಲನವು, ಪುರುಷರ ಸಂರಕ್ಷಣವಿಲ್ಲದೆ ನಿರ್ವಿಘ್ನದಿಂದಾಗದು. ಉದಾಹರಣಕ್ಕಾಗಿ ಸ್ತ್ರೀಯರ ಶ್ರೇಷ್ಠ ಧರ್ಮವಾದ ಪಾತಿವ್ರತ್ಯ ಪಾಲನದ ದೃಷ್ಟಿಯಿಂದಲೇ ಕೆಳಗೆ ಸ್ವತಂತ್ರವಾಗಿ ಸ್ವಲ್ಪ ವಿಚಾರಮಾಡೋಣ.

ಈ ಜಗತ್ತಿನೊಳಗಿನ ವಸ್ತುಗಳೆಲ್ಲ ಭೋಕ್ತೃ-ಭೋಗ್ಯಗಳೆಂಬ ಎರಡು ಧರ್ಮ ಗಳಿಂದ ಕಟ್ಟಲ್ಪಟ್ಟಿರುವವು. ಭೋಕ್ತೃವೆಂದರೆ ಭೋಗಿಸುವ ವಸ್ತುವು. ಭೋಗ್ಯವೆಂದರೆ ಭೋಗಕ್ಕೆ ವಿಷಯವಾದ ವಸ್ತುವು. ಈ ದೃಷ್ಟಿಯಿಂದ ನೋಡಿದರೆ, ಜಗತ್ತಿನ ಪ್ರತಿ ಒಂದು ವಸ್ತುವು ಭೋಕ್ತೃವೂ ಆಗಿರುವದು, ಭೋಗ್ಯವೂ ಆಗಿರುವದು ಎಂಬ ಮಾತು ವಿಚಾರದಿಂದ ಗೊತ್ತಾಗಬಹುದು. ಉದಾಹರಣಾರ್ಥವಾಗಿ, ಕಾಳು-ಕಡಿ ಮೊದಲಾದ ಸಸ್ಯಪದಾರ್ಥಗಳನ್ನು ತಕ್ಕೊಳ್ಳೋಣ. ಅವು ಪ್ರಾಣಿಗಳ ಭೋಗ್ಯವಸ್ತುಗಳಷ್ಟೆ? ಆದರೆ ಅವೇ ಪ್ರಾಣಿಗಳು ಸತ್ತು ಅವುಗಳ ದೇಹಗಳು ಕೊಳಿತು ಗೊಬ್ಬರವಾದರೆ, ರೂಪಾಂತರ ಹೊಂದಿದ ಆ ಪ್ರಾಣಿಗಳೇ ಸಸ್ಯಗಳ ಭೋಗ್ಯವಸ್ತುಗಳಾಗುವವು! ಅದರಂತೆ ಸ್ತ್ರೀಯರು ಪುರುಷರಿಗೆ ಭೋಗ್ಯವಾದರೆ, ಪುರುಷರು ಸ್ತ್ರೀಯರಿಗೆ ಭೋಗ್ಯರಾಗುವರು. ''ಜೀವೋ ಜೀವಸ್ಯ ಜೀವನಂ'' ಎಂಬ ಸಿದ್ಧಾಂತದಂತೆ, ಒಂದು ಪ್ರಾಣಿಯು ಮತ್ತೊಂದು ಪ್ರಾಣಿಯನ್ನು ತಿಂದೇ ಜೀವಿಸ ಬೇಕಾಗುವದು. ಹೀಗೆ ಪ್ರತಿ ಒಂದು ವಸ್ತುವು, ಭೋಕ್ತೃಭೋಗ್ಯಗಳೆಂಬ ಎರಡೂ ಧರ್ಮಗಳುಳ್ಳದ್ದಾಗಿದ್ದರೂ, ವಿಕಾರವಶತೆಯು ಹೆಚ್ಚು ಇದ್ದ ಪ್ರಾಣಿಗಳಲ್ಲಿ ಭೋಗ್ಯಧರ್ಮವು ಹೆಚ್ಚು, ವಿಕಾರವಶತೆಯು ಕಡಿಮೆ ಇರುವ ಪ್ರಾಣಿಯಲ್ಲಿ ಭೋಕ್ತೃಧರ್ಮವು ಹೆಚ್ಚು ಇರುವವು. ಮೇಲೆಯಂತು ಪುರುಷರಿಗಿಂತ ಸ್ತ್ರೀಯರಲ್ಲಿ ವಿಕಾರ ವಶತೆಯು ಹೆಚ್ಚು ಎಂದು ಸಿದ್ಧವಾಗಿರುವದರಿಂದ, ಯಾರು ಭೋಗ್ಯರಾದಂತಾಯಿತು? ಜಗತ್ತು ವಿಕಾರಿಯಾಗಿರುವದರಿಂದ ಅದು ಭೋಗ್ಯವೂ, ಚೇತನವು ವಿಕಾರರಹಿತವಾದ್ದರಿಂದ ಭೋಕ್ತೃವೂ ಆಗಿರುವದನ್ನು ಇಲ್ಲಿ ಮತ್ತೊಮ್ಮೆ ನೆನಪಿಗೆ ತಂದುಕೊಳ್ಳಬಹುದಾಗಿದೆ.

ಈ ಸೃಷ್ಟಿಯಲ್ಲಿ ಭೋಕ್ತೃಗಳ ಮನಸ್ಸು ತಮ್ಮ ಭೋಗ್ಯವಸ್ತುಗಳ ಕಡೆಗೆ ಧಾವಿಸಿ, ಅವನ್ನು ಆಕ್ರಮಿಸುವದು ಸ್ವಾಭಾವಿಕವು! ಅದರಂತೆ, ಪುರುಷರ ಮನಸ್ಸು ಸ್ತ್ರೀಯರ ಕಡೆಗೆ ಹರಿದು, ಒಮ್ಮೊಮ್ಮೆ ಬಲಾತ್ಕಾರದ ಪ್ರಸಂಗವೂ ಒದಗುವದು! ಆದ್ದರಿಂದ ಹಗಲು ರಾತ್ರಿಯೆನ್ನದೆ ಪುರುಷರು ಒಬ್ಬೊಂಟಿಗರಾಗಿ ಬೇಕಾದಲ್ಲಿ ಹೋಗುವಂತೆ, ಸ್ತ್ರೀಯರು ಹೋದರೆ ಅವರ ಪಾತಿವ್ರತ್ಯ ಧರ್ಮವು ಸುರಕ್ಷಿತವಾಗಿ ಉಳಿಯುವ ಸಂಭವವಿಲ್ಲ; ಆದ್ದರಿಂದಲೇ, ಸ್ತ್ರೀಯರು ಬಾಲ್ಯದಲ್ಲಿ ತಂದೆಯಿಂದಲೂ, ಪ್ರಾಯದಲ್ಲಿ ಗಂಡನಿಂದಲೂ, ವಾರ್ಧಕ್ಯದಲ್ಲಿ ಮಕ್ಕಳಿಂದಲೂ ಸಂರಕ್ಷಿಸಲ್ಪಡಬೇಕೆಂದು ಸ್ವತಃ ಸ್ತ್ರೀಯರ, ಹಾಗು ರಾಷ್ಟ್ರದ ಕಲ್ಯಾಣಕ್ಕಾಗಿ ಶ್ರುತಿ-ಸ್ಮೃತಿಗಳ ಅಪ್ಪಣೆಗನುಸರಿಸಿ ಜ್ಞಾನಿಗಳು ಹೇಳಿರುವರು. ಇಹ-ಪರ-

ಸುಖ-ಸಾಧನವಾದ ಸ್ತ್ರೀಯರ ಧರ್ಮವನ್ನು ಪಾಲಿಸುವದಕ್ಕಾಗಿ, ಹೀಗೆ ಸುರಕ್ಷಿತತೆಯ ಪಾರತಂತ್ರ್ಯಕ್ಕೆ ಸ್ತ್ರೀಯರು ಒಳಗಾಗಿದ್ದರೂ, ಅವರ ಐಹಿಕ ಸುಖಕ್ಕೂ ಪಾರಮಾರ್ಥಿಕ ಉನ್ನತಿಗೂ ಯಾವ ತರದ ಪ್ರತಿಬಂಧವೂ ಇಲ್ಲದೆ, ತಿರುಗಿ ಅವರಿಗೆ ಪುರುಷರ ಸಂರಕ್ಷಣದ ಸಹಾಯದ ಲಾಭವಾಗುತ್ತಿರು ವದರಿಂದ, ನಮ್ಮ ಭರತಭೂಮಿಯಲ್ಲಿ ಸೀತಾ-ದ್ರೌಪದಿ -ಸಾವಿತ್ರಿ, ದಮಯಂತಿ ಮುಂತಾದ ಅನಂತ ಸಾಧ್ವಿಯರು ಕುಲಭೂಷಣರಾಗಿ ಐಹಿಕ-ಪಾರಮಾರ್ಥಿಕ ಸುಖಗಳನ್ನು ಭೋಗಿಸುವ ಪಾತ್ರತೆಯನ್ನು ಪಡೆದು, ಕೆಲವರು ತಮ್ಮ ಪತಿಗಳನ್ನು ಕೂಡ ಉದ್ಧರಿಸಿ ಈಗಲೂ ಕೀರ್ತಿಶೇಷರಾಗಿ ಇರುವರು! ಇದರ ಮೇಲಿಂದ ನೋಡಿದರೆ, ಆರ್ಯಸ್ತ್ರೀಯರಿಗೆ ಈಗಿನ ರಕ್ತ ಶೋಷಕ ಪಾರತಂತ್ರ್ಯದ ಗಾಳಿ ಕೂಡ ಸೋಂಕಿರುವದಿಲ್ಲ; ಸೊಂಕುವ ಸಂಭವವೂ ಇಲ್ಲ. ''ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ'' ಎಂಬ ವಾಕ್ಯದ ಅರ್ಥವನ್ನು, ಸ್ತ್ರೀಯು ಸುರಕ್ಷಿತೆಯಾಗದೆ ಸಿಕ್ಕಲ್ಲಿ ಸ್ವಚ್ಛಂದವಾಗಿ ಹೋಗಲು ತಕ್ಕವಳಲ್ಲವೆಂ''ದು ಮಾಡದೆ,ಅವರ ಆ ಸುರಕ್ಷಿತತೆಯನ್ನು ಈಗಿನ ಪ್ರಗತಿಘಾತಕವಾದ ದುಷ್ಟರ ರಕ್ತಶೋಷಕ ಪಾರತಂತ್ರ್ಯಕ್ಕೆ ಹೋಲಿಸಿ, ಘಾತಕವಾದ ಸ್ತ್ರೀಯರ ಉಚ್ಛೃಂಖಲವೃತ್ತಿಗೆ ಆಸ್ಪದ ಕೊಡುತ್ತಿರುವದು ಭರತಭೂಮಿಯ ದುರ್ದೈವದ,ಅಥವಾ ಸತ್ವನಾಶದ ಲಕ್ಷಣವಾಗಿರುವದು. ಸ್ತ್ರೀಯರೆಂದರೆ ಪೂಜ್ಯರಾದ ತಾಯಂದಿರೂ, ಗುರುಪತ್ನಿ ಯರೂ, ಸನ್ಮಾನನೀಯ ಭಗಿನಿಯರೂ, ಅಕ್ಕರೆಯ ಮಕ್ಕಳೂ, ಪ್ರೀತ್ಯಾಸ್ಪದರಾದ ಹೆಂಡಿರೂ ಆಗಿರುವರು. ಅಂಥವರನ್ನು ತಾಪದಾಯಕವಾದ ಪ್ರಗತಿನಾಶಕ, ರಕ್ತಶೋಷಕ ಪಾರತಂತ್ರ್ಯಕ್ಕೆ ಗುರಿಮಾಡಿ,ಪುರುಷರು ಯಾವ ಇಹ-ಪರಸೌಖ್ಯವನ್ನು ಸುರಿದುಕೊಳ್ಳಬಹುದು? ಇಷ್ಟು ವಿವಕೇವೂ ಶ್ರುತಿ-ಸ್ಮೃತಿಗಳಿಗೂ, ನಮ್ಮ ಪ್ರಾಚೀನ ಋಷಿಗಳಿಗೂ ಇರಲಿಕ್ಕಿಲ್ಲವೆ? ಹೀಗೆ ಸ್ತ್ರೀಯರು ಪುರುಷರಿಂದ ಸುರಕ್ಷಿತವಾಗಿರಬೇಕೆಂದು ಯತ್ನಿಸುವದೇ ಘಾತಕ ಪಾರತಂತ್ರ್ಯದ ಲಕ್ಷಣವಾಗಿದ್ದರೆ, ತಂದೆ-ತಾಯಿಗಳಿಂದ ಕೂಸುಗಳೂ, ಕುಟುಂಬದ ಯಜಮಾನನಿಂದ ಕುಟಂಬವೂ, ಅರಸನಿಂದ ಪ್ರಜೆಗಳೂ, ಕ್ಷತ್ರಿಯರಿಂದ ಬ್ರಾಹ್ಮಣರೂ, ಬಹಳವೇಕೆ, ಲೋಕಸತ್ತೆಯಿಂದ ಲೋಕವೂ ಸುರಕ್ಷಿತವಾಗಿರಬೇಕೆಂದು ಯತ್ನಿಸುವದೂ ಕೂಡ ಘಾತಕ ಪಾರತಂತ್ರ್ಯವಾಗುವದಲ್ಲ! ಹೀಗಿದ್ದರೆ ಸ್ವೇಚ್ಛಾಚಾರವೊಂದು ಮಾತ್ರ ನಿಜವಾದ ಸ್ವಾತಂತ್ರ್ಯ ವೆಂದು ಹೇಳಿದ ಹಾಗಾಗುತ್ತದೆ! ಕಾಲಮಹಿಮೆಯ ಮುಂದೆ ಯಾರ ಆಟವೂ ನಡೆಯದೆಂಬ ಮಾತೇ ನಿಜವು.

ಗುರುಶಾಂತಪ್ಪಾ, ಹೀಗೆ ನಮ್ಮ ವೈದಿಕಧರ್ಮದ ಸ್ತ್ರೀಯರಿಗೆ, ಪುರುಷರಿಂದ ಶೀಲ ಸಂರಕ್ಷಕ ಸಹಾಯವು ದೊರೆಯುವದಲ್ಲದೆ, ಸ್ತ್ರೀಯರು ಗೃಹಿಣಿಯರು ಎನಿಸುವರು; ಗೃಹಿಣಿಯಿಂದಲೇ ಗೃಹದ ಉದಯವೂ, ಸೌಂದರ್ಯವೂ, ಉತ್ಕರ್ಷವೂ ಇರುವವು. ಮನೆಯ ಹೊರಗಿನ ತರಬರುವ ಕೆಲಸಗಳನ್ನು ಗಂಡಸರು ಮಾಡುವಂತೆ, ಮನೆಗೆಲಸಗಳನ್ನೂ, ಗೃಹವ್ಯವಸ್ಥೆಯನ್ನೂ ಸ್ತ್ರೀಯರು ಸ್ವಾತಂತ್ರ್ಯವಹಿಸಿಯೇ ಮಾಡಬೇಕಾಗುವದು. ಹೀಗೆ ವೈದಿಕ ಆರ್ಯ ಸ್ತ್ರೀ ಪುರುಷರ ಕಾರ್ಯಕ್ಷೇತ್ರಗಳು ಬೇರೆಬೇರೆಯಿರುವವಲ್ಲದೆ, ಅವರ ಕಾರ್ಯ

ಸ್ವಾತಂತ್ರ್ಯದ ಮಾನದಲ್ಲಿ ಬಹುತರ ಹೆಚ್ಚುಕಡಿಮೆ ಇರುವದಿಲ್ಲ ಅಂದರೆ, ಮನೆಯ ಹೊರಗಿನ ವ್ಯವಹಾರದಲ್ಲಿ ಪುರುಷರು ಸ್ವತಂತ್ರರು, ಮನೆಯೊಳಗಿನ ವ್ಯವಹಾರದಲ್ಲಿ ವಿಶೇಷ ಪ್ರಸಂಗದ ಹೊರತು ಸ್ತ್ರೀಯರು ಸ್ವತಂತ್ರರು. ಅಲ್ಲದೆ, ಸ್ತ್ರೀಯರ ವಿಷಯದ ಅತ್ಯಂತ ಉದಾರಭಾವವುಳ್ಳ ವೈದಿಕಧರ್ಮವು, ಪತಿಯ ಪುಣ್ಯಾರ್ಧವನ್ನು ಸತಿಗೆ ಹಕ್ಕಿನಿಂದ ಕೊಡಿಸುವದಲ್ಲದೆ, ಸತಿಯ ಅರ್ಧ ಪಾಪವನ್ನು ಪತಿಯು ಭೋಗಿಸಬೇಕೆಂದು ನಿರ್ಬಂಧಿಸುವದು. ಅಂತೇ ವೈದಿಕರು ಸ್ತ್ರೀಯರ ಪಾವಿತ್ರ್ಯಕ್ಕಾಗಿ ಹೆಚ್ಚು ಎಚ್ಚರಪಡಬೇಕಾಗುವದು. ಸ್ತ್ರೀಯರ ವಿಷಯದ ಇಂತಹ ಉದಾರಭಾವವು ಬೇರೆ ಯಾವ ಧರ್ಮದಲ್ಲಿರಬಹುದು? ಈ ಮರ್ಮವರಿತು ವೈದಿಕಧರ್ಮದ ಸ್ತ್ರೀಪುರುಷರು, ಯಾವ ದುರಾಶೆಗೂ ಒಳಗಾಗದೆ, ಯಾವ ದುರ್ಬೋಧಕ್ಕೂ ಕಿವಿಗೊಡದೆ ತಮ್ಮ ಸತಿ-ಪತಿಗಳ ಧರ್ಮವನ್ನು ದಕ್ಷತೆಯಿಂದ ಕಾದುಕೊಳ್ಳಬೇಕು. ಸುಖಲೋಲುಪರೂ, ಸಾಹಸಿಗಳೂ ಆಗುವದು ಆರ್ಯಸ್ತ್ರೀಯರ ಶೀಲವೇ ಅಲ್ಲ; ಹಾಗಾಗುವ ಮನೋವೃತ್ತಿಯು ವೈದಿಕ ಆರ್ಯರ ಆಸ್ತಿಕ ಮನೋವೃತ್ತಿಯಾಗಿರದೆ, ನಾಸ್ತಿಕ ಮನೋವೃತ್ತಿಯಾಗಿರುವದೆಂದು ನಿಶ್ಚಯವಾಗಿ ತಿಳಿದುಕೊಳ್ಳತಕ್ಕದ್ದು.

## ಸ್ತ್ರೀಯರ ಬಾಲ - ಪ್ರೌಢವಿವಾಹಗಳು

ಈ ಮೊದಲಿ "ಸ್ತ್ರೀಸ್ವಾತಂತ್ರ್ಯ" "ಸ್ತ್ರೀಯರಲ್ಲಿಯ ನಾಲ್ಕು ವರ್ಗಗಳು" ಎಂಬ ಎರಡು ವಿಷಯಗಳನ್ನು ಕುರಿತು ಹೇಳಿದೆವು. ಇನ್ನು ಪುರುಷರೊಡನೆ ಸ್ತ್ರೀಯರ ಸಂಬಂಧವನ್ನುಂಟು ಮಾಡುವ ವಿವಾಹ ಸಂಸ್ಕಾರದ ಕೆಲವು ಮಾತುಗಳನ್ನು ಹೇಳುವೆವು; ಅಂದರೆ ಸ್ತ್ರೀಯರ ವಿಷಯದ ಹೇಳತಕ್ಕ ಮುಖ್ಯ ಮಾತುಗಳನ್ನು ಹೇಳಿದ ಹಾಗಾಗುವದು, ವಿವಾಹದಲ್ಲಿ ಬಾಲವಿವಾಹ- ಪ್ರೌಢವಿವಾಹ ಎಂದು ಎರಡು ಪ್ರಕಾರಗಳಿರುವದು ಎಲ್ಲರಿಗೂ ಗೊತ್ತಿದ್ದ ಮಾತು. ಮನುಷ್ಯರು ಪ್ರಾಮುಖ್ಯವಾಗಿ ಈಗಿನ ಕಾಲದಲ್ಲಿ ಕೇವಲ ವಿಷಯಸುಖಕ್ಕೇ ಮೆಚ್ಚಿದ್ದು, ಆ ವಿಷಯ ಸುಖಭೋಗಿಸುವ ಉದ್ದೇಶದಿಂದಲೇ ಲಗ್ನಮಾಡಿಕೊಳ್ಳುತ್ತಿರುವ ದರಿಂದ, ಅವರಲ್ಲಿ ಬರಬರುತ್ತ ಅಶಾಸ್ತ್ರೀಯ ಪ್ರೌಢವಿವಾಹವೇ ಜನರ ಮೆಚ್ಚಿಕೆಗೆ ಕಾರಣವಾಗುತ್ತ ಹೋಗುವದೆಂದು ಹೇಳಬೇಕಾಗುವದು; ಆದರೆ ವಿಷಯಸುಖಕ್ಕೆ ಮಹತ್ವಕೊಡದೆ ಧರ್ಮಾಭಿವೃದ್ಧಿಗಾಗಿಯೂ, ಈಶ್ವರ ಪ್ರಾಪ್ತಿಗಾಗಿಯೂ ಯತ್ನಿಸತಕ್ಕವರು ಅಲ್ಪಪ್ರಮಾಣ ದಿಂದಲೇ ಆಗಲೊಲ್ಲರೇಕೆ, ಯಾವ ಕಾಲದಲ್ಲಾದರೂ ಬೀಜಕ್ಕಾದರೂ ಇರುತ್ತಿರುವ ಸಂಭವವಿರುವದರಿಂದ, ಅಂಥವರು ವಿಷಯಾಸಕ್ತಿಯ ಪ್ರಾಬಲ್ಯಕಾಲದಲ್ಲಿ ಬಾಲವಿವಾಹವನ್ನು ಅವಲಂಬಿಸಬೇಕಾಗುವದು; ಅಂತಹ ಧರ್ಮಿಷ್ಠರಿಗೆ ಮುಖ್ಯವಾಗಿ ಮನಸ್ಸಿನ ಪಾವಿತ್ರ್ಯವನ್ನು ಕಾಯ್ದುಕೊಳ್ಳುವದು ಅವಶ್ಯವಾಗಿರುತ್ತದೆ; ಅದರಂತೆ, ಕೇವಲ ವಿಷಯಸುಖಕ್ಕೆ ಮೆಚ್ಚಿದವರಿಗೆ ಪ್ರಾಮುಖ್ಯವಾಗಿ ಮನಸ್ಸಿನ ತೇಜಸ್ವಿತೆಯನ್ನು ಸಂಪಾದಿಸುವದು

ಅವಶ್ಯವಾಗಿರುತ್ತದೆ. ಹೀಗೆ ವಿಷಯಸುಖಕ್ಕಾಗಿ, ಹಾಗು ಧರ್ಮಸಂಗ್ರಹಕ್ಕಾಗಿ ಯತ್ನಿಸುವವರಿಬ್ಬರೂ ಮನುಷ್ಯಸಮಾಜದಲ್ಲಿ ಹೆಚ್ಚುಕಡಿಮೆ ಪ್ರಮಾಣದಿಂದ ಯಾವಾಗಲೂ ಇರತಕ್ಕವರಾದದ್ದರಿಂದ, ಅವರಿಬ್ಬರ ಸಲುವಾಗಿ ಬಾಲ- ಪ್ರೌಢವಿವಾಹಗಳೆರಡೂ ಸಮಾಜದಲ್ಲಿ ರೂಢವಾಗಿರಬೇಕಾಗುವದು. ಅದು ಹೇಗೆಂಬದನ್ನು ತತ್ವತಃ ತಾಯಿಬೇರಿನಿಂದ ಹಿಡಿದು ಸಾಂಗೋಪಾಂಗವಾಗಿ ಇನ್ನು ಮುಂದೆ ಸಂಕ್ಷೇಪದಿಂದ ವಿಚಾರಮಾಡುವೆವು.

೧. **ಪ್ರಾಣಿಮಾತ್ರಗಳ ಸಹಜ ಸಂಭೋಗ ಸ್ಥಿತಿಯು**—ಸ್ತ್ರೀಯರ ಬಾಲ-ಪ್ರೌಢ ವಿವಾಹಗಳಲ್ಲಿ, ಪ್ರೌಢವಿವಾಹವು ಸ್ವಾಭಾವಿಕವೂ, ಬಾಲವಿವಾಹವು ಕೃತ್ರಿಮವೂ ಎಂಬದು ಯಾರಿಗಾದರೂ ಸಹಜವಾಗಿ ಗೊತ್ತಾಗುವಹಾಗಿರುತ್ತದೆ. ಮನುಷ್ಯೇತರ ಪ್ರಾಣಿಗಳಲ್ಲಿ ಅನಾದಿಕಾಲದಿಂದ ಈವರೆಗೆ ಅವು ಪ್ರಾಯಕ್ಕೆ ಬರಲು, ಸಹಜಪ್ರವೃತ್ತಿಯಿಂದ ಅವುಗಳೊಳಗಿನ ಗಂಡು-ಹೆಣ್ಣುಗಳ ಸಂಗಮವಾಗಿ ಹೋಗುತ್ತದೆ. ಮನುಷ್ಯಪ್ರಾಣಿ ಯಾದರೂ ಈ ನಿಯಮಕ್ಕೆ ಹೊರಗಾದದ್ದಲ್ಲ. ಮನುಷ್ಯೇತರಗಳಾದ ಆ ತಿರ್ಯಗ್ ಯೋನಿಯ ಪ್ರಾಣಿ ಗಳಲ್ಲಿ ಪಾರಿವಾಳ-ಗುಬ್ಬಿ ಮೊದಲಾದ ಪಕ್ಷಿಜಾತಿಯ ಪ್ರಾಣಿಗಳಂತೆ, ದಾಂಪತ್ಯವು ಸ್ಥಿರವಾಗಿ ಇರಬಹುದು; ಅಥವಾ ಪಶುಜಾತಿಯಲ್ಲಿಯ ದನ-ಕುದುರೆಗಳ ಜಾತಿಯಲ್ಲಿಯಂತೆ, ಆ ದಾಂಪತ್ಯವು ಸಂಯೋಗದ ಕಾಲದವಟ್ಟಿಗಿರಬಹುದು; ಹೇಗಿದ್ದರೂ ಆ ಮನುಷ್ಯೇತರ ಪ್ರಾಣಿಗಳಲ್ಲಿ ಹೆಣ್ಣಿಗೆ ಋತುಕಾಲದ ಸಂಭೋಗೇಚ್ಛೆಯಾದ ಹೊರತು, ಬಹುತರ ಗಂಡು-ಹೆಣ್ಣುಗಳ ಸಂಭೋಗದ ಕ್ರಿಯೆಯೇ ನಡೆಯುವದಿಲ್ಲವೆಂದು ನಿರ್ಭಿಡದವಾಗಿ ಹೇಳಬಹುದು. ಒಟ್ಟಿಗೆ, ಹಾನಿಕಾರಕಗಳಾದ ಅಕಾಲಸಂಭೋಗವೂ, ಗರ್ಭಧಾರಣಾ ನಂತರದ ಸಂಭೋಗವೂ ಅವುಗಳಲ್ಲಿ ಬಹುತರ ಕಂಡುಬರಲಾರವು. ಇಂತಹ ನಿಯತವಾದ ಉತ್ತಮ ಸಂಭೋಗಸ್ಥಿತಿಯು, ಅಥವಾ ವಿಹಾರಸ್ಥಿತಿಯು ಅನಾದಿಕಾಲದಿಂದ ಈವರೆಗೆ ಮನುಷ್ಯೇತರ ಪ್ರಾಣಿಗಳಲ್ಲಿ ಮಾತ್ರ ಬಳಕೆಯಲ್ಲಿ ಇರುತ್ತಿರುವದಕ್ಕೆ, ಆ ಪ್ರಾಣಿಗಳ ಆಹಾರ- ವ್ಯವಹಾರಗಳ ಬದಲಾವಣೆಯಾಗದೆ, ಅವುಗಳ ಜೀವನಯಾತ್ರೆಯು ಈವರೆಗೆ ಒಂದೇಸವನೆ ಸಾಗುತ್ತ ಬಂದಿರುವದೇ ಕಾರಣವು. ಆಹಾರ-ವ್ಯವಹಾರಗಳ ಬದಲಾವಣೆಯಾಗುತ್ತ ಹೋದಂತೆ, ವಿಷಯ ತೃಷ್ಣೆಯಲ್ಲಿ ಹೆಚ್ಚುಕಡಿಮೆಯಾಗುವದರಿಂದ, ವಿವಾಹಪದ್ಧತಿಯಲ್ಲಿ ಅಥವಾ ಸಂಭೋಗ ಕ್ರಮದಲ್ಲಿ ಬದಲಾವಣೆಯಾಗುವ ಸಂಭವವಿರುವದು. ಮನುಷ್ಯೇತರ ಪ್ರಾಣಿಗಳು ಬುದ್ಧಿಹೀನಗಳಾಗಿರುವದರಿಂದ, ಅವು ತಮಗೆ ದೇವರು ನಿಯಮಿಸಿಕೊಟ್ಟಿದ್ದ ತಮ್ಮ ಹುಟ್ಟುಗುಣವನ್ನು ಬಿಟ್ಟು, ಬೇರೆವಿಧವಾಗಿ ಆಹಾರ-ವ್ಯವಹಾರಗಳಲ್ಲಿ ಎಂದೂ ವ್ಯವಹರಿಸುವ ಸಂಭವವಿರುವದಿಲ್ಲ; ಅಂದಬಳಿಕ ಅವುಗಳ ವಿಹಾರ ಪದ್ಧತಿಯಲ್ಲಿ ಅಥವಾ ಸಂಭೋಗ ಪದ್ಧತಿಯಲ್ಲಿ ಎಂದೂ ಬದಲಾವಣೆಯಾಗುವ ಸಂಭವವಿಲ್ಲವು.

೨. **ಸತ್ಯಯುಗದ ಮಾನವೀಪಾವಿತ್ರ್ಯ**— ಅನಾದಿಯ ಸತ್ಯಯುಗದಲ್ಲಿ, ಅಥವಾ ಕೃತಯುಗದಲ್ಲಿ ಮನುಷ್ಯನ ಆಹಾರ-ವ್ಯವಹಾರಗಳಾದರೂ ಮನುಷ್ಯೇತರ ಪ್ರಾಣಿಗಳಂತೆ ಸಹಜಸ್ಥಿತಿಯವು, ಅಂದರೆ ಅಡಿಗೆ, ಮಸಾಲಿ ಮೊದಲಾದವುಗಳ ಕೃತ್ರಿಮ ಸಂಸ್ಕಾರ ಹೊಂದದ

ಸೊಪ್ಪು, ಗಡ್ಡೆ, ಗೆಣಸು, ಹಣ್ಣು, ಮಾಂಸ ಮೊದಲಾದವು ಇದ್ದದ್ದರಿಂದ, ಆಗಿನ ಕಾಲದ ಮನುಷ್ಯರಲ್ಲಿ ಮೇಲೆ ಹೇಳಿರುವ ಮನುಷ್ಯೇತರ ಪ್ರಾಣಿಗಳಲ್ಲಿಯಂತೆಯೇ ನಿಯತಕಾಲದ ಸಂಭೋಗ ಪದ್ಧತಿಯು ಇದ್ದಿತು; ಆದ್ದರಿಂದ ಮನುಷ್ಯರಲ್ಲಿ ಈಗಿನಂತೆ ಆಗ ಸ್ಥಿರವಾದ ವಿವಾಹಪದ್ಧತಿಯು ಇದ್ದಿಲ್ಲ; ಮತ್ತು ಗಂಡು ಹೆಣ್ಣುಗಳ ಸುರೂಪ ಕುರೂಪಗಳ ವಿಚಾರವಿದ್ದಿಲ್ಲ, ಮತ್ತು ಈಗಿನಂತೆ ದಾಂಪತ್ಯದ ಕೃತ್ರಿಮ ನಿರ್ಬಂಧಗಳೂ ಆಗ ಇದ್ದಿಲ್ಲ; ಆದ್ದರಿಂದ ಮನುಷ್ಯೇತರ ಪ್ರಾಣಿಗಳಲ್ಲಿಯಂತೆ ಆಗ ಮನುಷ್ಯರಲ್ಲಾದರೂ ಸ್ವೇಚ್ಛಾವಿಹಾರವೇ ಬಳಕೆಯಲ್ಲಿ ಇದ್ದಿತು. ಆಗ ಅದೇ ಧರ್ಮವಾಗಿತ್ತೆಂದು, ಅಥವಾ ಜ್ಞಾನಿಗಳ ಹಿತಕರ ಶಾಸನವಾಗಿತ್ತೆಂದು ಮಹಾಭಾರತದಲ್ಲಿ ಹೇಳಿದೆ. ಆಗಿನ ಆ ಅನಾದಿಕಾಲದಲ್ಲಿ ಮನುಷ್ಯರೊಳಗೆ ಜಾತಿಭೇದ ವಿದ್ದಿಲ್ಲ, ಆಗ 'ಹಂಸ' ಎಂಬ ಹೆಸರಿನ ಒಂದೇ ವರ್ಣವಿತ್ತೆಂದು ''ಬೃಹದಾರಣ್ಯಕ'' ಎಂಬ ಉಪನಿಷತ್ತಿನಲ್ಲಿ ಹೇಳಿದೆಯಂತೆ. ಆಗ ಗಂಡಸರಿಗೂ, ಹೆಂಗಸರಿಗೂ ಕೂಡಿಯೇ ವೇದಾಧಿ ಕಾರವಿದ್ದು ಇಬ್ಬರೂ ಉಪನಯನನಾದನಂತರ ಕೂಡಿಯೇ ಗುರುಕುಲವಾಸ ಮಾಡುತ್ತಿದ್ದ ದ್ದರಿಂದ, ಆಗ ಅವರಿಗೆ ಸಹ ಶಿಕ್ಷಣವು ದೊರೆಯುತ್ತಲಿತ್ತು, ಈಗಿನಂತೆ ಆಗ ವೇದಗಳು ನಾಲ್ಕು ಇರದೆ ಒಂದೇ ವೇದವು ಇತ್ತಂತೆ. ಆಗಿನ ಸ್ತ್ರೀಪುರುಷರ ಮನಸ್ಸುಗಳು ಸ್ವಾಭಾವಿಕವಾದ ಆಹಾರ-ವ್ಯವಹಾರಗಳ ಮೂಲಕ ವಿಕಾರರಹಿತಗಳಾಗಿ ಇದ್ದದ್ದರಿಂದ, ಆಗಿನ ಅವರ ಸಹ ಶಿಕ್ಷಣದ ದುಷ್ಪರಿಣಾಮವು ಆಗುತ್ತಿದ್ದಿಲ್ಲ. ಅವರ ಪ್ರಾಯದ ಸಹಜ ಪ್ರವೃತ್ತಿಯಿಂದ ಅವರ ಸಂಭೋಗ ಕ್ರಿಯೆಯು ವ್ಯತ್ಯಾಸಭಾವವಿಲ್ಲದೆ ನಡೆಯುತ್ತಿತ್ತು, ಆಗ ಸ್ತ್ರೀ ಪುರುಷ-ಸಂಯೋಗ ಸುಖವು ಗ್ರಾಮ್ಯ ಸುಖವೆಂದು ತಿರಸ್ಕೃತವಾಗಿತ್ತು, ದೇವರು ಮನುಷ್ಯೇತರ ಪ್ರಾಣಿಗಳಿಗೆ ಕೊಡದಿರುವ ಬುದ್ಧಿಯೆಂಬ ಹೆಸರಿನ ತನ್ನ ಮಾಯಾಶಕ್ತಿಯ ಅಮೂಲ್ಯ ಸಾಧನವನ್ನು, ತನ್ನ ಜ್ಞಾನ ಮಾಡಿಕೊಳ್ಳಬೇಕೆಂಬ ಹಿತೋದ್ದೇಶದಿಂದ ಮನುಷ್ಯರಿಗೆ ಕೊಟ್ಟಿರುವಂತೆ, ಆಗಿನ ಶುದ್ಧ ಮನೋವೃತ್ತಿಯ ಮನುಷ್ಯರು ಆ ಸಾಧನವನ್ನು ಅದೃಶ್ಯನಾಗಿರುವ ಪರಮಾತ್ಮನ ಜ್ಞಾನಮಾಡಿ ಕೊಳ್ಳಲಿಕ್ಕೆ ಉಪಯೋಗಿಸಿಕೊಂಡು, ಆ ಪರಮಾತ್ಮನಿಂದ ಶಾಶ್ವತವಾದ ಸಹಜಾನಂದವನ್ನು ಪಡೆಯುತ್ತಿದ್ದರು. ಇದೇ ಸುಸ್ಥಿತಿಯು ಕಡೆತನಕ ಉಳಿದಿದ್ದರೆ, ಮನುಷ್ಯರಲ್ಲಿ ಕೃತ್ರಿಮವಾದ ಬೇರೆಬೇರೆ ವಿವಾಹ ಪದ್ಧತಿಗಳು ಬಳಕೆಯಲ್ಲಿ ಬರುವ ಕಾರಣವೇ ಇದ್ದಿಲ್ಲ, ಈಗಿನ ಮನುಷ್ಯೇತರ ಪ್ರಾಣಿಗಳಲ್ಲಿಯಂತೆ, ಈಗಿನ ಮನುಷ್ಯರಲ್ಲಾದರೂ ಸಹಜಪ್ರವೃತ್ತಿಯ ಸ್ವೇಚ್ಛಾವಿಹಾರ ಪದ್ಧತಿಯೇ ಬಳಕೆಯಲ್ಲಿ ಇರುತ್ತಿತ್ತು; ಮತ್ತು ಮನುಷ್ಯನಿಗೆ ಈಗಿನ ವೈಷಯಿಕ ಸುಖ-ದುಃಖಗಳ ಇರತಗಳ ಬಾಧೆಯೂ ತಪ್ಪುತ್ತಿತ್ತು.

**೩. ವಿವಾಹಪದ್ಧತಿಯ ಉತ್ಪತ್ತಿ**— ಆದರೆ ಸತ್ಯಯುಗದ ಈ ಉತ್ತಮ ಸ್ಥಿತಿಯಿಂದ ಸೃಷ್ಟಿಯ ವಿಸ್ತಾರವು ಬಹು ಸಾವಕಾಶವಾಗಿ ಆಗಹತ್ತಿತು. ಸೃಷ್ಟಿಯ ವಿಸ್ತಾರದ ಈ ಮಂದ ಗತಿಯು ಕ್ರೀಡಾಪೇಕ್ಷೆಯ ಸೃಷ್ಟಿಕರ್ತಾರನಿಗೆ ತೃಪ್ತಿಕರವಾಗುವಹಾಗಿದ್ದಿಲ್ಲ. ಆತನು ಸೃಷ್ಟಿಯ ವಿಸ್ತಾರವು ಭರದಿಂದ ಆಗಬೇಕೆಂದು ಮೊದಲಿಗೇ ಪ್ರಾಣಿಗಳ ಇಂದ್ರಿಯಗಳನ್ನು ಬಹಿರ್ಮುಖವಾಗುವಂತೆ, ಅಂದರೆ ಅವುಗಳ ಪ್ರವೇಶವು ಅಂತರಾತ್ಮನಲ್ಲಿ ಆಗದೆ, ಹೊರಗಿನ

ಸೃಷ್ಟಿಯೊಳಗಿನ ವಿವಿಧ ವಿಷಯಗಳಲ್ಲಿ ಆಗುವಂತೆ ಮಾಡಿದ್ದನು. ಈ ಮಾತನ್ನು — ''ಪರಾಂಚಿಖಾನಿವ್ಯ ತೃಣತ್ ಸ್ವಯಂಭೂಸ್ತಸ್ಮಾತ್ ಪರಾಂಪಶ್ಯತಿ ನಾಂತರಾತ್ಮನ್'' ಎಂಬ ಶ್ರುತಿಯು ಪ್ರತಿಪಾದಿಸುತ್ತಿರುವದು; ಆದ್ದರಿಂದ ಮನುಷ್ಯರ ಇಂದ್ರಿಯಗಳು ಮುಂದೆ ಕಾಲಕ್ರಮಣವಾಗುತ್ತ ಹೋದಂತೆ, ಪರಮಾತ್ಮನ ಕಡೆಗೆ ಹೋಗದೆ, ಅವು ಅಪ್ರಯತ್ನವಾಗಿ ವಿಷಯಗಳಲ್ಲಿ ಪ್ರವೇಶಿಸತೊಡಗಿದವು. ಆ ಇಂದ್ರಿಯಗಳು–ಕಣ್ಣು ಕಿವಿ, ಮೂಗು, ನಾಲಿಗೆ, ಚರ್ಮ ಎಂಬ ಜ್ಞಾನೇಂದ್ರಿಯಗಳೆಂಬವು ಐದು, ಮತ್ತು ಕೈ ಕಾಲು, ವಾಣಿ, ಗುದದ್ವಾರ, ಮೂತ್ರದ್ವಾರ ಎಂಬ ಕರ್ಮೇಂದ್ರಿಗಳೆಂಬವು ಐದು ಹೀಗೆ ಹೊರಗಿನ ಹತ್ತು ಇಂದ್ರಿಯ ಗಳಲ್ಲದೆ, ಮನಸ್ಸೆಂಬ ಅಂತರಿಂದ್ರಿಯವು ಒಂದು, ಹೀಗೆ ಒಟ್ಟು ಹನ್ನೊಂದು ಇಂದ್ರಿಯಗಳು ಇರುವವು. ಇವುಗಳಲ್ಲಿ—''ಇಂದ್ರಿಯಾಣಾಂ ಮನಶ್ಚಾಸ್ಮಿ'' ಎಂಬ ಭಗವದುಕ್ತಿಯಂತೆ, ಮನಸ್ಸು ಯಾವತ್ತು ಇಂದ್ರಿಯಗಳಲ್ಲಿ ಶ್ರೇಷ್ಠವಾಗಿರುವದು. ಉಳಿದ ಹತ್ತು ಇಂದ್ರಿಯಗಳು ಮನಸ್ಸಿಗೆ ಅಧೀನವಾಗಿ, ಅದು ಪ್ರೇರಿಸಿದಂತೆ ತಮ್ಮ ತಮ್ಮ ಕಾರ್ಯಗಳನ್ನು ಮಾಡುವವು. ಹೀಗೆ ಸೃಷ್ಟಿಕರ್ತಾರನ ಸಂಕೇತದಂತೆ ಮನುಷ್ಯರ, ಅದರಂತೆ ಸ್ವಭಾವತಃ ಯಾವತ್ತು ಪ್ರಾಣಿಗಳ ಇಂದ್ರಿಯಗಳು ಸಹಜವಾಗಿ ವಿಷಯಗಳಲ್ಲಿ ಪ್ರವೇಶಿಸತೊಡಗಲು, ಸತ್ಯಯುಗದಲ್ಲಿ ಪರಮಾತ್ಮನ ಜ್ಞಾನದಿಂದ ಮನುಷ್ಯನಿಗೆ ಪ್ರಾಪ್ತವಾಗುತ್ತಿದ್ದ ಸಹಜಾನಂದದ ಸ್ಥಿತಿಯು ತಪ್ಪಿ, ಆತನ ಆತ್ಮಬಲವು ಕಡಿಮೆಯಾಗುತ್ತ ಹಾಗು ಕಲುಷಿತವಾಗುತ್ತ ನಡೆದಿದ್ದ ಆತನ ಮನಸ್ಸು ಹೆಚ್ಚು ಹೆಚ್ಚು ವಿಷಯಾಸಕ್ತವಾಗುತ್ತ ಬರಲು, ಆ ಮನಸ್ಸು ಆತ್ಮಬಲದ ಸಂಪಾದನದ ಕಡೆಗೆ ಹರಿಯದೆ, ವೈಷಯಿಕಗಳಾದ ದೇಹಬಲ, ದ್ರವ್ಯಬಲ,ಸೇವಾಬಲ ಎಂಬ ಉತ್ತರೋತ್ತರ ಹೀನಗಳಾಗಿರುವ ಬಲಗಳ ಸಂಪಾದನದ ಕಡೆಗೆ ಹರಿಯಹತ್ತಿತು. ಈ ಸ್ಥಿತಿಯಲ್ಲಿಯ ಮನುಷ್ಯರೊಳಗಿನ ವಿವೇಕಿಗಳಾದವರು ಮಾತ್ರ, ಮನೋನಿಗ್ರಹಿಗಳಾಗಿ, ಸತ್ಸಮಾಗಮ, ಈಶ್ವರೋಪಾಸನ, ಶಾಸ್ತ್ರಾವಲೋಕನ ಮೊದಲಾದ ಸಾಧನಗಳಿಂದ ಪ್ರಯತ್ನಪೂರ್ವಕವಾಗಿ ತಮ್ಮ ಮನಸ್ಸನ್ನು ಪರಮಾತ್ಮನ ಕಡೆಗೆ ಬಲಾತ್ಕಾರದಿಂದ ಎಳೆದೊಯ್ಯಬೇಕಾಯಿತು.

ಈ ಪ್ರಸಂಗದಲ್ಲಿ ಬಾಯಬಲ್ಲಿನಲ್ಲಿಯ ಆದಮ ಹಾಗು ಇಷ್ವ ಎಂಬ ದಂಪತಿಗಳ ಕಥೆಯು ಪ್ರಕೃತದ ವಿಷಯ ವಿವೇಚನದ ಪುಷ್ಟಿಕಾರಕವಾಗಿ ನೆನಪಿಗೆ ಬರುತ್ತದೆ. ಅವರು ಸೈತಾನನ, ಅಥವಾ ಮಾಯೆಯ ಪ್ರೇರಣೆಯಿಂದ ದೇವರ ಅಪ್ಪಣೆ ಮೀರಿ, ದೇವರು ತಿನ್ನಬೇಡಿರೆಂದು ಹೇಳಿದ್ದ ಹಣ್ಣನ್ನು ತಿಂದದ್ದರಿಂದ, ಅವರು ತಮ್ಮ ಸಹಜಾನಂದ ಸ್ಥಿತಿಯಿಂದ ಚ್ಯುತಿಹೊಂದಿ, ವೈಷಯಿಕ ಸುಖದುಃಖಭೋಗಗಳ ಇರುಕಿನಲ್ಲಿ ಸಿಕ್ಕುಬಿದ್ದರು! ಇದರಂತೆ, ಯಾವತ್ತು ಮನುಷ್ಯರು, ಮಾಯೆಯಿಂದ, ಅಂದರೆ ಈಶ್ವರಶಕ್ತಿಯಿಂದ ಆಗಿರುವ ಈ ಸೃಷ್ಟಿಯೊಳಗಿನ ವಿವಿಧ ವಿಷಯಗಳನ್ನು ಭೋಗಿಸುವ ಸವಿಗೆ ಬಿದ್ದು, ತಮ್ಮ ಸಹಜಾನಂದ ಸ್ಥಿತಿಯಿಂದ ಚ್ಯುತಿಹೊಂದಿ, ಆಹಾರ–ವ್ಯವಹಾರಗಳ ಕೃತ್ರಿಮತೆಯಿಂದ ವೈಷಯಿಕ ಸುಖ–ದುಃಖಗಳ ಬಲೆಯಲ್ಲಿ ಬೀಳುತ್ತ ಬಂದಿರುವರು. ಇದರಿಂದ ಅವರಿಗೆ ಅಕಾಲದಲ್ಲಿ ಅನಿಯಮಿತವಾಗಿ ಸಂಭೋಗೇಚ್ಛೆಯಾಗ ಹತ್ತಿತ್ತು; ಆಗ ಅವರ ಯಾವತ್ತು ಇಂದ್ರಿಯಗಳ

ವಿಷಯ ಸೇವನವು ಹೆಚ್ಚುತ್ತ ಹೋಗಿ, ಮನುಷ್ಯ ಜಾತಿಯ ಅಧಃಪತನವಾಗಬಾರದೆಂದು ತಿಳಿದು, ಲೋಕಹಿತೇಚ್ಛುಗಳಾದ ವೈದಿಕ ಜ್ಞಾನಿಗಳು ಮನುಷ್ಯರ ವಿಷಯ ಸೇವನಾತಿರೇಕಕ್ಕೆ ಪ್ರತಿಬಂಧವಾಗಬೇಕೆಂದು ತಿಳಿದು, ಕಾಲಕ್ಕನುಸರಿಸಿ ಬೇರೆ ಬೇರೆ ವಿವಾಹಗಳ ಕೃತ್ರಿಮ ಪದ್ಧತಿಗಳನ್ನು ಒಂದೊಂದಾಗಿ ಬಳಿಕೆಯಲ್ಲಿ ತರುತ್ತ ಬಂದಿರುವರು. ಹೀಗೆ ವಿವಾಹದ ಕೃತ್ರಿಮ ಪದ್ಧತಿಗಳು ಬಳಿಕೆಯಲ್ಲಿ ಬರುವದರ ಸಂಗಡ, ಸತ್ಯಯುಗದ ಹಂಸನಾಮಕವಾದ ಒಂದೇ ಒಂದಾಗಿದ್ದ ವರ್ಣವು, ಮನುಷ್ಯರ ಉತ್ತರೋತ್ತರ ವಿಷಯ ಸೇವನದ ಆಧಿಕ್ಯದ ಕ್ರಮದಿಂದ, ಉತ್ತರೋತ್ತರ ತಪೋಹೀನಗಳಾಗಿರುವ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳಾಗಿಯೂ, ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಸನ್ಯಾಸ ಎಂಬ ನಾಲ್ಕು ಆಶ್ರಮಗಳಾಗಿಯೂ ವಿಭಾಗಿಸಲ್ಪಟ್ಟಿತು; ಅದರಂತೆ ಸತ್ಯಯುಗದಲ್ಲಿ ಒಂದೇ ಒಂದಾಗಿದ್ದ ವೇದವು, ಅಧ್ಯಯನ ಮಾಡುವವರ ಅಶಕ್ತತೆಯ ಮೂಲಕ ಋಕ್, ಯಜುಸ್, ಸಾಮ, ಅಥರ್ವಣ ಎಂಬ ನಾಲ್ಕು ಶಾಖೆಗಳಾಗಿ ವಿಭಾಗಿಸಲ್ಪಟ್ಟಿತು. ಮತ್ತು ತಪೋಹಾನಿಯ ಮೂಲಕ ಸ್ತ್ರೀಯರ ಉಪನಯನ ಸಂಸ್ಕಾರವೂ, ವೇದಾಧಿಕಾರವೂ ಇಲ್ಲದಾದವು; ಈಶ ಸಂಕೇತದಂತೆ ಉತ್ತರೋತ್ತರ ವಿಷಯಾಸಕ್ತಿಯು ಹೆಚ್ಚುತ್ತ ಬಂದಿದ್ದರಿಂದ–ಕೃತ, ತ್ರೇತಾ, ದ್ವಾಪರ, ಕಲಿ ಎಂಬ ಹೆಸರಿನ ಉತ್ತರೋತ್ತರ ಹೀನಗಳಾದ ನಾಲ್ಕು ಯುಗಗಳು ಬಳಿಕೆಯಲ್ಲಿ ಬಂದವು. ಹೀಗೆ ಮನುಷ್ಯರ ವಿಷಯಾಸಕ್ತಿಯು ಹೆಚ್ಚುತ್ತ ಬಂದಂತೆ, ಏಕತ್ವದ ಬದಲು ಬಹುತ್ವವು ಉಂಟಾಗುತ್ತ ಬರಲು, ಮನುಷ್ಯರ ಕಲ್ಯಾಣಕ್ಕಾಗಿ ಜ್ಞಾನಿಗಳು, ವಿಷಯ ಸೇವನಕ್ಕೆ ಪ್ರತಿಬಂಧವಾಗುವಂತೆ ವಿವಾಹರೂಪ ಪಾಶದಿಂದ ಅವರನ್ನು ಹೆಚ್ಚುಹೆಚ್ಚು ಬಿಗಿಯ ಹತ್ತಿದರು; ಆದರೂ ಬರಬರುತ್ತ ವಿಷಯಾಸಕ್ತಿಯು ಅತಿರೇಕವಾಗುವದೂ, ಅದರಿಂದ ಮನುಷ್ಯರ ಅಧಃಪತನವಾಗುವದೂ ಈಶ ಸಂಕೇತವೇ ಆಗಿರುವದರಿಂದ, ಅದು ತಪ್ಪುವ ಹಾಗಿಲ್ಲ. ಅದರಂತೆ, ಮನುಷ್ಯರಿಗೆ ಕಲ್ಯಾಣದ ಹಾದಿಯ ತೋರಿಸುವ ತಮ್ಮ ಕರ್ತವ್ಯದಿಂದ ಜ್ಞಾನಿಗಳೂ ಚ್ಯುತಿಹೊಂದುವ ಹಾಗಿಲ್ಲ.

**೪. ವಿವಾಹ ಪದ್ಧತಿಗಳ ಪರಂಪರೆ—** ಮನುಷ್ಯನು ವಿಷಯಾಸಕ್ತನಾಗುತ್ತ ಬಂದಂತೆ, ಜ್ಞಾನಿಗಳು ಆತನನ್ನು ಬಿಗಿಯುತ್ತ ಬಂದಿದ್ದ ವಿವಾಹಪಾಶಗಳು ಮುಂದೆ ಹೇಳಿರುವವು ಮೂರು ಇರುವವು. ಅವನ್ನು–೧. ಪವಿತ್ರಭಾವದ ವಿವಾಹ ೨. ನಿಯೋಗ ಪದ್ಧತಿಯ ವಿವಾಹ ೩. ಕಠಿಣ ತಪೋರೂಪ ವಿವಾಹ ಎಂದು ಕರೆಯಬಹುದು. ಇವು ಉತ್ತರೋತ್ತರ ವಿಷಯ ತೃಷ್ಣೆಗೆ ಹೆಚ್ಚು ಹೆಚ್ಚು ಪ್ರತಿಬಂಧಕಗಳಾಗಿರುವವೆಂಬದು, ನಾವು ಈಗ ಮಾಡುವ ಅವುಗಳ ಸಂಕ್ಷಿಪ್ತ ವರ್ಣನದಿಂದ ಗೊತ್ತಾಗಬಹುದು. ಸತ್ಯಯುಗದಲ್ಲಿ ವಿವಾಹ ಪದ್ಧತಿಯಿಲ್ಲದೆ ಮನುಷ್ಯರಲ್ಲಿ ಸರ್ವತ್ರ ಸ್ವೇಚ್ಛಾಚಾರವೇ ನಡೆಯುತ್ತಿತ್ತೆಂದು ಈ ಮೊದಲೆ ಹೇಳಿರುತ್ತದೆ. ಆಗಿನ ಕಾಲದ ಜನರು ತಪೋಮಯರೂ, ಸಹಜಾನಂದಲುಬ್ಧರೂ ಇದ್ದದ್ದರಿಂದ, ಸ್ತ್ರೀ ಸಂಭೋಗದಂಥ ಗ್ರಾಮ್ಯ ಸುಖಕ್ಕೆ ಅವರು ಹೇಸುವವರಾಗಿದ್ದರು. ಆದ್ದರಿಂದ ಅವರು ಬುದ್ಧಿಪೂರ್ವಕ ಸ್ತ್ರೀ ಸಂಭೋಗವನ್ನು ಇಚ್ಛಿಸುತ್ತಿದ್ದಿಲ್ಲ; ಕರ್ಮಧರ್ಮ ಸಂಯೋಗದಿಂದ ಅಂತಹ ಗ್ರಾಮ್ಯಸುಖ

ಸಂಭೋಗದ ಪ್ರಸಂಗವು ಒದಗಿದರೆ ಅವರಲ್ಲಿ ಒದಗುತ್ತಿತ್ತು. ಮುಂದೆ ಬರಬರುತ್ತ ಈ ಸ್ಥಿತಿಯು ಇಲ್ಲದಾಗಿ, ಯೋಗ್ಯ ಸಂತತಿಯಾಗಬೇಕೆಂದು ಬುದ್ಧಿಪೂರ್ವಕ ಸ್ತ್ರೀಸಂಗಮಾಡುವ ಇಚ್ಛೆಯು ಸರ್ವತ್ರ ಉತ್ಪನ್ನವಾಗತೊಡಗಲು, ಆಗ ಪವಿತ್ರವಾದ ಪತಿ–ಪತ್ನೀಭಾವದ ಶಾಶ್ವತಾಶಾಶ್ವತವಾದ ಶಿಥಿಲವಿವಾಹ ಬಂಧನವು ಬಳಿಕೆಯಲ್ಲಿ ಬಂದಿತು. ಅಂತಹ ಆ ಪವಿತ್ರಭಾವದ ಶಾಶ್ವತಾಶಾಶ್ವತವಾದ ಶಿಥಿಲ ವಿವಾಹ ಬಂಧನದ ಕಾಲದಲ್ಲಿ ಸಂತತಿಯನ್ನು ಇಚ್ಛಿಸುವ ಯೋಗ್ಯನೊಬ್ಬನು, ಮತ್ತೊಬ್ಬನ ಹೆಂಡತಿಯಲ್ಲಿ ಸಂತತಿಯ ಉತ್ಪನ್ನ ಮಾಡಿಕೊಳ್ಳುವದಕ್ಕಾಗಿ, ಆಕೆಯ ಗಂಡನನ್ನು ಕೇಳಿ, ಆಕೆಯು ಋತುಸ್ನಾತಳಾದ ಬಳಿಕ ಆಕೆಯನ್ನು ಕರಕೊಂಡುಹೋಗಿ ಆಕೆಯಲ್ಲಿ ಸಂತತಿ ಪಡೆಯುತ್ತಿದ್ದನು. ಹೀಗೆ ಋತುಸ್ನಾತರಾದ ಬಳಿಕ ಸ್ತ್ರೀಯರು ಹಸುಗಳಂತೆ ಪವಿತ್ರರಾಗುವರೆಂದು ಆಗಿನ ಧರ್ಮಶಾಸ್ತ್ರಗಳ ನಿರ್ಣಯವಿದ್ದಿತು! ಈ ನಿರ್ಣಯವನ್ನು ಉದ್ದಾಲಕನೆಂಬ ಬ್ರಾಹ್ಮಣನ ತಂದೆಯು, ತನ್ನ ಹೆಂಡತಿಯನ್ನು ಮತ್ತೊಬ್ಬ ಬ್ರಾಹ್ಮಣನಿಗೆ ಒಪ್ಪಿಸುವಾಗ ತನ್ನ ಮಗನಿಗೆ ಹೇಳಿರುವದನ್ನು ಮಹಾಭಾರತದಲ್ಲಿ ನೋಡಬಹುದು. ಮುಂದೆ ಬರಬರುತ್ತ ವಿಷಯಾಸಕ್ತಿಯು ಹೆಚ್ಚಿ, ಕೇವಲ ಸಂತತಿಯ ಉದ್ದೇಶ ವಿಲ್ಲದೆ, ವಿಷಯ ಸುಖೇಚ್ಛೆಯಿಂದ ಒಬ್ಬರ ಹೆಂಡಿರನ್ನು ಒಬ್ಬರು ಕರಕೊಂಡು ಹೋಗಹತ್ತಿದ್ದ ರಿಂದ, ಅನಾಚಾರವು ಬೆಳೆಯಿತು. ಆಗ ಈ ಪವಿತ್ರಭಾವದ ವಿವಾಹ ಪದ್ಧತಿಯು ನಿಂತು, ನಿಯಮಬದ್ಧವಾದ ನಿಯೋಗಪದ್ಧತಿಯ ವಿವಾಹವು ಬಳಕೆಯಲ್ಲಿ ಬಂದಿತು. ನಿಯೋಗಪದ್ಧತಿಯೆಂದರೆ, ಕೇವಲ ವಂಶರಕ್ಷಣದ ವಿಪತ್ತಿನ ಪ್ರಸಂಗವಿದ್ದಾಗ ಮಾತ್ರ, ಗುರು ಹಿರಿಯರ ಅಪ್ಪಣೆಯಂತೆ, ಸಿಕ್ಕವರಿಂದಲ್ಲ, ತಮ್ಮ ಭಾವ ಮೈದುನರಿಂದ, ಅಥವಾ ಶ್ರೇಷ್ಠವೃತ್ತಿಯ ಬ್ರಾಹ್ಮಣನಿಂದ ಸಂತತಿಯನ್ನು ಪಡೆಯುವದು! ವ್ಯಾಸರು ತಮ್ಮ ತಾಯಿಯಾದ ಸತ್ಯವತಿಯ ಅಪ್ಪಣೆಯಂತೆ, ಆಗಿನ ಕಾಲದ ಧರ್ಮಶಾಸ್ತ್ರಕ್ಕನುಸರಿಸಿ, ತಮ್ಮ ತಮ್ಮಂದಿರ ಹೆಂಡಿರಲ್ಲಿ ನಿಯೋಗ ಪದ್ಧತಿಯಿಂದ ಧೃತರಾಷ್ಟ್ರ–ಪಾಂಡು–ವಿದುರರನ್ನು ಉತ್ಪನ್ನಮಾಡಿದ್ದು ಮಹಾಭಾರತದಲ್ಲಿ ಪ್ರಸಿದ್ಧವಿರುವದು! ಮುಂದೆ ಈ ನಿಯೋಗ ಪದ್ಧತಿಯೂ ವ್ಯಭಿಚಾರ ಸ್ಥಿತಿಯನ್ನು ಹೊಂದುವಷ್ಟು ಮನುಷ್ಯರಲ್ಲಿ ವಿಷಯಾಸಕ್ತಿಯ ಅನಾಚಾರವು ಬೆಳೆಯಲು, ಆ ಪದ್ಧತಿಯೂ ನಿಂತು ಹೋಗಿ, ಈಗಿನ ಕಠಿಣ ತಪೋಮಯವಾದ ಬಿಕ್ಕಟ್ಟಿನ ವಿವಾಹಪದ್ಧತಿಯು ಮನುಷ್ಯ ಜಾತಿಯ ಕಲ್ಯಾಣಕ್ಕಾಗಿ ಉದ್ದಾಲಕನ ಶಾಸನದಿಂದ ಬಳಕೆಯಲ್ಲಿ ಬಂದಿರುವದು. ಹೀಗೆ ಲೋಕಹಿತೇಚ್ಛುಗಳಾದ ವೈದಿಕಜ್ಞಾನಿಗಳು, ಮನಸ್ಸೆಂಬ ಖೊಟ್ಟಿ ಕುದುರೆಯ ಖೊಟ್ಟಿತನವು ಕಡಿಮೆಯಾಗುವದಕ್ಕಾಗಿ, ಈ ಮೂರು ಬಗೆಯ ವಿವಾಹಗಳೆಂಬ ಕಡಿವಾಣಗಳನ್ನು ಅದಕ್ಕೆ ಹೇಗೆ ಹಾಕುತ್ತ ಬಂದರೆಂಬದನ್ನು ಆವಶ್ಯಕರು ಮಹಾಭಾರತಾದಿ ಗ್ರಂಥಗಳಲ್ಲಿ ನೋಡಬಹುದು. ವಿವಾಹ ವಿಷಯದಲ್ಲಿ ಇಷ್ಟು ದಕ್ಷತೆಯ ಪ್ರಯತ್ನ ಮಾಡಿದ್ದು ಅನ್ಯಧರ್ಮದವರಲ್ಲಿ ಕಂಡು ಬರಲಾರದು.

**೫. ಆ ವಿವಾಹರೂಪ ಕಡಿವಾಣಗಳ ಸ್ವರೂಪ** — ಹೀಗೆ ಸತ್ಯಯುಗದ ಮನುಷ್ಯರಲ್ಲಿಯ ಸ್ವೇಚ್ಛಾವಿಹಾರ ಪದ್ಧತಿಯು ನಿಂತುಹೋಗಿ, ಅದರ ಸ್ಥಳದಲ್ಲಿ ಮೊದಲು ಶಿಥಿಲವಾದ

ಪವಿತ್ರಭಾವದ ವಿವಾಹಪದ್ಧತಿ, ಆಮೇಲೆ ನಿಯಮಬದ್ಧವಾದ ನಿಯೋಗಾನುಕೂಲದ ವಿವಾಹ ಪದ್ಧತಿ,ಆಮೇಲೆ ಈಗಿನ ಕಠಿಣ ತಪೋಮಯ ವಿವಾಹಪದ್ಧತಿ ಎಂಬ ಮೂರು ಬಗೆಯ ವಿವಾಹ ಪದ್ಧತಿಗಳು, ಮನುಷ್ಯನ ಮನಸ್ಸಿನ ವಿಷಯಾಸಕ್ತಿಗೆ ಪ್ರತಿಬಂಧ ಉಂಟಾಗುವದಕ್ಕಾಗಿ ಕ್ರಮವಾಗಿ ಬಳಿಕೆಯಲ್ಲಿ ಬಂದವೆಂದೂ, ಮನಸ್ಸು ಖೊಟ್ಟಿ ಕುದುರೆಯಂತೆ ಇರುವದೆಂದೂ ಮೇಲೆ ಹೇಳಿದೆಯಷ್ಟೆ? ಮನಸ್ಸು ಹೀಗೆ ಖೊಟ್ಟಿ ಕುದುರೆಯ ಸ್ವಭಾವದ್ದಾಗಿರುವದಲ್ಲದೆ, ಅದಕ್ಕೆ ವಿಷಯಸೇವನದ ಖುರಾಕನ್ನು ಹೆಚ್ಚು ಹೆಚ್ಚು ಹಾಕುತ್ತಹೋದಂತೆ, ಅದರ ಖೊಟ್ಟಿ ಸ್ವಭಾವವು ಹೆಚ್ಚುತ್ತ ಹೆಚ್ಚುತ್ತ ಹೋಗುವದು. ಆಗ ಅದು ಮನುಷ್ಯನನ್ನು ಯಾವ ಕಾಲಕ್ಕೆ ಎಂಥ ಕೊರಕಲಲ್ಲಿ ಹಾಕಿ, ಹೇಗೆ ನಾಶಮಾಡೀತೆಂಬದನ್ನು ಹೇಳಲಾಗುವದಿಲ್ಲ. ಒಂದೊಂದು ಇಂದ್ರಿಯದ ವಿಷಯದಲ್ಲಿ ಮಗ್ನವಾದ ಪ್ರಾಣಿಯೂ ನಾಶಹೊಂದುತ್ತಿರಲು, ಐದೂ ಇಂದ್ರಿಯಗಳ ವಿಷಯಗಳಲ್ಲಿ ಮನುಷ್ಯನು ಮಗ್ನನಾದರೆ, ಅವನ ನಾಶವಾಗದೆ ಹೇಗೆ ಬಿಟ್ಟೀತು? ಚಿಗರೆಯು ಕಿವಿಯಿಂದ ನಾದವನ್ನು ಕೇಳಿ ಅದರಲ್ಲಿ ಲುಬ್ಧವಾಗಿ ಬಲೆಯಲ್ಲಿ ಬಿದ್ದು ಸಾಯುವದು; ಆನೆಯು ತನ್ನ ಸ್ಪರ್ಶೇಂದ್ರಿಯವಾದ ಚರ್ಮಕ್ಕೆ ಹೆಣ್ಣಾನೆಯಿಂದಾಗುವ ಸ್ಪರ್ಶಸುಖಕ್ಕೆ ಮೋಹಿಸಿ ಬಲೆಯಲ್ಲಿ ಬಿದ್ದು ಜೀವಕ್ಕೆ ಎರವಾಗುವದು; ಪತಂಗಹುಳವು ತನ್ನ ನೇತ್ರೇಂದ್ರಿಯದಿಂದಾಗುವ ದೀಪದರ್ಶನದ ಸುಖಕ್ಕೆ ಮೋಹಿಸಿ ದೀಪದಲ್ಲಿ ಬಿದ್ದು ಸುಟ್ಟುಕೊಂಡು ಸಾಯುವದು; ತುಂಬಿಯು (ಗುಂಗೀ ಹುಳವು) ತನ್ನ ಮೂಗಿನ ಸುವಾಸನೆಯ ಆಶೆಗೆ ಬಿದ್ದು ಬಂಧನಕ್ಕೆ ಒಳಗಾಗುವದು; ಮೀನವು ನಾಲಿಗೆಯ ರುಚಿಗೆ ಮೋಹಿಸಿ, ಗಾಣಕ್ಕೆ ಹೆಚ್ಚಿದ ಆಹಾರವನ್ನು ತಿನ್ನ ಹೋಗಿ ಸಾಯುವದು; ಅಂದಬಳಿಕ ಮನುಷ್ಯನು ಸ್ತ್ರೀಸಂಗಮಾಡುವ ನೆವದಿಂದ ಗಾನಲುಬ್ಧನಾಗಿ, ಸ್ತ್ರೀಲಾವಣ್ಯಪರವಶನಾಗಿ, ವಿವಿಧ ಸುಗಂಧ ದ್ರವ್ಯಗಳ ಸುವಾಸನೆಗೆ ಮನಸೋತು, ಮದ್ಯ, ವಿವಿಧ ಮಿಷ್ಟಪದಾರ್ಥಗಳು ಇವುಗಳ ಆ ಸ್ವಾದದಲ್ಲಿ ಮೈಮರೆತು, ಹೀಗೆ ಒಂದೇ ಕಾಲಕ್ಕೆ ಐದೂ ಇಂದ್ರಿಯಗಳ ವಿಷಯಸೇವನದಲ್ಲಿ ಮಗ್ನನಾಗಿ, ಆ ವಿಷಯ ಸೇವನದ ಅತಿರೇಕವಾದರೆ, ಆ ಮನುಷ್ಯನ ನಾಶವಾಗದೆ ಹೇಗೆ ಉಳಿದೀತು? *ಆದ್ದರಿಂದಲೇ ಜ್ಞಾನಿಗಳು ಮನುಷ್ಯ ಕಲ್ಯಾಣಕ್ಕಾಗಿ ಮನಸ್ಸೆಂಬ ಆ ಖೊಟ್ಟಿ ಕುದುರೆಯು ಐದೂ ಇಂದ್ರಿಯಗಳ ವಿಷಯ ಸೇವನದ ಮದದಿಂದ ಬೇಫಾಮಾಗದಂತೆ (ಎಚ್ಚಗೆಡದಂತೆ) ಆಯಾಕಾಲಕ್ಕೆ ತಕ್ಕ ವಿವಾಹಗಳೆಂಬ ಬೇರೆ ಬೇರೆ ಲಗಾಮುಗಳನ್ನು ಅದಕ್ಕೆ ಹಾಕುತ್ತಬಂದಿರುವರು. ಮೇಲೆ ಹೇಳಿರುವ ಒಂದನೆಯ ಪವಿತ್ರಭಾವದ ವಿವಾಹವನ್ನು ಕುದುರೆಯ ಸೋಟೆಗೆ ಹಚ್ಚುವ ಹಗ್ಗಕ್ಕೂ, ನಿಯೋಗಪದ್ಧತಿಯ ಬಳಿಕೆ ಇದ್ದ ಎರಡನೆಯ ನಿಯಮಬದ್ಧ ವಿವಾಹವನ್ನು, ಕುದುರೆಯ ಬಾಯಿಗೆ ಹಾಕುವ ಸಾದಾ ಕಡಿವಾಣ (ಲಗಾಮು)ಕ್ಕೂ, ಮೂರನೆಯದಾದ ಈಗಿನ ಕಠಿಣತಪೋರೂಪ ವಿವಾಹವನ್ನು, ಆ ಮನೋರೂಪ ಕುದುರೆಯ ಸೋಟೆ ಹರಿಯುವ ಮುಳ್ಳ ಲಗಾಮಕ್ಕೂ, ಹೋಲಿಸಬಹುದು. ಹೀಗೆ ಮನಸ್ಸೆಂಬ ಖೊಟ್ಟಿ ಕುದುರೆಗೆ, ಇಂತಹ, ಅಥವಾ ಬೇರೊಂದು ಬಗೆಯ ವಿವಾಹವೆಂಬ ಲಗಾಮವನ್ನು ಹಾಕದೆ, ಜಗತ್ತಿನೊಳಗಿನ ಯಾವ ಧರ್ಮದವರೂ ಅದಕ್ಕೆ ಸ್ವಾತಂತ್ರ್ಯ

ಕೊಟ್ಟಿರುವದಿಲ್ಲವೆಂದು ಹೇಳಬಹುದು. ಅದರಲ್ಲಿ ನಮ್ಮ ಭರತಭೂಮಿಯೊಳಗಿನ ಆತ್ಮನಿಷ್ಠರೆನಿಸಿಕೊಳ್ಳುತ್ತ ಬಂದಿದ್ದ ಬ್ರಾಹ್ಮಣವರ್ಣದವರು, ತಮ್ಮ ಮನಸ್ಸಿನ ಪಾವಿತ್ರ್ಯವನ್ನು ದಕ್ಷತೆಯಿಂದ ಕಾಯ್ದು ಕೊಳ್ಳುವದಕ್ಕಾಗಿ, ಅತಿ ತೀಕ್ಷ್ಣ ಮುಳ್ಳುಗಳುಳ್ಳ ಲಗಾಮುವನ್ನೇ ಯಾವಾಗಲೂ ಉಪಯೋಗಿಸುತ್ತಬಂದಿರುವರು. ಉಳಿದ ಹೆಚ್ಚು ಕಡಿಮೆ ವಿಷಯ ನಿಷ್ಠರೆನಿಸಿ ಕೊಳ್ಳುತ್ತಿರುವ ಕ್ಷತ್ರಿಯ, ವೈಶ್ಯ, ಶೂದ್ರ ವರ್ಣದವರು, ತಮ್ಮ ಮನಸ್ಸಿನ ತೇಜಸ್ವಿತೆ ಕಾಯ್ದುಕೊಳ್ಳುವದಕ್ಕಾಗಿ, ಬ್ರಾಹ್ಮಣರಂತೆ ಮುಳ್ಳಲ ಗಾಮುವನ್ನೇ ದಕ್ಷತೆಯಿಂದ ಅತಿ ಸೂಕ್ಷ್ಮ ದೃಷ್ಟಿಯವರಾಗಿ ಉಪಯೋಗಿಸುತ್ತ ಬಾರದಿದ್ದರೂ, ಅವರು ಮುಳ್ಳುಲಗಾಮುದ ಉಪಯೋಗವನ್ನು ಪೂರಾ ಬಿಟ್ಟು ಬಿಟ್ಟಿರುವದಿಲ್ಲ; ಯಾಕಂದರೆ, ಮನಸ್ಸಿನ ಪಾವಿತ್ರ್ಯದ ಮಹತ್ವವನ್ನು ಬ್ರಾಹ್ಮಣರಂತೆ ಉಳಿದ ವರ್ಣದವರೂ ಅರಿತಿರುವರು.

**೬. ಮನಸ್ಸಿನ ಪಾವಿತ್ರ್ಯವೂ, ತೇಜಸ್ವಿತೆಯೂ**—ಇನ್ನು ಮನಸ್ಸಿನ ಪಾವಿತ್ರ್ಯ- ತೇಜಸ್ವಿತೆ ಗಳೆಂದರೇನೆಂಬದನ್ನು ಕುರಿತು ವಿಚಾರಮಾಡುವಾ. ಮನಸ್ಸಿನ ಪಾವಿತ್ರ್ಯವೆಂದರೆ, ಮನಸ್ಸಿನ ಸತ್ವಗುಣಪ್ರಧಾನತೆಯು, ''ಸತ್ವಾತ್ಸಂಜಾಯತೇ ಜ್ಞಾನಂ'' ಎಂಬ, ಭಗವದ್ಗೀತೆಯ ಉಕ್ತಿಯಂತೆ, ಸತ್ವಗುಣವು ಜ್ಞಾನವನ್ನು, ವಿಶೇಷವಾಗಿ ಆತ್ಮ ಜ್ಞಾನವನ್ನು ಹುಟ್ಟಿಸತಕ್ಕ ದ್ದಾದ್ದರಿಂದ, ಅದರ ಸ್ವಭಾವವು ಅಂತರ್ಮುಖಿಯು, ಅಂದರೆ, ಹೊರಗಿನ ವಿಷಯಗಳಿಗೆ ಮಹತ್ವಕೊಡದೆ, ಅಂತರಾತ್ಮನನ್ನು ನೋಡುವಂತಹ ಸ್ವಭಾವದ್ದು ಆಗಿರುವದು. ಆದ್ದರಿಂದ ಮನಸ್ಸಿನ ಪಾವಿತ್ರ್ಯವು ಹೆಚ್ಚುತ್ತ ಹೋದಂತೆ, ಮನುಷ್ಯನ ವ್ಯವಹಾರಾಸಕ್ತಿಯೂ, ಲೌಕಿಕ ಕಾರ್ಯದಕ್ಷತೆಯೂ, ಕರ್ತೃತ್ವಾಭಿಮಾನವೂ, ಲೌಕಿಕ ಮಹತ್ವಾಕಾಂಕ್ಷೆಯೂ ಕಡಿಮೆಯಾಗುತ್ತ ಹೋಗುವವು. ಈ ಪವಿತ್ರ ಮನಸ್ಸಿನವರಲ್ಲಿ ಸಾತ್ವಿಕಾಹಾರ, ಸಾತ್ವಿಕವ್ಯವಹಾರ, ಸಾತ್ವಿಕವಿಹಾರಗಳು ಕಂಡುಬರುವವು. ಅಂದರೆ, ಅವರ ಕಾರ್ಯಾಕಾರ್ಯಗಳ ವ್ಯವಸ್ಥೆಯಲ್ಲಿ ಶಾಸ್ತ್ರಪ್ರಾಮಾಣ್ಯವು ಒಡೆದು ಕಾಣುತ್ತಿರುವದು. ಇಂತಹ ಪವಿತ್ರಾಂತಃಕರಣದವರು ಬೂದಿಮುಚ್ಚಿದ ಕೆಂಡದಂತೆ ಗೂಢದಾಹಕ ಶಕ್ತಿಯುಳ್ಳವರು, ಅಂದರೆ ಗೂಢತೇಜಸ್ವಿಗಳು ಆಗಿರುವರು. ಅಂತೇ ಕಾಳಿದಾಸನು ತನ್ನ ಶಾಕುಂತಲ ನಾಟಕದಲ್ಲಿ ಪವಿತ್ರಮನಸ್ಕರ ಮಹತ್ವ ಹೇಳುವಾಗ— ''ಅಸ್ತಿದಾಹಾತ್ಮಕ ಗೂಢಶಕ್ತಿ'' ಎಂದು ಹೇಳಿರುವನು. ತೆರೆದಿದ್ದ ಕೆಂಡದ ಜಳವು ತುಳಿದರೂ ತುಳಿಯದಿದ್ದರೂ, ಹತ್ತಿರದವರಿಗೆ ತಾಕುವಂತೆ, ಬೂದಿ ಮುಚ್ಚಿದ ಕೆಂಡದ ದಾಹಕ ಗುಣವು ನಿರ್ಲಕ್ಷದಿಂದ ತುಳಿಯುವ ಉದ್ಧಟರ ಹೊರತು ಅನ್ಯರ ಅನುಭವಕ್ಕೆ ಬರಲಾರದು! ಒಟ್ಟಿಗೆ, ಪವಿತ್ರ ಮನಸ್ಸಿನವರು, ವಿಷಯನಿಷ್ಠರೂ, ವಿಷಯತುಷ್ಟರೂ, ವಿಷಯಪುಷ್ಟರೂ ಆಗಿರದೆ, ಆತ್ಮನಿಷ್ಠರೂ, ಆತ್ಮಜ್ಞಾನತುಷ್ಟರೂ, ಆತ್ಮಾನುಭವ ಪುಷ್ಟರೂ ಆಗಿರುವದರಿಂದ, ಅವರು ಸದಾ ಸಂತುಷ್ಟರಾಗಿರುವರು. ಅಂತೇ ಬ್ರಾಹ್ಮಣರ ವಿಷಯದಲ್ಲಿ— ''ಅಸಂತುಷ್ಟಾ ದ್ವಿಜಾ ನಷ್ಟಾಃ'' ಎಂದು ಹೇಳಿರುವದು.

ಇನ್ನು ತೇಜಸ್ವಿತೆಯ ಲಕ್ಷಣವನ್ನು ಹೇಳುವೆವು. ತೇಜಸ್ವಿತೆಯೆಂದರೆ, ಮನಸ್ಸಿನ ರಜೋಗುಣ ಪ್ರಧಾನತೆಯು. ''ರಜಸೋ ಲೋಭವಿವಚ'' ಎಂಬ ಭಗವದ್ಗೀತೆಯ

ಉಕ್ತಿಯಂತೆ, ರಜೋಗುಣವು ಲೋಭವನ್ನು, ವಿಶೇಷವಾಗಿ ವಿಷಯಲೋಭವನ್ನು ಹುಟ್ಟಿಸತಕ್ಕದ್ದಾದ್ದರಿಂದ ಅದರ ಸ್ವಭಾವವು ಬಹಿರ್ಮುಖಿಯು, ಅಂದರೆ ಅಂತರಾತ್ಮನಿಗೆ ಮಹತ್ವ ಕೊಡದೆ, ವಿಷಯಗಳನ್ನೇ ನೋಡುವಂತಹ ಸ್ವಭಾವದ್ದು ಆಗಿರುವದು. ಮನಸ್ಸಿನ ತೇಜಸ್ವಿತೆಯು ಹೆಚ್ಚುತ್ತ ಹೋದಂತೆ, ವ್ಯವಹಾರಾಸಕ್ತಿಯೂ, ಲೌಕಿಕಕಾರ್ಯದಕ್ಷತೆಯೂ, ಕರ್ತೃತ್ವಾಭಿಮಾನವೂ, ಲೌಕಿಕ ಮಹತ್ವಾಕಾಂಕ್ಷೆಯೂ, ಹೆಚ್ಚುತ್ತ ಹೋಗುವವು. ತೇಜಸ್ವಿಗಳಲ್ಲಿ ರಾಜಸಾಹಾರ, ರಾಜಸವಿಹಾರ, ರಾಜಸ ವ್ಯವಹಾರಗಳು ಕಂಡುಬರುವದು ಸ್ವಾಭಾವಿಕವು. ಅವರ ಕಾರ್ಯಾ ಕಾರ್ಯವ್ಯವಸ್ಥೆಯಲ್ಲಿ ಶಾಸ್ತ್ರಪ್ರಾಮಾಣ್ಯದೊಡನೆ, ರೂಢಿಯ ಬಳಿಕೆ ಯಾಗುತ್ತಿರುವದು ಕಂಡುಬರುವದು. ತೇಜಸ್ವಿಗಳು ತೆರೆದ ಕೆಂಡದಂತೆ ವ್ಯಕ್ತತೇಜಸ್ವಿಗಳಾಗಿ ರುವದರಿಂದ, ದುಷ್ಟರಿಗೆ ಅವರು ಯಾವಾಗಲೂ ಭಯಪ್ರದರಾಗಿರುವರು. ಒಟ್ಟಿಗೆ, ತೇಜಸ್ವಿಗಳು ವಿಷಯನಿಷ್ಠರೂ, ವಿಷಯ ಪ್ರಾಪ್ತಿಯಿಂದ ತುಷ್ಟರೂ, ವಿಷಯಸೇವನದಿಂದ ಪುಷ್ಟರೂ ಆಗಿರುವರು. ಅಂತೇ ಕ್ಷತ್ರಿಯರ ವಿಷಯದಲ್ಲಿ— ''ಸಂತುಷ್ಟಾಶ್ಚ ಮಹೀಭೃತಃನಷ್ಟಾಃ'' ಎಂದು ಹೇಳಿರುವದು.

**೭. ವರ್ಣಭೇದಗಳೂ, ವಿವಾಹ ಪದ್ಧತಿಗಳೂ**— ಸತ್ಯಯುಗದಲ್ಲಿ ''ಹಂಸ'' ಎಂಬ ಹೆಸರಿನ ಒಂದೇ ವರ್ಣವಿದ್ದು ಮುಂದೆ ಅದು ೧. ಬ್ರಾಹ್ಮಣ, ೨.ಕ್ಷತ್ರಿಯ, ೩. ವೈಶ್ಯ, ೪. ಶೂದ್ರ ಎಂಬ ನಾಲ್ಕು ವರ್ಣಗಳಾಗಿ ವಿಭಾಗಿಸಿತೆಂದು ಮೇಲೆ ಹೇಳಿದೆಯಷ್ಟೆ? ಬ್ರಾಹ್ಮಣ ವರ್ಣದ ಶೀಲವನ್ನು ಕುರಿತು ಮನುವು—''ಬ್ರಾಹ್ಮಣಸ್ಯಚದೇಹೋಯಂ ಕ್ಷುದ್ರಭೋಗಾಯ ನೇಷ್ಯತೇ ಕೃಚ್ಛ್ರಾಯ ತಪಸೇ ಚೈವ ಪ್ರೇತ್ಯಾನಂತ ಸುಖಾಯಚ' ಎಂದು ಹೇಳಿರುವನು. ಅಂದರೆ ಬ್ರಾಹ್ಮಣನ ದೇಹವು ಕ್ಷುದ್ರ ವಿಷಯ ಸುಖಭೋಗಕ್ಕಾಗಿ ಇರದೆ, ವಿವಿಧ ವ್ರತ ಪಾಲನ–ತಪಶ್ಚರ್ಯ–ಅನಂತ ಅಂದರೆ ಕೊನೆಯಿಲ್ಲದ ಸುಖಸಂಪಾದನ ಇವುಗಳಿಗಾಗಿ ಇರುವದು.'' ಎಂದು ಹೇಳಿರುವನು. ಅದರಂತೆ ಬ್ರಾಹ್ಮಣೇತರರಾದ ಕ್ಷತ್ರಿಯರು ಪೃಥ್ವಿಯ ಒಡೆತನವನ್ನೂ, ವೈಶ್ಯರು ದ್ರವ್ಯವನ್ನೂ, ಶೂದ್ರರು ಮೇಲಿನ ತ್ರೈವರ್ಣಿಕರ ಸೇವಾಸಂಪತ್ತನ್ನೂ ಪಡೆಯಬೇಕೆಂದು ಧರ್ಮಶಾಸ್ತ್ರಕಾರರು ಹೇಳಿರುವರು. ಇದನ್ನೆಲ್ಲ ವಿಚಾರಿಸಿದರೆ, ಬ್ರಾಹ್ಮಣರಿಗೆ, ಅಥವಾ ಬ್ರಾಹ್ಮವೃತ್ತಿಯ ಅನ್ಯವರ್ಣ—ಜಾತಿಗಳವರಿಗೆ ಆತ್ಮಬಲ ಸಂಪಾದನೆಗಾಗಿ ಮನಸ್ಸಿನ ಪಾವಿತ್ರ್ಯವನ್ನು ಕಾಯ್ದುಕೊಳ್ಳುವದೂ ಬ್ರಾಹ್ಮಣೇತರರಿಗೆ, ಅಥವಾ ಬ್ರಾಹ್ಮಣೇತರ ವರ್ಣ– ಜಾತಿಗಳ ವೃತ್ತಿಯ ಬ್ರಾಹ್ಮಣರಿಗೆ ಮನಸ್ಸಿನ ತಜೇಸ್ವಿತೆಯ ಕಾಯ್ದು ಕೊಳ್ಳುವದೂ ಅವಶ್ಯವಾಗಿರುವದು.

ಹೀಗೆ ಬ್ರಾಹ್ಮಣರು ತಮ್ಮ ಮನಸ್ಸಿನ ಪಾವಿತ್ರ್ಯವನ್ನು, ಮತ್ತು ಬ್ರಾಹ್ಮಣೇತರರು ತಮ್ಮ ಮನಸ್ಸಿನ ತೇಜಸ್ವಿತೆಯನ್ನು ಅತಿ ಪ್ರಾಚೀನಕಾಲದಲ್ಲಿ ಗುರುಕುಲವಾಸದಿಂದ ಸಂಪಾದಿಸುತ್ತಿದ್ದ ರೆಂದು ಈ ಮೊದಲೆ ಹೇಳಿರುತ್ತದೆ; ಆದರೆ ಮುಂದೆ ಮನುಷ್ಯರ ವಿಷಯಾಸಕ್ತಿಯು ದಿನದಿನಕ್ಕೆ ಹೆಚ್ಚುತ್ತಬಂದು, ಅನಾಚಾರವು ಬೆಳೆಯಲು, ಹೆಂಗಸರಿಗೆ ಗುರುಕುಲವಾಸವು ತಪ್ಪಿತು; ಆಗ ಬ್ರಾಹ್ಮಣ ಹಾಗು ಬ್ರಾಹ್ಮಣೇತರವರ್ಣಗಳ ಹೆಣ್ಣುಮಕ್ಕಳು ಪ್ರೌಢರಾಗುವವರೆಗೆ ತವರಮನೆ

ಯಲ್ಲಿಯೇ ಸಂರಕ್ಷಣ ಹೊಂದುತ್ತ ಶಿಕ್ಷಣವನ್ನು ಪಡೆಯಬೇಕಾಗಿ, ತವರುಮನೆಯವರ ಮೇಲೆ ದೊಡ್ಡ ಜವಾಬದಾರಿಯು ಬಿದ್ದಂತಾಯಿತು. ಹೆಣ್ಣುಮಕ್ಕಳ ಸಂರಕ್ಷಣವೆಂದರೆ, ಹಿಂಡುವ ಎಮ್ಮೆಯನ್ನು, ಹೊಟ್ಟು, ಹುರುಳಿ, ಹತ್ತೀಕಾಳು ಮೊದಲಾದ ಪೌಷ್ಟಿಕಾಹಾರಗಳನ್ನು ಹಾಕಿ ಬರಿಯಮೇಸುವಂತೆ ಅಲ್ಲ, ಅವರಿಗೆ ಪೌಷ್ಟಿಕಾಹಾರ-ವಸ್ತ್ರ-ಪ್ರಾವರಣಗಳನ್ನು ಕೊಟ್ಟು, ಅವರನ್ನು ದೃಢಾಂಗರನ್ನಾಗಿಯೂ, ಸುಶೋಭಿತರನ್ನಾಗಿಯೂ ಮಾಡಿ ಇಟ್ಟುಕೊಳ್ಳುವದಲ್ಲದೆ, ಅವರನ್ನು ಶೀಲವತಿಯರನ್ನಾಗಿಯೂ, ಸುಶಿಕ್ಷಿತೆಯರನ್ನಾಗಿಯೂ ಮಾಡಬೇಕಾಗುವದು. ಒಟ್ಟಿಗೆ, ತಾಯಿತಂದೆಗಳ ಮೇಲೆ ತಮ್ಮ ಆ ಹೆಣ್ಣುಮಕ್ಕಳ ದೇಹರಕ್ಷಣ, ಶೀಲರಕ್ಷಣ, ಸುಶಿಕ್ಷಣ ಇವುಗಳ ಜವಾಬದಾರಿಯು ಬಂದು ಬಿದ್ದಿತು; ಆದರೆ ತಾಯಿತಂದೆಗಳ ಮೇಲಿನ ಹೆಣ್ಣುಮಕ್ಕಳ ಸಥಿ, ಹಾಗು ಹೆಣ್ಣುಮಕ್ಕಳ ಮೇಲಿನ ತಾಯಿತಂದೆಗಳ ಮೋಹ, ಅದರಂತೆ ಪರಸ್ಪರರ ಅತಿಪರಿಚಯ ಇವುಗಳ ಮೂಲಕ ಈ ಮೂರು ಜವಾಬದಾರಿಗಳನ್ನು ವಹಿಸಲಿಕ್ಕೆ ತಾಯಿತಂದೆಗಳಿಗೆ ತೊಂದರೆಯಾಗಹತ್ತಿ ಸರಿಯಾಗಿ ಶಿಕ್ಷಣಸಾಗದೆ, ಹೆಣ್ಣುಮಕ್ಕಳಲ್ಲಿ ವಿನಯಗುಣಕ್ಕಿಂತ, ಎಟ್ಟಿ ಗುಣವು ಹೆಚ್ಚು ಸೇರಹತ್ತಿತು. ಇದಕ್ಕೆ ಶುಕ್ರಾಚಾರ್ಯರ ಮಗಳಾದ ದೇವಯಾನಿಯ ಎಟ್ಟಿತನವನ್ನು ಉದಾಹರಿಸಬಹುದು. ತವರುಮನೆಯಲ್ಲಿಯೇ ಪ್ರೌಢಳಾಗಿದ್ದ ದೇವಯಾನಿಯು ಹಟದಿಂದ, ತಂದೆಯ ಸಂಜೀವನೀ ಮಂತ್ರವನ್ನು ತನ್ನ ಪ್ರಿಯ ಕಚನಿಗೆ ತಂದೆಯಿಂದ ಉಪದೇಶಕೊಡಿಸಿದ್ದೂ, ಕಡೆಗೆ ತನ್ನ ಲಗ್ನವಾಗದ ಕಚನಿಗೆ ಸಂಜೀವಿನೀ ಮಂತ್ರವು ಫಲಿಸಬೇಡೆಂದು ದೇವಯಾನಿಯು ಸ್ವತಃ ಅನ್ಯಾಯವಾಗಿ ಶಾಪಕೊಟ್ಟಿದ್ದೂ, ಮುಂದೆ ತನ್ನ ಗಂಡನಾದ ಯಯಾತಿರಾಜನ ತಪ್ಪನ್ನು, ಆ ರಾಜನು ತನಗೆ ಬಿದ್ದು ಹೇಳಿಕೊಳ್ಳುವದನ್ನು ಲಕ್ಷಿಸದೆ, ತನ್ನ ತಂದೆ ಶುಕ್ರಾಚಾರ್ಯರ ಮುಂದೆ ತೋಡಿಕೊಂಡು, ಅವರಿಂದ ತನ್ನ ಗಂಡ ಯಯಾತಿಗೆ ವೃದ್ಧನಾಗೆಂದು ಶಾಪಕೊಡಿಸಿದ್ದೂ, ದೇವಯಾನಿಯ ಎಟ್ಟಿತನವಲ್ಲದೆ ಮತ್ತೇನು? ಗಂಡುಮಕ್ಕಳ ಶಿಕ್ಷಣವೇ ಆಗಲಿ, ಹೆಣ್ಣುಮಕ್ಕಳ ಶಿಕ್ಷಣವೇ ಆಗಲಿ, ತಾಯಿತಂದೆಗಳ ಹತ್ತರ ಸರಿಯಾಗಿ ಸಾಗದೆ, ಹುಡುಗರು ಎಟ್ಟಿ ಸ್ವಭಾವದವರಾಗುತ್ತಿರುವದರ ಅನುಭವವು ಈಗಲೂ ಎಲ್ಲರಿಗೂ ಬರುತ್ತಿರುವದೆಂದು ಹೇಳಬಹುದು. ಅಂತೇ, ಮಕ್ಕಳ ಶಿಕ್ಷಣಕ್ಕಾಗಿ ಪ್ರಾಚೀನ ಕಾಲದಲ್ಲಿ ಗುರುಕುಲಗಳು ಸ್ಥಾಪಿಸಲ್ಪಟ್ಟಿದ್ದವು; ಅವುಗಳ ಸ್ಥಳಗಳಲ್ಲಿ ಈಗ ಪಾಠಶಾಲೆಗಳು ಸ್ಥಾಪಿಸಲ್ಪಟ್ಟಿರುತ್ತವೆ. ಮಹಾತ್ಮರಾದ ಶ್ರೀವೇದವ್ಯಾಸರಂಥ ಜ್ಞಾನಘನರು, ತಮ್ಮ ಮಗ ಶುಕನನ್ನು ಜ್ಞಾನೋಪದೇಶ ಪಡೆಯುವದಕ್ಕಾಗಿ ಜನಕರಾಜನ ಬಳಿಗೆ ಕಳಿಸಿದ್ದರ ಮರ್ಮವನ್ನು ಇಲ್ಲಿ ವಿಚಾರಿಸಬಹುದಾಗಿದೆ.

**೮. ತೇಜಸ್ಸುಗಳ ತಿಕ್ಕಾಟ—** ಹೀಗೆ ಬ್ರಾಹ್ಮಣರ ಹಾಗೂ ಬ್ರಾಹ್ಮಣೇತರರ ಹೆಣ್ಣುಮಕ್ಕಳು ಪ್ರೌಢರಾಗುವವರೆಗೆ ಸ್ವಚ್ಛಂದವಾಗಿ ನಯ-ಭಯಗಳಿಲ್ಲದೆ, ತವರುಮನೆಯಲ್ಲಿ ಇರುವದರಿಂದ, ಅವರು ಸತ್ವಗುಣೆಗಳಾಗುವದಕ್ಕಿಂತ, ಅಂದರೆ ಪವಿತ್ರ ಮನಸ್ಕರಾಗುವದಕ್ಕಿಂತ ರಜೋಗುಣೆಗಳು, ಅಂದರೆ ತೇಜಸ್ವಿಗಳು ಆಗುವ ಸಂಭವವು ವಿಶೇಷವಾಗಿರುತ್ತದೆಂಬದನ್ನು ಬ್ರಾಹ್ಮಣರೂ, ಬ್ರಾಹ್ಮಣವೃತ್ತಿಯ ಅನ್ಯವರ್ಣದವರೂ ಚನ್ನಾಗಿ

ಲಕ್ಷದಲ್ಲಿಡತಕ್ಕದ್ದು. ಆದರಲ್ಲಿ ಅದೂರದರ್ಶಿತ್ವದ, ಹಾಗು ಅವ್ಯವಸ್ಥೆಯ ಶಿಕ್ಷಣಾದಿಗಳಿಂದ ತಮ್ಮ ಹೆಣ್ಣುಮಕ್ಕಳು ಪುರುಷರ ಸಮಾನಸ್ಕಂಧರಾಗಬೇಕೆಂಬ ದುರ್ವಿಚಾರದಿಂದ, ಅವರಿಗೆ ಪುರುಷರ ಶಿಕ್ಷಣವನ್ನೇ ಕೊಡಹತ್ತಿ ಅವರ ಸ್ವೇಚ್ಛಾಚಾರಕ್ಕೆ ಆಸ್ಪದಮಾಡಿಕೊಟ್ಟರೆ, ಆ ಹೆಣ್ಣುಮಕ್ಕಳಲ್ಲಿ ದುರಹಂಕಾರವುಂಟಾಗಿ, ಅವರು ಕೈಗೆ ಹತ್ತದೆ, ದೇಶದಲ್ಲಿ ಸಾಹಸೀ ಸ್ತ್ರೀಯರ ಸಂಖ್ಯೆಯು ಹೆಚ್ಚಿ ಕುಟುಂಬಗಳ ವಿಘಾತವಾಗಿ, ವೈದಿಕ ಆರ್ಯಸಂಸ್ಕೃತಿಯು ನಷ್ಟವಾಗುತ್ತ ಹೋಗುವದರಲ್ಲಿ ಸಂಶಯವಿಲ್ಲ. ಪರರ ಸೊತ್ತಾದ ತಮ್ಮ ಹೆಣ್ಣುಮಕ್ಕಳನ್ನು ಯೋಗ್ಯರೀತಿಯಿಂದ ಸಂರಕ್ಷಿಸಿ, ಅವರನ್ನು ಶೀಲಸಂಪನ್ನೆಯರನ್ನಾಗಿಯೂ, ಯೋಗ್ಯ ಗೃಹಿಣಿಯರನ್ನಾಗಿಯೂ ಮಾಡಿ ಪರರ ಆ ಸೊತ್ತನ್ನು ಯಥಾಸ್ಥಿತವಾಗಿ ಪರರಿಗೆ ಒಪ್ಪಿಸಿ, ದೇಶದಲ್ಲಿ ಸುಖ–ಸೌಭಾಗ್ಯ–ಶಾಂತಿಗಳನ್ನುಂಟು ಮಾಡಿ, ತಾವು ಕೃತಾರ್ಥರಾಗಿ, ಧರ್ಮತಃ ತಾವು ಉಚ್ಚಲೋಕ ಪ್ರಾಪ್ತಿಯ ಅಧಿಕಾರವನ್ನು ಪಡೆಯದೆ, ತಮ್ಮ ಹೆಣ್ಣುಮಕ್ಕಳನ್ನು ಕೃತಕಶೀಲದವರನ್ನಾಗಿಯೂ, ಸ್ವೇಚ್ಛಾಚಾರಿಗಳನ್ನಾಗಿಯೂ ಮಾಡುವದು ಉಭಯಕುಲಗಳ ಅಧಃಪತನ ಹೇತುವಾಗುವದೇ ನಿಶ್ಚಯವೆಂದು ತಿಳಿಯತಕ್ಕದ್ದು. ಹೀಗೆ ಹೆಣ್ಣುಮಕ್ಕಳ ತಾಯಿತಂದೆಗಳು ವಿಚಾರಗೆಟ್ಟು ನಡೆದು, ತಮ್ಮ ಹೆಣ್ಣುಮಕ್ಕಳನ್ನು ಲಜ್ಜಾ–ಭಯ– ಶೀಲಭ್ರಷ್ಟರಾಗಮಾಡುವದು, ಬ್ರಾಹ್ಮಣರೆನಿಸಿ ಕೊಳ್ಳುವವರಿಗೂ, ಬ್ರಾಹ್ಮಣವೃತ್ತಿಯ ಅನ್ಯವರ್ಣದವರಿಗೂ ಸರ್ವಥಾ ಭೂಷಣವಲ್ಲವು. ಯಾಕಂದರೆ, ಪುರುಷರ ತೇಜಸ್ವಿತೆ, ಸ್ತ್ರೀಯರ ಪಾವಿತ್ರ್ಯಗಳ ಸಮ್ಮೇಲನದಿಂದ ಸುಖೋತ್ಪತ್ತಿ ಯಾಗಬೇಕೆಂಬ ಈಶ್ವರೀ ಸಂಕೇತಕ್ಕೆ, ಅರ್ಥಾತ್ ಸೃಷ್ಟಿಯ ನಿಯಮಕ್ಕೆ ಬಾಧೆ ತಂದು, ಸ್ತ್ರೀಯರನ್ನು ತೇಜಸ್ವಿಗಳಾಗಿ ಮಾಡಿದರೆ, ಉಭಯ ತೇಜಸ್ಸುಗಳ ತಿಕ್ಕಾಟದಲ್ಲಿ ಉಭಯರ ಪ್ರೇಮರಸವೂ ಸುಟ್ಟು ಅಟ್ಟಿಸಿಹೋಗಲು, ಜಗತ್ತಿನ ಉಚ್ಚ ಸುಖದ ನಾಶವಾಗಿ, ಪ್ರೇಮಸ್ವರೂಪನೂ, ಸುಖಸ್ವರೂಪನೂ ಆಗಿರುವ ಪರಮಾತ್ಮನ ದ್ರೋಹಸಂಪಾದನ ಮಾಡಿದಂತಾಗುವದೆಂತಲೂ ವಿವೇಕಿಗಳು ಪೂರಾ ಲಕ್ಷದಲ್ಲಿಡಬೇಕು.

**೯. ಬಾಲವಿವಾಹದ ಬಳಿಕ**— ಹೀಗೆ ತೇಜಸ್ಸುಗಳ ತಿಕ್ಕಾಟದಿಂದುಂಟಾದ ಅಗ್ನಿಯಿಂದ ಸ್ತ್ರೀಪುರುಷರಲ್ಲಿಯ ಪ್ರೇಮರಸವೇ ಅಟ್ಟಿಸಿಹೋದ ಬಳಿಕ, ಆ ಒಣ ದಾಂಪತ್ಯದಲ್ಲಿ ಸ್ವಾರಸ್ಯವೇನು ಉಳಿಯುವದು? ಇಂತಹ ಅನರ್ಥವು ಉಂಟಾಗಬಾರದೆಂತಲೇ ಸ್ಮೃತಿಕಾರರು, ಬ್ರಾಹ್ಮಣ ಸ್ತ್ರೀಯರಿಗೆ, ತಮ್ಮ ಮಾನಸಿಕ ಪಾವಿತ್ರ್ಯ ಕಾದುಕೊಳ್ಳಲು ಆಸ್ಪದವು ದೊರೆಯ ಬೇಕೆಂದು, ಬ್ರಾಹ್ಮಣರ ಉಪನಯನ ಕಾಲವಾದ ಎಂಟನೆಯ ವರ್ಷದ ವಯಸ್ಸಿನಲ್ಲಿಯೇ ಹೆಣ್ಣುಮಕ್ಕಳ ಲಗ್ನಮಾಡಿ, ಅವರಿಗೆ ಗುರುಕುಲವಾಸದ ಬದಲು, ಪತಿಗೃಹವಾಸವನ್ನು ಒದಗಿಸಿ ಕೊಡಬೇಕೆಂದು ಗೊತ್ತುಪಡಿಸಿದರು. ಇದರಿಂದ ಪರರ ಸೊತ್ತಾಗಿದ್ದ ತಮ್ಮ ಹೆಣ್ಣುಮಕ್ಕಳ ಸಂರಕ್ಷಣದ ಹೊರೆಯೂ ತಾಯಿತಂದೆಗಳ ತಲೆಯಮೇಲಿಂದ ಹೆಗಲಮೇಲೆ ಇಳಿದಂತಾಗಿ, ಆ ಪರರ ಸೊತ್ತಿನ ಸಂರಕ್ಷಣದ ಜವಾಬದಾರಿಯನ್ನು ಪರರೇ ವಹಿಸಲಿಕ್ಕೆ ಆಸ್ಪದ ಉಂಟುಮಾಡಿ ಕೊಟ್ಟಂತಾಗುವದು. ಇದೂ ಅಲ್ಲದೆ, ಬಾಲವಿವಾಹದಲ್ಲಿ ಇನ್ನೂ ಒಂದು ಉದಾತ್ತವಿಚಾರ ವಿರುವದು. ಹೆಣ್ಣುಮಕ್ಕಳನ್ನು ಪ್ರೌಢರಾಗುವವರೆಗೆ ಮನೆಯಲ್ಲಿಟ್ಟುಕೊಂಡರೆ, ಈಗಿನಂಥ

ಸ್ವೇಚ್ಛಾಚರಣೆಯ ಕಾಲದಲ್ಲಿ ಸ್ವೇಚ್ಛೆಯಿಂದ ಪ್ರೌಢರಾಗಿರುವ ಆ ಹೆಣ್ಣುಮಕ್ಕಳ ಮನಸ್ಸು, ಜಾತಿ, ಕುಲ, ಶೀಲಗಳ ಹಂಗು ಇಲ್ಲದೆ, ಸ್ವಾರ್ಥ ಮೂಲಕ ಬೇಕಾದ ತರುಣ ಸುಂದರನ ಕಡೆಗೆ ಹೋಗಬಹುದು; ಆದರೆ ಅವರು ಇಚ್ಛಿಸಿದ ಆ ಪುರುಷನೇ ಅವರಿಗೆ ಪತಿಯಾಗುವನೆಂದು ನಿಶ್ಚಯದಿಂದ ಹೇಳಲಾಗುವದಿಲ್ಲ; ಅಂದಬಳಿಕ ಅಂಥ ಹೆಣ್ಣುಮಕ್ಕಳಿಗೆ ಮಾನಸಿಕ ವ್ಯಭಿಚಾರ ದೋಷವು ತಟ್ಟಿ, ಅವರ ಮನಸ್ಸಿನ ಪಾವಿತ್ರ್ಯಕ್ಕೆ ಬಾಧೆಯುಂಟಾದರೆ ಆಶ್ಚರ್ಯವೇನು? ಆದರೆ ಇನ್ನೂ ಕಾಮೇಚ್ಛೆಯೇ ಉತ್ಪನ್ನವಾಗದಿರುವ ಎಂಟು ವರ್ಷದ ವಯಸ್ಸಿನ ಹೆಣ್ಣುಮಕ್ಕಳನ್ನು ಯೋಗ್ಯವರನಿಗೆ ಲಗ್ನಮಾಡಿಕೊಟ್ಟು, ಆಕೆಯನ್ನು ಆಕೆಯ ಪತಿಗೃಹಕ್ಕೆ ಕಳಿಸಿಬಿಟ್ಟರೆ, ಈ ಮಾನಸಿಕ ವ್ಯಭಿಚಾರದೋಷವೂ ತಪ್ಪಿದಂತಾಗುವದಲ್ಲದೆ, ಆ ಬಾಲ ವಧುವು ಅಪರಿಚಿತರಾದ ಅತ್ತೆಯ ಮನೆಯವರ ಮಧ್ಯದಲ್ಲಿ ನಯ–ಭಯ–ಭಕ್ತಿಗಳಿಂದ ತಪಸ್ವಿನಿಯಂತೆ ಸ್ವಾಭಾವಿಕವಾಗಿಯೇ ವ್ಯವಹರಿಸುವಾಗ, ಪತಿರಕ್ಷಕ ಸ್ತ್ರೀಯರಲ್ಲಿಯ ಸಾಧ್ವಿಯೋ, ಅಥವಾ ಸುವಿಚಾರಿಯೋ ಆಗುವ ಸಂಭವವು ವಿಶೇಷವಾಗಿರುತ್ತದೆ . ಇದಕ್ಕೆ ವಿರುದ್ಧವಾಗಿ, ಹೆಣ್ಣುಮಕ್ಕಳನ್ನು ಪ್ರೌಢರಾಗುವವರೆಗೆ ತವರ ಮನೆಯಲ್ಲಿಯೇ ಇಟ್ಟು ಕೊಂಡರೆ, ಅವರ ತವರ ಮನೆಯವರ ಯೋಗ್ಯತಾಹೀನತೆಯ ಮಾನದಂತೆ, ಅವರು ಪತಿಭಕ್ಷಕರಾದ ಸುಖಲೋಲುಪರಾಗಲಿ, ಸಾಹಸಿಗಳಾಗಲಿ ಆಗಲಿಕ್ಕೆ ಆಸ್ಪದವನ್ನುಂಟುಮಾಡಿ ಕೊಟ್ಟಂತಾಗುವದು! ಮಹಾಭಾರತದಲ್ಲಿ ಕೊಟ್ಟಿರುವ ನಳಚರಿತ್ರದಲ್ಲಿ ದಮಯಂತಿಯು ತಾನು ಮನಸಾ ಇಚ್ಛಿಸಿದ ನಳನನ್ನು ಲಗ್ನಮಾಡಿಕೊಳ್ಳಬೇಕಾದರೆ, ಎಷ್ಟು ಕಷ್ಟಪಡ ಬೇಕಾಯಿತು. ತನ್ನ ಎಂತಹ ಪ್ರಭಾವವನ್ನು ಪ್ರಕಟ ಮಾಡಬೇಕಾಯಿತು ಎಂಬದು ವಿಚಾರಮಾಡುವ ಹಾಗಿರುತ್ತದೆ. ನಳನು ಆಕೆಯ ಪತಿಯಾಗದೆ, ಅನ್ಯರು ಪತಿಯಾಗಿದ್ದರೆ ಆ ಸಾಧ್ವಿಯು ಮಾನಸಿಕ ವ್ಯಭಿಚಾರದೋಷಕ್ಕಾದರೂ ಗುರಿಯಾಗಬೇಕಾಗುತ್ತಿತ್ತು; ಅಥವಾ ನ್ಯಾಯವಾಗಿ ಆಕೆಯು ಆಜನ್ಮ ಬ್ರಹ್ಮಚರ್ಯವನ್ನಾದರೂ ಪಾಲಿಸಬೇಕಾಗುತ್ತಿತ್ತು; ಆದ್ದರಿಂದ ಇಂಥ ಅನರ್ಥಕ್ಕೆ ಆಸ್ಪದವು ಉಂಟಾಗಬಾರದೆಂತಲೇ ತಪಃಶೀಲರಾದ ಬ್ರಾಹ್ಮಣರು, ಈಗಿನಂಥ ವಿಷಯಾಸಕ್ತ ಕಾಲದ ಬಾಧೆ, ಪರದೇಶದ ಭಿನ್ನ ಭಿನ್ನ ಸಂಸ್ಕೃತಿಯವರ ಬಲಾತ್ಕಾರದ ಬಾಧೆ, ತಮ್ಮ ಅಶಕ್ತತೆ, ಲೋಕಾಪವಾದದ ಭಯ, ಮುಂತಾದ ಅನೇಕ ಕಾರಣಗಳಿಂದ ತಮ್ಮ ಸಮಾಜಕ್ಕೆ ಬಾಲವಿವಾಹವನ್ನೇ ಈ ಕಲಿಯುಗದಲ್ಲಿ ನಿತ್ಯವಾಗಿ ಬಳಿಕೆಯಲ್ಲಿ ತರುತ್ತ ಬಂದಿರುವರು. ಇವೇ ಬಾಧೆಗಳೇ ಬ್ರಾಹ್ಮಣೇತರರಿಗೂ ಬಾಧಕಗಳಾದದ್ದರಿಂದ ಅವಶ್ಯವಾಗಿ ಯಿಲ್ಲದಿದ್ದರೂ, ಐಚ್ಛಿಕವಾಗಿಯಾದರೂ ಬಾಲವಿವಾಹವು ಅವರಲ್ಲಿಯೂ, ಬಳಿಕೆಯಲ್ಲಿ ಬರುತ್ತ ಬಂದಿರುವದು.

**೧೦. ಬ್ರಾಹ್ಮಣವಧುವಿನ ವ್ರತಾಚರಣೆಯ ಮಹತ್ವ**— ಎಂಟು ವರ್ಷಕ್ಕೆ ಲಗ್ನಮಾಡುವ ದರಿಂದ, ಅಲ್ಪ ವಯಸ್ಸಿನಲ್ಲಿ ಸ್ತ್ರೀಪುರುಷ ಸಂಯೋಗವಾದ ಹಾನಿಯು ತಟ್ಟುವದೆಂದು ಪ್ರೌಢವಿವಾಹಾಭಿಮಾನಿಗಳು ವಾದಿಸುವದುಂಟು; ಆದರೆ ಪ್ರಾಮುಖ್ಯವಾಗಿ ಬ್ರಾಹ್ಮಣ ರಲ್ಲಿಯೇ ಬಾಲವಿವಾಹ ಮಾಡಬೇಕೆಂದು ನಿರ್ಬಂಧಪಡಿಸಿದ್ದ ಸ್ಮೃತಿಕಾರರು, ಆ ಹಾನಿಯನ್ನು

ಅರಿಯದಷ್ಟು ಮೂರ್ಖರಿದ್ದಿಲ್ಲ; ಆದರೆ ಕಾಲಮಹಿಮೆಯಿಂದ ಬರಬರುತ್ತ ಬ್ರಾಹ್ಮಣರು ವಿಷಯಾಸಕ್ತರಾಗುತ್ತ ಬಂದು, ಅವರಿಗೆ ಬ್ರಾಹ್ಮಣರಲ್ಲಿಯ ವ್ರತಾಚರಣೆಯ ವಿಸ್ಮೃತಿಯಾಗಿ ಹೋಗಲು, ಬ್ರಾಹ್ಮಣರಲ್ಲಿ ಅನರ್ಥಪರಂಪರೆಯು ಉಂಟಾಗುತ್ತ ಬಂದಿರುವದು; ಅದಕ್ಕೆ ಸ್ಮೃತ್ಯಾದಿ ಶಾಸ್ತ್ರಕಾರರಾದರೂ ಏನುಮಾಡಬೇಕು? ಶಾಸ್ತ್ರಕಾರರ ನಿರ್ಬಂಧದಂತೆ ಬ್ರಾಹ್ಮಣ ಬಾಲವಧುಗಳು ತಮ್ಮ ಲಗ್ನವಾದ ಐದು ವರ್ಷ ಮಂಗಲಗೌರಿಯ ವ್ರತವನ್ನೂ, ಹತ್ತು ವರ್ಷ ದಿವಸೀ ಗೌರಿಯವ್ರತವನ್ನೂ ಪಾಲಿಸುವ ಸಾಂಪ್ರದಾಯವು ಈಗಲೂ ಬ್ರಾಹ್ಮಣರಲ್ಲಿ ಇರುತ್ತದೆ; ಆದರೆ ಇಂತಹ ಯಾವದೊಂದು ಬಗೆ ವ್ರತಾಚರಣೆಯಿಂದ ಹತ್ತುವರ್ಷ ಆ ವಧುಗಳು ಬ್ರಹ್ಮಚರ್ಯವ್ರತ ಪಾಲಿಸುವದು ಮಾತ್ರ ನಿಂತುಹೋಗಿರುತ್ತದೆ! ಹಾಗಾಗದೆ ವಧುಗಳ ಬ್ರಹ್ಮಚರ್ಯಪಾಲನವನ್ನು ಬ್ರಾಹ್ಮಣರು ದಕ್ಷತೆಯಿಂದ ಬಳಿಕೆಯಲ್ಲಿ ತಂದಿದ್ದರೆ, ವಧುವಿಗೆ ಕನಿಷ್ಠ ಹದಿನೆಂಟುವರ್ಷ, ವರನಿಗೆ ಕನಿಷ್ಠ ಇಪ್ಪತ್ತೈದು ವರ್ಷ ವಯಸ್ಸಾಗಿ, ಈ ಅನರ್ಥವು ಸಹಜವಾಗಿ ತಪ್ಪುತ್ತಿತ್ತು; ಆದರೆ ವಿಷಯಾಸಕ್ತ ಬ್ರಾಹ್ಮಣರು, ವಧುವಿಗೆ ರಜೋದರ್ಶನವಾದ ಕೂಡಲೆ ನಿಷೇಕಪ್ರಸ್ತ ಮಾಡಿಕೊಳ್ಳಹತ್ತಿದ್ದರಿಂದ, ಅದೊಂದು ಸಾಂಪ್ರದಾಯವಾಗಿ ಕುಳಿತು ಕೂಸು ಎತ್ತಿಕೊಂಡು ಗೌರೀ ವ್ರತವನ್ನು ಪಾಲಿಸುವ ಲಾಂಛನಾಸ್ಪದವಾದ ನಾಚಿಕೆಗೇಡಿ ಪ್ರಸಂಗವು ಬಂದಿರುವದು! ಬ್ರಾಹ್ಮಣರ ಈ ಹೀನವಾದ ವಿಷಯಾಸಕ್ತಿಗೆ ಶಾಸ್ತ್ರಕಾರರಾದರೂ ಏನು ಮಾಡಬೇಕು? ಬ್ರಾಹ್ಮಣರ ಈ ವ್ರತಾಚರಣೆಯ ಹಾನಿಯಾಗುತ್ತ ಬಂದ ಮಾನದಿಂದ ಬ್ರಾಹ್ಮಣರಲ್ಲಿ–ಅರಣ್ಯಕರು, ನಾಗರಿಕರು, ಅಧಮರು, ಪತಿತರು ಎಂಬ ನಾಲ್ಕು ವರ್ಗಗಳು ಕ್ರಮದಿಂದ ಉಂಟಾಗುತ್ತ ಬಂದಿರುವವು. ವಶಿಷ್ಠ, ಯಾಜ್ಞವಲ್ಕ್ಯರಂಥ ಪ್ರಾಚೀನ ಋಷಿಗಳಂಥವರು, ತಪೋಮಯರಾದ ಅರಣ್ಯಕರು; ಭಾರತಕಾಲದ ದ್ರೋಣ–ಕೃಪರಂಥವರು ನಿಯತಬ್ರಹ್ಮಕರ್ಮನಿರತರಾದ ನಾಗರಿಕರು; ವಿಷಯ ತೃಷ್ಣೆಯಿಂದ ಬ್ರಹ್ಮಕರ್ಮಗಳನ್ನು ತ್ಯಜಿಸಿ ಪಶ್ಚಾತ್ತಾಪಪಡುವವರು ಅಧಮ ಬ್ರಾಹ್ಮಣರು; ಇವರಿಗೆ ದ್ವಿಜ ಬಂಧುಗಳೆಂತಲೂ ಅನ್ನುವರು. ಈ ದ್ವಿಜಬಂಧುಗಳಿಗೆ— ''ಸ್ತ್ರೀ ಶೂದ್ರ ದ್ವಿಜಬಂಧೂ ನಾಂತ್ರಯೀ ನಶ್ರುತಿಗೋಚರಾ'' ಎಂಬ ಸ್ಮೃತಿವಾಕ್ಯದಂತೆ, ವೇದಾಧಿಕಾರವಿಲ್ಲವು; ಇನ್ನು, ತಾವು ಬ್ರಹ್ಮಕರ್ಮವನ್ನು ತ್ಯಜಿಸಿದ ಪಶ್ಚಾತ್ತಾಪವು ಲೇಶವೂ ಇಲ್ಲದೆ, ಪ್ರಯತ್ನಪೂರ್ವಕ ಬ್ರಾಹ್ಮಣ್ಯವನ್ನು ನಷ್ಟಮಾಡತೊಡಗಿರುವ ದುಷ್ಟ ಬ್ರಾಹ್ಮಣರು ಪತಿತರು. ಈ ಪತಿತರಿಗೆ ವೇದಗಳೇ ನಿರರ್ಥಕವಾಗಿ ತೋರುತ್ತಿರುವಾಗ, ಅವರ ವೇದಾಧ್ಯಯನದ ಅಧಿಕಾರದ ವಿಚಾರವೇತಕ್ಕೆ? ಈಗಿನ ಕಾಲದಲ್ಲಿ ಅರಣ್ಯಕರು ಗುಪ್ತರೂ, ನಾಗರಿಕರು ಅಲ್ಲೊಬ್ಬರು ಇಲ್ಲೊಬ್ಬರು ಆಗಿ, ಅಧಮ–ಪತಿತ ಬ್ರಾಹ್ಮಣರ ವ್ಯವಹಾರಗಳೇ ಎಲ್ಲ ಕಡೆಗೆ ಕಣ್ಣಿಗೆ ಬೀಳುತ್ತಿರುವದರಿಂದ, ದಿನದಿನಕ್ಕೆ ಬ್ರಾಹ್ಮಣರ ವ್ರತಾಚರಣೆಯ ಹಾನಿಯಾಗಿ, ದಿನದಿನಕ್ಕೆ ಬ್ರಾಹ್ಮಣ್ಯವು ನಷ್ಟವಾಗುತ್ತ ನಡೆದಿದ್ದರೆ ಆಶ್ಚರ್ಯವೇನು? ಬಾಲವಿವಾಹ ಮಾಡುವ ಬ್ರಾಹ್ಮಣರೇ ಆಗಲಿ, ಬ್ರಾಹ್ಮಣೇತರರೇ ಆಗಲಿ ತಮ್ಮ ತಮ್ಮ ಧರ್ಮಗಳಲ್ಲಿ ಹೇಳಿರುವಂತೆ ಪ್ರೌಢರಾಗುವವರೆಗೆ ಬ್ರಹ್ಮಚರ್ಯದಿಂದ ವ್ರತಗಳನ್ನು

ಪಾಲಿಸದಿದ್ದರೆ, ಬಾಲ–ಪ್ರೌಢವಿವಾಹ ಗಳೆರಡರಿಂದಲೂ ಹಾನಿಯು ತಪ್ಪದೆಂಬದನ್ನು ಎಲ್ಲರೂ ಲಕ್ಷದಲ್ಲಿಡತಕ್ಕದ್ದು.

**೧೧. ಕ್ಷೇತ್ರ–ಬೀಜಗಳ ಶುದ್ಧಿಯು**— ವಾಸ್ತವವಾಗಿ ಬ್ರಾಹ್ಮಣರಾಗಲಿ, ಬ್ರಾಹ್ಮಣೇತರ ರಾಗಲಿ ಯೋಗ್ಯ ಸಂತತಿಗಾಗಿ ಲಗ್ನಮಾಡಿಕೊಳ್ಳಬೇಕಲ್ಲದೆ, ಯಥೇಚ್ಛ ವಿಷಯ ಸುಖ ಭೋಗಕ್ಕಾಗಿ ಲಗ್ನಮಾಡಿಕೊಳ್ಳತಕ್ಕದ್ದಲ್ಲ. ಯೋಗ್ಯ ಸಂತತಿಯು, ಕ್ಷೇತ್ರಶುದ್ಧಿ– ಬೀಜಶುದ್ಧಿಗಳ ಹೊರತು ಆಗಲಾರದು; ಅವೆರಡರ ಶುದ್ಧಿಯು ಆಗಲಿಕ್ಕೆ ಸ್ತ್ರೀಪುರುಷರಿಬ್ಬರೂ ಮೇಲೆ ಹೇಳಿದಂತೆ ಬ್ರಹ್ಮಚರ್ಯಾಚರಣೆಯಿಂದ ಯಾವದೊಂದು ವ್ರತವನ್ನು ಆಚರಿಸ ಬೇಕಾಗುವದು. ಭಗವಾನ್ ವೇದವ್ಯಾಸರ ಸೂಚನೆಯಂತೆ, ಅವರ ತಾಯಿಯಾದ ಸತ್ಯವತಿಯು, ತನ್ನ ಇಬ್ಬರು ಸೊಸೆಯಂದಿರಿಂದ ಒಂದು ವರ್ಷ ವ್ರತಾಚರಣ ಮಾಡಿಸದೆ, ಅವರಲ್ಲಿ ತತ್ಕಾಲ ಆ ವ್ಯಾಸರಿಂದ ಸಂತತಿ ಉತ್ಪನ್ನ ಮಾಡಿಸಲು, ಬೀಜದ ಪ್ರಭಾವದಿಂದ ಧೃತರಾಷ್ಟ್ರ–ಪಾಂಡುಗಳೆಂಬವರು ಮಹಾ ಸಮರ್ಥರಾಗಿ ಹುಟ್ಟಿದರೂ, ಕ್ಷೇತ್ರಶುದ್ಧಿಯಿಲ್ಲ ದ್ದರಿಂದ, ಧೃತರಾಷ್ಟ್ರನು ಹುಟ್ಟುಕುರುಡನೂ, ಪಾಂಡುವು ಪಾಂಡುರೋಗಿಯೂ ಆದರು. ಇಂತಹ ಕ್ಷೇತ್ರಶುದ್ಧಿ–ಬೀಜ ಶುದ್ಧಿಗಳು, ಬ್ರಾಹ್ಮಣರ ತಪೋಹಾನಿಯ ಮೂಲಕ ಆಗದಾಗಲು, ಬ್ರಾಹ್ಮಣರ ಸಂತತಿಯು ಬ್ರಹ್ಮ ತೇಜೋವಿಹೀನವಾಗುತ್ತ ಬಂದಿರುವದು. ಪ್ರಾಚೀನ ಕಾಲದ ಋಷಿಗಳ ಬೀಜ–ಕ್ಷೇತ್ರಗಳೆರಡೂ ಪರಿಶುದ್ಧವಾಗಿರುತ್ತಿದ್ದದ್ದರಿಂದ, ಅವರ ಸಂತತಿಯು ಮಹಾ ಬ್ರಹ್ಮ ತೇಜಸ್ವಿಯೇ ಆಗುತ್ತಿತ್ತು, ಉದಾಹರಣಾರ್ಥ–ಅಗಸ್ತ್ಯರು ಲೋಕಸುಂದರಿಯಾದ ಕ್ಷತ್ರಿಯ ರಾಜಪುತ್ರಿ ಲೋಪಾಮುದ್ರೆಯನ್ನು ಆಕೆಯ ಪ್ರೌಢವಯಸ್ಸಿನಲ್ಲಿ ಲಗ್ನವಾಗಿದ್ದರೂ, ತಪೋಮಗ್ನರಾದ ಅವರು, ಬಹು ದಿವಸಗಳಾದರೂ ಲೋಪಾಮುದ್ರೆಯ ಸಂಗವನ್ನು ಇಚ್ಛಿಸಲಿಲ್ಲ; ಲೋಪಾಮುದ್ರೆಯಾದರೂ ಮನಸ್ಸಿನ ಯಾವ ವಿಕಾರಕ್ಕೂ ಒಳಗಾಗದೆ, ಪತಿಯ ತಪಶ್ಚರ್ಯಕ್ಕೆ ಸಹಾಯಮಾಡುತ್ತ ತಾನೂ ಏಕನಿಷ್ಠೆಯಿಂದ ತಪಸ್ವಿನಿಯೇ ಆಗಿದ್ದಳು! ಆಕೆಯ ತಪಶ್ಚರ್ಯಕ್ಕೆ ಪ್ರಸನ್ನರಾದ ಅಗಸ್ತ್ಯರು, ಲೋಪಾಮುದ್ರೆಯ ಇಚ್ಛೆಯಂತೆ ''ಇಧ್ಮವಾಹನ'' ಎಂಬ ಹೆಸರಿನ ಒಂದೇ ಒಂದು ಸಂತತಿಯನ್ನು ಉತ್ಪನ್ನಮಾಡಿದರು. ಈ ಅದ್ಭುತ ಸಂಗತಿಯು, ಭಾರತದಲ್ಲಿ ಸವಿಸ್ತರ ವರ್ಣಿಸಲ್ಪಟ್ಟಿರುವದು. ಒಟ್ಟಿಗೆ, ಈಗಿನ ಬ್ರಾಹ್ಮಣರ, ಅಥವಾ ಬ್ರಾಹ್ಮಣೇತರರ ಅವನತಿಯು, ಬಾಲವಿವಾಹ ದಿಂದಾಗಲಿ, ಪ್ರೌಢವಿವಾಹದಿಂದಾಗಲಿ ಆಗಿರದೆ, ಅವರ ತಪೋಹಾನಿಯಿಂದ ಆಗಿರುತ್ತದೆಂದು ನಿಶ್ಚಯವಾಗಿ ತಿಳಿಯತಕ್ಕದ್ದು.

**೧೨. ತಪ್ಪು ತಿಳುವಳಿಕೆ** —ಹೀಗೆ ತಪೋಹಾನಿಯಿಂದ ಆದ ದುಷ್ಪರಿಣಾಮವನ್ನು ಬಾಲವಿವಾಹದ ಮೇಲೆಯೂ, ಸ್ವಚ್ಛಂದಾಚರಣೆಯಿಂದಾಗುವ ದುಷ್ಪರಿಣಾಮವನ್ನು ಪ್ರೌಢವಿವಾಹದ ಮೇಲೆಯೂ ಹೊರಿಸಿ, ತಪಸ್ವಿತೆಯನ್ನು ದುರ್ಲಕ್ಷಿಸಿ ಎಲ್ಲರೂ ಪ್ರೌಢವಿವಾಹ ಮಾಡಿಕೊಳ್ಳಬೇಕೆಂದಾಗಲಿ, ಎಲ್ಲರೂ ಬಾಲವಿವಾಹ ಮಾಡಿಕೊಳ್ಳಬೇಕೆಂದಾಗಲಿ ಆಗ್ರಹ ಪಟ್ಟರೆ, ರಾಷ್ಟ್ರದಲ್ಲಿ ಕ್ರಮವಾಗಿ ತೇಜೋಹಾನಿ–ಪಾವಿತ್ರ್ಯ ಹಾನಿಗಳೆರಡೂ ಆಗಿ, ರಾಷ್ಟ್ರದ

ಗೌರವವೇ ನಷ್ಟವಾಗುವದು. ರಾಷ್ಟ್ರದ ಸೌಭಾಗ್ಯ–ಸುರಕ್ಷಿತತೆಗಳಿಗಾಗಿ, ಸಾತ್ವಿಕ ತಪೋಮೂಲವಾದ ಪಾವಿತ್ರ್ಯವೂ, ರಾಜಸತಪೋಮೂಲವಾದ ತೇಜಸ್ವಿತೆಯೂ ಅವಶ್ಯವಾಗಿ ಬೇಕಾಗುವವು. ಆದ್ದರಿಂದ ರಾಷ್ಟ್ರಾಧಿಪತಿಗಳು ರಾಷ್ಟ್ರದಲ್ಲಿ ಬಾಲವಿವಾಹವು ಸಾತ್ವಿಕ ತಪೋಮೂಲಕವಾಗಿಯೂ, ಪ್ರೌಢವಿವಾಹವು ನಿಯತಾಚರಣೆಯ ರಾಜಸತಪೋಮೂಲಕವಾಗಿಯೂ ಆಗುವಂತೆ ಪ್ರಯತ್ನಪಡತಕ್ಕದ್ದು; ಮತ್ತು ಇವೆರಡೂ ಬಗೆಯ ವಿವಾಹಗಳಲ್ಲಿ ವಿಷಯಾಸಕ್ತಿಯು ಹೆಚ್ಚದಂತೆ ಅವರು ದಕ್ಷತೆಯಿಂದ ವ್ಯವಸ್ಥೆ ಮಾಡತಕ್ಕದ್ದು. ಅದಕ್ಕಾಗಿ ಮನಸ್ಸೆಂಬ ಖೊಟ್ಟಿ ಕುದುರೆಗೆ, ಅದರ ಖೊಟ್ಟಿತನದ, ಹಾಗು ಅದನ್ನು ಹತ್ತುವವರ ಯೋಗ್ಯತೆಯ ತಾರತಮ್ಯವರಿತು, ಅದರ ಸೋಟಿಗೆ ಹಗ್ಗವನ್ನಾದರೂ ಹಚ್ಚಬೇಕು; ಅದಕ್ಕೆ ಸಾದಾ ಲಗಾಮವನ್ನಾದರೂ ಹಾಕಬೇಕು; ಅಥವಾ ಅದಕ್ಕೆ ಮುಳ್ಳ ಲಗಾಮವನ್ನಾದರೂ ಹಾಕಬೇಕು. ಹೀಗೆ ಆ ಮನೋರೂಪ ಖೊಟ್ಟಿ ಕುದುರೆಗೆ ಯಾವದೊಂದು ಬಗೆಯ ಪ್ರತಿಬಂಧವನ್ನು ಮಾಡದೆ, ಅದರ ಆಯಾಲದ ಕೂದಲುಗಳನ್ನಾದರೂ ತಾವು ಗಟ್ಟಿಯಾಗಿ ಹಿಡಿದುಕೊಳ್ಳದೆ, ಅದನ್ನು ವಿಷಯಾರಣ್ಯದಲ್ಲಿ ಯಥೇಚ್ಛ ಸಂಚರಿಸಗೊಟ್ಟು, ತಾವು ಅದರ ಮೇಲೆ ಚಪ್ಪಾಳೆ ಬಾರಿಸುತ್ತ ಚಕ್ಕಂದದಿಂದ ನಗುತ್ತ ಕುಳಿತುಕೊಳ್ಳಬೇಕೆನ್ನುವ ಸ್ತ್ರೀಪುರುಷರಿಬ್ಬರೂ, ಪರಮದುಷ್ಟರೂ ಪರಮಸಾಹಸಿಗಳೂ, ಆತ್ಮಘಾತಕಿಗಳೂ, ಗಾವಿಲರೂ ಎಂದು ತಿಳಿಯತಕ್ಕದ್ದು.

ಈ ಮೇರೆಗೆ ನುಡಿದು ಶ್ರೀಮುರಗೀಶ ಗುರುವರನು ಸುಮ್ಮನಾಗುತ್ತಿರಲು, ರಣಹುಚ್ಚಿಯು ಎದ್ದುನಿಂತು, ಶ್ರೀ ಗುರುವರನೆದುರಿಗೆ ಕೈಜೋಡಿಸಿ ನಿಂತುಕೊಂಡಳು. ಆಗ ಆಕೆಯ ಕಣ್ಣುಗಳೊಳಗಿಂದ ನೀರುಗಳು ಬಳಬಳ ಸುರಿಯಹತ್ತಿದವು; ಆಕೆಯ ಮುಖದಿಂದ ಅಕ್ಷರಗಳು ಹೊರಡದಾದವು; ಆಕೆಯ ಕುತ್ತಿಗೆಯ ಶಿರಗಳು ಬಿಗಿದವು. ಆಕೆಯು ಬಹು ಕಷ್ಟದಿಂದ ಗುರುವರನಿಗೆ—''ಗುರುದೇವಾ, ಕಲ್ಯಾಣಕಾರಕಗಳಾದ ನಿನ್ನ ಉಪದೇಶ ವಚನಗಳನ್ನು ಕೇಳಿ, ನನ್ನ ದೋಷಗಳು ನನ್ನ ಕಣ್ಣಿಗೆ ಕಟ್ಟಿದವು; ಆದರೆ ''ಅಂಕೆಯಿಲ್ಲದ ಕಪಿಯು ಲಂಕೆ ಸುಟ್ಟಿತೆಂಬಂ''ತೆ ಯಾರ ಅಥವಾ ಯಾತರ ಅಳಕೂ ಇಲ್ಲದ ಸ್ವೇಚ್ಛಾಚಾರಿ ಯಾದ ನಾನು, ಮನಬಂದಂತೆ ಪ್ರತಿಜ್ಞೆಮಾಡಿ, ಮನಬಂದಂತೆ ಕುಣಿದು ಪರಮ ದುಷ್ಟಳೂ, ಪರಮಸಾಹಸಿಯೂ, ಆತ್ಮಘಾತಕಿಯೂ, ಗಾವಿಲಳೂ ಆದೆನು. ಈ ಸ್ಥಿತಿಯಲ್ಲಿ ನಾನು ಬದುಕಿ ಮಾಡುವದಾದರೂ ಏನು? ಹಾಹಾ! ಗುರುದೇವಾ, ನಿನ್ನ ಈ ಪವಿತ್ರ ಚರಣತೀರ್ಥದೆಡೆಯಲ್ಲಿಯೇ ನನ್ನ ದೇಹಪಾತವಾಗಿ ಹೋಗಲಿ.'' ಎಂದು ನುಡಿಯುತ್ತಿರುವಾಗ, ಆ ನಿರ್ಮಲಾಂತಃಕರಣದವಳು ಅಕಸ್ಮಾತ್ ಪ್ರಜ್ಞೆತಪ್ಪಿ ನೆಲಕ್ಕೆ ಬಿದ್ದವಳು ಬಿದ್ದುಬಿಟ್ಟಳು! ಎಷ್ಟು ಉಪಚರಿಸಿದರೂ ಆಕೆಗೆ ಎಚ್ಚರವೇ ಆಗಲಿಲ್ಲ. ಆಗ ಶ್ರೀ ಮುರಗೀಶಗುರುವರನು ಸಾಧ್ವೀ ಶ್ರೀಮತಿಯನ್ನು ಕುರಿತು—''ಶ್ರೀಮತೀ, ಈ ಅನುತಪ್ತ ಹೃದಯದ ರಣಹುಚ್ಚಿಯು, ನಾಳಿನ ಸಂಜೆಯವರೆಗೆ ಹೀಗೆಯೇ ಪ್ರಜ್ಞೆತಪ್ಪಿ ಮಲಗಿ ಕೊಳ್ಳತಕ್ಕವಳು. ಹಾಗೆ ಆಕೆ ಮಲಗಿ ಕೊಳ್ಳುವದರಲ್ಲಿಯೇ ಆಕೆಯ ಹಿತವಿರುತ್ತದೆ; ಆಕೆಯ ಜೀವಕ್ಕೆ ಸರ್ವಥಾ ಭಯವಿಲ್ಲ.

ಶ್ರೀಮತೀ, ಈಗ ಅನಾಥಳಾಗಿ ನಿನ್ನ ಕೈ ಸೇರಿರುವ ಈ ನಿರ್ಮಲಾಂತಃಕರಣದ ಕುಮಾರಿಕೆಗೆ, ನಿನಗಿಂತ ಹೆಚ್ಚಿನ ಹಿತಕರ್ತೃಗಳು ಯಾರಿರುವರು? ಸಾಧ್ವೀ, ನಾನು ಮತ್ತೆ ಬರುವೆನು; ಶಿವನ ಸಂಸಾರವು ಅದಕ್ಕೆ ಮೊದಲು–ಕಡೆಗಳಲ್ಲಿ'' ಎಂದು ನುಡಿದು, ಆ ಮಹಾತ್ಮನು ಆ ಅಂತರ್ಗೃಹದಿಂದ ಹೊರಟಾತನು, ಹೊರಟೇ ಹೋಗಿಬಿಟ್ಟನು; ತಿರುಗಿ ಯಾರು ಎಷ್ಟು ಹುಡುಕಿದರೂ ಆತನ ಗೊತ್ತೇಹತ್ತಲಿಲ್ಲ!

# ಭಯಂಕರ ದಿವ್ಯ

ಮರುದಿನ ಹೊತ್ತು ಮುಣುಗುವ ಸಮಯ, ಹೊರಗೆ ಒಂದು ತಾಸು ಹೊತ್ತು ಇದ್ದರೆ ಇರಬಹುದು. ಶ್ರೀಮುರುಗೀಶ ಗುರುವರನು ಹೇಳಿದಂತೆ ರಣಹುಚ್ಚಿಗೆ ಎಚ್ಚರವಾಗುವ ಹಾದಿಯನ್ನು ಶ್ರೀಮತಿಯು ಒಂದೇಸವನೆ ನೋಡುತ್ತಿದ್ದಳು; ಅಷ್ಟರಲ್ಲಿ ದಳವಾಯಿ ಮುದ್ದನೂ ಅಲ್ಲಿಗೆ ಬಂದನು. ಅವರೆಲ್ಲರಿಗೂ ಸತ್ಸಮಾಗಮವು ಅಕಸ್ಮಾತ್ ಅಂತರಿಸಿದ್ದರಿಂದ ಒಂದು ಬಗೆಯ ಚಡಪಡಿಕೆಯಾದಂತಾಗಿತ್ತು, ಅವರ ಮನಸ್ಸಿನ ಮೇಲೆ ಶ್ರೀಗುರುಬೋಧದ ವಿಲಕ್ಷಣ ಪರಿಣಾಮವಾದದ್ದರಿಂದ, ಅವರವರ ಮನಸ್ಸುಗಳು ಭಿನ್ನ ಭಿನ್ನ ವೃತ್ತಿಗಳನ್ನು ತಾಳುವಾಗ, ಪ್ರಸವವೇದನೆ ಹೊಂದುವಂತೆ ವ್ಯಥಿತಗಳೂ ಆಗಿದ್ದವು. ಸೂಕ್ಷ್ಮ ರಾಜಕಾರಣದಲ್ಲಿ ಸಿಕ್ಕಿದ್ದ ದಳವಾಯಿ ಮುದ್ದನು, ಹಲವು ಕೆಲಸಗಳನ್ನು ಮಾಡಬೇಕಾಗಿತ್ತು, ತನ್ನ ಕೈಸೇರಿದ ತನ್ನ ವೈರಿಗಳಾಗಿದ್ದ ರಣಹುಚ್ಚಿ, ದಳವಾಯಿ ಭರಮ ಇವರ ವ್ಯವಸ್ಥೆಯೇನು ಮಾಡಬೇಕೆಂಬ ಯೋಚನೆಯಲ್ಲಿ ಆತನು ಮಗ್ನನಾಗಿದ್ದನು. ಅವರಿಬ್ಬರನ್ನು ಉಪಾಯದಿಂದ ನಾಶಮಾಡಿ ಬಿಟ್ಟರೆ, ತಾನು ನಿಶ್ಚಿಂತನಾಗಬಹುದೆಂದು ಆತನು ಭಾವಿಸಿದ್ದನು; ಆದರೆ ಮಹಾಪುರುಷ ಸಹವಾಸದ ಸತ್ಪರಿಣಾಮವು ಆತನ ಮನಸ್ಸಿನ ಮೇಲೆ ಆದದ್ದು ಇನ್ನೂ ಅಚ್ಚಳಿಯದೆ ಇದ್ದದ್ದರಿಂದ, ಅವರಿಬ್ಬರ ಕೊಲೆ ಮಾಡಿಸಲಿಕ್ಕೆ ಆತನ ಮನಸ್ಸು ಮುಂದುವರಿಯದಾಯಿತು. ಹೀಗೆ ಮನಸ್ಸಿನ ರೂಪಾಂತರವಾಗುವಾಗ ಅದೊಂದು ಸೂಕ್ಷ್ಮ ಜನ್ಮಾಂತರವೇ ಆದಂತಾಗಿ, ಮನುಷ್ಯನು ಜನನ ಮರಣವ್ಯಥೆಯಂತಹ ಒಂದು ಬಗೆಯ ವ್ಯಥೆಪಡಬೇಕಾಗುವದು. ಸತ್ಸಮಾಗಮವಾಗುವ ಮೊದಲು; ಮುದ್ದನು ಮಾಡಬಾರದ್ದನ್ನಾದರೂ ಮಾಡಿ ತನ್ನ ಕಾರ್ಯವನ್ನು ಸಾಧಿಸಿಕೊಳ್ಳುತ್ತ ಬಂದಿದ್ದನು; ಆದರೆ ಈಗ ಆತನಲ್ಲಾಗಿದ್ದ ವಿವೇಕೋದಯವು ಆತನನ್ನು ಅಡ್ಡ ಹಾದಿಯ ಹಿಡಿಯಗೊಡದಾಯಿತು. ಈಗ ಮುದ್ದನು ವಿವೇಕದ ಮಾತು ಕೇಳದಷ್ಟು ದುರ್ಜನನೂ ಆಗಿದ್ದಿಲ್ಲ; ವಿವೇಕದ ಹಾದಿಯನ್ನು ತಟ್ಟನೆ ಹಿಡಿದು ಸಾಗುವಷ್ಟು ಸಜ್ಜನನೂ ಆಗಿದ್ದಿಲ್ಲ. ಆಗಿನ ಆ ಅತಂತ್ರ ಸ್ಥಿತಿಯು ಆತನ ಕಾರ್ಯಹಾನಿಯನ್ನು ಮಾಡತೊಡಗಿತು; ಇನ್ನು ಮುಂದೆ ತಾನು ಏನು ಮಾಡಬೇಕೆಂಬದನ್ನು ಕುರಿತು ಆಲೋಚಿಸು ವದಕ್ಕಾಗಿಯೇ ಆತನು ಈಗ ಶ್ರೀಮತಿಯ ಬಳಿಗೆ ಬಂದಿದ್ದನು. ಶ್ರೀಮತಿಯು ತನ್ನ ಎಂದಿನ

ಪದ್ಧತಿಯಂತೆ ಪತಿಯನ್ನು ಬರಮಾಡಿಕೊಂಡು, ಯೋಗ್ಯಾಸನದಲ್ಲಿ ಕುಳ್ಳಿರಿಸಿ, ಆತನ ಯೋಗಕ್ಷೇಮವ ವಿಚಾರಿಸಿದ ಬಳಿಕ ಪತಿಯನ್ನು ಕುರಿತು—

ಶ್ರೀಮತಿ—ವೀರವರ, ದಳವಾಯಿ ಭರಮಪ್ಪನ ಸುದ್ದಿಯೇನು? ಈ ಹುಚ್ಚಮ್ಮನಿಗೆ ಇನ್ನೂ ಎಚ್ಚರವಾಗಲೊಲ್ಲದಲ್ಲ! ಈಕೆ ಎಚ್ಚತ್ತ ಬಳಿಕ ಈಕೆಯ ವ್ಯವಸ್ಥೆ ಏನುಮಾಡಬೇಕು?

ಮುದ್ದ – ಈಗ ಎದ್ದಾಳು; ದೊಡ್ಡವರ ಮಾತು ಸುಳ್ಳು ಹೇಗಾಗುವದು? ಈ ರಣಹುಚ್ಚಿಯ ಮಾತೇನು? ನೀನು ಈಕೆಯನ್ನು ನಿನ್ನ ದಾಸೀವರ್ಗದಲ್ಲಿ ಸೇರಿಸಿಕೊಂಡು ಬಿಟ್ಟರೆ, ನಿನ್ನ ಸೇವಾ ಚಾಕರಿಮಾಡಿಕೊಂಡು ಇರುವಳು; ಆದರೆ ಮೊದಲು ನಾವು ದಳವಾಯಿ ಭರಮನ ಶಾಸನಮಾಡಿ, ಇನ್ನು ಆತನು ರಾಜಕರಣದಲ್ಲಿ ತಲೆ ಎತ್ತದಂತೆ ಮಾಡಬೇಕಾಗಿದೆ. ಅದಕ್ಕೇನು ಮಾಡಹೇಳುತ್ತೀ ಹೇಳು.

ಶ್ರೀಮತಿ – ಹೌದು. ತಮ್ಮ ಮಾತು ಸತ್ಯವು, ಭರಮಪ್ಪನಿಗೆ ದ್ವಂದ್ವ ಯುದ್ಧದ ಪಣ ಒಡ್ಡಿದರೆ ಹೇಗೆ? ಮಲ್ಲಯುದ್ಧದಲ್ಲಿ ಬಲಿಷ್ಠನಾದವನು ದುರ್ಬಲನನ್ನು ಕೊಲ್ಲಬೇಕೆಂದು ನಿರ್ಬಂಧಪಡಿಸಿದರಾಯಿತು. ನಮ್ಮಲ್ಲಿಯ ಸಂಕಮಲ್ಲನು ಮಹಾಪ್ರಸಿದ್ಧನಲ್ಲವೆ? ಆತನಿಂದ ಭರಮನ ಮುಳ್ಳು ಮುರಿದು ಹೋದರೆ ಅಪಕೀರ್ತಿಬಾರದ ಕೆಲಸವಾಗಿ ಹೋಗುವದಲ್ಲ!

ಮುದ್ದ—ನೀನು ಹೇಳುವದು ಸಮರ್ಪಕವು; ಆದರೆ ಮಲ್ಲಯುದ್ಧದಲ್ಲಿ ಲಾಗವು ಯಾರ ಮನೆಯದು? ಭರಮನಾದರೂ ಸಾಮಾನ್ಯ ಬಲಿಷ್ಠನಲ್ಲ; ಸಂಕನ ಸರಿಜೋಡಿಯವನು! ಅಂದಬಳಿಕ ಭರಮನೇ ಸಂಕನನ್ನು ಕೊಂದು ಬಿಟ್ಟರೆ, ಮಾತಾಡಿದಂತೆ ದಳವಾಯಿ ಭರಮನನ್ನು ಬಂಧಮುಕ್ತಮಾಡಿ ಬಿಟ್ಟುಬಿಡಬೇಕಾಗುವದಲ್ಲ! ಒಟ್ಟಿಗೆ, ಯಾವ ಮಾತೂ ಬಗೆಹರಿಯ ದಾಗಿದೆ; ಅಥವಾ ಭರಮನ ನಾಶಮಾಡುವದಕ್ಕಾಗಿ ಇಷ್ಟು ವಿಚಾರವಾದರೂ ಏತಕ್ಕೆ? ಹಿಂದೆ ನಾನು ದುರ್ಗದ ಇಬ್ಬರು ನಾಯಕರ ಕೊಲೆಮಾಡಿಸಿದಂತೆ ಕ್ಷಣದಲ್ಲಿ ಭರಮನ ಕೊಲೆ ಮಾಡಿಸಿಬಿಡುತ್ತಿದ್ದೆನು; ಆದರೆ ಶ್ರೀ ಮುರುಗೀಶ ಗುರುವರನ ಶಿಷ್ಯನೆನಿಸಿದ ನನಗೆ, ಹಾಗೆ ಮಾಡಲಿಕ್ಕೆ ಈಗ ಮನಸ್ಸೇ ಆಗಲೊಲ್ಲದಲ್ಲ! ಆದ್ದರಿಂದ ಭರಮನ ನಾಶ ಮಾಡಿದರೂ ರಾಜನೀತಿಯಿಂದಲೇ ಆತನ ನಾಶಮಾಡಬೇಕಾಗಿದೆ! ಆದರೆ, ಶ್ರೀಮತೀ, ಈ ಹೇಸಿ ರಾಜಕಾರಣದ ರಾಡಿ ಸಾಕು, ನಡೆ, ಎತ್ತಾದರೂ ನಾವಿಬ್ಬರೂ ಹೋಗಿ ಶಿವಪೂಜೆಯಲ್ಲಿ ಕಾಲಹರಣ ಮಾಡುತ್ತ ಇದ್ದುಬಿಡೋಣ.

ಶ್ರೀಮತಿ—ಹೌದು, ನಾಥಾ ನನಗಾದರೂ ಹೀಗೆಯೇ ಮನಸ್ಸಾಗುತ್ತದೆ; ಆದರೆ ಶಿವಪೂಜೆಯಾದರೂ ಏನು ಸುಸೂತ್ರ, ಏನು ಸುಲಭ! ಶಿವನಾಗಿ ಶಿವನನ್ನು ಪೂಜಿಸಬೇಕೆಂಬ ಮಾತೇನು ಸುಲಭವೇ? ಈಗ ರಾಜಕಾರಣಕ್ಕೆ ಎದೆಗೊಟ್ಟು ನಿಂತು ಸಜ್ಜನ ಸಮ್ಮತವಾಗಿ ಅದನ್ನು ಬಗೆಹರಿಸಲಾರದೆ, ಶಿವಪೂಜೆಯ ಕಡೆಗೆ ಓಡಿಹೋಗಬೇಕೆನ್ನುವ ನಮ್ಮ ಮಂಗ ಮನಸ್ಸು, ಸಜ್ಜನ ಸಮ್ಮತವಾಗಿ ಶಿವಪೂಜೆ ಮಾಡಲಾರದೆ ಮತ್ತಾವ ಕಡೆಗಾದರೂ ಹೋಗಹತ್ತಿದರೆ ಮಾಡುವದೇನು? ಆದ್ದರಿಂದ ಪಡೆದದ್ದು ಉಣ್ಣಬೇಕೆಂಬಂತೆ, ನಾವು ಪಡೆದಿದ್ದ ರಾಜಕಾರಣದ ರಾಡಿಯಲ್ಲಿಯೇ ಸಜ್ಜನಸಮ್ಮತವಾಗಿ ವ್ಯವಹರಿಸುತ್ತಲಿರೋಣ; ಅಂದರೆ, ನಮ್ಮ ಕೈ ಹಿಡಿದಿದ್ದ ಸದ್ಗುರುನಾಥನು ನಮ್ಮನ್ನು ಯಾವ ದಂಡೆಗಾದರೂ ಹಚ್ಚಿಯೇ

ಹಚ್ಚುವನು; ಆದ್ದರಿಂದ ನಾವು ಗಟ್ಟಿಯಾಗಿ ಗುರುಚರಣವನ್ನೇ ನಂಬಿ, ತೇಲಲಿ ಮುಣುಗಲಿ, ರಾಜಕಾರಣದಲ್ಲಿಯೇ ಮುಂದಕ್ಕೆ ಹೆಜ್ಜೆಯಿಡೋಣ!

ಮುದ್ದ— (ನಿಶ್ಚಯ ಬುದ್ಧಿಯಿಂದ) ಶ್ರೀಮತೀ, ಹಾಗೆಯೇ ಮಾಡೋಣ; ನಿನ್ನ ಮಾತೇ ಯೋಗ್ಯವು; ಇನ್ನು ನಾನು ರಾಜಕಾರಣವನ್ನು ಬಿಟ್ಟು ಬೇರೆ ಕಡೆಗೆ ಮನಸ್ಸು ಹಾಕುವದಿಲ್ಲ; ಆದರೆ ಈಗ ದಳವಾಯಿ ಭರಮನ ವ್ಯವಸ್ಥೆ ಏನು ಮಾಡಬೇಕು ಹೇಳು.

ಶ್ರೀಮತಿ—ಈ ಸಂಬಂಧದಿಂದ ನಿನ್ನೆ ರಾತ್ರಿ ನನಗೊಂದು ಕನಸು ಬಿದ್ದಿತ್ತು. ಆ ಕನಸಿನಲ್ಲಿ ದಳವಾಯಿ ಭರಮನು ಪಣಕಟ್ಟಿ ಹುಲಿಯೊಡನೆ ಮಲ್ಲಯುದ್ಧ ಮಾಡುತ್ತಿರುವಾಗ, ಹುಲಿಯು ಆತನನ್ನು ಹರಿದು ತಿಂದುಬಿಟ್ಟಿತು! ಅವ್ವಯ್ಯ! ನಮ್ಮ ಪಂಜರದಲ್ಲಿಯ ತಿಮ್ಮ ಎಂಬ ಹೆಸರಿನ ಹುಲಿಯೇ ಎಂತಹ ಕ್ರೂರ ಕಾರ್ಯಮಾಡಿತಲ್ಲ! ಅದರ ಮುಂದೆ ಭರಮನ ಆಟವೇನೂ ನಡೆಯದೆ, ಆತನು ತನ್ನ ಜೀವಕ್ಕೆ ಎರವಾದನು! ಪಾಪ! ಮನುಷ್ಯನು ಹುಲಿಗೆ ಈಡೇ?

ಮುದ್ದ— ನಿನ್ನ ಕನಸಿನಿಂದ ನನ್ನಲ್ಲಿ ಒಂದು ಹೊಸ ವಿಚಾರವು ಬಂದಿರುವದು. ನಮ್ಮ ಪಂಜರದೊಳಗಿನ ತಿಮ್ಮ ಎಂಬ ಹೆಸರಿನ ಹುಲಿಯೊಡನೆಯೇ ಪಣಗಟ್ಟಿ ಬರಮನನ್ನು ಬರಿಗೈಯಿಂದ ಅದರೊಡನೆ ಕಾದಲು ಕಳಿಸಿಬಿಟ್ಟರೆ ಹೇಗಾದೀತು? ಹೀಗೆ ಅವರಿಬ್ಬರ ಸಂಭಾಷಣವು ನಡೆದಿರುವಾಗ ರಣಹುಚ್ಚಿಗೆ ಎಚ್ಚರವಾಗಲು, ಆಕೆಯು ಶ್ರೀಮತಿಯನ್ನು ಕುರಿತು—

ರಣಹುಚ್ಚಿ—ಸಾಧ್ವೀ ಶ್ರೀಮತೀ, ನನ್ನನ್ನೂ ಆ ಹುಲಿಗೇ ತುತ್ತು ಮಾಡಿಸಿಬಿಡ ಬಾರದೇ? ನಮ್ಮ ಅಣ್ಣನ ಸಂಗಡವೇ ನನ್ನ ದೇಹದ ಅಂತವೂ ಆಗಿಹೋಗಲಿ!

ಶ್ರೀಮತಿ — ಹುಚ್ಚವ್ವಾ, ಏಳು, ಮೊದಲು ಕೈಕಾಲುಮೋರೆ ತೊಳೆದುಕೊಳ್ಳು. ನಿನ್ನಿನಿಂದ ನೀನು ಬಾಯಲ್ಲಿ ನೀರು ಹಾಕಿರುವದಿಲ್ಲ, ಎಷ್ಟು ಹೊತ್ತಾಗಿ ಹೋಯಿತು,. ಗುರುನಾಥನ ಅಭಿವಚನವಿದ್ದದ್ದರಿಂದಲೇ ಈಗ ನೀನು ಎಚ್ಚೆತ್ತಂತಾಗಿರುತ್ತದೆ. ಬಹಳ ಸಮಾಧಾನವಾಯಿತು, ಏಳು, ಮೊದಲು ಊಟಮಾಡು ಏಳು.

ಹೀಗೆ ಶ್ರೀಮತಿಯು ನುಡಿಯುತ್ತಿರಲು, ದಳವಾಯಿ ಮುದ್ದಣ್ಣನು ಚಟ್ಟನೆ ಅಲ್ಲಿಂದ ಎದ್ದು ಹೊರಟುಹೋದನು. ಆತನು ಮನಸ್ಸಿನಲ್ಲಿ ಏನೋ ನಿಶ್ಚಯಿಸಿದಂತೆ ತೋರಿತು. ಆತನು ಏಕಾಂತದ ಆಲೋಚನಾ ಗೃಹಕ್ಕೆ ಹೋಗಿ ತನ್ನ ತಮ್ಮಂದಿರಾದ ಚುಕ್ಕಪ್ಪ-ಚಿಕ್ಕಪ್ಪ ಎಂಬವರನ್ನು ಕೂಡಲೆ ಕರಸಿಕೊಳ್ಳಲು, ಅವರ ಗುಪ್ತಾಲೋಚನೆಗೆ ಆರಂಭವಾಯಿತು. ಚುಕ್ಕಪ್ಪನು ತನ್ನ ಅಣ್ಣನನ್ನು ಕುರಿತು ಆತುರದಿಂದ—

ಚುಕ್ಕಪ್ಪ-ಅಣ್ಣಾ, ರಾಜಕಾರಣಗಳಲ್ಲಿ ಹೀಗೆ ವಿಲಂಬಮಾಡುವದು ಸರಿಯಲ್ಲ, ಏನಾದರೂ ಮಾಡಿ ಭರಮನನ್ನು ಈ ಲೋಕದಿಂದ ಹೊರಡಿಸುವ ಕೆಲಸವನ್ನು ಬೇಗನೆ ಮಾಡಬೇಕು; ಸುಮ್ಮನೆ ವಿಚಾರ ಮಾಡುತ್ತ ಹೊತ್ತುಗಳೆಯುವದು ನೆಟ್ಟಗಲ್ಲ,

ಮುದ್ದ—ತಮ್ಮಾ, ನಾನಾದರೂ ವಿಲಂಬಮಾಡಬೇಕೆಂದು ಎಲ್ಲಿ ಅನ್ನುತ್ತೇನೆ? ಅದಕ್ಕಾಗಿ ನಾನು ಈಗ ಒಂದು ಹಂಚಿಕೆಯನ್ನು ಹುಡುಕಿರುವೆನು; ಅದನ್ನು ನಿನ್ನ ಮುಂದೆ ಹೇಳುವದಕ್ಕಾಗಿಯೇ ನಿನ್ನನ್ನು ಕರೆಸಿದ್ದೇನೆ.

ಚುಕ್ಕಪ್ಪ—ಅದೇನು ಹಂಚಿಕೆ? ಹೇಳು ಬೇಗನೆ.

ಮುದ್ದ—ನಮ್ಮ ಪಂಜರದಲ್ಲಿ ಕ್ರೂರವ್ಯಾಘ್ರ ತಿಮ್ಮನು ಇರುವದಲ್ಲ ಆ ಹದಿನಾರು ಮೆಟ್ಟಿನ ಹುಲಿಯೊಡನೆ ದಳವಾಯಿ ಭರಮನನ್ನು ಬರಿಗೈಯಿಂದ ಕಾದಬಿಡೋಣ. ಭರಮನು ಬಲಶಾಲಿಯಾದರೆ ಹುಲಿಯನ್ನು ಹಿಚಿಕಿಕೊಂದು ನಮ್ಮ ಸೆರೆಯಿಂದ ಮುಕ್ತನಾಗಿ ಹೊರಟು ಹೋಗಲಿ, ದುರ್ಬಲನಾದರೆ ಹುಲಿಗೆ ತುತ್ತಾಗಿಹೋಗಲಿ! ತಮ್ಮಾ, ಹಿಂದಿನಂತೆ ಕೊಲೆ ಗಡಕತನ ಮಾಡಲಿಕ್ಕೆ ನನ್ನ ಮನಸ್ಸು ಮೆಚ್ಚದ್ದರಿಂದ ಈ ಹಂಚಿಕೆ ತೆಗೆದಿದ್ದೇನೆ.

ಚುಕ್ಕಪ್ಪ—ನಿನ್ನ ವಿಚಾರವೇನು ತೆಗೆದು ಹಾಕತಕ್ಕಂತಹದಲ್ಲ. ನಾವು ಶಿವಭಕ್ತರು, ಮೇಲೆ, ಶ್ರೀ ಮುರಗೀಶಗುರುವರನ ಕರುಣಾಪ್ರಸಾದ ಪಡೆದಿದ್ದೇವೆ. ಅಂದಬಳಿಕ ಕಪ್ಪು ಜನರಂತೆ ಕೊಲೆಗಡಕತನಮಾಡುವದು ಸರಿಯಲ್ಲ. ಆದರೆ ಆ ಹುಲಿಗೆ ಎರಡುದಿನ ಏನೂ ಆಹಾರ ಹಾಕದೆ ಉಪಾಸವಿಡುವದು ನೆಟ್ಟಗಲ್ಲವೆ?

ಮುದ್ದ—ಮತ್ತೊಂದು ದಿನ ಉಪವಾಸವಿಡೋಣ. ಅದು ನಮ್ಮ ಕೈಯೊಳಗಿನ ಮಾತು; ಆದರೆ ರಣಹುಚ್ಚಿಯನ್ನೂ, ಭರಮನೊಡನೆ ಹುಲಿಯಬಾಯಿಗೆ ಕೆಡವಬೇಕೆಂದು ಮಾಡಿದ್ದೇನೆ, ಇದರ ಬಗ್ಗೆ ನಿನ್ನ ವಿಚಾರವೇನು?

ಚುಕ್ಕಪ್ಪ—ಅಣ್ಣಾ ಕಡೆಗೂ ನಿನ್ನ ಮರಳುತನವು ಹೋಗುವದಿಲ್ಲ, ಆ ಹೊಯ್ಮಾಲೆ ಹುಚ್ಚಿಯು ನಮ್ಮಂಥವರನ್ನು ಹುಲಿಯಬಾಯಿಗೆ ಕೊಟ್ಟು ತಾನು ಮೋಜು ನೋಡ ಬಹುದಲ್ಲದೆ, ತಾನು ಹುಲಿಯಬಾಯಿಗೆ ಬೀಳುವಳೆ? ಅಣ್ಣಾ ರಣಹುಚ್ಚಿಯ ಚಾರಿತ್ರ್ಯವು ನೀನು ಅರಿಯದ್ದೇ? ಆಕೆಯ ವಿಚಾರವನ್ನು ಬಿಟ್ಟುಬಿಡು. ಆಕೆಯು ಕಡೆಗೂ ಅತ್ತಿಗೆಯ ದಾಸಿಯಾಗಿ ಆಕೆಯ ಚಾಕರಿಮಾಡುತ್ತ ಕಾಲಹರಣಮಾಡುತ್ತ ಅಂತರ್ಗೃಹದಲ್ಲಿ ಕೊಳೆಯುತ್ತ ಬಿದ್ದಿರಲಿ!

ಮುದ್ದ—ಆ ರಣರಕ್ಕಸಿಯು ಶ್ರೀಮತಿಯ ದಾಸಿಯಾಗಿಯೇ ನಮಗೆ ದಕ್ಕಿ ಇರಬಹುದೇ?

ಚುಕ್ಕಪ್ಪ ಇನ್ನು ಈ ಮಾತು ಕೇಳು, ನಾನು ಒಪ್ಪಿಕೊಳ್ಳುವೆನು. ಆ ರಣಹುಚ್ಚಿಯು, ಯಾವಾಗ ಏನುಮಾಡಿ ನಮಗೆ ಮಂಕುಬೂದಿ ಹಚ್ಚಿ ಹೋದಾಳೆಂಬ ನಿಯಮವಿಲ್ಲ. ಮೇಲಾಗಿ ಅಣ್ಣಾ, ಆಕೆಯ ಮೇಲೆ ಶ್ರೀಗುರುನಾಥನ ಅಂತಃಕರಣವೆಷ್ಟಿರುವದೆಂಬದನ್ನು ನಾವೆಲ್ಲರೂ ನೋಡಿರುವದಿಲ್ಲವೆ? ಅಂದಬಳಿಕ ಆಕೆಯು ನೆಲೆ ನಮ್ಮಂಥ ಪಾಮರರಿಗೆ ಹತ್ತದು.

ಮುದ್ದ—ಇಂದು ಅಂತರ್ಗೃಹಕ್ಕೆ ನಾನು ಹೋದಾಗ, ರಣಹುಚ್ಚಿಯು ನಮ್ಮ ಶ್ರೀಮತಿಗೆ—''ನಮ್ಮ ಅಣ್ಣ ದಳವಾಯಿ ಭರಮಪ್ಪನೊಡನೆ ನನ್ನನ್ನೂ ಹುಲಿಯಬಾಯಿಗೆ ತುತ್ತಾಗಿ ಮಾಡಬಿಡಬಾರದೆ?'' ಎಂದು ನನ್ನ ಸಮಕ್ಷ ಕೇಳಿಕೊಂಡಿರುವಳು.

ಚುಕ್ಕಪ್ಪ—ಅತ್ತಿಗೆಯವರೊಡನೆ ಈ ಮಾತು ಹೊರಡಲಿಕ್ಕೆ ಕಾರಣ?

ಮುದ್ದ—ದಳವಾಯಿ ಭರಮನ ನಾಶದ ಉಪಾಯವನ್ನು ಕುರಿತು, ನಾನು ಸಾಧ್ವೀ ಶ್ರೀಮತಿಯೊಡನೆ ಆಲೋಚಿಸುತ್ತಿರುವಾಗ, ಶ್ರೀಮತಿಯು ತನ್ನ ಕನಸಿನಲ್ಲಿ ದಳವಾಯಿ ಭರಮನು ನಮ್ಮ ತಿಮ್ಮ ವ್ಯಾಘ್ರನೊಡನೆ ಕಾದುವಾಗ, ಆತನನ್ನು ಆ ಕ್ರೂರವ್ಯಾಘ್ರನು

ಹರಿದು ತಿಂದಿತಂತೆ! ಆಕೆಯ ಆ ಕನಸಿನ ಸೂಚನೆಯಂತೆಯೇ ನಾನು ಭರಮನನ್ನು ನಮ್ಮ ಹುಲಿಯೊಡನೆ ಪಣಕಟ್ಟಿ ಕಾದಲಿಕ್ಕೆ ಬಿಡಬೇಕೆಂದು ನಾನು ಶ್ರೀಮತಿಯ ಮುಂದೆ ಹೇಳುವಾಗ, ರಣಹುಚ್ಚಿಯು ನಡುವೇ ಬಾಯಿ ಹಾಕಿ ಮೇಲೆ ಹೇಳಿದಂತೆ ಶ್ರೀಮತಿಯನ್ನು ಕೇಳಿದಳು.

ಚುಕ್ಕಪ್ಪ—ಇದು ನಮಗೆ ಅನುಕೂಲವೇ ಆಯಿತೆಂದು ಹೇಳಬಹುದು; ಯಾಕಂದರೆ, ಆ ರಣಹುಚ್ಚಿಯ ಮಾತನ್ನೇ ಆಕೆಯ ಕೊರಳಿಗೆ ಕಟ್ಟಲಿಕ್ಕೆ ಬರುವಹಾಗಿದೆ.

ಈ ಮೇರೆಗೆ ಮಾತುಕಥೆಗಳಾದ ಬಳಿಕ ದಳವಾಯಿ ಮುದ್ದನು ಕೂಡಲೆ ಎಲ್ಲ ಕಡೆಗೂ ಡಂಗುರ ಸಾರಲಿಕ್ಕೆ ಡಂಗುರದವರಿಗೆ ಆಜ್ಞಾಪಿಸೆಂದು ಚುಕ್ಕಪ್ಪನಿಗೆ ಹೇಳಿದನು. ಅದರಂತೆ ಚುಕ್ಕಪ್ಪನು ಆಜ್ಞಾಪಿಸಲು, ಡಂಗುರದವರು ತಮ್ಮ ವಾದ್ಯವನ್ನು ಬಾರಿಸುತ್ತ ಡಂಗುರ ಸಾರ ಹತ್ತಿದರು. ಆಗ ಇಳಿಹೊತ್ತಿನ ಸಮಯವಾಗಿತ್ತು, ಡಂಗುರದವರು ಜನರನ್ನು ಕುರಿತು ಬೀದಿಗುಂಟ ಡಂಗುರ ಸಾರುತ್ತ ನಡೆದರು. ಅವರು ಜನರನ್ನು ಕುರಿತು— 'ಕೇಳಿರಿ, ಎಲ್ಲರೂ ಲಕ್ಷಗೊಟ್ಟು ಕೇಳಿರಿ. ನಮ್ಮ ಪ್ರಕೃತದ ದೊಣ್ಣೆ ರಂಗಪ್ಪನಾಯಕರ ವಿರುದ್ಧ ಬಂಡುಗಾರನಾಗಿ ಎದ್ದಿದ್ದ ದಳವಾಯಿ ಭರಮಪ್ಪನನ್ನೂ, ಅವನ ಸಂಗಡಿಗರನ್ನೂ ನಮ್ಮ ಚುಕ್ಕಪ್ಪ–ಚಿಕ್ಕಪ್ಪ ಎಂಬವರು ಶೌರ್ಯದಿಂದ ಕಾದಿ ಸೆರೆಹಿಡಕೊಂಡು ಬಂದಿದ್ದಾರೆ. ನಾಳೆ ಬೆಳಗಿನ ಎರಡುತಾಸು ಹೊತ್ತು ಏರುವದರೊಳಗೆ, ಭರಮಪ್ಪನು ನಮ್ಮ ಪಂಜರದಲ್ಲಿಯ ತಿಮ್ಮ ಎಂಬ ಹೆಸರಿನ ಹುಲಿಯೊಡನೆ ಬರಿಗೈಯಿಂದ ಕಾಳಗವಮಾಡುವನು. ಆ ಬಂಡುಗಾರನು ಹುಲಿಯ ಬಾಯಿಗೆ ಬಿದ್ದು ಸಾಯುವನು, ಇಲ್ಲವೆ ಗಂಡಸಾದರೆ ಹುಲಿಯನ್ನು ಕೊಂದು ಪಾರಾಗಿ ಹೋಗುವನು! ಈ ಅಪರೂಪದ ಪ್ರಸಂಗವನ್ನು ಎಲ್ಲರೂ ನೋಡಲಿಕ್ಕೆ ಬರಬೇಕು. ಹೀಗೆ ದೊರೆಗಳ ವಿರುದ್ಧ ಇನ್ನು ಮೇಲೆ ಯಾರಾದರೂ ಬಂಡಾಯಮಾಡಿದರೆ, ಅವರೂ ಭರಮಪ್ಪನಂತೆ ಹುಲಿಯ ಬಾಯಿಗೆ ಬೀಳಬೇಕಾದೀತೆಂದು ದೊರೆಗಳ ಕಟ್ಟಪ್ಪಣೆಯಾಗಿದೆ; ಕೇಳಿರಿ, ಎಲ್ಲರೂ ಚನ್ನಾಗಿ ಲಕ್ಷಗೊಟ್ಟು ಕೇಳಿರಿ'' ಎಂದು ಬೀದಿಬೀದಿಗಳ ಹಿಡಿದು, ಚಿತ್ರದುರ್ಗದ ಕೋಟೆಯಲ್ಲಿಯೂ, ಚಿತ್ರದುರ್ಗದ ಪಟ್ಟಣದಲ್ಲಿಯೂ ಸಾರುತ್ತ ಬಂದರು. ಈ ವಿಚಿತ್ರ ಡಂಗುರವನ್ನು ಕೇಳಿ ಜನರು ಬೆರಗಾದರು. ತಪ್ಪುಗಾರರನ್ನು ಹುಲಿಯ ಬಾಯಿಗೆ ಕೊಡಿಸಿ, ಅಥವಾ ಅವರಿಗೆ ಹಾವು ಕಡಿಸಿ,ಅಥವಾ ಅವರಿಂದ ವಿಷಪಾನಮಾಡಿಸಿ ಅಥವಾ ಬಲಿಷ್ಠ ಜಟ್ಟಿಗಳಿಂದ ಕಾದಿಸಿ ಅವರ ಪ್ರಾಣಹರಣಮಾಡುವ ಪದ್ಧತಿಯು ಮೊದಲಿನ ಅರಸರ ಕಾಲದಲ್ಲಿ ಬಳಿಕೆಯಲ್ಲಿದ್ದಿತು. ಹಾಗೆ ಚಿತ್ರದುರ್ಗದ ನಾಯಕರಾದರೂ ರಾಜಕೀಯ ಅಪರಾಧಿಗಳನ್ನು ಶಿಕ್ಷಿಸುತ್ತಲಿದ್ದರು; ಆದರೆ ದಳವಾಯಿ ಭರಮಪ್ಪನಂಥ ನಾಯಕರ ಸತ್ಯಪಕ್ಷದ ವೀರನನ್ನು ಹುಲಿಯೊಡನೆ ಕಾಳಗಕ್ಕೆ ಬಿಟ್ಟು ಕೊಲ್ಲಿಸುವದು, ಬಹುಜನರ ಮನಸ್ಸಿಗೆ ಬರಲಿಲ್ಲ. ನಾಯಕರ ದಳವಾಯಿಗಳಲ್ಲಿ ಮುದ್ದಣ್ಣನ ಪಕ್ಷ ಭರಮಪ್ಪನ ಪಕ್ಷ ಎಂಬ ಎರಡು ಪ್ರಬಲ ಪಕ್ಷಗಳಿದ್ದದ್ದು ವಾಚಕರಿಗೆ ಈ ಮೊದಲೆ ಗೊತ್ತಿರುವದು. ಭರಮಪ್ಪನ ಪಕ್ಷವು ಮಹಾಪ್ರಬಲವಿದ್ದು, ಮುದ್ದನ ಪಕ್ಷವನ್ನು ಮುರಿಬಡಿಯುವ ಸಿದ್ಧತೆಯಲ್ಲಿ ಅದು ಮುಂದುವರಿಯುತ್ತ ಬಂದಿತ್ತು. ಹಕ್ಕುದಾರನಾದ ಬಿಚ್ಚುಗತ್ತಿ ಭರಮನಾಯಕನನ್ನು ಇದ್ದಲ್ಲಿಂದ ಕರಕೊಂಡು ಪ್ರಸಿದ್ಧ ರೀತಿಯಿಂದ ದಳವಾಯಿ

ಮುದ್ದನ ಪಕ್ಷದೊಡನೆ ಯುದ್ಧ ಹೂಡುವದೊಂದು ಕೆಲಸವು ಉಳಿದಿತ್ತು ಇಂಥ ಪ್ರಸಂಗದಲ್ಲಿ ದಳವಾಯಿ ಭರಮಪ್ಪನನ್ನು ಹುಲಿಯಬಾಯಿಗೆ ಕೊಡುವದು ಅನ್ಯಾಯವೆಂತಲೂ, ಏನುಮಾಡಿದರೂ ನಾವು ಆ ಅನ್ಯಾಯವನ್ನು ನಡೆಯ ಗೊಡಲಿಕ್ಕಿಲ್ಲವೆಂತಲೂ ಭರಮಪ್ಪನ ಪಕ್ಷದವರು ಪ್ರಸಿದ್ಧ ರೀತಿಯಿಂದ ಮಾತಾಡಹತ್ತಿದರು; ಆದ್ದರಿಂದ ನಾಳಿನ ಹುಲಿಯ ಕಾಳಗದ ಪ್ರಸಂಗವು ಸುಸೂತ್ರವಾಗಿ ಸಾಗದೆಂದು ಅಲ್ಲಲ್ಲಿ ಜನರು ಮಾತಾಡ ಹತ್ತಿದರು; ಜನರು ಅಂತಹ ಪುಂಡಾಟಿಕೆಯು ನಡೆಯದಂತೆ ಬಂದೋಬಸ್ತು ಇಡಲು, ಮುದ್ದಪ್ಪನೂ ತನ್ನ ತಮ್ಮಂದಿರಿಗೆ ಅಪ್ಪಣೆಮಾಡಿ, ತನ್ನ ಸೈನ್ಯವು ಸಶಸ್ತ್ರ ಸಿದ್ಧವಾಗಿರಬೇಕೆಂದು ಆಜ್ಞಾಪಿಸಿದನು.

## ದೈವೀಮಾಯೆ !

ದಳವಾಯಿ ಮುದ್ದಣ್ಣನ ಈ ಡಂಗುರದಿಂದ ಚಿತ್ರದುರ್ಗದ ಕೋಟೆಯಲ್ಲಿಯೂ, ಪಟ್ಟಣದಲ್ಲಿಯೂ ಬರಬರುತ್ತ ದೊಡ್ಡ ಗೊಂದಲವೆದ್ದಿತು. ಅಂದು ಬೆಳತನಕ ಒಳಸಂಚು ಗಳೂ, ಮಸಲತ್ತುಗಳೂ ಎಲ್ಲಕಡೆಯಲ್ಲಿಯೂ ನಡೆದವು. ಎಲ್ಲ ಕಡೆಯಲ್ಲಿಯೂ ಜನಕ್ಷೋಭವು ಕಂಡು ಬರುತ್ತಿತ್ತು ದಳವಾಯಿ ಭರಮಪ್ಪನು ಮುದ್ದನ ಸೆರೆಯಾಳಾದ ಸುದ್ದಿಯೇ ಜನರಿಗೆ ಮೊದಲು ನೆಟ್ಟಗೆ ಗೊತ್ತಿದ್ದಿಲ್ಲ. ಆ ಸಂಬಂಧದಿಂದ ಜನರು ಅಲ್ಲಲ್ಲಿ ಗುಜುಗುಟ್ಟುವದು ಮಾತ್ರ ಜನರ ಕಿವಿಗೆ ಬಿದ್ದಿತ್ತು 'ಇದೇನು ಹಾರಿಕೆಯ ಸುಳ್ಳು ಸುದ್ದಿಯಿರಬಹುದೆಂ''ದು ಜನರು ತರ್ಕಿಸಿದ್ದರು; ದಳವಾಯಿಗಳ ಆಗಿನ ಪುಂಡಾಟಿಕೆಯ ಕಾಲದಲ್ಲಿ ಇಂಥ ಹಲವು ಸುದ್ದಿಗಳು ಹುಟ್ಟುತ್ತಿದ್ದವು, ಸಾಯುತ್ತಿದ್ದವು; ಆದರೆ ಪ್ರಸಿದ್ಧ ರೀತಿಯಿಂದ ರಾಜಡಂಗುರವೇ ಸಾರಿದ್ದನ್ನು ಕೇಳಿ ದಳವಾಯಿ ಭರಮಪ್ಪನ ಪಕ್ಷದವರು ಕ್ಷೋಭಿಸಿದರು. ಆ ಭರಮಪ್ಪನ ಪಕ್ಷದ ಮುಂದಾಳುಗಳು ಪ್ರಸಿದ್ಧ ರೀತಿಯಿಂದ ಒತ್ತಟ್ಟಿಗೆ ಕೂಡಿ, ತಮ್ಮದೊಂದು ಪಂಚಮಂಡಲದ ಮುಖಾಂತರ ಈ ಹುಲಿಯ ಕಾಳಗದ ಪ್ರಸಂಗವನ್ನು ತಪ್ಪಿಸಬೇಕೆಂತಲೂ,ಭರಮಪ್ಪ ದಳವಾಯಿಯನ್ನು ಬಹುಮಾನ ಪೂರ್ವಕವಾಗಿ ಸೆರೆಯಿಂದ ಮುಕ್ತಮಾಡಿಸಿಬಿಡಬೇಕೆಂತಲೂ ನಿಶ್ಚಯಿಸಿದರು. ಭರಮಪ್ಪನ ಪಕ್ಷದವರೆಲ್ಲ ಸಶಸ್ತ್ರರಾಗಿ ಹುಲಿಯ ಕಾಳಗದ ಕಣಕ್ಕೆ ಹೋಗಬೇಕೆಂದು ನಿಶ್ಚಯಿಸಿದರು. ಇತ್ತ ದಳವಾಯಿ ಮುದ್ದಪ್ಪನೂ ಅದಕ್ಕೆ ತಕ್ಕ ಬಂದೋಬಸ್ತು ಮಾಡುವದರಲ್ಲಿ ತತ್ಪರನಾಗಿದ್ದನು. ಆತನ ಪಕ್ಷದ ಒಂದು ಪಂಚಮಂಡಲವೂ ಆ ರಾತ್ರಿಯೇ ಕೂಡಿ, ಮುದ್ದಣ್ಣನಿಗೆ ಯೋಗ್ಯ ಆಲೋಚನೆ ಹೇಳಲು ಸಿದ್ಧವಾಯಿತು. ಅತ್ತ ನಾಗರಿಕರೂ, ನಿಷ್ಕಾರಣವಾಗಿ ಈ ದುಹಿಯಿಂದ ಪಟ್ಟಣದಲ್ಲಿ ಅನರ್ಥವು ಒದಗಬಾರದೆಂದು, ತಮ್ಮಲ್ಲೊಂದು ಪಂಚರ ಸಂಘವನ್ನು ನಿರ್ಮಿಸಿಕೊಂಡರು. ಒಟ್ಟಿಗೆ ಅಂದು ರಾತ್ರಿ ಚಿತ್ರದುರ್ಗದಲ್ಲಿ ಹಾಗು ಚಿತ್ರದುರ್ಗದ ಪಟ್ಟಣದಲ್ಲಿ ಅಶಾಂತತೆಯು ಹಬ್ಬಿ, ಹಾಹಾ ಅನ್ನುವದರೊಳಗಾಗಿ ಸುತ್ತುಮುತ್ತಲಿನ ಹಳ್ಳಿಗಳವರೆಗೂ ಅದು ಹಬ್ಬಿ ಹೋಯಿತು!

ಬೆಳಗಾಯಿತು, ಎಲ್ಲಿ ನೋಡಿದರೂ ಹುಲಿಯ ಕಾಳಗದ ಮಾತು; ಎಲ್ಲಿ ನೋಡಿದರೂ ಭರಮಪ್ಪನನ್ನು ಮೊದಲು ಸೆರೆಯೊಳಗಿಂದ ಬಿಡಿಸುವ ವಿಚಾರ! ಪ್ರಸಂಗ ಬಂದರೆ ಚಿತ್ರದುರ್ಗದ ನಾಯಕರ ಜಗಳದ ಇತ್ಯರ್ಥವು ಇಂದೇ ಆಗಿಹೋಗಲಿ, ಹಿಂದುಗಡೆ ಬಿಚ್ಚುಗತ್ತಿ ಭರಮ ನಾಯಕನು ತನ್ನ ನಾಯಕತನದ ಪಟ್ಟಕ್ಕೆ ಕುಳಿತುಕೊಳ್ಳಲೊಲ್ಲನೇಕೆ,ಇಂದು ಭರಮಪ್ಪ ದಳವಾಯಿಯು ಸೆರೆಮನೆಯಿಂದ ಬಿಡುಗಡೆಹೊಂದಿ ನಮ್ಮನ್ನು ಬಂದು ಕೂಡಲೇಬೇಕು. ಇನ್ನು ಈ ತಿಕ್ಕಾಟವು ಬಹುದಿವಸ ನಡೆಯಲಾಗದು. ಏನಾಗುವದು ಬೇಗನೆ ಆಗಿಹೋಗಲಿ'' ಎಂದು ದಳವಾಯಿ ಭರಮಪ್ಪನ ಜನರು, ತಮ್ಮ ಪಕ್ಷಾಭಿಮಾನದಿಂದ ಮನಸ್ಸಿಗೆ ಬಂದಂತೆ ಮಾತಾಡಹತ್ತಿದರು; ಆದರೆ ಅಂದು ರಾತ್ರಿ ಕೂಡಿದ್ದ ಮೂರು ಪಂಚಮಂಡಲದವರ ಮಾತನ್ನು ಆಯಾಪಕ್ಷದವರು ಮೀರದಂತೆ ಎಲ್ಲರೂ ಪ್ರತಿಬಂಧಕ್ಕೆ ಒಳಗಾಗಿದ್ದರು. ಎಲ್ಲರೂ ಸಶಸ್ತ್ರರಾಗಿಯೇ ಹುಲಿಯ ಕಾಳಗದ ಕಣದ ಕಡೆಗೆ ನಡೆದರು; ಅವರವರು ತಮ್ಮ ತಮ್ಮ ಪಂಚಮಂಡಲವನ್ನು ಅನುಸರಿಸಿ ನಡೆಯುತ್ತಿದ್ದರು; ಏನು ಮಾತಾಡುವದಾದರೂ ಪಂಚರಮುಖ್ಯನೇ ಮಾತಾಡಬೇಕಲ್ಲದೆ, ಸಿಕ್ಕವರು ಮಾತಾಡಲಾಗ ದೆಂದು ನಿರ್ಬಂಧವಾಗಿತ್ತು ಆದ್ದರಿಂದ ಇಡಿಯ ಚಿತ್ರದುರ್ಗಕ್ಕೆ ದುರ್ಗವೇ ಕ್ಷೋಭಿಸಿ ತಮ್ಮತಮ್ಮ ಪಂಚರ ಆಧಿಪತ್ಯದಲ್ಲಿ ಹೊರಟುಬಂದಿದ್ದರೂ, ಜನರಗದ್ದಲ–ಗೊಂದಲಗಳಿಗೆ ಆಸ್ಪದವಿದ್ದಿಲ್ಲ. ಹೀಗೆ ಜನರು ವ್ಯವಸ್ಥೆಯಿಂದ ಒಂದೊಂದು ನಿಟ್ಟು ಹಿಡಿದು ಕುಳಿತುಕೊಳ್ಳ ಹತ್ತಿದರು. ಮುದ್ದಣ್ಣನ ಖಾಸಸೈನ್ಯ ದವರು ಸಶಸ್ತ್ರರಾಗಿ ಎಲ್ಲ ಜನರನ್ನು ಸುತ್ತುಗಟ್ಟಿ ಗೊಂದಲ ವೇಳದಂತೆ ನೋಡಿಕೊಳ್ಳುತ್ತಿದ್ದರು. ಅಷ್ಟರಲ್ಲಿ ಪ್ರಕೃತದ ದೊರೆ ರಂಗಪ್ಪನಾಯಕನು ದಳವಾಯಿ ಮುದ್ದಣ್ಣನ ಕೈಹಿಡಕೊಂಡು ಬಂದು ಮುಖ್ಯ ಆಸನದ ಮೇಲೆ ಕುಳಿತುಕೊಂಡನು. ಆಗ ಎಲ್ಲ ಕಡೆಗೆ ಸ್ತಬ್ಧತೆಯು ಉಂಟಾಗಿ, ಎಲ್ಲರೂ ಹುಲಿಯಕಣದ ಕಡೆಗೆ ಒಮ್ಮೆ ದಳವಾಯಿ ಮುದ್ದಣ್ಣನ ಕಡೆಗೆ ಒಮ್ಮೆ ನೋಡುತ್ತಲಿದ್ದರು. ಉಭಯ ದಳವಾಯಿ ಪಕ್ಷದವರ ಮೈರಕ್ತಗಳೂ ಪಕ್ಷಾಭಿಮಾನದಿಂದ ಚಿಲಿ ಚಿಲಿ ಉಕ್ಕುತ್ತಲಿದ್ದವು. ಆದರೆ ಪಂಚಮಂಡಲದ ಪ್ರತಿಬಂಧದ ಮೂಲಕ ಯಾರೂ ಮಿಸುಕಾಡದೆ ತಮ್ಮ ಮುಖ್ಯರ ಸೂಚನೆಯನ್ನು ಲಕ್ಷಿಸಿ ಸುಮ್ಮನೆ ಕುಳಿತುಕೊಂಡಿದ್ದರು.

ಹೀಗೆ ಹುಲಿಯ ಕಾಳಗದ ಕಣವನ್ನು ಸುತ್ತುವರಿದು ಜನರು ಕುಳಿತುಕೊಂಡಿರುವಾಗ, ಕಣದ ಮಧ್ಯದಲ್ಲಿ ಕಬ್ಬಿಣದ ಗಜದ ಬಲಿಷ್ಠ ಕಟಾಂಜನವು ಬಹು ಪ್ರಶಸ್ತವಾಗಿ ನಿಲ್ಲಿಸಲ್ಪಟ್ಟಿತ್ತು, ಆ ಕಟಾಂಜನದ ಮಧ್ಯದಲ್ಲಿ ತಿಮ್ಮ ಎಂಬ ಹೆಸರಿನ ಹದಿನಾರು ಮೆಟ್ಟಿನ ಹುಲಿಯು ಇದ್ದ ಕಟಾಂಜನವು ಇದ್ದಿತು. ಆ ಕಟಾಂಜನದ ಬಾಗಿಲು ಇಕ್ಕಿದಕ್ಕೆ ಬಲವಾದ ಕೀಲಿಯನ್ನು ಹಾಕಿದ್ದರು. ಹೊರಗಿನ ವಿಸ್ತಾರವಾದ ಕಟಾಂಜನಕ್ಕೂ ಬಾಗಿಲು ಇದ್ದು, ಅದಕ್ಕೂ ಕೀಲಿಯನ್ನು ಹಾಕಿದ್ದರು. ಹುಲಿಯು ಇದ್ದ ಕಟಾಂಜನದ ಬಾಗಿಲು ತೆರೆದಕೂಡಲೆ ಹುಲಿಯು ಹೊರಗೆ ಬರಲು, ಅದರೊಡನೆ ಅಪರಾಧಿಯು ಹೊರಕಟಾಂಜನದ ವಿಸ್ತಾರವಾದ ಪ್ರದೇಶದಲ್ಲಿ ಕಾಳಗವಾಡಬೇಕಾಗುತ್ತಿತ್ತು, ಪಂಜರದೊಳಗಿನ ಹುಲಿಗೆ ಮೂರು ದಿನಗಳಿಂದ ಆಹಾರ

ವಿಲ್ಲದಿರಲು, ಅದು ಹಸಿದು ಕಕ್ರಾಂತವಾದದ್ದರಿಂದ, ಅದು ನೋಡಲಿಕ್ಕೆ ಬಹು ಭಯಂಕರ ವಾಗಿ ತೋರುತ್ತಿತ್ತು ಅದರ ಕಣ್ಣುಗಳು ಎರಡು ಕೆಂಡಗಳಂತೆ ನಿಗಿನಿಗಿ ಅನ್ನುತ್ತಿದ್ದವು. ಅದು ಭಯಂಕರ ರೀತಿಯಿಂದ ಗುಡುಗುಹಾಕಿ ನೆಲಕ್ಕೆ ಬಾಲ ಅಪ್ಪಳಿಸಹತ್ತಲು, ಇದು ಈಗ ಎರಡೂ ಕಟಾಂಜನಗಳನ್ನು ಮುರಿದು ಹೊರಗೆ ಬಂದು ಜನಸಮೂಹದ ಮೇಲೆ ಹಾರಿ ನಿಶ್ಚಯವಾಗಿ ರಕ್ತಹೀರುವದೆಂದು ಭಾಸವಾಗಿ, ಅಳ್ಳೆದೆಯವರ ರಕ್ತದ ಗುಂಡಿಗೆಗಳು ಒಡೆದು ಹೋಗುತ್ತಲಿದ್ದವು; ಆದರೆ ಅಲ್ಲಿ ನೆರೆದಿದ್ದ ಕಡುಗಲಿಗಳ ಹಿಂಡಿನಲ್ಲಿ ಆ ಕ್ರೂರ ವ್ಯಾಘ್ರನ ರಭಸಕ್ಕೆ ವೀರರ ತೋಳತಿಂಡೆಯೇಳಲು, ಅವಡುಗಚ್ಚಿದ ಆ ವೀರರ ಖಡ್ಗದ ಹಿಡಿಕೆಗಳು ಅಲ್ಲಲ್ಲಿ ತಮ್ಮ ಒರೆಯಬಿಟ್ಟು ಹೊರಗೆ ಬರಲು ಸರಿಯುವ ಹವಣಿಕೆಯಲ್ಲಿದ್ದವು. ಅಷ್ಟರಲ್ಲಿ ದಳವಾಯಿ ಭರಮಪ್ಪನು ಕಾವಲುಗಾರರ ಬಲವಾದ ಕಾವಲಿನಲ್ಲಿ ಬಂದು ಹುಲಿಯ ಹೊರಕಟಾಂಜನದ ಬಾಗಿಲ ಬಳಿಯಲ್ಲಿ ಕುಳಿತುಕೊಂಡನು. ಆಗ ಆತನ ಪಕ್ಷದವರು ಕ್ಷೋಭಿಸಿ, ತಮ್ಮ ಪಂಚಮಂಡಲದವರ ಕಡೆಗೆ ನೋಡಲು, ಅವರ ಮುಖ್ಯನು ಎದ್ದುನಿಂತು ಸಿಂಹಾಸನಸ್ಥ ದೊರೆಗೆ ಬಗ್ಗಿ ಮುಜರೆಮಾಡಿ, ತಮ್ಮ ಜನರ ಕಡೆಗೆ ನೋಡಿ ಹಸ್ತದಿಂದ ಸಮಾಧಾನ ತಾಳಿರೆಂದು ಸೂಚಿಸುತ್ತ ಎಲ್ಲರನ್ನು ಕುರಿತು— "ದೊರೆಗಳು ಈಗ ಶಾಂತಮನಸ್ಸಿನಿಂದ ವಿಚಾರಮಾಡಿ, ಈಗಾಗಿರುವ ನಮ್ಮ ದಳವಾಯಿ ಭರಮಪ್ಪನ ಅಪಮಾನವನ್ನು ದೂರಮಾಡು ವದಕ್ಕಾಗಿ ತಮ್ಮ ಬಳಿಯಲ್ಲಿ ಆತನನ್ನು ಕುಳ್ಳಿರಿಸಿಕೊಂಡು ಎಲ್ಲರನ್ನು ಸಮಾಧಾನಪಡಿಸಬೇಕೆಂದು ಬೇಡಿಕೊಳ್ಳುವೆನು. ಇದು ಮನೆಯ ಜಗಳ, ನಮ್ಮ ನಾಲಿಗೆ ನಮ್ಮ ಹಲ್ಲು ಎಂಬ ಸ್ಥಿತಿಯು ಇರುತ್ತದೆ. ಒಮ್ಮೆ ಪ್ರಸಿದ್ಧ ರೀತಿಯಿಂದ ರಣಕದನವಾದ ಹೊರತು, ನಮ್ಮ ಶೂರನಾಯಕ ಮನೆತನದ ಜಗಳದ ನಿರ್ಣಯವಾಗುವ ಹಾಗಿಲ್ಲ, ಎರಡೂ ಪಕ್ಷಗಳ ಕಣ್ಣುಗಳೂ ಕಾಳಗದ ಕಣದಲ್ಲಿ ನಟ್ಟುಹೋಗಿರುವವು. ಆದರೆ, ಆ ಕಾಳಗದ ಸಮಯವು ತೀರ ಸಮೀಪಿಸಿದ್ದರೂ, ಇಂದು ಅದು ಒದಗಿ ಬಂದಿರುವದಿಲ್ಲ! ಚಿತ್ರದುರ್ಗದ ನಾಯಕರು ಗಂಡುಗಲಿಗಳು. ಹುಲಿಯನ್ನು ಎಬ್ಬಿಸಿ ಎದುರಿಸಿ ಕೊಲ್ಲುವವರು. ಅಂಥವರು ಪಂಜರದಲ್ಲಿ ಅಕಸ್ಮಾತ್ ಸಿಕ್ಕಿರುವ ನಮ್ಮ ವೀರ ಭರಮಪ್ಪ ದಳವಾಯಿಯನ್ನು ಹುಲಿಯ ಬಾಯಿಗೆ ಕೊಟ್ಟು ಮೋಜುನೋಡುವದು ಚಂದಕಾಣುವದಿಲ್ಲ; ಆದ್ದರಿಂದ ರಂಗಪ್ಪದೊರೆಗಳು, ಭರಮಪ್ಪ ದಳವಾಯಿಯು ತಮ್ಮ ವಿರೋಧಿಯಾಗಿದ್ದರೂ, ತಮ್ಮ ನಾಯಕ ಮನೆತನದ ದಳವಾಯಿ ಯೆಂದು ಮನ್ನಿಸಿ, ಆತನನ್ನು ಮೊದಲು ತಮ್ಮ ಬಳಿಯಲ್ಲಿ ಕುಳ್ಳಿರಿಸಿಕೊಳ್ಳಬೇಕೆಂದು ಬೇಡಿಕೊಳ್ಳುವೆವು. ದಳವಾಯಿ ಭರಮಪ್ಪನ ಯೋಗ್ಯತೆಯನ್ನು ಪರೀಕ್ಷಿಸುವ ಪ್ರಸಂಗಗಳು, ಪ್ರಕೃತದ ಸಿಂಹಾಸನಸ್ಥ ವೀರದೊರೆಗಳಿಗೆ ಬೇಕಾದಷ್ಟು ಇರುವವು.

ಈ ಮೇರೆಗೆ ನುಡಿದು ಆ ಪಂಚರ ಮುಖ್ಯನು ಪುನಃ ರಂಗಪ್ಪನಾಯಕನನ್ನು ಬಾಗಿ ನಮಿಸಿ ತನ್ನ ಸ್ಥಳದಲ್ಲಿ ಕುಳಿತುಕೊಂಡನು. ಆಗ ಡೊಣ್ಣೆರಂಗಪ್ಪನಾಯಕನು ತನ್ನ ಮುಖ್ಯ ದಳವಾಯಿ ಯಾದ ದಳವಾಯಿ ಮುದ್ದಪ್ಪನ ಕಡೆಗೆ ನೋಡಲು, ಮುದ್ದಪ್ಪನು ಎದ್ದುನಿಂತು ದೊರೆಯನ್ನು ನಮಸ್ಕರಿಸಿ ಎಲ್ಲ ಜನರನ್ನು ಕುರಿತು— "ಎಲೈ ವೀರತಂಡವೇ, ನೀವೆಲ್ಲರೂ

ಚಿತ್ರದುರ್ಗದ ವೀರನಾಯಕರ ಅಭಿಮಾನಿಗಳೇ ಇರುವಿರಿ; ಮತ್ತು ನನ್ನಂತೆ ಭರಮಪ್ಪ ದಳವಾಯಿಯೂ ನಾಯಕ ಮನೆತನದ ಅಭಿಮಾನಿ ದಳವಾಯಿಯೆಂದು ನಾನು ಒಪ್ಪಿಕೊಳ್ಳುವೆನು; ಆದರೆ ಪ್ರಕೃತದ ಸಿಂಹಾಸನಾರೂಢರಾಗಿರುವ ಡೊಣ್ಣೆರಂಗಪ್ಪನಾಯಕ ದೊರೆಗಳವರನ್ನು ಸಿಂಹಾಸನದಿಂದ ದೂಡಲು ಯತ್ನಿಸುತ್ತಿರುವದರಿಂದ ಆತನು ರಾಜದ್ರೋಹಿ ದಳವಾಯಿಯೆಂದು ಪ್ರಸಿದ್ಧನಾಗಿರುವನು; ಅಂದಬಳಿಕ ದ್ರೋಹಿಯ ಶಾಸನ ಮಾಡಿ ತನ್ನ ಸಿಂಹಾಸನವನ್ನು ಸ್ಥಿರಗೊಳಿಸಲು ಸಿಂಹಾಸನಸ್ಥ ದೊರೆಯು ಬದ್ಧನಲ್ಲವೆ? ಅದರಂತೆ, ಆ ನಮ್ಮ ದೊರೆಯು ತನ್ನ ಸಿಂಹಾಸವನ್ನು ಸ್ಥಿರಗೊಳಿಸಿಕೊಳ್ಳುತ್ತಿರುವಾಗ, ಸ್ವಾಮಿಭಕ್ತರಾಗಿರುವ ನಾವೆಲ್ಲರೂ, ನಮ್ಮ ಶಿರಸ್ಸುಗಳನ್ನು ನಮ್ಮ ಕೈಯಲ್ಲಿ ತಕ್ಕೊಂಡು ನಮ್ಮ ಸ್ವಾಮಿಯನ್ನು ಅನುಸರಿಸಲು ಸಿದ್ಧರಿರಬೇಕಾಗುವದಲ್ಲವೆ? ಇನ್ನು, ಸಿಂಹಾಸನಸ್ಥ ದೊರೆಗಳು ಮಹಾಸಮರ್ಥ ರಿರುವರು, ಉದಾರರಿರುವರು, ದಯಾಳುಗಳಿರುವರು. ಈಗ ಭರಮಪ್ಪನ ಪಕ್ಷದವರು ಬೇಡಿಕೊಳ್ಳುವಂತೆ, ದೊರೆಗಳು ದಳವಾಯಿ ಭರಮಪ್ಪನನ್ನು ತಮ್ಮ ಬಳಿಯಲ್ಲಿ ಕುಳ್ಳಿರಿಸಿ ಕೊಳ್ಳಲೂಬಹುದು; ಆ ಸರ್ವಸಮರ್ಥ ದೊರೆಗಳು ಹೀಗೆ ಔದಾರ್ಯ ತೋರಿಸಲಿಕ್ಕೆ ಯಾಕೆ ಶಂಕಿಸಬೇಕು? ಅವರಿಗೆ ಯಾತರ, ಅಥವಾ ಯಾರ ಭಯ? ಆದರೆ ನಮ್ಮ ಸರ್ವತಂತ್ರ ಸ್ವತಂತ್ರ ದೊರೆಗೆ ಹೀಗೆಯೇ ಮಾಡಬೇಕೆಂದು ಹೇಳಿಕೊಳ್ಳಲಿಕ್ಕೆ ಅನ್ಯರಿಗೆ ಅಧಿಕಾರವೇನು? ಹೀಗೆ ಹೇಳಿಕೊಳ್ಳುವಾಗ ಅವರು ದೊರೆಗಳಿಗೆ ಇಟ್ಟ ಕಾಣಿಕೆಯಾವದು? ಈಗಾದರೂ ಅಂತಹ ಬೆಲೆಯುಳ್ಳ ಕಾಣಿಕೆಯು ಆ ಹೇಳಿಕೊಳ್ಳುವವರ ಬಳಿಯಲ್ಲಿ ಯಾವದಿರುತ್ತದೆ? ಪ್ರಕೃತದ ದೊರೆಯು ಸಿಂಹಾಸನದಲ್ಲಿ ವಿರಾಜಮಾನನಾಗಿದ್ದಾನೆ, ಮುಂದಾಗಬೇಕಾಗಿರುವ ಕಾಲ್ಪನಿಕ ದೊರೆಯು ಎಲ್ಲಿಯೋ ಮಾಯವಾಗಿ ಹೋಗಿಬಿಟ್ಟಿದ್ದಾನೆ. ಈ ಹೆಚ್ಚುಕಡಿಮೆಯನ್ನು ಎಲ್ಲರೂ ಲಕ್ಷದಲ್ಲಿಡತಕ್ಕದ್ದು. ಸಿಂಹಾಸನಸ್ಥ ರಾಜನ ವಿರುದ್ಧ ಮಾಡತಕ್ಕ ಯತ್ನಗಳೆಲ್ಲ ಪುಂಡಾಟಿಗೆಯ ದ್ರೋಹಗಳೆನಿಸುವವು; ಆದ್ದರಿಂದ ಈಗ ಚಿತ್ರದುರ್ಗದ ನಾಯಕರ, ಅಲ್ಲಅಲ್ಲ ಭರಮಪ್ಪ ದಳವಾಯಿಯ ಪಕ್ಷದ ಜನರನ್ನು ನಾನು ಸ್ಪಷ್ಟವಾಗಿ ಕೇಳುತ್ತೇನೆ, ಭರಮಪ್ಪ ದಳವಾಯಿ ಯನ್ನು ಹುಲಿಯಬಾಯಿಂದ ತಪ್ಪಿಸುವದಕ್ಕಾಗಿ, ಹುಲಿಯಬಾಯಿಗೆ ಈ ಎಲ್ಲ ಜನರ ಸಮಕ್ಷ ಬೀಳಲಿಕ್ಕೆ ಯಾರು ಸಿದ್ಧರಿರುವಿರಿ? ಅಂತಹ ಯೋಗ್ಯತಾ ಸಂಪನ್ನರಾದವರು ತಟ್ಟನೆ ಭರಮಪ್ಪ ದಳವಾಯಿಯ ಬಳಿಯಲ್ಲಿ ಬಂದುನಿಂತು, ಆತನನ್ನು ಕೈಹಿಡಿದು ಎಬ್ಬಿಸಬೇಕು, ಅಂದರೆ ನಾನು ಸ್ವತಃ ಭರಮಪ್ಪ ದಳವಾಯಿಯನ್ನು ಕೈಹಿಡಿದು ಕರಕೊಂಡು ಬಂದು ದೊರೆಗಳ ಬಳಿಯಲ್ಲಿ ಕುಳ್ಳಿರಿಸುವೆನು; ಹೂ, ಏಳಿರಿ, ತಡವೇಕೆ?'' ಎಂದು ನುಡಿಯುತ್ತಿರಲು, ಒಬ್ಬ ತಪಸ್ವಿನಿಯು ಅಕಸ್ಮಾತ್ ಭರಮಪ್ಪ ದಳವಾಯಿಯ ಬಳಿಯಲ್ಲಿ ಬಂದುನಿಂತು ಆತನ ಕೈಹಿಡಿದು— ''ಅಣ್ಣಾ ಏಳು, ನೀನು ಸೆರೆಯಾಳಲ್ಲ; ಚಿತ್ರದುರ್ಗದ ನಾಯಕರ ಗೌರವಶಾಲಿಯಾದ ವೀರದಳವಾಯಿಯು'' ಎಂದು ನುಡಿಯಲು, ಮುದ್ದಣ್ಣನೇ ಮೊದಲಾದವರು ಆಶ್ಚರ್ಯದಿಂದ ಆ ತಪಸ್ವಿನಿಯ ಕಡೆಗೆ ನೋಡತೊಡಗಿದರು!

ಆ ತಪಸ್ವಿನಿಯ ವಯಸ್ಸು ಹದಿನೆಂಟು ಇಪ್ಪತ್ತು ವರ್ಷದ್ದಿರಬಹುದು. ಆಕೆಯು ಬಿಳಿಯ ಬಟ್ಟೆಯನ್ನುಟ್ಟು, ಬಿಳಿಯ ಕುಪ್ಪಸವನ್ನು ತೊಟ್ಟಿದ್ದಳು. ಆಕೆಯು ಸರ್ವಾಂಗಕ್ಕೆ ಬಳಿದಿದ್ದ

ಭಸ್ಮದಿಂದ, ಆಕೆಯ ಸಾದಗಪ್ಪಿನ ಮೈಯು ಬೂದಿಮುಚ್ಚಿದ ಕರಿಬಿದ್ದ ಕೆಂಡದಂತೆ ತೋರುತ್ತಿತ್ತು. ಆಕೆಯ ಕೊರಳಲ್ಲಿ ಒಂದೆಂದರೆ ಒಂದೇ ಉರಟು ರುದ್ರಾಕ್ಷಿಗಳ ಸರವಿದ್ದಿತು. ಆಕೆಯ ಕಿವಿಯಲ್ಲಿಯೂ ಒಂದೊಂದು ರುದ್ರಾಕ್ಷಿಗಳು ಒಪ್ಪುತ್ತಿದ್ದವು. ಆಕೆಯು ವೀರಕಾಶಿಪಾಕಿ ಅಡ್ಡ ಸೆರಗು ಬಿಗಿದು, ವಿಭೂತಿಯ ಗಟ್ಟಿಯೊಂದನ್ನು ಕೈಯಲ್ಲಿ ಹಿಡಿದಿದ್ದಳು. ಆಕೆಯ ಮುಖದಲ್ಲಿ ಅತ್ಯಂತ ಸಾತ್ವಿಕ ಕಳೆಯು ಒಪ್ಪುತ್ತಲಿತ್ತು, ಆಕೆಯ ಉದ್ದವಾದ ತಲೆಗೂದಲುಗಳು ಆಕೆಯ ಬೆನ್ನಮೇಲೆ ಪಸರಿಸಿದ್ದರಿಂದ, ಆಕೆಯ ಮುಖಚಂದ್ರಮನನ್ನು ಭಕ್ಷಿಸಲು ಬಂದ ರಾಹುವನ್ನು ಹಣೆಯ ದಿವ್ಯ ವಿಭೂತಿಯ ತ್ರಿಪುಂಡ್ರವು ತಡೆದು ನಿಲ್ಲಿಸಿದಂತಾಗಿತ್ತು. ಹೀಗೆ ದಳವಾಯಿ ಮುದ್ದನು ಮಾತಿನ ಆವೇಶದಲ್ಲಿ ಕರೆದಕೂಡಲೆ ಸದ್ದಿಲ್ಲದೆ ಭರಮಪ್ಪನ ಬಳಿಯಲ್ಲಿ ಬಂದು ನಿಂತಿದ್ದ ಆ ದಿವ್ಯತಪಸ್ವಿನಿಯ ಗುರುತು ಯಾರಿಗೂ ಹತ್ತಲಿಲ್ಲ! ಎಲ್ಲರೂ ಆಶ್ಚರ್ಯಮಗ್ನರಾಗಿ ಆಕೆಯನ್ನೇ ನೋಡುತ್ತಲಿದ್ದರು. ದಳವಾಯಿ ಮುದ್ದಣ್ಣನು ಆ ತಪಸ್ವಿನಿಯನ್ನು ನೋಡುತ್ತ ಬೆಪ್ಪಾಗಿ ಮುಂದುಗಾಣದೆ ನಿಂತುಕೊಂಡಿದ್ದನು. ಆಗ ಆ ತಪಸ್ವಿನಿಯು ಮುದ್ದಣ್ಣನನ್ನು ಕುರಿತು—

ತಪಸ್ವಿನಿ— ಮುದ್ದಣ್ಣಾ, ಕರಕೊಂಡು ಹೋಗು, ಮೊದಲು ನಮ್ಮ ಅಣ್ಣ ಭರಮಣ್ಣನನ್ನು ಕೈಹಿಡಿದು ಕರಕೊಂಡು ಹೋಗಿ ಆತನನ್ನು ದೊರೆಗಳ ಬಳಿಯಲ್ಲಿ ಕುಳ್ಳಿರಿಸಿ ಎರಡನೆಯ ಮಾತಾಡು! ಇಗೋ, ಭರಮಣ್ಣನ ಜೀವಕ್ಕೆ ಪ್ರತಿಯಾಗಿ ನಾನು ಬಂದು ನಿಂತಿದ್ದೇನೆ ನೋಡು.

ಮುದ್ದಣ್ಣ—ನೀನು ಹೆಣ್ಣುಮಗಳು, ಹೆಣ್ಣುಮಕ್ಕಳ ಕೆಲಸವು ಇಲ್ಲಿ ಏನಿರುವದು?

ತಪಸ್ವಿನಿ—ನಿನ್ನ ಮಾತಿನಲ್ಲಿ ಹೆಣ್ಣುಗಂಡಿನ ವಿವರಣವಿರಲಿಲ್ಲ, ಭರಮಣ್ಣನ ಜೀವದ ತೂಕಕ್ಕೆ ತೂಕ ಬರುವ ಒಬ್ಬಾನೊಬ್ಬರು ಹುಲಿಯಬಾಯಲ್ಲಿ ಬೀಳಲಿಕ್ಕೆ ಸಿದ್ಧರಾಗಿ ಬಂದು, ಆತನನ್ನು ಕೈಹಿಡಿದು ಎಬ್ಬಿಸಬೇಕೆಂದು ನೀನು ಹೇಳಿರುತ್ತೀ! ಮುದ್ದಣ್ಣಾ, ನಿನ್ನಲ್ಲಿ ಯೋಗ್ಯತೆ ಇದ್ದರೆ, ನಮ್ಮ ಅಣ್ಣತಂಗಿಯರ ಪರಸ್ಪರರಲ್ಲಿಯ ಅಕೃತ್ರಿಮ ಪ್ರೇಮದಲ್ಲಿ ಎಷ್ಟು ಹೆಚ್ಚುಕಡಿಮೆ ಇರುತ್ತದೆಂಬದನ್ನು ತೂಕಮಾಡಿ, ಸಿಂಹಾಸನಸ್ಥನಾದ ದೊರೆಯ ಮುಂದೆಯೂ, ಈ ವೀರರ ತಂಡದ ಮುಂದೆಯೂ ತಟ್ಟನೆ ಹೇಳಿಬಿಡು! ಇಲ್ಲದಿದ್ದರೆ, ತಡಮಾಡಬೇಡ, ನಮ್ಮ ಭರಮಣ್ಣನನ್ನು ಮೇಲಕ್ಕೆ ಅರಸರ ಬಳಿಯಲ್ಲಿ ಕುಳ್ಳಿರಿಸುವದಲ್ಲದೆ, ಬೇಗನೆ ಕಟಾಂಜನದ ಬಾಗಿಲು ತೆಗಿಸಿ, ನನ್ನ ಮೇಲೆ ತಿಮ್ಮ ವ್ಯಾಘ್ರನನ್ನು ಬಿಡು. ಮುದ್ದಣ್ಣಾ, ಸಾಧ್ವೀ ಶ್ರೀಮತಿಯ ಮುಂದೆ ನಾನು ''ನಮ್ಮ ಅಣ್ಣನ ಸಂಗಡ ನಿಮ್ಮ ಹುಲಿಯ ಬಾಯಿಗೆ ನನ್ನನ್ನೂ ತುತ್ತು ಮಾಡಿಸೆಂ''ದು ಹೇಳಿಕೊಂಡದ್ದು ನಿನ್ನ ನೆನಪಿನಲ್ಲಿರುವದಷ್ಟೇ?

ತಪಸ್ವಿನಿಯ ಈ ಮಾತುಗಳನ್ನು ಕೇಳಿ, ಮುದ್ದನಿಗೆ ತಪಸ್ವಿನಿಯು ರಣಹುಚ್ಚಿ ಎಂಬ ಮಾತು ಮನಸ್ಸಿನಲ್ಲಿ ಬಂದು, ಆತನು ಮತ್ತಿಷ್ಟು ಆಶ್ಚರ್ಯಮಗ್ನನಾದನು. ಈಗ ಆತನಿಗೆ ರಣಹುಚ್ಚಿಯ ಗುರುತು ಸರ್ವಥಾ ಹತ್ತಲಿಲ್ಲ. ಈ ರಣಹುಚ್ಚಿಯು ಬಹುರೂಪಿಯಾದ ಮಾಟಗಾರ್ತಿಯೋ ಎಂದು ಆತನು ಆಶ್ಚರ್ಯ ಪಟ್ಟನು! ಆತನು ಎರಡನೆಯ ಮಾತಾಡದೆ, ಮೊದಲು ಭರಮಪ್ಪ ದಳವಾಯಿಯನ್ನು ಡೊಣ್ಣೆ ರಂಗನಾಯಕರ ಬಳಿಯಲ್ಲಿ ಕುಳ್ಳಿರಿಸಿದನು. ಆಗ ಅಲ್ಲಿ ಕೂಡಿದ್ದ ಸಮಸ್ತ ಜನರ ಮುಖದಿಂದ— ''ಶಾಬಾಸ್ ಶಾಬಾಸ್! ಬಹಳ

ಸಂತೋಷವು''ಎಂಬ ಧ್ವನಿಯು ಹೊರಟಿತು. ಈಗ ಆ ತಪಸ್ವಿನಿ ರಣಹುಚ್ಚಿಯು ಕಟಾಂಜನಕ್ಕೆ ಹಾಕಿದ್ದ ದೊಡ್ಡ ಕೀಲಿಯನ್ನು ಆವೇಶದಿಂದ ಜಗ್ಗಲು, ಅದು ಕಳಕ್ಕನೆ ಉಚ್ಚಿ ಆಕೆಯ ಕೈಯಲ್ಲಿ ಬಂದುಬಿಟ್ಟಿತು! ಅದನ್ನು ನೋಡಿ ಜನರು ಆಶ್ಚರ್ಯ ಚಕಿತರಾದರು ಕೆಲವರು ''ತಪಸ್ವಿಗಳ ಸತ್ವವೇ ಅಷ್ಟು ಬಲಿಷ್ಠವಾದದ್ದೆಂದು'' ಭಾವಿಸಿದರು. ಕೆಲವರು ''ಕೀಲಿ ಹಾಕುವದನ್ನು ಮರೆತಿರ ಬಹುದೆಂದು'' ತರ್ಕಿಸಿದರು. ಹೀಗೆ ಜನರಲ್ಲಿ ಏನೇನೋ ತರ್ಕ ವಿತರ್ಕಗಳು ಉಂಟಾಗುತ್ತಿರು ವಾಗ, ರಣಹುಚ್ಚಿಯು ಡೊಣ್ಣೆ ರಂಗನಾಯಕ ದೊರೆಯನ್ನು ಕುರಿತು—ಸಿಂಹಾಸನಸ್ಥ ಪ್ರಭುವೇ, ಬೇಗನೆ ಕಟಾಂಜನದ ಕೀಲಿಯ ತೆಗಿಸು. ಎಲೈ ''ನಾಯಕ ಶಿರೋಮಣಿ'' ''ಹಗಲ ಕಗ್ಗೊಲೆ ಮಾನ್ಯ'' ''ಗಾದ್ರೀಮಾಲೆ ಹೆಬ್ಬುಲಿ'' ''ಗಂಡಗೊಡಲಿಯ ಸರ್ಜ'' ಎಂಬ ಗೌರವದ ಬಿರುದುಗಳುಳ್ಳ ವೀರದೊರೆಯೇ, ಡೊಣ್ಣೆಯ ರಂಗನಾಯಕಾ, ತೆಗೆಸು, ಬೇಗನೆ ಕಟಾಂಜನದ ಬಾಗಿಲ ಕೀಲಿಯನ್ನು ತೆಗಿಸು. ನನ್ನ ಈ ಹೇಯವಾದ ಹಾಳುದೇಹವು ನಮ್ಮ ಭರಮಣ್ಣನ ಜೀವದ ನಿವಾಳೆಯಾಗಿ ಹುಲಿಯಬಾಯಿಗೆ ಬಿದ್ದು ಸಾರ್ಥಕವಾಗಲಿ'' ಎಂದು ನುಡಿಯಲು, ರಂಗನಾಯಕನು ಗೌರವದಿಂದ—ಅವ್ವಾ, ತಪಸ್ವಿನೀ, ನಮ್ಮ ದುರ್ಗದ ನಾಯಕರ ಬಿರುದಾವಲಿಯ ಉಚ್ಚರಿಸಿದ ನಿನ್ನನ್ನು, ಹುಲಿಯ ಬಾಯಿಗೆ ಕೊಡಲಿಕ್ಕೆ ಆ ಗಂಡುಗಲಿ ನಾಯಕರ ವಂಶಜನಾದ ನನ್ನ ಕೈಗಳು ಹೇಗೆ ಎದ್ದಾವು ಹೇಳು? ನಾಯಕರು ಹುಲಿಯ ಬಾಯಿಗೆ ಬಿದ್ದವರನ್ನು, ಅದರಲ್ಲಿಯೂ ಮುಖ್ಯವಾಗಿ ಹೆಣ್ಣುಮಕ್ಕಳನ್ನು ಸಂರಕ್ಷಿಸಬಹುದಲ್ಲದೆ, ತಾವಾಗಿ ಹುಲಿಯಬಾಯಿಗೆ ಯಾರನ್ನೂ ಕೊಡಲಾರರು! ಆದರೂ, ನಿನ್ನಂಥ ಸತ್ವಶಾಲಿನಿಗೆ ಹೀಗೆಯೇ ಮಾಡೆಂದು ಹೇಳಲಿಕ್ಕೆ ಈಗ ನನಗೆ ಮನಸ್ಸಾಗುವದಿಲ್ಲ! ಆದಿಶಕ್ತಿಸ್ವರೂಪಳೇ, ನನಗೂ ಒಬ್ಬಳೆ ಒಬ್ಬ ಹೆಣ್ಣುಮಗಳಿದ್ದಾಳೆ; ನೀನು ನನ್ನ ಪ್ರಜೆಯಾದದ್ದರಿಂದ ನನ್ನ ಆ ಹೊಟ್ಟೆಯ ಮಗಳಂತೆಯೇ ನಾನು ನಿನ್ನನ್ನು ರಕ್ಷಿಸತಕ್ಕದ್ದು; ಆದ್ದರಿಂದ ನನ್ನ ದಳವಾಯಿ ಮುದ್ದಣ್ಣನು ಕಟಾಂಜನದ ಕೀಲಿಯ ಕೈಯನ್ನು ನಿನಗೆ ಒಪ್ಪಿಸುವನು; ಸತ್ವಶಾಲಿನಿಯು ನೀನು ನಿನ್ನ ಚಿತ್ತಕ್ಕೆ ಬಂದಂತೆ ಮಾಡು!

ಈ ಮೇರೆಗೆ ರಂಗಪ್ಪನಾಯಕನು ನುಡಿಯಲು, ಮುದ್ದಣ್ಣನು ಹುಲಿಯ ಕಟಾಂಜನದ ಕೀಲಿಯ ಕೈಯನ್ನು ರಣಹುಚ್ಚಿಯ ಕೈಯಲ್ಲಿ ಕೊಡಿಸಿದನು. ಆಗ ರಣಹುಚ್ಚಿಯು ಕಟಾಂಜನದ ಬಾಗಿಲ ಕೀಲಿಯನ್ನು ತೆಗೆದು, ಬಾಗಿಲುಗಳನ್ನು ಪ್ರಶಸ್ತವಾಗಿ ತೆರೆದುಬಿಡಲು, ಅದ್ಭುತ ಸಂಗತಿಯು ಒದಗಿತು. ಆ ಹಸಿದಿದ್ದ ತಿಮ್ಮವ್ಯಾಘ್ರವು ಕಟಾಂಜನದೊಳಗಿಂದ ಒಮ್ಮೆಲೆ ಹಾರಿಬಂದು ರಣಹುಚ್ಚಿಯ ಮೇಲೆ ಎರಗಿತು; ಆಗ ಜನರ ಮುಖದಿಂದ ಹಾಹಾಕಾರವು ಉಂಟಾಯಿತು! ''ತಪಸ್ವಿನಿಯ ಕಥೆ ಮುಗಿಯಿತು.'' ''ಚಿತ್ರದುರ್ಗದ ನಾಯಕರ ಕೀರ್ತಿಗೆ ಸ್ತ್ರೀಹತ್ಯೆದ ಕಲಂಕವು ಉಂಟಾಯಿತು'' ಎಂದು ಮುಂತಾಗಿ ಜನರ ಮುಖದಿಂದ ವಿವಿಧ ಉದ್ಗಾರಗಳು ಹೊರಬೀಳ ತೊಡಗಿದವು. ಇತ್ತ ತಪಸ್ವಿನಿ ರಣಹುಚ್ಚಿಯು ಬೆದರಲಿಲ್ಲ; ಆಕೆಯ ಮುಖಕಾಂತಿಯು ಕುಂದಲಿಲ್ಲ, ಮಲಗಿದ ಘಟಸರ್ಪವನ್ನು ಕೋಲಿನಿಂದ ಬಡಿದು ಎಬ್ಬಿಸಿದಂತೆ, ಆಕೆಯ ಸ್ಥಿತಿಯಾಯಿತು; ಆಕೆಯು ಉಗ್ರಕಾಂತಿಯುಳ್ಳವಳಾಗಿದ್ದರೂ, ಶಾಂತಸ್ವರದಿಂದ

ಹುಲಿಯನ್ನು ಕುರಿತು— ''ತಿಮ್ಮರಸಾ, ವ್ಯಾಘ್ರರಾಜಾ, ನನ್ನ ಮೇಲೆ ರಭಸದಿಂದ ಎರಗಿದವನು ಒಮ್ಮೆಲೆ ಹಿಂದಕ್ಕೆ ಯಾಕೆ ಸರಿದೆ? ಇನ್ನೊಂದು ಹಾರಿಕೆಯಿಂದ ನನ್ನ ಗಂಟಲರಕ್ತ ಹೀರಿ ಬಿಡು; ಇಗೋ, ನಿನ್ನಿನ ಸ್ವಪ್ನದಲ್ಲಿ ಶ್ರೀ ಮುರಗೀಶ ಗುರುವರನು ನನಗೆ ಕೊಟ್ಟಿರುವ ವಿಭೂತಿಯ ಘಟ್ಟಿಯಿದು; ಬಾ, ಎಲೈ ಗುರುಬಂಧುವೇ, ಹಾರಿ ಹಿಂದಕ್ಕೆ ಯಾಕೆ ಸರಿದು ನಿಂತೆ; ಬಾ, ಶ್ರೀ ಗುರುಪ್ರಸಾದ ರೂಪವಾದ ಈ ಭಸ್ಮದ ತ್ರಿಪುಂಡ್ರಗಳನ್ನು ನಿನ್ನ ಹಣೆಗೆ ಹಚ್ಚಲು, ಶ್ರೀ ಗುರುನಾಥನು ನನಗೆ ಸ್ವಪ್ನದಲ್ಲಿಯೇ ಆಜ್ಞಾಪಿಸಿರುವನು'' ಎಂದು ನುಡಿದು, ರಣಹುಚ್ಚಿಯು ವಿಭೂತಿಯ ಸ್ಪಷ್ಟ ತ್ರಿಪುಂಡ್ರಗಳನ್ನು ಹುಲಿಯ ಹಣೆಗೆ ನಿರ್ಭಯದಿಂದ ಹಚ್ಚಿದಳು. ಮಹಾತ್ಮನಾದ ಶ್ರೀ ಮುರಗೀಶ ಗುರವನ್ನು ವಿಭೂತಿಯ ಮಹಿಮೆಯನ್ನೇನೆಂದು ವರ್ಣಿಸುವದು? ಹಸಿದ ಬ್ರಹ್ಮರಾಕ್ಷಸವು ವಾಮದೇವ ಋಷಿಯನ್ನು ಕೊಲ್ಲಲು ಆಲಿಂಗಿಸಿದ್ದಾಗ ಅದರ ಮೈಗೆ ಹತ್ತಿದ ನಾಮದೇವರ ಮೈ ವಿಭೂತಿಯ ಮಹಿಮೆಯಿಂದ ಬ್ರಹ್ಮರಾಕ್ಷಸದ ಕ್ರೂರತನವು ಅಳಿದುಹೋಗಿ, ಅದಕ್ಕೆ ದಿವ್ಯಜ್ಞಾನವಾದಂತೆ, ಈಗ ಕ್ರೂರವಾದ ತಿಮ್ಮವ್ಯಾಘ್ರನಿಗೆ ರಣಹುಚ್ಚಿಯ ಮೈ ಭಸ್ಮ ಹಾಗು ರಣಹುಚ್ಚಿಯು ಕೈಮುಟ್ಟಿ ಹಚ್ಚಿದ ಭಸ್ಮದ ತ್ರಿಪುಂಡ್ರಗಳು ಇವುಗಳ ಯೋಗದಿಂದ ಅದಕ್ಕೂ ದಿವ್ಯಜ್ಞಾನವಾದಂತೆ ತೋರಿತು! ಆ ಹುಲಿಯು ಸಾಕಿದ ನಾಯಿಯಂತೆ ಬಾಲಗುಂಡಾಡಿಸುತ್ತ ರಣಹುಚ್ಚಿಯ ಮುಂದೆ ನೆಲದ ಮೇಲೆ ಉರುಳಾಡ ಹತ್ತಿತು. ಈ ಅದ್ಭುತ ಪ್ರಸಂಗವನ್ನು ನೋಡಿ ಜನರು ಆಶ್ಚರ್ಯ ಪರವಶರಾಗಿ, ನಾಲ್ಕೂ ಕಡೆಗೆ ಸ್ತಬ್ಧತೆಯ ಸಾಮ್ರಾಜ್ಯವುಂಟಾಯಿತು! ಹೀಗೆ ಜನರು ಮುಂದುಗಾಣದೆ ಸುಮ್ಮನೆ ಕುಳಿತು ಈ ಅದ್ಭುತ ಸಂಗತಿಯನ್ನು ನೋಡುತ್ತಿರಲು, ಇನ್ನೊಂದು ಅದ್ಭುತ ಪ್ರಸಂಗವು ಆಗ ಅಲ್ಲಿ ಒದಗಿತು. ಒಬ್ಬ ಬ್ರಾಹ್ಮಣ ತಪಸ್ವಿಯು ಅಕಸ್ಮಾತ್ತಾಗಿ ಬಂದು ಕಟಾಂಜನ ಹೊಕ್ಕು ರಣಹುಚ್ಚಿಯ ಬಳಿಗೆ ಹೋದನು. ಆಗ ರಣಹುಚ್ಚಿಯು ಹುಲಿಯ ಮೈಮೇಲೆ ಕೈಯಾಡಿಸುತ್ತ— ''ಬಾ, ಗುರುಪುತ್ರಾ, ಬಾ; ಸದ್ಗುರುನಾಥನ ಬಳಿಗೆ ಹೋಗುವಾ ಬಾ'' ಎಂದು ಕರೆಯುತ್ತಲಿದ್ದಳು. ಅದನ್ನು ನೋಡಿ– ''ಕರೆಯಲ್ಬಕ್ಕುಗ್ರವ್ಯಾಘ್ರಂಗಳಂ'' ಎಂಬ ಉಕ್ತಿಯು ಪ್ರತ್ಯಕ್ಷ ಜನರ ನಿದರ್ಶನಕ್ಕೆ ಬಂದಿತು. ಆಗ ಬ್ರಾಹ್ಮಣ ತಪಸ್ವಿಯು ರಣಹುಚ್ಚಿಯನ್ನು ಕುರಿತು— ''ಹುಚ್ಚಮ್ಮಾ, ಈ ಗುರುಪುತ್ರ ತಿಮ್ಮನಿಗೆ ಮೂರುದಿನಗಳಿಂದ ಆಹಾರವಿಲ್ಲ. ಈ ಕ್ರೂರಪಶುವು ಕೂಡ, ಗುರುಸತ್ವದಿಂದ ತನ್ನ ಕ್ರೂರತ್ವವನ್ನು ಬಿಟ್ಟು ಹಸಿವೆ ನೀರಡಿಕೆಗಳನ್ನು ಲಕ್ಷಿಸದೆ ಶಾಂತಿಯನ್ನು ತಾಳಿದೆ. ಇಗೋ, ಇತ್ತ ನೆರೆದಿದ್ದ ಜನಸಮ್ಮರ್ದವನ್ನು ನೋಡು. ಅದರಲ್ಲಿಯ ಜನರು ತಾವು ಮನುಷ್ಯರಾಗಿದ್ದರೂ, ಇಬ್ಬರು ದಳವಾಯಿಗಳ ಕೈಕೆಳಗೆ ಇಬ್ಬಣಗಳಾಗಿ, ಕ್ರೂರವ್ಯಾಘ್ರಗಳಿಗಿಂತಲೂ ಕ್ರೂರರಾಗಿ, ಧರ್ಮಿಷ್ಠ ನಾಯಕರ ಮನೆತನವನ್ನು ಮಣ್ಣುಗೂಡಿಸಲಿಕ್ಕೆ ನಿಂತಿರುತ್ತಾರೆ; ಆದ್ದರಿಂದ ಈ ಮನೆಮುರುಕ ಜನರಿಗೆ ನಾನು ಸ್ಪಷ್ಟವಾಗಿ ಹೇಳುವೆನು, ಅವರು ಲಕ್ಷಗೊಟ್ಟುಕೇಳಲಿ. ಎಲೈ ವಿವೇಕಹೀನರಾದ ಜನರುಗಳಿರಾ, ನಿಮ್ಮ ಈ ಅಂತಃಕಲಹವನ್ನು ಇಲ್ಲಿಗೆ ನಿಲ್ಲಿಸಿರಿ. ಶ್ರೀಮುರಗೀಶ ಗುರುವರನ ಕೃಪೆಯು ದುರ್ಗದ ನಾಯಕರ ಮನೆತನದ ಮೇಲೆ ಇರುವದರಿಂದ, ಕಡೆಗೆ ಆ ಧರ್ಮಿಷ್ಠ ಮನೆತನದ ಕಲ್ಯಾಣವೇ

ಆಗುವದು; ಆದರೆ ಸದ್ಯಕ್ಕೆ ರಕ್ತಪಾನಕ್ಕಾಗಿ ಕ್ಷೋಭಿಸಿರುವ ಈ ದುರ್ಗಸ್ಥ ದೇವತೆ ಏಕನಾಥಮ್ಮನೂ, ನಾಯಕರ ಮನೆತನದ ಕುಲದೇವತೆಯಾದ ಉತ್ಸವಾಂಬೆಯೂ, ದುರ್ಗಸ್ಥ ಉಳಿದ ಮಾತೃದೇವತೆಗಳೂ ಬ್ರಾಹ್ಮಣನಾದ ನನ್ನ ರಕ್ತಪಾನದಿಂದ ಶಾಂತವಾಗಲಿ; ಮತ್ತು ಈ ಹಸಿದಿದ್ದ ಹುಲಿಯು ನನ್ನ ದೇಹದ ಮಿಕ್ಕಪ್ರಸಾದವನ್ನು ತಿಂದು ತೃಪ್ತವಾಗಲಿ; ಎಲೈ ಚಿತ್ರದುರ್ಗದ ನಿವಾಸಿಗಳೇ, ಶ್ರೀ ಮುರಗೀಶಗುರುವರನು ನಮ್ಮ ಬಿಚ್ಚುಗತ್ತಿಯ ಭರಮ ನಾಯಕನನ್ನು ಕರತರುವವರೆಗೆ, ನೀವೂ ಶಾಂತರಾಗಿ ದೊಣ್ಣೆರಂಗಪ್ಪನಾಯಕನ ಆಳಿಕೆಗೆ ಒಳಗಾಗಿ ಸ್ತಬ್ಧರಾಗಿರಿ. ಶ್ರೀಗುರು ತಂತ್ರವು ಮಾಡುವ ಹಾಗೆ ತನ್ನ ಕಾರ್ಯವನ್ನು ಮಾಡುವದು ಇಗೋ, ಸಕಲಭೂತ ಶಾಂತಿಗಾಗಿ ನನ್ನ ಈ ಬ್ರಾಹ್ಮಣ ದೇಹವನ್ನು ಬಲಿಯಾಗಿ ಅರ್ಪಿಸುವೆನು. ಯಾವನು ನನ್ನ ಈ ಶಾಸನವನ್ನು ಮೀರಿ ಯುದ್ಧೋನ್ಮುಖನಾಗುವನೋ, ಅವನು ಬ್ರಹ್ಮಹತ್ಯದ ಪಾತಕದಿಂದ, ಅಗೋ, ಆ ಅರಳಿಯ ಟೊಂಗೆಯಂತೆ ದಗ್ಧನಾಗಿ ಹೋಗುವನು.'' ಎಂದು ನುಡಿದವನೇ, ಆ ತೇಜಸ್ವಿಯು ತನ್ನ ಕೃಷ್ಣಾಜಿನದ ಮುಸುಕಿನೊಳಗಿನ ಬಿಚ್ಚುಗತ್ತಿಯನ್ನು ಸರಕ್ಕನೆ ಹಿರಿದು, ಅದರಿಂದ ತನ್ನ ಶಿರಸ್ಸನ್ನು ನೆಲಕ್ಕೆ ಇಳಿಸಿದನು! ಕೂಡಲೆ ನೆರೆಯ ಅರಳಿಯ ಗಿಡದ ಹರಿಗೆ ಬೆಂಕಿಹತ್ತಿ ಆ ಹಸರು ಹರಿಯೇ ಉರಿಯಹತ್ತಿತು! ಆಗ ಜನರು ಬ್ರಹ್ಮಹತ್ಯೆಯ ಉಗ್ರತೆಗೆ ಗದಗುಟ್ಟಿ ನಡಗುತ್ತಿರಲು, ಅತ್ತ ರಣಹುಚ್ಚಿಯು ಕೂಡಲೆ ಕಟಾಂಜನದಿಂದ ಹೊರಬಿದ್ದು, ದುರ್ಗದ ಕೊಳ್ಳವಿಡಿದು ಸಾಗುತ್ತಿರುವಾಗ, ಹುಲಿಯು ಆಕೆಯ ಬೆನ್ನುಹತ್ತಿ ನಡೆಯಿತು. ಹಾಹಾ! ದುರತ್ಯಯವಾದ ದೈವೀ ಮಾಯೆಯನ್ನು, ಅಥವಾ ದೈವೀ ಗೂಢತಂತ್ರವನ್ನು ದಾಟದವರು ಯಾರಿರುವರು? ಆಗ ಯಾರ ಮೈಮೇಲೆಯೂ ಎಚ್ಚರವು ಉಳಿಯಲಿಲ್ಲ, ಎಲ್ಲರೂ ಚಿತ್ರದ ಗೊಂಬೆಗಳಂತೆ ಸುಮ್ಮನೆ ಕುಳಿತುಬಿಟ್ಟಿದ್ದರು. ಆದರೆ ಮುಂದೇನಾಯಿತೆಂಬದನ್ನು ಇಲ್ಲಿ ಹೇಳಲಾಗುವದಿಲ್ಲ, ಈ ಕಾದಂಬರಿಯ ಎರನಡೆಯ ಭಾಗವಾದ ''ಸತ್ಸಮಾಗಮ–ಪ್ರಭಾವ'' ಎಂಬದರಲ್ಲಿ ಅದನ್ನು ಬರೆಸುವದು ಶ್ರೀ ಮುರಗೀಶಗುರುವರನನ್ನೇ ಕೂಡಿರುವದರಿಂದ, ಈಗ ಸದ್ಯಕ್ಕೆ ನಾವು ಲೇಖನಿಯನ್ನು ಕೆಳಗಿಟ್ಟು ಬಿಡುವೆವು!

**ಸಂಪೂರ್ಣ**

ಗಳಗನಾಥ ಸಮಗ್ರ ಸಾಹಿತ್ಯ

## ನಿಮ್ಮ ನೆನೆದಾಗಲೆ ಉದಯ

'ಗಳಗನಾಥ' ಹಾವೇರಿ ಜಿಲ್ಲೆಯ ಒಂದು ಹಳ್ಳಿ. ವೆಂಕಟೇಶ ತಿರಕೋ ಕುಲಕರ್ಣಿಯವರು ತಮ್ಮ ಈ ಹಳ್ಳಿಯ ಹೆಸರನ್ನು ಕಾವ್ಯನಾಮವಾಗಿ ಬಳಸುವ ಮೂಲಕ, ಅದನ್ನು ಸಾಹಿತ್ಯದಲ್ಲಿ ಚಿರಸ್ಥಾಯಿಗೊಳಿಸಿದರು.

ಧಾರವಾಡದ ಗಂಡುಮಕ್ಕಳ ಟ್ರೇನಿಂಗ್ ಕಾಲೇಜು ಇವರ ಸಾಹಿತ್ಯಿಕ ವ್ಯಕ್ತಿತ್ವವನ್ನು, ಅಗಡಿ ಆನಂದಾಶ್ರಮ ಇವರ ಆಧ್ಯಾತ್ಮಿಕ ವ್ಯಕ್ತಿತ್ವವನ್ನು ರೂಪಿಸಿದವು. ಈ ಎರಡೂ ಆಯಾಮಗಳಿಗೆ ಆಧಾರವಾದುದು ಅವರ ಕನ್ನಡ ಶಾಲೆಯ ಶಿಕ್ಷಕವೃತ್ತಿ. ಹೊಸಗನ್ನಡ ಸಾಹಿತ್ಯಿಕ ಪರಿಸರವನ್ನು ಮೈಸೂರು ಪ್ರದೇಶದಲ್ಲಿ ರಾಜರ ಆಸ್ಥಾನ ವಿದ್ವಾಂಸರು ಸೃಷ್ಟಿಸಿದರೆ, ಉತ್ತರ ಕರ್ನಾಟಕದಲ್ಲಿ ಅಂತಹ ಪರಿಸರವನ್ನು ಕನ್ನಡ ಶಾಲೆಯ ಮಾಸ್ತರರು ಸೃಷ್ಟಿಸಿದರು. ಇವರಲ್ಲಿ ಎದ್ದು ಕಾಣುವ ಹೆಸರು, ಗಳಗನಾಥ ಮಾಸ್ತರು.

೨೦ನೆಯ ಶತಮಾನದಲ್ಲಿ ಗದ್ಯಯುಗವನ್ನು ಆಳಿದುದು ಕಾದಂಬರಿ. ಹೀಗಾಗಿ ಈ ಶತಮಾನವನ್ನು "ಕಾದಂಬರಿ ಪ್ರಧಾನಯುಗ" ವೆಂದು ಕರೆಯಬಹುದಾಗಿದೆ. ಇದು ನವೋದಯ, ಪ್ರಗತಿಶೀಲ, ನವ್ಯವೆಂಬ ಮೂರು ಹಂತಗಳಲ್ಲಿ ಸಾಗಿ ಬಂದಿದೆ. ಇವುಗಳಲ್ಲಿ ಪ್ರಗತಿಶೀಲವೆಂಬುದು ಒಂದು ಪ್ರಯೋಗವಾಗಿ ಉಳಿಯಿತೇ ಹೊರತು, ಪರಂಪರೆಯಾಗಿ ಬೆಳೆಯಲಿಲ್ಲ. ಇತ್ತೀಚೆಗೆ ನವ್ಯ ಕಾದಂಬರಿ ಬಂದು ಪರಂಪರೆಯಾಗಿ ಬೆಳೆಯುತ್ತಲಿದ್ದರೂ ಅದರ ಸಂಖ್ಯೆ ಕಡಿಮೆ. ಆದುದರಿಂದ ಇಂದಿಗೂ ಕಾದಂಬರಿ ಕ್ಷೇತ್ರವನ್ನು ಬಹುಪಾಲು ವ್ಯಾಪಿಸಿದುದು ನವೋದಯಪ್ರಜ್ಞೆಯ ಕಾದಂಬರಿ. ಈ ಪ್ರಜ್ಞೆಯ ಮೂಲಪುರುಷರಲ್ಲಿ ಮುಖ್ಯವೆನಿಸಿದ್ದಾರೆ, ಕಾದಂಬರಿ ಪಿತಾಮಹ ಗಳಗನಾಥರು.

ಸಾಹಿತ್ಯವನ್ನು ಸೃಷ್ಟಿಸುವವನು ಸಾಹಿತಿಯಾದರೂ ಅದರ ವಾರಸುದಾರರು ಸಹೃದಯರು. ಈಗಿನಂತೆ ಪುಸ್ತಕದ ಉತ್ಪಾದನೆಗೆ ಅನುಕೂಲವಿಲ್ಲದ ಪ್ರಾಚೀನಕಾಲದಲ್ಲಿಯೂ ಇವರು ಉತ್ತಮ ಸಾಹಿತ್ಯ ಕೃತಿಗಳನ್ನು ತಲೆಮಾರಿನಿಂದ ತಲೆಮಾರಿಗೆ ಪ್ರತಿಮಾಡುತ್ತ - ಮಾಡಿಸುತ್ತ ಬಂದಿದ್ದಾರೆ. ಹೀಗಿರುವಾಗ ಎಲ್ಲ ಬಗೆಯ ಅನುಕೂಲತೆಗಳನ್ನು ಹೊಂದಿರುವ ಇಂದಿನ ಕಾಲದವರಾದ ನಾವು ಅವುಗಳ ಮರುಮುದ್ರಣ ವಿಷಯದಲ್ಲಿ ಹೆಚ್ಚು ಆಸಕ್ತಿವಹಿಸುವದು ತೀರ ಸಹಜ. ಆದುದರಿಂದ, ಪ್ರಾಚೀನ ಹಸ್ತಪ್ರತಿಗಳ ಪರಿಷ್ಕರಣ - ಮುದ್ರಣ - ಮರುಮುದ್ರಣದಂತೆ ನವೋದಯಕಾಲೀನ ಯಂತ್ರಪ್ರತಿಗಳನ್ನೂ ಮತ್ತೆ ಮತ್ತೆ ಅಚ್ಚಿಸಿ ಓದುಗರಿಗೆ ಒದಗಿಸುತ್ತಲಿದ್ದೇವೆ.

**ಎಂ. ಎಂ. ಕಲಬುರ್ಗಿ**
ಪ್ರಧಾನ ಸಂಪಾದಕರು


ISBN 978-93-81822-41-8
9 789381 822418

Rs. 2000/- (Set of 6 Volumes)

ಗಳಗನಾಥರ ವರ್ಣಚಿತ್ರ ಕೃಪೆ : ಎನ್.ಸಿ. ದೇಸಾಯಿ